ಅಧ್ಯಾತ್ಮಗ್ರಂಥಾವಳಿ

# ಭಗವದ್ಗೀತೆಯ ಉಪನ್ಯಾಸಗಳು

## (ಒಂದನೆಯ ಭಾಗ)

*ಬರೆದವರು*

ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು

*ಸಂಪಾದಕ*

ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ

*ಕ್ರಮಾಂಕ ೮೩*

*ಪ್ರಕಾಶಕರು :*

ಅಧ್ಯಾತ್ಮಪ್ರಕಾಶಕಾರ್ಯಾಲಯ

ಹೊಳೆನರಸೀಪುರ ೫೭೩ ೨೧೧. ಹಾಸನ ಜಿಲ್ಲೆ

೧೯೯೯

# ಪ್ರಕಾಶಕರ ಬಿನ್ನಹ

ಬ್ರಹ್ಮೀಭೂತ ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರು ಅಧ್ಯಾತ್ಮಪ್ರಕಾಶ ಕಾರ್ಯಾಲಯದಲ್ಲಿ ತಾ|| ೯.೬.೧೯೪೬ ರಿಂದ ೧೭.೧೨.೧೯೫೦ ರವರೆಗೆ ಪ್ರತಿ ಭಾನುವಾರವೂ ಶ್ರೋತೃಗಳ ಮುಂದೆ ಪ್ರವಚನಮಾಡಿದ ಭಗವದ್ಗೀತೆಯ ವ್ಯಾಖ್ಯಾನವನ್ನು ಆಗ್ಗೆ ಅಧ್ಯಾತ್ಮವಿದ್ಯಾಲಯದಲ್ಲಿ ವಿದ್ಯಾರ್ಥಿಗಳಾಗಿದ್ದ ವೇ|| ಲಕ್ಷ್ಮೀನರಸಿಂಹಮೂರ್ತಿಗಳೂ ವೇ|| ಯಜ್ಞನಾರಾಯಣಶಾಸ್ತ್ರಿಗಳೂ ಟಿಪ್ಪಣಿಗಳ ರೂಪದಿಂದ ಸಂಗ್ರಹಿಸಿದ್ದರು. ಮತ್ತು ಪೂಜ್ಯ ಶ್ರೀಗಳವರ ಪರಮಭಕ್ತರಾಗಿದ್ದ ಶ್ರೀ ನಂಜಪ್ಪಭಾಗವತರೆಂಬ ಮಹನೀಯರೂ ಟಿಪ್ಪಣಿ ಮಾಡಿದ್ದರು. ಇವುಗಳ ಸಹಾಯದಿಂದ ಸ್ವತಃ ಶ್ರೀಶ್ರೀಗಳವರೇ ಈ ಉಪನ್ಯಾಸಗಳನ್ನು ಲೇಖನರೂಪದಲ್ಲಿ ಸಿದ್ಧಗೊಳಿಸಿ 'ಅಧ್ಯಾತ್ಮಪ್ರಕಾಶ' ಮಾಸಪತ್ರಿಕೆಯಲ್ಲಿ ೧೯೪೬ನೆಯ ಸೆಪ್ಟೆಂಬರ್‌ನಿಂದ ೧೯೫೩ನೇ ಮಾರ್ಚಿಪೂರ ಭಾಗಭಾಗವಾಗಿ ಪ್ರತಿತಿಂಗಳೂ ಪ್ರಕಟಿಸಿದರು. ಅವುಗಳ ಪುನರ್ಮುದ್ರಣಪ್ರತಿಗಳನ್ನು ಏಳು ಭಾಗಗಳಲ್ಲಿ ೧೯೫೩ರಲ್ಲಿ ಗ್ರಂಥರೂಪವಾಗಿಯೂ ಪ್ರಕಟಿಸಲಾಯಿತು.

ಈ ಗ್ರಂಥದ ಪ್ರತಿಗಳೆಲ್ಲವೂ ಮಾರಾಟವಾದ ಅನಂತರ ವಾಚಕರ ಬೇಡಿಕೆಯನ್ನು ಪೂರೈಸಲು ಬೆಂಗಳೂರು ನರಸಿಂಹರಾಜಾಕಾಲೋನಿ ಶ್ರೀರಾಮಮಂದಿರದ ಕಾರ್ಯದರ್ಶಿಗಳಾಗಿದ್ದ ಶ್ರೀ ಡಿ. ಸಿ. ಅನಂತರಾಮಯ್ಯನವರು ಈ ಏಳು ಭಾಗಗಳನ್ನೂ ಸಂಗ್ರಹಿಸಿ ಸಾರರೂಪವಾಗಿ ಎರಡು ಸಂಪುಟಗಳಲ್ಲಿ ೧೯೭೫ರಲ್ಲಿ ಪ್ರಕಟಿಸಿದರು. ಈಗಲೂ ಈ ಸಂಪುಟಗಳು ಮಾರಾಟಕ್ಕೆ ದೊರೆಯುತ್ತವೆ.

ಅನಂತರ ಸಂಗ್ರಹಸಂಪುಟಗಳನ್ನೋದಿದ ಕೆಲವು ವಾಚಕರು ತೃಪ್ತರಾಗದೆ ಪೂಜ್ಯ ಶ್ರೀಗಳವರ ಮೂಲಬರವಣಿಗೆಯ ಸಂಪುಟಗಳೇ ಪುನರ್ಮುದ್ರಣವಾಗಿ ಪ್ರಕಾಶಿತವಾಗಬೇಕೆಂದು ಆಗ್ರಹಪಡಿಸಿದರು. ಆಗ ಕಾರ್ಯಾಲಯದ ಕಾರ್ಯಕಾರಿಸಮಿತಿಯವರು ಈ ಮಹಾಗ್ರಂಥದ ಪುನರ್ಮುದ್ರಣವನ್ನು ೧೯೮೭ರಲ್ಲಿ ಕೈಗೊಂಡು ಎರಡು ಸಂಪುಟಗಳಲ್ಲಿ ಸಂಪೂರ್ಣಗ್ರಂಥವನ್ನು ಪ್ರಕಟಿಸಿದರು. ಈ ಪ್ರಕಟನೆಯೂ ಸಂಪೂರ್ಣವಾಗಿ ಮಾರಾಟವಾದ್ದರಿಂದ ಈಗ ಮತ್ತೊಮ್ಮೆ ಸುಂದರವಾದ ಡಿ.ಟಿ.ಪಿ. ಮುದ್ರಣದಲ್ಲಿ ಈ ಗ್ರಂಥದ ಎರಡು ಭಾಗಗಳನ್ನೂ ಮೂರನೆಯ ಬಾರಿಗೆ ಹೊರತರಲಾಗಿದೆ. ಈ ಕಾರ್ಯದಲ್ಲಿ ಅಚ್ಚಿನ ಕರಡುಗಳ ಶೋಧನೆ, ಹಾಗೂ ಪ್ರಕಟನೆಗಳಿಗೆ ಬೆಂಗಳೂರಿನ ಶ್ರೀ ಹೆಚ್. ಎನ್. ರಂಗಸ್ವಾಮಿಗಳು, ಶ್ರೀ ಸಿ. ಎ. ಸಂಜೀವಮೂರ್ತಿಗಳು, ಶ್ರೀ ಬಿ. ಆರ್. ಸತ್ಯನಾರಾಯಣ (ಗಜಾನನ), ಶ್ರೀರಾಮಚಂದ್ರಯ್ಯರ್, ಮತ್ತೂರಿನ ಸಂಸ್ಕೃತ ಪಂಡಿತರುಗಳು ಮತ್ತು ಶ್ರೀ ಹೆಚ್. ವೆಂಕಟನರಸಪ್ಪನವರು ಈ ಮಹನೀಯರುಗಳು ಸಹಾಯವನ್ನು ಮಾಡಿರುತ್ತಾರೆ.

ಈ ಸತ್ಕಾರ್ಯದಲ್ಲಿ ಸಹಕರಿಸಿದ ಅಭಿಮಾನಿಗಳೆಲ್ಲರಿಗೂ ಹಾಗೂ ಧನಸಹಾಯವನ್ನು ನೀಡಿ ಪ್ರೋತ್ಸಾಹಿಸಿರುವ ದಾನಿಗಳಿಗೂ ಗೀತಾಚಾರ್ಯನಾದ ಶ್ರೀಕೃಷ್ಣಭಗವಂತನು ಸಕಲಸನ್ಮಂಗಳಗಳನ್ನೂ ದಯಪಾಲಿಸಲೆಂದು ಪ್ರಾರ್ಥಿಸುತ್ತೇನೆ.

ಇತಿ

ತಾ ೨೫.೪.೧೯೯೯ — ಕಾರ್ಯಾಕಾರಿಸಮಿತಿಯ ಪರವಾಗಿ

ಹೊಳೆನರಸೀಪುರ — ಅರಕಲಗೂಡು ತಾಂಡವೇಶ್ವರ

ಅಧ್ಯಕ್ಷರು

# ಮುನ್ನುಡಿ

ಭಗವದ್ಗೀತೆಯು ಅವತರಿಸಿದ ಕಾಲದಿಂದ ಈವರೆಗೂ ಆಚಾರ್ಯಮಹಾಪುರುಷರುಗಳು, ಸಾಧುಸಂತರು, ದೇಶಭಕ್ತರು, ವಿದ್ವಾಂಸರು, ರಾಜಕಾರಣಿಗಳು, ವೈದ್ಯರು, ನ್ಯಾಯವಾದಿಗಳು ಮುಂತಾಗಿ ಎಲ್ಲಾ ವರ್ಗದ ಜನರೂ ತಮ್ಮ ತಮ್ಮ ದೃಷ್ಟಿಕೋನ, ಅನುಭವಗಳ ಆಧಾರದಿಂದ ಗೀತಾರ್ಥವನ್ನು ವಿವರಿಸಿ ವ್ಯಾಖ್ಯಾನಮಾಡುತ್ತಲೇ ಇದ್ದಾರೆ. ಈ ಪ್ರಯತ್ನವು ಹೀಗೆಯೇ ಮುಂದುವರೆಯುತ್ತದೆಯೆಂದೂ ಹೇಳಬಹುದಾಗಿದೆ. ಆದರೆ ಕನ್ನಡಭಾಷೆಯಲ್ಲಿ ಅಧ್ಯಾತ್ಮವಿದ್ಯೆಯ ಸಾಧನಸಿದ್ಧಾಂತಗಳ ಸಮನ್ವಯದಿಂದಲೂ ವ್ಯವಹಾರಪ್ರಪಂಚಕ್ಕೆ ಗೀತೆಯ ಪ್ರಯೋಜನವನ್ನು ಸಮನ್ವಯಗೊಳಿಸಿ ಸರ್ವಸಮ್ಮತವಾದ ವೇದಿಕೆಯ ತಳಹದಿಯಿಂದಲೂ ಗೀತೆಯನ್ನು ವಿವರಣೆಮಾಡಿರುವಂಥ ಮಹಾತ್ಮರಲ್ಲಿ ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳು ಗಣ್ಯರಾಗಿರುತ್ತಾರೆ. ಶ್ರೀಶ್ರೀಗಳವರ ದೃಷ್ಟಿಕೋನದಿಂದ ಗೀತಾರ್ಥವನ್ನು ಮನನಮಾಡಬೇಕೆನ್ನುವವರಿಗೆ ಈ ಗ್ರಂಥವು ಅತ್ಯುಪಯುಕ್ತವಾಗಿದೆ. ಪೂಜ್ಯ ಶ್ರೀಗಳವರು ಶ್ರೀಶಂಕರಾಚಾರ್ಯರ ಗೀತಾಭಾಷ್ಯವನ್ನೂ ಕನ್ನಡಭಾಷೆಗೆ ಅನುವಾದಮಾಡಿದ್ದಾರಲ್ಲದೆ, ಸಂಸ್ಕೃತಭಾಷೆಯಲ್ಲಿ ಗೀತಾಶಾಸ್ತ್ರಾರ್ಥವಿವೇಕಃ ಎಂಬ ಅಮೋಘಗ್ರಂಥವನ್ನೂ ಬರೆದಿದ್ದಾರೆ. ಹೀಗೆ ಇಪ್ಪತ್ತನೆಯ ಶತಮಾನದಲ್ಲಿ ಗೀತೆಯ ವಿಚಾರವಾಗಿ ಶಾಸ್ತ್ರೀಯ ಹಾಗೂ ಲೌಕಿಕದೃಷ್ಟಿಗಳಿಂದ ಅಧಿಕೃತವಾಗಿ ತಿಳಿಸಬಲ್ಲ ಮಹಾವಿದ್ವಾಂಸರಲ್ಲಿ ಶ್ರೀಗಳವರು ರತ್ನಪ್ರಾಯರಾಗಿದ್ದಾರೆಂದರೆ ಅತಿಶಯೋಕ್ತಿಯೆನಿಸಲಾರದು.

ಈ ಉಪನ್ಯಾಸಗಳನ್ನು ಶ್ರೀಶ್ರೀಗಳವರು ಅನುಗ್ರಹಿಸುವ ಕಾಲಕ್ಕೆ ಭಾರತದೇಶಕ್ಕೆ ಆಗ ತಾನೆ ಸ್ವಾತಂತ್ರ್ಯವನ್ನು ತಂದುಕೊಟ್ಟ ದೇಶಭಕ್ತ ಶ್ರೀ ಮಹಾತ್ಮಾಗಾಂಧಿಯವರ ಪ್ರಭಾವವು ಸಮಾಜದ ಮೇಲೆ ಹೆಚ್ಚಾಗಿ ಒತ್ತಲ್ಪಟ್ಟಿತ್ತು. ಆದ್ದರಿಂದ ಈ ಉಪನ್ಯಾಸಗಳಲ್ಲಿ ಮಹಾತ್ಮಗಾಂಧಿಯವರ ಉದಾಹರಣೆಯು ಆಯಾ ಸಂದರ್ಭಕ್ಕೆ ತಕ್ಕಂತೆ ಅಲ್ಲಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಉಳಿದ ದೃಷ್ಟಾಂತೋದಾಹರಣೆಗಳೆಲ್ಲವೂ ಶ್ರೀಶ್ರೀಗಳವರ ಜೀವನಾನುಭವದಿಂದಲೇ ಮೂಡಿಬಂದಿವೆ. ವಿಷಯಪ್ರತಿಪಾದನೆಯೂ ಸಿದ್ಧಾಂತವೂ ಶಂಕರಭಾಷ್ಯಾವಲಂಬಿಯಾಗಿವೆ. ಉಳಿದ ಅಮೋಘವಿಚಾರಗಳನ್ನು ವಾಚಕರು ಗ್ರಂಥವನ್ನೋದಿಯೇ ಮನಗಾಣಬಹುದಾಗಿದೆ.

ಈ ಮೂರನೆಯ ಮುದ್ರಣದ ಕಾಲಕ್ಕೂ ಸಾಧ್ಯವಾದಮಟ್ಟಿಗೂ ಅಚ್ಚಿನ ತಪ್ಪುಗಳನ್ನು ತಿದ್ದಿ ಗ್ರಂಥವನ್ನು ಪರಿಷ್ಕರಿಸಿ ಪ್ರಕಟಿಸಲಾಗಿದೆ.

ಇತಿ. ಸಜ್ಜನವಿಧೇಯ-

ತಾ ೨೫.೪.೧೯೯೯ — ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,

ಹೊಳೆನರಸೀಪುರ — ಅಧ್ಯಾತ್ಮಗ್ರಂಥಾವಳಿಯ ಸಂಪಾದಕ

# ಡಿ.ವಿ.ಜಿ. ಯವರ ಮುನ್ನುಡಿ

("ಭಗವದ್ಗೀತೆಯ ಉಪನ್ಯಾಸಗಳು - ಸಾರಸಂಗ್ರಹ" ಎಂಬ ಗ್ರಂಥದಿಂದ)

ಶ್ರೀಮತ್ಪರಹಂಸ ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರ ಭಗವದ್ಗೀತೋಪನ್ಯಾಸಗ್ರಂಥಕ್ಕೆ ಪೀಠಿಕೆ ಬರೆಯುವವರಿಗೆ ಇರಬೇಕಾದ ಯೋಗ್ಯತೆ ನನಗೆ ಎಷ್ಟು ಮಾತ್ರವೂ ಇಲ್ಲವೆಂದು ನಾನು ತಿಳಿದುಕೊಂಡಿದ್ದೇನೆ. ಆದರೂ ಸತ್ಕಾರ್ಯದಲ್ಲಿ ಪ್ರವೃತ್ತರಾಗಿರುವ ಮಿತ್ರರು ಶ್ರೀ ಡಿ. ಸಿ. ಅನಂತರಾಮಯ್ಯ ಮೊದಲಾದ ಶ್ರೀ ರಾಮಾಯಣ ಪ್ರಕಾಶನ ಸಮಿತಿಯ ಸ್ನೇಹಿತರ ಪ್ರೋತ್ಸಾಹಕ್ಕೆ ಸಿಕ್ಕಿ ಈ ಸಾಹಸ ಮಾಡುತ್ತಿದ್ದೇನೆ. ವಾಚಕಮಹಾಶಯರು ಅನುಮತಿ ಕೊಡಬೇಕು.

ಶ್ರೀ ಭಗವದ್ಗೀತೆಯನ್ನು ಕುರಿತು ಉಪನ್ಯಾಸಮಾಡಹೊರಡುವವರಿಗೆ ಮೂರು ಬಗೆಯ ಅರ್ಹತೆ ಅವಶ್ಯಕವೆಂದು ನನಗನ್ನಿಸುತ್ತದೆ.

(೧) ಶಾಸ್ತ್ರ ಪಾಂಡಿತ್ಯ
(೨) ಲೋಕಾನುಭವ
(೩) ಅಂತರ್ದೃಷ್ಟಿ.

ಶ್ರೀ ಸ್ವಾಮಿಗಳವರು ಬಹುಶಾಸ್ತ್ರನಿಷ್ಣಾತರಾಗಿರುವರೆಂಬುದು ಪ್ರಸಿದ್ಧ ಸಂಗತಿಯಾಗಿದೆ. ವೇದ, ವ್ಯಾಕರಣ, ತರ್ಕ, ಮೀಮಾಂಸಾದಿ ಶಾಸ್ತ್ರಗಳಲ್ಲಿ ಅವರ ಪಾಂಡಿತ್ಯವನ್ನು ಅಳೆಯಲು ಮಾನದಂಡ ನನ್ನಲ್ಲಿಲ್ಲ. ಬಹುಶ್ರುತರೆಂದು ಮಾತ್ರ ಹೇಳಬಲ್ಲೆ, ಮಹಾನುಭಾವರಾದ ಮಧುಸೂದನಸರಸ್ವತಿಗಳನ್ನು ಕುರಿತು ಪೂರ್ವಿಕರೊಬ್ಬರು ಹೇಳಿದ ಮಾತು ಜ್ಞಾಪಕಕ್ಕೆ ಬರುತ್ತದೆ.

ಮಧುಸೂದನಸರಸ್ವತ್ಯಾಃ ಪಾರಂ ವೇತ್ತಿ ಸರಸ್ವತೀ।
ಪಾರಂ ವೇತ್ತಿ ಸರಸ್ವತ್ಯಾಃ ಮಧುಸೂದನಸರಸ್ವತೀ॥

ಅವರು ಲೌಕಿಕರಾಗಿದ್ದ ದಿವಸದಿಂದ ನನಗೆ ಪರಿಚಿತರು. ಈಗ್ಗೆ ಸುಮಾರು ೫೦ ವರ್ಷಗಳ ಹಿಂದೆ ಶ್ರೀ ಚಾಮರಾಜೇಂದ್ರ ಸಂಸ್ಕೃತ ಪಾಠಶಾಲೆಯಲ್ಲಿ, ಇಂಗ್ಲಿಷನ್ನೂ ಲೌಕಿಕವಿಷಯಗಳನ್ನೂ ಸಹ ಕಲಿಸುವ ತರಗತಿಯಿತ್ತು. ಆ ತರಗತಿಗೆ ನನ್ನ ಚಿರಂಜೀವಿ ಒಬ್ಬಾತನನ್ನು ಸೇರಿಸಬೇಕೆಂದು ನಾನು ಅಲ್ಲಿಗೆ ಹೋಗಿದ್ದಾಗ ಶ್ರೀಗಳವರ ಪರಿಚಯ ಲಭಿಸಿತು. ಅಲ್ಲಿಂದೀಚೆಗೆ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರೊಫೆಸರ್ ಆಗಿದ್ದ ಶ್ರೀ ಕೆ. ಎ. ಕೃಷ್ಣಸ್ವಾಮಿಐಯ್ಯರ್ ಅವರ ಮನೆಯಲ್ಲಿ ಆಗಾಗ ಭೇಟಿ ಪಡೆಯುವ ಅವಕಾಶ ಸಿಕ್ಕಿತು.

ಶ್ರೀ ಕೃಷ್ಣಸ್ವಾಮಿ ಐಯ್ಯರ್ ಅವರು ಮಹಾಪಂಡಿತರು; ಮೇಧಾವಿಗಳು, ವೇದಾಂತಿಗಳು. ಅವರ ಮನೆಯಲ್ಲಿ, ಆಗ ಲೌಕಿಕರಾಗಿದ್ದ ಶ್ರೀಗಳವರ ದರ್ಶನಭಾಗ್ಯ ನನಗೆ ಆಗಾಗ ದೊರೆಯುತ್ತಿದ್ದದ್ದು ನನ್ನ ಪೂರ್ವಪುಣ್ಯದಿಂದ ಎಂದು ತಿಳಿದುಕೊಂಡಿದ್ದೇನೆ. ಆಗಲೂ, ಅಲ್ಲಿಂದೀಚೆಗೆ ಕೆಲವು ವರ್ಷಗಳ ಕಾಲವೂ, ಶ್ರೀಗಳವರು ಗೃಹಸ್ಥರಾಗಿದ್ದುಕೊಂಡು,

ಸದಾಚಾರಶೀಲರಾಗಿ ಸಂಸಾರದ ಕಷ್ಟನಿಷ್ಠುರಗಳನ್ನೂ ತಾಪಕಾರ್ಪಣ್ಯಗಳನ್ನೂ ಸಮಾಹಿತಚಿತ್ತರಾಗಿ ಅನುಭವಿಸಿದ್ದು ನನಗೆ ಗೊತ್ತಿದೆ. ಹೀಗೆ ಅವರಿಗೆ ಲೋಕಾನುಭವ ಆಳವಾಗಿ ದೊರೆತು ಮನುಷ್ಯಜೀವನದ ಎಲ್ಲ ಮುಖಗಳೂ ಪರಿಚಿತವಾಗಿವೆ. ಅರ್ಜುನನು ಅಂಥ ಲೋಕಾನುಭವಿ, ಲೋಕದ ಕಷ್ಟಗಳ ತಾಪದಲ್ಲಿ ಬೆಂದಿದ್ದವನು.

ಇನ್ನು ಅಂತರ್ದೃಷ್ಟಿಯ ವಿಚಾರ. ಅದನ್ನು ಕುರಿತು ನಾನು ಹೇಳಬಹುದಾದ ಮಾತು ಊಹೆಯದು, ಸ್ವಯಮನುಭವದ್ದಲ್ಲ. ಅದು ತಪಃಸ್ಸಿದ್ಧವಾದ ವರ - ಎಂದು ನಾನು ತಿಳಿದುಕೊಂಡಿದ್ದೇನೆ. ಅದು ಈಶ್ವರಾನುಗ್ರಹ; ಕಲಿತು ಬರುವುದಿಲ್ಲ.

"ಈಶ್ವರಾನುಗ್ರಹಾದೇವ ನೃಣಾಂ ವೇದಾಂತವಾಸನಾ"

ಬಹುಕಾಲದ, ಸಂತತವಾದ, ತಪಸ್ಸಿನ ಫಲವಾಗಿ ಬಹುಶಃ ಮನುಷ್ಯನ ಅಂತರಂಗದಲ್ಲಿ ಒಂದು ಜ್ಯೋತಿಯ, ಒಂದು ತೇಜಸ್ಸಿನ ಅನುಭವವಾಗುತ್ತದೆ ಈ ಅಂತರಂಗ ಪ್ರಕಾಶದಿಂದಲೇ ತತ್ತ್ವಾನುಭವ, ಅದು ಇಲ್ಲದೆ ಬರಿಯ ಪುಸ್ತಕಪಾಂಡಿತ್ಯವಿದ್ದಲ್ಲಿ ಅದರ ಪ್ರಯೋಜನ ಹೊಟ್ಟೆಯಪಾಡಿಗೆ ಆಗಬಹುದು. ಜೀವನಸರ್ವಸ್ವಕ್ಕೂ ಅದು ಆಗಲಾರದು. ಇಂಥ ಮಹಾ ಅಪರೂಪವಾದದ್ದು ಅಂತರ್ದೃಷ್ಟಿ. ಶ್ರೀಗಳವರು ತಪೋನಿಷ್ಠರಾಗಿರತಕ್ಕವರು. ಅವರ ವಾಣಿಯಲ್ಲಿ ಅಂತಸ್ತೇಜಸ್ಸು ಪ್ರಕಾಶಿಸುತ್ತದೆ. ಇದು ಲೋಕಕ್ಕೆ ಬೇಕಾದ ಬೆಳಕು.

ಶ್ರೀಗಳವರು ಕೊಡುವ ನಿರ್ಧಾರಣೆಗಳು ವಿಚಾರವಿಮರ್ಶೆಯಿಂದ ಸಿದ್ಧವಾದವು. ಬರಿಯ ಕುರುಡುನಂಬಿಕೆಯ ಅಥವಾ ಕೇವಲ ಸಂಪ್ರದಾಯಾನುಸಾರಿಯಾದ ಮಾತಲ್ಲ. ಅವರ ರೀತಿ ಸ್ವತಂತ್ರ ಬುದ್ಧಿಕ್ರಿಯೆಯದು, ವಿಮರ್ಶನಪೂರ್ವಕವಾದದ್ದು; ಪೂರ್ವಪಕ್ಷ ಸಮಾಧಾನಗಳ ರೂಪವಾದ ಕಥೆ - ಎಂಬುದು ಅವರ ಇತರ ಲೇಖನಗಳನ್ನು ನೋಡಿದವರಿಗೆ ಗೊತ್ತಾಗದೆ ಇರದು.

ಅವರು ಅನೇಕ ಗ್ರಂಥಗಳನ್ನು ಕನ್ನಡದ ಜನರಿಗೂ, ಕನ್ನಡ ತಿಳಿಯದ ಇಂಗ್ಲಿಷ್ ಬಲ್ಲ ಜನರಿಗೂ, ಸಂಸ್ಕೃತಭಾಷಾಪರಿಣತರಾದ ಮಹಾಜನರಿಗೂ ಒದಗಿಸಿಕೊಟ್ಟಿದ್ದಾರೆ. ಈ ಮೂರು ಭಾಷೆಗಳಲ್ಲಿಯ ಯಾವ ಗ್ರಂಥವನ್ನು ನೋಡಿದರೂ ಶ್ರೀ ಸ್ವಾಮಿಗಳವರ ದಾರಿ ವಿಚಾರದ್ದೆಂಬುದು ಚೆನ್ನಾಗಿ ವ್ಯಕ್ತಪಡುತ್ತದೆ. ಶ್ರೀ ಸ್ವಾಮಿಗಳವರ ಸಾಧನವು ವಿಚಾರ ರೂಪವಾದದ್ದು, ಆದರೆ ಶ್ರದ್ಧೆಯನ್ನು ಬಿಟ್ಟದ್ದಲ್ಲ, ಶ್ರದ್ಧಾಭಕ್ತಿಸಮನ್ವಿತವಾದ ಬುದ್ಧಿ ವಿಚಾರವು ಅವರ ದಾರಿ.

ಅಧಿಕಾರ, ಅನಧಿಕಾರ ವಿವೇಚನೆಯ ಅಭ್ಯಾಸವು ಜನರಲ್ಲಿ ಕ್ಷಯಿಸುತ್ತಿರುವ ಈ ಕಾಲದಲ್ಲಿ ತಾರತಮ್ಯವಿವೇಕವನ್ನು ಇನ್ನೂ ಉಳಿಸಿಕೊಂಡಿರುವವರಿಗೆ ಶ್ರೀ ಸ್ವಾಮಿಗಳವರ ಈ ಗ್ರಂಥವು ಕುಂಬಾರನ ಆವಿಗೆಯಲ್ಲಿ ಕೈಯಿಟ್ಟವರಿಗೆ ಚಿನ್ನದ ಪಾತ್ರೆ ಸಿಕ್ಕಿದಂತೆ ಆಗುತ್ತದೆ. ಈ ಕಾಲದಲ್ಲಿ ಅಕ್ಷರವಿದ್ಯೆ ಹರಡುತ್ತಿದೆ. ಅಚ್ಚಿನ ಕಾರ್ಖಾನೆಗಳು ಬೀದಿಬೀದಿಯಲ್ಲೂ ಇವೆ. ಆದ್ದರಿಂದ ಎಲ್ಲರೂ ಗ್ರಂಥಲೇಖನಕ್ಕೆ ಉದ್ಯುಕ್ತರಾಗಬಹುದಾಗಿದೆ. ಈಗ ಎಲ್ಲ ಸರ್ವಸಮಾನ; ಎಲ್ಲರೂ ವಿದ್ವಾಂಸರು; ಎಲ್ಲರೂ ಗ್ರಂಥಕರ್ತರು.

ವಸನಾಶನಮಾತ್ರಸಂಭವೇ।
ಧನದಾದಪ್ಯಧಿಕಾಯತೇ ಜನಃ॥
ಅಥ ವೇತ್ತಿ ಷಡಕ್ಷರಾಣಿ ಚೇತ್।
ಉಪದೇಷ್ಟುಂ ಶಿತಿಕಂಠಮಿಚ್ಛತಿ॥

(ಹೊಟ್ಟೆಗೆ, ಲಂಗೋಟಿಗೆ ಇದ್ದರೆ "ಕುಬೇರನದೇನು?" ಎನ್ನುತ್ತಾನಂತೆ; ಅ, ಆ, ಇ, ಈ, ಉ, ಊ - ಇಷ್ಟು ಬಂದವನು "ಪರಮೇಶ್ವರನೇ ತನಗೆ ಶಿಷ್ಯನಾಗಿರಲಿ" ಎನ್ನುತ್ತಾನಂತೆ)

ಇಂಥಾದ್ದು ಈಗಿನ ಜನದ ಲಕ್ಷಣ.

ಒಂದು ಪ್ರಸಂಗ ; ಉದಾಹರಣೆಯಾಗಿ, ----

ಎಂಟು-ಹತ್ತು ವರ್ಷಗಳ ಹಿಂದೆ ಒಂದು ಸಂಜೆ ನಾನು ಚಿಕ್ಕಪೇಟೆಯಲ್ಲಿ ಒಂದು ಪುಸ್ತಕದಂಗಡಿಯಲ್ಲಿ ಒಬ್ಬ ವಿದ್ವಾಂಸಸ್ನೇಹಿತರೊಡನೆ ಮಾತನಾಡುತ್ತ ಕುಳಿತಿದ್ದೆ. ಆಗ ಒಂದು ೧೦-೧೫ ಮಂದಿ ಹುಡುಗರ ಗುಂಪು ಅಲ್ಲಿ ಮೆರವಣಿಗೆ ಹೋಗುತ್ತಿತ್ತು. ಸತ್ಯಾಗ್ರಹಿಗಳ ಗುಂಪು "ಮಹಾತ್ಮಾ ಗಾಂಧೀಕೀ ಜೈ" ಘೋಷಮಾಡಿತು. ಅವರಿಗೆ ಮುಂದಾಳಾಗಿದ್ದ ಯುವಕ ಆ ನನ್ನ ವಿದ್ವಾಂಸ ಸ್ನೇಹಿತರ ಬಳಿ ಬಂದು ನಿಂತ ಆಗ-

ವಿದ್ವಾಂಸರು : (ತೆಲುಗಿನಲ್ಲಿ) ಏನೋ? ಏನು ಮಾಡಿಕೊಂಡಿದ್ದೀ?
ಯುವಕ : ಇಗೋ! ಹೀಗೆಯೇ! - ಎಂದು ಹುಡುಗರ ಕಡೆ ಕೈ ತೋರಿಸಿದ.
ವಿದ್ವಾಂಸರು : ಇದೆಲ್ಲ ಏನೋ? ಏನಾಗುತ್ತದೆ, ಇದರಿಂದ ?
ಯುವಕ : ಏನು ? ಏನಾಗುವುದು?
ಕರ್ಮಣ್ಯೇವಾಧಿಕಾರಸ್ತೇ................
ವಿದ್ವಾಂಸರು : ಹೊಡಕೋ ! ಗೀತೆಗೆ ಬಂತು ಆಪತ್ತು ನಿನ್ನಿಂದ.
ಹೀಗಿದೆ ಈಗಿನ ವಿವೇಚನೆ.

ಗೀತೆಯ ಮೇಲಿನ ವ್ಯಾಖ್ಯಾನಗ್ರಂಥಗಳಿಗೆ ಲೆಕ್ಕವಿಲ್ಲ. ಆದರೆ, ಒಂದು ಮಾತಿಗೆ ಬೆಲೆ ಬರುವುದು, ಅದನ್ನಾಡಿದವರ ವ್ಯಕ್ತಿವಿಶೇಷದಿಂದ - ಎಂಬುದನ್ನು ಲೇಖಕರೂ ವಾಚಕರೂ ಮರೆಯಬಾರದು. "ಶಿವ ಶಿವಾ" ಎಂದು ಭಾಗವತನೂ ಹೇಳುತ್ತಾನೆ, ಭಂಗೀಕೋರನೂ ಹೇಳುತ್ತಾನೆ. ಅದು ಸಾರ್ಥಕವಾಗುವುದು ನಿಜವಾದ ಭಾಗವತನ ಬಾಯಿಂದ ಬಂದಾಗ ಮಾತ್ರ.

ಈ ಗ್ರಂಥರಚನೆಗೆ ಅಭಾವವಿಲ್ಲ. ಆದರೆ ಬೆಲೆಬಾಳುವ ಗ್ರಂಥವನ್ನು ಹುಡುಕಿ ವಿಮರ್ಶೆಮಾಡಿದರೆ ತಾನೆ, ಗೊತ್ತಾಗುವುದು? ಹಾಗೆ ವಿಮರ್ಶೆ ಮಾಡಿ ನೋಡುವವರಿಗೆ ಶ್ರೀಶ್ರೀ ಸಚ್ಚಿದಾನಂದೇಂದ್ರ ಸ್ವಾಮಿಗಳವರಿಂದ ಅನುಗ್ರಹೀತವಾದ ಈ ಗ್ರಂಥವು, ಕತ್ತಲೆಯಲ್ಲಿ ಸಂಚಾರಮಾಡುತ್ತಿರುವವರಿಗೆ ವಿದ್ಯುತ್ಪ್ರಕಾಶ ಬಂದಾಗ ಹೇಗಾಗುತ್ತದೋ ಅಂಥಾ ಅನುಭವದಾಯಕವಾದೀತೆಂದು ನನಗೆ ಅನ್ನಿಸುತ್ತದೆ.

ನಮ್ಮ ಜನದಲ್ಲಿ ಧಾರ್ಮಿಕಸಾಹಿತ್ಯಗ್ರಂಥಗಳ ರಾಶಿ ಅಪಾರವಾಗಿದೆ. ಅದರಲ್ಲಿ ಭಗವದ್ಗೀತೆಯು ವಿಶೇಷ ಮಹತ್ತ್ವದ ಸ್ಥಾನವನ್ನು ಸಂಪಾದಿಸಿಕೊಂಡಿದೆ. ಇಷ್ಟು ಜನಪ್ರಿಯವಾದ ಗ್ರಂಥ ಯಾವುದೂ ಇಲ್ಲ. ಜನಪ್ರೀತಿಗೆ ಕಾರಣವಾದದ್ದು ಅದರ ಸರ್ವಾಂಗಸುಂದರತೆ; ಮತ್ತು ಅದರ ಐತಿಹಾಸಿಕವಾದ ಹಿನ್ನೆಲೆ.

ಭಗವದ್ಗೀತೆಯು ಮಹಾಭಾರತದ ಒಂದು ಭಾಗವಷ್ಟೆ! ಅದೂ ಶ್ರೀ ಕೃಷ್ಣನೇ ಸ್ವಯಂ ಸಾಕ್ಷಾತ್ತಾಗಿ ಅರ್ಜುನನಿಗೆ ಉಪದೇಶಮಾಡಿದ್ದೆಂಬ ಒಂದು ಸಂಗತಿಯೇ ಆ ಗ್ರಂಥದ ಮಹತ್ತ್ವಕ್ಕೆ ಸಾಕಷ್ಟು ಕಾರಣವಾಗಿದೆ. ಇದರ ಜೊತೆಗೆ ಸೇರಿಕೊಂಡಿರುವ ಕಾರಣವೂ ದೊಡ್ಡದು. ಅದೇನೆಂದರೆ ಈ ಗೀತೆಯೊಳಗೆ ಮಿಕ್ಕೆಲ್ಲ ಗ್ರಂಥಗಳ ಸ್ವಾರಸ್ಯವೂ ಅಡಗಿದೆ. ಗೀತೆಯೇ ವೇದೋಪನಿಷತ್ತುಗಳ ಸಾರವೆಂಬುದು ಪ್ರಸಿದ್ಧವಾಗಿದೆ. ಆದ್ದರಿಂದಲೇ ಶ್ರೀಮಚ್ಛಂಕರಾಚಾರ್ಯರವರು

ಗೇಯಂ ಗೀತಾ ನಾಮಸಹಸ್ರಂ

-ಎಂದು ಉಪದೇಶಮಾಡಿರುವಂತೆ ತೋರುತ್ತದೆ. ಗೀತೆಯಲ್ಲಿ ಪ್ರಸ್ತಾವವಾಗದಿರುವ ಮಾನುಷಜೀವನ ಪ್ರಶ್ನೆ ಯಾವುದೂ ಇಲ್ಲ. ಜಿಜ್ಞಾಸುವಿಗೆ ತೋರಬಹುದಾದ ಎಲ್ಲ ಪ್ರಶ್ನೆಗಳಿಗೂ ಇಲ್ಲಿ ಸಮಂಜಸವಾದ ಉತ್ತರ ದೊರೆಯುತ್ತದೆ. ಸಾವಧಾನವಾಗಿ ಈ ಗ್ರಂಥವನ್ನು ವ್ಯಾಸಂಗ ಮಾಡುವವರಿಗೆ ಬೇರೆ ಯಾವ ಗ್ರಂಥವೂ ಬೇಕೆನ್ನಿಸಲಾರದು. ಕೇಳಬಹುದಾದ ಪ್ರಶ್ನೆಗಳಿಗೆ ಸಕಾರಣವೂ ಸಮಗ್ರವೂ ಆದ ಉತ್ತರಗಳು ಗೀತೆಯಲ್ಲಿ ಹೊರಡುತ್ತವೆ. ಇಂಥ ಮಹಾಗ್ರಂಥವನ್ನು ಓದಿದ ಬಳಿಕ ಜೀವನದ ಸಮಸ್ಯೆಗಳು ಸುಲಭವಾಗಿ ಉತ್ತರ ಪಡೆದು, ಮನಸ್ಸಿಗೆ ಶಾಂತಿ ಬರಬಹುದಾಗಿದೆ. ಹೀಗೆ ಶಾಂತರಸಪ್ರಧಾನವಾದದ್ದು ಈ ಗ್ರಂಥ. ಮನಸ್ಸಿನ ನೆಮ್ಮದಿಯನ್ನು ಬಯಸುವವರು ಇದರಿಂದ ಉಪಕೃತರಾಗುವಂತೆ ಮತ್ತಾವ ಗ್ರಂಥದಿಂದಲೂ ಆಗಲಾರದು. ಹೀಗೆ ಈ ಗೀತಾವ್ಯಾಖ್ಯಾನದಿಂದ ನಮ್ಮ ಪರಮಹಂಸ ಸ್ವಾಮಿಗಳವರು ಲೋಕಕ್ಕೆ ಮಹೋಪಕಾರ ಮಾಡಿದ್ದಾರೆ. ಅದಕ್ಕಾಗಿ ಅವರಿಗೆ ಸಹಸ್ರ ನಮಸ್ಕಾರ.

ಇನ್ನು ಹೆಚ್ಚಾಗಿ ಹೇಳಲಾರೆ. ಕ್ಲಿಷ್ಟವಿಷಯಗಳನ್ನು ಸರಳವಾಗಿ ಪ್ರತಿಪಾದಿಸಿ ಓದುಗರ ಮನಸ್ಸು ನಿಶ್ಶಂಕವಾಗುವಂತೆ ಪ್ರವಚನಮಾಡಬಲ್ಲ ವ್ಯಾಖ್ಯಾನಚತುರತೆಯನ್ನೂ ಮತ್ತು ಭಾಷಾ ವೈಶದ್ಯವನ್ನೂ ದೇವರು ಅವರಿಗೆ ವರ ಕೊಟ್ಟಿದ್ದಾನೆ. ನಮ್ಮ ಜನ ಈ ವರದಿಂದ ಪ್ರಯೋಜನ ಪಡೆಯಲಿ.

**ಇಂತು ಸರ್ವಂ ಶಿವಂ**

ಆನಂದ ಸಂವತ್ಸರ ಕಾರ್ತಿಕ
ಬಹುಳ ಚತುರ್ದಶಿ ಗುರುವಾರ
ತಾ. ೧೨-೧೨-೧೯೭೪

ಡಿ. ವಿ. ಗುಂಡಪ್ಪ

# ಕೃತಜ್ಞತಾ ಸ್ಮರಣೆ

ಅಧ್ಯಾತ್ಮಪ್ರಕಾಶಕಾರ್ಯಾಲಯದವರು ಪ್ರಧಾನವಾಗಿ ಕೈಗೊಂಡಿರುವ ಅಧ್ಯಾತ್ಮಗ್ರಂಥಗಳ ಪ್ರಕಟನೆ - ಪ್ರಚಾರರೂಪವಾದ ಸೇವೆಗೆ ಅನೇಕ ಧಾರ್ಮಿಕ ಮನೋಭಾವವುಳ್ಳ ಮಹಾಶಯರುಗಳು ಉದಾರವಾದ ಧನಸಹಾಯವನ್ನು ನೀಡಿ ಪ್ರೋತ್ಸಾಹಿಸುತ್ತಲೇ ಇದ್ದಾರೆ. ಪ್ರಕೃತ ಈ ಮಹಾಗ್ರಂಥಕ್ಕೆ ಗಣನೀಯಮೊತ್ತದ ಧನಸಹಾಯವನ್ನು ನೀಡಿ ಪ್ರೋತ್ಸಾಹಿಸಿರುವ ಹೊಳೆನರಸೀಪುರದವರೇ ಆದ ದಿವಂಗತ ಛತ್ರದ ವೈ. ರಾಮಚಂದ್ರರಾಯರು ಮತ್ತು ಅವರ ಧರ್ಮಪತ್ನಿ ಶ್ರೀಮತಿ ಲಕ್ಷಮ್ಮನವರ ಕಿರು ಪರಿಚಯವನ್ನು ವಾಚಕರಿಗೆ ಮಾಡಿಕೊಟ್ಟು ಆ ಮೂಲಕ ನಮ್ಮ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇವೆ.

ಹೊಳೆನರಸೀಪುರ ಪಟ್ಟಣದಲ್ಲಿ ಛತ್ರದ ವೈ. ರಾಮಚಂದ್ರರಾಯರು ಎಂದೇ ಪ್ರಸಿದ್ಧರಾಗಿದ್ದ ಈ ಮಹನೀಯರು (1894-1982) ತಮ್ಮ ಜೀವಿತಕಾಲಕ್ಕೆ ದೊಡ್ಡ ಜಮೀನುದಾರರಾಗಿದ್ದರು. ಇವರ ಧರ್ಮಪತ್ನಿ ಶ್ರೀಮತಿ ಲಕ್ಷಮ್ಮನವರು (1904-1990) ಸಹ ಸದ್ಗೃಹಿಣಿಯೂ ದಾನಶೀಲೆಯೂ ಆಗಿದ್ದರು. ಎಂಟು ಜನ ಮಕ್ಕಳುಗಳ ಹಾಗೂ ಬಂಧುಬಾಂಧವರಿಂದ ಕೂಡಿದ ದೊಡ್ಡ ಕುಟುಂಬಿಗಳಾಗಿ ತಮ್ಮ ಪೂರ್ವಿಕರು ನಡೆಯಿಸಿಕೊಂಡು ಬಂದಿದ್ದ ಧಾರ್ಮಿಕಕಾರ್ಯಗಳನ್ನೆಲ್ಲ ಬಹಳ ಶ್ರದ್ಧಾಭಕ್ತಿಗಳಿಂದ ನಡೆಸುತ್ತಿದ್ದರು. ಮನೆಯಲ್ಲಿ ಪ್ರತಿದಿನವೂ ದೇವರ ಪೂಜೆ, ಮಧ್ಯಾಹ್ನಕಾಲಕ್ಕೆ ಬಂದವರಿಗೆ ಭೋಜನಸತ್ಕಾರ, ಹಬ್ಬಹುಣ್ಣಿಮೆಗಳ ಆಚರಣೆ, ಸಂನ್ಯಾಸಿಗಳಿಗೆ ಭಿಕ್ಷೆ, ಮುಂತಾದ ಸತ್ಕಾರ್ಯಗಳು ಇವರ ಗೃಹದಲ್ಲಿ ನಿರಂತರವಾಗಿ ನಡೆಯುತ್ತಿದ್ದವು. ಸಾರ್ವಜನಿಕವಾದ ಧಾರ್ಮಿಕಕಾರ್ಯಗಳಲ್ಲಿಯೂ ಶ್ರೀಯುತರು ಭಾಗವಹಿಸಿ ನಿಷ್ಠೆಯಿಂದ ಸೇವೆಯನ್ನು ಸಲ್ಲಿಸುತ್ತಿದ್ದರು. ಇವರ ಗುರುದೇವತಾಭಕ್ತಿ, ಔದಾರ್ಯ, ಪರೋಪಕಾರ, ದಾನಧರ್ಮಗಳು ಇತರರಿಗೂ ಆದರ್ಶವಾಗಿದ್ದವು. ಸ್ವಭಾವದಿಂದ ಮಿತಭಾಷಿಗಳೂ ನಿರಾಡಂಬರವ್ಯಕ್ತಿಗಳೂ ಆಗಿದ್ದರು.

ವಿಶೇಷವಾಗಿ ಹೊಳೆನರಸೀಪುರದ ಗ್ರಾಮದೇವತೆ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯವರ ರಥೋತ್ಸವ ಕಾಲದಲ್ಲಿ ಮಹಾಸಂತರ್ಪಣೆಯನ್ನು ಮಹಾಜನರ ಸಹಾಯದಿಂದ ಯಶಸ್ವಿಯಾಗಿ ನಡೆಸುತ್ತಿದ್ದುದಲ್ಲದೆ ಕಲ್ಯಾಣೋತ್ಸವಸೇವೆಯನ್ನೂ ತಮ್ಮ ಕುಟುಂಬಬಂಧುವರ್ಗದವರೊಡಗೂಡಿ ನೆರವೇರಿಸುತ್ತಿದ್ದರು. ವಾರ್ಷಿಕಪರೀಕ್ಷಾಕಾಲದಲ್ಲಿ ಪರಸ್ಥಳದ ವಿದ್ಯಾರ್ಥಿಗಳಿಗೆ ಭೋಜನ ವಸತಿ ಸೌಕರ್ಯಗಳನ್ನು ಏರ್ಪಡಿಸುತ್ತಿದ್ದರು. ಹೊಳೆನರಸೀಪುರದ

ಕೋಟೆಯಲ್ಲಿ 'ಶ್ರೀಶಂಕರಜಗದ್ಗುರು ಸೇವಾಸಂಘ' ಎಂಬ ಸಂಸ್ಥೆಯನ್ನು ಸ್ಥಾಪಿಸಿ 1972 ರಲ್ಲಿ ಶ್ರೀಶಾರದಾಂಬಾ-ಶಂಕರಾಚಾರ್ಯರ ಪ್ರತಿಷ್ಠಾಕಾರ್ಯವನ್ನು ಮಹಾಜನರ ಸಹಾಯದಿಂದ ನೆರವೇರಿಸಿದರು. ತಮ್ಮ ವೈಯಕ್ತಿಕಜೀವನದ ಎಲ್ಲಾ ಹಂತಗಳಲ್ಲಿಯೂ ಒದಗಿದ ಸುಖದುಃಖಗಳಲ್ಲಿ ಧೃತಿಗೆಡದೆ ತಮ್ಮ ಸ್ಥಿತಪ್ರಜ್ಞತೆಯನ್ನೂ ಕಾಪಾಡಿಕೊಂಡು ಆದರ್ಶಗೃಹಸ್ಥರಾಗಿ ಬಾಳಿದರು. ಇವರ ಸಂಪೂರ್ಣ ಜೀವನದುದ್ದಕ್ಕೂ ಆದರ್ಶಗೃಹಿಣಿಯಾಗಿ ಬಾಳಿದ ಶ್ರೀ ಲಕ್ಷಮ್ಮನವರೂ ಯಜಮಾನರಿಗೆ ತಕ್ಕ ಸಹಧರ್ಮಚಾರಿಣಿಯಾಗಿದ್ದರು.

ಈ ಪುಣ್ಯದಂಪತಿಗಳ ಸ್ಮರಣಾರ್ಥವಾಗಿ ಇವರ ಪುತ್ರರು ಹಾಗೂ ಪುತ್ರಿಯರು ಒಟ್ಟಾಗಿ ಸಂಕಲ್ಪಿಸಿ ಈ ಗ್ರಂಥದ ಪ್ರಕಟನೆಗೆ 50,000/- ರೂ. (ಐವತ್ತು ಸಾವಿರ ರೂಪಾಯಿಗಳು) ಉದಾರವಾದ ಧನಸಹಾಯವನ್ನು ನೀಡಿ ಪ್ರೋತ್ಸಾಹಿಸಿರುತ್ತಾರೆ. ಕಾರ್ಯಾಲಯದ ಪರವಾಗಿ ಇವರೆಲ್ಲರಿಗೂ ಕೃತಜ್ಞತಾಪೂರ್ವಕವಾದ ಅಭಿನಂದನೆಗಳನ್ನು ಈ ಮೂಲಕ ಸಮರ್ಪಿಸಲಾಗಿದೆ. ದಾನಿಗಳ ಸ್ಮರಣಾರ್ಥವಾಗಿ ಅವರ ಭಾವಚಿತ್ರವನ್ನೂ ಈ ಗ್ರಂಥದಲ್ಲಿ ಅಳವಡಿಸಲಾಗಿದೆ. ಈ ಗ್ರಂಥವನ್ನು ಅಧ್ಯಯನಮಾಡುವ ವಾಚಕವೃಂದದವರಿಗೂ ಭಗವಾನ್ ಪಾರ್ಥಸಾರಥಿ ಹಾಗೂ ಜಗದ್ಗುರು ಶ್ರೀಶಂಕರಾಚಾರ್ಯರ ಕೃಪಾನುಗ್ರಹಗಳು ಲಭಿಸಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇವೆ.

ಈ ಗ್ರಂಥದ ಪ್ರಕಟನೆಗೆ ವಿಶೇಷ ಧನ ಸಹಾಯವನ್ನು ನೀಡಿರುವ ದಾನಿಗಳ ಪಟ್ಟಿಯನ್ನು ಮುಂದೆ ಕೊಡಲಾಗಿದೆ. ಈ ಎಲ್ಲಾ ಉದಾರಹೃದಯದ ಮಹನೀಯರು ಹಾಗೂ ಮಹಿಳೆಯರಿಗೂ ನಮ್ಮ ವಿಶೇಷ ಅಭಿನಂದನಾ ಪೂರ್ವಕವಾದ ಕೃತಜ್ಞತೆಗಳನ್ನು ಈ ಮೂಲಕ ಸಮರ್ಪಿಸಲಾಗಿದೆ.

ಇತಿ

ತಾ ೨೫.೪.೧೯೯೯<br>ಹೊಳೆನರಸೀಪುರ.

ಕಾರ್ಯಕಾರಿಸಮಿತಿಯ ಪರವಾಗಿ,<br>ಅರಕಲಗೂಡು ತಾಂಡವೇಶ್ವರ,<br>ಅಧ್ಯಕ್ಷರು.



ದಿ|| ಧರ್ಮಪತ್ನಿ ಲಕ್ಷಮ್ಮ
(1904- 1990)

ದಿ|| ಛತ್ರದ ವೈ. ರಾಮಚಂದ್ರರಾಯರು
(1894- 1982) ಹೊಳೆನರಸೀಪುರ

## ಗ್ರಂಥ ಪ್ರಕಟನೆಗೆ ಧನಸಹಾಯವನ್ನು ನೀಡಿರುವ ಮಹನೀಯರುಗಳು

| ಹೆಸರು | | ಮೊಬಲಗು |
|---|---|---|
| *ಶ್ರೀಯುತರುಗಳಾದ:-* | | ರೂ. |
| ಪೂಜ್ಯ ವೀರೇಂದ್ರಹೆಗಡೆಯವರು (ಧರ್ಮಸ್ಥಳಕ್ಷೇತ್ರದ ಧರ್ಮಾಧಿಕಾರಿಗಳು) | | 10,000.00 |
| ವೈ. ನಾರಾಯಣರಾವ್ ಸಹೋದರರು ಮತ್ತು ಸಹೋದರಿಯರು (ದಿ ॥ ತಂದೆ ಹೊಳೇನರಸೀಪುರದ ಛತ್ರದ ವೈ. ರಾಮಚಂದ್ರರಾವ್ ಮತ್ತು ಧರ್ಮಪತ್ನಿ ದಿ ॥ ಲಕ್ಷ್ಮಮ್ಮನವರ ನೆನಪಾಗಿ) | | 50,000.00 |
| ವೇದ ಸೊಸೈಟಿ, ಲಂಡನ್ (ಶ್ರುತಿ ಶಂಕರ ಸಂಸ್ಕೃತ ಸಂಶೋಧನ ಪ್ರತಿಷ್ಠಾನಮ್, ಮತ್ತೂರು-ಶಿವಮೊಗ್ಗ ಇವರ ಮೂಲಕ) | | 15,000.00 |
| ಶಂಕರ ಜಯಂತಿ ಮಂಡಳಿ, ಜಯನಗರ, ಬೆಂಗಳೂರು | 2,000.00 | |
| (ವೇದಾಂತ ಸಪ್ತಾಹಗಳಲ್ಲಿ ಭಕ್ತರುಗಳಿಂದ) | 4,514.00 | 6,514.00 |
| ಡಾ ॥ ಗಿರಿರಾಜ್, ಶಿವಮೊಗ್ಗ | | 5,000.00 |
| ಗೋಪಾಲರಾವ್ ದಿವೇಕರ್, ಶಿವಮೊಗ್ಗ | | 5,000.00 |
| ನರಸಿಂಹರಾಜಾಕಾಲೋನಿ ಶ್ರೀರಾಮಮಂದಿರ ಟ್ರಸ್ಟ್, ಬೆಂಗಳೂರು | | 5,000.00 |
| ಜ್ಯೋತಿ ಇಂಡಸ್ಟ್ರೀಸ್, ಬೆಂಗಳೂರು | | 5,000.00 |
| ಬಿ. ವಿರೂಪಾಕ್ಷ ಭಟ್ಟ, ಬೆಂಗಳೂರು | | 2001.00 |
| ಡಾ ॥ ಜಿ. ವಿ. ರಘು, Georgia, ಯು.ಎಸ್.ಎ. | | 2,000.00 |
| ಕೆ. ಸತ್ಯನಾರಾಯಣ, ಬೆಂಗಳೂರು | | 1,001.00 |
| ಶ್ರೀಮತಿ ಕೆ. ವಿ. ಮಂಗಳಾಂಬ ಮತ್ತು ಕೆ. ವಿ. ಲಲಿತಾಂಬ, ಬೆಂಗಳೂರು | | 1001.00 |
| ಶ್ರೀಮತಿ ಶಕುಂತಲಾ ನಾಗರಾಜ್, ಬೆಂಗಳೂರು | | 1001.00 |
| ಎಸ್. ರಾಮರಾವ್, ಜಯನಗರ, ಬೆಂಗಳೂರು | | 1000.00 |
| ಎಮ್. ಆರ್. ಸೇತೂರಾಮ್, ಬೆಂಗಳೂರು | | 1000.00 |
| ಜಿ. ಎಸ್. ಪಾಂಡುರಂಗರಾವ್, ಬೆಂಗಳೂರು | | 1000.00 |
| ಎಮ್. ವಿ. ರಾಮಚಂದ್ರ, ಬೆಂಗಳೂರು | | 1000.00 |
| ಡಾ ॥ ರತ್ನ -ರಾವ್, ಪೂನಾ | | 1000.00 |
| ಬಿ. ಪದ್ಮನಾಭ ಅಡಿಗ, ಬೆಂಗಳೂರು | | 1000.00 |
| ಟಿ. ವಿ. ನಾರಾಯಣರಾವ್ (ಟಿ ಎಸ್. ಬಾಲಾಜಿಯವರ ಮೂಲಕ) ದೊಡ್ಡಬಳ್ಳಾಪುರ | | 1000.00 |
| ಶ್ರೀರಾಮ ಮಂಡಳಿ (ರಿ), 9ನೇ ಬ್ಲಾಕ್, ಜಯನಗರ, ಬೆಂಗಳೂರು-69 | | 875.00 |
| ಬ್ರಹ್ಮಚೈತನ್ಯ ಮಂದಿರ, ಬೆಂಗಳೂರು-50 | | 777.00 |
| ಶಂಕರರಾವ್ ಅಳವಂಡೇಕರ್, ಹೊಸಪೇಟೆ | | 600.00 |

| | |
|---|---|
| ಕೆ. ಎನ್. ಅಶ್ವತ್ಥನಾರಾಯಣ, ಮೈಸೂರು | 501.00 |
| ಶ್ರೀಮತಿ ನಾಗಲಕ್ಷ್ಮಿ -ವಸಂತಕುಮಾರ್, ಬೆಂಗಳೂರು | 501.00 |
| ಶ್ರೀಮತಿ ಸಿ. ಎಸ್. ಗಾಯತ್ರಿ, ಬೆಂಗಳೂರು | 501.00 |
| ಶ್ರೀಮತಿ ಇಂದಿರಾಬಾಯಿ ಪಾಟೀಲ್, ಹಾವೇರಿ | 501.00 |
| ಶ್ರೀಮತಿ ಎ. ಎಸ್. ನಾಗಮ್ಮ, ಬೆಂಗಳೂರು | 501.00 |
| ಮಲ್ಲೇಶಪ್ಪ (ಮಾತಾಪಿತೃಗಳ ನೆನಪಾಗಿ), ಶಿವನಗೆರೆ, ಮಧುಗಿರಿ ತಾ. | 501.00 |
| ಎನ್. ಶಿವರಾಮ್, ಮೈಸೂರು | 501.00 |
| ಕೆ. ಟಿ. ಅನಂತಸುಬ್ಬರಾವ್, ಬೆಂಗಳೂರು | 501.00 |
| ಟಿ. ಎನ್. ಪ್ರಕಾಶ್, ಬೆಂಗಳೂರು | 501.00 |
| ಸಿ. ಬದ್ರೀಶ್, ಬೆಂಗಳೂರು | 501.00 |
| ಎಸ್. ಸುಬ್ರಹ್ಮಣ್ಯ, ಹೊಳೆನರಸೀಪುರ | 501.00 |
| ಶ್ರೀಮತಿ ಒ. ಆರ್. ಲಲಿತಮ್ಮ, ಮದನಪಲ್ಲಿ | 500.00 |
| ಶ್ರೀಮತಿ ಎಸ್. ಕಮಲಮ್ಮ, ಮೈಸೂರು | 500.00 |
| ಶ್ರೀಮತಿ ಕೆ. ವೆಂಕಟಲಕ್ಷಮ್ಮ, ಬೆಂಗಳೂರು | 500.00 |
| ಶ್ರೀಮತಿ ಎಸ್. ಆರ್. ಮಾಲತಿ, ಬೆಂಗಳೂರು | 500.00 |
| ಕೆ. ನಾಗರಾಜ್, ಚಿಕ್ಕಮಗಳೂರು | 500.00 |
| ಎ. ಸಿ. ರಂಗಸ್ವಾಮಿ ಶೆಟ್ಟರು, ಹೊಳೆನರಸೀಪುರ | 500.00 |
| ಆರ್. ಸುಂದರ ಮೂರ್ತಿ, ಮೈಸೂರು | 500.00 |
| ಸ್ವಾಮಿ ಶಿವಾನಂದ, ದಾವಣಗೆರೆ | 500.00 |
| ಎಮ್. ವಿ. ಸುಬ್ರಹ್ಮಣ್ಯಮ್, ಕೋಲಾರ | 500.00 |
| ಜೆ. ಎಸ್. ತಿಮ್ಮಪ್ಪಯ್ಯ, ಮೈಸೂರು | 500.00 |
| ಎಮ್. ನರಸಿಂಹಯ್ಯ, ಬೆಂಗಳೂರು | 500.00 |
| ಹೆಚ್. ಎಸ್. ಪಾಟೀಲ್ ಮತ್ತು ಕುಟುಂಬ, ಹಾವೇರಿ | 500.00 |
| ಡಾ. ಜೆ. ಪೂರ್ಣಚಂದ್ರರಾವ್, ಗುಂಟೂರು, (A.P.) | 500.00 |
| ಡಾ. ಜೆ. ಹನುಮಂತರಾವ್, ನರಸರಾವ್‌ಪೇಟೆ (A.P.) | 500.00 |
| ಕೇಶವ್, ಆರ್. ಬೆಟಗೇರಿ, ಬೆಂಗಳೂರು | 500.00 |
| ಟಿ. ಆರ್. ವಿನಾಯಕ, ಬೆಂಗಳೂರು | 500.00 |
| ಕೆ. ರಾಮಮೋಹನ್, ಬೆಂಗಳೂರು | 500.00 |
| ಬಿ. ವಿ. ವಿಟ್ಠಲ್, ಬೆಂಗಳೂರು | 500.00 |
| ಹೆಚ್. ಎನ್. ವೈದ್ಯನಾಥನ್, ಬೆಂಗಳೂರು | 500.00 |
| ದತ್ತಾತ್ರೇಯ ಜಯಂತಿ ಸಮಿತಿ, ಹಾವೇರಿ | 250.00 |
| ಒಟ್ಟು | 1,33,031.00 |

*ಬಿನ್ನಹ:* ಪ್ರಮಾದವಶದಿಂದ ಯಾರದಾದರೂ ಹೆಸರು ಮತ್ತು ಮೊಬಲಗು ಬಿಟ್ಟುಹೋಗಿದ್ದಲ್ಲಿ ದಯಮಾಡಿ ತಿಳಿಸಬೇಕಾಗಿ ವಿನಂತಿ.

# ವಿಷಯಾನುಕ್ರಮಣಿಕೆ


| | ವಿಷಯ | ಪುಟ |
|---|---|---|
| ೧. | ಭಗವದ್ಗೀತಾಪಾರಾಯಣ | ೧ |
| ೨. | ಗೀತೋಪದೇಶದ ಮಹತ್ತ್ವ | ೪ |
| ೩. | ಅರ್ಜುನನ ವಿಷಾದ | ೧೧ |
| ೪. | ಗೀತೋಪದೇಶದ ಉದ್ದೇಶ | ೧೫ |
| ೫. | ನಮಗೆ ಎಂದಿಗೂ ಸಾವಿಲ್ಲ | ೧೮ |
| ೬. | ನಿತ್ಯಾನಿತ್ಯವಿವೇಕ | ೨೬ |
| ೭. | ಇರುವದೂ ಇಲ್ಲದ್ದೂ | ೩೦ |
| ೮. | ಆತ್ಮನೂ ಶರೀರಗಳೂ | ೩೭ |
| ೯. | ಆತ್ಮಜ್ಞಾನದಿಂದ ಕೃತಕೃತ್ಯತೆ | ೪೭ |
| ೧೦. | ಆತ್ಮಜ್ಞಾನದ ಉಪಸಂಹಾರ | ೫೫ |
| ೧೧. | ಸಾಂಖ್ಯಬುದ್ಧಿ, ಯೋಗಬುದ್ಧಿ | ೬೧ |
| ೧೨. | ಜ್ಞಾನದೃಷ್ಟಿ, ಕರ್ಮದೃಷ್ಟಿಗಳು | ೬೭ |
| ೧೩. | ಕರ್ಮಯೋಗಕ್ಕೆ ಅವತರಣಿಕೆ | ೭೩ |
| ೧೪. | ಕರ್ಮಯೋಗದ ಗುರಿ | ೭೮ |
| ೧೫. | ಕರ್ಮಯೋಗದ ಸ್ವರೂಪ | ೮೩ |
| ೧೬. | ಕರ್ಮಯೋಗದಿಂದ ದೊರಕುವ ಸ್ಥಿತಪ್ರಜ್ಞೆ | ೯೨ |
| ೧೭. | ಸ್ಥಿತಪ್ರಜ್ಞನ ಲಕ್ಷಣಗಳು | ೧೦೦ |
| ೧೮. | ಸ್ಥಿತಪ್ರಜ್ಞನೂ ಅವನಿಗೆ ದೊರೆಯುವ ಮಹಾಫಲವೂ | ೧೦೬ |
| ೧೯. | ಕರ್ಮಯೋಗ - ಜ್ಞಾನಯೋಗಗಳ ಸಂಬಂಧ | ೧೧೬ |
| ೨೦. | ಕರ್ಮವನ್ನು ಹೇಗೆ ಮಾಡಬೇಕು? | ೧೨೩ |
| ೨೧. | ಯಜ್ಞಾರ್ಥಕರ್ಮ | ೧೩೦ |
| ೨೨. | ಲೋಕಸಂಗ್ರಹಾರ್ಥವಾದ ಕರ್ಮ | ೧೩೬ |
| ೨೩. | ಭಗವದರ್ಥಕರ್ಮ | ೧೪೩ |
| ೨೪. | ಮುಮುಕ್ಷುಗಳನ್ನು ತಪ್ಪುಹಾದಿಗೆ ಎಳೆಯುವ ಕಾಮ | ೧೪೯ |
| ೨೫. | ಭಗವಂತನ ಜನ್ಮಕರ್ಮಗಳ ತತ್ತ್ವ | ೧೫೫ |
| ೨೬. | ಭಗವಂತನಿಂದಲೇ ಕರ್ಮಫಲಗಳು | ೧೬೧ |
| ೨೭. | ಕರ್ಮದಲ್ಲಿ ಅಕರ್ಮದರ್ಶನ | ೧೬೭ |
| ೨೮. | ಗೃಹಸ್ಥಜ್ಞಾನಿಗಳೂ ಸಂನ್ಯಾಸಿ-ಜ್ಞಾನಿಗಳೂ - ೧ | ೧೭೫ |
| ೨೯. | ಗೃಹಸ್ಥಜ್ಞಾನಿಗಳೂ ಸಂನ್ಯಾಸಿ-ಜ್ಞಾನಿಗಳೂ - ೨ | ೧೮೦ |
| ೩೦. | ಆಧ್ಯಾತ್ಮಿಕ ಯಜ್ಞಗಳು ಮತ್ತು ಆಧಿಭೌತಿಕ ಯಜ್ಞಗಳು | ೧೮೫ |
| ೩೧. | ಜ್ಞಾನವನ್ನು ಸಂಪಾದಿಸುವದು ಹೇಗೆ | ೧೮೮ |
| ೩೨. | ತತ್ತ್ವಜ್ಞಾನದ ಫಲ | ೧೯೨ |
| ೩೩. | ಜ್ಞಾನಕ್ಕೆ ಬೇಕಾದ ಶ್ರದ್ಧಾದಿಸಾಧನಗಳು | ೧೯೭ |
| ೩೪. | ಅಜ್ಞಾನಿಗೆ ಕರ್ಮವು ಉತ್ತಮವೊ, ಸಂನ್ಯಾಸವು ಉತ್ತಮವೊ, | ೨೦೧ |
| ೩೫. | ಸಾಂಖ್ಯಯೋಗಗಳೆರಡಕ್ಕೂ ಗುರಿ ಒಂದೇ | ೨೦೫ |
| ೩೬. | ಸರ್ವಕರ್ಮಸಂನ್ಯಾಸವೂ ಸಮದರ್ಶನವೂ | ೨೧೦ |
| ೩೭. | ಸಮದರ್ಶನದ ಫಲ | ೨೧೬ |
| ೩೮. | ಧ್ಯಾನಯೋಗಕ್ಕೆ ಅವತರಣಿಕೆ | ೨೨೪ |
| ೩೯. | ಧ್ಯಾನಯೋಗಕ್ಕೆ ಸಿದ್ಧತೆ | ೨೨೮ |
| ೪೦. | ಧ್ಯಾನಯೋಗದ ಒಳಭಾಗ | ೨೩೬ |
| ೪೧. | ಯೋಗಾಭ್ಯಾಸಕ್ರಮ | ೨೪೪ |
| ೪೨. | ಯೋಗಮಾಡುವವನ ಆಚರಣೆ ಹೇಗಿರಬೇಕು ? | ೨೫೧ |
| ೪೩. | ಯೋಗಿಯ ಚಿತ್ತಕ್ಕೆ ಉಪಮಾನ | ೨೫೫ |
| ೪೪. | ಧ್ಯಾನಯೋಗದ ಸ್ವರೂಪ | ೨೫೯ |

| | ವಿಷಯ | ಪುಟ |
|---|---|---|
| ೪೫. | ಯೋಗಪ್ರಾಪ್ತಿಗಾಗಿ ಮಾಡಬೇಕಾದ ಪ್ರಯತ್ನ | ೨೬೭ |
| ೪೬. | ಯೋಗದ ಫಲ | ೨೭೧ |
| ೪೭. | ಮನಸ್ಸನ್ನು ನಿಗ್ರಹಿಸುವದು ಹೇಗೆ ? | ೨೭೭ |
| ೪೮. | ಯೋಗಸಾಧನವು ಕೊಡುವ ಕಾಲಾಂತರಫಲಗಳು | ೨೮೨ |
| ೪೯. | ಯೋಗದಿಂದ ಜ್ಞಾನವಿಜ್ಞಾನಗಳು | ೨೮೬ |
| ೫೦. | ಆತ್ಮತತ್ತ್ವ | ೨೯೫ |
| ೫೧. | ಭಗವದ್ಭಾವನೆಯಿಂದ ಜ್ಞಾನ | ೩೦೨ |
| ೫೨. | ಭಗವದ್ಭಾವನೆಯಿಂದ ಮಾಯೆಯನ್ನು ದಾಟಬಹುದು | ೩೦೭ |
| ೫೩. | ಭಕ್ತರಲ್ಲಿ ಪ್ರಭೇದಗಳು | ೩೧೪ |
| ೫೪. | ಜ್ಞಾನಿಯು ಏಕಭಕ್ತನು | ೩೨೧ |
| ೫೫. | ಜನರು ಭಗವಂತನನ್ನೇ ಏತಕ್ಕೆ ಭಜಿಸುವದಿಲ್ಲ ? | ೩೨೫ |
| ೫೬. | ಉಪಾಸನೆಯ ತತ್ತ್ವ | ೩೩೩ |
| ೫೭. | ಪರಮೇಶ್ವರನ ಭಾವನೆ | ೩೩೯ |
| ೫೮. | ಉಪಾಸನೆಯ ಅಭ್ಯಾಸ | ೩೫೦ |
| ೫೯. | ಉಪಾಸಕರಿಗಾಗುವ ಶಾಶ್ವತಗತಿ | ೩೫೯ |
| ೬೦. | ಶುಕ್ಲಕೃಷ್ಣಗತಿಗಳು | ೩೬೪ |
| ೬೧. | ಪರಮಾತ್ಮಜ್ಞಾನ | ೩೭೧ |
| ೬೨. | ಪರಮಾತ್ಮನ ವಿಜ್ಞಾನ | ೩೮೦ |
| ೬೩. | ಪರಮಾತ್ಮತತ್ತ್ವ | ೩೮೫ |
| ೬೪. | ಪರಮಾತ್ಮಜ್ಞಾನವು ಯಾರಿಗೆ ಆಗುವದು ? | ೩೯೨ |
| ೬೫. | ಭಗವಂತನ ಉಪಾಸನೆಯ ಪ್ರಕಾರಗಳು | ೩೯೮ |
| ೬೬. | ಪರಮಾತ್ಮನ ಸೌಲಭ್ಯ | ೪೦೫ |
| ೬೭. | ಕರ್ಮಗಳನ್ನು ಭಗವಂತನಿಗೆ ಅರ್ಪಿಸುವದು | ೪೧೪ |
| ೬೮. | ಭಗವದ್ಭಕ್ತಿಯ ಹೆಚ್ಚುಗಾರಿಕೆ | ೪೨೪ |
| ೬೯. | ಅವಿಕಂಪಯೋಗ | ೪೩೬ |
| ೭೦. | ಪರಮಾತ್ಮನ ವಿಭೂತಿಗಳು - ೧ | ೪೪೨ |
| ೭೧. | ಪರಮಾತ್ಮನ ವಿಭೂತಿಗಳು - ೨ | ೪೫೦ |
| ೭೨. | ಭಗವಂತನ ವಿಭೂತಿಗಳು - ೧ | ೪೫೭ |
| ೭೩. | ಭಗವಂತನ ವಿಭೂತಿಗಳು - ೨ | ೪೬೫ |
| ೭೪. | ಭಗವಂತನ ವಿಭೂತಿಗಳು - ೩ | ೪೭೧ |
| ೭೫. | ಭಗವಂತನ ವಿಭೂತಿಗಳು - ೪ | ೪೭೫ |
| ೭೬. | ಭಗವಂತನ ವಿಭೂತಿಗಳು - ೫ | ೪೮೧ |
| ೭೭. | ಭಗವಂತನ ವಿಭೂತಿಗಳು - ೬ | ೪೮೮ |
| ೭೮. | ಭಗವಂತನ ವಿಭೂತಿಗಳು - ೭ | ೪೯೫ |
| ೭೯. | ವಿಭೂತಿಗಳ ವರ್ಣನೆಯ ಉಪಸಂಹಾರ | ೫೦೧ |
| ೮೦. | ವಿಶ್ವರೂಪದರ್ಶನಕ್ಕೆ ಸಿದ್ಧತೆ | ೫೦೮ |
| ೮೧. | ವಿಶ್ವರೂಪದರ್ಶನ | ೫೧೨ |
| ೮೨. | ವಿಶ್ವರೂಪದರ್ಶನದ ಪರಿಣಾಮ | ೫೧೯ |
| ೮೩. | ಅರ್ಜುನನು ಮಾಡಿದ ಭಗವತ್ ಸ್ತೋತ್ರ | ೫೨೮ |
| ೮೪. | ಅರ್ಜುನನ ಪಶ್ಚಾತ್ತಾಪ | ೫೩೩ |
| ೮೫. | ಭಕ್ತಿಯೋಗದ ಸೂತ್ರ | ೫೩೮ |
| ೮೬. | ಸಗುಣನಿರ್ಗುಣೋಪಾಸನೆಗಳಲ್ಲಿ ಯಾವದು ಉತ್ತಮ ? | ೫೪೬ |
| ೮೭. | ಭಗವಂತನ ಉಪಾಸನೆಯಸೌಲಭ್ಯ | ೫೫೪ |
| ೮೮. | ಉಪಾಸನೆಯ ಸೋಪಾನ | ೫೬೩ |
| ೮೯. | ಕರ್ಮಫಲತ್ಯಾಗದ ಮಹಿಮೆ | ೫೭೦ |
| ೯೦. | ಭಗವಂತನಿಗೆ ಪ್ರಿಯನಾದವನು | ೫೮೦ |
| ೯೧. | ಭಗವದ್ಭಕ್ತ - ೧ | ೫೮೭ |
| ೯೨. | ಭಗವದ್ಭಕ್ತ - ೨ | ೫೯೨ |

॥ ಓಂ ॥

# ಭಗವದ್ಗೀತೆಯ ಉಪನ್ಯಾಸಗಳು

## ೧. ಭಗವದ್ಗೀತಾಪಾರಾಯಣ

(೯.೬.೪೬)

ಭಗವದ್ಗೀತೆಯನ್ನು ಪಾರಾಯಣಮಾಡುವದಕ್ಕೆಂದು ನಮ್ಮಲ್ಲಿ ಅನೇಕರು ಇಟ್ಟುಕೊಂಡಿರುತ್ತಾರೆ. ಕೆಲವರು ಪ್ರತಿದಿನವೂ ಮೊದಲಿನಿಂದ ಕೊನೆಯವರೆಗೂ ಇದನ್ನು ಓದಿಮುಗಿಸುತ್ತಾರೆ. ಅವರಿಗೆ ಪಾರಾಯಣವೆಂದರೆ ಗೀತೆಯ ಪಾರವನ್ನು, ಆಚೆಯ ದಡವನ್ನು, ಕಾಣುವದೇ ಆಗಿರುತ್ತದೆ. ಮತ್ತೆ ಕೆಲವರು ಆರು, ಮೂರು, ಅಥವಾ ಒಂದು ಅಧ್ಯಾಯವನ್ನು ಪ್ರತಿದಿನವೂ ಓದಿಮುಗಿಸುತ್ತಾರೆ. ಭಕ್ತಿಯಿಂದ ಗೀತೆಯ ಎಷ್ಟು ಭಾಗವನ್ನು ಓದಿದರೂ ಅಷ್ಟು ಪುಣ್ಯವುಂಟೆಂಬುದನ್ನು ಆಸ್ತಿಕರೆಲ್ಲರೂ ನಂಬಬಹುದು. ಆದರೆ ಗೀತಾಪಾರಾಯಣದ ಪೂರ್ಣಫಲವು ನಮಗೆ ಲಭಿಸಬೇಕಾದರೆ ಆ ಗ್ರಂಥವನ್ನು ಹೇಗೆ ಓದಬೇಕು? ಎಂಬುದನ್ನು ಸ್ವಲ್ಪಮಟ್ಟಿಗೆ ತಿಳಿಸುತ್ತೇನೆ.

ಭಗವದ್ಗೀತೆಯು ಏಳುನೂರು ಶ್ಲೋಕಗಳ ಒಂದು ಕಾವ್ಯವೆಂದೂ ನಾನು ಅದನ್ನು ಓದುತ್ತಿದ್ದೇನೆಂದೂ ಎಣಿಸುವದನ್ನು ನಾವು ಮೊಟ್ಟಮೊದಲು ಬಿಡಬೇಕು. ಇಲ್ಲಿ ನಾವು ಪರಮೇಶ್ವರನ ಆರಾಧನೆಗೆ ಬಂದಿರುತ್ತೇವೆಂಬ ಭಾವನೆಯು ನಮ್ಮನ್ನು ತುಂಬಿಕೊಂಡಿರಬೇಕು. ನಮ್ಮ ವ್ಯವಹಾರದಲ್ಲಿ ನಮ್ಮನ್ನು ಬೇರೆ ಬೇರೆಯ ಭಾವನೆಗಳು ಹಿಡಿದುಕೊಂಡಿರುವವು; ಸಂತೋಷ, ದುಃಖ, ಭಯ- ಮುಂತಾದವುಗಳಲ್ಲಿ ಒಂದೊಂದೂ ನಮ್ಮ ಜೀವನದಲ್ಲಿ ಒಬ್ಬೊಬ್ಬರಿಗೆ ಒಂದೊಂದರಂತೆ ಎದ್ದು ಕುಣಿಯುತ್ತಿರುತ್ತವೆ. ಆಯಾ ಭಾವನೆಯಿಂದ ನಾವು ಅದಕ್ಕೆ ಅನುಗುಣವಾದ ವ್ಯವಹಾರದಲ್ಲಿ ತತ್ಪರರಾಗಿರುತ್ತೇವೆ. ಇದೇ ನನಗೆ ಕೊನೆಯ ಗತಿ, ಇದನ್ನೇ ನಾನು ಮುಟ್ಟಬೇಕು-ಎಂದು ಅದಕ್ಕೆ ತಕ್ಕ ಕಾರ್ಯವನ್ನು ಕೈಗೊಳ್ಳುತ್ತಿರುತ್ತೇವೆ, ತತ್ಪರಾಯಣರಾಗಿರುತ್ತೇವೆ. ಹೀಗೆಯೇ ಗೀತೆಯನ್ನು ಪಠಿಸುವಾಗ ನಾವು ಆ ಗ್ರಂಥದಲ್ಲಿ ಯಾವ ಭಗವಂತನ ವಚನಗಳಿವೆಯೋ ಆತನೇ ನೇರಾಗಿ ನಮ್ಮೊಡನೆ ಮಾತನಾಡುತ್ತಿದ್ದಾನೆ, ನಮಗೆ ಕರ್ತವ್ಯಕರ್ಮವನ್ನು ಉಪದೇಶಿಸುತ್ತಿದಾನೆ; ನಾವು

ನಮ್ಮ ನಮ್ಮ ಜೀವಮಾನದ ಗುರಿಯನ್ನು ತಿಳಿದುಕೊಂಡು ಅದರಂತೆ ಮಾಡಲು ಸೊಂಟವನ್ನು ಕಟ್ಟುವ ಪ್ರತಿಜ್ಞೆಯನ್ನು ಮಾಡುತ್ತಿದ್ದೇವೆ-ಎಂಬ ಭಾವನೆಯು ನಮ್ಮ ಮನದಲ್ಲಿ ತುಂಬಿತುಳುಕಾಡುತ್ತಿರಬೇಕು. ಅದೇ **ಗೀತಾಪಾರಾಯಣವು.**

ಇಂಥ ಭಾವನೆಯು ಮೂಡುವದಕ್ಕೆ ಮೊದಲು ನಾವು ನಮ್ಮ ಹೊರಗಿನ ಉಪಾಧಿಗಳನ್ನೆಲ್ಲ ಬದಿಗಿಟ್ಟು, ನಾವು ಎಲ್ಲರಂತೆ ಹುಲುಮಾನವರೇ ಎಂಬ ನೆನಪನ್ನು ತಂದುಕೊಂಡು ಪ್ರಾರಂಭಿಸಬೇಕು. ನಮಗೆ ಭಗವಂತನ ನೆರವು ಬೇಕಾಗಿರುತ್ತದೆ, ಆತನ ಬಳಿಗೆ ಶರಣುಬಂದವರಿಗೆಲ್ಲ ಆತನ ಅಭಯವಚನವಾದ ಭಗವದ್ಗೀತೆಯು ಸಮಾಧಾನವನ್ನೂ ಉತ್ಸಾಹವನ್ನೂ ಧೈರ್ಯವನ್ನೂ ಕೊಡುತ್ತದೆ ಎಂದು ದೃಢವಾಗಿ ನಂಬಿರಬೇಕು. ಭಗವಂತನ ಸನ್ನಿಧಿಯನ್ನೂ ವ್ಯಾಪ್ತಿಯನ್ನೂ ನಮ್ಮ ಹೊರಗೂ ಒಳಗೂ ಮನಮುಟ್ಟುವಂತೆ ಭಾವಿಸಿಕೊಳ್ಳಬೇಕು. ನಮ್ಮ ಅಂಗಾಂಗಗಳಲ್ಲೆಲ್ಲಾ ಆತನ ಸತ್ತೆಯು ಇದೆಯೆಂಬ ಅರಿವು ನಮ್ಮ ಮನದಲ್ಲಿ ಮಿಂಚುವಂತೆ ಪ್ರಯತ್ನಿಸಬೇಕು. ಇದೇ **ನ್ಯಾಸವು.**

ಗೀತೆಯ ಉಪದೇಶವನ್ನು ಕಿವಿಗೆ ಹಾಕಿಕೊಳ್ಳುವ ಮುಂಚೆ ಮನಸ್ಸಿನಲ್ಲಿ ಗೀತೆಯ ಹೆಚ್ಚುಗಾರಿಕೆಯನ್ನು ಮೆಲುಕುಹಾಕಬೇಕು. ಭಗವದ್ಗೀತೆ ಎಂದರೇನು?

**ಪಾರ್ಥಾಯ ಪ್ರತಿಬೋಧಿತಾಂ ಭಗವತಾ ನಾರಾಯಣೇನ ಸ್ವಯಂ**
**ವ್ಯಾಸೇನ ಗ್ರಥಿತಾಂ ಪುರಾಣಮುನಿನಾ ಮಧ್ಯೇ ಮಹಾಭಾರತಮ್ ।**
**ಅದ್ವೈತಾಮೃತವರ್ಷಿಣೀಂ ಭಗವತೀಮಷ್ಟಾದಶಾಧ್ಯಾಯಿನೀ-**
**ಮಂಬ ತ್ವಾಮನುಸಂದಧಾಮಿ ಭಗವದ್ಗೀತೇ ಭವದ್ವೇಷಿಣೀಮ್ ॥**

ಭಗವದ್ಗೀತೆ ಎಂಬುದು ಭಗವಂತನ ವಾಣಿ. ಭಗವಂತನಿಗೂ ಆತನ ವಾಣಿಗೂ ಸೂರ್ಯನಿಗೂ ಆತನ ಕಿರಣಕ್ಕೂ ಇರುವಂತೆ ಅತ್ಯಂತ ನಿಕಟವಾದ ಸಂಬಂಧವಿರುತ್ತದೆ. ಆದ್ದರಿಂದ ಭಗವದ್ಗೀತೆಯನ್ನು ಒಬ್ಬ ದೇವಿಯೆಂದೂ ಆಕೆಯ ಅನುಗ್ರಹದಿಂದ ನಮ್ಮ ಸಂಸಾರದ ದುಃಖವೆಲ್ಲವೂ ಹಾರಿಹೋಗುವದೆಂದೂ ಆಸ್ತಿಕರೆಲ್ಲರೂ ನಂಬುತ್ತಾರೆ. ಶ್ರೀಮನ್ನಾರಾಯಣನ ಅವತಾರವಾದ ಶ್ರೀಕೃಷ್ಣಭಗವಂತನು ಪಾರ್ಥನಿಗೆ ಉಪದೇಶಮಾಡಿದ್ದು ಗೀತೆ; ಆ ಉಪದೇಶದಿಂದ ಒಂದಾನೊಂದು ಹೊಸಬೆಳಕು ಅರ್ಜುನನಿಗೆ ಮಾರ್ಗದರ್ಶಕವಾಗಿ ಬಂದಿತು. ಅದೇ ಉಪದೇಶವನ್ನೇ ಪೂಜ್ಯರಾದ ವ್ಯಾಸರು ಗೀತೆಗಳೆಂಬ ಹೆಸರಿನ ಏಳುನೂರು ಶ್ಲೋಕಗಳ ಹದಿನೆಂಟು ಅಧ್ಯಾಯಗಳ ಗ್ರಂಥವಾಗಿ ಮಾಡಿ ನಮ್ಮಗಳ ಮುಂದೆ ಇಟ್ಟಿರುತ್ತಾರೆ. ಮಹಾಭಾರತದ ನಡುವೆ ಇರುವ ಈ ಗೀತೆಯೇ ಆ ಗ್ರಂಥದ ಸಾರವೆಂದರೂ ಸಲ್ಲುವಂತಿದೆ. ತತ್ತ್ವಾಮೃತದ ಸುರಿಮಳೆಯೇ ಭಗವದ್ಗೀತೆಯು, ಭಗವಂತನ ಕೃಪಾವೃಷ್ಟಿಯೇ

ಅದು! ಇಂಥ **ಭಗವದ್ಗೀತಾ**ದೇವಿಯ ಧ್ಯಾನವನ್ನು ಮಾಡಿ ಭಗವಂತನ ಉಪದೇಶಕ್ಕೆ ಕಿವಿಗೊಡಬೇಕು.

ಭಗವದ್ಗೀತೆಯಂಥ ಪ್ರಾಸಾದಿಕಗ್ರಂಥಗಳನ್ನು ಓದುವಾಗ ಭಗವಂತನನ್ನು ನೇರಾಗಿ ಕಂಡು ಮಾತನಾಡಿಸಿದ ಮಹಾತ್ಮರ ಸತ್ಸಂಗವು ನಮಗೆ ದೊರೆಯುತ್ತದೆ. ಭಾರತಕರ್ತರಾದ **ವ್ಯಾಸರು** ಅಂಥ ಮಹಾತ್ಮರು. ಭಗವಂತನು ಅರ್ಜುನನಿಗೆ ಗೀತೆಯ ಉಪದೇಶವನ್ನು ಮಾಡಿದ್ದು ವ್ಯಾಸರ ಮಹಾಭಾರತದಿಂದಲೇ ನಮಗೆ ಗೊತ್ತಾಗಿರುವದು. ಭಾರತವೆಂಬ ಎಣ್ಣೆಯನ್ನು ಹಾಕಿ ಅವರು ಜ್ಞಾನಮಯವಾದ ದೊಡ್ಡದೊಂದು ದೀಪವನ್ನು ಹೊತ್ತಿಸಿಟ್ಟಿರುತ್ತಾರೆ. ಆ ದೀಪದ ಪ್ರಭೆಯಾದ ಭಗವದ್ಗೀತೆಯು ಸಂಸಾರದ ಕಗ್ಗತ್ತಲೆಯಲ್ಲಿ ಮುಂಗಾಣದೆ ಇರುವವರಿಗೆ ಈಗಲೂ ಮಾರ್ಗದರ್ಶಿಯಾಗಿ ಬೆಳಗುತ್ತಿದೆ. ಆದ್ದರಿಂದ ವಿಶಾಲದೃಷ್ಟಿಯ ವ್ಯಾಸರನ್ನೂ ನಾವು ಧ್ಯಾನಮಾಡಿಯೇ ಗೀತೆಯ ಪಠನಕ್ಕೆ ಹೋಗುವದು ಅವಶ್ಯ.

ಹೀಗೆ ಗೀತೆಯ ಧ್ಯಾನವನ್ನು ಮಾಡಿ, ಗೀತಾಕರ್ತೃಗಳಾದ ಪೂಜ್ಯರಾದ ವ್ಯಾಸಮಹರ್ಷಿಗಳನ್ನು ಮನದಂದುಕೊಂಡು, ಗೀತೋಪದೇಶಕನಾದ **ಶ್ರೀಕೃಷ್ಣ ಭಗವಂತ**ನನ್ನು ನೆನೆಯುತ್ತಾ ಈ ಗ್ರಂಥವನ್ನು ಪಠನಮಾಡಬೇಕು, ಶ್ರವಣಮಾಡಬೇಕು. ಗೀತೆಯ ಧ್ಯಾನಶ್ಲೋಕಗಳನ್ನು ಬೇರೆಬೇರೆಯ ಕಡೆಯಿಂದ ಆರಿಸಿ ಕೂಡಿಸಿಟ್ಟಿರುತ್ತಾರೆ. ಅವುಗಳ ಅರ್ಥವನ್ನು ನಾವು ಮನಸ್ಸಿಗೆ ಹತ್ತಿಸಿಕೊಳ್ಳಬೇಕು. "**ಪ್ರಪನ್ನಪಾರಿಜಾತಾಯ**" ಎಂಬ ಒಂದು ಶ್ಲೋಕವನ್ನು ಪಠಿಸಿರಿ. ಮನಸ್ಸಿಗೆ ಎಂಥ ದೊಡ್ಡ ಭರವಸೆ ಸಿಕ್ಕುತ್ತದೆ! ಭಗವಂತನು ಶರಣುಹೊಕ್ಕವರಿಗೆ ದೇವೇಂದ್ರನ ಪಾರಿಜಾತವೃಕ್ಷದಂತೆ ಕೇಳಿದ್ದನ್ನು ಕೊಡುವವನು! ಅರ್ಜುನನ ರಥವನ್ನು ಸಾಗಿಸುವದಕ್ಕೆ ಕುದುರೆಗಳನ್ನು ನಡೆಯಿಸುವ ಕೋರಡೆಯನ್ನು ಕೈಯಲ್ಲಿ ಹಿಡಿದಿರುವವನು! ಆ ಭಗವಂತನೊಬ್ಬನಿಂದಲೇ ತನಗೆ ಗೆಲವಾಗುವದೆಂದು ಅರ್ಜುನನು ನಂಬಿ ಯುದ್ಧಕ್ಕೆ ಧುಮುಕಿರುತ್ತಾನೆ! "ಭಗವಂತ! ದಯವಿಟ್ಟು ನಮ್ಮ ರಥವನ್ನೂ ಸರಿಯಾಗಿ ನಡೆಯಿಸಿಕೊಡು! ಜೀವನಸಂಗ್ರಾಮದಲ್ಲಿ ನಮಗೆ ಎಲ್ಲೆಲ್ಲಿಯೂ ಜಯವನ್ನು ತಂದುಕೊಡು!" ಎಂದು ಬೇಡಿಕೊಳ್ಳಿರಿ. ಆ ರಥದಲ್ಲಿ ಭಗವಂತನು ಮಾಡಿದ ಅದ್ಭುತಕಾರ್ಯವು ಯಾವದು? ಜ್ಞಾನಮುದ್ರೆಯನ್ನು ಪ್ರದರ್ಶನಮಾಡುತ್ತಾ ಗೀತೋಪದೇಶವನ್ನು ಅನುಗ್ರಹಿಸಿದ್ದೇ. ಶ್ರೀಕೃಷ್ಣಾವತಾರದಲ್ಲಿ ಅನೇಕ ಅದ್ಭುತಲೀಲೆಗಳು ನಡೆದವೆಂದು ಪೌರಾಣಿಕರು ವರ್ಣಿಸಿರುತ್ತಾರೆ. ಆದರೆ ಅಂಥ ಲೀಲೆಗಳಲ್ಲೆಲ್ಲ ಉತ್ತಮೋತ್ತಮವಾದದ್ದೆಂದರೆ ಗೀತಾಮೃತವನ್ನು ಕರೆದುಕೊಟ್ಟದ್ದು. ವೇದಗಳ ಸಾರವೆಂದರೆ ಉಪನಿಷತ್ತುಗಳು; ಅವುಗಳ ತಾತ್ಪರ್ಯವನ್ನು ನಿರ್ಣಯಿಸುವದು ತ್ರಿಕಾಲಜ್ಞಾನಿಗಳಾದ ಋಷಿಗಳಿಗೂ ಕಷ್ಟಕರವಾಗಿತ್ತು. ಆದರೆ ಬಾಲಲೀಲೆಯಲ್ಲಿ

ಗೋವುಗಳಿಂದ ಸರಾಗವಾಗಿ ಹಾಲುಕರೆದು ಗೆಳೆಯರಿಗೆಲ್ಲ ಕೊಟ್ಟಿದ್ದಕ್ಕಿಂತಲೂ ಸುಲಭವಾಗಿ ಶ್ರೀಕೃಷ್ಣಭಗವಂತನು ಉಪನಿಷದ್ಗೋವುಗಳ ಹಾಲನ್ನು, ಸವಿಯುವದಕ್ಕೆ ಹಾತುವರಿಯುವ ವಿವೇಕಿಗಳಿಗೆಲ್ಲ ಕರೆದುಕೊಟ್ಟಿರುತ್ತಾನೆ. ಹಸುಗಳು ಮೊದಲು ತಮ್ಮ ಕರುಗಳನ್ನು ಕಂಡರೆ ಕೆಚ್ಚಲನ್ನು ಇಳಿಯಬಿಟ್ಟು ಸೊರೆ ಇಳಿಸುವವಲ್ಲವೆ? ಹಾಗೆ ಉಪನಿಷದ್ಗೋವುಗಳಿಗೆ ಅರ್ಜುನನೆಂಬ ಕರುವನ್ನು ಬಿಟ್ಟು ಸೊರೆ ಇಳಿಸಿಕೊಂಡು ಭಗವಂತನು ಗೀತಾಮೃತವನ್ನು ಕರೆದಿದ್ದಾನೆ.

ಭಗವಂತನ ಕೃಪೆಯು ಅಗಾಧವಾದದ್ದು, ಅದ್ಭುತಮಹಿಮೆಯುಳ್ಳದ್ದು. ಆತನ ಕೃಪೆಯಿಂದ ಮೂಕನೂ ವಾಗ್ಮಿಯಾಗುವನು, ಹೆಳವನೂ ಬೆಟ್ಟವನ್ನು ಹಾರಿಬಿಡುವನು! ಭಗವಂತನ ಕೃಪೆಯುಳ್ಳವರಿಗೆ ಎಲ್ಲೆಲ್ಲಿಯೂ ಜಯವೇ. ವ್ಯಾಸರು ಬರೆದಿರುವ ಭಾರತಕ್ಕೆ ಜಯವೆಂದು ಹೆಸರು. ಆ ಜಯದಲ್ಲೆಲ್ಲ ಜಯವು ಭಗವದ್ಗೀತೆ! ಗೀತೆಯ ಕೊನೆಯಲ್ಲಿ ವ್ಯಾಸರು ಸಂಜಯನ ಬಾಯಲ್ಲಿ ಈ ಅಮೃತವಾಣಿಯನ್ನು ಇಟ್ಟಿದ್ದಾರೆ: "ಎಲ್ಲಿ ಯೋಗೀಶ್ವರನಾದ ಕೃಷ್ಣನಿರುವನೋ, ಎಲ್ಲಿ ಧನುರ್ಧರನಾದ ಪಾರ್ಥನಿರುವನೋ ಅಲ್ಲಿ ಸಿರಿಸಂಪತ್ತು, ಜಯವು, ನೆಲೆನಿಲ್ಲುವ ನೀತಿ-ಇವು ನಿಲ್ಲುವವು. ಇದೇ ನನ್ನ ಮತವು."

ಹೀಗೆ ಭಗವಂತನ ಸಾನ್ನಿಧ್ಯವನ್ನು ಕಲ್ಪಿಸಿಕೊಂಡು, ಭಗವದ್ಭಕ್ತರಿಗೆ ವಂದನೆಯನ್ನು ಮಾಡಿ, ಭಗವಂತನ ಹೃದಯವಾದ ಗೀತೆಯನ್ನು ಪೂಜ್ಯರಾದ ವ್ಯಾಸರ ದಿವ್ಯವಾದ ಗ್ರಂಥದಲ್ಲಿ ಎದುರುಗೊಂಡು ಸ್ವಾಗತಿಸಿ ಆರಾಧಿಸಲು ಹೊರಟವರಿಗೆ ಗೀತಾ ಪಾರಾಯಣದ ಪೂರ್ಣಫಲವು ಹಸ್ತಗತವಾಗುವದು.

## ೨. ಗೀತೋಪದೇಶದ ಮಹತ್ತ್ವ

(೧೬-೬-೪೬)

ನಾವು ಭಗವದ್ಗೀತೆಯ ವಿಚಾರವನ್ನು ಮಾಡುವಾಗಲೆಲ್ಲ ಭಗವಂತನನ್ನು ಮನಸ್ಸಿಗೆ ತಂದುಕೊಳ್ಳಬೇಕು. ಭಗವಂತನು ಎಲ್ಲೆಲ್ಲಿಯೂ ಇರುತ್ತಾನೆ; ನಮ್ಮೊಳಗೇ ಇದ್ದು, ನಮಗೆ ಅತ್ಯಂತವಾಗಿ ಹತ್ತಿರವಿದ್ದಾನೆ. ಆದರೂ ನಾವು ಅವನನ್ನು ದೂರ ಮಾಡಿಕೊಂಡಿರುತ್ತೇವೆ. ಜಲಚರಗಳು ನೀರನ್ನು ಬಿಟ್ಟಿರುವದು ಹೇಗೆ ಅಸಾಧ್ಯವೋ, ಹಾಗೆ ನಾವೂ ಭಗವಂತನನ್ನು ಬಿಟ್ಟು ಬೇರೆ ಇರಲಾರೆವು. ಆದರೂ ಅವನನ್ನು ಮರೆತು ಅವನಿಂದ ದೂರವಾಗಿರುತ್ತೇವೆ. ಆದ್ದರಿಂದ ಆತನ ಸಾನ್ನಿಧ್ಯವನ್ನು

ಭಾವಿಸುವ ಮಟ್ಟಕ್ಕೆ ಮನಸ್ಸನ್ನು ಏರಿಸಿಕೊಳ್ಳಬೇಕು. ಆಗಲೇ ಆತನ ಉಪದೇಶವು ನಮ್ಮ ಕಿವಿಗೆ ಬೀಳುವದು.

ಭಗವಂತನ ಸನ್ನಿಧಿಯನ್ನು ಅನುಭವಿಸುವ ಮಟ್ಟಕ್ಕೆ ಮನಸ್ಸನ್ನು ತಂದುಕೊಳ್ಳುವ ವಿದ್ಯೆಯೇ ಬ್ರಹ್ಮವಿದ್ಯೆ, ಅಧ್ಯಾತ್ಮವಿದ್ಯೆ. ಆ ವಿದ್ಯೆಯನ್ನು ಮಹರ್ಷಿಗಳು ನಮಗೆ ಅನುಗ್ರಹಿಸಿರುತ್ತಾರೆ. ಅಂಥ ಋಷಿಗಳಲ್ಲಿ ವೇದವ್ಯಾಸರು ಮುಖ್ಯರು. ಶ್ರೀ ಶಂಕರಾಚಾರ್ಯರು ಅವರನ್ನು "ಭಗವಾನ್ ವೇದವ್ಯಾಸಃ" ಎಂದು ಕರೆದಿದ್ದಾರೆ. ವ್ಯಾಸರು ಸರ್ವಜ್ಞಕಲ್ಪರು, ಅವರು ಸಾಕ್ಷಾದ್ವಿಷ್ಣುವಿನ ಅಂಶವೇ-ಎಂದು ಹೇಳುತ್ತಾರೆ. ಆ ಮಹನೀಯರು ವೇದವನ್ನು ವಿಂಗಡಿಸಿಕೊಟ್ಟಿರುವದಕ್ಕಿಂತಲೂ ಮಹಾಭಾರತವನ್ನು ರಚಿಸಿರುವದೇ ನಮ್ಮ ಪಾಲಿಗೆ ಹೆಚ್ಚಿನ ಕಾರ್ಯವಾಗಿರುತ್ತದೆ. ಭಾರತವನ್ನು ಪಂಚಮವೇದವೆಂದು ಕರೆಯುತ್ತಾರೆ. ವೇದವನ್ನು ಶಿಷ್ಯರಿಗೆ ಅಧ್ಯಾಪನ ಮಾಡಿಸಿದ್ದಲ್ಲದೆ ಭಾರತವನ್ನು ರಚಿಸಿ ಶಿಷ್ಯರಿಗೆ ಹೇಳಿಕೊಟ್ಟಿದ್ದೇಕೆಂಬುದಕ್ಕೆ ಒಂದು ಪೌರಾಣಿಕವಚನವುಂಟು. "ಸ್ತ್ರೀಶೂದ್ರದ್ವಿಜಬನ್ಧೂನಾಂ ತ್ರಯೀ ನ ಶ್ರುತಿಗೋಚರಾ। ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್॥" "ಸ್ತ್ರೀಯರಿಗೂ, ಶೂದ್ರರಿಗೂ, ದ್ವಿಜರ ಕುಲದಲ್ಲಿ ಹುಟ್ಟಿದವರಾಗಿದ್ದರೂ ಸರಿಯಾದ ಸಂಸ್ಕಾರವಿಲ್ಲದವರಿಗೂ, ವೇದವು ಶ್ರುತಿಗೋಚರವಲ್ಲ; ಅವರ ಕಿವಿಗೆ ಅದು ಬಿದ್ದಿರುವದಿಲ್ಲ; ಆದ್ದರಿಂದ ಅಂಥವರನ್ನು ಉದ್ಧಾರಮಾಡುವದಕ್ಕಾಗಿ ವ್ಯಾಸಮಹರ್ಷಿಗಳು ಕೃಪೆಯಿಂದ ಭಾರತವನ್ನು ರಚಿಸಿ ಉಪದೇಶಿಸಿದರು" ಎಂಬುದು ಶ್ಲೋಕದ ಅರ್ಥ.

ಈಗಿನ ಸ್ಥಿತಿಯಲ್ಲಿ ವೇದಗಳ ಅನೇಕಶಾಖೆಗಳು ಮುಳುಗಿಹೋಗಿರುತ್ತವೆ. ಉಳಿದಿರುವ ಅಲ್ಪಸ್ವಲ್ಪ ಭಾಗವನ್ನು ಅಧ್ಯಯನಮಾಡಿದವರ ಸಂಖ್ಯೆಯೂ ದಿನದಿನಕ್ಕೂ ಕಡಿಮೆಯಾಗುತ್ತಾ ಇದೆ. ಈಗ ವೇದಗಳನ್ನು ಕೇಳಿದರೆ ಅವುಗಳ ಅರ್ಥವೇ ತಿಳಿಯುವಂತಿಲ್ಲ. ವಿಚಿತ್ರವಸ್ತುಪ್ರದರ್ಶನಕ್ಕಾಗಿ ಏರ್ಪಡಿಸಿರುವ ಮ್ಯೂಸಿಯಂ ಎಂಬ ಭವನಗಳಲ್ಲಿ ಕಾಣುವ ಪ್ರಾಚೀನಯುಗದ ದೊಡ್ಡ ದೊಡ್ಡ ಪ್ರಾಣಿಗಳ ಪಂಜರದ ಎಲುಬಿನಂತೆ ಕಾಣುತ್ತಿವೆ, ವೇದಗಳು! ವೇದಕ್ಕೆ ಯಾರಿಗೆ ಅಧಿಕಾರವಿದೆ ಎಂಬ ಕಲಹದಲ್ಲಿ ಕೆಲವರು ಕಾಲವನ್ನು ಕಳೆಯುತ್ತಿದ್ದರೂ ವೇದಾರ್ಥವನ್ನು ನೇರಾಗಿ ನಿರ್ಣಯಿಸಬಲ್ಲ ಮಹನೀಯರು ಎಲ್ಲಿದ್ದಾರೋ ಎಂಬಂತೆ ಆಗಿದೆ. ಈ ಕಾಲಕ್ಕೆ ವೇದಾರ್ಥವನ್ನೆಲ್ಲ ಸುಲಿದ ಬಾಳೆಯ ಹಣ್ಣಿನಂತೆ ಸಂಸ್ಕೃತದಲ್ಲಿ ಬರೆದಿಟ್ಟಿರುವ ಭಾರತದಂಥ ಗ್ರಂಥವಿರುವದು ಎಷ್ಟು ಉಪಕಾರದ ಸಂಗತಿ! ಸಂಸ್ಕೃತಭಾಷೆಯನ್ನು ಕಲಿತು ಭಾರತಶ್ರವಣವನ್ನು ಮಾಡುವ ಅಧಿಕಾರವನ್ನು ಕೂಡ ನಾವುಗಳು ಕಳೆದುಕೊಳ್ಳುತ್ತಿರುವದು ತೀರ ಶೋಚನೀಯವಾಗಿದೆ. ವೇದವ್ಯಾಸರು ನಮ್ಮಂಥವರಿಗಾಗಿಯೇ

ಕೃಪೆಯಿಂದ ಭಾರತವನ್ನು ರಚಿಸಿಟ್ಟಿರುತ್ತಾರೆ. ಅದರ ಸದುಪಯೋಗವನ್ನು ಮಾಡಿಕೊಳ್ಳುವದು ನಮ್ಮ ಮೇಲೆ ಬಿದ್ದ ಭಾರ!

ಭಾರತದಲ್ಲಿ ಬರಿಯ ಕಥೆಯನ್ನು ಕೇಳಿದರೆ ಸಾಲದು. ಭೀಮನು ಒಳ್ಳೆಯ ಜಟ್ಟಿ, ಶಕುನಿಯು ಮಹಾಕುತಂತ್ರಿ, ಕರ್ಣನು ಉದಾರಿಯು ಎಂದು ಮಾತನಾಡುವಷ್ಟು ಭಾರತದ ಪರಿಚಯವಿದ್ದ ಮಾತ್ರಕ್ಕೆ ಭಾರತದ ಪ್ರಯೋಜನವು ನಮಗೆ ದೊರಕಲಾರದು. ಭಾರತವು ಧರ್ಮಾಧರ್ಮಗಳ ವಿವೇಚನೆಯನ್ನು ಮಾಡುವ ಗ್ರಂಥ. ಅವುಗಳ ಸ್ವರೂಪವನ್ನು ನಮಗೆ ಮನವರಿಕೆಮಾಡಿಕೊಡುವದಕ್ಕೆ ವ್ಯಾಸರು ಕಥೆಯ ಉಪಯೋಗವನ್ನು ಮಾಡಿಕೊಂಡಿರುತ್ತಾರೆ. ಭಾರತದ ಆದಿಪರ್ವದಲ್ಲಿ **ಅನುಕ್ರಮಣಿಕಾಧ್ಯಾಯ**ವೆಂಬ ಒಂದು ಅಧ್ಯಾಯವಿದೆ. ಅದರಲ್ಲಿ ಧೃತರಾಷ್ಟ್ರನು ಸಂಜಯನೊಡನೆ ಮಾತನಾಡುತ್ತಿರುವಂತೆಯೂ ಅವನು "ಸಂಜಯನೆ, ಅರ್ಜುನನು ಬಿಲ್ಲನ್ನು ಬಗ್ಗಿಸಿ ಗುರಿಯನ್ನು ಹೊಡೆದು ನೆಲಕ್ಕೆ ಉರುಳಿಸಿ ಮಿಕ್ಕ ರಾಜರು ನೋಡುತ್ತಿರುವಲ್ಲಿ ದ್ರೌಪದಿಯನ್ನು ಕೊಂಡೊಯ್ದನೆಂಬ ಸುದ್ದಿಯನ್ನು ಯಾವಾಗ ಕೇಳಿದೆನೋ ಆಗಲೇ ನಮ್ಮವರಿಗೆ ವಿಜಯವಾಗುವದೆಂಬ ಆಸೆಯನ್ನು ಬಿಟ್ಟೆನು" ಎಂದು ಪ್ರಾರಂಭಿಸಿ ಪಾಂಡವರಿಗೆ ರಾಜ್ಯಪ್ರಾಪ್ತಿಯಾಗುವವರೆಗಿನ ಕಥೆಯನ್ನು ಹೇಳಿಕೊಂಡು ಕೌರವರಿಗೆ ವಿಜಯವಾಗುವ ಆಸೆಯನ್ನು ತಾನು ಕ್ರಮಕ್ರಮವಾಗಿ ತೊರೆದ ಪರಿಯನ್ನು ಬಣ್ಣಿಸಿದಂತೆಯೂ ಈ ಅಧ್ಯಾಯದಲ್ಲಿ ಬರೆದಿದೆ. ಈ ಅಧ್ಯಾಯವನ್ನು ಶ್ರವಣಮಾಡುವವರಿಗೆ ಸಕಲ ಪಾಪಗಳಿಂದಲೂ ಬಿಡುಗಡೆಯಾಗುವದೆಂದೂ ಅಂಥವರು ಕಷ್ಟದಲ್ಲಿ ಸಿಕ್ಕಿ ನರಳುವದಿಲ್ಲವೆಂತಲೂ ಫಲವನ್ನು ಹೇಳಿರುತ್ತದೆ. ಇದು ಬರಿಯ ವಿಷಯಗಳ ಪರಿವಿಡಿಯನ್ನು ತಿಳಿಸುವ ಪಟ್ಟಿಯಾಗಿದ್ದಿದ್ದರೆ ಇಂಥ ಮಹಾಫಲವು ದೊರೆಯುವದಕ್ಕೆ ಕಾರಣವಿರುತ್ತಿರಲಿಲ್ಲ. ನಿಜವಾಗಿ ಅದರಲ್ಲಿ ಪಾಂಡವರ ಧರ್ಮಬುದ್ಧಿವಿಕಾಸವೂ ಕೌರವರ ಅಧರ್ಮಬುದ್ಧಿ ವಿಕಾಸವೂ ಆದ ಬಗೆಯನ್ನು ವರ್ಣಿಸಿರುತ್ತದೆ. ಕಥೆಗೆ ಇದನ್ನು ಅನ್ವಯಿಸಿ ನೋಡಿಕೊಳ್ಳಬೇಕಾಗಿದೆ. ಅಧರ್ಮಿಷ್ಠರಿಗೆ ಯಾವಾಗಲೂ ಅಂಜಿಕೆ ಎಂಬುದು ಇಲ್ಲಿ ಎದ್ದು ಕಾಣುತ್ತದೆ. ಕೌರವರು, ಪಾಂಡವರು ಹುಡುಗುತನದಲ್ಲಿ ಆಟವಾಡುತ್ತಿರುವಾಗಿನಿಂದ ಹಿಡಿದು ಭಾರತಯುದ್ಧವು ಮುಗಿಯುವವರೆಗೂ ಕೌರವರು ಪಾಂಡವರಿಗೆ ಒಂದಲ್ಲ, ಒಂದು ರೀತಿಯಿಂದ ತೊಂದರೆಯನ್ನುಂಟು ಮಾಡುತ್ತಲೇ ಇರುತ್ತಿದ್ದರು. ತಾವು ಮಾಡಿದ್ದ ಅಪರಾಧವನ್ನು ಕಂಡುಹಿಡಿದು ಅವರು ಮತ್ತೆಲ್ಲಿ ತಮಗೆ ಪ್ರತೀಕಾರವನ್ನು ಮಾಡುವರೋ ಎಂಬ ಅಂಜಿಕೆಯು ಅವರ ಬೆನ್ನುಹಿಡಿದು ಬರುತ್ತಲೇ ಇತ್ತು. ಅರಗಿನಮನೆಯಲ್ಲಿ ಪಾಂಡವರು ಸತ್ತರೆಂದು ನಿಶ್ಚಯಿಸಿದರೂ ಏಕಚಕ್ರನಗರದಲ್ಲಿ ಬಕಾಸುರನ ವಧೆಯ ವೃತ್ತಾಂತವನ್ನು ಕೇಳಿದಾಗ, ದ್ರೌಪದಿಯ ಸ್ವಯಂವರದಲ್ಲಿ ಅರ್ಜುನನು ತನ್ನ ಪರಾಕ್ರಮವನ್ನು ತೋರ್ಪಡಿಸಿಕೊಂಡಾಗ,

ಅರಣ್ಯವಾಸದಲ್ಲಿ ಅಕ್ಷಯಪಾತ್ರೆಯನ್ನು ಧರ್ಮರಾಯನು ತಪಸ್ಸಿನಿಂದ ಸಂಪಾದಿಸಿದ ವಾರ್ತೆಯು ಕಿವಿಗೆ ಬಿದ್ದಾಗ, ವಿರಾಟನ ನಗರದಲ್ಲಿ ಕೀಚಕನ ವಧೆಯಾಯಿತೆಂಬ ಸುದ್ದಿಯನ್ನು ಕೇಳಿದಾಗ, ಗೋಗ್ರಹಣದ ಸಂದರ್ಭದಲ್ಲಿ ಅರ್ಜುನನ ಶೌರ್ಯವನ್ನು ಕಂಡಾಗ-ಇದೇ ಮುಂತಾದ ಸಂದರ್ಭಗಳಲ್ಲೆಲ್ಲ ಕೌರವರು ಪಾಂಡವರನ್ನು ನೆನೆಸಿಕೊಂಡು ತಲ್ಲಣಿಸುತ್ತಿದ್ದರು. **ಇದು ಅಧರ್ಮಬುದ್ಧಿಯ ವಿಕಾಸದ ಜೊತೆಗೆ ಅಧರ್ಮಿಷ್ಠರಿಗೆ ಮನಸ್ಸಿನಲ್ಲಾಗುವ ಹೆಚ್ಚಿನ ತಳಮಳವನ್ನು ಅರಿಯುವದಕ್ಕೂ ಒಂದು ಉತ್ತಮವಾದ ದೃಷ್ಟಾಂತವಾಗಿರುತ್ತದೆ.** ಆದರೆ ಪಾಂಡವರನ್ನು ನೋಡಿರಿ. ಅವರಿಗೆ ಯಾವಾಗಲೂ ಧರ್ಮದಲ್ಲಿ ಆಸಕ್ತಿಯಿತ್ತು; ಧರ್ಮದ ಬೆಂಬಲದಿಂದ ಅವರಿಗೆ ಎಂಥ ಕಷ್ಟದ ಪರಿಸ್ಥಿತಿ ಬಂದರೂ ಧರ್ಮವೇ ಅವರನ್ನು ಕಾಪಾಡಿತು. ಅವರಲ್ಲಿ ಯಾರೊಬ್ಬರಿಗೂ ಅಧೈರ್ಯವಾಗಲಿ ನಿರುತ್ಸಾಹ ವಾಗಲಿ ತೋರಿಕೊಂಡದ್ದೇ ಇಲ್ಲ. ಇದನ್ನೂ ಅನುಕ್ರಮಣಿಕಾಧ್ಯಾಯವು ಹೇಳುತ್ತದೆ. ಪಾಂಡವರ ಸ್ಮರಣೆಯನ್ನು ಮಾಡಿದರೆ ಧರ್ಮವೃದ್ಧಿ, ಪಾಪನಾಶ, ಕೀರ್ತಿಲಾಭ, ಆರೋಗ್ಯ-ಇವುಗಳೆಲ್ಲವೂ ಉಂಟಾಗು ವವೆಂದು ಭಾರತೀಯರು ನಂಬಿ ಪ್ರತಿದಿನವೂ ಬೆಳಗ್ಗೆ ಅವರನ್ನು ಮನಸ್ಸಿಗೆ ತರುವ ಶ್ಲೋಕಗಳನ್ನು ಅಂದುಕೊಳ್ಳುತ್ತಿದ್ದಾರೆ.

ಭಾರತವು ಧರ್ಮಪ್ರತಿಪಾದನೆಗಾಗಿಯೇ ಬಂದದ್ದೆಂಬುದಕ್ಕೆ ಉಪಕ್ರಮದಲ್ಲಿ ಆಧಾರವು ಸಿಕ್ಕುವಂತೆಯೇ ಉಪಸಂಹಾರದಲ್ಲಿಯೂ ದೊರೆಯುತ್ತದೆ. ಅಲ್ಲಿ **ಭಾರತ ಸಾವಿತ್ರಿ** ಎಂಬ ಹೆಸರಿನ ನಾಲ್ಕೈದು ಶ್ಲೋಕಗಳಿರುತ್ತವೆ. ಅವನ್ನು ಈಗಲೂ ಅನೇಕರು ಪ್ರಾತಃಕಾಲದಲ್ಲಿ ಶ್ರದ್ಧೆಯಿಂದ ಪಠಿಸುತ್ತಾರೆ. ವ್ಯಾಸರು ತಮ್ಮ ಮುದ್ದಿನ ಮಗನಾದ ಶುಕನಿಗೆ ಅವನ್ನು ಹೇಳಿಕೊಟ್ಟರೆಂದು ಭಾರತದಲ್ಲಿದೆ. ಅದರಲ್ಲಿರುವ ಉಪದೇಶವೇನೆಂದರೆ: "ಮೂಢರಾದವರು ಪ್ರತಿದಿನವೂ ನೂರಾರು ಸಲ ಹರ್ಷದಿಂದ ಉಬ್ಬುತ್ತಲೂ ಅಂಜಿಕೆಯಿಂದ ಕುಗ್ಗುತ್ತಲೂ ಇರುವರು. ಧರ್ಮದಿಂದಲೇ ಉತ್ತಮವಾದ ಅರ್ಥಕಾಮಗಳು ದೊರೆಯುವವೆಂಬುದು ಕೈಯೆತ್ತಿ ಕಡುಖಂಡಿತವಾಗಿ ಸಾರಬಹುದಾದ ವಿಷಯವು. ಧರ್ಮವು ನಿತ್ಯವಾದದ್ದು, ಸುಖದುಃಖಗಳು ಅನಿತ್ಯವಾದವುಗಳು; ಜೀವನು ನಿತ್ಯನು, ಜೀವತ್ವಹೇತುವು ಅನಿತ್ಯವು. ಆದ್ದರಿಂದ ಧರ್ಮವನ್ನು ಕಾಮ ದಿಂದಾಗಲಿ ಭಯದಿಂದಾಗಲಿ ಲೋಭದಿಂದಾಗಲಿ ಕೊನೆಗೆ ಜೀವದಿಂದ ಬದುಕಿರುವ ಕಾರಣಕ್ಕಾಗಲಿ ಎಂದಿಗೂ ಬಿಡಬಾರದು."

ಹೀಗೆ ಧರ್ಮವೇ ಇಹಪರಕ್ಕೆ ಸುಖಸಾಧನವೆಂಬ ಉಪದೇಶವನ್ನು ಮುಖ್ಯವಾಗಿಟ್ಟುಕೊಂಡು ಮಹಾಭಾರತವನ್ನು ರಚಿಸಿರುವ ವೇದವ್ಯಾಸರು ಆ ಬೃಹದ್ಗ್ರಂಥದ ಸಾರದ ಸಾರವಾಗಿರುವ ಭಗವದ್ಗೀತೆಯನ್ನು ಅದರ ನಡುವೆ

ಇಟ್ಟಿರುತ್ತಾರೆ. ಭಗವದ್ಗೀತೆಯು ಸಕಲವೇದಾರ್ಥಗಳ ಸಾರಸಂಗ್ರಹವಾಗಿರುತ್ತದೆ ಎಂದು ಶ್ರೀಶಂಕರಾಚಾರ್ಯರು ಹೇಳಿರುತ್ತಾರೆ. ವೇದದ ಅರ್ಥಗಳು ಮುಖ್ಯವಾಗಿ ಎರಡು: **ಕರ್ಮ, ಜ್ಞಾನ;** ಯಾವದನ್ನು ಮಾಡಬೇಕು? ಯಾವ ಜ್ಞಾನದಿಂದ ಶ್ರೇಯಸ್ಸಾಗುವದು? ಈ ಎರಡೂ ಗೀತೆಯಲ್ಲಿ ಸಿಕ್ಕುತ್ತವೆ. ಇವೆರಡರ ಜೊತೆಗೆ **ವಾಸುದೇವನಾದ ಪರಬ್ರಹ್ಮದ ತತ್ತ್ವವನ್ನು** ನೆನಪುಕೊಡುವದಕ್ಕಾಗಿ ಆಗಾಗ್ಗೆ "ಶ್ರೀ ಭಗವಾನ್ ಉವಾಚ" ಶ್ರೀಭಗವಂತನಿಂತೆಂದನು! ಎಂದು ಅಲ್ಲಲ್ಲಿ ವ್ಯಾಸರು ಹೇಳುತ್ತಲೇ ಹೋಗಿರುತ್ತಾರೆ. ಇದು ನಮ್ಮ ಉಪದೇಶವಲ್ಲ, ನೇರಾಗಿ ಭಗವಂತನೇ ಹೇಳಿದ್ದು ಎಂದು ಅವರು ಹೇಳಿರುತ್ತಾರೆ. ಈ ಅಭಿಪ್ರಾಯವನ್ನು ನಾವು ನೆನಪಿನಲ್ಲಿಡಬೇಕು. "**ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ। ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾತ್ ವಿನಿಃಸೃತಾ॥**" ಎಂಬ ವಚನದಂತೆ ಗೀತೆಯು ಪದ್ಮನಾಭನಾದ ಭಗವಂತನ ಮುಖಕಮಲದಿಂದ ಬಂದದ್ದು; ಮಿಕ್ಕ ಶಾಸ್ತ್ರಗಳು ಎಷ್ಟಿದ್ದರೂ ಇದಕ್ಕೆ ಅವು ಸಮಾನವಾಗಲಾರವು. ಶ್ರೀ ಮಹಾವಿಷ್ಣುವಿನ ನಾಭಿಕಮಲದಲ್ಲಿ ಹುಟ್ಟಿದ ಬ್ರಹ್ಮನ ಮುಖದಿಂದ ಬಂದವುಗಳು ವೇದಗಳು. ಬ್ರಹ್ಮನ ತಂದೆಯಾದ ಭಗವಂತನೇ ಬಾಯಿಬಿಟ್ಟು ಹೇಳಿದ್ದು ಗೀತೆ. ಜನರೆಲ್ಲರಿಗೂ ಒಳ್ಳೆಯದಾಗಲೆಂಬ ಹಿತಬುದ್ಧಿಯಿಂದ ವ್ಯಾಸರು ಅದನ್ನು ತಮ್ಮ ಮಹಾಭಾರತದಲ್ಲಿ ಬರೆಯಿಸಿಕೊಂಡು ಅನುಗ್ರಹಿಸಿರುತ್ತಾರೆ. ಭಗವದ್ಗೀತೆಯನ್ನು ಶ್ರವಣಮಾಡುವಾಗ ಈ ಭಾವನೆ ನಮ್ಮಲ್ಲಿ ಎದ್ದುಕೊಂಡಿರಲಿ! ಆಗ ನಮಗೆ ಪ್ರಪಂಚವೆಲ್ಲ ಮರೆತು ಹೋಗಲಿ, ಎಲ್ಲವೂ ಭಗವಂತನೇ ಎಂಬ ಈಶ್ವರೀಕರಣವು ಪ್ರಾರಂಭವಾಗಲಿ! ಕಬ್ಬು ಕಠಿನವಾಗಿದ್ದರೂ ಆದರಲ್ಲಿ ಮಧುರವಾದ ಹಾಲು ಬರುವಂತೆ ನಮ್ಮ ಹೃದಯ ಕರ್ಕಶತೆಯೆಲ್ಲ ಹೋಗಲಿ! ಭಗವಂತನೊಬ್ಬನೇ ನಮಗೆ ಗತಿ! ಅವನನ್ನು ನಂಬುವದೊಂದೇ ನಮಗೆ ಮಾರ್ಗವು. ಆತನು ಹೇಳುವದನ್ನು ಕೇಳಿ ಕೃತಾರ್ಥರಾಗೋಣ!- ಎಂಬ ಮೃದುಭಾವವು ನಮ್ಮೊಳಗೆ ಎದ್ದುಕೊಳ್ಳಲಿ! ಭಗವಂತನು ಹೇಳುತ್ತಿದಾನೆ, ನಾವು ಕೇಳುತ್ತಿದೇವೆ-ಎಂಬ ಭಾವನೆಯಿಂದ ಪರವಶರಾಗಿ ಗೀತೋಪದೇಶವನ್ನು ಕೇಳೋಣ!

ಇನ್ನು ಗೀತೆಗೆ ಪ್ರಾರಂಭ. 'ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್। ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್॥' ಭಾರತವನ್ನು ಪಠನಮಾಡುವಾಗ ಈ ಶ್ಲೋಕವನ್ನು ಹೇಳಿಕೊಳ್ಳುವ ರೂಢಿಯಿದೆ. ಇಲ್ಲಿ ಇದು ಬಹಳ ಅವಶ್ಯ. ಶ್ರೀಮನ್ನಾರಾಯಣನಿಗೆ ನಮಸ್ಕಾರ! ಆತನೇ ಭಗವದ್ಗೀತೆಯ ಉಪದೇಶಕನು! ಸರಸ್ವತೀದೇವಿಗೆ ನಮಸ್ಕಾರ! ಇಲ್ಲಿ ಸರಸ್ವತಿಯೆಂದರೆ

ಭಗವಂತನು ಉಪದೇಶಿಸಿರುವ ಗೀತಾರೂಪವಾದ ಜ್ಞಾನಗಂಗೆಯೇ. ಇನ್ನು ಈ ಗೀತೆಯನ್ನು ಕೇಳುವ ನರೋತ್ತಮನಾದ ನರನಿಗೆ, ಅರ್ಜುನನಿಗೆ ನಮಸ್ಕಾರ! ಆ ಮಹಾತ್ಮನೇ ಈ ಭಗವದ್ಗೀತೆಯನ್ನು ಕೇಳಿದವನು. ಆತನ ನಿಮಿತ್ತದಿಂದಲೇ ಭಗವದ್ಗೀತೆ ಎಂಬ ಗಂಗೆಯು ಭಗೀರಥನು ತಂದ ಗಂಗೆಗಿಂತಲೂ ಹೆಚ್ಚಾಗಿ ಈಗಲೂ ಭೂಲೋಕದಲ್ಲೆಲ್ಲಾ ಹರಿಯುತ್ತಾ ಲೋಕಪಾವನೆಯಾಗಿರುವದು!

ಈಗ ಗೀತೆಯಲ್ಲಿ ಅರ್ಜುನನ ಸ್ಥಾನವನ್ನು ಸ್ವಲ್ಪ ವಿವೇಚನೆಮಾಡೋಣ! ಭಾರತದ ಕಥಾನಾಯಕನು ಯಾರು? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವದು ಕಷ್ಟ. ಒಂದು ದೃಷ್ಟಿಯಿಂದ, ಅದರಲ್ಲಿಯೂ ಭಗವದ್ಗೀತೆಯ ದೃಷ್ಟಿಯಿಂದ, ನೋಡಿದರೆ ಅರ್ಜುನನೇ ಭಾರತದಲ್ಲಿ ಮುಖ್ಯಪಾತ್ರವೆಂದು ಒಪ್ಪಬೇಕಾಗುವದು. ಇದು ಹೇಗೆಂಬುದನ್ನು ವಿವರಿಸುವ ಮುಂಚೆ ಗೀತೆಯ ಒಂದನೆಯ ಅಧ್ಯಾಯದಲ್ಲಿ ಕೊಟ್ಟಿರುವ ಹಿನ್ನೆಲೆಯನ್ನು ಸ್ವಲ್ಪ ವಿಮರ್ಶಿಸಬೇಕಾಗುತ್ತದೆ. ಧೃತರಾಷ್ಟ್ರನಿಗೆ ಯುದ್ಧದ ಘಟನೆಗಳೆಲ್ಲವನ್ನೂ ವಿವರಿಸಿ ಹೇಳುವದಕ್ಕೆ ಅನುಕೂಲವಾಗುವಂತೆ ವೇದವ್ಯಾಸರು ಸಂಜಯನಿಗೆ ದಿವ್ಯದೃಷ್ಟಿಯನ್ನು ಅನುಗ್ರಹಿಸಿ ಹೋಗಿರುತ್ತಾರೆ. ಧೃತರಾಷ್ಟ್ರನು ಸಂಜಯನನ್ನು ಕೇಳುತ್ತಿದ್ದಾನೆ, "ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧ ಮಾಡಬೇಕೆಂದು ನೆರೆದ ನಮ್ಮವರಾದ ಕೌರವರೂ ಪಾಂಡುಪುತ್ರರೂ ಏನು ಮಾಡಿದರು? ಹೇಳಯ್ಯ, ಸಂಜಯ!" ಈ ಪ್ರಶ್ನೆಯ ಭಾವವೇನೆಂದರೆ ಧರ್ಮಸ್ಥಳವಾದ ಕುರುಕ್ಷೇತ್ರದಲ್ಲಿ ಕೌರವಪಾಂಡವರ ಸೈನ್ಯಗಳು ಸೇರಿರುತ್ತವೆ. ಅದು ಧರ್ಮಕ್ಷೇತ್ರ ವಾದ್ದರಿಂದ ಅಲ್ಲಿ ಧರ್ಮಕ್ಕೆ ಜಯವಾಗುವ ಸಂಭವವಿದೆಯೇ ಹೊರತು ಅಧರ್ಮಕ್ಕೆ ಜಯವಾಗಲಾರದು. ಕುರುಕ್ಷೇತ್ರದಲ್ಲಿ ನಿಂತಾಗಲಾದರೂ ನನ್ನ ಮಕ್ಕಳು ಇನ್ನು ಅಧರ್ಮಕ್ಕೆ ಎಂದಿಗೂ ಗೆಲವು ದೊರೆಯಲಾರದೆಂಬ ಒಳ್ಳೆಯಬುದ್ಧಿ ಬಂದು ಪಾಂಡವರೊಡನೆ ಸಂಧಿಯನ್ನು ಮಾಡಿಕೊಂಡರೆ? ಇಲ್ಲವೆ, ವಾಸನಾಪ್ರಾಬಲ್ಯದಿಂದ ತಮ್ಮ ಹಠವನ್ನೇ ಹಿಡಿದು ಯುದ್ಧವನ್ನು ಮಾಡಿಯೇ ಬಿಟ್ಟರೆ? ಯುದ್ಧವು ಪ್ರಾರಂಭ ವಾದಾಗಲಾದರೂ ಧರ್ಮದಲ್ಲಿಯೂ ಶೌರ್ಯದಲ್ಲಿಯೂ ಸಮತಾಬುದ್ಧಿಯಲ್ಲಿಯೂ ಅಭಿಯುಕ್ತರಾದ ಭೀಷ್ಮಾಚಾರ್ಯರೇ ಮುಂತಾದವರನ್ನು ಮುಂದುಮಾಡಿಕೊಂಡರೊ, ಅಥವಾ ತಮಗೆ ಹಿತವರೆಂಬ ಕಾರಣದಿಂದ ಕರ್ಣ, ಶಕುನಿ ಮೊದಲಾದವರ ನೀತಿಯನ್ನೇ ಅನುಸರಿಸಿದರೊ? ಧರ್ಮಾತ್ಮರಾದ ಪಾಂಡವರಾದರೂ ಆ ಸಂದರ್ಭದಲ್ಲಿ ಏನು ಮಾಡಿದರು? ಅಧರ್ಮಿಷ್ಠರಾದ ನನ್ನ ಮಕ್ಕಳ ಮೇಲೆ ತಮ್ಮವರೆಂಬ ಕನಿಕರದಿಂದಲಾದರೂ ಔದಾರ್ಯವನ್ನು ತೋರ್ಪಡಿಸಿದರೆ? ಎಂದು ಧೃತರಾಷ್ಟ್ರನ ಪ್ರಶ್ನೆ. ಇದಕ್ಕೆ ಸಂಜಯನು ಹೇಳುವ ಉತ್ತರವು ಪ್ರಾರಂಭವಾಗಿದೆ—

ಧರ್ಮಕ್ಷೇತ್ರವಾದ ಕುರುಕ್ಷೇತ್ರದ ಸ್ಮರಣೆಯನ್ನು ಇಲ್ಲಿ ನಾವು ಒಂದಿಷ್ಟು ಮಾಡಿಕೊಳ್ಳುವದು ಉತ್ತಮ. ಈ ಕ್ಷೇತ್ರವನ್ನು ಕುರುವೆಂಬ ರಾಜನು ಸರಸ್ವತೀ ದೃಷದ್ವತೀನದಿಗಳ ನಡುವೆ ನಿರ್ಮಿಸಿದನು. ಇದು ದ್ವಾಪರಯುಗದಲ್ಲಿ ಅತ್ಯಂತ ಪುಣ್ಯಕ್ಷೇತ್ರವಾಗಿರುತ್ತಿತ್ತು. ಚಂದ್ರವಂಶದವರ ರಾಜಧಾನಿಯಾದ ಹಸ್ತಿನಾವತಿಗೂ ಇದಕ್ಕೂ ಬಹಳ ದೂರವಿರಲಿಲ್ಲ. ಹಸ್ತಿನಾವತಿಯು ಈಗಿನ ದೆಹಲಿಯಿರುವ ಕಡೆ ಇತ್ತೆಂದು ಐತಿಹಾಸಿಕರು ಹೇಳುತ್ತಾರೆ. ಈ ಸ್ಥಳದಲ್ಲಿಯೇ ಕುರುಪಾಂಡವರ ಚಕ್ರಾಧಿಪತ್ಯವಿದ್ದದ್ದು, ಇತ್ತೀಚೆಗೆ ಹಲವು ರಾಜಪುತ್ರರೂ ಪಠಾಣರೂ ಮೊಗಲರೂ ಇಲ್ಲಿ ರಾಜ್ಯಸ್ಥಾಪನೆಯನ್ನು ಮಾಡಿ ಕಾಲಗತಿಯನ್ನು ಹೊಂದಿ ಕಣ್ಮರೆಯಾಗಿರುತ್ತಾರೆ. ಇತ್ತೀಚೆಗೆ ಬ್ರಿಟಿಷರ ಚಕ್ರಾಧಿಪತ್ಯವು ಇಲ್ಲಿಯೇ ರಾಜಧಾನಿಯನ್ನು ಕಲ್ಪಿಸಿಕೊಂಡು ರಾಜ್ಯವಾಳಿ, ಭಾರತೀಯರಿಗೆ ಮತ್ತೆ ಸ್ವಾತಂತ್ರ್ಯವನ್ನು ಒಪ್ಪಿಸುವ ಆಲೋಚನೆಯನ್ನು ಮಾಡುತ್ತಿದೆ! ಈ ಸ್ಥಳವನ್ನು ನೋಡಿದರೆ ಯಾವನಿಗಾದರೂ ಈ ಶ್ಲೋಕಾರ್ಥವು ಸ್ಮರಣೆಗೆ ಬರುವಂತಿದೆ:-

**ಆಯುರ್ನಶ್ಯತಿ ಪಶ್ಯತಾಂ ಪ್ರತಿದಿನಂ ಯಾತಿ ಕ್ಷಯಂ ಯೌವನಮ್**
**ಪ್ರತ್ಯಾಯಾನ್ತಿ ಗತಾಃ ಪುನರ್ನದಿವಸಾಃ ಕಾಲೋ ಜಗದ್ಭಕ್ಷಕಃ ।**
**ಲಕ್ಷ್ಮೀಸ್ತೋಯತರಂಗಭಂಗಚಪಲಾ ವಿದ್ಯುಚ್ಚಲಂ ಜೀವಿತಂ**
**ತಸ್ಮಾನ್ಮಾಂ ಶರಣಾಗತಂ ಕರುಣಯಾ ತ್ವಂ ರಕ್ಷ ರಕ್ಷಾಧುನಾ ॥**

"ಆಯುಸ್ಸು ನಾವು ನೋಡುತ್ತಿರುವಂತೆಯೇ ಪ್ರತಿದಿನವೂ ತೀರುತ್ತಿದೆ; ಹರೆಯವು ದಿನದಿನಕ್ಕೂ ಸವೆಯುತ್ತಿದೆ. ಹೋದ ದಿನಗಳು ಮತ್ತೆ ಮರಳಿಬಾರವು. ಕಾಲವು ಜಗತ್ತನ್ನೇ ನುಂಗಿ ನೊಣೆಯುತ್ತಿದೆ. ಸಿರಿಯೆಂಬುದು ನೀರಿನ ಅಲೆಯು ಎದ್ದು ಬೀಳುವಂತೆ ಚಂಚಲವಾಗಿರುತ್ತದೆ. ಆದ್ದರಿಂದ ಪರಮೇಶ್ವರನೆ, ಶರಣಾಗತ ನಾಗಿರುವ ನನ್ನನ್ನು ನೀನು ಈಗಲೇ ಕಾಪಾಡು, ಕಾಪಾಡು!"

ಈ ತತ್ತ್ವವು ಕೌರವರಿಗೆ ಹೊಳೆಯದೆ ಹೋಯಿತು. ಅಧರ್ಮದ ಮೊಟ್ಟೆಯಾದ ದುರ್ಯೋಧನನು, ತಂದೆಯಾದ ಧೃತರಾಷ್ಟ್ರನು ಬೆಳಕಿನ ವಿಷಯಕ್ಕೆ ಕುರುಡನಾಗಿದ್ದಂತೆ, ಧರ್ಮದ ವಿಷಯದಲ್ಲಿ ಕುರುಡನಾದನು. ತನ್ನೆದುರಿಗೆ ಇರುವ ಸೈನ್ಯವನ್ನು ನೋಡಿ ಆಚಾರ್ಯನಾದ ದ್ರೋಣನಿಗೆ ಪಾಂಡವರ ಕಡೆಗೆ ಯಾರು ಯಾರು ಸಹಾಯಮಾಡಲು ಬಂದಿದ್ದಾರೆ ಎಂಬುದನ್ನು ಹೇಳುವಲ್ಲಿ ಅವನು ಸೈನ್ಯವನ್ನು ವ್ಯೂಹವಾಗಿ ರಚಿಸಿದ್ದ ಧೃಷ್ಟದ್ಯುಮ್ನನೆಂಬವನ ಹೆಸರು ಹೇಳಿ ನಿನ್ನ ಶಿಷ್ಯನೇ ನಿನಗೆ ಶತ್ರುವಾಗಿ ಬಂದಿರುವ ನೆಂಬುದನ್ನು ನೆನಪುಕೊಟ್ಟನು. ಯುಯುಧಾನನೇ ಮುಂತಾದವರ ಹೆಸರನ್ನು ಹೇಳುವ ನೆಪದಿಂದ ಅವರು ಭೀಮಾರ್ಜುನರಿಗೆ ಸಮಾನರೆಂದು ಹೇಳಿ ಅರ್ಜುನನ

ಹೆಸರನ್ನು ಹೇಳುವಾಗ ಆಗಬಹುದಾಗಿದ್ದ ನಡುಕವನ್ನು ತಪ್ಪಿಸಿಕೊಂಡನು! ಎದುರಿಗೇ ಇದ್ದ ಅರ್ಜುನನ ಹೆಸರನ್ನು ನೇರಾಗಿ ಹೇಳುವದಕ್ಕೆ ಅವನಿಗೆ ಅಂಥ ಅಂಜಿಕೆ!

ಈಗ ಗೀತೋಪದೇಶದ ಸಂದರ್ಭವನ್ನು ನೆನಪಿಗೆ ತಂದುಕೊಳ್ಳಬಹುದು. ಮಹಾವೀರನಾದ ಅರ್ಜುನನು ಯುದ್ಧದಲ್ಲಿ ಬಂದಿಳಿದಿದ್ದಾನೆ. ಎದುರಿಗೆ ಭೀಷ್ಮ ದ್ರೋಣರು ನಿಂತಿದ್ದಾರೆ! ತಮ್ಮ ಗುರುಗಳೂ ಧರ್ಮಪ್ರಿಯರೂ ಆದ ಪೂಜ್ಯರು ಎದುರಿಗೆ ನಿಂತಿರುತ್ತಾರೆ. ಪಾಂಡವರು ಧರ್ಮಪ್ರಿಯರಾದ್ದರಿಂದ ಈ ಸಂದರ್ಭ ದಲ್ಲಿಯೂ ಭೀಷ್ಮದ್ರೋಣರಿಗೆ ನಮಸ್ಕಾರವನ್ನು ಮಾಡಿ ಅವರ ಆಶೀರ್ವಾದವನ್ನು ಪಡೆದರು. ಹೇಗಾದರೂ ಎಲ್ಲರಿಗೂ ಇದೊಂದು ಸಂಧಿಕಾಲ, ಏನುಮಾಡಬೇಕೆಂದು ಯಾರಿಗೂ ತೋಚದ ಸ್ಥಳ, ಕಾಲ!

ಅರ್ಜುನನ ರಥದಲ್ಲಿ, ಭಗವಂತನು ಸಾರಥಿಯಾಗಿ ಕುಳಿತಿದ್ದಾನೆ. ಅರ್ಜುನನಿಗೆ ಅವನ ಬಲವಿದೆ ಎಂಬ ಹುರುಪು ಹೆಚ್ಚಾಗಿದೆ. ಅವನ ಕಣ್ಣಿನ ಕುಡಿನೋಟ ಇದ್ದರೆ, ಅವನ ಕೃಪೆಯೊಂದಿದ್ದರೆ, ಹೆದರಿಕೆ ಏನು? ವಿಜಯದಲ್ಲಿ ಹೆಚ್ಚಿನ ನಂಬಿಕೆಯಿದೆ. ಭಗವಂತನ ಕೃಪೆಯೇ ನಮ್ಮ ಬಾಳಿನ ಬೆಳಕು. ನಮ್ಮ ಜೀವನಸಮರದಲ್ಲಿ ವಿಜಯವನ್ನು ಕೊಡತಕ್ಕದ್ದು ಅದೇ ! ಜಯ ಜಯ ಪಾರ್ಥಸಾರಥೇ!

## ೩. ಅರ್ಜುನನ ವಿಷಾದ

(೨೩.೬.೪೬)

ಭಗವಂತನ ಉಪದೇಶವನ್ನು ಪಡೆಯುವ ಮುಂಚೆ ಅರ್ಜುನನ ಮನಃಸ್ಥಿತಿ ಹೇಗಿತ್ತು? —ಎಂಬುದು ಗೀತೆಯ ಒಂದನೆಯ ಅಧ್ಯಾಯದಲ್ಲಿದೆ. **ಉಪದೇಶವು ನಾಟುವಾಗ ನಮ್ಮ ಮನಸ್ಸು ಯಾವ ಸ್ಥಿತಿಯಲ್ಲಿರಬೇಕು—ಎಂಬುದು ಇದರಿಂದ ಗೊತ್ತಾಗುತ್ತದೆ.**

ಅರ್ಜುನನು ಲೌಕಿಕದೃಷ್ಟಿಯಿಂದ ಒಬ್ಬ ಆದರ್ಶಪುರುಷನಾಗಿದ್ದನೆನ್ನಬಹುದು. ದ್ರೋಣರಿಂದ ಧನುರ್ವಿದ್ಯೆಯನ್ನು ಪಡೆದು ಗುರುದಕ್ಷಿಣೆಯನ್ನು ಸಲ್ಲಿಸುವಾಗ, ದ್ರೌಪದಿಯ ಸ್ವಯಂವರದಲ್ಲಿ, ಅರಣ್ಯದಲ್ಲಿ ಕಿರಾತವೇಷಧಾರಿಯಾಗಿದ್ದ ಪರಮೇಶ್ವರ ನೊಡನೆ ಕಾದಾಡಿ ಆತನಿಂದ ಪಾಶುಪತಾಸ್ತ್ರವನ್ನು ಪಡೆದಾಗ, ನಿವಾತಕವಚರೊಡನೆ ಹೋರಾಡಿದಾಗ, ಗೋಗ್ರಹಣದ ಯುದ್ಧದಲ್ಲಿ ಅವನ ವೀರ್ಯವೂ ಶೌರ್ಯವೂ ಪರಾಕ್ರಮವೂ ಮನುಷ್ಯರಿಗೇ ಅಲ್ಲದೆ ದೇವಾಸುರರಿಗೂ ವ್ಯಕ್ತವಾಗಿತ್ತು. ಅರ್ಜುನನ ಗಾಂಡೀವಧನುಸ್ಸಿನ ಠೇಂಕಾರವು ಲೋಕೈಕವೀರನಿವನೆಂಬ ಕೀರ್ತಿಯನ್ನು ಸಾರುವ

ಕಹಳೆಯಾಗಿತ್ತು. ಧರ್ಮಿಷ್ಠನಾದ ಯುಧಿಷ್ಠಿರನ ಆಶೀರ್ವಾದ, ದ್ವಾರಕಾಧಿಪತಿಯಾದ ರಾಜನೀತಿಕುಶಲನಾದ ಶ್ರೀಕೃಷ್ಣನ ಸಾರಥ್ಯ, ಮತ್ತು ಬುದ್ಧಿವಾದದ ಸಹಾಯ-ಇವೆರಡೂ ತನ್ನ ಬಾಹುಬಲಕ್ಕೆ ಬೆಂಬಲವಾಗಿ ಧರ್ಮಯುದ್ಧದಲ್ಲಿದ್ದದ್ದರಿಂದ ಪಾಪಿಗಳಾದ ದುರ್ಯೋಧನಾದಿಗಳನ್ನು ತಾನು ಜಯಿಸಿಯೇನೆ?- ಎಂಬ ಸಂದೇಹವು ಅವನಿಗೆ ಕನಸಿನಲ್ಲಿಯೂ ಬಂದಿರಲಿಲ್ಲ. "ಶ್ರೀ ಕೃಷ್ಣನೆ, ಎರಡೂ ಸೇನೆಗಳ ನಡುವೆ ನನ್ನ ರಥವನ್ನು ನಿಲ್ಲಿಸು, ದುರ್ಬುದ್ಧಿಯಾದ ದುರ್ಯೋಧನನಿಗೆ ಸಹಾಯಮಾಡುವದಕ್ಕೆ ಬಂದಿರುವವರು ಯಾರು? ಇವರಲ್ಲಿ ನನ್ನ ತೋಳಬಲಕ್ಕೆ ತಕ್ಕವರು ಯಾರು? ನಾನು ನೋಡಬೇಕು" ಎಂದು ನುಡಿದನು. ಅಷ್ಟು ಹೊತ್ತಿನೊಳಗೆ ಭೀಷ್ಮಾದಿಗಳೂ ಕೃಷ್ಣಾರ್ಜುನಾದಿಗಳೂ ತಮ್ಮ ತಮ್ಮ ಶಂಖಗಳನ್ನು ಧ್ವನಿಗೈದಿದ್ದರು; ಕೊಂಬು, ಕಹಳೆ, ತಮಟೆ, ನಗಾರಿ- ಮುಂತಾದ ಯುದ್ಧವಾದ್ಯಗಳನ್ನು ಬಾರಿಸಿದ್ದರು! ಎಲ್ಲೆಲ್ಲಿಯೂ ರಣದ ಕೋಲಾಹಲವೇ ಎದ್ದುಬಿಟ್ಟಿದೆ! ಇಂಥ ಸ್ಥಿತಿಯಲ್ಲಿ ಕೆಚ್ಚೆದೆಯ ವೀರನಾದ ಅರ್ಜುನನ ಉತ್ಸಾಹವು ಇಮ್ಮಡಿಯಾಗಿದೆ. ಅವನ ಎದೆ ಹಿಗ್ಗಿದೆ, ಕಣ್ಣುಗಳು ಅರಳಿವೆ, ತೋಳುಗಳ ಮಾಂಸಖಂಡಗಳು ಉಬ್ಬಿವೆ! ಅಲ್ಲಿ ನೆರೆದಿದ್ದ ಹನ್ನೊಂದು ಅಕ್ಷೌಹಿಣಿಯ ಸೈನ್ಯದಲ್ಲಿ ಪ್ರಯತ್ನಪೂರ್ವಕವಾಗಿ ಅರಿಸುವುದಕ್ಕೆ ಹೊರಟರೂ ಅರ್ಜುನನಂಥ ಉತ್ಸಾಹಶಾಲಿಯಾದ ವೀರನಿವನೆಂದು ಬೆರಳು ಮಡಿಸುವದಕ್ಕೆ ಮತ್ತೊಬ್ಬರಿಲ್ಲ!

ರಥವು ಮುಂಚೂಣಿಗೆ ಬಂತು. ಎರಡು ಸೇನೆಗಳ ನಡುವೆ ನಿಂತ ಅರ್ಜುನನು ತನ್ನೆದುರಿಗಿದ್ದ ಶತ್ರುಗಳ ಕಡೆಗೆ ಒಂದು ಸಲ ಕಣ್ಣೋಟವನ್ನು ಬೀರಿದನು. "ಅರ್ಜುನ! ಇಲ್ಲಿ ನೆರೆದಿರುವ ಕುರುಸೇನೆಯನ್ನು ನೋಡು!" ಎಂದನು, ಶ್ರೀಕೃಷ್ಣ. ಆದರೆ ಅರ್ಜುನನ ಕಣ್ಣಿಗೆ ಬಿದ್ದದ್ದೇನು? ಮನಸ್ಸಿನ ಮೇಲೆ ಆದ ಪರಿಣಾಮವೇನು? ಆಚಾರ್ಯರು, ಮಾವಂದಿರು, ಅಣ್ಣತಮ್ಮಂದಿರು, ಮಕ್ಕಳು, ಮೊಮ್ಮಕ್ಕಳು, ಗೆಳೆಯರು! ಶಿವಾಶಿವಾ! ಇವರೊಡನೆಯೇ, ನಾನು ಯುದ್ಧವನ್ನು ಮಾಡಬೇಕಾದದ್ದು? ಎಂಬ ಕೃಪಾಪೂರಿತವಾದ ಆಲೋಚನೆಯು ಅವನ ಮನಸ್ಸನ್ನು ಹೊಕ್ಕುಬಿಟ್ಟಿತು. ಅವನಿಗೆ ವಿಷಾದವುಂಟಾಯಿತು; ಅವನ ಮನಸ್ಸು ಉತ್ಸಾಹದಿಂದ ಉಕ್ಕೇರುವದು ನಿಂತು ಉಮ್ಮಳದಿಂದ ಕುಸಿಯಿತು! ಎದುರಿಗಿರುವದು ಹುಲಿಯೆಂದು ತಿಳಿದು ಬಿಲ್ಲಿಗೆ ಬಾಣವನ್ನು ಜೋಡಿಸಿದಾಗ ಅದು ಹಸುವೆಂದು ತಿಳಿದವನಿಗೆ ತಾನು ಮಾಡಿದ ಪ್ರಯತ್ನಕ್ಕಾಗಿ ಪಶ್ಚಾತ್ತಾಪವುಂಟಾಗುವಂತೆ ಆಯಿತು, ಅರ್ಜುನನ ಸ್ಥಿತಿ!

ಇವರೆಲ್ಲರೂ ಸ್ವಜನರೇ ಎಂಬುದು ಮನಸ್ಸಿಗೆ ಮುಂದೆ ಬಂದಾಗ ಹೆಚ್ಚಿಕೊಂಡ ಕೃಪಾದೃಷ್ಟಿಯಕೋಣದಿಂದ ಪರಿಸ್ಥಿತಿಯನ್ನು ಅಳೆದು ನೋಡಿದನು. ಅವನಿಗೆ ಆಗ

ತೋಚಿದ ಭಾವಗಳನ್ನು ಶ್ರೀಕೃಷ್ಣನ ಮುಂದೆ ಇಟ್ಟಿರುತ್ತಾನೆ. "ಶ್ರೀ ಕೃಷ್ಣ, ಸ್ವಜನರ ಮೇಲೆ ಬಾಣವನ್ನು ಬಿಡುವದಕ್ಕೆ ನನಗೆ ಕೈಯೇ ಬರುವಂತಿಲ್ಲ. ಇದರಿಂದ ಶ್ರೇಯಸ್ಸಾದೀತೆ? ಇವರಿಲ್ಲದೆ ನಮಗೆ ರಾಜ್ಯಭೋಗದಿಂದ ಆಗಬೇಕಾದದ್ದಾದರೂ ಏನು? 'ಸ್ವಜನರಾದ ನಮ್ಮನ್ನು ಅವರು ಹೊಡೆಯಬಹುದೆ? ಅವರಿಗೆ ಪಾಪವು ಬರುವದಿಲ್ಲವೆ?' ಎಂದು ನೀನು ಕೇಳಬಹುದು. ಆದರೆ ಅವರಿಗೆ ಧರ್ಮಸೂಕ್ಷ್ಮವು ತಿಳಿಯದು. ಅವರು ಲೋಭದಿಂದ ಮುಂಗಾಣದೆ ಮಾಡಬಾರದ್ದೆಲ್ಲವನ್ನೂ ಮಾಡಿರುತ್ತಾರೆ. ಆದಮಾತ್ರಕ್ಕೆ ನಾವೂ ಅಧರ್ಮವನ್ನು ಮಾಡಬೇಕೇನು?" ಕೂಡದು. ಮೂರುಲೋಕದ ಒಡೆತನವೇ ಸಿಕ್ಕುವಂತಿದ್ದರೂ ನಾನು ಈ ಯುದ್ಧಕ್ಕೆ ಕೈ ಹಾಕುವಂತಿಲ್ಲ; ಇನ್ನು ಈ ಭೂಮಿಗಾಗಿ ಅವರೊಡನೆ ಕಾದಾಡುವೆನೆ? ಎಂದನು. ಯುದ್ಧದಿಂದ ಆಗುವ ದೋಷಗಳನ್ನು ಒಂದೊಂದಾಗಿ ಹೇಳುತ್ತಾ ಬಂದನು. ಕುಲನಾಶ, ಕುಲಧರ್ಮಗಳ ನಾಶ, ಅಧರ್ಮದ ಅಭಿವೃದ್ಧಿ, ಸ್ತ್ರೀಯರ ಅನೀತಿ, ವರ್ಣಸಂಕರ, ನರಕವಾಸ-ಇವನ್ನೆಲ್ಲ ಒಂದರ ಮೇಲೊಂದು ಪೇರಿಸಿಟ್ಟು "ಅಯ್ಯೊ! ನಾವು ಮಹಾಪಾಪವನ್ನು ಮಾಡುವದಕ್ಕೆ ಉದ್ಯುಕ್ತರಾಗಿದೇವೆ. ರಾಜ್ಯದ ಆಶೆಗೆ ಸ್ವಜನರನ್ನು ಕೊಂದು ಪಾಪವನ್ನು ಕಟ್ಟಿಕೊಳ್ಳುವದೆ? ಛೆ! ಎಂದಿಗೂ ಸಲ್ಲದ ಕಾರ್ಯವಿದು!" ಎಂದು ದುಗುಡದಿಂದ ಬಿಲ್ಲುಬಾಣಗಳನ್ನು ಅತ್ತೊಗೆದು ರಥದ ಮುಂಗಡೆಯಲ್ಲಿ ಕುಳಿತುಬಿಟ್ಟನು!

ಅರ್ಜುನನ ಪರಿತಾಪವನ್ನು ನೋಡಿದರೆ ಅವನು ಹೇಳಿದ್ದೆಲ್ಲವೂ ಯುಕ್ತವೇ ಎಂದು ನಮಗೆ ಮೊದಲು ತೋರುತ್ತದೆ. ಆದರೆ ಅವನು ಮಾಡಿದ್ದು ಸರಿಯೋ ಅಲ್ಲವೋ ಎಂಬುದನ್ನು ನಿರ್ಣಯಿಸಬೇಕಾದರೆ ಹಿಂದುಮುಂದಿನ ಸಂಗತಿಗಳನ್ನು ಮನದಂದುಕೊಳ್ಳಬೇಕು. ಅರ್ಜುನನಿಗೆ ಕೌರವರು ತನ್ನ ಬಾಂಧವರೆನ್ನುವದು ಈ ಮೊದಲು ತಿಳಿಯದೆ ಇರಲಿಲ್ಲ. ಆದರೆ ಅವರು ಅಧರ್ಮದಿಂದ ಪಾಂಡವರಿಗೆ ಮಾಡಿದ್ದ ಮೋಸವೂ ಕೊಟ್ಟ ತೊಂದರೆಯೂ ಅವನ ಮನಸ್ಸಿನಲ್ಲಿ ಎದ್ದುಕೊಂಡಿದ್ದವು. ಆ ಕಾರಣದಿಂದಲೇ ಅವನು ಶತ್ರುಜಯಕ್ಕಾಗಿ ಪಾಶುಪತಾಸ್ತ್ರವನ್ನು ಪಡೆದುಕೊಂಡದ್ದು, ವಿರಾಟನಗರದಲ್ಲಿರುವಾಗಲೇ ಕೌರವರೊಡನೆ ಹೋರಾಡಿದ್ದು. ಯುದ್ಧವು ತಾನು ಮಾಡತಕ್ಕದ್ದೇ ಎಂಬ ದೃಢವಾದ ನಂಬಿಕೆಯಿಂದಲೇ ಈಗಲೂ ರಥವನ್ನೇರಿ ಆಯುಧಪಾಣಿಯಾಗಿ ಬಂದಿರುತ್ತಾನೆ, ತನ್ನ ರಥವನ್ನು ಸೇನೆಯ ಮುಂಗಡೆಯಲ್ಲಿ ನಿಲ್ಲಿಸಿಕೊಂಡಿದ್ದಾನೆ. ಇಂಥ ವಿಷಮಸಂದರ್ಭದಲ್ಲಿ ಸ್ವಜನರ ಮೇಲಿನ ಪ್ರೇಮವು ಎದ್ದುಕೊಂಡುಬಿಟ್ಟಿದೆ. **ಅವನು ತನ್ನ ನಡತೆಗೆ ತಕ್ಕ ತರ್ಕವನ್ನೇನೋ ಹೇಳಿದನು; ಆದರೆ ಆಗ ಅವನಿಗೆ ಧರ್ಮಾಧರ್ಮವಿವೇಕವಿರಲಿಲ್ಲ. ತಪ್ತಿತಸ್ಥನಾದ**

**ಅಪರಾಧಿಯು ಸ್ವಜನವಾದರೆ ಅವನಿಗೆ ತಾನು ಶಿಕ್ಷೆಯನ್ನು ವಿಧಿಸಬಹುದೆ?- ಎಂದು ಶಂಕಿಸುವ ಮ್ಯಾಜಿಸ್ಟ್ರೇಟ್ ನ್ಯಾಯಾಧಿಪನಂತೆ ಅರ್ಜುನನು ಧರ್ಮ ಯುದ್ಧದಲ್ಲಿ ತಾನೇ ತೊಡಗಿದ್ದರೂ ಸ್ವಜನಾಭಿಮಾನದಿಂದ ಕರ್ತವ್ಯ ಕರ್ಮವನ್ನು ಬಿಡುವದಕ್ಕೆ ಉದ್ಯುಕ್ತನಾಗಿದ್ದನು!**

ಶ್ರೀಕೃಷ್ಣನು ಈಗ ಅರ್ಜುನನಲ್ಲಿದ್ದ ಕ್ಷಾತ್ರತೇಜಸ್ಸನ್ನು ಎಬ್ಬಿಸಲು ಪ್ರಯತ್ನ ಮಾಡಿದನು. "ಅರ್ಜುನ! ಇಂಥ ಮನಃಕಲ್ಮಷವನ್ನು ಈ ಸಂದರ್ಭದಲ್ಲಿ ಮಾಡಿಕೊಳ್ಳದಿರು. ಇದನ್ನು ಆರ್ಯರಾದವರು ಯಾರೂ ಒಪ್ಪುವದಿಲ್ಲ. ಇದರಿಂದ ಪರಗತಿಯು ಆಗುವಂತಿಲ್ಲ! ಗಂಡುಗಲಿಯಾದ ನೀನು ಇಂಥ ಯುದ್ಧಸಮಯದಲ್ಲಿ ಷಂಡನಾಗುವದೆ? ಮನಸ್ಸಿನ ದೌರ್ಬಲ್ಯವನ್ನು ಬಿಟ್ಟು ಏಳು!" ಎಂದು ಎಚ್ಚರಿಸಿದನು. ಆದರೂ ಅರ್ಜುನನಿಗೆ ಯುದ್ಧವು ಒಪ್ಪಾಗಲಿಲ್ಲ. ಭೀಷ್ಮದ್ರೋಣರು ಗುರುಗಳು; ಅವರನ್ನು ಬಾಣದಿಂದ ಹೊಡೆಯುವದೆ? ಅದು ಧರ್ಮವು ಹೇಗಾದೀತು? ಯುದ್ಧದಲ್ಲಿ ಗೆಲ್ಲುವೆವೋ ಶತ್ರುಗಳೇ ಗೆಲ್ಲುವರೋ ಹೇಳುವದಕ್ಕಿಲ್ಲ. ಚಂಚಲವಾಗಿರುವ ಯುದ್ಧಸಿದ್ಧಿಯನ್ನು ಮನಸ್ಸಿನಲ್ಲಿಟ್ಟು ಹೇಗೆ ಹೋರಾಡಲಿ? ಒಂದು ವೇಳೆ ನಾವೇ ಜಯಿಸುವೆವೆಂದಿಟ್ಟುಕೊಂಡರೂ ನಾವು ಮುಂದೆ ಅನುಭವಿಸುವ ಭೋಗಗಳಿಗೆ ಹತರಾದ ಬಾಂಧವರ ರಕ್ತವೇ ಬಳಿದುಕೊಂಡಿರುವದಲ್ಲ! ಅವನ್ನು ನಾವು ಅನುಭವಿಸಬಹುದೆ? ಹೀಗೆಂದು ಬಗೆಬಗೆಯಾಗಿ ಚಿಂತಿಸುತ್ತ ಯುದ್ಧವನ್ನು ಮಾಡಲೊಲ್ಲೆನು— ಎಂದು ಸುಮ್ಮನಾಗಿಬಿಟ್ಟನು.

ನಾವೆಲ್ಲರೂ ಹೀಗೆಯೇ. **ಅರ್ಜುನನಿಗೆ ಬಂದಂತೆಯೇ ನಮಗೆ ಆಗಿಂದಾಗ್ಗೆ ಬೇರೆಬೇರೆಯ ಭಾವಗಳು ಬರುವವು; ಅವು ಯಾವಾಗ ಏನು ಮಾಡಬೇಕೆಂಬುದನ್ನು ಮರೆಯುವಂತೆ ಮಾಡಿಬಿಡುವವು.** ಅರ್ಜುನನು "ಯುದ್ಧಕ್ಕಿಂತ ಭಿಕ್ಷಾಟನವು ಮೇಲು" ಎಂದು ಕೂಡ ಒಂದು ಸಲ ಆಡಿರುತ್ತಾನೆ! **ಹೀಗೆಯೇ ನಾವೂ ನಮ್ಮ ಮನಸ್ಸಿನ ಭಾವಗಳ ಉದ್ರೇಕಗಳಿಂದ ನಮ್ಮ ಕರ್ತವ್ಯವನ್ನು ಬಿಡುವದಲ್ಲದೆ ಮಾಡಬಾರದ ಕರ್ಮವನ್ನೂ ಮಾಡಬಹುದೆಂದು ಬಗೆಯುವೆವು. ಆದ್ದರಿಂದ ಅರ್ಜುನವಿಷಾದಯೋಗವು ಜೀವರುಗಳಿಗೆ ಆಗುವ ಮನಃಸ್ಥಿತಿಯ ಬದಲಾವಣೆಗಳನ್ನೇ ವರ್ಣಿಸುತ್ತದೆ ಎಂದು ತಿಳಿಯಬೇಕು. ಇಂಥಿಂಥ ಸಂದರ್ಭದಲ್ಲಿ ಹೇಗೆ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಗೀತೆಯ ಉಪದೇಶದಿಂದ ನಾವೆಲ್ಲರೂ ಅರಿತುಕೊಳ್ಳಬಹುದು. ಆದ್ದರಿಂದ ಭಗವದ್ಗೀತೆಯನ್ನು ನಮ್ಮ ಜೀವನಸೂತ್ರವಾಗಿ ಮಾಡಿಕೊಳ್ಳಬೇಕು.** ಅರ್ಜುನ ವಿಷಾದಯೋಗವು ಇದನ್ನು ನೆನಪಿಗೆ ತರುವದಕ್ಕಾಗಿ ಬಂದಿದೆ.

# ೪. ಗೀತೋಪದೇಶದ ಉದ್ದೇಶ ೨-(೮-೧೧)

(೩೦.೬.೪೬)

ಅರ್ಜುನನು ಯುದ್ಧವನ್ನು ಮಾಡೆನೆಂದು ಸುಮ್ಮನೆ ಕುಳಿತುಬಿಟ್ಟದ್ದನ್ನು ಕಂಡು ಶ್ರೀಕೃಷ್ಣನು ಅರ್ಜುನನ ಕ್ಷಾತ್ರಸ್ವಭಾವವನ್ನು ಉದ್ರೇಕಗೊಳಿಸಿ ಯುದ್ಧಕ್ಕೆ ನಿಲ್ಲಿಸುವದಕ್ಕೆ ಮಾಡಿದ ಪ್ರಯತ್ನವು ವಿಫಲವಾಯಿತು. ಧರ್ಮಯುದ್ಧವನ್ನೇ ಪಾಪಕೃತ್ಯವೆಂದು ಅರ್ಜುನನು ಬಗೆದನು; ಪರಧರ್ಮವಾದ ಭಿಕ್ಷಾವೃತ್ತಿಯಾದರೂ ಅದಕ್ಕಿಂತ ಮೇಲೆಂದು ಅವನಿಗೆ ತೋಚಿತು. ಆದರೆ ಅರ್ಜುನನಲ್ಲಿ ಮೊದಲಿನಿಂದ ಮೂಡಿಬಂದಿದ್ದ ವೀರಸ್ವಭಾವವು ಅವನನ್ನು ಹಾಗೆಯೇ ಇರಗೊಡಿಸಲೊಲ್ಲದು; ಸ್ವಜನದಲ್ಲಿರುವ ಮಮತೆಯು ಅವನನ್ನು ಯುದ್ಧಕ್ಕೆ ಬಿಡಲೊಲ್ಲದು! ಹೀಗಾಗಿ ಕ್ಷಾತ್ರಸ್ವಭಾವಕ್ಕೂ ಬಾಂಧವ್ಯಪ್ರೇಮಕ್ಕೂ ಹೋರಾಟವು ಮೊದಲಾಯಿತು. ಈ ಎರಡು ಭಾವಗಳ ಒಳತೋಟಿಯ ಫಲವಾಗಿ ಈಗ ಮತ್ತೊಂದು ಭಾವವು ಅವನಲ್ಲಿ ಮೊಳೆತುಕೊಂಡಿತು. ಯುದ್ಧವನ್ನು ಮಾಡುವದು ಧರ್ಮವೆ, ಅಧರ್ಮವೆ? ಯುದ್ಧವನ್ನು ಮಾಡಿದರೆ ಭೀಷ್ಮಾದಿಬಂಧುಬಾಂಧವರು ಮಡಿದುಹೋಗಿ ನನ್ನನ್ನು ಶೋಕಸಾಗರದಲ್ಲಿ ಮುಳುಗಿಸಿಬಿಡುವರು! ನಿಃಶತ್ರುವಾದ ರಾಜ್ಯವನ್ನು ಪಡೆದು ಕೊಂಡರೂ, ಕೊನೆಗೆ ದೇವೇಂದ್ರನ ಪದವಿಯನ್ನು ಪಡೆದುಕೊಂಡರಾದರೂ, ಈ ಶೋಕವು ನೀಗೀತೆ? ಈ ಶೋಕವು ನನ್ನ ಇಂದ್ರಿಯಗಳನ್ನೆಲ್ಲ ಸೊರಗಿಸಿಬಿಡುವದು; ಆ ಬಳಿಕ ಏತರ ಭೋಗ? ಯುದ್ಧವು ನನಗೆ ನಿಜವಾಗಿ ಧರ್ಮವೆ? ಹಾಗಾದರೆ ಅದನ್ನು ಮಾಡದೆ ಬಿಟ್ಟರೆ ಇಹಪರದಲ್ಲಿ ನನಗೆ ಸದ್ಗತಿಯಾದೀತೆ?—ಎಂದು ಯೋಚಿಸುವದಕ್ಕೆ ಮೊದಲುಮಾಡಿದನು.

ಸ್ವಜನರ ಮೇಲಿನ ಮೋಹದಿಂದ "ಇವರು ನನ್ನವರು, ನಾನು ಇವರವನು; ಯುದ್ಧದಲ್ಲಿ ನಮ್ಮಿಬ್ಬರ ಈ ಗಾಢವಾದ ಬಾಂಧವ್ಯವು ಕಡಿದುಹೋಗುತ್ತದೆ" ಎಂಬ ಯೋಚನೆಯುಂಟಾಗಿ ಶೋಕಾವಿಷ್ಟನಾದ ಅರ್ಜುನನಿಗೆ ಧರ್ಮವು ಯಾವದು, ಅಧರ್ಮವು ಯಾವದು- ಎಂಬುದು ತಿಳಿಯದಾಗಿದೆ. ಈಗ ಅವನು "ಕೃಷ್ಣ, ನನಗೆ ಧರ್ಮವು ಯಾವದೆಂಬುದು ತಿಳಿಯದೆ ದಿಗ್ಭ್ರಾಂತಿಯಾಗಿದೆ. ಇಂಥ ದುಃಸ್ಥಿತಿಯಲ್ಲಿ ನಾನೇನು ಮಾಡಬೇಕು? ನೀನೇ ನನಗೆ ತಿಳಿಯಹೇಳಬೇಕು. ನಾನು ನಿನ್ನ ಶಿಷ್ಯನೆಂದು ಭಾವಿಸಿ ನಿಜವನ್ನು ನನಗೆ ಹೇಳು. ನನ್ನ ಸ್ನೇಹದ ಮೇಲಾಗಲಿ ನೆಂಟತನದ ಮೇಲಾಗಲಿ ಬೆಲೆಯನ್ನಿಡದೆ ಶಿಷ್ಯನಿಗೆ ಗುರುವು ಹೇಳಬೇಕಾದ ಉಪದೇಶವನ್ನು ಮಾಡು!" ಎಂದು ಅಂಗಲಾಚಿ ಬೇಡಿಕೊಳ್ಳುತ್ತಿದ್ದಾನೆ?

**ಈ ಭಾವವು ಬಹಳ ಮುಖ್ಯವಾದದ್ದು. ಕ್ಷಾತ್ರಸ್ವಭಾವವಾಗಲಿ ಸ್ವಜನರಲ್ಲಿಡುವ ಪರಮಕೃಪೆಯಾಗಲಿ ಧರ್ಮದ ತತ್ತ್ವವನ್ನು ತಿಳಿಯುವದಕ್ಕೆ ಎಂದಿಗೂ ಸಹಾಯಕವಾಗಲಾರವು. ಅರ್ಜುನನಿಗೆ ಪೂರ್ವಪುಣ್ಯದ ಪರಿಪಾಕದಿಂದ ಈಗ ಶಿಷ್ಯಭಾವವು ಬಂದೊದಗಿದೆ. ಇನ್ನು ಮುಂದೆ ಅವನು ಪೂರ್ಣವಾಗಿ ಮಾರ್ಪಟ್ಟಿರುತ್ತಾನೆ. ಶಿಷ್ಯನೆಂದರೆ ಗುರುಗಳ ಕೈಯಿನ ಮಗುವಿನಂತೆ;** ಅವರ ಆಧೀನ, ಅವರು ಏನುಮಾಡೆಂದರೆ ಅದನ್ನು ಮಾಡುವದಕ್ಕೆ ಸಿದ್ಧ. ಶಿಷ್ಯನು ಗುರುಶುಶ್ರೂಷೆಯನ್ನು ಮಾಡಬೇಕೆಂದು ಶಾಸ್ತ್ರದಲ್ಲಿ ಹೇಳಿರುವದು ಏತಕ್ಕೆ? ಗುರುಗಳ ಬಳಿಯಲ್ಲಿದ್ದುಕೊಂಡು ಅವರ ಚಾಕರಿಮಾಡುತ್ತಿದ್ದರೆ ಶುಶ್ರೂಷೆಯಾಯಿತೆಂದು ಎಂದಿಗೂ ಭಾವಿಸಬಾರದು. **ಶುಶ್ರೂಷೆಯ ಮುಖ್ಯ ಮರ್ಮವು ಯಾವದೆಂದರೆ ಶಿಷ್ಯನು ತನ್ನ ವ್ಯಕ್ತಿತ್ವವನ್ನು ಕಳಚಿಹಾಕುವದೇ.** ಅರ್ಜುನನು ಈ ಸ್ಥಿತಿಯನ್ನು ಹೊಂದಿದ್ದಾನೆ. ಭಗವಂತನು ಈ ಸಂದರ್ಭಕ್ಕೆ ತಕ್ಕ ಉಪದೇಶವನ್ನು ಕೊಡುವದಕ್ಕೆ ಮೊದಲುಮಾಡಿದ್ದಾನೆ.

ಭಗವಂತನು ಅರ್ಜುನನ ಸ್ಥಿತಿಯನ್ನು ಚೆನ್ನಾಗಿಬಲ್ಲವನು. ಅವನಿಗೆ ಸಣ್ಣ ಪುಟ್ಟ ಕಾರಣಗಳನ್ನು ಹೇಳಿ ಯುದ್ಧದಲ್ಲಿ ತೊಡಗುವಂತೆ ಮಾಡುವದು ಆಗದ ಕೆಲಸವೆಂಬುದು ಆತನಿಗೆ ಗೊತ್ತು. ಅರ್ಜುನನು ಯಾವ ರಾಜ್ಯದ ಆಸೆಯಿಂದಲೂ ಯುದ್ಧಕ್ಕೆ ಕೈಹಾಕುವಂತಿಲ್ಲ; ಯಾವ ಕೀರ್ತಿಗೂ ಆಸೆಪಟ್ಟು ಯುದ್ಧವನ್ನು ಮಾಡುವಂತಿಲ್ಲ! ಶತ್ರುಗಳು ತನ್ನ ಮೇಲೆ ಬಿದ್ದರೂ ಯುದ್ಧಮಾಡುವದಿಲ್ಲವೆಂದಿದ್ದಾನೆ! ಹೆಚ್ಚಿನ ರೋಗವಿರುವಾಗ ಸಣ್ಣಪುಟ್ಟ ಚಿಕಿತ್ಸೆಗಳು ಹೇಗೆ ಕೆಲಸಕ್ಕೆ ಬರುವದಿಲ್ಲವೋ ಹಾಗೆ ಶೋಕಮೋಹಗಳಿಂದ ಧರ್ಮಾಧರ್ಮವಿವೇಕವಿಲ್ಲದೆ ಕುಳಿತಿರುವ ಅರ್ಜುನನಿಗೆ ಆತ್ಮವಿದ್ಯೆಯ ಹೊರತು ಮತ್ತೆ ಯಾವದೂ ಉದ್ಧಾರಕವಾಗಲಾರದು ಎಂದು ಖಚಿತವಾಗಿ ಗೊತ್ತಾಗಿದೆ. ಆದ್ದರಿಂದ ಭಗವಂತನು ಈ ಗೀತೋಪದೇಶವನ್ನು ಪ್ರಾರಂಭಿಸಿರುತ್ತಾನೆ.

ಗೀತೋಪದೇಶವು ಈಗಲೂ ನಮಗೆಲ್ಲರಿಗೂ ಬೇಕಾಗಿರುತ್ತದೆ ಎಂಬುದಕ್ಕೆ ಇದೇ ಕಾರಣ. ಲೋಕದಲ್ಲಿ ಸಂಸಾರಿಗಳಿಗೆಲ್ಲ ಶೋಕಮೋಹಗಳ ಕಾಟವು ಇದ್ದೇ ಇರುತ್ತದೆ. ಅರ್ಜುನನು ರಾಜ್ಯದ ನಿಮಿತ್ತದಿಂದ ಯುದ್ಧದಲ್ಲಿ ತೊಡಗಿದ್ದಾಗ ಈ ಶೋಕಮೋಹಗಳು ತೋರಿಕೊಂಡವು. ನಮ್ಮಗಳಿಗೆ ಯುದ್ಧದ ಪ್ರಸಕ್ತಿಯಿಲ್ಲದೆ ಇರಬಹುದು; ನಮ್ಮ ವ್ಯವಹಾರದಲ್ಲಿ ಶೋಕಮೋಹಗಳಿಂದ ಪ್ರೇರಿತರಾಗಿಯೇ ನಾವುಗಳೆಲ್ಲರೂ ವರ್ತಿಸುತ್ತಿರುವೆವೆಂಬುದು ಖಂಡಿತ. ಶೋಕಮೋಹಗಳ ಆವೇಶವುಳ್ಳವರಿಗೆ ಇದು ಧರ್ಮ, ಇದು ಅಧರ್ಮ-ಎಂಬುದು ತಿಳಿಯುವದಿಲ್ಲ. ಅಧರ್ಮವನ್ನಾದರೂ ಮಾಡಿ ತಮ್ಮ ಮನಸ್ಸಿಗೆ ಸಮಾಧಾನವನ್ನುಂಟುಮಾಡಿಕೊಳ್ಳ

ಬೇಕೆಂದು ಅವರು ಯೋಚಿಸುವರು. ಒಂದು ವೇಳೆ ಧರ್ಮವನ್ನೇ ಮಾಡುವದಕ್ಕೆ ಹೊರಟರೂ ಫಲಾಸಕ್ತಿಯಿಂದ ಮಾಡುವರು; ಪರರ ಧರ್ಮವೂ ಧರ್ಮವಾದ್ದರಿಂದ ಅದನ್ನೂ ಮಾಡಬಹುದು ಎಂದು ಅವರು ಬಗೆಯುವರು! ಲೌಕಿಕವ್ಯವಹಾರದಲ್ಲಿಯೇ ಅಧಿಕಾರಿಯು ಜವಾನನಂತೆ ವರ್ತಿಸಿದರೆ ಎಷ್ಟು ಅನರ್ಥವಾದೀತು! ಇನ್ನು ಶಾಸ್ತ್ರೀಯಕರ್ಮಗಳ ವಿಷಯದಲ್ಲಿ ಸ್ವಧರ್ಮಪರಧರ್ಮಗಳ ವ್ಯವಸ್ಥೆ ತಪ್ಪಿದರೆ ಅನರ್ಥವಾಗುವದೆಂದು ಹೇಳಬೇಕೆ? ಆದ್ದರಿಂದ ಶೋಕಮೋಹಗಳೇ ಸಂಸಾರದ ಸರ್ವಾನರ್ಥಗಳಿಗೂ ಮೂಲವಾಗಿರುತ್ತವೆ.

ಆದರೆ ನಮ್ಮಲ್ಲಿ ಬಹುಜನರಿಗೆ ಈ ಗುಟ್ಟು ತಿಳಿಯದೆ ಇದೆ. ಆದರೂ ನಾವು ಮಾಡುವದೇ ಸರಿ- ಎಂದುಕೊಂಡು ಮತ್ತೊಬ್ಬರು ನಮಗೆ ಉಪದೇಶಮಾಡುವದಕ್ಕೆ ಬಂದರೂ ಅವರ ಮಾತನ್ನು ಅಸಡ್ಡೆಯಿಂದ ಕಡೆಗಣಿಸುತ್ತೇವೆ. ನಮ್ಮಲ್ಲಿ ಕೆಲವರು **ವಿಷಯಿಗಳು;** ವಿಷಯಭೋಗದಿಂದ ಸುಖವಾಗುವದೆಂದು ನಂಬಿ ಅದಕ್ಕಾಗಿ ಏನಾದರೂ ಮಾಡಿ ಸುಖವನ್ನು ಸಂಪಾದಿಸಿಕೊಳ್ಳಬೇಕೆಂದು ಹವಣಿಸುತ್ತಿರುವವರು. ಹಲವರು **ಪಾಮರರು,** ಸುಖದುಃಖಗಳು ಹೇಗೆ ಆಗುತ್ತವೆ ಎಂಬ ಯೋಚನೆಯನ್ನು ಕೂಡ ಮನಸ್ಸಿಗೆ ಹತ್ತಿಸಿಕೊಳ್ಳದೆ ಆಯಾಕಾಲಕ್ಕೆ ಒದಗಿದ ಸುಖದುಃಖಗಳನ್ನು ಅನುಭವಿಸುತ್ತಿರುವ ಮೂಢರು! ಈ ಎರಡು ವರ್ಗದ ಜನರಲ್ಲದೆ ನಮ್ಮಲ್ಲಿ ಕೆಲವರು ಮುಮುಕ್ಷುಗಳೂ ಇರುತ್ತಾರೆ. "ನಮಗೆ ಸಂಸಾರಗಳಲ್ಲಿ ಹಲವು ಭಾವಗಳು ಮೇಲ್ಲಾಯ್ದು ಬಂದು ಸುಖದುಃಖಗಳನ್ನು ಉಂಟುಮಾಡುತ್ತಿರುವವು. ಈ ಭಾವಗಳಿಗೆ ಸಿಕ್ಕಿಬಿದ್ದು ನಾವು ನರಳಿ ನರಳಿ ಸಾಕಾಗಿರುವೆವು. ಈ ಸಂಸಾರದ ಸುಖದುಃಖಗಳ ಅಲೆಗಳ ಹೊಡೆತದಿಂದ ಪಾರಾಗುವದಕ್ಕೆ ತತ್ತ್ವಜ್ಞಾನವು ಬೇಕೆಂದೂ ಅದರ ಸಹಾಯದಿಂದ ವ್ಯವಹಾರದಲ್ಲಿ ಕಾಣಬರುವ ಅನರ್ಥಗಳಿಂದ ಪಾರಾಗಿರುವ ಮುಕ್ತರು ಕೆಲವರು ಇರುವರೆಂದೂ ಗುರುಹಿರಿಯರು ಹೇಳುತ್ತಿದ್ದಾರೆ, ಶಾಸ್ತ್ರಗಳು ಸಾರುತ್ತಿವೆ! ಆದ್ದರಿಂದ ಇಂಥ ತತ್ತ್ವವನ್ನು ನಾವೂ ತಿಳಿದುಕೊಂಡು ಉದ್ಧಾರ ವಾಗಬೇಕು!" ಎಂದು ಹವಣಿಸುವವರೇ **ಮುಮುಕ್ಷುಗಳು.** ಅರ್ಜುನನು ಈಗ ಮುಮುಕ್ಷುವಾಗಿರುತ್ತಾನೆ. ಶ್ರೀ ಕೃಷ್ಣಭಗವಂತನು ಅವನಿಗೆ ಶೋಕಮೋಹಗಳನ್ನು ನೀಗುವ ಅಧ್ಯಾತ್ಮವಿದ್ಯೆಯನ್ನು ಉಪದೇಶಿಸುವದಕ್ಕೆ ಹೊರಟಿದ್ದಾನೆ.

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚನ್ತಿ ಪಣ್ಡಿತಾಃ ॥** (೨-೧೧)

ಇದು ಭಗವಂತನ ಉಪದೇಶದ ಪ್ರಾರಂಭಶ್ಲೋಕವು. "ಅರ್ಜುನನೆ, ನೀನು ಶೋಕಮಾಡಬಾರದವರಿಗಾಗಿ ಶೋಕಮಾಡುತ್ತಿದ್ದೀಯೆ, ಪ್ರಜ್ಞಾವಂತರ ಮಾತುಗಳನ್ನೂ

ಆಡುತ್ತಿರುತ್ತೀಯೆ! ನಿನ್ನ ವರ್ತನೆಯಲ್ಲಿ ಹೀಗೆ ಪರಸ್ಪರ ವಿರುದ್ಧವಾದ ಪಾಂಡಿತ್ಯವೂ ಮೌರ್ಖ್ಯವೂ ಒಮ್ಮೆಗೇ ಕಾಣಬರುತ್ತಿವೆ, ನೋಡಿದೆಯ! ಪ್ರಜ್ಞಾವಂತರಾದ ಮಹನೀಯರು, ಶಾಸ್ತ್ರದಿಂದಲೂ ಗುರುಗಳಿಂದಲೂ ಆತ್ಮತತ್ತ್ವವನ್ನು ತಿಳಿದುಕೊಂಡು ಕೃತಕೃತ್ಯರಾಗಿರುವ ಮಹಾತ್ಮರು, ಎಂದಿಗೂ ಯಾರಿಗಾಗಿಯೂ ಶೋಕಿಸುವದಿಲ್ಲ! "ಆತ್ಮನ ನಿಜವನ್ನು ತಿಳಿದವರಿಗೆ ಎಲ್ಲಿಯ ಶೋಕವು, ಎಲ್ಲಿಯ ಮೋಹವು!" ಎಂದು ಶ್ರುತಿಯು ಸಾರುತ್ತಿರುವದು. ನೀನು ಜ್ಞಾನಿಗಳು ಆಡಬೇಕಾದ ಧರ್ಮಾಧರ್ಮಗಳ ವಿವೇಚನೆಯ ಮಾತುಗಳನ್ನೂ ಆಡುತ್ತಿರುವೆ; ಶೋಕದಿಂದ ಆವಿಷ್ಟನಾಗಿ ಅದರಿಂದ ಪಾರಾಗುವದು ಹೇಗೆ? ಎಂದೂ ಚಿಂತಿಸುತ್ತಿರುವೆ. ನಿನಗೆ ಭೀಷ್ಮಾದಿಗಳ ಮತ್ತು ನಿನ್ನ ಆತ್ಮನ ನಿಜವು ತಿಳಿಯದು; ಅಷ್ಟೇ ಅಲ್ಲ. ಅದರ ಸ್ವರೂಪದ ವಿಷಯಕ್ಕೆ ತಪ್ಪುತಿಳಿವಳಿಕೆಯೂ ನಿನ್ನನ್ನು ಆವರಿಸಿಕೊಂಡಿರುತ್ತದೆ. ಇದೇ ಮೋಹವು. ಈ ಮೋಹದಿಂದ ನಿನಗೆ ಪೂಜ್ಯರಾದ ಭೀಷ್ಮದ್ರೋಣಾದಿಗಳ ವಿಷಯದಲ್ಲಿ ಕೂಡ ಶೋಕವುಂಟಾಗಿರುತ್ತದೆ. ಜ್ಞಾನಿಗಳಾದ ಭೀಷ್ಮರು ನಿನ್ನಂತೆ ಶೋಕಿಸುತ್ತಿರುವರೆ? ದ್ರೋಣರು ಶೋಕಿಸುತ್ತಿರುವರೆ? ಇಲ್ಲ. ಆದ್ದರಿಂದ ನೀನು ಜ್ಞಾನಿಗಳ ದೃಷ್ಟಿಯನ್ನು ಅವಲಂಬಿಸು. ಆಗ ಧರ್ಮಾಧರ್ಮಗಳ ವಿಷಯದಲ್ಲಿ ತಪ್ಪುತಿಳಿವು ಎಂದಿಗೂ ಉಂಟಾಗುವದಿಲ್ಲ." ಇದು ಭಗವಂತನ ಉಪದೇಶವು.

ಗೀತೆಯನ್ನು ಪಾರಾಯಣಮಾಡುವವರು ಈ ಶ್ಲೋಕದ ಅರ್ಥವನ್ನು ಗೀತಾಮಂತ್ರದ ಬೀಜ ಎಂದು ಭಾವಿಸಿರುತ್ತಾರೆ. ಭಗವಂತನು ಶೋಕಮೋಹಗಳನ್ನು ತೊಲಗಿಸುವದಕ್ಕಾಗಿಯೇ ಹೊರಟಿರುತ್ತಾನೆಂಬುದು ಈ ಶ್ಲೋಕಾರ್ಥದಲ್ಲಿ ಬೀಜ ರೂಪವಾಗಿ ಕಾಣಿಸುತ್ತಿದೆ. ಇದರಿಂದ ಇನ್ನು ಗೀತೋಪದೇಶದ ವೃಕ್ಷವು ಬೆಳೆದುಕೊಳ್ಳಲಿದೆ! ಮುಮುಕ್ಷುಗಳಾದವರು ಈ ಉಪದೇಶವನ್ನು ಸಾವಧಾನವಾಗಿ ಕೇಳಿ ಮನಸ್ಸಿಗೆ ಅಳವಡಿಸಿಕೊಳ್ಳಬೇಕು. ಅಂಥವರಿಗೆ ಸಂಸಾರಕ್ಕೆ ಬೀಜವಾಗಿರುವ ಶೋಕಮೋಹಗಳು ಹೇಳಹೆಸರಿಲ್ಲದಂತೆ ನಾಶವಾಗಿಬಿಡುವವು.

## ೫. ನಮಗೆ ಎಂದಿಗೂ ಸಾವಿಲ್ಲ ೨-(೧೨-೧೫)

(೨೧.೭.೧೯೪೬)

ಈ ಉಪನ್ಯಾಸಮಾಲೆಗೆ ಎರಡು ವಾರಗಳ ವಿಚ್ಛಿತ್ತಿಯಾಗಿದೆ. ಆದ್ದರಿಂದ ಹಿಂದಿನ ಸಂಗತಿಯನ್ನು ಸ್ವಲ್ಪ ನೆನಪಿಗೆ ತಂದುಕೊಳ್ಳುವದು ಒಳ್ಳೆಯದು. ಮನುಷ್ಯನು ಹರ್ಷದಿಂದ ಹಿಗ್ಗಿರುವಾಗ ತನ್ನ ಮನಸ್ಸಿಗೆ ತೋಚಿದಂತೆ ನಡೆಯುವ ಉದ್ವೃತ್ತಭಾವವು

ಅವನಲ್ಲಿ ಕಾಣಿಸಿಕೊಂಡಿರುತ್ತದೆ. ಆದರೆ ಅವನ ಮುನ್ನಡೆಗೆ ದಾಟಲಶಕ್ಯವಾದ ಅಡ್ಡಿ ಯಾವದಾದರೂ ಬಂದರೆ, ಅವನ ಮನೋರಥಕ್ಕೆ ಭಂಗವಾದರೆ, ವಿಷಾದದಿಂದ ಕುಗ್ಗಿ ಶೋಕದ ಭಾರಕ್ಕೆ ಕುಸಿದು ಕೂತು ಏನೂ ತೋಚದೆ ಸುಮ್ಮನಿರುವ ಭಾವವು ಅವನ ಮನಸ್ಸಿನಲ್ಲಿ ಮನೆಮಾಡಿಕೊಳ್ಳುತ್ತದೆ. ಇಂಥ ಹಿಗ್ಗು ಕುಗ್ಗುಗಳ, ಏಳುಬೀಳುಗಳ, ಪರಂಪರೆಗೆ ಸಿಕ್ಕಿಬಿದ್ದು ನರಳುತ್ತಿರುವದೇ ಬಹುಜನರ ಪಾಡು. ಎಷ್ಟು ಜನ್ಮಗಳು ಕಳೆದರೂ ಮನಸ್ಸಿನಲ್ಲಿ ಮಾರ್ಪಾಡಾಗದೆ, ಈ ಗಾಳಿಯ ಹೊಡೆತಕ್ಕೂ ಪ್ರವಾಹದ ಸೆಳವಿಗೂ ಸಿಕ್ಕಿ ಕೊಚ್ಚಿಕೊಂಡು ಹೋಗುತ್ತಿರುವದೇ ಸಾಮಾನ್ಯಜನರ ಸ್ವಭಾವ. ಆದರೆ ಕೆಲಕೆಲವರಿಗೆ ಈ ಹಿಗ್ಗುಕುಗ್ಗುಗಳ ನಡುವೆ ಮತ್ತೊಂದು ಮನಸ್ಸಿನ ಭಾವವು ಎದ್ದುಕೊಳ್ಳುತ್ತದೆ. “ಇಂಥ ಸಮಯದಲ್ಲಿ ನನ್ನ ನಿಜವಾದ ಕರ್ತವ್ಯವು ಯಾವದು? ಸುಂಟರುಗಾಳಿಯ ಹೊಡೆತಕ್ಕೆ ಸಿಕ್ಕಿ ಕಂಡಕಡೆಗೆ ಹಾರಾಡಿಕೊಂಡು ಹೋಗುವ ತರಗೆಲೆಯಾಗಿರುವದು ನನಗೆ ಇಷ್ಟವಿಲ್ಲ; ನನ್ನ ಕರ್ತವ್ಯವನ್ನರಿತುಕೊಂಡು ನಾನು ಅದನ್ನೇ ಮಾಡಿಬಿಡುವೆನು! ಶತಾಯುವಾಗಲಿ ಗತಾಯುವಾಗಲಿ, ಧರ್ಮವೇ ನನಗೆ ಬೇಕು. ಅದನ್ನು ಹೇಳಿಕೊಡುವಾತನೇ ನನಗೆ ಗುರು; ನಾನು ಅಂಥವನ ಶಿಷ್ಯನಾಗಿ ಅವರ ಸೇವೆಯಿಂದ ಧರ್ಮವನ್ನೇ ತಿಳಿದುಕೊಂಡು ಅದನ್ನೇ ಮಾಡುವೆನು.” ಈ ಭಾವವು ಯಾವನ ಮನದಲ್ಲಿ ಮೂಡುವದೋ ಅವನು ಉಪದೇಶಕ್ಕೆ ಅಧಿಕಾರಿ. ಅಂಥವನಿಗೆ ಜ್ಞಾನಿಗಳು ಅವಶ್ಯವಾಗಿ ನಿಜವನ್ನು ಹೇಳಿಕೊಡುವರು.

ಈ ಮೇಲೆ ಹೇಳಿದ ಮೂರು ಭಾವಗಳೂ ಅರ್ಜುನನಿಗೆ ಕುರುಕ್ಷೇತ್ರದಲ್ಲಿ ಒಂದಾಗುತ್ತಲೊಂದು ಕಾಣಿಸಿಕೊಂಡವು. “ಶ್ರೀ ಕೃಷ್ಣನೆ, ನಾನು ಧರ್ಮಸಮ್ಮೂಢ ಚಿತ್ತನಾಗಿರುವೆನು! ಈ ಸಂದರ್ಭದಲ್ಲಿ ನಾನು ಯುದ್ಧಮಾಡಿ ಗುರುಹಿರಿಯರನ್ನೂ ಬಂಧುಬಾಂಧವರನ್ನೂ ಕೊಂದಾದರೂ ರಾಜ್ಯಭಾರವನ್ನು ಮಾಡುವದು ಮೇಲೋ, ಅಥವಾ ತಿರಿದುಂಡರೂ ಚಿಂತೆಯಿಲ್ಲ, ಇಂಥ ಹಿಂಸಾಮಯವಾದ ಯುದ್ಧದ ಫಲವಾದ ರಾಜ್ಯಭೋಗವೂ ಬೇಕಿಲ್ಲವೆಂದು ಹಿಮ್ಮೆಟ್ಟುವದೇ ಮೇಲೊ? ನಿನ್ನನ್ನು ಶರಣುಹೊಕ್ಕಿರುವ ನನಗೆ ನೀನು ನಿಜವನ್ನು ಉಪದೇಶಿಸಬೇಕು” ಎಂದು ಕೇಳಿಕೊಂಡನು.

**ಅರ್ಜುನನ ಮನಃಸ್ಥಿತಿಗೆ ಮೂಲವಾಗಿರುವ ಶೋಕಮೋಹಗಳನ್ನು ಕಳೆದ ಹೊರತು ಬರಿಯ ಧರ್ಮೋಪದೇಶದಿಂದ ಅವನ ಚಿಂತೆಯ ಭಾರವು ಇಳಿಯುವ ಹಾಗಿಲ್ಲವೆಂದು ಭಗವಂತನು ಮನಗಂಡವನಾಗಿ ಅವನಿಗೆ ಶೋಕಮೋಹಾದಿದೋಷಗಳನ್ನು ಬುಡಮಟ್ಟ ಕಿತ್ತುಹಾಕುವ ತತ್ತ್ವೋಪದೇಶವನ್ನು ಪ್ರಾರಂಭಿಸಿದನು.** ಅರ್ಜುನನು ಕೇಳಿದ್ದು ಬರಿಯ ಧರ್ಮವಿಚಾರವನ್ನೇ ಆದರೂ

ವಿಧಿನಿಷೇಧರೂಪವಾದ ಧರ್ಮದ ಉಪದೇಶದಿಂದ ಅರ್ಜುನನ ಮನಸ್ಸು ಸುಧಾರಿಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಶಾಸ್ತ್ರದಲ್ಲಿ ಹೇಳಿರುವ ಧರ್ಮವನ್ನು ಮಾಡಬೇಕೆಂಬುದು ಅರ್ಜುನನಿಗೆ ತಿಳಿಯದೆ ಇರಲಿಲ್ಲ; ಧರ್ಮಯುದ್ಧವನ್ನು ಮಾಡುವದೇ ಯುಕ್ತವೆಂದು ಆತನಿಗೆ ನಿಶ್ಚಯವಾಗಿದ್ದದ್ದರಿಂದಲೇ ಈಗ ಅವನು ರಥವನ್ನೇರಿ ತನ್ನ ಸೈನ್ಯದ ಮುಂಭಾಗಕ್ಕೆ ಬಂದಿದ್ದನು. ಆದರೆ ಸ್ವಜನರನ್ನೂ ಗುರುಗಳನ್ನೂ ಕೊಲ್ಲುವದು ಧರ್ಮವಾದೀತೆ? ಇಂಥ ವರ್ತನೆಯನ್ನು ಬೋಧಿಸುವದು ಶಾಸ್ತ್ರಾರ್ಥವೆನಿಸೀತೆ?- ಎಂದು ಈಗ ಅವನ ಮನದಲ್ಲಿ ಒಂದು ಸಂದೇಹವು ಎದ್ದುಕೊಂಡುಬಿಟ್ಟಿತು. ಆದ್ದರಿಂದ **ಅವನು ಕೇಳಿದ ಪ್ರಶ್ನೆಗೆ ವಿಧಿನಿಷೇಧಗಳ ಆಧಾರವಾಗಿರುವ ತತ್ತ್ವವನ್ನು ತಿಳಿಸಿದಲ್ಲದೆ ಪೂರ್ಣವಾದ ಉತ್ತರವನ್ನು ಕೊಟ್ಟಂತೆ ಆಗುವಂತಿರಲಿಲ್ಲ.** ಆದ್ದರಿಂದಲೇ ಶ್ರೀಶಂಕರಾಚಾರ್ಯರವರು "ಮಿಥ್ಯಾಜ್ಞಾನದಿಂದ ದೊಡ್ಡ ಶೋಕಸಾಗರದಲ್ಲಿ ಮುಳುಗಿರುವ ಅರ್ಜುನನಿಗೆ ಆತ್ಮಜ್ಞಾನದ ಹೊರತು ಬೇರೆ ಯಾವದೂ ಉದ್ಧಾರಕವಾಗಲಾರದೆಂದರಿತು ಆ ಸಾಗರದಿಂದ ಅರ್ಜುನನನ್ನು ಎತ್ತಬೇಕೆಂದು ಕೃಪೆಯಿಂದ ಭಗವಂತನು ಆತ್ಮಜ್ಞಾನಕ್ಕೆ ಅವತರಣಿಕೆಯನ್ನು ಮಾಡಿರುತ್ತಾನೆ" ಎಂದು ತಮ್ಮ ಭಾಷ್ಯದಲ್ಲಿ ಬರೆದಿರುತ್ತಾರೆ.

ತತ್ತ್ವಜ್ಞಾನದ ಕಾರ್ಯವೇನೆಂಬುದನ್ನು ನಾವು ಮೊದಲು ತಿಳಿದುಕೊಳ್ಳಬೇಕು. ನಾವುಗಳು ನಮ್ಮಲ್ಲಿರುವ ಮೋಹದಿಂದ ತತ್ತ್ವವನ್ನು ತಪ್ಪಾಗಿ ತಿಳಿದುಕೊಂಡು ಅದರಿಂದ ಬಗೆಬಗೆಯ ಶೋಕವನ್ನು ಅನುಭವಿಸುತ್ತಿರುವೆವು. "ತೋರಮಾಣಿಕವೆಂದು ಪಿಡಿದರೆ ಭೂರಿ ಕೆಂಡವಿದಾಯ್ತು" ಎಂಬ ಕವಿಯ ವಾಕ್ಯದಂತೆ "ಇದು ಉತ್ತಮವಾದದ್ದು, ನನಗೆ ಬೇಕು" ಎಂದು ಅದನ್ನು ಸಂಪಾದಿಸಿಕೊಳ್ಳುವದಕ್ಕೆ ಹೋಗಿ ಅದರ ಪ್ರಾಪ್ತಿಯಿಂದ ದುಃಖವುಂಟಾಗಲು "ಅಯ್ಯೋ! ಹೀಗಾಯಿತಲ್ಲ!" ಎಂದು ಅಳುವೆವು; ಇದು ಕೆಟ್ಟದ್ದೆಂದು ಬಗೆದು ಸರ್ವಪ್ರಯತ್ನದಿಂದಲೂ ಅದನ್ನು ತಪ್ಪಿಸಿಕೊಳ್ಳುವದಕ್ಕೆ ಹವಣಿಸಿ, ಕಡೆಯಲ್ಲಿ "ಅಯ್ಯೋ! ಇದನ್ನು ನಾನಾಗಿಯೇ ಕಳೆದುಕೊಂಡೆನಲ್ಲ!" ಎಂದು ದುಗುಡದಿಂದ ಬಿಸುಸುಯ್ಯುವೆವು. ಇದೇ ಶೋಕಮೋಹಗಳ ಸ್ವರೂಪವು. **"ಮೋಹದಿಂದ ಮಾಡಿದ್ದಕ್ಕೆಲ್ಲ ಶೋಕವೇ ಫಲವು" ಆದ್ದರಿಂದ ಶೋಕದಿಂದ ಪಾರಾಗುವದಕ್ಕೆ ಮೋಹವನ್ನು ಕಳೆದು ಕೊಳ್ಳುವದೇ ಉಪಾಯವು. ತತ್ತ್ವಜ್ಞಾನವು ಮೋಹವನ್ನು ಕಳೆಯುತ್ತದೆ.** ಶಾಸ್ತ್ರವು ಇರುವ ತತ್ತ್ವವನ್ನು ತಿಳಿಸಿ ಮೋಹವನ್ನು ನೀಗುತ್ತದೆ. ಶಾಸ್ತ್ರವು ಎಂದಿಗೂ ಕಾರಕವಲ್ಲ, ನಮ್ಮನ್ನು ಹೀಗೆ ಮಾಡೆಂದು ಕೆಲಸಕ್ಕೆ ತಳ್ಳುವದಿಲ್ಲ; ಮಾಡುವವರು ಯಾವಾಗಲೂ ನಾವೇ, ಶಾಸ್ತ್ರವು ಇದ್ದ ವಿಷಯವನ್ನು ಇದ್ದಂತೆ ತಿಳಿಸುತ್ತದೆ, ಅಷ್ಟೆ.

**ಆದ್ದರಿಂದ ಭಗವಂತನು ಮೊಟ್ಟಮೊದಲು ತತ್ತ್ವಜ್ಞಾನಿಗಳ ಲಕ್ಷಣವನ್ನು ಅರ್ಜುನನ ಮುಂದೆ ಇಟ್ಟಿರುತ್ತಾನೆ.** "ಅರ್ಜುನನೆ, ಯಾರಿಗಾಗಿ ಶೋಕಿಸುವ ಅವಶ್ಯವಿಲ್ಲವೋ, ಅಂಥವರಿಗಾಗಿ ನೀನು ಶೋಕಿಸುತ್ತಿರುವೆ; ಪಂಡಿತರು, ತತ್ತ್ವಜ್ಞಾನಿಗಳು, ಹೀಗೆ ಮಾಡುವದಿಲ್ಲ. ಯಾರು ಇರುವವರಿಗಾಗಿ ಅಥವಾ ಸತ್ತವರಿಗಾಗಿ ಎಂದಿಗೂ ಅಳುವದಿಲ್ಲವೋ, ಯಾರು ಯಾವ ಕಾರಣದಿಂದಲೂ ಶೋಕಕ್ಕೆ ವಶರಾಗಿ ತಮ್ಮ ಕರ್ತವ್ಯವನ್ನು ಮರೆಯದೆ ಇರುವರೋ, ಅವರೇ ನಿಜವಾಗಿ ಪಂಡಿತರು, ಅವರೇ ನಿಜವಾಗಿ ಈ ಜೀವನದಲ್ಲಿರುವ ಸವಿಯನ್ನು ಬಲ್ಲವರು. ನೀನೂ ಜ್ಞಾನಿಗಳ ದೃಷ್ಟಿಯನ್ನು ಅವಲಂಬಿಸಿಕೊ; ಆಗ ನಿನಗೆ ಏನು ಮಾಡಬೇಕೆಂಬುದು ತಾನೇ ಹೊಳೆಯುತ್ತದೆ" ಎಂದು ಭಗವಂತನು ಉಪದೇಶಕ್ಕೆ ಮೊದಲುಮಾಡಿರುತ್ತಾನೆ.

ಅರ್ಜುನನ ಮನಸ್ಸಿನ ಮುಂದೆ ತಾಂಡವವಾಡುತ್ತಿರುವ ಸಮಸ್ಯೆ ಯಾವದು? ಯಾವ ವಿಷಯದಲ್ಲಿ ಅವನಿಗೆ ಮೋಹವುಂಟಾಗಿರುತ್ತದೆ? ಈ ಪ್ರಶ್ನೆಗೆ ಉತ್ತರವನ್ನು ನಾವು ಮೊದಲು ಕಂಡುಕೊಳ್ಳಬೇಕು. "ಈಗ ನಾವು ಒಂದು ಘೋರವಾದ ಯುದ್ಧಕ್ಕೆ ಕೈಹಾಕಿರುವೆವು. ಇದರ ಪರಿಣಾಮವು ಏನೇ ಆಗಲಿ, ನಮ್ಮಲ್ಲಿಯೂ ಶತ್ರುಸೇನೆಯಲ್ಲಿಯೂ ಮುಖ್ಯರಾಗಿರುವ ನಾಯಕರೆಲ್ಲರೂ ಈ ಕಾಳಗದಲ್ಲಿ ಮಡಿದೇ ತೀರುವರು. ನಮ್ಮವರೇ ಆಗಿರುವ, ಮಹಾನುಭಾವರಾದ, ಲೋಕಪ್ರಿಯರಾದ, ಧರ್ಮಾತ್ಮರಾದ ಭೀಷ್ಮದ್ರೋಣಾದಿಗಳೂ ಸಾಯುವರು; ಮಹಾಪಾತಕಿಗಳಾದ ಕುಲದ್ರೋಹಿಗಳಾದ ದುಷ್ಟರೂ ಸಾಯುವರು; ತಮಗೆ ಯುದ್ಧದಿಂದ ಆಗಬೇಕಾದ ಮುಖ್ಯಫಲವು ಯಾವದೂ ಇಲ್ಲದಿದ್ದರೂ ಕೌರವಪಾಂಡವರಲ್ಲಿರುವ ಸ್ನೇಹದಿಂದ ಅವರಿಗೆ ಜಯವನ್ನು ಕೋರಿ ಸಹಾಯಕ್ಕೆ ಬಂದಿರುವ ರಾಜರುಗಳೂ ಸಾಯುವರು. ಬರಿಯ ವೀರರಾದ ನಾಯಕರು ಮಾತ್ರವೇ ಅಲ್ಲ, ಅವರ ಸೈನ್ಯದಲ್ಲಿರುವ ರಥಿಕರು, ಮಾವುತರು, ರಾವುತರು, ಕಾಲಾಳುಗಳು —ಎಲ್ಲರೂ ಲಕ್ಷಗಟ್ಟಲೆಯಾಗಿ ಸಾಯುವರು. ಎಂಥ ಮಾರಣಹೋಮವಿದು!" ಇದೇ ಅರ್ಜುನನ ಮುಂದೆ ಕುಣಿಯುತ್ತಿರುವ ಚಿತ್ರ! ಈ ಭೀಕರದೃಶ್ಯವನ್ನು ಅವನು ಹೇಗೂ ಒರಸಿಕೊಳ್ಳಲಾರನು. ಅದರಿಂದಾಗುವ ಅನರ್ಥಕ್ಕೆಲ್ಲ ತಾನು ಮುಖ್ಯ ಪಾಲುಗಾರನಾಗುವೆನಲ್ಲ! —ಎಂಬ ಚಿಂತೆಯು ಅವನನ್ನು ಒಂದೇ ಸಮನೆ ಕೊರೆಯುತ್ತಿರುವದು.

ಆದ್ದರಿಂದ ಭಗವಂತನು ಈ ಸಾವಿನ ಮೋಹವನ್ನು ಮೊಟ್ಟಮೊದಲು ಕಳೆಯಬೇಕೆಂದು ಪ್ರಾರಂಭಿಸಿರುತ್ತಾನೆ.

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥** (೨-೧೨)

ಅರ್ಜುನನೆ, ಈ ಮೋಹವನ್ನು ಮೊದಲು ಕಳಚಿಕೊ. ನಾವೆಲ್ಲರೂ ಇಷ್ಟರಲ್ಲಿಯೇ ಸಾಯುವೆವೆಂಬ ಹುಚ್ಚುನಂಬಿಕೆಯು ನಿನ್ನನ್ನು ಮುಸುಕಿಕೊಂಡಿರುತ್ತದೆ. ಈ ಕಾರ್ಮೋಡವನ್ನು ನಿನ್ನ ಜ್ಞಾನಕಿರಣದಿಂದ ಮೊದಲು ಚದರಿಸಿಕೊ. ನಾನು ಕೇವಲ ವಸುದೇವಪುತ್ರನಾಗಿ ಈಚೆಗೆ ಹುಟ್ಟಿದವನೂ ಕೆಲವು ದಿನಗಳಲ್ಲಿ ಮಡಿಯುವವನೂ ಆಗಿರುವೆನು- ಎಂದು ನೀನು ನನ್ನನ್ನು ತಿಳಿದುಕೊಂಡಿರುವೆ; ನಿನ್ನನ್ನು ಪಾಂಡುರಾಜನ ಮಗನೆಂದೂ ಸ್ವಲ್ಪ ಕಾಲದೊಳಗಾಗಿ ಸಾಯುವವನೆಂದೂ ಭಾವಿಸಿಕೊಂಡಿರುವೆ. ಇದರಂತೆ ಈ ಸುತ್ತ ಮುತ್ತಲಿನ ರಾಜರುಗಳೂ ಇತ್ತೀಚೆಗೆ ಹುಟ್ಟಿ ಇನ್ನು ಅತ್ಯಲ್ಪಕಾಲದೊಳಗಾಗಿ ತಮ್ಮ ಇರವನ್ನೇ ಕಳೆದುಕೊಳ್ಳುವರೆಂದು ಎಣಿಸಿಕೊಂಡಿರುವೆ. ಇದೆಲ್ಲ ನಿನ್ನ ಮೋಹವು. ನಾವು ಯಾರೂ ಹಿಂದೆ ಯಾವಾಗಲಾದರೂ ಇರಲಿಲ್ಲವೆಂಬುದು ಸರಿಯಲ್ಲ; ಮುಂದೆ ಯಾವಾಗಲಾದರೂ ಇರುವದಿಲ್ಲವೆಂಬುದೂ ಸರಿಯಲ್ಲ. ನಾವೆಲ್ಲರೂ ಮೃತ್ಯುವಿನ ದವಡೆಯಲ್ಲಿಯೇ ಇರುವೆವೆಂದು ನಿನ್ನ ಈಗಿನ ಭಾವನೆ; ಆದರೆ ಜ್ಞಾನಿಗಳ ದೃಷ್ಟಿಯಿಂದ ನೋಡಿದರೆ ಅಮೃತತ್ವವು ನಮ್ಮೆಲ್ಲರ ಸ್ವಭಾವಸಿದ್ಧವಾದ ಹಕ್ಕು. ನಮಗೆ ಮೃತ್ಯುವಿನ ನೆರಳೂ ಸೋಕುವ ಹಾಗಿಲ್ಲ" ಹೀಗೆಂಬುದು ಭಗವಂತನ ಅಭಿಪ್ರಾಯ.

"ಅಶೋಚ್ಯರಿಗಾಗಿ ಶೋಕಮಾಡುತ್ತಿದ್ದೀಯೆ" ಎಂದು ಭಗವಂತನು ಬಿತ್ತಿದ ಉಪದೇಶಬೀಜಕ್ಕೆ ಇದು ಮೊಳಕೆಯು. ಇನ್ನು ಇದರ ಬೆಳವಣಿಗೆಯನ್ನು ನಾವು ನಿರುಕಿಸಬೇಕಾಗಿದೆ. ನಮ್ಮಗಳಿಗೆ ಮೃತ್ಯುವಿನ ಸಂಬಂಧವಿಲ್ಲ ಎಂಬ ವಾಕ್ಯದ ಅರ್ಥವೇನು? ಯಾವ ಅರ್ಥದಲ್ಲಿ ನಮಗೆ ಮೃತ್ಯುವಿಲ್ಲ? ಜನರೆಲ್ಲರೂ ಹುಟ್ಟಿ ಸಾಯುತ್ತಿರುವದು ನಮ್ಮ ಕಣ್ಣುಮುಂದೆಯೆ ಇರುವದಿಲ್ಲವೆ?- ಎಂಬ ಶಂಕೆಗೆ ಪರಿಹಾರವನ್ನು ನಾವು ಇನ್ನು ಮುಂದೆ ಕಂಡುಕೊಳ್ಳಬೇಕಾಗಿದೆ.

ನಮಗೆ ಯಾರಿಗೂ ಸಾವಿಲ್ಲವೆಂಬುದಕ್ಕೆ ಒಂದು ದೃಷ್ಟಾಂತವನ್ನು ಮುಂದಿನ ಶ್ಲೋಕದಲ್ಲಿ ಭಗವಂತನು ಕೊಟ್ಟಿರುತ್ತಾನೆ. ನಮಗೆ ಬಾಲ್ಯ, ಯೌವನ, ವಾರ್ಧಕ್ಯ, ಇವುಗಳು ಬರುವಾಗ ನಮ್ಮ ಶರೀರವು ಹಿಂದಿನ ಒಂದು ಅವಸ್ಥೆಯಿಂದ ಮುಂದಿನ ಒಂದು ಅವಸ್ಥೆಯನ್ನು ಪಡೆದುಕೊಳ್ಳುತ್ತಿರುತ್ತದೆ, ಅವಸ್ಥಾಂತರಪ್ರಾಪ್ತಿ ಎಂದರೆ ಅಲ್ಲಲ್ಲಿ, ಅಷ್ಟಿಷ್ಟು, ಮಾರ್ಪಾಡಾಗುವದಲ್ಲ; ನಮ್ಮ ಶರೀರವು ಗಾತ್ರದಲ್ಲಿ, ಕಾಂತಿಯಲ್ಲಿ, ಬಲದಲ್ಲಿ, ಮಾಡುವ ಕೆಲಸದಲ್ಲಿ- ಎಲ್ಲಾ ಬಗೆಯಿಂದಲೂ ಬೇರೆಯಾಗಿಬಿಟ್ಟಿರುತ್ತದೆ. ನಮ್ಮ ಮನಸ್ಸಿನ ಸ್ಥಿತಿಯೂ ಸಂಪೂರ್ಣವಾಗಿ ಬದಲಾಯಿಸಿಬಿಟ್ಟಿರುತ್ತದೆ; ನಮ್ಮ ಹೊರಗಿನ ಪ್ರಪಂಚದ ವಿಷಯದಲ್ಲಿಯೂ ನಮ್ಮ ದೃಷ್ಟಿಯ ಕೋಣವು ತೀರ ಮಾರ್ಪಾಡಾಗಿ ಬಿಟ್ಟಿರುತ್ತದೆ. ನಮ್ಮ ಆಸ್ತಿ, ಪರಿವಾರ, ವಿದ್ಯೆ, ಬುದ್ಧಿ, ಕೀರ್ತಿ-

ಮುಂತಾದವುಗಳೆಲ್ಲ, ನಡುವೆ ಸ್ವಲ್ಪಕಾಲ ನಮ್ಮನ್ನು ನೋಡದೆ ಇದ್ದು ಮತ್ತೆ ನಮ್ಮನ್ನು ನೋಡುವವರಿಗೆ, ಗುರುತುಹಿಡಿಯುವದಕ್ಕೇ ಸಿಕ್ಕದಷ್ಟು ಬದಲಾವಣೆಗಳನ್ನು ಮಾಡಿರುತ್ತವೆ. ಆದರೇನು? ನಾವು ಬದಲಾವಣೆಗಳಿಂದ ಬೇರೆಬೇರೆಯೇ ಆದೆವೆಂದಾಗಲಿ ಮೊದಲು ಇದ್ದವರು ಸತ್ತು ಬೇರೆಯವರು ನಮ್ಮ ದೇಹದಲ್ಲಿ ಹುಟ್ಟಿಕೊಂಡಿರುವರೆಂದಾಗಲಿ ನಾವುಗಳು ಭಾವಿಸಿಕೊಳ್ಳುವೆವೆ? ಎಂದಿಗೂ ಇಲ್ಲ. ದೇಹದಲ್ಲಿ ಎಷ್ಟೇ ಮಾರ್ಪಾಡಾಗಿರಲಿ, ನಮಗೆ ಸಾವಾಗಲಿ ಹುಟ್ಟಾಗಲಿ ಬಂದಿರುವದಿಲ್ಲವೆಂದೇ ನಮ್ಮೆಲ್ಲರ ದೃಢವಾದ ನಂಬಿಕೆ. ಇದರಂತೆಯೇ ನಮಗೆ ಒಂದು ಶರೀರವು ಬಿದ್ದು ಹೋಗಿ ಮತ್ತೊಂದು ಶರೀರವು ಬಂದರೆ, ಮೊದಲನೆಯ ಶರೀರದ ಸಾವಿನಿಂದ ಸಾವಾಗಲಿ, ಎರಡನೆಯ ಶರೀರದ ಹುಟ್ಟಿನಿಂದ ಹುಟ್ಟಾಗಲಿ, ಉಂಟಾಗಲಾರದು. ಇದು ಯುಕ್ತಿಗೂ ಅನುಭವಕ್ಕೂ ಹೊಂದಿಕೆಯಾದ ಮಾತು.

ಇದೊಂದು ಸಣ್ಣ ವಾಕ್ಯದಲ್ಲಿ ಒಂದು ದೊಡ್ಡ ತತ್ತ್ವವನ್ನೇ ಅಡಗಿಸಿಬಿಟ್ಟಿರುತ್ತದೆ. ಜಗತ್ತಿನ ಧಾರ್ಮಿಕಗ್ರಂಥರಾಶಿಯಲ್ಲಿ ಗೀತಾಗ್ರಂಥಕ್ಕಿರುವ ಅಸಾಧಾರಣಸ್ಥಾನವು ಅದರಲ್ಲಿ ಹೇಳಿರುವ ಇಂಥ ತತ್ತ್ವಜ್ಞಾನದ ವಾಕ್ಯಗಳಿಂದ ದೊರಕತಕ್ಕದ್ದಾಗಿದೆ. ಉಳಿದ ಯಾವ ಗ್ರಂಥಗಳಲ್ಲಿಯೂ ಇಂಥ ಸ್ಪಷ್ಟನುಡಿಗಳು ಕಾಣಿಸುವದಿಲ್ಲ. ಶ್ರೀ ವಿವೇಕಾನಂದಸ್ವಾಮಿಗಳು ಹೇಳಿರುವ ಒಂದು ವಾಕ್ಯವು ಇಲ್ಲಿಗೆ ನಮಗೆ ನೆನಪಿಗೆ ಬರುತ್ತಿದೆ. ಸನಾತನಾರ್ಯರಲ್ಲದ ಬೇರೆ ಮತದವರ ಅಭಿಪ್ರಾಯವು "ನಾನು ಶರೀರವು, ನನಗೊಂದು ಆತ್ಮವಿದೆ" ಎಂದಿರುತ್ತದೆ; ಆದರೆ ಈ ಸನಾತನಧರ್ಮದವರಲ್ಲಿ ಪ್ರತಿಯೊಬ್ಬನಿಗೂ "ನಾನು ಆತ್ಮನು, ನನಗೊಂದು ಶರೀರವಿದೆ" ಎಂದೇ ಭಾವನೆಯಿರುತ್ತದೆ. ಈ ಭಾವನೆಯಿರುವವರಿಗೆಲ್ಲ ಶರೀರದ ಯೋಗಕ್ಷೇಮಕ್ಕಿಂತ ತಮ್ಮ ಆತ್ಮನ ಯೋಗಕ್ಷೇಮವು ಹೆಚ್ಚಿನದಾಗಿರುವದೆಂಬುದು ತಾನೇ ಸಿದ್ಧವಾಗುತ್ತದೆ. ಈ ಎರಡು ಭಾವನೆಗಳನ್ನು ಹೋಲಿಸಿದರೆ ಎಷ್ಟು ಅಂತರವು ಕಾಣಬರುತ್ತದೆ, ನೋಡಿರಿ; ಅಂಗಿಗೆ ಸರಿಯಾಗಿ ನಮ್ಮ ಮೈಯಿರಬೇಕೆಂಬ ಭಾವನೆಯನ್ನೂ ನಮ್ಮ ಮೈಗೆ ಸರಿಯಾಗಿ ಅಂಗಿಯಿರಬೇಕೆಂಬ ಭಾವನೆಯನ್ನೂ ಒಂದೇ ಎನ್ನುವದಕ್ಕಾದೀತೆ? ಶರೀರವೇ ನಾನು ಎನ್ನುವವನು ತನ್ನ ಶರೀರದ ಪುಷ್ಟಿಗೆ ಬೇಕಾದ ವಸ್ತುಗಳನ್ನು ಅಧರ್ಮದಿಂದಲಾದರೂ ಸಂಪಾದಿಸಿಕೊಳ್ಳಬಹುದಾಗುತ್ತದೆ; ಅವನಿಗೆ "ಸಾಲವನ್ನು ಮಾಡಿಯಾದರೂ ತುಪ್ಪವನ್ನುಣ್ಣಬೇಕು" ಎಂಬ ಚಾರ್ವಾಕನ ನುಡಿಯೇ ಜೀವನ ಸೂತ್ರವಾಗುತ್ತದೆ. "ಜನ್ಮಾಂತರದಲ್ಲಿಯೂ ನನ್ನ ಆತ್ಮನಿರುವನು" ಎನ್ನುವವನು ಆತ್ಮನಿಗೆ ಅನನುಕೂಲವಾದ ವರ್ತನೆಗೆಲ್ಲ ಬಹಿಷ್ಕಾರವನ್ನು ಹಾಕಬೇಕಾಗುತ್ತದೆ. "ಧರ್ಮವು ನಿತ್ಯವು, ಸುಖದುಃಖಗಳು ಅನಿತ್ಯ" ಎಂಬ ನುಡಿಯು ಅವನ ಜೀವನ

ಸೂತ್ರವಾಗುತ್ತದೆ. ಈ ಎರಡೂ ದೃಷ್ಟಿಗಳಿಂದ ಏರ್ಪಡುವ ವಿಚಾರಸರಣಿಗಳು ಒಂದಕ್ಕೊಂದು ಅತ್ಯಂತವಿರುದ್ಧವಾಗಿರುವವೆಂಬುದು ಸ್ಪಷ್ಟವಾಗಿದೆ. "ಭೂ ಮಂಡಲದಲ್ಲಿ ಎದುರಿಸಬೇಕಾದ ಜೀವನಸಮಸ್ಯೆ ಯಾವದು?" ಎಂಬ ಪ್ರಶ್ನೆಯನ್ನು ಹಾಕಿದರೆ ಮೊದಲನೆಯ ದೃಷ್ಟಿಯಿಂದ ಉತ್ತರವಿದಾಗುವದು: "ಹೊಟ್ಟೆ ಬಟ್ಟೆಗಳನ್ನು ಮೊದಲು ನೋಡಬೇಕು; ಶರೀರದಲ್ಲಿ ಸುಖವೂ ತುಷ್ಟಿಯೂ ಪುಷ್ಟಿಯೂ ಇರುವದಕ್ಕೆ ಬೇಕಾದ ತಿಳಿವಳಿಕೆಯನ್ನು ಜನರಲ್ಲಿ ಮುಖ್ಯವಾಗಿ ಪ್ರಸಾರಮಾಡಬೇಕು." ಆದರೆ ಎರಡನೆಯ ದೃಷ್ಟಿಯಿಂದ, ಎಂದರೆ ಶರೀರವುಳ್ಳ ಆತ್ಮನೇ ನಾನು ಎಂಬ ದೃಷ್ಟಿಯಿಂದ, ನೋಡಿದರೆ ಒಂದುವೇಳೆ ಹೊಟ್ಟೆಗಾಗಲಿ ಬಟ್ಟೆಗಾಗಲಿ ಶರೀರದ ಇತರ ಯೋಗಕ್ಷೇಮಕ್ಕಾಗಲಿ ಕೆಲವು ಅಡಚಣೆಗಳು ಉಂಟಾದರೂ ಚಿಂತೆಯಿಲ್ಲ, ನಿತ್ಯನಾದ ಆತ್ಮನಿಗೆ ಅನರ್ಥವನ್ನು ಕೊಡುವ ಅಧರ್ಮವನ್ನು ಬಿಟ್ಟುಬಿಡಬೇಕು; ಪುರುಷಾರ್ಥಕ್ಕೆ ಕಾರಣವಾಗಿರುವ ಧರ್ಮವನ್ನು ಬಿಡದೆ ಅನುಷ್ಠಾನಮಾಡಬೇಕು- ಎಂದೇ ನಿಶ್ಚಯ ವಾಗುತ್ತದೆ.

ಹೀಗೆ ಶರೀರದ ಮಾರ್ಪಾಡುಗಳಿಂದ ಆತ್ಮನಲ್ಲಿ ಮಾರ್ಪಾಡುಗಳಿಲ್ಲದ್ದರಿಂದ ಶರೀರದ ನಾಶದಿಂದ ಆತ್ಮನಿಗೆ ನಾಶವಿಲ್ಲವೆಂದೂ ಸಿದ್ಧವಾಗುತ್ತದೆ. ಆದ್ದರಿಂದ "ಎಲೈ, ಅರ್ಜುನನೆ, ಆತ್ಮನು ನಿತ್ಯನೆಂಬ ದೃಷ್ಟಿಯನ್ನು ಅಳವಡಿಸಿಕೊ, ಶರೀರವೇ ನಾನೆಂಬ ಕುದೃಷ್ಟಿಯನ್ನು ಬಿಡು. ಸೋಲುಗೆಲವುಗಳನ್ನು ಯಾವ ದೃಷ್ಟಿಯಿಂದ ಅಳತೆ ಮಾಡಿದೆ? ಶರೀರದೃಷ್ಟಿಯಿಂದ ಅಲ್ಲವೆ? ನಿಜವಾಗಿ ನೋಡಿದರೆ ಶರೀರಕ್ಕೆ ಬೇಕಾಗುವ ಭೋಗಸಾಮಗ್ರಿಗಳನ್ನು ಗೆದ್ದುಕೊಳ್ಳುವ ಗೆಲವು ಗೆಲವಲ್ಲ, ಅವುಗಳನ್ನು ಕಳೆದುಕೊಳ್ಳುವದು ಸೋಲೂ ಅಲ್ಲ. ಧರ್ಮಕ್ಕೆ ಅನುಸಾರವಾಗಿ ನಡೆದರೆ ನಿನಗೆ ಗೆಲವಾದಂತೆ, ಇಲ್ಲದಿದ್ದರೆ ಸೋಲಾದಂತೆ. ಇದನ್ನು ಚೆನ್ನಾಗಿ ನೆನಪಿಡು" ಎಂದು ಭಗವಂತನು ಉಪದೇಶಿಸಿರುತ್ತಾನೆ.

ಇಲ್ಲಿ ಒಂದು ಸಂಶಯವು ಬರಬಹುದು. ಶರೀರದ ನಾಶದಿಂದ ಆತ್ಮನಿಗೆ ನಾಶವಿಲ್ಲದೆ ಇರಬಹುದು. ಆ ದೃಷ್ಟಿಯಿಂದ ಭೀಷ್ಮಾದಿಗಳು ಸಾಯುವರಲ್ಲ! ಎಂದು ಬಗೆಯುವದು ತಪ್ಪುತಿಳಿವಳಿಕೆಯೂ ಆಗಬಹುದು. ಆದರೆ ಈಗಿನ ಶರೀರವಿರುವಾಗ ನಮಗೆ ಹೊರಗಿನ ಸಾಮಗ್ರಿಗಳಿಂದ ಹಿತವಾದ ವೇದನೆಯೂ ಅಹಿತವಾದ ವೇದನೆಯೂ ಆಗುತ್ತಿರುವದು ಸುಳ್ಳೆ? ಭೀಷ್ಮಾದಿಗಳಿಗೆ ನಾನು ಗಂಧಪುಷ್ಪಾದಿಗಳಿಂದ ಪೂಜಿಸಿದರೆ ಅವರಿಗೆ ಶರೀರದ ಮೂಲಕ ಪ್ರಿಯವಾದ ವೇದನೆಯೂ, ಬಾಣಗಳಿಂದ ಅವರನ್ನು ಹೊಡೆದರೆ ಅದೇ ಶರೀರದ ಮೂಲಕವಾಗಿ ಅಪ್ರಿಯವಾದ ವೇದನೆಯೂ ಆಗುವದೆಂಬುದು ನಿರ್ವಿವಾದವಾಗಿದೆ. ನನಗೆ ಹೇಗೆ ಹೊರಗಿನ ವಿಷಯಗಳಿಂದ

ಶೀತ, ಉಷ್ಣ-ಮುಂತಾದ ಪ್ರಿಯಾಪ್ರಿಯವೇದನೆಗಳುಂಟಾಗುವವೋ, ಹೇಗೆ ಆ ವೇದನೆಗಳಿಂದ ನನ್ನ ಅಂತಃಕರಣದಲ್ಲಿ ಅವಶ್ಯವಾಗಿ ಸುಖದುಃಖಗಳುಂಟಾಗುವವೋ, ಹಾಗೆಯೇ ಮತ್ತೊಬ್ಬರಿಗೂ ಆಗುವವು- ಎಂದು ನಂಬುವದು ನನಗೆ ಸಹಜವಾಗಿರುತ್ತದೆ. ಆದರೆ ಭೀಷ್ಮಾದಿಗಳನ್ನು ಯುದ್ಧದಲ್ಲಿ ಎದುರಿಸುವದು ಧರ್ಮವೆಂಬ ಬೋಧೆಯು ಈ ಲೋಕಸಿದ್ಧವಾದ ಅನುಭವಕ್ಕೆ ವಿರುದ್ಧವಲ್ಲವೆ?

ಅರ್ಜುನನಿಗೆ ಇಂಥ ಶಂಕೆಯು ಉಂಟಾದೀತೆಂದು ಭಗವಂತನು ಮುಂದಿನ ವಾಕ್ಯವನ್ನು ಆಡಿರುತ್ತಾನೆ. "ಎಲೈ ಕುಂತೀಕುಮಾರನೆ, ಮಾತ್ರಾಸ್ಪರ್ಶಗಳು ಶೀತೋಷ್ಣಸುಖದುಃಖಗಳನ್ನು ಕೊಡುತ್ತಿರುವವು. ಇವು ಆಗಮಾಪಾಯಿಗಳು; ಆದ್ದರಿಂದ ಇವುಗಳನ್ನು ತಡೆದುಕೊ." ಈ ವಾಕ್ಯದ ಪೂರ್ಣಾಭಿಪ್ರಾಯವನ್ನು ತಿಳಿದುಕೊಳ್ಳುವದು ಅವಶ್ಯ. ಏಕೆಂದರೆ ನಮ್ಮ ಅನೇಕ ಕ್ರಿಯೆಗಳು ನಮಗೆ ಆಗುವ ಪ್ರಿಯಾಪ್ರಿಯವೇದನೆಗಳನ್ನು ಹೊಂದಿಕೊಂಡಿರುವವು. ನಮ್ಮ ಇಂದ್ರಿಯಗಳೇ ನಮಗೆ ಪ್ರಿಯಾಪ್ರಿಯಗಳನ್ನು ಅಳೆಯುವ ಕೋಲುಗಳು; ಈ ಅಳತೆಯ ಕೋಲುಗಳಿಂದಲೇ ನಾವು ಹೊರಗಿನ ಶಬ್ದ, ಸ್ಪರ್ಶ, ರೂಪ, ರಸ, ಗಂಧ- ಎಂಬ ವಿಷಯಗಳನ್ನು ಅಳೆಯುತ್ತಿರುವೆವು. ವಿಷಯಗಳು ಬರಿಯ ಸ್ಪರ್ಶಗಳು; ಎಂದರೆ ಇಂದ್ರಿಯಗಳು ಅವುಗಳನ್ನು ಮುಟ್ಟಿದಾಗ ಮಾತ್ರ ಅವಕ್ಕೆ ಬೆಲೆ. ಹೊರಗಿನ ವಿಷಯಗಳನ್ನು ಹೀಗೆ ನಾವು ಮಾತ್ರೆಗಳಿಂದ, ಎಂದರೆ ಇಂದ್ರಿಯಗಳೆಂಬ ಅಳತೆಯ ಕಡ್ಡಿಗಳಿಂದ, ಸ್ಪರ್ಶಗಳನ್ನು ಎಂದರೆ ಅವು ಸೋಕಿದ ವಿಷಯಗಳನ್ನು ಅರಿತು ಅವುಗಳಿಂದಾಗುವ ಶೀತ, ಉಷ್ಣ-ಮುಂತಾದ ವೇದನೆಗಳನ್ನು ಪ್ರಿಯವೆಂದೂ ಅಪ್ರಿಯವೆಂದೂ ವಿಂಗಡಿಸಿಕೊಳ್ಳುತ್ತಿರುವೆವು. ಈ ಶೀತ, ಉಷ್ಣ ಮುಂತಾದವುಗಳು ಒಬ್ಬರಿಗೆ ಶೀತ, ಒಬ್ಬರಿಗೆ ಉಷ್ಣ; ಒಬ್ಬನಿಗೇ ಒಂದು ಕಾಲದಲ್ಲಿ ಶೀತ, ಮತ್ತೊಂದು ಕಾಲದಲ್ಲಿ ಉಷ್ಣ- ಹೀಗೆ ಅನಿಯತವಾಗಿ ತೋರುತ್ತಾ ಇರುವವು. ಅವುಗಳು ಒಬ್ಬರಿಗೆ ಪ್ರಿಯ, ಮತ್ತೊಬ್ಬರಿಗೆ ಅಪ್ರಿಯ; ಒಬ್ಬನಿಗೇ ಒಂದು ಕಾಲದಲ್ಲಿ ಪ್ರಿಯವಾದವು. ಮತ್ತೊಂದು ಕಾಲದಲ್ಲಿ ಅಪ್ರಿಯವಾದ ವೇದನೆಗಳಾಗಿ ಭಾಸವಾಗುವವು. ಇಂಥ ತೋರಿಹಾರುವ, ಆಗಮಾಪಾಯಿಗಳಾದ ಬಂದೂ ಹೋಗೀ ಮಾಡುತ್ತಿರುವ ಈ ಮಾತ್ರಾಸ್ಪರ್ಶಗಳಿಂದಾಗುವ ಅನಿಯತವಾದ ವೇದನೆಗಳಿಂದ ನಮಗೆ ಸುಖದುಃಖವಾಗುತ್ತಿರುವಂತೆ ತೋರುತ್ತಿರುತ್ತದೆ. ಇಷ್ಟು ಅವ್ಯವಸ್ಥಿತವಾಗಿರುವ ಇಂದ್ರಿಯ ವಿಷಯಗಳ ಸಂಸರ್ಗಕ್ಕಾಗಿ ಮತ್ತು ಅವುಗಳಿಂದಾಗುವ ಸುಖಕ್ಕಾಗಿ ಹವಣಿಸುವದು ಎಂಥ ಮೂರ್ಖತನವು! ಧರ್ಮವು ನಿತ್ಯವು, ಸುಖ ದುಃಖಗಳು ಅನಿತ್ಯವು- ಎಂಬ ಅಭಿಪ್ರಾಯವನ್ನು ನಾವು ಮನಸ್ಸಿನಲ್ಲಿಟ್ಟಿರುವದು ಒಳ್ಳೆಯದೊ, ಇಂಥ ಆಗಮಾಪಾಯಿಗಳಾದ, ಅನಿತ್ಯಗಳಾದ, ಶೀತೋಷ್ಣ

ಸುಖದುಃಖಗಳನ್ನು ಕೊಡುತ್ತಿರುವ, ನೆಚ್ಚಿಗೆಯಿಲ್ಲದ ಇಂದ್ರಿಯ ವಿಷಯಸ್ಪರ್ಶಗಳನ್ನು ಮನಸ್ಸಿನಲ್ಲಿಟ್ಟು ನಡೆಯುವದು ಒಳ್ಳೆಯದೊ? ಈ ಪ್ರಶ್ನೆಗೆ ಎರಡು ಉತ್ತರಗಳಿಲ್ಲ. ಆತ್ಮನು ನಿತ್ಯನೆಂಬುದನ್ನು ಲಕ್ಷ್ಯವಿಟ್ಟ ಧೀರನಿಗೆ ಯಾವ ಮೋಹವೂ ಆಗುವದಿಲ್ಲ; ಅವನು ವಿಷಯವೇದನೆಗಳಿಗಾಗಲಿ, ಅಥವಾ ಶರೀರದ ಮಾರ್ಪಾಡಿಗಾಗಲಿ ಹೆದರುವದಿಲ್ಲ, ಶರೀರವು ನಾಶವಾದರೂ ತಾನು ಸಾಯುವೆನೆಂದು ಎಂದಿಗೂ ಬಗೆಯುವದಿಲ್ಲ.

ಇದನ್ನು ಮನದಂದು ಭಗವಂತನು ಹೀಗೆಂದು ಉಪದೇಶಮಾಡಿರುತ್ತಾನೆ; "ಅರ್ಜುನ, ನೀನು ಶರೀರದಲ್ಲಾಗುವ ಸುಖದುಃಖವೇದನೆಗಳಿಗೆ ಅಂಜದಿರು. ಆ ಸುಖದುಃಖಗಳ ಕಡೆಗೆ ಲಕ್ಷ್ಯವಿಟ್ಟು ಎಂದೆಂದಿಗೂ ನಿತ್ಯನಾಗಿರುವ ಆತ್ಮನ ಧರ್ಮವೇ ಅವು ಎಂದು ಮರುಳಾಗದಿರು. ಈ ನಿಜವನ್ನು ಅರಿತುಕೊಂಡ ಜ್ಞಾನಿಗೆ ಪ್ರಿಯಾಪ್ರಿಯಗಳು ಸೋಂಕುವದುಕೂಡ ಇಲ್ಲ, ಇನ್ನು ಅವುಗಳಿಂದಾಗುವ ಸುಖದುಃಖಗಳಿಂದ ಅವನು ಹಿಗ್ಗುವದಾಗಲಿ ಕುಗ್ಗುವದಾಗಲಿ ಎಲ್ಲಿ ಬಂತು? ನೀನೂ ಈ ತತ್ತ್ವಜ್ಞಾನವನ್ನು ತಂದುಕೊಂಡು ಅದರ ಬಲದಿಂದ ಈ ಶೀತೋಷ್ಣಸುಖದುಃಖಗಳನ್ನು ತಡೆದುಕೊ."

## ೬. ನಿತ್ಯಾನಿತ್ಯವಿವೇಕ ೨-(೧೪-೧೬)

(೨೮.೭.೧೯೪೬)

ಅರ್ಜುನನು ಪಾಂಡಿತ್ಯದ ಮಾತುಗಳನ್ನಾಡುತ್ತಿದ್ದರೂ ಮೌರ್ಖ್ಯದ ವರ್ತನೆಯನ್ನು ತೋರಿಸುತ್ತಾ ಶೋಕಮೋಹಗಳಿಗೀಡಾಗಿದ್ದನು. ಶೋಕದಿಂದ ಬಿಡುಗಡೆಯಾಗುವದಕ್ಕೆ ಉಪಾಯವನ್ನು ತಿಳಿದುಕೊಳ್ಳಬೇಕೆಂದು ಭಗವಂತನನ್ನು ಶರಣುಹೊಕ್ಕನು. ಶೋಕವನ್ನು ಸಮೂಲವಾಗಿ ಕಳೆದುಕೊಳ್ಳಬೇಕೆಂದು ನಿಜವಾಗಿ ಹಾತುವರಿಯುತ್ತಿರುವವರೆಲ್ಲರೂ ಗೀತೆಯಲ್ಲಿರುವ ಅಧ್ಯಾತ್ಮವಿದ್ಯೆಗೆ ಅಧಿಕಾರಿಗಳಾಗಿರುತ್ತಾರೆ. ಅಧ್ಯಾತ್ಮವಿದ್ಯೆಯು ಶೋಕವನ್ನು ಸಂಪೂರ್ಣವಾಗಿ ಕಳೆಯುವ ಸಾರ್ವತ್ರಿಕವಾದ ಔಷಧವಾಗಿರುತ್ತದೆ. ವೈದ್ಯರಿಂದ ಧಾತುವೈಷಮ್ಯರೂಪವಾದ ರೋಗವು ಹೋಗಿ ಸ್ವಾಸ್ಥ್ಯವುಂಟಾಗುವದಲ್ಲವೆ? ಹಾಗೆಯೇ ಈ ವಿದ್ಯೆಯಿಂದ ಶೋಕಮೋಹಗಳು ಹೋಗಿ ಜೀವರುಗಳಿಗೆ ಅವರ ಸ್ವಾಸ್ಥ್ಯವು ದೊರಕುತ್ತದೆ.

ಹೊರಗಿನ ವಿಷಯಗಳೂ ಅವುಗಳಿಂದ ಆಗುವ ಶೀತೋಷ್ಣಾದಿವೇದನೆಗಳೂ ಅವುಗಳಿಂದ ಉಂಟಾಗುವ ಸುಖದುಃಖಗಳೂ ಅತ್ಯಂತವಾಗಿ ಒಂದಕ್ಕೊಂದು ವಿರುದ್ಧವಾಗಿರುವವೆಂದು ನಾವು ಒಂದಕ್ಕೊಂದಕ್ಕಾದ ಕೆಲವು ಜೋಡಿಗಳನ್ನು ಕಲ್ಪಿಸಿ ಕೊಂಡಿರುವೆವು. ಅತ್ಯಂತವಿರುದ್ಧವೆಂದು ನಮಗೆ ಹೀಗೆ ತೋರುತ್ತಿರುವ ಜೋಡಿಗಳಿಗೆ ದ್ವಂದ್ವಗಳು ಎಂದು ಹೆಸರು. ದ್ವಂದ್ವಗಳು ನಿಜವಾಗಿ ಅತ್ಯಂತವಿರುದ್ಧವಾಗಿರುವದಿಲ್ಲ; ಅವುಗಳ ಸ್ವರೂಪವನ್ನು ಅರಿಯದೆಯೇ ನಾವು ಹಾಗೆಂದು ಭ್ರಾಂತಿಯಿಂದ ಕಲ್ಪಿಸಿಕೊಂಡಿರುತ್ತೇವೆ, ಅಷ್ಟೆ. ವಿಷಯಗಳು ಇದ್ದಂತೆ ಇರುವದಿಲ್ಲ, ಅವು ಸ್ಥಿರವಲ್ಲ; ಅವುಗಳಿಂದಾಗುವ ವೇದನೆಗಳೂ ಸ್ಥಿರವಲ್ಲ; ವೇದನೆಗಳಿಂದಾಗುವ ಸುಖದುಃಖಗಳೂ ಸ್ಥಿರವಲ್ಲ. ಸುಖವಾದಮೇಲೆ ದುಃಖವೂ ದುಃಖವಾದಮೇಲೆ ಸುಖವೂ ಉಂಟಾಗುತ್ತಿರುವದರಿಂದ ಅನಿತ್ಯವಾಗಿರುವ ಈ ಸುಖದುಃಖಗಳನ್ನು ತಡೆದುಕೊಳ್ಳುವವನೇ ಧೀರನು- ಎಂದು ಭಗವಂತನು ಉಪದೇಶಿಸಿರುತ್ತಾನೆ.

ಶೀತೋಷ್ಣಗಳು ಅನಿತ್ಯವೇ ಆಗಲಿ, ಸುಖದುಃಖಗಳೂ ಅನಿತ್ಯವೇ ಆಗಲಿ, ಇವನ್ನು ತಡೆದುಕೊಳ್ಳಬೇಕೆಂಬ ಉಪದೇಶವೂ ಸರಿಯೆಂದೇ ಒಪ್ಪೋಣ. **ಆದರೆ ಶೀತೋಷ್ಣಾದಿಗಳನ್ನು ತಡೆದುಕೊಳ್ಳಬೇಕೆಂದು ಹೇಳುವದಕ್ಕೆ ಭಗವದ್ಗೀತೆಯೇ ಬೇಕೆ? ಹೀಗೆ ತಡೆದುಕೊಳ್ಳುವದೇ ಜನರ ಸ್ವಭಾವವಲ್ಲವೆ?- ಎಂದು ಯಾರಾದರೂ ಶಂಕಿಸಬಹುದು. ಆದರೆ ಇಲ್ಲಿ ಒಂದು ಮರ್ಮವಿದೆ. ಆಗಾಗ್ಗೆ ಒದಗುವ ಶೀತೋಷ್ಣಗಳನ್ನು ಮನುಷ್ಯರೇ ಏಕೆ, ಪಶುಗಳು ಕೂಡ ಆ ಶೀತೋಷ್ಣಗಳ ಪರಿಹಾರಕ್ಕೆ ಉಪಾಯವನ್ನು ಕಾಣದೆ ತಡೆದುಕೊಳ್ಳುತ್ತಿವೆ. ಅದರಲ್ಲೇನೂ ಹೆಚ್ಚುಗಾರಿಕೆಯಿಲ್ಲ. ಆದರೆ ವಿವೇಕದಿಂದ ಅವನ್ನು ತಡೆದುಕೊಳ್ಳುವವನು ಧೀರನು, ಅವನು ಅಮೃತತತ್ತ್ವಕ್ಕೆ ತಕ್ಕವನಾಗಿರುತ್ತಾನೆ. ವಿಷಯಗಳು ಹೇಗೆ ನಮಗಿಂತ ಬೇರೆಯೋ, ಹಾಗೆಯೇ ಶೀತೋಷ್ಣಾದಿಗಳೂ ಬೇರೆಯೇ, ಅವುಗಳಿಂದಾಗುವ ಸುಖದುಃಖಗಳೂ ಬೇರೆಯೇ. ಇದನ್ನು ವಿವೇಚಿಸಿ ಯಾವನು ತಿಳಿದುಕೊಳ್ಳುವನೋ ಅವನು ಅಮೃತನಾಗುವನು.** ವಿಷಯಗಳು ಅನಿತ್ಯ, ಶೀತೋಷ್ಣಗಳು ಅನಿತ್ಯ, ಸುಖದುಃಖಗಳೂ ಅನಿತ್ಯ. ಇವೆಲ್ಲವೂ ಆಗಮಾಪಾಯಿಗಳು, ಒಂದು ಕಾಲದಲ್ಲಿ ಬಂದು ಸ್ವಲ್ಪಕಾಲ ತೋರಿ ಬಳಿಕ ಇಲ್ಲವಾಗಿಬಿಡುವವು. ನನ್ನ ಸ್ವರೂಪವು ಇಂಥದ್ದಲ್ಲ, ನಾನು ನಿತ್ಯನು- ಎಂದು ಯಾವನು ಅರಿತುಕೊಳ್ಳುವನೋ ಅವನು ಧೀರನು. ಅವನಿಗೆ ಎಂದೆಂದಿಗೂ ಸಾವಿಲ್ಲ. ಈ ಎಂದಿಗೂ ಸಾವಿಲ್ಲದ ಆತ್ಮಸ್ವರೂಪವನ್ನು ತಿಳಿಸುವದಕ್ಕೇ ಭಗವಂತನು ಪ್ರಾರಂಭಿಸಿರುತ್ತಾನೆ.

ಶೀತೋಷ್ಣಾದಿಗಳು ಆಗಮಾಪಾಯಿಗಳೆಂಬುದರಲ್ಲಿ ಇನ್ನೂ ಸ್ವಲ್ಪ ವಿಚಾರ ಮಾಡತಕ್ಕದ್ದಿದೆ. ಆತ್ಮನು ನಿತ್ಯನು, ಮಿಕ್ಕದ್ದೆಲ್ಲವೂ ಅನಿತ್ಯವು ಎಂದು ಹೇಳಿದರೆ ನಮ್ಮ ಮನಸ್ಸಿನಲ್ಲಿ ಮೊದಲು ಮಿಂಚುವ ಭಾವವೇನೆಂದರೆ, ಅನಾತ್ಮವಾದ ಶೀತೋಷ್ಣಗಳು ಒಂದು ಕಾಲದಲ್ಲಿದ್ದು ಮತ್ತೊಂದು ಕಾಲದಲ್ಲಿ ಇಲ್ಲವಾಗುವವು. ಆದರೆ ಆತ್ಮನು ಮಾತ್ರ ಹಾಗಲ್ಲ; ಅವನು ಹಿಂದೆ,ಈಗ, ಮುಂದೆ - ಎಂಬ ಮೂರು ಕಾಲಗಳಲ್ಲಿಯೂ ಒಂದೇ ರೂಪದಿಂದ ಇರುತ್ತಾನೆ. ಈ ಭಾವನೆಯೇನೋ ಇಷ್ಟರಮಟ್ಟಿಗೆ ಸರಿಯೇ. ಆದರೆ ಶೀತೋಷ್ಣಾದಿದ್ವಂದ್ವಗಳನ್ನು ಅವು ಆಗಮಾಪಾಯಿಗಳಾಗಿರುವದರಿಂದ, ಅನಿತ್ಯವಾಗಿರುವದರಿಂದ, ಸಹಿಸಿಕೊ ಎಂದು ಉಪದೇಶಿಸಿದ ಭಗವಂತನ ಆಶಯವು ಇದಕ್ಕಿಂತಲೂ ಆಳವಾಗಿರುತ್ತದೆ. **ಶೀತೋಷ್ಣಾದಿಗಳು ಕಾಲದಲ್ಲಿ ಬಂದು ಹೋಗುತ್ತಿರುವದರಿಂದ ಅನಿತ್ಯಗಳೆಂದಿಷ್ಟೇ ತಾತ್ಪರ್ಯವಿಲ್ಲ. ಅವು ಅಸತ್ಪದಾರ್ಥಗಳಾಗಿರುತ್ತವೆ, ನಿಜವಾಗಿ ಇಲ್ಲವೇ ಇಲ್ಲ. ಆತ್ಮನು ನಿತ್ಯನೆಂದರೂ ಹೀಗೆಯೇ. ಅವನು ಕಾಲದಲ್ಲಿ ನಿತ್ಯನಾಗಿರುತ್ತಾನೆಂಬುದರಲ್ಲಿ ತಾತ್ಪರ್ಯವಿಲ್ಲ. ಕಾಲವೂ ಅನಾತ್ಮವಾಗಿರುವದರಿಂದ ಆತ್ಮನಿಗಿಂತ ಹೊರಚ್ಚಾಗಿಯೇ, ಅನಾತ್ಮವಾಗಿಯೇ ಇದೆ, ಆತ್ಮನಿಗೆ ಕಾಲದ ಸೋಂಕೇ ಇಲ್ಲ. ಆದ್ದರಿಂದ ಆತ್ಮನಿಗೆ ಸಾವಿಲ್ಲ-ಎನ್ನುವಾಗಲೂ ಅನಾತ್ಮವಾದ ಶೀತೋಷ್ಣಾದಿಗಳಿಗೆ ನಿತ್ಯತ್ವವಿಲ್ಲವೆನ್ನುವಾಗಲೂ ಕಾಲದ ಸಂಬಂಧವನ್ನು ಗಂಟುಹಾಕಿಕೊಳ್ಳುವದನ್ನು ನಾವು ಬಿಡಬೇಕು. ಕಾಲಸಮೇತವಾದ ಅನಾತ್ಮವೆಲ್ಲವೂ ಅನಿತ್ಯವೇ ಎಂದರೆ ಅಸತ್ತೇ; ಅದು ನಿಜವಾಗಿ ಇರುವದಲ್ಲ-ಎಂದು ಅಭಿಪ್ರಾಯ.**

ಇಲ್ಲಿ ನಮಗೆ ಸ್ವಲ್ಪ ತಲೆಯು ಗಿರ್ರೆನ್ನುವದಕ್ಕೆ ಮೊದಲಾಗುತ್ತದೆ. ಶೀತೋಷ್ಣಾದಿವೇದನೆಗಳು ವಿಷಯಗಳಿಂದ ಆಗುತ್ತಿರುವದರಿಂದಲೂ ಸ್ವಲ್ಪಕಾಲವಾದ ಬಳಿಕ ಮರೆಯಾಗುತ್ತಿರುವದರಿಂದಲೂ ಅವನ್ನು ಆಗಮಾಪಾಯಿಗಳು ಎನ್ನಬಹುದು, ಅನಿತ್ಯ ಎನ್ನಲೂ ಬಹುದು. ಆದರೆ ಅವು ಅಸತ್ಪದಾರ್ಥಗಳೆ? ಅವು ಇಲ್ಲವೇ ಇಲ್ಲವೆ? ಹಾಗಾದರೆ ನಮಗೆಲ್ಲ ಶೀತೋಷ್ಣ- ಮುಂತಾದವುಗಳು ಆಗುತ್ತಿರುವದೇ ಸುಳ್ಳೆ? ಇದೇಕೊ, ಎಲ್ಲರಿಗೂ ಆಗುತ್ತಿರುವ ಅನುಭವವನ್ನೇ ಅಲ್ಲಗಳೆಯುವ ಮಾತಾಗಿ ತೋರುವದಲ್ಲ! ಎಂಬ ಶಂಕೆಯು ನಮ್ಮನ್ನು ಬಾಧಿಸುವದಕ್ಕೆ ಹೊರಡುತ್ತದೆ.

ಆದರೆ ಇಲ್ಲಿ ಯಾವ ಶಂಕೆಗೂ ಕಾರಣವಿಲ್ಲ. ಸತ್ತು ಎಂದರೇನು, ಅಸತ್ತು ಎಂದರೇನು?- ಎಂಬುದನ್ನು ಸ್ಪಷ್ಟಪಡಿಸಿಕೊಳ್ಳದೆ ಇರುವದರಿಂದಲೇ ನಮಗೆ ಇಂಥ ತಳ್ಳಂಕವುಂಟಾಗಿರುತ್ತದೆ. ಸತ್ತೆಂದರೇನು? ನಿಜವಾಗಿರುವ ವಸ್ತು; ಅಸತ್ತೆಂದರೆ? ನಿಜವಾಗಿಲ್ಲದ ವಸ್ತು. ಇಲ್ಲಿ ನಿಜವಾಗಿರುವದಕ್ಕೂ ಇರುವಂತೆ ತೋರುವದಕ್ಕೂ

ಹೆಚ್ಚು ಕಡಿಮೆ ಇದೆ. ದೂರದಲ್ಲಿ ಒಂದು ಮೋಟುಮರವಿರುತ್ತದೆ; ಮಬ್ಬಿನಲ್ಲಿ ನೋಡಿದರೆ ಅದು ಮನುಷ್ಯನಂತೆ ತೋರುತ್ತದೆ. ಇಲ್ಲಿ ಮನುಷ್ಯನು ಇರುವಂತೆ ತೋರುವವನು, ಮರವು ನಿಜವಾಗಿ ಇರತಕ್ಕದ್ದು. ನಮ್ಮ ವ್ಯವಹಾರದಲ್ಲಿ ಎಷ್ಟೋ ಸಲ ನಾವು ವಸ್ತುಸ್ಥಿತಿಯು ಹೀಗಿರುವದೆಂದು ನಂಬಿ ಕೆಲಸಮಾಡುವೆವು; ಆದರೆ ಅದು ಹಾಗಿರಲಿಲ್ಲವೆಂದು ಕಾಲಾಂತರದಲ್ಲಿ ಗೊತ್ತಾಗುವದು. ಸಾಚಾ ಕಲಾಬತ್ತು; ಖೋಟಾ ಕಲಾಬತ್ತು; ಚಲಾವಣೆಗೆ ಸಲ್ಲುವ ನಾಣ್ಯ, ಸಲ್ಲದ ನಾಣ್ಯ - ಮುಂತಾದವುಗಳನ್ನು ನಾವು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಯಾವದು ಹೇಗೆ ತೋರುವದೋ ಹಾಗೆಯೇ ಇರಬೇಕೆಂಬ ನಿಯಮವೇನೂ ಇಲ್ಲ. ಆದ್ದರಿಂದ ಸತ್ಯವಾಗಿರುವದು ಯಾವದು, ಸತ್ಯವಾಗಿರುವಂತೆ ತೋರುವದು ಯಾವದು?- ಎಂಬುದನ್ನು ನಿಶ್ಚಯಿಸಿಕೊಳ್ಳಬೇಕಾದದ್ದು ವ್ಯವಹಾರಕ್ಕೆ ಕೂಡ ಅವಶ್ಯ; ತತ್ತ್ವವಿಚಾರಕ್ಕಂತೂ ಅತ್ಯವಶ್ಯ.

ಪ್ರಕೃತದಲ್ಲಿ ಅರ್ಜುನನಿಗೆ "ಭೀಷ್ಮಾದಿಗಳನ್ನು ಹೊಡೆದರೆ ಅವರಿಗೆ ವ್ಯಥೆಯಾಗುವದಲ್ಲ! ನಮ್ಮವರನ್ನು ಕೊಂದರೆ ನಮಗೆ ಪಾಪವು ಬರುವದಲ್ಲ!"- ಎಂಬ ಶೋಕವು ಉಂಟಾಗಿದೆ. ಅವನಿಗೆ ಹೀಗೆ ತೋರಿದೆ ಎಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ. ಹೀಗೆಯೇ ನಮ್ಮಗಳಿಗೆ ವಿಷಯಗಳ ಸ್ಪರ್ಶದಿಂದ, ಅವುಗಳ ಭೋಗದಿಂದ, ಶೀತೋಷ್ಣಾದಿವೇದನೆಗಳು ಆಗುವವೆಂದೂ, ಅವುಗಳಿಂದ ಸುಖದುಃಖಾದಿಗಳುಂಟಾಗುವಂತೆ ನಮಗೆಲ್ಲರಿಗೂ ತೋರಿಬರುತ್ತಿರುವದೆಂದೂ, ಹೇಳುವದಕ್ಕೆ ಯಾವ ಆತಂಕವೂ ಇರುವದಿಲ್ಲ. ಆದರೆ ಶೀತೋಷ್ಣಾದಿಗಳೂ ಸುಖದುಃಖಾದಿಗಳೂ ನಿಜವಾಗಿ ಇರುವ ಪದಾರ್ಥಗಳೆ? ಅಥವಾ ಅವು ನಿಜವಾಗಿರುವಂತೆ ತೋರುವ ಪದಾರ್ಥಗಳು ಮಾತ್ರವೊ? ಇದನ್ನು ನಾವು ವಿಚಾರದಿಂದ ಗೊತ್ತುಪಡಿಸಿಕೊಳ್ಳಬೇಕಾದದ್ದು ಅವಶ್ಯ. ಏಕೆಂದರೆ ವಿಚಾರಮಾಡದೆಯೇ ಯಾವದು ಹೇಗೆ ತೋರುತ್ತದೆಯೋ ಹಾಗೆಯೇ ನಿಜವೆಂದು ನಂಬಿಬಿಟ್ಟರೆ ಮೋಟುಮರವನ್ನು ಮನುಷ್ಯನೆಂದೂ, ಸಲ್ಲದ ನಾಣ್ಯವನ್ನು ಒಳ್ಳೆಯ ನಾಣ್ಯವೆಂದೂ, ಹಾವನ್ನು ಹಗ್ಗವೆಂದೂ ನಂಬುವ ಅಜ್ಞರಂತೆ ಅನರ್ಥಕ್ಕೆ ಗುರಿಯಾಗಬೇಕಾದೀತು. ಆದ್ದರಿಂದಲೇ ಭಗವಂತನು ಅರ್ಜುನನಿಗೆ ಉಂಟಾಗಿರುವ ಕಡುಶೋಕಕ್ಕೆ ಸದಸತ್ತುಗಳ ವಿವೇಕವಿಲ್ಲದಿರುವದೇ ಕಾರಣವೆಂದು ಬಗೆದು ಇಲ್ಲಿ ಸತ್ತು ಯಾವದು, ಅಸತ್ತು ಯಾವದು ಎಂಬುದನ್ನು ತಿಳಿಸುವದಕ್ಕೆ ಹೊರಟಿರುತ್ತಾನೆ.

ಆದ್ದರಿಂದ ಮೊಟ್ಟಮೊದಲು ನಮಗೆ ಸತ್ತನ್ನೂ ಅಸತ್ತನ್ನೂ ಗುರುತಿಸಿ

ಗೊತ್ತುಪಡಿಸಿಕೊಡುವ ಲಕ್ಷಣವು ಅತ್ಯವಶ್ಯವಾಗಿದೆ. ಅದನ್ನು ಭಗವಂತನು ಇಲ್ಲಿ ಹೀಗೆ ತಿಳಿಸಿಕೊಟ್ಟಿರುತ್ತಾನೆ—

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ।**
**ಉಭಯೋರಪಿ ದೃಷ್ಟೋಽನ್ತಸ್ತ್ವನಯೋಸ್ತತ್ತ್ವದರ್ಶಿಭಿಃ ॥** (೨-೧೬)

"ಅಸತ್ತಿಗೆ ಇರವು ಇಲ್ಲ, ಸತ್ತಿಗೆ ಇಲ್ಲದಿರುವಿಕೆಯು ಇಲ್ಲ. ಇವೆರಡರ ನಿಶ್ಚಯವನ್ನೂ ತತ್ತ್ವದರ್ಶಿಗಳು ಕಂಡುಕೊಂಡಿರುತ್ತಾರೆ."

ಈ ವಾಕ್ಯವು ಈ ಶಾಸ್ತ್ರಕ್ಕೆಲ್ಲ ಸೂತ್ರಭೂತವಾಗಿರುತ್ತದೆ. ಇದರ ಅರ್ಥವನ್ನು ಮನಗಂಡವರು ತತ್ತ್ವದರ್ಶಿಗಳು; ಇದನ್ನು ಪೂರ್ಣವಾಗಿ ಅರಿತುಕೊಳ್ಳದಿದ್ದರೂ ಇದನ್ನು ತಮ್ಮ ಧ್ಯೇಯವಾಗಿಟ್ಟುಕೊಂಡು ವರ್ತಿಸಿದರೂ ಸಾಕು. ಆಗ ನಮ್ಮ ವ್ಯವಹಾರವೆಲ್ಲ ಧರ್ಮಾಧರ್ಮಗಳ ವಿವೇಕವನ್ನು ಮಾಡಿಕೊಂಡೇ ಸಾಗಿರುತ್ತದೆ. ಇಹಪರಗಳಲ್ಲಿ ಸುಖವನ್ನೂ ಪರಮಪುರುಷಾರ್ಥವನ್ನೂ ಪಡೆದುಕೊಳ್ಳಬೇಕೆನ್ನುವವರು ಈ ವಾಕ್ಯದ ಅಭಿಪ್ರಾಯವನ್ನು ಚೆನ್ನಾಗಿ ಮನನಮಾಡಿಕೊಳ್ಳುವದು ಅವಶ್ಯವಾಗಿರುತ್ತದೆ. ಆದ್ದರಿಂದ ಇನ್ನೊಮ್ಮೆ ಇದನ್ನು ವಿವರವಾಗಿ ವಿಚಾರಮಾಡೋಣ.

## ೭. ಇರುವದೂ ಇಲ್ಲದ್ದೂ ೨- (೧೬-೧೭)

(೪.೮.೪೬)

ಶೀತೋಷ್ಣಾದಿಗಳನ್ನು ವಿವೇಕದಿಂದ ತಡೆದುಕೊಳ್ಳಬೇಕೆಂದು ಭಗವಂತನು ಉಪದೇಶಿಸಿರುತ್ತಾನಷ್ಟೆ. ಈ ಸಂದರ್ಭದಲ್ಲಿ ಅವುಗಳ ಬೆಲೆಯನ್ನು ಕಟ್ಟುವದಕ್ಕಾಗಿ ಒಂದು ಸೂತ್ರವಾಕ್ಯವನ್ನು ಆಡಿರುತ್ತಾನೆ:- "ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ" (ಇಲ್ಲದ್ದಕ್ಕೆ ಉಂಟಾಗುವಿಕೆಯಿಲ್ಲ, ಇರುವದಕ್ಕೆ ಹೋಗುವಿಕೆಯಿಲ್ಲ) ಈ ವಾಕ್ಯದ ಅಭಿಪ್ರಾಯವೇನೆಂಬುದನ್ನು ನಾವು ಸ್ವಲ್ಪ ವಿವರವಾಗಿ ತಿಳಿದುಕೊಳ್ಳಬೇಕಾಗಿದೆ.

ಈ ವಾಕ್ಯದಲ್ಲಿ ಸತ್ತು, ಅಸತ್ತು-ಎಂಬ ಮಾತುಗಳಿವೆಯಷ್ಟೆ. ಇವುಗಳ ಅರ್ಥವೇನೆಂದರೆ ಇರುವದು, ಇಲ್ಲದ್ದು. ಸತ್ತೆಂದರೆ ಇರುವದು; ನಿಜವಾಗಿ ಇರುವದು, ಇರುವಂತೆ ತೋರುವದಲ್ಲ. 'ಬೆಳ್ಳಗಿರುವದೆಲ್ಲ ಹಾಲಲ್ಲ' ಎಂಬ ಗಾದೆಯಂತೆ ಇರುವಂತೆ ತೋರುವದೆಲ್ಲ ಸತ್ತಲ್ಲ, ನಿಜವಾಗಿ ಇರುವದಲ್ಲ. ಯಾವದು ನಿಜವಾಗಿ ಇರುವದೋ ಅದು ಹೋಗುವದಿಲ್ಲ; ಆದ್ದರಿಂದ

ಯಾವದಾದರೂ ಒಂದು ವಸ್ತು ಇರುವಂತೆ ತೋರಿದರೆ ಅಷ್ಟುಮಾತ್ರದಿಂದ ಅದನ್ನು ಇರುವದೆಂದು ಹೇಳುವದಕ್ಕೆ ಬರುವದಿಲ್ಲ. ಯಾವ ವಸ್ತು ತೋರಿಹಾರುವದೋ, ಈಗ ತೋರಿ ಆಮೇಲೆ ಇಲ್ಲವಾಗುವದೋ ಅದು ನಿಜವಾಗಿ ಇರಲೇಇಲ್ಲವೆಂದು ನಿಶ್ಚಯಿಸಬೇಕು. ತೋರಿ ಹಾರಿದ ಮೇಲೆ ಇಲ್ಲವಾಗಲಿ, ತೋರುವಾಗಲಾದರೂ ಇದ್ದಿತೊ, ಇಲ್ಲವೊ? ಎಂದು ಯಾರಾದರೂ ಕೇಳಬಹುದು. ಇರಲಿಲ್ಲ, ಇರುವಂತೆ ತೋರಿತು-ಎಂಬುದೇ ಆ ಪ್ರಶ್ನೆಗೆ ಉತ್ತರ. ಏಕೆಂದರೆ ಇರುವದು ಎಂದರೆ ಮಾರ್ಪಡೆದೆಯೇ ತನ್ನ ಸ್ವರೂಪವನ್ನು ಇಟ್ಟುಕೊಂಡಿರುವದೆಂದೇ ಅರ್ಥ. "ಹಗ್ಗದಲ್ಲಿ ಹಾವು ತೋರುವ ಕಾಲಕ್ಕೆ ಇತ್ತು, ಈಗ ಎಲ್ಲಿಗೋ ಹೋಗಿರಬೇಕು" ಎಂದು ನಾವುಗಳು ಯಾರೂ ಹೇಳುವದಿಲ್ಲ. "ನಾವು ಭ್ರಾಂತಿಯಿಂದ ಹಗ್ಗವನ್ನೇ ಹಾವೆಂದು ಕೊಂಡೆವು. ಅದು ತಪ್ಪುತಿಳಿವಳಿಕೆಯಿಂದ ಹಾವಾಗಿ ತೋರಿತೇ ಹೊರತು ಅದರಲ್ಲಿ ನಿಜವಾದ ಹಾವು ಯಾವಾಗಲೂ ಇರಲೇ ಇಲ್ಲ" ಎಂದಲ್ಲವೆ, ನಮ್ಮಗಳ ದೃಢವಾದ ನಂಬಿಕೆ? ಆದ್ದರಿಂದ ಹಾವು ಅಸತ್ತು, ಅದಕ್ಕೆ ಇರುವಿಕೆ ಯಾವಾಗಲೂ ಇಲ್ಲ.

ಗೀತೆಯಲ್ಲಿ ಈ ವಿಚಾರವು ಏತಕ್ಕೆ ಬಂದಿದೆ ಎಂಬುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳುವದು ಅವಶ್ಯ. ಭೀಷ್ಮಾದಿಗಳು ಯುದ್ಧದಲ್ಲಿ ಮಡಿಯುವರಲ್ಲ! ಅವರಿಗೂ ನನಗೂ ಹಲವು ದುಃಖಪ್ರದಗಳಾದ ವೇದನೆಗಳೂ ಉಂಟಾಗುವವಲ್ಲ! ಎಂಬ ಚಿಂತೆಯಿಂದ ಅರ್ಜುನನು ಶೋಕಕ್ಕೆ ಈಡಾಗಿ ಸಂತಪಿಸುತ್ತಾ ಕೃತ್ಯಾಕೃತ್ಯವನ್ನು ಅರಿಯದೆ, ಧರ್ಮಾಧರ್ಮಗಳ ವಿವೇಕದ ತತ್ತ್ವೋಪದೇಶವನ್ನು ಮಾಡಬೇಕೆಂದು ಭಗವಂತನನ್ನು ಪ್ರಾರ್ಥಿಸಿಕೊಂಡನು. **ಭಗವಂತನು ಪರಮಾರ್ಥತತ್ತ್ವವನ್ನು ಆಧಾರವಾಗಿ ಮಾಡಿಕೊಂಡೇ ಅವನಿಗೆ ಕೃತ್ಯಾಕೃತ್ಯಗಳ ವಿವೇಕವನ್ನು ಮಾಡಿಕೊಡಬೇಕೆಂದು ಈ ವಿಚಾರವನ್ನು ತೆಗೆದಿರುತ್ತಾನೆ.** ಭೀಷ್ಮರು, ದ್ರೋಣರು, ಅರ್ಜುನ - ಎಂದರೆ ಯಾರು? ಶರೀರವೆಂದರೆ ಅದಕ್ಕೆ ಆಗುವ ವೇದನೆಗಳೂ, ಸುಖದುಃಖಗಳೂ ಆಗಮಾಪಾಯಿಗಳಲ್ಲವೆ? ಅನಿತ್ಯವಲ್ಲವೆ? ಭೀಷ್ಮಾದಿಗಳು ಹಿಂದೆ ಎಷ್ಟುಸಲ ಯುದ್ಧವನ್ನು ಮಾಡಿಲ್ಲ, ಅವರಿಗೆ ಆಗ ಆದ ಬಾಣದ ಪೆಟ್ಟು, ವ್ಯಥೆ-ಮುಂತಾದವು ಈಗ ಇರುವವೇನು? ಇನ್ನೂ ಸರಿಯಾಗಿ ನೋಡಿದರೆ ಇವರೆಲ್ಲರಿಗೂ ಹಿಂದೆ ಎಷ್ಟು ಜನ್ಮಗಳಾಗಿರಬಹುದು, ಅವುಗಳಲ್ಲಿ ಎಷ್ಟು ಶರೀರಗಳನ್ನೂ ಅವುಗಳಲ್ಲಿ ಬಗೆಬಗೆಯ ವೇದನೆಗಳನ್ನೂ ಸುಖದುಃಖಗಳನ್ನೂ ಹೊಂದಿರಬಹುದು! ಇಂಥ ಬಂದೂ ಹೋಗೀ ಮಾಡುತ್ತಿರುವ ತೋರಿಕೆಗಳನ್ನು ಮನದಂದು ಕರ್ತವ್ಯ ಕರ್ಮವನ್ನು ಬಿಡಬಹುದೆ? ಧರ್ಮಾಧರ್ಮಗಳನ್ನು ಇಂಥ ಅನಿತ್ಯದೃಶ್ಯಗಳ ಆಧಾರದ ಮೇಲೆ ನಿಲ್ಲಿಸಬಹುದೆ? ಕೂಡದು.

ಶೀತೋಷ್ಣಾದಿವೇದನೆಗಳೂ ಅವುಗಳಿಂದಾಗುವ ಸುಖದುಃಖಗಳೂ ಕೆಲವು ಕಾಲವಾದರೂ ನಿಜವಾಗಿ ತೋರಿಕೊಳ್ಳುತ್ತಿರುವವಲ್ಲವೆ? ಎಂಬ ಶಂಕೆಗೆ ಪರಿಹಾರವಾಗಿ 'ನಾಸತೋ ವಿದ್ಯತೇ ಭಾವಃ' ಎಂಬ ಶ್ಲೋಕವು ಬಂದಿದೆ ಎಂದು ಆಗಲೇ ಹೇಳಿರುತ್ತೇನೆ. ಅವು ನಮಗೆ ತೋರುವದೇ ಇಲ್ಲವೆಂದೇನೂ ಭಗವಂತನು ಹೇಳುವದಿಲ್ಲ; ಮೊಲದ ಕೊಂಬು, ಬಂಜೆಯ ಮಗ-ಮುಂತಾದ ಬರಿಯ ವಿಕಲ್ಪಗಳಂತೆ ಅವು ತೋರಿಕೆಯು ಕೂಡ ಇಲ್ಲದ ವಿಕಲ್ಪಗಳಲ್ಲ. ಆದರೇನು? ತೋರುವದು, ತೋರದಿರುವದು- ಎಂಬೆರಡು ತಾರತಮ್ಯವನ್ನು ಒಪ್ಪಿಕೊಂಡರೂ ಅವೆರಡೂ ಅಸತ್ತೇ ಎಂಬ ಹೇಳಿಕೆಗೆ ಎರಡಿಲ್ಲ. ಈ ವೇದನೆಗಳೂ ಅವುಗಳಿಂದಾಗುವ ಸುಖದುಃಖಗಳೂ ನಮ್ಮಲ್ಲಿ ನಿಜವಾದ ಮಾರ್ಪಾಡನ್ನೇ ಮಾಡುವಂತೆ ತೋರುವವಲ್ಲ!- ಎಂಬ ಪ್ರಶ್ನೆಗೂ ಇದೇ ಉತ್ತರ. ಇದೆಲ್ಲ ತೋರಿಕೆಯೇ ಹೊರತು ನಿಜವಾಗಿ ಇರುವದಲ್ಲ; ಇರುವದಾದರೆ ಮಾರ್ಪಡಬಾರದು, ನಾಶವಾಗಬಾರದು. ಆದರೆ ಇವು ಮಾರ್ಪಡುತ್ತವೆ, ನಾಶವಾಗುತ್ತವೆ. ಆದ್ದರಿಂದ ಅಸತ್ಪದಾರ್ಥಗಳೇ.

ವಿಷಯಗಳ ಸಂಬಂಧವೂ ಶೀತೋಷ್ಣಾದಿವೇದನೆಗಳೂ ಸುಖದುಃಖಗಳೂ ಆಗಮಾಪಾಯಿಗಳಾದ ದ್ವಂದ್ವಗಳು-ಎಂಬ ದೃಷ್ಟಿಗೂ ಅವು ನಿಜವಾಗಿಯೇ ತೋರಿಕೊಳ್ಳುತ್ತಿರುವವು- ಎಂಬ ದೃಷ್ಟಿಗೂ ಇರುವ ಹೆಚ್ಚುಕಡಿಮೆಯು ಈಗ ಸ್ಫುಟವಾಗುತ್ತದೆ. ಅವು ಆಗಮಾಪಾಯಿಗಳು ಎಂದರೆ ಕಾಲದಲ್ಲಿ ಬಂದು ಹೋಗುತ್ತವೆ ಎಂದು ನಮಗೆ ಅಭಿಪ್ರಾಯವಾಗುತ್ತದೆ. ಇವು ಅನಿತ್ಯವಾದವು ಎಂದು ತಿಳಿದು ಅವುಗಳೊಡನೆ ವ್ಯವಹರಿಸಬಹುದು. ಹಾಗಾದರೆ ಅವು ನಮಗೆ ಶೋಕವನ್ನುಂಟು ಮಾಡುವದಿಲ್ಲ. ಕಳ್ಳನ ಕೈಯಲ್ಲಿ ಕೊಟ್ಟ ಗಂಟಿನಂತೆ ಆಗ ನಮ್ಮ ಮನಶ್ಶಾಂತಿಯು ಯಾವ ಅಪಾಯವೂ ಇಲ್ಲದೆ ಇರುವದು. ಆಗ ನಾವು ಧರ್ಮಾಧರ್ಮಗಳ ವಿವೇಕವನ್ನು ಕಳೆದುಕೊಳ್ಳುವ ಸಂಭವವೇ ಇರುವದಿಲ್ಲ. ವೇದನೆಗಳ ಮತ್ತು ಸುಖದುಃಖಗಳ ಸಂಸಾರವು ನಮ್ಮ ಸ್ವಂತಮನೆಯಲ್ಲ, ಹಾದಿಯಲ್ಲಿ ನಾವು ತಂಗಿರುವ ಮುಸಾಫರಖಾನೆ ಅಥವಾ ದಾರಿಯಲ್ಲಿ ಆಯಾಸಪರಿಹಾರಕ್ಕೆಂದು ಸ್ವಲ್ಪ ಹೊತ್ತು ಕುಳಿತುಕೊಂಡಿರುವ ಮರದ ನೆರಳು-ಎಂಬ ಭಾವನೆಯು ನಮ್ಮನ್ನು ಯಾವಾಗಲೂ ಧಾರ್ಮಿಕಪಥದಲ್ಲಿಯೇ ಒಯ್ಯುತ್ತಿರುವದು. ಇದಿಷ್ಟೂ ಆಗಮಾಪಾಯಿ ಎಂಬ ಮಾತಿಗೆ ಕಾಲದ ಸಂಬಂಧವನ್ನು ಕೊಟ್ಟು ನಾವು ಮಾಡಿಕೊಂಡ ಅರ್ಥವು. ಆದರೆ ಈಗ ಭಗವಂತನು ಉಪದೇಶಮಾಡಿರುವದೇ ಬೇರೆ. **ಕೆಲವು ಕಾಲ ಅವುಗಳಿದ್ದು ಆಮೇಲೆ ಮೈಗರೆಯುವವೆಂಬುದಿಷ್ಟೇ ಅಲ್ಲ, ಅವುಗಳು ತೋರುವಾಗಲೂ ಅಸತ್ತಾಗಿರುತ್ತವೆ. ಹಿಂದೆ ಇಲ್ಲದೆ ಕೊನೆಯಲ್ಲಿಲ್ಲದೆ ಇದ್ದದ್ದು ನಡುವೆ ಇರುವದೆಂಬುದೆಲ್ಲಿಯ ಮಾತು? ಅಸತ್ತಾಗಿಯೇ ಇದ್ದು ಅವು ಸತ್ತಾಗಿ ತೋರುತ್ತಿವೆ.**

ಆಗಮಾಪಾಯಿಗಳು ಎಂಬುದರ ಅರ್ಥವನ್ನು ಭಗವಂತನು ಮಾರ್ಪಡಿಸಿದ ನೆಂದಾಗಲಿ ಅಥವಾ ಆ ವಿಶೇಷಣವನ್ನು ಅಲ್ಲಿಗೇ ಬಿಟ್ಟು ಈಗ ಇನ್ನೊಂದು ವಿಶೇಷಣವನ್ನು ಮಾತ್ರಾಸ್ಪರ್ಶಾದಿಗಳಿಗೆ ಕೊಟ್ಟಿರುತ್ತಾನೆಂದಾಗಲಿ ಭಾವಿಸಬಾರದು. ಆ ವಿಶೇಷಣದ ಅರ್ಥವನ್ನೇ ಈಗ ಚೆನ್ನಾಗಿ ಬಿಡಿಸಿ ತಿಳಿಸಿರುತ್ತಾನೆ, ಅಷ್ಟೆ. ಶೀತೋಷ್ಣಾದಿಗಳನ್ನು ಚೆನ್ನಾಗಿ ನೋಡಿದರೆ ಅವು ಅಸತ್ಪದಾರ್ಥಗಳಾಗಿ ಬಿಡುತ್ತವೆ. ನಿಜವೆಂದು ತೋರುವದೇ ಅವುಗಳ 'ಆಗಮ', ಬರುವಿಕೆ; 'ಸಟೆ'ಯೆಂದಾಗಿಬಿಡುವದೇ ಅವುಗಳ 'ಅಪಾಯ', ತೊಲಗುವಿಂ. ಅವು ನಿಜವಾಗಿ ಬರಲೂ ಇಲ್ಲ; ಹೋಗಲೂ ಇಲ್ಲ. ಕೆಲವು ದಿನಗಳ ಹಿಂದೆ ಬೆಂಗಳೂರಿನಲ್ಲಿ ಕೆಲವು ಧೂರ್ತರು "ಹತ್ತುಸಾವಿರದ ಗಾಂಧಿ ನೋಟು ಎರಡಾಣೆಗೆ!" ಎಂದು ಪೇಟೆಯಲ್ಲಿ ಕೂಗುತ್ತಾ ಏನೂ ತಿಳಿಯದ ಹಳ್ಳಿಯ ಜನರಿಗೆ ಅವನ್ನು ಮಾರುತ್ತಿದ್ದರಂತೆ. ಆ ನೋಟುಗಳು ಚಲಾವಣೆಯಲ್ಲಿರುವ ಸರಕಾರಿಯ ನೋಟುಗಳ ಹಾಗೆಯೇ ಕಾಣಿಸುತ್ತಿದ್ದವಂತೆ. ಆಗರೆ ಬರಹವನ್ನು ಚೆನ್ನಾಗಿ ಓದಿನೋಡಿದರೆ "I promise to pay the bearer the sum of Ten Thousand good wishes." (ಇದನ್ನು ತಂದವರಿಗೆ ಹತ್ತುಸಾವಿರ ಶುಭಾಶಯ ಗಳನ್ನು ಕೊಡುವೆನೆಂದು ಈ ಮೂಲಕ ವಾಗ್ದಾನಮಾಡಿರುತ್ತೇನೆ) ಎಂದಿತ್ತು. ಈಗ ನೋಡಿರಿ: ಕೊಂಡುಕೊಂಡಾಗ ಅವು ನಿಜವಾಗಿ ಹತ್ತುಸಾವಿರ ರೂಪಾಯಿನ ನೋಟಗಳಾಗಿದ್ದವೆಂದು ಭಾವಿಸಬಹುದೆ? ಇಲ್ಲ. ಹಾಗೆಂದು ತಿಳಿಯದ ಜನರು ಭ್ರಾಂತಿಪಟ್ಟರು. ಅಷ್ಟೇ ಅಲ್ಲವೆ? ಹೀಗೆ ಭ್ರಾಂತಿಗೆ ತೋರುವದು, ಆಮೇಲೆ ಮನಸ್ಸಿಗೆ ನಿಜವು ಹೊಳೆದು ಇಲ್ಲವೆಂದಾಗುವದು- ಇದೇ ದೃಶ್ಯಗಳ ಆಗಮಾಪಾಯಿತ್ವ, ಇದೇ ಅವುಗಳ ಅಸತ್ತ್ವ!

**ವೇದಾಂತಿಗಳು ಈ ಬಗೆಯ ಭ್ರಾಂತಿಗಳನ್ನು 'ಅಧ್ಯಾಸ' ಎಂಬ ಹೆಸರಿನಿಂದ ಕರೆಯುತ್ತಾರೆ. 'ಅಧ್ಯಾಸ' ಎಂದರೆ ಪದಾರ್ಥದಲ್ಲಿಲ್ಲದ್ದನ್ನು ಅದರ ಮೇಲೆ ಹಾಕುವ ಭಾವನೆ. ವಸ್ತುಗಳ ತತ್ತ್ವಕ್ಕೆ ನಮ್ಮ ಭಾವನೆಯನ್ನೂ ಕೂಡಿಸಿಕೊಂಡು ವ್ಯವಹರಿಸು ತ್ತಿರುವೆವು; ಈ ಭಾವನೆಗಳು ವಸ್ತುವಿನ ನಿಜವನ್ನು ಅರಿತುಕೊಂಡಾಗ ಜೊಳ್ಳಾಗಿ ಬಿಡುವವು.** ಕಳ್ಳನನ್ನು ಕಳ್ಳನೆಂದು ಅರಿತುಕೊಂಡಾಗ ಅವನು ಮಿತ್ರನೆಂದು ನಾವು ಭಾವಿಸಿದ್ದದ್ದೂ ತಪ್ಪೆಂದು ನಮಗೆ ತೋರುತ್ತದೆ. ಆದರೆ ಮಿತ್ರನೆಂದು ಅರಿತು ಕೊಂಡಾಗಲೂ ಅವನು ಕಳ್ಳನೇ ಆಗಿರುತ್ತಿದ್ದನು. **ಅಧ್ಯಾಸವು ನಿಜವೆಂದು ತೋರುತ್ತಿರುವದಕ್ಕೆ ತತ್ತ್ವವನ್ನು ಕಂಡುಕೊಳ್ಳಬೇಕೆಂಬ ಇಚ್ಛೆಯಿಲ್ಲದ್ದೇ ಪ್ರೋತ್ಸಾಹಕ ವಾಗಿರುತ್ತದೆ.** ವಿಚಾರಕ್ಕೆ **ಹೊರಟರೆ ತೋರಿಕೆಯ ಕಾಲದಲ್ಲಿಯೇ ತೋರಿಕೆಯು ಹುಸಿಯೆಂದೂ**

**ವಸ್ತುತತ್ತ್ವಕ್ಕೆ ಸಂಬಂಧಿಸಿಯೇ ಇಲ್ಲವೆಂದೂ ನಿರ್ಣಯವು ಆಗಿಬಿಡುತ್ತದೆ.** ಹಿತ್ತಾಳೆಯ ಕಲಶ, ಮಣ್ಣಿನ ಕಲಶ ಎರಡೂ ಕಲಶವೆಂಬ ದೃಷ್ಟಿಯಿಂದ ಒಂದೇ ಆಗಿರುವುವು. ಆದರೆ ತತ್ತ್ವದೃಷ್ಟಿಯಿಂದ ನೋಡಿದರೆ ಒಂದು ಹಿತ್ತಾಳೆ, ಮತ್ತೊಂದು ಮಣ್ಣು. ನಾವು ವಸ್ತುಗಳಿಂದಾಗುವ ಕೆಲಸವನ್ನು ಲಕ್ಷ್ಯದಲ್ಲಿಟ್ಟು ಅವುಗಳಲ್ಲಿಲ್ಲದ ತಾರತಮ್ಯವನ್ನು ಕಲ್ಪಿಸಿಕೊಳ್ಳುತ್ತಿರುವೆವು; ಆದರೆ ತತ್ತ್ವ ದೃಷ್ಟಿಯಿಂದ ನೋಡಿದರೆ ಈ ಭೇದವಾಗಲಿ ತಾರತಮ್ಯವಾಗಲಿ ಎಂದೂ ಇರಲೇ ಇಲ್ಲವೆಂದು ನಿರ್ಧಾರ ವಾಗುವದು. ಹಿತ್ತಾಳೆಯ ಕೊಡವೆಂದು ನಾವು ಕರೆಯುವದು ಹಿತ್ತಾಳೆಯೇ ಹೊರತು ಹಿತ್ತಾಳೆಗಿಂತ ಬೇರೆಯಾದ ಕೊಡವೆಂಬ ವಸ್ತುತತ್ತ್ವವು ಇರುವದಿಲ್ಲ. ಹಿತ್ತಾಳೆಯ ತಗಡು, ಹಿತ್ತಾಳೆಯ ಕೊಡ ಎಂಬ ಭೇದವು ಹೆಸರು, ಆಕಾರ, ಕೆಲಸ-ಇವುಗಳ ದೃಷ್ಟಿಯಿಂದಾದದ್ದು; ವಸ್ತುತತ್ತ್ವ ದೃಷ್ಟಿಯಿಂದ ಹಿತ್ತಾಳೆಯನ್ನೇ ನಾವು ಈ ಬೇರೆಬೇರೆಯ ಹೆಸರಿನಿಂದ ಕರೆಯುತ್ತಿರುವೆವು. ಹಿತ್ತಾಳೆಯ ಕೊಡವು ಒಡೆದಮೇಲೆ ಹೊಸದಾಗಿ ಹಿತ್ತಾಳೆಯಾಗುವದಿಲ್ಲ, ಅದು ಸರಿಯಾಗಿರುವಾಗಲೂ ಅದರ ನಿಜವು ಹಿತ್ತಾಳೆಯೇ.

**ನಾಮರೂಪಗಳಿಗೆ ಬೆಲೆಯನ್ನು ಕೊಡುವವರು ತತ್ತ್ವದರ್ಶಿಗಳ ದೃಷ್ಟಿಯಿಂದ ಇನ್ನೂ ಮಕ್ಕಳೇ.** ತನಗೆ ಇಷ್ಟವಿದ್ದ ಒಂದು ಚಿನ್ನದ ಒಡವೆಯನ್ನು ಕರಗಿಸುವದಕ್ಕೆ ಅಕ್ಕಸಾಲೆಯು ಪ್ರಯತ್ನಿಸುವಾಗ ಹುಡುಗನಿಗೆ ಅಳು ಬರುತ್ತದೆ; ಆದರೆ ತಂದೆಗೆ ಚಿನ್ನವು ಎಲ್ಲಿಯೂ ಹೋಗಿಲ್ಲವೆಂಬ ಅರಿವು ಇರುವದರಿಂದ ಯಾವ ದುಃಖವೂ ಆಗುವಂತಿಲ್ಲ. ವ್ಯವಹಾರದಲ್ಲಿ ತತ್ಪರರಾಗಿರುವವರಿಗೂ ಮಿಕ್ಕವರಿಗೂ ಇದೇ ತಾರತಮ್ಯವಿರುತ್ತದೆ. ದೇಹವು ಇದ್ದಂತೆ ಇರುವದಿಲ್ಲ; ಅದಕ್ಕೆ ಬಾಲ್ಯಾದಿಗಳು ಅವಶ್ಯವಾಗಿ ಬಂದೇ ತೀರುತ್ತವೆ, ರೋಗರುಜಿನಗಳೂ ಆಗಾಗ್ಗೆ ತೋರಿಕೊಳ್ಳುತ್ತಲೇ ಇರುತ್ತವೆ. ಇಷ್ಟು ಮಾತ್ರದಿಂದ ಕರ್ತವ್ಯವನ್ನು ಮರೆತು ಶೋಕದಲ್ಲಿ ಮುಳುಗಬಹುದೆ? ನದಿಯಲ್ಲಿ ಪ್ರವಾಹವು ಹೆಚ್ಚುತ್ತಿರುವದನ್ನು ಕಂಡವನು, ತೂತುದೋಣಿಯಾದರೂ ಮೇಣದಿಂದ ರಂಧ್ರವನ್ನು ಮುಚ್ಚಿಕೊಂಡಾದರೂ ಅದರಲ್ಲೇ ನದಿಯನ್ನು ದಾಟಿ ಬಿಡಬೇಕು. ಇಲ್ಲದಿದ್ದರೆ ಇನ್ನೂ ದೊಡ್ಡ ಪ್ರವಾಹವು ಬಂದು ದಾಟುವದೇ ಆಗದೆ ಹೋದೀತು! ನಮ್ಮ ಸುತ್ತಲಿನ ದೃಶ್ಯಗಳು ಮಾರ್ಪಡುತ್ತಲಿರಬಹುದು; ಆದರೆ ಜಾಣ ರಾದವರು ಅವನ್ನೇ ಉಪಯೋಗಿಸಿಕೊಂಡು ಧರ್ಮಜ್ಞಾನಗಳನ್ನು ಸಂಪಾದಿಸಿಕೊಂಡು ಪಾರಾಗಿಬಿಡಬೇಕು. ಭೀಷ್ಮಾದಿಗಳು ಯುದ್ಧದಲ್ಲಿ ಬಾಣದ ಪೆಟ್ಟಿನಿಂದ ವ್ಯಥೆಪಡಬಹುದು, ಸಾಯಲೂಬಹುದು. ಆದರೆ ಅದು ಯಾರಿಗೆತಾನೆ ತಪ್ಪಿದ್ದು? ಅರ್ಜುನನು ತಾನಾದರೂ ಇದ್ದಂತೆಯೇ ಇರುತ್ತಾನೆಯೆ? ಅವನು ಬಾಲ್ಯಾದಿಗಳನ್ನು

ದಾಟಿ ಈಗ ಈ ಸ್ಥಿತಿಗೆ ಬಂದಿರುತ್ತಾನೆ, ಈಗಲೂ ಮಾರ್ಪಡುತ್ತಿರುತ್ತಾನೆ. ಶರೀರಾದಿಗಳು ಯಾವಾಗತಾನೆ ಇದ್ದಂತೆ ಇರುವವು? ಅವು ಸ್ಥಿರವೆ, ನಿಜವೆ? ಇವುಗಳು ತಾವು ಇಲ್ಲದೆ ಇದ್ದರೂ ನಿಜವಾಗಿರುವಂತೆ ತೋರುತ್ತಾ ಅವಿವೇಕಿಗಳನ್ನು ಗೋಳುಗುಟ್ಟಿಸುತ್ತಿರುವವು.

ಆದರೆ ಮಾರ್ಪಡುತ್ತಿರುವ, ತೋರಿಹಾರುತ್ತಿರುವ, ಈ ಹುಸಿನೋಟಗಳಿಗೆಲ್ಲ ಆಧಾರವಾದ ಸತ್ಯವೊಂದಿದೆ. ಅದೇ ಪರಮಾತ್ಮನು. ಅದನ್ನು ಕಣ್ಣಿಟ್ಟು ನೋಡಬೇಕು. ಅದೊಂದಕ್ಕೇ ನಿಜವಾದ ಬೆಲೆ ಇರುವದು. ನಿಜವಾದ ಆ ತತ್ತ್ವಕ್ಕೆ ಹೋಲಿಸಿದರೆ ಇಡಿಯ ಬ್ರಹ್ಮಾಂಡವು ಕೂಡ ಸೊನ್ನೆಯೇ. ಪರಮಾತ್ಮನಿಗೆ ಸಂಬಂಧಿಸಿದಾಗ ಮಾತ್ರ ಇದಕ್ಕೆಲ್ಲ ಬೆಲೆ ಬರುತ್ತದೆ. ಸೊನ್ನೆಗಳನ್ನು ಎಷ್ಟು ಬರೆದುಕೊಂಡರೂ ಯಾವ ಬೆಲೆಯೂ ಅವಕ್ಕೆ ಇರುವದಿಲ್ಲ; ಬರಿಯ ಮೂರು ಸೊನ್ನೆಗಳನ್ನು ಒಂದರ ಪಕ್ಕದಲ್ಲೊಂದಿಟ್ಟರೆ ಏನು ತಾನೆ ಬೆಲೆ ಬಂದೀತು? ಆದರೆ ಒಂದು ಎಂಬ ಅಂಕೆಯ ಮುಂದೆ ಅವೇ ಮೂರು ಸೊನ್ನೆಗಳನ್ನಿಟ್ಟರೆ ಒಂದು ಸಾವಿರವಾಗುವದು. ಪರಮಾತ್ಮನಿಗೆ ಸಂಬಂಧಿಸಿದ ನಾಮರೂಪಗಳು ಹೆಚ್ಚಿನ ಬೆಲೆಯುಳ್ಳವಾಗಿರುವವು; ಆದರೆ ಬರಿಯ ನಾಮರೂಪಗಳು ಸೊನ್ನೆ ಇದ್ದಂತೆ ಅಸತ್ತೇ ಆಗಿರುತ್ತವೆ. **ಇದುವರೆಗೆ ನಾವು ಮಾಡಿದ ವಿಚಾರದಿಂದ ಹೊರಗಿನ ಪ್ರಪಂಚಕ್ಕಾಗಲಿ ನಮ್ಮೊಳಗಿನ ಪ್ರಪಂಚಕ್ಕಾಗಲಿ ಸೊನ್ನೆಸುತ್ತಿದಂತೆ ಆಯಿತೆಂದು ಭಾವಿಸಬಾರದು. ಇದಕ್ಕೆ ಸತ್ತಾಗಿರುವ, ಎಂದೆಂದಿಗೂ ಮತ್ತೊಂದನ್ನು ಬಯಸದೆ ನಿಜವಾಗಿಯೂ ಇದ್ದುಕೊಂಡಿರುವ ಪರಮಾತ್ಮನನ್ನು ಸಂಬಂಧಿಸಿಕೊಳ್ಳಬೇಕು; ಹಾಗಾದರೆ ನಾವು ಬದುಕಿದೆವು, ಇಲ್ಲದಿದ್ದರೆ ಶೋಕಮೋಹಗಳೇ ನಮಗೆ ಗತಿ-ಎಂದು ನಿರ್ಣಯಿಸಿದ್ದಾಗಿದೆ. ಅಷ್ಟೆ.**

ತತ್ತ್ವದರ್ಶಿಗಳಿಗೆ ಈ ನಿರ್ಣಯವು ಚೆನ್ನಾಗಿ ತಿಳಿಯುತ್ತದೆ. ಶ್ರೀ ಶಂಕರಾಚಾರ್ಯರು ಈ ವಿಷಯದಲ್ಲಿ ಹೇಳಿರುವದನ್ನು ಚೆನ್ನಾಗಿ ನೆನಪಿಗೆ ತಂದುಕೊಳ್ಳುವದರಿಂದ ನಮಗೆ ಶುಭವಾಗುವದು. ಅವರು ಕೊಟ್ಟಿರುವ ಒಂದು ದೃಷ್ಟಾಂತವು ಹೀಗಿದೆ: "ಇದು ನೀರು" ಎಂದು ಬಿಸಿಲುಕುದುರೆಯನ್ನು ನೋಡಿ ಭ್ರಾಂತಿಯಾಗುವದಷ್ಟೆ? ಆಗ ಅಲ್ಲಿ ತೋರುವ 'ನೀರು' ಇರುವದಲ್ಲವಾದರೂ 'ಇದು' ಎಂಬ ವಸ್ತು ಇದ್ದೇ ಇರುತ್ತದೆ. ಯಾವ ಹುಸಿತೋರಿಕೆಯಾದರೂ ತಾನೇ ತೋರಿಕೊಳ್ಳಲಾರದು, ಅದಕ್ಕೆ ಆಸ್ಪದವಾಗಿರುವ ಪರಮಾರ್ಥವಸ್ತುವೊಂದು ಇದ್ದೇ ಇರಬೇಕು. ಹುಸಿಯಾದ ಹಾವು ನಿಜವಾದ ಹಗ್ಗದ ಆಧಾರದಿಂದಲೇ ತೋರಿಕೊಳ್ಳುತ್ತಿರುತ್ತದೆ. ತೋರಿಕೆಯ ಹಾವನ್ನು ನಾವು ಹಗ್ಗಕ್ಕೆ ಹೊಸದಾಗಿ ಗಂಟುಹಾಕಬೇಕಾದ ಅವಶ್ಯವೇನೂ ಇಲ್ಲ, ಹಾವು ಎಂದೆಂದಿಗೂ ಹಗ್ಗಕ್ಕೆ ಸಂಬಂಧಿಸಿಕೊಂಡೇ ತೋರುತ್ತಿತ್ತು. ಇದರಂತೆ

**ನಾಮರೂಪಗಳ ಜಗತ್ತನ್ನು ಹೊಸದಾಗಿ ಪರಮಾತ್ಮನಿಗೆ ಸಂಬಂಧಿಸಬೇಕಾದದ್ದೇನೂ ಇರುವದಿಲ್ಲ; ಅದು ಎಂದೆಂದಿಗೂ ಪರಮಾತ್ಮನಿಗೇ ಸಂಬಂಧಿಸಿಕೊಂಡು ಆತನ ಆಧಾರದಿಂದಲೇ ತೋರಿಕೊಂಡಿರುವದು. ಇದರ ಕಡೆಗೆ ನಮ್ಮ ಮನಸ್ಸು ಹೋಗಿರುವದಿಲ್ಲ. ಯಾರಿಗೆ ಈ ತತ್ತ್ವವು ಮನದಟ್ಟಾಗಿರುವದೋ ಅವರು ತತ್ತ್ವದರ್ಶಿಗಳು.**

ಇಡಿಯ ಜಗತ್ತು ಪರಮಾತ್ಮನಿಗೇ ಸಂಬಂಧಿಸಿರುತ್ತದೆ ಎಂಬುದು ಬರಿಯ ನಂಬಿಕೆಯಲ್ಲ; ಇದು ಅನುಭವದಲ್ಲಿಯೂ ಇದೆ. ಇರುವ ಹಗ್ಗದಲ್ಲಿ ಇಲ್ಲದ ಹಾವು ತೋರುವಂತೆ ಸದ್ರೂಪನಾದ ಪರಮಾತ್ಮನಲ್ಲಿಯೇ ಅಸತ್ತಾದ ಜಗತ್ತು ತೋರುವದು. ಆದ್ದರಿಂದ ಯಾವದು ತೋರಿದರೂ ಅದಕ್ಕೆ ಆತ್ಮನ ಸತ್ತೆಯು, ಆತ್ಮನ ಇರವು, ತಗಲಿಕೊಂಡೇ ಅನುಭವಕ್ಕೆ ಬರುತ್ತದೆ. ಮನೆ, ಮಠ, ಬಾಗಿಲು, ಕುರ್ಚಿ, ಮೇಜು, ತಂಬಿಗೆ, ಕೊಡ ಎಂದು ನಮಗೆ ಕಾಣುತ್ತಿರುವದೆಲ್ಲ ಇರುವ ಮನೆ, ಇರುವ ಮಠ ಎಂದು ಮುಂತಾಗಿಯೇ ತೋರುತ್ತದೆ; ಇಷ್ಟೇ ಅಲ್ಲ, ಹುಸಿತೋರಿಕೆ ಯೆಂದು ನಮಗೆಲ್ಲ ಗೊತ್ತಾಗಿರುವ ಹಗ್ಗದ ಹಾವು, ಕಪ್ಪೆಚಿಪ್ಪಿನ ಬೆಳ್ಳಿ-ಮುಂತಾದವು ಗಳಾಗಲಿ, ತೀರ ಇಲ್ಲವೇ ಇಲ್ಲವೆಂದು ನಾವು ನಿಶ್ಚಯಮಾಡಿಕೊಂಡಿರುವ ಕಲ್ಪಿತಕಥೆಯ ಪಾತ್ರಗಳಾಗಲಿ, ಇರುವ ಹಾವು, ಇರುವ ಬೆಳ್ಳಿ, ಇರುವ ಊರು, ಇರುವ ಅರಸು ಎಂದು ಮುಂತಾಗಿಯೇ ತೋರಿಕೊಳ್ಳುವವು. **ಇರವನ್ನು ಸಂಬಂಧಿಸದೆ ಯಾವದನ್ನೂ ಕಲ್ಪಿಸಿಕೊಳ್ಳುವದಕ್ಕೂ ನಮ್ಮ ಮನಸ್ಸಿಗೆ ಶಕ್ತಿಯಿರುವದಿಲ್ಲ.** ಪರಮಾತ್ಮನ ನಿಜವಾದ ಇರವೇ ನಮ್ಮೆಲ್ಲರ ಒಳಗೂ ಹೊರಗೂ ತುಂಬಿತುಳುಕು ತ್ತಿರುವದು. ಅದು ಇಲ್ಲವೆಂಬ ಕಲ್ಪನೆಯೇ ಬರುವಂತೆ ಇಲ್ಲ. ಹಾಗಿದ್ದರೂ ನಾವು ಅದನ್ನು ಕಾಣೆವಲ್ಲ!

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ ಕರ್ತುಮರ್ಹತಿ ॥** (೨-೧೭)

ಈ ಬ್ರಹ್ಮಾಂಡದಲ್ಲಿ ನಾಶವಾಗದ ಸ್ವಭಾವವೇ ಇಲ್ಲದ ತತ್ತ್ವವೊಂದಿದೆ. ಇದೇ ಪರಮಾತ್ಮನೆಂಬ ವಸ್ತು. ಅದರಿಂದ ಇದೆಲ್ಲವೂ ಬಿಡಿಬಿಡಿಯಾಗಿ ತೋರಿಕೊಳ್ಳು ವಾಗಲೂ ಪ್ರಳಯಕಾಲದಲ್ಲಿ ಸೂಕ್ಷ್ಮರೂಪವನ್ನು ಹೊಂದುವಾಗಲೂ ಯಾವಾಗಲೂ ವ್ಯಾಪ್ತವಾಗಿರುತ್ತದೆ. ಆ ತತ್ತ್ವವನ್ನು ಇಲ್ಲವಾಗಿಸುವದಕ್ಕೆ ಯಾರೊಬ್ಬರಿಂದಲೂ ಆಗಲಾರದು. ಆ ತತ್ತ್ವದ ಕಡೆಗೆ ನಿಮ್ಮ ಒಳಗಣ್ಣು ಬೀಳಲಿ, ಅದನ್ನು ಕಂಡುಕೊಂಡರೆ ಶೋಕಮೋಹಗಳ ಕಾಟವು ಎಂದಿಗೂ ಇರುವದಿಲ್ಲ.

ವೇದಾಂತವೆಂಬುದು ವಿರಾಮಕಾಲದಲ್ಲಿ ಆಡುವ ವಿನೋದದ ಮಾತುಕಥೆಗಳ ಗುಂಪಿಗೆ ಸೇರತಕ್ಕದ್ದಲ್ಲ; ನಿತ್ಯವಾಗಿರುವ ನಮ್ಮ ಜೀವನಸಂಗ್ರಾಮಕ್ಕೆ ಸಂಬಂಧಿಸಿದ್ದು.

ನಾವು ತೋರಿಕೆಯ ವಸ್ತುಗಳಲ್ಲಿ ಸತ್ಯತ್ವಬುದ್ಧಿಯನ್ನು ಮಾಡಿಕೊಂಡು ಅವುಗಳಲ್ಲಿ ಕೆಲವು ಬೇಕೆಂದೂ ಇನ್ನು ಕೆಲವು ಬೇಡವೆಂದೂ ಪಟ್ಟು ಹಿಡಿದುಕೊಂಡುಬಿಟ್ಟಿದ್ದೇವೆ. ನಮಗೆ ಬೇಕಾದವುಗಳಲ್ಲಿ ರಾಗ, ಬೇಡವಾದವುಗಳಲ್ಲಿ ದ್ವೇಷ; ಈ ರಾಗದ್ವೇಷ ಗಳಿಂದಾಗುವ ಸುಖದುಃಖಗಳಿಂದ ಹಿಗ್ಗುಕುಗ್ಗುಗಳನ್ನು ಅನುಭವಿಸುತ್ತಾ ಇದೇ ಪರಮಾರ್ಥವೆಂದು ನಂಬಿರುವೆವು! "ಕರೆದುಂಬ ಕಾಮಧೇನು ಕಳ್ಳರಿಗೆ ಕೊಟ್ಟು ಬರಡೆಮ್ಮೆ ಹಾಲಿಗೆ ಬಾಯ ತೆರೆವುದು- ಎಂಥಾದ್ದೀ ಸಂಸಾರ" ಎಂದು ದಾಸವರ್ಯರು ಹಾಡಿರುವಂತೆ ಸರ್ವಾಂತರ್ಯಾಮಿಯಾಗಿ ನಮ್ಮ ಒಳಗೂ ಹೊರಗೂ ಇರುವ ನಿತ್ಯವಸ್ತುವನ್ನು ಮರೆತು, ಅನಿತ್ಯವಾಗಿರುವ ಅಸತ್ತಾದ ಈ ನಾಮರೂಪಗಳಿಗೆ ಬೆರಗಾಗಿರುವೆವಲ್ಲ! ಆಗಮಾಪಾಯಿಗಳಾದ ಈ ಹುಸಿತೋರಿಕೆಗಳೆಲ್ಲಿ! ದೇಶಕಾಲ ವಸ್ತುಗಳ ಕಟ್ಟಿಲ್ಲದೆ ತಾನೇತಾನಾಗಿರುವ ಆ ಪರಮಾತ್ಮತತ್ತ್ವವೆಲ್ಲಿ!

ಭಗವಂತನು ಅರ್ಜುನನಿಗೆ ಮಾಡಿದ ಘನವಾದ ಉಪದೇಶವಿದು. **'ಅರ್ಜುನ, ನೀನು ಅವಿವೇಕಿಗಳ ದೃಷ್ಟಿಯನ್ನು ಅವಲಂಬಿಸಿ ಅಸತ್ತಾಗಿರುವ, ಶೀತೋಷ್ಣಾದಿಗಳಿಗೆ ಇಲ್ಲದ ಬೆಲೆಯನ್ನು ಕೊಟ್ಟು ಶೋಕಕ್ಕೆ ವಶನಾಗಬೇಡ. ಅಸತ್ತು ಎಂದೆಂದಿಗೂ ಅಸತ್ತೇ, ಹುಸಿತೋರಿಕೆಯೇ; ಇದಕ್ಕೆ ಆಧಾರವಾಗಿರುವ, ಇದರ ತಿರುಳಾಗಿರುವ, ಪರಮಾತ್ಮತತ್ತ್ವವು ಎಂದಿಗೂ ಸತ್ತೇ, ಅದೊಂದೇ ಅವ್ಯಯವಾದದ್ದು-** ಎಂಬ ತತ್ತ್ವದರ್ಶಿಗಳ ಶುಭದೃಷ್ಟಿಯನ್ನವಲಂಬಿಸು! ಶೀತೋಷ್ಣಾದಿದ್ವಂದ್ವಗಳನ್ನು ಅಸತ್ತೆಂದೇ ನಿಶ್ಚಯಿಸಿ ಅವುಗಳಿಗೆ ಆಧಾರನಾಗಿರುವ ಪರಮಾತ್ಮನ ನಿಜವನ್ನು ಅರಿತುಕೊಂಡು ಆನಂದದ ಸುಗ್ಗಿಯನ್ನು ಸೂರೆಮಾಡಿಕೊ'.

## ೮. ಆತ್ಮನೂ ಶರೀರಗಳೂ ೨-(೧೭-೧೮)

### (೧೧.೮.೧೯೪೬)

ಆತ್ಮನು ನಿತ್ಯನು, ಸತ್ಯಸ್ವರೂಪನು. ನಿತ್ಯನಾದವನಿಗೆ, ಸತ್ಯಸ್ವರೂಪನಾದವನಿಗೆ, ಹುಟ್ಟುಹೊಂದುಗಳೇ ಮುಂತಾದವು ಇರುವವೆಂದು ತಿಳಿದುಕೊಳ್ಳುವದೇ **ಮೋಹವು.** ಈ ಮೋಹದಿಂದ ಶೋಕವುಂಟಾಗುವದು. ಇದರಂತೆ ಶರೀರಾದಿಗಳು ಅನಿತ್ಯ, ಅಸತ್ಯ; ಅವುಗಳು ಸತ್ಯವೆಂದೂ ನಿತ್ಯವೆಂದೂ ಬಗೆಯುವದು ಮೋಹವು. ಅದರಿಂದಲೂ ಶೋಕವುಂಟಾಗುವದು. ಇಂಥ ಶೋಕಮೋಹಗಳು ಅರ್ಜುನನನ್ನು ಸುತ್ತುಗಟ್ಟಿದ್ದವು, ಅವುಗಳಿಂದ ಬಿಡಿಸಿಕೊಳ್ಳಲಾರದೆ ಒದ್ದಾಡುತ್ತಿದ್ದ ಅವನನ್ನು ಕಂಡು ಕೃಪೆಯಿಂದ ಭಗವಂತನು ಆತ್ಮನ ಯಾಥಾತ್ಮ್ಯವನ್ನೂ ಅನಾತ್ಮದ ಯಾಥಾತ್ಮ್ಯವನ್ನೂ

ತಿಳಿಸಿಕೊಡುವದಕ್ಕೆ ಮೊದಲುಮಾಡಿರುತ್ತಾನೆ. ಕಪ್ಪೆಯಚಿಪ್ಪನ್ನು ಬೆಳ್ಳಿಯೆಂದು ತಿಳಿದು ಅತ್ತಕಡೆಗೆ ಓಡುತ್ತಿರುವವನಿಗೆ "ಇದು ಬೆಳ್ಳಿಯಲ್ಲ, ಇದು ಬರಿಯ ಕಪ್ಪೆಯ ಚಿಪ್ಪು"-ಎಂದರೆ ಹೇಗೆ ಆ ಮೋಹವು ತೊಲಗಿ ಅವನು ಓಡುವದೆಂಬ ವ್ಯಥಾಯಾಸದ ಕೆಲಸವನ್ನು ಅಲ್ಲಿಗೇ ಬಿಡುವನೋ, ಹಗ್ಗವನ್ನು ಹಾವೆಂದು ತಿಳಿದುಕೊಂಡು ಅದರ ಅಂಜಿಕೆಯಿಂದ ಇತ್ತಲಾಗಿ ಓಡುತ್ತಿರುವವನಿಗೆ "ಹೆದರಬೇಡ, ಅದು ಹಾವಲ್ಲ" ಎಂದು ಹೇಳಿದರೆ ಹೇಗೆ ಅವನು ತನ್ನ ಅಂಜಿಕೆಗೆ ತಾನೇ ನಾಚಿಕೊಂಡು ಹಗ್ಗದ ಹತ್ತಿರಕ್ಕೆ ಬರುವನೋ, ಹಾಗೆಯೇ "ಶರೀರಾದಿಗಳು ಅಸತ್ತು, ಹುಸಿತೋರಿಕೆ; ಆತ್ಮನು ಸತ್ತು, ನಿಜವಾದ ಇರವಿನ ಸ್ವರೂಪದವನು. ಇವೆರಡರ ನಿಜವನ್ನು ಬಲವರೇ ತತ್ತ್ವದರ್ಶಿಗಳು. ನೀನೂ ತತ್ತ್ವದರ್ಶಿಗಳ ಬುದ್ಧಿಯ ಕಣ್ಣಿನಿಂದ ನೋಡಿ ಆತ್ಮ, ಅನಾತ್ಮ-ಇವುಗಳ ನಿಜವನ್ನು ಗೊತ್ತುಮಾಡಿಕೊ ಹಾಗಾದರೆ ಈ ಶೋಕವು ನಿನ್ನನ್ನು ಪೀಡಿಸುವದು ತಪ್ಪಿಹೋಗುತ್ತದೆ" ಎಂದು ಭಗವಂತನು ಉಪದೇಶಿಸುತ್ತಾನೆ.

(ಇಲ್ಲಿ ಸಭಿಕರಲ್ಲಿ ಒಬ್ಬರು ಪ್ರಶ್ನೆ ಮಾಡಿದರು: ಆತ್ಮನೆಂದರೂ ಪರಮಾತ್ಮನೆಂದರೂ ಒಂದೇ ತತ್ತ್ವವೊ, ಬೇರೆಯೊ?)

ನಾನು ಎಂದು ಯಾವದನ್ನು ವ್ಯವಹರಿಸುತ್ತೇವೆಯೋ ಅದು ಆತ್ಮನು. ಶರೀರ ಇಂದ್ರಿಯಗಳು, ಮನಸ್ಸು, ಬುದ್ಧಿ-ಮುಂತಾದವುಗಳು ನನ್ನವು. ನಾನು ಇವುಗಳನ್ನು ಉಪಯೋಗಿಸುವವನು ಎಂದು ಬಗೆಯುವ ಶರೀರಾದಿಗಳ ಒಡೆಯನಿದಾನಲ್ಲ, ಇವನಿಗೆ **ಜೀವಾತ್ಮ** ಎಂದು ಹೆಸರು. ಜೀವಾತ್ಮನೆಂದರೆ ಪ್ರಾಣವನ್ನು ಧರಿಸಿರುವ ಆತ್ಮನು; ಯಾವನು "ನಾನು ಬದುಕಿದ್ದೇನೆ, ಮಾತನಾಡುತ್ತೇನೆ, ಓಡಾಡುತ್ತೇನೆ, ತೆಗೆದುಕೊಳ್ಳುತ್ತೇನೆ, ನೋಡುತ್ತೇನೆ, ಕೇಳುತ್ತೇನೆ, ಆಲೋಚಿಸುತ್ತೇನೆ, ನಿಶ್ಚಯಿಸುತ್ತೇನೆ-ಎಂದು ಮುಂತಾಗಿ ತಿಳಿದುಕೊಂಡಿರುವನೋ ಅವನೇ ಜೀವಾತ್ಮನು. ಈ ಜೀವಾತ್ಮನ ನಿಜವೇನು? ಎಂಬುದೇ ಪ್ರಕೃತದ ಪ್ರಶ್ನೆ, ಅರ್ಜುನನಿಗೆ ಈ ನಿಜವು ತಿಳಿಯದೆ ಇದೆ. ಅವನು ನಿಜವಾದ ಆತ್ಮನನ್ನೂ ಶರೀರಾದಿಗಳನ್ನೂ ಕಲೆಬೆರಕೆಮಾಡಿಕೊಂಡು ಭೀಷ್ಮಾದಿಗಳ ಶರೀರವನ್ನು ಹೊಡೆದರೆ ಭೀಷ್ಮಾದಿಗಳನ್ನೇ ಹೊಡೆದಂತೆ ಎಂದು ತಿಳಿದುಕೊಂಡಿದ್ದಾನೆ. ನನ್ನ ಹೊಲವೇ ನಾನು-ಎಂಬ ಅಭಿಮಾನದಿಂದ ಹೊಲಕ್ಕಾದ ಹೆಚ್ಚುಕುಂದುಗಳಿಂದ ತನಗೇ ಹೆಚ್ಚುಕುಂದುಗಳಾಗುವವೆಂದು ಬಗೆದು ಅವುಗಳಿಂದ ಮನಸ್ಸಿನಲ್ಲಿ ಹಿಗ್ಗುಕುಗ್ಗುಗಳನ್ನು ಅನುಭವಿಸುವ ವ್ಯಾವಹಾರಿಕನಂತೆಯೇ ಅವನು ಪ್ರಕೃತದಲ್ಲಿ ಒದಗಿರುವ ಧರ್ಮಯುದ್ಧದಿಂದ ಭೀಷ್ಮಾದಿಗಳ ಶರೀರಾದಿಗಳಿಗೆ ಆಗುವ ವ್ಯಥೆಯನ್ನು ಆತ್ಮನಿಗೆ ನಿಜವಾಗಿ ಆಗುವ ವ್ಯಥೆಯೆಂದೇ ಭಾವಿಸಿರುತ್ತಾನೆ. ಈ ಮೋಹವೇ ಅವನ ಮಿಗಿಲಿಲ್ಲದ ಶೋಕಕ್ಕೆ ಕಾರಣವಾಗಿರುತ್ತದೆ. ಅದಕ್ಕಾಗಿಯೇ

ಭಗವಂತನು ಈ ಜೀವನ ಯಾಥಾತ್ಮ್ಯವನ್ನು ತಿಳಿಸಿಕೊಡುವದಕ್ಕೆ ಮೊದಲು ಮಾಡಿರುತ್ತಾನೆ.

ಜೀವನ ನಿಜವೇನು? ಜೀವನೆಂದರೆ ನಾನು ಮೊದಲೇ ಹೇಳಿರುವಂತೆ ಪ್ರಾಣಧಾರಣೆಮಾಡಿರುವ ಶರೀರಕರಣಾದಿಗಳ ಒಡೆಯನು. ಅವನ ಒಡೆತನವೆಂಬುದು ಶರೀರಾದಿಗಳಿಂದ ಉಂಟಾಗತಕ್ಕದ್ದು. ಆದರೆ ಅವನ ನಿಜವು ಯಾವದು? ಯಾವನಲ್ಲಿ ಹೆಚ್ಚಾಗಿ ಹಣವಿರುವದೋ ಅವನು ಆ ಹಣದಿಂದ ಸಾಹುಕಾರನೆನಿಸಿ ಕೊಂಡಿರುತ್ತಾನೆ; ಆದರೆ ಆ ಹಣವು ಇರಲಿ, ಇಲ್ಲದಿರಲಿ, ಅವನು ಸ್ವತಃ ಏನು? ಅವನು ಮನುಷ್ಯ. ಬಡತನವೂ, ಸಿರಿತನವೂ ಹಣವಿಲ್ಲದ್ದು, ಹಣವಿರುವದು-ಎಂಬ ಉಪಾಧಿಯಿಂದ ಬಂದದ್ದು; ಮನುಷ್ಯನ ಸ್ವರೂಪದಲ್ಲಿ ಬಡತನವಾಗಲಿ ಸಿರಿತನವಾಗಲಿ ಸೇರಿಕೊಂಡಿರುವದಿಲ್ಲ. ಇದರಂತೆ ಶರೀರಾದಿಗಳೆಂಬ ಉಪಾಧಿಗಳಿಂದ ಜೀವಾತ್ಮ ನೆನಿಸಿಕೊಂಡಿರುತ್ತಾನಲ್ಲ, ಇವನ ಸ್ವರೂಪವೇನು? ಜೀವನನ್ನು ಶರೀರವೆನ್ನುವದಕ್ಕಿಲ್ಲ, ಏಕೆಂದರೆ ಅವನು ಅದನ್ನು ಉಪಯೋಗಿಸಿಕೊಳ್ಳುವ ಅದರ ಒಡೆಯ. ಶರೀರವು ಬಾಲ್ಯ, ಯೌವನ, ವಾರ್ಧಕ್ಯ-ಎಂಬ ಅವಸ್ಥೆಗಳನ್ನು ಪಡೆಯುತ್ತಿರುತ್ತದೆ. ಜೀವನು ಆಯಾ ಶರೀರವನ್ನು ಉಪಯೋಗಿಸಿಕೊಳ್ಳುತ್ತಾ 'ಹಿಂದೆ ಹೀಗಿದ್ದೆನು, ಈಗ ಹೀಗಿದೇನೆ' ಎಂದುಕೊಳ್ಳುತ್ತಿರುತ್ತಾನೆ. ಇಷ್ಟೇ ಅಲ್ಲ. ಈ ಶರೀರವು ಯಾವಾಗಲೂ ಇರುವದಿಲ್ಲ. ಈಗ ಕ್ಷತ್ರಿಯನಾಗಿರುವವನು ಮುಂದಿನ ಶರೀರದಲ್ಲಿ ಪುಣ್ಯವಶದಿಂದ ಬ್ರಾಹ್ಮಣನಾಗಿ ಹುಟ್ಟಬಹುದು; ಬ್ರಾಹ್ಮಣನಾಗಿ ಇರುವಾಗಲೇ ಬ್ರಾಹ್ಮಣ ಕರ್ಮಾದಿ ಗಳನ್ನು ಬಿಟ್ಟು ಪತಿತನೂ ಆಗಬಹುದು. ಆದ್ದರಿಂದ ಶರೀರದ ಸಂಬಂಧವು ಆತ್ಮನ ನಿಜಕ್ಕೆ ಸೇರಿದ್ದಲ್ಲ. ಜೀವನೆಂದರೆ ಪ್ರಾಣಧಾರಣೆಮಾಡಿರುವವನು; ಜೀವತ್ವವು ಅವನಿಗೆ ಉಪಾಧಿಯಿಂದ ಬಂದದ್ದು. ನಮ್ಮೂರಲ್ಲಿದ್ದ ಗಾಡಿಯ ರಂಗನು ಈಗ ಬಳೆಗಾರರಂಗನಾಗಿರುತ್ತಾನೆ. ಸ್ವರೂಪದಿಂದ ಅವನು ಗಾಡಿಯವನೂ ಅಲ್ಲ, ಬಳೆಗಾರನೂ ಅಲ್ಲ; ಆಯಾ ಉಪಾಧಿಗಳಿಂದ ಅವನಿಗೆ ಆಯಾ ಹೆಸರುಗಳು ಬಂದಿರುತ್ತವೆ, ಅಷ್ಟೆ. ಇದರಂತೆ ಜೀವನು ಕಣ್ಣೆಂಬ ಉಪಾಧಿಯಿಂದ ನೋಡುವವನು, ಕಿವಿಯೆಂಬ ಉಪಾಧಿಯಿಂದ ಕೇಳುವವನು, ಮನಸ್ಸೆಂಬ ಉಪಾಧಿಯಿಂದ ಯೋಚಿಸುವವನು, ಬುದ್ಧಿಯೆಂಬ ಉಪಾಧಿಯಿಂದ ನಿಶ್ಚಯಿಸುವವನು,- ಇತ್ಯಾದಿ. ಆದರೆ ಸ್ವರೂಪದಿಂದ ಅವನು ಏನು? ಆಯಾ ಕೆಲಸದ ಉಪಾಧಿಯಿಂದ ಅವನನ್ನು ಜೀವಾತ್ಮನೆಂದರೆ ನಿಜದಿಂದ ಅವನು ಏನು? ಅವನು ಆತ್ಮನೇ. ಜೀವಾತ್ಮನೆಂಬುದು ಆಯಾ ಉಪಾಧಿಗಳಿಂದ ಬಿಡಿಸಿ ಅರಿತುಕೊಳ್ಳದೆ ಇರುವಾಗ ಅವನಿಗೆ ಕೊಟ್ಟ ಹೆಸರು; ಅಜ್ಞಾನಕಲ್ಪಿತವಾದ ಆ ಹೆಸರು ಅವನ ಸ್ವಭಾವಕ್ಕೆ ಸೇರಿದ್ದಲ್ಲ. ಅವನನ್ನು

ಅವನಿರುವಂತೆಯೇ ತಿಳಿದರೆ ಅವನನ್ನು ಬರಿಯ 'ಆತ್ಮ' ಎಂದು ಕರೆಯಬೇಕು. ಅಜ್ಞಾನದಿಂದ ಕಲ್ಪಿಸಿದ ಉಪಾಧಿಸ್ವರೂಪಗಳಿಗೆ ಹೋಲಿಸಿದರೆ ಇದು **ಪರಮಾತ್ಮ** – ಹೆಚ್ಚಿನ ಆತ್ಮ-ಎನ್ನಬೇಕಾಗುವದು.

ಈ ಪರಮಾತ್ಮನು ಇದೆಲ್ಲವನ್ನೂ ವ್ಯಾಪಿಸಿಕೊಂಡಿರುತ್ತಾನೆ. ಜನರು ತಮ್ಮ ಸ್ವರೂಪವನ್ನು ಸ್ವಭಾವದಿಂದ ಹೀಗೆ ತಿಳಿದುಕೊಂಡಿರುತ್ತಾರೆ: ಶರೀರಾದಿಗಳೆಂಬ ಪರಿಧಿಗೆ ನಾನು ಕೇಂದ್ರವು. ಒಂದು ವೃತ್ತದಲ್ಲಿ ಕೇಂದ್ರವು ಹೇಗಿರುವದೋ, ಹಾಗೆ ನಾನಿರುವೆನು. ಕೇಂದ್ರಕ್ಕೆ ಸಮಾನವಾದ ದೂರದಲ್ಲಿದ್ದು ಅದಕ್ಕೆ ಕಟ್ಟುಬಿದ್ದ ಇರವಿನವಾಗಿ ಹೇಗೆ ಪರಿಧಿಯ ಬಿಂದುಗಳಿರುವವೊ, ಹಾಗೆ ಶರೀರಾದಿಗಳು ನನಗೆ ಕಟ್ಟುಬಿದ್ದಿರುವ ಇರವಿನವಾಗಿವೆ. ಶರೀರವೇ ನನ್ನ ಕ್ಷೇತ್ರದ ಎಲ್ಲೆಕಟ್ಟು. ಆದರಿಂದ ಮುಂದಿರುವದೆಲ್ಲ ನನಗೆ ಹೊರಗಿನದು-ಎಂದು ನಾವುಗಳು ತಿಳಿದುಕೊಂಡಿರುವೆವು. ಬಂಡಿಯಲ್ಲಿ ದಿಂಬುಹಾಕಿಕೊಂಡು ಕುಳಿತಿರುವ ಸಾಹುಕಾರನು "ನನ್ನದೀ ಬಂಡಿ, ನಾನು ಇದರಲ್ಲಿ ಕುಳಿತುಕೊಂಡು ನನ್ನ ಉದ್ದಿಷ್ಟಸ್ಥಲಕ್ಕೆ ಇದನ್ನು ಹೊಡೆಯಿಸುತ್ತಿರುವೆನು" ಎಂದು ಅಭಿಮಾನಪಡುವಂತೆ ನಾವುಗಳು ಅಹಂಕಾರವೆಂಬ ದಿಂಬನ್ನು ಒರಗಿಕೊಂಡು ಶರೀರದಲ್ಲಿ ಕುಳಿತು "ನನ್ನದೀ ಶರೀರವು, ನನ್ನ ಇಷ್ಟದಂತೆ ಇದರಿಂದ ಕೆಲಸವನ್ನು ತೆಗೆದು ಕೊಳ್ಳುತ್ತಿರುವೆನು" ಎಂದು ಬಗೆಯುತ್ತಿರುವೆವು. ಆದರೆ ಭಗವಂತನು ಹೇಳುವದೇನೆಂದರೆ "ನಿಮ್ಮ ಸ್ವರೂಪವು ಹೀಗೆ ಶರೀರಪರಿಚ್ಛಿನ್ನವಾಗಿಲ್ಲ, ಅದು ನಿಜವಾಗಿ ಈ ಚರಾಚರ ಜಗತ್ತೆಲ್ಲವನ್ನೂ ತುಂಬಿಕೊಂಡಿರುವ ಆತ್ಮನಾಗಿದೆ. ಒಂದು ಫುಟ್‌ಬಾಲಿನ (ಕಾಲುಚಂಡಿನ) ಒಳಗಿರುವ ಗಾಳಿಯು, ಒಂದುವೇಳೆ ಅದು ಯೋಚಿಸಬಲ್ಲ ಪ್ರಾಣಿಯಾಗಿದ್ದರೆ, "ನಾನೀ ಚೆಂಡಿನ ಒಳಗೇ ಇರುವೆನು, ನಾನು ಹೊರಕ್ಕೆ ಎಲ್ಲಿಯೂ ಹೋಗುವಂತಿಲ್ಲ; ಈ ಚೆಂಡು ಎಲ್ಲಿ ಹೋದರೆ ಅಲ್ಲಿಗೆ ಹೋಗುವೆನು. ಈ ಚೆಂಡೇ ನನಗೆ ಎಲ್ಲೆಕಟ್ಟು. ಒಂದುವೇಳೆ ಈ ಚೆಂಡಿನ ಬ್ಲಾಡರು ಒಡೆದು ಹೋದರೆ ಆಗ ನಾನು ವಾಯುಮಂಡಲದಲ್ಲಿ ಬೆರೆತುಕೊಳ್ಳುವೆನು"-ಎಂದು ಯೋಚಿಸುತ್ತಿರುವಂತೆಯೇ ನೀವು ನಿಮ್ಮ ಸ್ವರೂಪವನ್ನು ಶರೀರಾದಿಗಳ ಸುತ್ತುಗಟ್ಟಿಗೆ ಬಂಧಿಸಿಕೊಂಡಿರುತ್ತೀರಿ. ಆದರೆ ವಸ್ತುಸ್ಥಿತಿಯೇನೆಂಬುದನ್ನು ಸ್ವಲ್ಪ ಬಿಡಿಸಿ ನೋಡಿದರೆ, ಫುಟ್‌ಬಾಲುಬ್ಲಾಡರು ಒಡೆದುಕೊಂಡ ಮೇಲೆಯೇ ಅದರೊಳಗಿರುವ ಗಾಳಿಯು ಹೊರಗಿನ ವಾಯುವಿನಲ್ಲಿ ಸೇರುವದೆ? ನಿಜವಾಗಿ ಈಗಲೂ ಅದು ಮಹಾವಾಯುವಿನ ಅಂಶವೇ ಅಲ್ಲವೆ? ನಿಜವಾಗಿ ನೋಡಿದರೆ ಕಾಲುಚಂಡೆಂಬುದೇ ಮಹಾವಾಯುವಿನಲ್ಲಿ ಮುಳುಗಿಕೊಂಡಿದೆ. ವಾಯುಮಂಡಲ ದೊಳಗೆ ಇರುವ ಚೆಂಡು ಅದನ್ನು ತನ್ನ ಅಳತೆಗೆ ಕಟ್ಟುಮಾಡುವದೆಂದರೇನು?

ಅದರ ಒಳಗೂ ಹೊರಗೂ ಮೇಲೂ ಕೆಳಗೂ ಎಲ್ಲೆಲ್ಲಿಯೂ ವಾಯುವೇ ಇದೆ. ಅಲ್ಲವೆ? ಇದರಂತೆ ನಿಮ್ಮ ಒಳಗೂ ಹೊರಗೂ ಎಲ್ಲೆಲ್ಲಿಯೂ ಆತ್ಮನೇ ಇರುತ್ತಾನೆ. ಆತ್ಮನನ್ನು ಬಿಟ್ಟು ಯಾವದೊಂದೂ ಇರುವದಿಲ್ಲ; ಶರೀರಾದಿಗಳೂ ಆತ್ಮನ ಆಧಾರದಿಂದಲೇ ತೋರಿಕೊಳ್ಳುತ್ತಿರುತ್ತವೆ. ನಮ್ಮ ದೇಶದ ವಾಯು, ನಿಮ್ಮ ದೇಶದ ವಾಯು-ಎಂದು ವಾಯುವಿನಲ್ಲಿ ಹೇಗೆ ಭೇದವಿಲ್ಲವೋ, ವಾಯುವೆಲ್ಲವೂ ಹೇಗೆ ತುಂಡಾಗದೆ ಒಂದೇ ಆಗಿರುವದೋ, ಹಾಗೆಯೇ ಆತ್ಮನು ಎಲ್ಲಾ ಶರೀರಗಳಲ್ಲಿಯೂ ಒಬ್ಬನೇ, ಎಲ್ಲಾ ವಸ್ತುಗಳಲ್ಲಿಯೂ ಒಬ್ಬನೇ. ಯಾವದೊಂದು ಶರೀರಕ್ಕೂ ಈ ಆತ್ಮನು ಗಂಟುಬಿದ್ದಿಲ್ಲ. ಎಲ್ಲವನ್ನೂ ಅವನೊಬ್ಬನೇ ವ್ಯಾಪಿಸಿಕೊಂಡಿರುತ್ತಾನೆ.

ಇದಿಷ್ಟು ಆತ್ಮನ ಯಾಥಾತ್ಮ್ಯವು. ಇನ್ನು ಶರೀರಾದಿಗಳೊ? "ಅನ್ತವನ್ತ ಇಮೇ ದೇಹಾಃ". ಈ ದೇಹಗಳು ಅಂತವುಳ್ಳವು, ಅನಿತ್ಯವಾದವು, ಅಸತ್ತಾದವುಗಳು. ಅವುಗಳಿಂದ ಆತ್ಮನು ಕಟ್ಟುವಡೆಯುವದಾಗಲಿ, ಅವುಗಳ ಧರ್ಮದಿಂದ ಆತ್ಮನಿಗೆ ದ್ವಂದ್ವಗಳ ಸಂಸರ್ಗವಾಗುವದಾಗಲಿ ಎಂದಿಗೂ ಆಗಲಾರದು. ಇಲ್ಲಿ ಭಗವಂತನು ಶರೀರಾದಿಗಳನ್ನೇ ಮುಖ್ಯವಾಗಿ ಅಸತ್ತೆಂದು ಹೇಳುವದಕ್ಕೆ ಹೊರಟಿರುತ್ತಾನೆ. ಆತನ ಅಭಿಪ್ರಾಯದಲ್ಲಿ ಆತ್ಮ ಅನಾತ್ಮ-ಎಂಬ ಎರಡು ರಾಶಿಗಳನ್ನು ಬಿಟ್ಟರೆ ಮೂರನೆಯ ರಾಶಿಯೇ ಇಲ್ಲ. ನಮ್ಮ ಹೊರಗೆ ಕಾಣುವ ನೆಲ, ನೀರು, ಬೆಂಕಿ, ಗಾಳಿ, ಬಯಲು, ಗುಡ್ಡ, ನದಿ, ಸಮುದ್ರ ಮುಂತಾದವುಗಳೆಲ್ಲವೂ ಅನಾತ್ಮವೇ. ಆತ್ಮನೊಬ್ಬನೇ ಪರಮಾರ್ಥವು, ಅವನೊಬ್ಬನೇ ಸತ್ತು, ನಿಜವಾಗಿರುವವನು. ಅನಾತ್ಮವೆಲ್ಲವೂ ಅಸತ್ತೇ. ಆದರೆ ಅರ್ಜುನನ ದೃಷ್ಟಿಯಿಂದ, ವ್ಯಾವಹಾರಿಕರೆಲ್ಲರ ದೃಷ್ಟಿಯಿಂದ, ನೋಡಿದರೆ ನಮ್ಮ ಶರೀರದವರೆಗಿನ ಅನಾತ್ಮಕ್ಕೂ ಅದರ ಹೊರಗಿನ ಅನಾತ್ಮಕ್ಕೂ ಒಂದು ಹೆಚ್ಚು ಕಡಿಮೆಯಿರುತ್ತದೆ. ಸೂರ್ಯನು ಎಲ್ಲಾ ಕಡೆಗೂ ತನ್ನ ಕಿರಣಗಳನ್ನು ಪಸರಿಸಿದ್ದರೂ ಮೋಡವು ಗುಡಿಗಟ್ಟಿಕೊಂಡಿರುವಾಗ ಅವನ ಸುತ್ತಲೂ ಒಂದು ವೃತ್ತವು ಕಾಣಿಸಿಕೊಳ್ಳುವದಷ್ಟೆ. ಆ ವೃತ್ತದಲ್ಲಿ ಸೂರ್ಯನ ಬೆಳಕು ವಿಶೇಷವಾಗಿ ಹರಡಿರುವಂತೆ ತೋರುತ್ತಿರುವದು. ಇದರಂತೆ ನಮಗೆ ನಮ್ಮ ಸುತ್ತಲೂ ಇರುವದೆಲ್ಲವೂ ಅನಾತ್ಮವೇ ಆದರೂ, ಅದೆಲ್ಲವೂ ನಮ್ಮ ಆತ್ಮಚೈತನ್ಯದ ಬೆಳಕಿನಿಂದಲೇ ವ್ಯಾಪ್ತವಾಗಿರುವದಾದರೂ ವ್ಯವಹಾರದ ಅಜ್ಞಾನಮೇಘವು ಗುಡಿಗಟ್ಟಿರುವ ಸಮಯದಲ್ಲಿ ದೇಹಾದಿಗಳಲ್ಲಿ ನಮಗೆ ವಿಶೇಷವಾದ ಅಭಿಮಾನವಿರುತ್ತದೆ. ಅವುಗಳ ಇರುವಿಕೆಯನ್ನು ನಾವು ನೇರಾಗಿ ಅನುಭವಿಸುವಂತೆ ಮಿಕ್ಕವುಗಳ ಇರವನ್ನು ಅನುಭವಿಸುತ್ತಿಲ್ಲವೆಂದು ನಮಗೆ ತೋರುತ್ತಿರುವದು. ಹೊರಗೆ ನೆಲದ ಮೇಲೆ ಹರಿದಾಡುತ್ತಿರುವ ಚೇಳಿನ ಇರವನ್ನೂ, ಅದರ ಕಡಿತದಿಂದ ನಮಗೆ ಮೈಯಲ್ಲಾಗುವ ಉರಿಯ ಇರವನ್ನೂ, ನಾವು

ಅನುಭವಿಸುವದರಲ್ಲಿ ಇರುವ ತಾರತಮ್ಯವನ್ನು ಹೋಲಿಸಿ ನೋಡಿದರೆ ಆಗ ಶರೀರದವರೆಗಿನ ಅನಾತ್ಮಕ್ಷೇತ್ರದ ಹೆಚ್ಚುಗಾರಿಕೆಯು ನಿಮ್ಮ ಮನಸ್ಸಿಗೆ ತಟ್ಟುತ್ತದೆ. ಹೊರಗಿನ ವಸ್ತುಗಳಲ್ಲಿ ಇದು ಎಂಬ ಅರಿವೇ ಮುಖ್ಯ, ಆದರೆ ಶರೀರಾದಿಗಳಲ್ಲಿ ನಾನು ಎಂಬ ಅರಿವೇ ಮುಖ್ಯ. ಹೊರಗಿನ ವಸ್ತುಗಳಲ್ಲಿ ನಾನೆಂದಾಗಲಿ, ನನ್ನದೆಂದಾಗಲಿ, ಅಭಿಮಾನವುಂಟಾಗಬೇಕಾದರೆ ಶರೀರಾದಿಗಳ ಮೂಲಕ ಅವು ನಮಗೆ ತಾಕಬೇಕು. ಹೀಗೆ ಶರೀರದಲ್ಲಿ ವಿಶೇಷವಾದ ಅಭಿಮಾನವಿರುವದರಿಂದ ಅದರ ಮೂಲಕ ನಮಗೆ ಹೆಚ್ಚಿನ ಶೋಕವು ಉಂಟಾಗುತ್ತಿರುತ್ತದೆ. **ಆದ್ದರಿಂದ ಭಗವಂತನು ಈ ಅಭಿಮಾನವನ್ನು ತಪ್ಪಿಸುವದಕ್ಕಾಗಿ "ಅನ್ತವನ್ತ ಇಮೇ ದೇಹಾಃ ನಿತ್ಯಸ್ಯೋಕ್ತಾಃ ಶರೀರಿಣಃ" ಎಂದಿರುತ್ತಾನೆ.**

ಶರೀರಗಳಿಗೆ ಅಂತವುಂಟು, ಅವು ಕೊನೆಗಾಣುವಂಥವು-ಎಂದರೆ ನಮ್ಮ ಮನಸ್ಸಿನಲ್ಲಿ ಕಾಲದ ಸಂಬಂಧದ ಅರಿವೇ ಉಂಟಾಗುವದು ಸ್ವಾಭಾವಿಕ. ಕೊನೆಗಾಣುವದೆಂದರೆ ಇನ್ನು ಮೇಲೆ ಇಲ್ಲವಾಗುವದು ಎಂದೇ ಅರ್ಥವೆಂದು ನಮ್ಮ ಭಾವನೆ. ಆದರೆ ಇರುವದಕ್ಕೆ ಅಭಾವವಿಲ್ಲ, ಇಲ್ಲದ್ದಕ್ಕೆ ಭಾವವಿಲ್ಲ; ಇರುವದು ಎಂದೆಂದಿಗೂ ಇರುತ್ತದೆ, ಇಲ್ಲದ್ದು ಎಂದೆಂದಿಗೂ ಇಲ್ಲ-ಎಂದು ಆಗಲೇ ಭಗವಂತನು ಹೇಳಿರುವ ಸೂತ್ರವಾಕ್ಯವನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು. **ಈ ಶರೀರಗಳು ಅನಿತ್ಯಮಾತ್ರವಲ್ಲ, ಇವು ಅಸತ್ಯವೂ ಆಗಿವೆ. ಇವುಗಳು ಪರಮಾರ್ಥವಾಗಿ ಇಲ್ಲವೇ ಇಲ್ಲ.** ಜಡಭರತನ ಬಳಿಗೆ ಬಂದ ರಹೂಗಣನಿಗೆ ಆತನು ಉಪದೇಶ ಮಾಡುವಾಗ ಕೊಟ್ಟ ಪಲ್ಲಕ್ಕಿಯ ದೃಷ್ಟಾಂತವನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಪಲ್ಲಕ್ಕಿ ಎಂದರೇನು? ಬಿದಿರು ಬಂಬೆ? ಹಲಗೆಯೆ? ಅದಕ್ಕೆ ಕಟ್ಟಿರುವ ಗೊಂಡೆಯಗಳೆ? ಮೇಲುಮುಸುಕೆ? ಇವುಗಳಲ್ಲಿ ಯಾವದೊಂದೂ ಪಲ್ಲಕ್ಕಿಯಲ್ಲವಾದರೆ ಪಲ್ಲಕ್ಕಿ ಎಂಬುದು ಬರಿಯ ಹೆಸರೇ ಹೊರತು ಮತ್ತೇನೂ ಅಲ್ಲವೆಂದಾಗುತ್ತದೆ. ಇದರಂತೆ ಶರೀರಾದಿಗಳನ್ನೂ ತಿಳಿಯಬೇಕು. ಕಾರ್ಯವೆಂಬುದು ಬರಿಯ ಮಾತಿನಿಂದಾಗಿರುವದು, ಬರಿಯ ಹೆಸರೇ-ಎಂದು ಶ್ರುತಿಯು ಹೇಳಿರುವಂತೆ ಸಪ್ತಧಾತುಗಳನ್ನು ಬಿಟ್ಟರೆ ಶರೀರವೆಂಬುದು ಬೇರೆಯಿಲ್ಲ, ಆ ಧಾತುಗಳು ಪಂಚಭೂತಗಳನ್ನು ಬಿಟ್ಟರೆ ಬೇರೆ ಇಲ್ಲ; ಭೂತಗಳಲ್ಲಿ ಪೃಥ್ವಿಯು ಅಪ್ಪನ್ನು ಬಿಟ್ಟು ಬೇರೆಯಾಗಿಲ್ಲ, ಅಪ್ಪು ತೇಜಸ್ಸನ್ನು ಬಿಟ್ಟಿಲ್ಲ, ತೇಜಸ್ಸು ವಾಯುವನ್ನು ಬಿಟ್ಟಿಲ್ಲ, ವಾಯುವು ಆಕಾಶಕ್ಕಿಂತಲಾಗಲಿ, ಆಕಾಶವು ಆತ್ಮನಿಗಿಂತಾಗಲಿ, ಬೇರೆಯಿರುವದಿಲ್ಲ. ಇದೆಲ್ಲ ಬರಿಯ ಮಾಯೆ, ಹುಸಿತೋರಿಕೆ; ಇರುವದೆಲ್ಲ ಆತ್ಮನೇ. ಕನಸಿನಲ್ಲಿ ನಮಗೊಂದು ಶರೀರವಿರುವಂತೆಯೂ ನಮ್ಮ ಸುತ್ತಮುತ್ತಲೂ ಅನೇಕ ಶರೀರಗಳಿರುವಂತೆಯೂ ತೋರುತ್ತಿರುತ್ತದೆ. ಆದರೆ

ನಿಜವಾಗಿ ನೋಡಿದರೆ? ಎಚ್ಚತ್ತರೆ ಆ ದೇಹಗಳಲ್ಲಿ ಯಾವದೊಂದೂ ಇರಲೇ ಇಲ್ಲ ಎಂದು ನಿಶ್ಚಯವಾಗಿಬಿಡುತ್ತದೆ. ನಾವು ಒಬ್ಬರೇ ಅನೇಕಶರೀರಗಳಾಗಿ ತೋರಿ ಕೊಂಡೆವು, ಅಷ್ಟೆ. ಹೀಗೆಯೇ ಈ ಶರೀರಗಳೆಲ್ಲವೂ ಅಂತವುಳ್ಳವುಗಳು, ಸರಿಯಾದ ತಿಳಿವಳಿಕೆಯುಂಟಾದಕೂಡಲೆ ಅವೆಲ್ಲವೂ ಹಾರಿಹೋಗುವವು. ಶರೀರಗಳು ಎಂಬ ಬಹುವಚನವನ್ನು ಉಪಯೋಗಿಸಿರುವದು ಅವುಗಳಲ್ಲಿ ಯಾವದೊಂದೂ ನಿಜವಲ್ಲ, ಅವುಗಳೆಲ್ಲಕ್ಕೂ ಆತ್ಮನು ಒಬ್ಬನೇ ಎಂಬುದನ್ನು ಮನಸ್ಸಿಗೆ ಹತ್ತಿಸುವದಕ್ಕೆ.

'ನಿತ್ಯನಾದ ಶರೀರಿಯ ಶರೀರಗಳು' ಎಂಬುದರ ಅರ್ಥಸ್ವಾರಸ್ಯವನ್ನು ಸ್ವಲ್ಪ ಲಕ್ಷ್ಯವಿಟ್ಟು ಅರಿತುಕೊಳ್ಳಬೇಕಾಗಿದೆ. ಆತ್ಮನಿಗೆ ಯಾವ ಶರೀರಗಳೂ ನಿಜವಾಗಿಲ್ಲ ವೆಂದಮೇಲೆ ಅವನು ಶರೀರಿ ಎಂಬುದಾದರೂ ಹೇಗೆ? ನಾವು ಶರೀರಿಗಳೆಂದೂ ಬೇರೆಬೇರೆಯಾಗಿರುವೆವೆಂದೂ ತಿಳಿದುಕೊಂಡಿರುತ್ತೇವೆ. ನಿಜವು ಹೀಗಿಲ್ಲ. ನಮ್ಮೆಲ್ಲರಿಗೂ ಒಬ್ಬನೇ **ಆತ್ಮನು** ಇರುತ್ತಾನೆ, ವಾಯುಮಂಡಲದಲ್ಲಿ ಅನೇಕ ಸೋರೆಯಬುರುಡೆಗಳನ್ನು ಬಿಟ್ಟರೆ ಅವುಗಳಲ್ಲಿರುವ ವಾಯುವೆಲ್ಲ ಒಂದೇ ಆಗಿರುವಂತೆ ಈ ದೇಹಗಳಲೆಲ್ಲ ಒಬ್ಬನೇ ಆತ್ಮನು ಇದ್ದುಕೊಂಡಿರುತ್ತಾನೆ. ಬ್ರಹ್ಮನಿಂದ ಹಿಡಿದು ಸ್ತಂಬದವರೆಗೆ ದೇವತೆಗಳು, ಮನುಷ್ಯರು, ಪಶುಗಳು, ಪಕ್ಷಿಗಳು, ಕ್ರಿಮಿಗಳು, ಕೀಟಗಳು, ಸ್ಥಾವರ-ಎಲ್ಲ ಪ್ರಾಣಿಗಳಲ್ಲಿಯೂ ಅಚ್ಚಳಿಯದ ಶುದ್ಧಚೈತನ್ಯ ಸ್ವರೂಪನಾದ ಒಬ್ಬನೇ ಆತ್ಮನು ಇರುತ್ತಾನೆ. ಈ ಶರೀರಗಳೂ ಕನಸಿನ ಶರೀರಗಳಂತೆ ಬೇರೆ ಬೇರೆಯಾಗಿ ಅನೇಕವಾಗಿ ಕಾಣುತ್ತಿವೆ. ಆದ್ದರಿಂದಲೇ ಪರಮಾರ್ಥವಾಗಿ ಆತ್ಮನು ಶರೀರಿಯೂ ಅಲ್ಲ.

ಆತ್ಮನು ನಿತ್ಯನು, ಅವಿನಾಶಿ ನಿತ್ಯವಾಗಿರುವ ವಸ್ತುಗಳು ಕೆಲವು ಮಾರ್ಪಡುತ್ತಲೇ ಇರುತ್ತವೆ. ಪೃಥ್ವಿ ಮುಂತಾದವುಗಳು ಬೇರೆಬೇರೆಯ ವಿಕಾರಗಳನ್ನು ಹೊಂದುತ್ತಲೇ ಇರುತ್ತವೆಯಾದರೂ ಅದೇ ವಸ್ತು ಎಂಬ ಬುದ್ಧಿಯಿರುವದರಿಂದ ಅವುಗಳನ್ನು ನಿತ್ಯವೆಂದು ಕರೆಯುವದುಂಟು. ಆದರೆ ಆತ್ಮನು ಅಂಥ ಪರಿಣಾಮಿನಿತ್ಯನಲ್ಲ; ಅವನು ಬೇರೆ ಬೇರೆ ರೂಪವನ್ನು ತಳೆಯುವ ಪರಿಣಾಮಿಯಲ್ಲ. ಅವನು ಕೂಟಸ್ಥನಿತ್ಯನು, ಇದ್ದಂತೆಯೇ ಇರುವವನು, ಯಾವ ಮಾರ್ಪಾಡನ್ನೂ ಹೊಂದದವನು.

ಆತ್ಮನ ಈ ಯಾಥಾತ್ಮ್ಯವನ್ನು ನಾವು ಯಾವ ಪ್ರಮಾಣದಿಂದ ಅರಿತು ಕೊಳ್ಳಬೇಕು? ಅವನು ಇಂದ್ರಿಯಗಳಿಗೆ ಗೋಚರನಾಗಿರುವವನಲ್ಲ; ಮಾತಿನಿಂದ ತಿಳಿಸುವದಕ್ಕಾಗಲಿ, ಮನಸ್ಸಿನಿಂದ ಚಿಂತಿಸುವದಕ್ಕಾಗಲಿ, ಊಹಿಸುವದಕ್ಕಾಗಲಿ ಬರುವವನಲ್ಲ. ಯಾವದು ಕರಣಗಳಿಗೆ ಗೋಚರವೋ ಅದನ್ನು ಪ್ರತ್ಯಕ್ಷಪ್ರಮಾಣದಿಂದ ಕಾಣಬಹುದು; ಅಥವಾ ಪ್ರತ್ಯಕ್ಷಕ್ಕೆ ಗೋಚರವಾಗುವ ಗುರುತಿನಿಂದ, ಹೊಗೆಯಿಂದ

ಬೆಂಕಿಯ ಇರವನ್ನು ಊಹಿಸಿ ನಿಶ್ಚಯಿಸುವಂತೆ, ಅನುಮಾನಪ್ರಮಾಣದಿಂದಲಾದರೂ ಅರಿಯಬಹುದು. ಆದರೆ ಇವನು ಪ್ರಮಾಣಗಳಿಗೆ ಗೋಚರನೇ ಅಲ್ಲ. ಯಾವದು ಪ್ರಮಾಣಕ್ಕೆ ಗೋಚರವಾಗುವದಕ್ಕೆ ತಕ್ಕದ್ದಾಗಿರುವದೋ ಅದಕ್ಕೆ **ಪ್ರಮೇಯವೆಂದು** ಹೆಸರು. ಆದರೆ ಆತ್ಮನು ನಮ್ಮ ಸ್ವರೂಪವೇ ಆಗಿರುವದರಿಂದ **ಅಪ್ರಮೇಯನು,** ಯಾವ ಪ್ರಮಾಣಕ್ಕೂ ಗೋಚರನಲ್ಲ. "ಹಾಗಾದರೆ ಆತ್ಮನೇ ಇಲ್ಲವೆಂದಾಗುವದಿಲ್ಲವೆ?" ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರವೇನೆಂದರೆ ಯಾವದು ಪ್ರಮಾಣಕ್ಕೆ ಗೋಚರವಾಗತಕ್ಕದ್ದೋ ಅದು ಪ್ರಮಾಣದಿಂದ ಅರಿಯುವದಕ್ಕೆ ಬರದೆ ಇರುವಾಗ ಇಲ್ಲ ಎನ್ನುವದು ಸರಿ. ಉದಾಹರಣೆಗೆ ಬಲವಾದ ಬೆಳಕು ಇರುವಾಗ ನಮ್ಮ ಮುಂದೆ ಗಡಿಗೆ ಇದೆ-ಎಂದರೆ ಕಣ್ಣಿರುವವರು ಯಾರು ನೋಡಿದರೂ ಅದು ಕಾಣಬೇಕು; ಹಾಗೆ ಕಾಣದೆ ಇದ್ದರೆ ಅದು ಇಲ್ಲ ಎಂದು ನಿಶ್ಚಯಿಸಬಹುದು; **ಆದರೆ ಯಾವದು ಯಾವ ಪ್ರಮಾಣಕ್ಕೂ ಸಿಕ್ಕುವ ಸ್ವಭಾವದ್ದೇ ಅಲ್ಲವೋ ಅದನ್ನು ಪ್ರಮಾಣದಿಂದ ನೋಡುವದು ತಾನೆ ಹೇಗಾದೀತು? ಹಾಗೆ ಪ್ರಮಾಣದಿಂದ ನೋಡುವದಕ್ಕೆ ಆಗದ ಮಾತ್ರಕ್ಕೆ ಅದು ಇಲ್ಲವೆಂದು ಹೇಗೆ ತಾನೆ ನಿಶ್ಚಯಿಸುವದಕ್ಕಾದೀತು?**

ಇದು ಹೋಗಲಿ. ಪ್ರಮಾಣಕ್ಕೆ ಗೋಚರನಲ್ಲದ ಆತ್ಮನನ್ನು ಅರಿತುಕೊಳ್ಳುವದಾದರೂ ಹೇಗೆ? ಮತ್ತೊಬ್ಬರಿಗೆ ಅವನ ಇರವನ್ನು ತಿಳಿಸಿಕೊಡುವದಾದರೂ ಹೇಗೆ?- ಎಂಬ ಪ್ರಶ್ನೆಯು ಸಹಜವಾಗಿ ಇಲ್ಲಿ ಎದ್ದುಕೊಳ್ಳುತ್ತದೆಯಷ್ಟೆ. ಈ ಪ್ರಶ್ನೆಗೆ ಉತ್ತರವನ್ನು ಹೇಳಬೇಕಾಗಿರುತ್ತದೆ.

ಆತ್ಮನೆಂದರೆ ನಮ್ಮ ಸ್ವರೂಪವೇ; ಅದರ ಬೆಳಕಿನಿಂದಲೇ ನಾವು ಪ್ರಮಾಣಗಳನ್ನು ಅರಿಯುತ್ತಿರುವೆವು, ಪ್ರಮಾಣಗಳಿಂದ ಪ್ರಮೇಯಗಳನ್ನೂ ಅರಿಯುತ್ತಿರುವೆವು. ಇಂಥ ಸ್ವರೂಪವು ಇದೆಯೊ, ಇಲ್ಲವೊ-ಎಂದು ಸಂಶಯಪಡುವದಕ್ಕೆ ಆಗುವಂತಿಲ್ಲ. ಸ್ವಾತ್ಮನಿರೂಪಣವೆಂಬ ಗ್ರಂಥದಲ್ಲಿ ಹೇಳಿರುವಂತೆ **"ಅಸ್ತಿ ಸ್ವಯಮಿತ್ಯಸ್ಮಿನ್ನರ್ಥೇ ಕಸ್ಯಾಸ್ತಿ ಸಂಶಯಃ ಪುಂಸಃ"** ತಾನು ಇದ್ದೇನೊ, ಇಲ್ಲವೊ-ಎಂಬ ಸಂಶಯವು ಯಾರಿಗೆ ತಾನೆ ಇದ್ದೀತು? **"ಅತ್ರಾಪಿ ಸಂಶಯಶ್ಚೇತ್ ಸಂಶಯಿತಾ ಯಃ ಸ ಏವ ಭವಸಿ ತ್ವಮ್"** ಒಂದುವೇಳೆ ಯಾರಾದರೂ ಈ ಸ್ವರೂಪದಲ್ಲಿ ಸಂಶಯವುಂಟಾಗಿದೆ ಎಂದರೆ ಹಾಗೆ ಸಂಶಯಪಡುವ ನೀನೇ ಆತ್ಮನೆಂದು ತಿಳಿ-ಎಂದು ಉತ್ತರವನ್ನು ಹೇಳಬೇಕಾಗುವದು. **ಸಂಶಯವಾಗಲಿ, ನಿಶ್ಚಯವಾಗಲಿ, ವಿಪರೀತಜ್ಞಾನವಾಗಲಿ- ಉಂಟಾಗುವದೂ ಹೋಗುವದೂ ಯಾವ ತತ್ತ್ವದ ಆಧಾರದಿಂದ ಆಗುತ್ತಿರುವದೋ ಅದು ಸಂಶಯನಿಶ್ಚಯಾದಿಗಳಿಗೆ ಎಂದಿಗೂ ವಿಷಯವಾಗಲಾರದು. ಸರಿಯಾಗಿ ನೋಡಿದರೆ ಅದು ಇದೆಯೆಂದಾಗಲಿ**

ಇಲ್ಲವೆಂದಾಗಲಿ ಹೇಳುವದು ಸಾಹಸದ ಮಾತು. ದೀಪದ ಬೆಳಕಿನಿಂದ ಎಲ್ಲವನ್ನೂ ತಿಳಿಯುತ್ತಿರುತ್ತೇವೆ; ಆ ದೀಪವನ್ನು ನೋಡುವದಕ್ಕೆ ಮತ್ತೊಂದು ದೀಪವನ್ನು ಬಯಸುವೆವೆ? ಇಲ್ಲ. ದೀಪವು ಸ್ವಯಂಪ್ರಕಾಶವಾಗಿದೆ. ಇದರಂತೆ ಎಚ್ಚರದಲ್ಲಿ ಪ್ರಮಾಣಗಳೂ ನಮ್ಮ ಆತ್ಮನಿಗೇ ಗೋಚರವಾಗುವವು; ನಮ್ಮ ಆತ್ಮಚೈತನ್ಯದ ಬೆಳಕಿನಿಂದಲೇ ಇದು ಪ್ರಮಾಣ, ಇದು ಪ್ರಮಾಣವಲ್ಲ-ಎಂದು ನಿರ್ಧರಿಸುತ್ತಿರುವೆವು. ತನಿನಿದ್ರೆಯಲ್ಲಿ ಪ್ರಮಾಣವ್ಯವಹಾರವೇ ಇಲ್ಲವೆಂಬುದನ್ನೂ ಅದರಿಂದಲೇ ಗೊತ್ತುಪಡಿಸುತ್ತಿರುವೆವು. ಆದ್ದರಿಂದ ಆತ್ಮನು ಯಾವ ಪ್ರಮಾಣವನ್ನೂ ಬಯಸದೆ ತಾನೇ ಸಿದ್ಧನಾಗಿರುತ್ತಾನೆ.

ಆತ್ಮನ ಇರವು ಸಿದ್ಧವಾಗುವದಕ್ಕೂ ಪ್ರಮಾಣಗಳಿಂದ ಪ್ರಮೇಯಗಳ ಇರವು ಸಿದ್ಧವಾಗುವದಕ್ಕೂ ಬಹಳ ಹೆಚ್ಚು ಕಡಿಮೆ ಇದೆ. ಪ್ರತ್ಯಕ್ಷವಾಗಿ ನೋಡಿದರೂ ನಮಗೆ ವಸ್ತುಗಳು ನೇರವಾಗಿ ಗೊತ್ತಾದಂತೆ ಆಗಿರುವದಿಲ್ಲ; ಏಕೆಂದರೆ ವಸ್ತುವಿಗೂ ಇಂದ್ರಿಯಕ್ಕೂ ಮೊದಲು ಸಂಬಂಧವಾಗಿ, ಆ ಬಳಿಕ ಇಂದ್ರಿಯಕ್ಕೂ ಮನಸ್ಸಿಗೂ ಸೇರುವೆಯಾದರೆ ಆತ್ಮನು ಮನಸ್ಸಿನ ಮೂಲಕವಾಗಿ ವಸ್ತುವನ್ನು ಪ್ರತ್ಯಕ್ಷಪ್ರಮಾಣದಿಂದ ಅರಿತನು ಎನ್ನುತ್ತೇವೆ. ಹೀಗೆ ನಡುವೆ ಮನಸ್ಸೂ ಇಂದ್ರಿಯಗಳೂ ಇರುವದರಿಂದ ಪ್ರತ್ಯಕ್ಷವೆಂಬುದು ಪ್ರಮೇಯವನ್ನು ನಮಗೆ ನೇರಾಗಿ ಕಾಣಿಸಿದಂತೆ ಆಗುವದಿಲ್ಲ. ಆದರೆ ಆತ್ಮನನ್ನು ಆತ್ಮನು ಹೀಗೆ ಅರಿಯಬೇಕಾದದ್ದೇನೂ ಇರುವದಿಲ್ಲ. ಆತ್ಮನು ತನಗೆ ತಾನು ದೇಶಕಾಲವಸ್ತುಗಳಿಂದ ವ್ಯವಹಿತನಾಗಿರುವದಿಲ್ಲ; ದೇಶಕಾಲವಸ್ತುಗಳನ್ನು ಕೂಡ ಬೆಳಗುವ ಅಖಂಡ, ಅನಂತ, ಜ್ಯೋತಿಯಾಗಿರುತ್ತಾನೆ. ಅವನು ನಿತ್ಯನಿರ್ವಿಕಾರಿಯಾಗಿರುತ್ತಾನೆಂಬುದಕ್ಕೆ ತನಗೆ ತಾನೇ ಪ್ರಮಾಣವಾಗಿರುತ್ತಾನೆ.

ಇದೇ ಆತ್ಮನ ತತ್ತ್ವವು. ಇದರಲ್ಲಿ ನಾನು, ನೀನು; ನಮ್ಮದು, ನಿಮ್ಮದು, ಒಂದು, ಎರಡು, ಅನೇಕ-ಎಂಬ ಭೇದಗಳಿರುವದಿಲ್ಲ. ಈ ಪರಮಾರ್ಥತತ್ತ್ವವೇ ನಮ್ಮ ಸ್ವರೂಪವಾಗಿರುತ್ತದೆ. ಈ ಸ್ವರೂಪವನ್ನು ತಿಳಿಸಿಕೊಟ್ಟ ಉಪಕಾರವು ಭಗವದ್ಗೀತೆಯದಾಗಿರುತ್ತದೆ. ಆತ್ಮತತ್ತ್ವದ ನಿರ್ಣಯವನ್ನು ಭೌತಿಕಶಾಸ್ತ್ರದ ಥಿಯೋರಿ (Theory) ಎಂಬ ಕಲ್ಪಿತನಿಯಮಗಳಿಗೆ ಹೋಲಿಸಬಾರದು. ತಿಳಿದಿರುವ ವಿಷಯಗಳಿಗೆಲ್ಲ ಹೊಂದುವ ಹೊಸ ತಿಳಿವಳಿಕೆಯ ಒಂದು ಸಾಮಾನ್ಯನಿಯಮವು ಕಲ್ಪಿತನಿಯಮವೆನಿಸುತ್ತದೆ. ಉದಾಹರಣೆಗೆ ಮೊದಮೊದಲು ಜನರು ಸೂರ್ಯ, ಚಂದ್ರ-ಮುಂತಾದ ಗ್ರಹಗಳೆಲ್ಲ ಭೂಮಿಯ ಸುತ್ತಲೂ ತಿರುಗುವವೆಂದು ನಂಬಿದ್ದರು; ಅದನ್ನೇ ಶಾಸ್ತ್ರೀಯವಾಗಿ ಹೊಂದಿಸಿ ನಿಯಮವಾಗಿಯೂ ವಿದ್ವಾಂಸರು ಮಾಡಿಕೊಂಡಿದ್ದರು. ಆದರೆ ಈಚೆಗೆ ಅನೇಕ ಕಾರಣಗಳಿಂದ

ಭೂಮಿಯೇ ಮುಂತಾದ ಗ್ರಹಗಳೆಲ್ಲವೂ ಸೂರ್ಯನ ಸುತ್ತಲೂ ಸುತ್ತುತ್ತಿರುವವೆಂದೂ ಕೆಲವು ಗ್ರಹಗಳನ್ನು ಸುತ್ತುತ್ತಿರುವ ಉಪಗ್ರಹಗಳೂ ಇವೆಯೆಂದೂ ಭೌತಿಕಶಾಸ್ತ್ರಜ್ಞರು ನಿಶ್ಚಯಿಸಿರುತ್ತಾರೆ. ಇದುವರೆಗೆ ನಡೆದಿರುವ ವಿಚಾರಪರಂಪರೆಯಿಂದ ಈ ನಿಯಮವು ಏರ್ಪಟ್ಟಿರುತ್ತದೆ. ಆದರೆ ಮುಂದೆ ನವೀನವಿಚಾರಧಾರೆಯೊಂದು ಬಲವಾಗಿ ಈಗಿನ ವಿಚಾರಕ್ರಮದಲ್ಲಿ ದೋಷವಿದೆ ಎಂದು ಗೊತ್ತಾದರೆ ಈ ನಿಯಮವೂ ಬಾಧಿತವಾಗಿ ಬಿಡುತ್ತದೆ. ಭೌತಿಕಶಾಸ್ತ್ರದ ಎಷ್ಟೋ ನಿಯಮಗಳು ಹೀಗೆ ಬದಲಾಯಿಸಿರುವದು ನಮ್ಮ ಅನುಭವದಲ್ಲಿದೆ. ಆಟಮ್ ಎಂಬ ಪರಮಾಣುವು ವಿಭಜನೀಯವಲ್ಲವೆಂದು ಮೊದಲು ಶಾಸ್ತ್ರಜ್ಞರು ತಿಳಿದುಕೊಂಡಿದ್ದರು. ಆಟಮ್ ಎಂಬ ಶಬ್ದಕ್ಕೆ ಅಖಂಡವೆಂದೇ ಅರ್ಥ. ಆದರೆ ಈಗ ಆಟಂ ಪರಮಾಣುವನ್ನು ತುಂಡಿಸಿ ವಿಂಗಡಿಸಿರುತ್ತಾರೆ; ಆಟಂ ಬಾಂಬ್ ಎಂಬುದು ಈ ಶೋಧನೆಯ ಫಲಗಳಲ್ಲಿ ಒಂದಾಗಿರುತ್ತದೆ. ಹೀಗೆ ಭೌತಿಕನಿಯಮಗಳು ಮಾರ್ಪಡಬಹುದು. ಆದರೆ ಆತ್ಮನು ನಿತ್ಯನು, ನಿರ್ವಿಕಾರನು, ಅಖಂಡಚೈತನ್ಯ ಸ್ವರೂಪನು, ಅಪ್ರಮೇಯನು- ಎಂಬುದು ಇಂಥ ಕಲ್ಪಿತನಿಯಮವಲ್ಲ; ಇದು ಕೇವಲ ತರ್ಕದಿಂದ ಊಹಿಸಿದ ಸಂಗತಿಯಲ್ಲ, ಕಲ್ಪನೆಗಳಿಗೆಲ್ಲ ಆಧಾರನು ಆತ್ಮನು. ಕಲ್ಪನೆಗಳು ಮಾರ್ಪಡಬಹುದು; ಎಚ್ಚರದ ಕಲ್ಪನೆಗಳು ಕನಸಿನಲ್ಲಿ ಬೇರ್ಪಡಬಹುದು, ತನಿನಿದ್ರೆಯಲ್ಲಿ ಯಾವ ಕಲ್ಪನೆಯ ಗುರುತೂ ಇಲ್ಲವಾಗಬಹುದು. ಆದರೆ ಅವಿಕಲ್ಪನಾದ ಆತ್ಮನು ಆಗಲೂ ಇರುವನು.

ಇಂಥಾ ಆತ್ಮತತ್ತ್ವವು ಸಿದ್ಧವಾದರೆ ಏನೇನು ಸಿದ್ಧವಾದ ಹಾಗಾಗುವದೆಂಬುದನ್ನು ಮುಂದೆ ತಿಳಿಸುವೆನು. ಸಧ್ಯದಲ್ಲಿ ಶ್ರೀರಾಮಕೃಷ್ಣಪರಮಹಂಸರ ಒಂದು ಸೂಕ್ತಿಯನ್ನು ನೆನಪುಕೊಡುತ್ತೇನೆ. "ಮೇಲಿನ ಅಂತಸ್ತಿಗೆ ಹೋಗುವವನು ಮೊದಲು ಒಂದೊಂದಾಗಿ ಮೆಟ್ಟಿಲನ್ನು ಏರುತ್ತಾ ಬರುತ್ತಾನೆ. ಒಂದೊಂದು ಮೆಟ್ಟಿಲನ್ನೂ ಹತ್ತಿದ ಹಾಗೆಲ್ಲ ಅವನು ಮೊದಲಿಗಿಂತ ಮೇಲುಮೇಲಕ್ಕೆ ಏರುತ್ತಾನಾದರೂ ಮೆಟ್ಟಿಲುಗಳಲ್ಲಿ ಯಾವದೊಂದೂ ಮೇಲುಮಾಳಿಗೆಯಾಗಿರುವದಿಲ್ಲ. ಆದರೆ ಆ ಅಂತಸ್ತನ್ನೇ ಮುಟ್ಟಿದ ಬಳಿಕ ಅವನಿಗೆ ಆಗುವ ಅರಿವು ಹೇಗೆ ಇರುವದು? ಮೇಲಿನ ಅಂತಸ್ತಿನ ನೆಲವೆಲ್ಲ ಗಾರೆಯದೇ; ಅಲ್ಲಿಯೂ ಇಟ್ಟಿಗೆಗಳನ್ನು ಹಾಕಿದೆ, ಅದರಂತೆ ಪ್ರತಿಯೊಂದು ಮೆಟ್ಟಿಲೂ ಇಟ್ಟಿಗೆಗಾರೆಗಳಿಂದಲೇ ಆಗಿರುತ್ತದೆ. ಮೇಲಿನ ಅಂತಸ್ತುಗಳಿಗೂ ಮೆಟ್ಟಿಲುಗಳಿಗೂ ಯಾವ ವಸ್ತುತಾರತಮ್ಯವೂ ಇರುವದೇ ಇಲ್ಲ. ಹೀಗೆಯೇ ಪ್ರಕೃತದಲ್ಲಿ ಆತ್ಮತತ್ತ್ವದ ಅರಿವಿಗೆ ಏರಬೇಕೆಂಬ ಜಿಜ್ಞಾಸುವು ಶರೀರಾದಿಗಳು ತಾನಲ್ಲವೆಂದು ಒಂದೊಂದಾಗಿ ಅವುಗಳನ್ನು ಬಿಟ್ಟು ಒಂದಕ್ಕಿಂತ ಒಂದು ಹೆಚ್ಚು ಹೆಚ್ಚು ಸೂಕ್ಷ್ಮವಾದ ತತ್ತ್ವವನ್ನು ಮುಟ್ಟುತ್ತಾನೆ. ಆದರೆ ಅವುಗಳೊಂದೂ ಆತ್ಮ ನಾಗಿರುವದಿಲ್ಲ. ಆತ್ಮನ ಅರಿವಾದ ಬಳಿಕವೋ ಎಂದರೆ ಎಲ್ಲವೂ ಆತ್ಮನೇ,

ಆತ್ಮನಿಗಿಂತ ಬೇರೆಯಾಗಿ ಮತ್ತೆ ಯಾವ ಶರೀರಾದಿಗಳೂ ಇರುವದಿಲ್ಲ. "ಭೂತಾನಿ ವಿಷ್ಣುರ್ಭುವನಾನಿ ವಿಷ್ಣುರ್ವನಾನಿ ವಿಷ್ಣುರ್ಗಿರಯಶ್ಚ ವಿಷ್ಣುಃ" ಎಂಬಂತೆ ಎಲ್ಲವೂ ಪರಮಾತ್ಮನೇ. "ಸರ್ವಂ ವಿಷ್ಣುಮಯಂ ಜಗತ್" ಎಂಬ ಘನಸಿದ್ಧಾಂತವು ಮನದಟ್ಟಾಗುವದು. ಆಗ ಸಂಸಾರದ ಯಾವ ಶೋಕಮೋಹಗಳೂ ಇರುವದೇ ಇಲ್ಲ.

## ೯. ಆತ್ಮಜ್ಞಾನದಿಂದ ಕೃತಕೃತ್ಯತೆ ೨-(೧೯-೨೦)
### (೧೮.೮.೪೬)

ಆತ್ಮನು ತನ್ನ ಸ್ವರೂಪದಿಂದಲೇ ಯಾವಾಗಲೂ ಇರುತ್ತಾನೆ, ಆದ್ದರಿಂದ ಸದ್ರೂಪನು; ಅನಾತ್ಮವಾದ ದೇಹಾದಿಗಳೆಲ್ಲವೂ ಇದ್ದಂತೆ ಇರುವವಲ್ಲ, ಆದ್ದರಿಂದ ಅಸದ್ರೂಪವು. ಆತ್ಮನಿಗೆ ಎಂದಿಗೂ ನಾಶವಿಲ್ಲ, ದೇಹಗಳು ಎಂದೆಂದಿಗೂ ಇರುವವಲ್ಲ-ಎಂದು ನಿಶ್ಚಯಿಸುವದೇ ತತ್ತ್ವದೃಷ್ಟಿ. ಅದನ್ನವಲಂಬಿಸಿ ಶೋಕವನ್ನು ಬಿಡು-ಎಂದು ಭಗವಂತನು ಹೇಳಿರುತ್ತಾನೆ.

"ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ" ನಿತ್ಯವಾದ ಶರೀರಿಯ ಈ ದೇಹಗಳು ಅಂತವುಳ್ಳವು-ಎಂಬ ಭಗವಂತನ ವಾಕ್ಯದಲ್ಲಿ ಆತ್ಮನಿಗೆ ಏಕವಚನವನ್ನೂ ಶರೀರಿಗಳಿಗೆ ಬಹುವಚನವನ್ನೂ ಕೊಟ್ಟಿರುವದನ್ನು ನಾವು ಮನನಂದುಕೊಳ್ಳಬೇಕು. 'ಈ ದೇಹಗಳು' ಎಂದರೆ ಹಿಂದೆ, ಈಗ, ಮುಂದೆ ಬರುವ ಅನೇಕ ದೇಹಗಳು; ಲೋಕದಲ್ಲಿರುವ ಪ್ರಾಣಿಗಳಿಗೆ ಬೇರೆಬೇರೆಯಾಗಿ ಅಸಾಧಾರಣವಾಗಿರುವವೆಂದು ತೋರುವ ಲೆಕ್ಕವಿಲ್ಲದಷ್ಟು ದೇಹಗಳು ಇವೆ. ಈ ದೇಹಗಳಿಗೆಲ್ಲ ಒಬ್ಬನೇ ಆತ್ಮನು, ಆ ಆತ್ಮನಿಗೂ ಈ ದೇಹಗಳಿಗೂ ಯಾವದೊಂದು ಸಂಬಂಧವೂ ಇರುವದಿಲ್ಲ. ಹಿಂದಿನ ಜನ್ಮದಲ್ಲಿ ಮಾಡಿದ ಧರ್ಮಾಧರ್ಮಗಳಿಂದ ಈಗಿನ ಶರೀರವು ಉಂಟಾಗಿರುವದೆಂದು ಹೇಳುವ ಶಾಸ್ತ್ರವಚನವೂ ವ್ಯಾವಹಾರಿಕವೇ. ಏಕೆಂದರೆ ಹಿಂದಿನ ಜನ್ಮದಲ್ಲಿಯಾದರೂ ಶರೀರಕ್ಕೂ ಆತ್ಮನಿಗೂ ಸಂಬಂಧವು ನಿಜವಾಗಿ ಇತ್ತೆಂಬುದಕ್ಕೆ ಯಾವ ಅನುಭವಸಮ್ಮತವಾದ ಯುಕ್ತಿಯೂ ಇರುವದಿಲ್ಲ. ಆದ್ದರಿಂದ ಆತ್ಮನಿಗೆ ಶರೀರಗಳ ಸಂಬಂಧವಿರುವದೆಂದು ಇಟ್ಟುಕೊಂಡಿರುವದು ಅಜ್ಞಾನಿಗಳು ಕಟ್ಟಿಹಾಕಿರುವ ಸಂಬಂಧವೇ ಹೊರತು ನಿಜವಲ್ಲ. ಶಾಸ್ತ್ರದಲ್ಲಿ ಅದಕ್ಕೆ ತಾತ್ಪರ್ಯವಿಲ್ಲ; ಎಲ್ಲಾ ಶರೀರಗಳಲ್ಲಿಯೂ ಒಬ್ಬನೇ ಆತ್ಮನಿರುವನೆಂದು ತಿಳಿಸುವದೇ ಎಲ್ಲ ಉಪನಿಷತ್ತುಗಳಿಗೂ ಅವುಗಳ ಸಾರಸಂಗ್ರಹವಾದ ಭಗವದ್ಗೀತೆಗೂ ಗುರಿಯು. ಆದ್ದರಿಂದಲೇ ಉಪನಿಷತ್ತು

ಗಳಲ್ಲಿ ಹೇಳಿರುವಂತೆ ಗೀತೆಯಲ್ಲಿ ಆತ್ಮನು ಸರ್ವಭೂತಗಳ ಶರೀರದಲ್ಲಿಯೂ ಒಂದೇ ಸಮನಾಗಿರುವನೆಂದು ಹೇಳಿರುತ್ತದೆ.

ಆದ್ದರಿಂದ ಈ ಶರೀರಗಳಿಗೆ ಅಂತವುಂಟು ಎಂದರೆ ಎಂದಾದರೂ ಒಂದು ದಿನ ನಾಶವಾಗತಕ್ಕವು ಎಂಬುದು ಅರ್ಥವಲ್ಲ. ಭಗವಂತನು ಅರ್ಜುನನಿಗೆ ದೇಹಗಳು ನಾಶವಾಗುವವು ಎಂಬುದನ್ನು ಹೊಸದಾಗಿ ಹೇಳಿಕೊಡಬೇಕಾದದ್ದೇನೂ ಇರಲಿಲ್ಲ; ಭೀಷ್ಮಾದಿಗಳ ಶರೀರಗಳು ನಾಶವಾಗುವವಲ್ಲ!-ಎಂದೇ ಅವನು ಶೋಕಿಸುತ್ತಿದ್ದನು. ಆದ್ದರಿಂದ ಭಗವಂತನ ಉಪದೇಶವು ಅದಲ್ಲ. ಈ ದೇಹಗಳು ಬರಿಯ ಹುಸಿಯ ತೋರಿಕೆಯವೇ; ಕನಸಿನ ದೇಹಗಳಂತೆಯೂ ಮಾಯಗಾರನು ನಿರ್ಮಿಸಿದ ದೇಹಗಳಂತೆಯೂ ತೋರುವ ಕಾಲಕ್ಕೆ ನಿಜವಾಗಿರುವಂತೆ ಕಾಣುತ್ತವೆ. ಆದರೆ ಈ ಮಾಯೆಯ ದೇಹಗಳಿಗೂ ಅಂತವುಂಟು. ಯಾವಾಗ? 'ಅವು ನಿಜವಾಗಿಲ್ಲ, ಆತ್ಮನೇ ನಿಜವಾಗಿರುವವನು'- ಎಂದು ಯಾವಾಗ ಅರಿತುಕೊಳ್ಳುವೆವೋ ಆ ಕೂಡಲೆ ಆ ದೇಹಗಳು ಎಂದೋ ಎಲ್ಲಿಯೋ ಹೋಗುವವೆಂದು ತಿಳಿಯಬಾರದು, ಈಗಲೇ ಇಲ್ಲಿಯೇ ಅವು ಇಲ್ಲ-ಎಂದು ತತ್ತ್ವಜ್ಞಾನಿಗೆ ಅವುಗಳ ನಿಜವು ಗೊತ್ತಾಗಿ ಬಿಟ್ಟಿರುವದು. ಅವನ ದೃಷ್ಟಿಯಿಂದ ನೋಡಿದರೆ ಕೂಡಲೆ ಅವು ಕೊನೆಗಾಣುವವು, ಅವು ಇರಲೇ ಇರಲಿಲ್ಲವೆಂದು ನಮಗೆ ನಿಶ್ಚಯವಾಗಿಬಿಡುವದು. ಅವು ತೋರುವದು ಇಲ್ಲವಾಗಬೇಕಾದದ್ದೇನೂ ಇಲ್ಲ; ಕನ್ನಡಿಯ ಪ್ರತಿಬಿಂಬದಂತೆ ಅವುಗಳ ಹುಸಿ ತೋರಿಕೆಯು ನಮ್ಮನ್ನು ವಂಚಿಸುವದು ಅಲ್ಲಿಂದ ಮುಂದಕ್ಕೆ ಎಂದೆಂದಿಗೂ ನಿಂತು ಹೋಗುವದು.

ಈ ಶ್ಲೋಕದಲ್ಲಿ "ತಸ್ಮಾತ್ ಯುಧ್ಯಸ್ವ ಭಾರತ" ಎಂಬ ನಾಲ್ಕನೆಯ ಪಾದದ ಸ್ವಾರಸ್ಯವನ್ನು ತಿಳಿದುಕೊಳ್ಳುವದು ಅವಶ್ಯ. ಏಕೆಂದರೆ ಭಗವದ್ಗೀತೆಯು ಶೋಕಮೋಹಗಳನ್ನು ಕಳೆಯುವದಕ್ಕೆ ಬಂದಿದೆಯೇ ಹೊರತು ಜನರನ್ನು ಕರ್ಮದಲ್ಲಿ ತೊಡಗಿಸುವದಕ್ಕೆ ಬಂದಿಲ್ಲ-ಎಂಬ ಮತಕ್ಕೆ ಇದು ಸ್ವಲ್ಪ ವಿರುದ್ಧವಾಗಿರುವಂತೆ ತೋರುತ್ತದೆ. "ತಸ್ಮಾತ್ ನ ಶೋಚಿತುಮರ್ಹಸಿ" ಆದ್ದರಿಂದ ನೀನು ಶೋಕ ಮಾಡಬಾರದು-ಎಂದಿಷ್ಟೇ ಭಗವಂತನು ಹೇಳಬೇಕಾಗಿತ್ತು. ಹೀಗಿರುವಲ್ಲಿ "ತಸ್ಮಾತ್ ಯುಧ್ಯಸ್ವ ಭಾರತ" (ಆದ್ದರಿಂದ ಭರತವಂಶೋತ್ಪನ್ನನಾದ ಅರ್ಜುನನೆ, ಯುದ್ಧಮಾಡು)- ಎಂದು ಹೇಳಿರುವನಲ್ಲ! ಈ ಶಂಕೆಯನ್ನು ಹತ್ತಿಸಿಕೊಂಡು ಕೆಲವರು ಭಗವದ್ಗೀತೆಯು ಕರ್ಮಪರವೇ, ಅದು ಜನರಿಗೆ ಕರ್ಮದಲ್ಲಿ ತೊಡಗಬೇಕೆಂದೇ ಉಪದೇಶಿಸುತ್ತದೆ; ಹಾಗಿಲ್ಲದಿದ್ದರೆ "ಯುದ್ಧವನ್ನು ಮಾಡು" ಎಂದು ಅದು ವಿಧಿಸುತ್ತಿರಲಿಲ್ಲ-ಎಂದು ವಾದಿಸಿರುತ್ತಾರೆ.

ಆದರೆ ಈ ವಾದವು ಹಿಂದುಮುಂದಿನ ಸಂದರ್ಭಕ್ಕೆ ಹೊಂದುವಹಾಗಿಲ್ಲ. ಏಕೆಂದರೆ ಅರ್ಜುನನನ್ನು ಭಗವಂತನು ಯುದ್ಧಕ್ಕೆ ಹೊರಡಿಸಬೇಕಾದ ಆವಶ್ಯಕತೆಯೇನೂ ಇರಲಿಲ್ಲ. ಅವನು ತಾನಾಗಿಯೇ ಕೌರವರನ್ನೆಲ್ಲ ಯುದ್ಧದಲ್ಲಿ ಸೋಲಿಸಿ ಜಯಶ್ರೀಯನ್ನು ಧರ್ಮರಾಯನಿಗೆ ತಂದುಕೊಡುವೆನೆಂದು ದೃಢಸಂಕಲ್ಪವನ್ನು ಮಾಡಿ ರಥವನ್ನು ರಣಾಂಗಣದ ನಟ್ಟನಡುವೆ ನಿಲ್ಲಿಸುವಂತೆ ಶ್ರೀಕೃಷ್ಣನಿಗೆ ಹೇಳಿರುತ್ತಾನೆ. ಯುದ್ಧಕ್ಕೆ ಪ್ರಾರಂಭಮಾಡುವ ಸೂಚನೆಯನ್ನು ಶತ್ರುಗಳಿಗೆ ಕೊಡುವದಕ್ಕೆಂದು ತನ್ನ ದೇವದತ್ತವೆಂಬ ದಿವ್ಯಶಂಖವನ್ನು ಧ್ವನಿಗೈದಿರುತ್ತಾನೆ; ಗಾಂಡೀವದ ಜೇವೊಡೆಯ ಟಂಕಾರದಿಂದ ಶತ್ರುಗಳ ಎದೆಯಲ್ಲಿ ತಲ್ಲಣವನ್ನುಂಟುಮಾಡಿರುತ್ತಾನೆ. ಆದರೆ ಇಷ್ಟರಲ್ಲಿ ತನ್ನೆದುರಿಗೆ ಇರುವವರೆಲ್ಲರೂ ಸ್ವಜನರು, ಗುರುಗಳು, ಹಿರಿಯರು- ಎಂಬ ಅರಿವೆಯ ಮೋಹವು ಬಂದು ಇವರನ್ನೆಲ್ಲ ಕೊಲ್ಲುವೆನಲ್ಲ!- ಎಂಬ ಶೋಕದಲ್ಲಿ ಅವನನ್ನು ಅದ್ದಿಬಿಟ್ಟಿದೆ. ಆದ್ದರಿಂದ ಅರ್ಜುನನು ಯುದ್ಧಮಾಡದಂತೆ ಮಾಡಿರುವದು ಅವನ ಶೋಕಮೋಹಗಳ ಒಡ್ಡು; ಅದರಿಂದಲೇ ಅವನು ತಾನು ಕೈಗೊಂಡಿದ್ದ ಕಾಳಗವನ್ನು ಮಾಡಲೊಲ್ಲೆನೆಂದು ಬಿಲ್ಲುಬಾಣಗಳನ್ನು ಕೆಳಗೆ ಬಿಸುಟು ಕುಸಿದು ಕುಳಿತಿರುತ್ತಾನೆ. ಈ ಸಂದರ್ಭವನ್ನೆಲ್ಲ ಮನದಂದರೆ ಅರ್ಜುನನನ್ನು ಯುದ್ಧದಲ್ಲಿ ತೊಡಗಿಸಿದವನು ಭಗವಂತನಲ್ಲ, ಅವನಲ್ಲಿದ್ದ ಕ್ಷತ್ರಿಯಸ್ವಭಾವ; ಅವನನ್ನು ಅದರಿಂದ ಬಿಡಿಸಿದವನೂ ಭಗವಂತನಲ್ಲ, ಸ್ವಜನರಲ್ಲಿ ಅವನಿಗೆ ಉಂಟಾದ ಅಸ್ಥಾನಕೃಪೆ. ಶೋಕ ಮೋಹಗಳಿಗೆ ವಶನಾದ ಅರ್ಜುನನು ಒಂದು ಸಲ ಯುದ್ಧಮಾಡುವದು ಅಧರ್ಮವೆಂದು ಬಗೆಯುತ್ತಾನೆ; ಇನ್ನೊಂದು ಸಲ ತನಗೆ ಸೋಲಾಗುವದೋ ಎಂಬ ಹೇಡಿಯಂತೆ ಶಂಕಿಸುತ್ತಾನೆ; ಮತ್ತೊಂದು ಸಲ ಈ ಯುದ್ಧಕ್ಕಿಂತ ಭಿಕ್ಷೆಯನ್ನು ಬೇಡುವದಾದರೂ ಮೇಲು ಎಂದು ಸ್ವಧರ್ಮವನ್ನು ಹೀನವಾಗಿ ಕಾಣುತ್ತಾನೆ. ಕಟ್ಟಕಡೆಗೆ "ಶ್ರೀಕೃಷ್ಣ, ನನ್ನ ಈ ಮೇರೆದಪ್ಪಿರುವ ಶೋಕಕ್ಕೆ ನಿವಾರಣೆಯಾಗಿ ಏನಾದರೂ ಉಪಾಯವನ್ನು ಹೇಳು, ನಿಜವಾಗಿ ನನಗೆ ಧರ್ಮವು ಯಾವದೆಂಬುದೇ ತಿಳಿಯುವಂತಿಲ್ಲ; ನಿನ್ನ ಶಿಷ್ಯನು ನಾನೆಂದು ತಿಳಿದು ನನಗೆ ನಿಜವನ್ನು ಉಪದೇಶಿಸು" -ಎಂದು ಬೇಡಿ ಕೊಂಡಿರುತ್ತಾನೆ!

ಇಂಥ ಸ್ಥಿತಿಯಲ್ಲಿ ಭಗವಂತನು ಅರ್ಜುನನ ಮೇಲಿನ ಅಪಾರಕರುಣೆಯಿಂದ ಅವನಿಗೆ ಶೋಕಮೋಹನಾಶಕವಾದ ತತ್ತ್ವಜ್ಞಾನವನ್ನು ಉಪದೇಶಿಸಿರುತ್ತಾನೆ. ಆತ್ಮನ ಯಾಥಾತ್ಮ್ಯವನ್ನೂ ಅನಾತ್ಮದ ಯಾಥಾತ್ಮ್ಯವನ್ನೂ ತಿಳಿದವರು ಶೋಕಿಸುವದಿಲ್ಲ, ಅವರು ಎಂದಿಗೂ ಸ್ವಧರ್ಮತ್ಯಾಗವನ್ನು ಮಾಡುವದಿಲ್ಲ ಎಂದು ಉಪದೇಶಿಸಿರುತ್ತಾನೆ. ಈ ಉಪದೇಶದ ಫಲವೇನಾಯಿತು ? ಯಾವ ಮೋಹಕ್ಕೆ ಪರವಶನಾಗಿ ಅರ್ಜುನನು

ತಾನು ತೊಡಗಿದ್ದ ಧರ್ಮಯುದ್ಧವನ್ನು ಬಿಟ್ಟಿದ್ದನೋ ಆ ಮೋಹವು ಹೋದರೆ ಮೊದಲಿನಂತೆಯೇ ಕೆಲಸವನ್ನು ಮುಂದುವರಿಸಬೇಕಲ್ಲವೆ? ಅದನ್ನೇ ಭಗವಂತನು ಇಲ್ಲಿ ಅನುವಾದಮಾಡಿರುತ್ತಾನೆ. ಬೀದಿಯಲ್ಲಿ ಹೋಗುತ್ತಿರುವನೊಬ್ಬನು ದೂರ ದಲ್ಲಿರುವ ಒಂದು ಹಗ್ಗವನ್ನು ಹಾವೆಂದೆಣಿಸಿ, ಶಂಕೆಯಿಂದ ನಿಂತಿರುವದನ್ನು ಕಂಡು ನಿಜವನ್ನು ಬಲ್ಲವನೊಬ್ಬನು "ಅಯ್ಯಾ, ಅದು ಹಾವಲ್ಲ, ಹಗ್ಗ; ನಡೆ, ಏತಕ್ಕೆ ಸುಮ್ಮನೆ ನಿಂತುಕೊಂಡೆ?" ಎಂದರೆ ಮುಂದಕ್ಕೆ ನಡೆ ಎಂದು ಹೇಳುವದಕ್ಕೆ ಬಂದಿರುವನೆಂದು ನಾವುಗಳು ಯಾರೂ ಭಾವಿಸುವದಿಲ್ಲ. 'ಇದು ಹಾವಲ್ಲ ಹಗ್ಗ' ಎಂದು ಪ್ರತಿಪಾದಿಸುವದಕ್ಕೇ ಅವನು ಹೊರಟಿರುತ್ತಾನೆಂದು ಒಪ್ಪುತ್ತೇವೆ. ಅಲ್ಲವೆ? ಅದರಂತೆ ಶ್ರೀಕೃಷ್ಣ ಭಗವಂತನು "ಅರ್ಜುನ, ಆತ್ಮನು ಪರಮಾರ್ಥವಾಗಿ ಅಶರೀರಿಯು; ಭೀಷ್ಮಾದಿಗಳ, ನಿನ್ನ, ನನ್ನ-ಎಲ್ಲರ ಪರಮಾರ್ಥವೂ ಆತ್ಮನೇ. ಶರೀರಗಳು ಬರಿಯ ಹುಸಿತೋರಿಕೆ. ಆದ್ದರಿಂದ ಈ ಜ್ಞಾನವನ್ನು ನೀನು ಸಂಪಾದಿಸಿಕೊ. ಹುಸಿತೋರಿಕೆಯನ್ನು ನೆಚ್ಚಿ ಕರ್ತವ್ಯಕರ್ಮವನ್ನು ಬಿಡಬೇಡ. ಅಕರ್ತವ್ಯವನ್ನು ಮಾಡಲೂ ಬೇಡ-ಎಂದು ನುಡಿದಿರುತ್ತಾನೆ. ಇಲ್ಲಿ 'ಯುದ್ಧಕ್ಕೆ ಹೊರಡು' ಎಂದು ಹೇಳುವದಕ್ಕೇನೂ ಭಗವಂತನು ಹೊರಟಿಲ್ಲ; ಅದು ಬರಿಯ ಅನುವಾದ. ಆತ್ಮನು ಶರೀರರಹಿತನಾಗಿ, ಎಂದೆಂದಿಗೂ ನಾಶವಿಲ್ಲದ ಸರ್ವವ್ಯಾಪಿಯಾದ ಪರಮಾರ್ಥಸದ್ರೂಪನು- ಎಂದು ತಿಳಿಸಿಕೊಡುವದೇ ಭಗವಂತನ ಉದ್ದೇಶ. ಆದ್ದರಿಂದ ಶೋಕಮೋಹಗಳನ್ನು ನಾಶಮಾಡುವ ತತ್ತ್ವಜ್ಞಾನ ವನ್ನು ಉಪದೇಶಿಸುವದೇ ಗೀತೆಯ ಗುರಿ ಎಂಬ ವಾದಕ್ಕೆ ಯಾವ ಎಡರೂ ಇರುವದಿಲ್ಲ.

ಇದೇ ಸರಿಯಾದ ಅಭಿಪ್ರಾಯವೆಂಬುದಕ್ಕೆ ಮುಂದಿನ ಶ್ಲೋಕವೂ ಬೆಂಬಲವನ್ನು ಕೊಡುತ್ತದೆ. ಈ ಶ್ಲೋಕವನ್ನು ಕೇಳಿರಿ:

**ಯ ಏನಂ ವೇತ್ತಿ ಹನ್ತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹನ್ತಿ ನ ಹನ್ಯತೇ ॥** (೨-೧೯)

ಆತ್ಮನು ಕೊಲ್ಲುವವನೆಂದು ತಿಳಿಯುವವನು, ಅವನು ಕೊಲ್ಲಿಸಿಕೊಳ್ಳುವವನೆಂದು ತಿಳಿಯುವವನು-ಈ ಇಬ್ಬರೂ ಇವನ ನಿಜವನ್ನು ಅರಿಯರು. ಏಕೆಂದರೆ ಇವನು ಕೊಲ್ಲುವನೂ ಇಲ್ಲ, ಕೊಲ್ಲಿಸಿಕೊಳ್ಳುವದೂ ಇಲ್ಲ. ಈ ಶ್ಲೋಕದ ಅಭಿಪ್ರಾಯವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಸಂದರ್ಭವನ್ನು ನೋಡದೆ ಅಕ್ಷರಾರ್ಥವನ್ನು ತೆಗೆದುಕೊಂಡರೆ ತಪ್ಪು ಅಭಿಪ್ರಾಯವಾಗಿ ಅನರ್ಥವೇ ಒದಗಬಹುದು. ಒಬ್ಬ ಕ್ರಿಸ್ತಿಯನ್ ಮಿಷನರಿಯು "ಈ ಶ್ಲೋಕವು ಬಹಳ ಅಪಾಯಕರವಾದದ್ದು. ಏಕೆಂದರೆ

ಒಬ್ಬ ಕೊಲೆಪಾತಕನು ರ್‍ಯಾಡ್ ಎಂಬ ಯೂರೋಪಿಯನ್ ಅಧಿಕಾರಿಯನ್ನು ಖೂನಿ ಮಾಡಿದನೆಂಬ ಅಪರಾಧಕ್ಕಾಗಿ ನ್ಯಾಯಾಧೀಶನು ಅವನನ್ನು ಗಲ್ಲಿಗೇರಿಸುವ ಶಿಕ್ಷೆಯನ್ನು ವಿಧಿಸಿದನು. ಅವನು ತನ್ನ ಪ್ರಾಣೋತ್ಕ್ರಮಣಕ್ಕೆ ಸಿದ್ಧನಾಗಿದ್ದಾಗ ಕೈಯಲ್ಲಿ ಗೀತೆಯನ್ನು ಹಿಡಿದುಕೊಂಡಿದ್ದನು. 'ಈ ಆತ್ಮನು ಕೊಲ್ಲುವದೂ ಇಲ್ಲ, ಕೊಲ್ಲಿಸುವದೂ ಇಲ್ಲ' ಎಂಬ ಗೀತೋಕ್ತಿಯನ್ನು ನಂಬಿದ್ದನೆಂದು ಕಾಣುತ್ತದೆ" ಎಂದು ಟೀಕಿಸಿರುತ್ತಾನೆ! ಆದರೆ ಅಂಥ ಕುತರ್ಕಕ್ಕೇನೂ ಇಲ್ಲಿ ಅವಕಾಶವಿಲ್ಲ. ಏಕೆಂದರೆ ಅರ್ಜುನನು ಯುದ್ಧದಲ್ಲಿ ತೊಡಗಿದ್ದನಾದ್ದರಿಂದ ಇಲ್ಲಿ ಕೊಲ್ಲು ಎಂಬ ಕ್ರಿಯೆಯನ್ನು ಉದಾಹರಣೆ ಗಾಗಿ ತೆಗೆದುಕೊಂಡಿದೆ. ನಿಜವಾಗಿ ನೋಡಿದರೆ ಆತ್ಮನಲ್ಲಿ ಯಾವ ಕ್ರಿಯೆಯೂ ಇರುವದಿಲ್ಲ, ಆತ್ಮನು ಯಾವ ಕ್ರಿಯೆಗೂ ಕರ್ತೃವೂ ಅಲ್ಲ, ಕರ್ಮವೂ ಅಲ್ಲ- ಎಂಬುದು ಪ್ರಕೃತವಾದ ಉಪದೇಶದ ತಿರುಳು. ಖೂನಿಮಾಡಿದವನು "ನಾನು ಯಾರನ್ನೂ ಕೊಲ್ಲಲೂ ಇಲ್ಲ, ಕೊಲ್ಲಿಸಲೂ ಇಲ್ಲ; ಇದಕ್ಕೆ ಗೀತೆಯ ಆಧಾರವಿದೆ" ಎಂದು ವಾದಿಸಿದರೆ ಆ ಮೂರ್ಖನಿಗೆ "ನಾವು ನಿನಗೆ ಶಿಕ್ಷೆಯನ್ನು ವಿಧಿಸುವದೂ ಇಲ್ಲ, ವಿಧಿಸುವಂತೆ ಯಾರನ್ನೂ ಪ್ರೇರಿಸುವದೂ ಇಲ್ಲ. ನಿನಗೆ ಈ ಶಿಕ್ಷೆಯಿಂದ ವ್ಯಥೆಯೂ ನಿಜವಾಗಿ ಆಗುವದಿಲ್ಲ. ಇದಕ್ಕೂ ಗೀತೆಯ ಆಧಾರವೇ ಇದೆ" ಎಂದು ಪ್ರತ್ಯುತ್ತರವನ್ನು ಕೊಡುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ. ನಿಜವಾಗಿ ನೋಡಿದರೆ ಗೀತೆಯಲ್ಲಿ ಉಪದೇಶಿಸಿರುವ ಪರಮಾರ್ಥಜ್ಞಾನವು ತತ್ತ್ವವನ್ನು ತಿಳಿಸಿ ನಮ್ಮ ಶೋಕಮೋಹಗಳನ್ನು ತೊಲಗಿಸೀತೇ ಹೊರತು ಯಾವದೊಂದು ಧರ್ಮದಲ್ಲಿ ಯಾಗಲಿ ಅಧರ್ಮದಲ್ಲಿಯಾಗಲಿ ತೊಡಗಿಸುವ ಹಾಗಿಲ್ಲ. ಆ ಜ್ಞಾನವು ಪ್ರವೃತ್ತಿಗಾಗಲಿ ನಿವೃತ್ತಿಗಾಗಲಿ ಉಪಾಯವಲ್ಲ. ಶೋಕಮೋಹರೂಪವಾದ ಸಂಸಾರಬಂಧದಿಂದ ಬಿಡುಗಡೆಯನ್ನು ಹೊಂದುವದಕ್ಕೇ ಅದು ಸಾಧನವಾಗಿರುತ್ತದೆ.

ಇದಂತಿರಲಿ. ಶ್ಲೋಕದ ನಿಜವಾದ ಅರ್ಥವನ್ನು ನಾವು ಲಕ್ಷ್ಯದಲ್ಲಿಟ್ಟು ನೋಡೋಣ. ಆತ್ಮನು ನಾನು ಎಂಬ ಅರಿವಿಗೆ ಗೋಚರನು, ಕರ್ತೃಭೋಕ್ತೃ ಸ್ವರೂಪನು ಎಂದು ನಾವೆಲ್ಲರೂ ಭಾವಿಸಿರುವೆವು; ಮೀಮಾಂಸಕರೇ ಮುಂತಾದ ಶಾಸ್ತ್ರಜ್ಞರೂ ಈ ಭಾವನೆಯನ್ನು ಯುಕ್ತಿಗಳಿಂದ ಪುಷ್ಟೀಕರಿಸಿರುತ್ತಾರೆ. ಆದರೆ ಪರಮಾರ್ಥವು ಹೀಗಿಲ್ಲ. ನಮ್ಮ ನಿಜವಾದ ಸ್ವರೂಪದಲ್ಲಿ, ನಮ್ಮ ಆತ್ಮನಲ್ಲಿ ಯಾವ ಕ್ರಿಯೆಗೂ ಆಸರೆ ಇಲ್ಲ, ಅವನನ್ನು ಯಾವ ಕ್ರಿಯೆಯಿಂದಲೂ ಯಾವ ವಿಕಾರವನ್ನೂ ಮಾಡುವದಕ್ಕೆ ಆಗುವದಿಲ್ಲ. ಆದ್ದರಿಂದ ಅರ್ಜುನನು ತಿಳಿದಿರುವಂತೆ ನಾನು ಇವರನ್ನು ಕೊಲ್ಲುವೆನು, ಇವರು ನನ್ನಿಂದ ಹತರಾಗುವರು-ಎಂದು ತಿಳಿಯುವದು ಪರಮಾರ್ಥದೃಷ್ಟಿಯಿಂದ ತಪ್ಪು.

ನಿಜವಾಗಿ ಈ ಆತ್ಮನಲ್ಲಿ ಯಾವದೊಂದು ವಿಕಾರವೂ ಇರುವದೇ ಇಲ್ಲ. ಅಜ್ಞಾನದಿಂದಲೇ ನಾವು ಅವನಲ್ಲಿಲ್ಲದ ಮಾರ್ಪಾಡುಗಳನ್ನು ಅವನ ಮೇಲೆ ಹಾಕುತ್ತಾ ಭ್ರಾಂತಿಯಿಂದ ವ್ಯಥೆಪಡುತ್ತಿರುವೆವು.

**ನ ಜಾಯತೇ ಮ್ರಿಯತೇ ವಾ ಕದಾಚಿತ್**
**ನಾಯಂ ಭೂತ್ವಾ ಅಭವಿತಾ ವಾ ನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥** (೨-೨೦)

ದೇಹವು ಹುಟ್ಟುವಂತೆ, ಬೆಳೆಯುವಂತೆ, ಮಾರ್ಪಡುವಂತೆ, ಸೊರಗುವಂತೆ, ಸಾಯುವಂತೆ ಕಾಣುವದು ನಿಜ. ಆದರೆ ದೇಹವೆಂಬುದು ಪರಮಾರ್ಥವಲ್ಲವೆಂದು ಆಗಲೆ ತಿಳಿಸಿದ್ದಾಗಿದೆ. ನಮ್ಮ ನೆರಳು ಉದ್ದವಾದರೆ, ಗಿಡ್ಡಾದರೆ, ಅಥವಾ ಕಾಣದೆ ಹೋದರೆ, ನಾವೇ ಉದ್ದವಾದೆವೆಂದು ಗಿಡ್ಡಾದೆವೆಂದು, ಅಥವಾ ಮರೆಯಾದೆವೆಂದು, ನಾವುಗಳು ಎಣಿಸುವೆವೆ? ಇಲ್ಲ. ನೆರಳೆಂಬುದು ಬರಿಯ ತೋರಿಕೆ. ಬಿಸಿಲಿನ ಅಭಾವವೇ ನೆರಳು. ಅದು ಬೆಳೆಯುವದು ಮುಂತಾದದ್ದು ಸುಳ್ಳು, ಇನ್ನು ಅದರ ಬೆಳೆಯುವಿಕೆಯಿಂದ ನಾವು ಬೆಳೆಯುವದೆಂದರೇನು? ದೇಹದ ಹುಟ್ಟು, ಬೆಳವಣಿಗೆ-ಮುಂತಾದವುಗಳೂ ಹೀಗೆಯೇ. ಅದರ ಹುಸಿಮಾರ್ಪಾಡುಗಳಿಂದ ಆತ್ಮ ಯಾವದೊಂದು ನಿಜವಾದ ಮಾರ್ಪಾಡೂ ಆಗುವಹಾಗಿಲ್ಲ. ಆದರೂ ತಮ್ಮ ನೆರಳನ್ನು ನಿಜವೆಂದು ನಂಬಿ, ಅದರ ಸಂಬಂಧವು ತಮಗೆ ಆಗುವದೆಂದು ಅಂಜಿ ಚೀರಿಡುವ ಮಕ್ಕಳಂತೆ ನಾವು ದೇಹವನ್ನು ನಿಜವೆಂದು ನಂಬಿ, ಅದರ ವಿಕಾರಗಳಿಂದ ನಮಗೂ ವಿಕಾರಗಳು ಆಗುವವೆಂದು ಭಾವಿಸುತ್ತಾ ಶೋಕಿಸುತ್ತಿರುವೆವು. ಆಕಾಶವು ಬೀಳುವದೆಂದು ಅಂಜಿಕೊಂಡು ಓಡುತ್ತಿದ್ದನಂತೆ, ಒಬ್ಬ ಹುಚ್ಚನು! ಅವನಂತೆಯೇ ನಾವು ಆತ್ಮನಿಗೆ ಹುಟ್ಟುಹೊಂದುಗಳಾಗುವವೆಂದು ಅಂಜಿಕೊಂಡು ಸಂಸಾರದಲ್ಲಿ ತೊಳಲುತ್ತಿರುವೆವು! ಈ ಅಂಜಿಕೆಯನ್ನು ತೊಲಗಿಸುವದೇ ಗೀತೋಪದೇಶದ ಗುರಿ.

ಇದೆಲ್ಲವನ್ನೂ ನೋಡಿದರೆ ಪ್ರಕೃತಸಂದರ್ಭದಲ್ಲಿ ಗೀತೆಯು ಮಾಡಬೇಕಾದದ್ದೇನನ್ನೂ ಉಪದೇಶಿಸಿಲ್ಲವೆಂಬುದು ಸ್ಪಷ್ಟವಾಗುತ್ತದೆ. ನಮ್ಮ ದೃಷ್ಟಿಕೋಣವು ಬದಲಾಯಿಸಬೇಕಾಗಿದೆ, ಅಷ್ಟೆ. ನಮ್ಮ ಪರಮಾರ್ಥಸ್ವರೂಪದ ವಿಷಯದಲ್ಲಿ ನಮಗೆ ಹಲವು ತಪ್ಪುತಿಳಿವಳಿಕೆಗಳು ಉಂಟಾಗುತ್ತಿರುವವು. ಒಬ್ಬನೇ ಮನುಷ್ಯನಿಗೆ ಹಲವು ದೆವ್ವಗಳು ಮೆಟ್ಟಿಕೊಳ್ಳುವಂತೆ ನಮ್ಮ ಸ್ವರೂಪಜ್ಞಾನವಿಲ್ಲದಾಗ ನಮ್ಮನ್ನು ಈ ತಪ್ಪುತಿಳಿವಳಿಕೆಗಳು ಮೆಟ್ಟಿಕೊಂಡು ತಿಕ್ಕಿ ಮುಕ್ಕುತ್ತಿರುವವು. ಈ ಆತ್ಮನಲ್ಲಿ ಯಾವ

ಹುಟ್ಟೂ ಇಲ್ಲ, ಇವನು ನಿತ್ಯನು, ಶಾಶ್ವತನು, ಯಾವ ಪರಿಣಾಮವೂ ಇಲ್ಲದವನು, ಶರೀರವನ್ನು ಕೊಲೆಮಾಡಿದರೂ ಇವನನ್ನು ಕೊಲ್ಲುವದಕ್ಕಾಗುವದಿಲ್ಲ-ಎಂಬ ನಿಜವನ್ನು ನಾವು ಮನಗಂಡೆವೊ ಇಲ್ಲವೊ, ಈ ಭ್ರಾಂತಿಗಳೆಲ್ಲ ಹೇಳಹೆಸರಿಲ್ಲದಂತೆ ಹಾಳಾಗಿ ಬಿಡುವುವು.

**ಆದ್ದರಿಂದ ಈ ತತ್ತ್ವಜ್ಞಾನವನ್ನು ಸಂಪಾದಿಸಿಕೊಳ್ಳುವದಕ್ಕೆ ಸರ್ವಸಾಹಸವನ್ನೂ ಮಾಡಬೇಕು.** ಆತ್ಮನು ಯಾವ ವಿಕಾರವೂ ಇಲ್ಲದವನೆಂಬುದನ್ನು ಸರಿಯಾಗಿ ಅರಿತುಕೊಳ್ಳಬೇಕು. ಗೀತಾರ್ಥವೆಲ್ಲ ಈ ಮೂರು ನಾಲ್ಕು ಶ್ಲೋಕಗಳಲ್ಲಿಯೇ ಅಡಗಿರುತ್ತದೆ. ಮುಂದಿರುವದೆಲ್ಲ ಇದರ ವಿವರಣೆ. ಇಲ್ಲಿ **ಸಮಾಸವ್ಯಾಸಪದ್ಧತಿಯನ್ನು** (Concentric method) ಅವಲಂಬಿಸಿ ತತ್ತ್ವವನ್ನು ಪ್ರತಿಪಾದಿಸಿರುತ್ತದೆ. ಒಂದೇ ಕೇಂದ್ರದ ಅನೇಕ ವೃತ್ತಗಳಿದ್ದರೆ ಒಂದಕ್ಕಿಂತ ಒಂದು ವಿಸ್ತಾರವಾಗಿರುವಂತೆ ಇಲ್ಲಿ ಉಪದೇಶವನ್ನು ಮೊದಲು ಸ್ವಲ್ಪದರಲ್ಲಿ ಹೇಳಿ ಹಿಗ್ಗಿಸಿ ಹಿಗ್ಗಿಸಿ ಹೆಚ್ಚು ಹೆಚ್ಚು ಸ್ಪಷ್ಟವಾಗಿ ತಿಳಿಸಿಕೊಡುತ್ತಾ ಹೋಗಿರುತ್ತದೆ. "ಆತ್ಮನು ಅವಿನಾಶಿ, ನಿತ್ಯನು, ಅಜನು, ಅವ್ಯಯನು-ಎಂದು ಅರಿತುಕೊಂಡವನು ಹೇಗೆ ತಾನೆ ಯಾರನ್ನಾದರೂ ಕೊಂದಾನು, ಯಾರನ್ನಾದರೂ ಕೊಲ್ಲಿಸಿಯಾನು?" ಆತ್ಮನು ನಿರ್ವಿಕಾರಿ ಎಂದು ಅರಿತುಕೊಂಡವನು ಆತ್ಮನೇ ಆಗಿರುತ್ತಾನೆ. ಆತ್ಮನು ವಿಕಾರವಿಲ್ಲದವನು, ಎಂದರೆ ಯಾವದಾದರೂ ಒಂದು ಕ್ರಿಯೆಯನ್ನು ಮಾಡಿ ಮಾರ್ಪಡುವವನಲ್ಲ, ಯಾರೊಬ್ಬರ ಕ್ರಿಯೆಯ ಫಲವನ್ನನುಭವಿಸುವದರಿಂದಲೂ ಮಾರ್ಪಡುವವನಲ್ಲ. ತನ್ನ ನಿಜವಾದ ಸ್ವರೂಪವು ಇಂಥದ್ದೆಂದು ಇದ್ದದ್ದು ಇದ್ದಂತೆ ಅರಿತುಕೊಳ್ಳುವದು, ಕರ್ಮವನ್ನು ಮಾಡುವದು-ಇವೆರಡೂ ನಿಂತಿರುವದು, ಓಡಾಡುವದು-ಎಂಬ ಕ್ರಿಯೆಗಳಂತೆ ಅತ್ಯಂತ ವಿರುದ್ಧವಾಗಿರುತ್ತವೆ. ಆದ್ದರಿಂದ ಆತ್ಮಜ್ಞಾನಿಗೆ ಕರ್ಮವನ್ನು ಮಾಡಿ ಅದರ ಫಲವನ್ನು ಭೋಗಿಸುವದೆಂಬ ಸಂಸಾರವೇ ಇಲ್ಲ, ಅವನಿಗೆ ಶೋಕವು ಎಲ್ಲಿಂದ ಬರಬೇಕು? ಅಸತ್ತಾದ, ನಿಜವಾಗಿ ಇಲ್ಲದೆ ಇರುವ, ಎರಡನೆಯ ವಸ್ತುವು ಇದೆ ಎಂದು ಕಲ್ಪಿಸುವದು, ಸತ್ಯವಾಗಿರುವ ತನ್ನ ಸ್ವರೂಪಕ್ಕೂ ಅದಕ್ಕೂ ಸಂಬಂಧವಿದೆಯೆಂದು ಕಲ್ಪಿಸುವದು, ಅದರಿಂದ ತನಗೆ ಯಾವದಾದರೊಂದು ಪ್ರಯೋಜನವುಂಟಾದೀತೆಂದು ನಂಬುವದು, ಅಥವಾ ಯಾವದಾದರೊಂದು ಕೇಡು ಆದೀತೆಂದು ಶಂಕಿಸುವದು-ಇದೇ ಕರ್ಮಕ್ಕೆ ಕಾರಣವು. ಯಾವನು ತನ್ನಲ್ಲಿಲ್ಲದ ಕರ್ತೃತ್ವಭೋಕ್ತೃತ್ವಗಳನ್ನು ತನ್ನ ಮೇಲೆ ತಪ್ಪುತಿಳಿವಳಿಕೆಯ ಕಲ್ಪನೆಯಿಂದ ಹಾಕಿಕೊಂಡಿರುವನೋ, ಅವನು ಇಂಥದ್ದೊಂದನ್ನು ಸಂಪಾದಿಸಿಕೊಂಡು ಸುಖಿಸಬೇಕೆಂದಾಗಲಿ ಇಂಥದ್ದೊಂದನ್ನು ತೊಲಗಿಸಿಕೊಂಡು ಅದರಿಂದಾಗುವ ಕೇಡನ್ನು ತಪ್ಪಿಸಿಕೊಳ್ಳಬೇಕೆಂದಾಗಲಿ ಬಯಸುವನು; ಆ ಬಯಕೆಯನ್ನು

ನೆರವೇರಿಸಿಕೊಳ್ಳುವದಕ್ಕಾಗಿ ಕರ್ಮವನ್ನು ಮಾಡುವನು. ಆದರೆ ಯಾವನಿಗೆ ಈ ಬೇಕುಬೇಡಗಳೇ ಇಲ್ಲವೋ, ಅವನಿಗೆ ಏತಕ್ಕಾಗಿ ಕರ್ಮವು ಬೇಕಾದೀತು?

ಇಲ್ಲಿ ಒಂದು ವಿಷಯವನ್ನು ನೆನಪಿಡಬೇಕು. ಆತ್ಮನು ನಿತ್ಯನು, ನಿರ್ವಿಕಾರನು, ಸದ್ರೂಪನು; ಅನಾತ್ಮವು ಅನಿತ್ಯ, ವಿಕಾರಿ, ಅಸದ್ರೂಪವಾದದ್ದು-ಎಂದು ಗೀತಾ ಶ್ಲೋಕಗಳನ್ನು ಹೇಳಿಕೊಳ್ಳುತ್ತಿದ್ದರೆ ಪ್ರಕೃತ ತತ್ತ್ವಜ್ಞಾನವು ಬಂದಂತಾಯಿತೆಂದು ಎಂದಿಗೂ ಬಗೆಯಬಾರದು. ಇವುಗಳ ಯಾಥಾತ್ಮ್ಯವನ್ನು ನಾವು ಮನಗಂಡಿರಬೇಕು. ಹಾಗಿಲ್ಲದಿದ್ದರೆ 'ರಾಮ ರಾಮ!' ಎನ್ನುವದನ್ನು ಯಜಮಾನನ ಶಿಕ್ಷಣದಿಂದ ಕಲಿತು ಕೊಂಡಿದ್ದ ಗಿಣಿ, ಬೆಕ್ಕು ಬಂದ ಸಮಯದಲ್ಲಿ 'ಕ ಕ್ಕ ಕ್ಕ!' ಎಂದೂ ಕೂಗುವಂತೆ ನಮಗೆ ಈ ಅಮೋಘವಾದ ವಿಷಯವು ವ್ಯವಹಾರದಲ್ಲಿ ಬೇಕಾದಾಗ ಮರೆತುಹೋಗಿಬಿಟ್ಟಿರುವದು. ಆತ್ಮಜ್ಞಾನವು ಎಷ್ಟರಮಟ್ಟಿಗೆ ಆಗಿರಬೇಕು? ಉಪದೇಶ ಸಾಹಸ್ರಿಯಲ್ಲಿ ಶ್ರೀ ಶಂಕರಾಚಾರ್ಯರು ಅಪ್ಪಣೆಕೊಡಿಸಿರುವಂತೆ ಈಗ ನಮ್ಮಗಳಿಗೆ "ನಾನು ದೇಹವು" ಎಂಬ ಜ್ಞಾನವು ಎಷ್ಟರಮಟ್ಟಿಗೆ ಉಂಟಾಗಿರುವದೋ ಅಷ್ಟರಮಟ್ಟಿಗೇ "ನಾನು ನಿತ್ಯ ನಿರ್ವಿಕಾರಿಯಾಗಿರುವ ಕೂಟಸ್ಥನಾದ ಅದ್ವಿತೀಯನಾದ ಆತ್ಮನು"- ಎಂಬ ಜ್ಞಾನವೂ ಉಂಟಾಗಿ ದೇಹಾತ್ಮಬುದ್ಧಿಯು ತೊಲಗಿಹೋಗಬೇಕು. ಅಂಥ ಜ್ಞಾನವು ಯಾವನಿಗೆ ಆಗಿರುವದೋ ಅವನಿಗೆ ಬೇಡಬೇಡವೆಂದರೂ ಮುಕ್ತಿಯು ಸಿದ್ಧವಾಗಿರುತ್ತದೆ. ಅರ್ಜುನನಿಗೆ ದೇಹಾತ್ಮಬುದ್ಧಿಯಿರಲಿಲ್ಲವಾದರೂ ಆತ್ಮನು ದೇಹಿಯೆಂದೂ ದೇಹದ ಮೂಲಕವಾಗಿ ಆಗುವ ಸುಖದುಃಖಗಳನ್ನು ಉಣ್ಣುವವನೆಂದೂ ಜನ್ಮಾಂತರದಲ್ಲಿಯೂ ಈಗ ಮಾಡಿದ ಪಾಪಪುಣ್ಯಗಳ ಫಲವನ್ನು ಜೀವನು ಅನುಭವಿಸಬೇಕಾಗುವದೆಂದೂ ಅವನು ದೃಢವಾಗಿ ನಂಬಿಬಿಟ್ಟಿದ್ದನು. ಸ್ವಜನರನ್ನೂ ಗುರುಹಿರಿಯರನ್ನೂ ಯುದ್ಧದಲ್ಲಿ ಕೊಂದರೆ ಇಹದಲ್ಲಿ ಸುಖವಿಲ್ಲ, ಪರದಲ್ಲಿ ಗತಿಯಿಲ್ಲ-ಎಂಬ ಶಂಕೆಯೇ ಅವನ ಶೋಕಕ್ಕೆ ಕಾರಣವಾಗಿತ್ತು. ಶರೀರಕ್ಕಾಗುವ ಮೃತ್ಯುವು ಆತ್ಮನಿಗೂ ಉಂಟು ಎಂದು ಅವನು ಗಟ್ಟಿಯಾಗಿ ನಂಬಿದ್ದನು. ಆ ನಂಬಿಕೆಯನ್ನು ಸಡಿಲಿಸುವದಕ್ಕಾಗಿ ಭಗವಂತನು "ಪರಮಾತ್ಮನು ಮೃತ್ಯುವಿಗೂ ಮೃತ್ಯುವು, ಶಿವಭಕ್ತನಾದ ಮಾರ್ಕಂಡೇಯನನ್ನು ಒಯ್ಯುವದಕ್ಕೆ ಯಮನೂ ಅಂಜಿದಂತೆ, ಜ್ಞಾನಿಯನ್ನು ಕಂಡರೆ ಮೃತ್ಯುವಿಗೂ ಅಂಜಿಕೆ! ಅಥವಾ ಮೃತ್ಯುವಿಗೆ ಕೂಡ ಜ್ಞಾನಿಯು ಆತ್ಮನಾಗಿಬಿಟ್ಟಿರುತ್ತಾನೆ" ಎಂಬ ತತ್ತ್ವವನ್ನು ಮನಗಾಣಿಸುವದಕ್ಕೆ ಹೊರಟನು. ಈ ತತ್ತ್ವವನ್ನು ನಾವು ಮನಗಂಡು ಇದರಿಂದಾಗುವ ಉತ್ತಮಫಲವು ನಮಗೆ ವಶವಾಗ ಬೇಕಾದರೆ ಆತ್ಮತತ್ತ್ವವನ್ನು ಕುರಿತು ವಿಚಾರಿಸಬೇಕು; ಬರಿಯ ಕುತೂಹಲದಿಂದಲ್ಲ, ನಮ್ಮ ಸಂಶಯಗಳೆಲ್ಲ ತೀರ ತೊಲಗುವವರೆಗೂ ದೊಡ್ಡವರ ಉಪದೇಶವನ್ನು

ಕೇಳಬೇಕು. ನಮ್ಮ ಮನಸ್ಸಿನಲ್ಲಿ ಅದನ್ನು ಮೆಲುಕುಹಾಕಬೇಕು; ತತ್ತ್ವವೇ ನಾವಾಗಿ ನಿಲ್ಲುವವರೆಗೆ ಅದರ ಅನುಸಂಧಾನವನ್ನು ಮಾಡಬೇಕು. ಅಜ್ಞಾನಿಗೆ ಬೇಡಬೇಡವೆಂದರೂ ಹೇಗೆ ಸಂಸಾರವು ಗಂಟುಬಿದ್ದಿರುವದೋ ಹಾಗೆಯೇ ಆತ್ಮತತ್ತ್ವದ ಶ್ರವಣಮನನಿದಿಧ್ಯಾಸನಗಳನ್ನು ಮಾಡಿಕೊಂಡವರಿಗೆ ಬೇಡಬೇಡವೆಂದರೂ ಮುಕ್ತಿಯು ಇಲ್ಲಿಯೇ ಈಗಲೇ ಅನುಭವಕ್ಕೆ ಬರುವದು. ಇದು ಹೇಗೆಂಬುದನ್ನು ಮುಂದೆ ನಾವು ಈ ಗೀತೆಯಲ್ಲಿ ಸ್ಪಷ್ಟತರವಾಗಿ ಅರಿತುಕೊಳ್ಳಬೇಕಾಗಿದೆ.

# ೧೦. ಆತ್ಮಜ್ಞಾನದ ಉಪಸಂಹಾರ ೨-(೨೨-೩೮)

(೨೫.೮.೪೬)

ಆತ್ಮನು ಪರಮಾರ್ಥಸತ್ಯನು, ಯಾವ ವಿಕಾರಗಳೂ ಇಲ್ಲದವನು-ಎಂದು ಭಗವಂತನು ಹೇಳುವದಕ್ಕೆ ಹೊರಟಿರುತ್ತಾನೆ. ಆತ್ಮನು ಕರ್ಮವನ್ನು ಮಾಡುವವನು, ಅದರ ಫಲವನ್ನು ಅನುಭವಿಸುವವನು-ಎಂಬುದೇ ಬಹಳ ಜನರ ನಂಬಿಕೆ. ಕರ್ತೃವಾಗಿ ಭೋಕ್ತೃವಾಗಿ ಸಂಸಾರದ ಕೋಟಲೆಗೆ ಸಿಕ್ಕಿ ನರಳುತ್ತಿರುವದೇ ನಮ್ಮಗಳ ಸ್ವಭಾವವೆಂದು ಅವರು ಎಣಿಸುವರು. ಈ ಸುಖವು ಬರುವದಕ್ಕೆ ಏನು ಮಾಡಲಿ? ಈ ದುಃಖವು ತೊಲಗುವುದಕ್ಕೆ ಏನು ಮಾಡಲಿ? ನನ್ನ ಹಗೆಗೆ ಇಂಥ ಸುಖವು ದಕ್ಕಿಬಿಡುವದಲ್ಲ! ಅದನ್ನು ತಪ್ಪಿಸುವದಕ್ಕೆ ಏನು ಮಾಡಲಿ? ಅವನನ್ನು ಹೇಗಾದರೂ ತೀರಿಸಿಬಿಡಬೇಕಲ್ಲ! ಅದಕ್ಕೇನು ಮಾಡಲಿ? ಈ ಬಗೆಯ ಚಿಂತೆಯನ್ನು ಸತತವಾಗಿ ಹತ್ತಿಸಿಕೊಂಡು ಬೇಗುದಿಗೊಳ್ಳುತ್ತಿರುವದೇ ಸಾಮಾನ್ಯರ ಸ್ವಭಾವವು. ಅವರ ಈ ಭಾವನೆಯು ಪರಮಾರ್ಥಜ್ಞಾನವಿಲ್ಲದ್ದರಿಂದ ಬಂದದ್ದು. ಅರ್ಜುನನು 'ನಾನು ಇವರನ್ನೆಲ್ಲ ಕೊಲ್ಲುವೆನು. ಇವರೆಲ್ಲ ನನ್ನಿಂದ ಹತರಾಗುವರು; ಈ ಕಾರ್ಯದಿಂದ ಇವರಿಗೆ ದುಃಖವುಂಟಾಗುವದು, ನನಗೆ ಪಾಪವುಂಟಾಗುವದು ಎಂದು ಬಗೆಯುವದಕ್ಕೆ ಈ ಅಜ್ಞಾನವೇ ಕಾರಣವು. ಆದ್ದರಿಂದಲೇ ಭಗವಂತನು "ಎಲೈ ಅರ್ಜುನನೆ, ಯಾವನು ಇವನು ಕೊಲ್ಲುವವನೆಂದು ಬಗೆಯುವನೋ, ಯಾವನು ಇವನು ಕೊಲ್ಲಿಸಿಕೊಳ್ಳುವವನೆಂದು ಬಗೆಯುವನೋ, ಅವರಿಬ್ಬರೂ ನಿಜವನ್ನು ಅರಿಯರು; ಏಕೆಂದರೆ ಈ ಆತ್ಮನು ಕೊಲ್ಲುವವನೂ ಅಲ್ಲ, ಕೊಲ್ಲಿಸಿಕೊಳ್ಳುವವನೂ ಅಲ್ಲ" ಎಂದು ಅಪ್ಪಣೆಕೊಡಿಸಿರುತ್ತಾನೆ.

ಆತ್ಮನು ಒಬ್ಬನೇ, ಅವನು ಅವಿನಾಶಿ, ನಿತ್ಯನು, ಅಜನು, ಅವ್ಯಯನು-ಎಂದು ಯಾವನು ಅರಿತುಕೊಳ್ಳುವನೋ ಅವನು ಹೇಗೆ ತಾನೆ ಯಾರನ್ನಾದರೂ ಕೊಂದಾನು,

ಅಥವಾ ಕೊಲ್ಲಿಸಿಯಾನು? ಆತ್ಮನ ನಿಜವನ್ನು ತಿಳಿಯುವವನು ಆತ್ಮನೇ ಆಗಿಬಿಡುವದರಿಂದ ಅವನಿಗೆ ತನ್ನಲ್ಲಿ ಕರ್ತೃತ್ವಭೋಕ್ತೃತ್ವಗಳು ಇಲ್ಲವೆಂದು, ತಾನು ಯಾವ ಕರ್ಮವನ್ನೂ ಮಾಡುವವನಲ್ಲ, ಯಾವ ಕರ್ಮದ ಫಲವನ್ನೂ ಅನುಭವಿಸು ವವನಲ್ಲ ಎಂದು-ಮನಗಂಡುಬಿಟ್ಟಿರುವದರಿಂದ ಆತ್ಮಸ್ವರೂಪನಾದ ಆತನು ಯಾವ ಕ್ರಿಯೆಯನ್ನೂ ಪರಮಾರ್ಥವಾಗಿ ಮಾಡುವದೇ ಇಲ್ಲ. ಆತ್ಮನು ನಿತ್ಯಶುದ್ಧಬುದ್ಧಮುಕ್ತನು, ಅವನಲ್ಲಿ ಯಾವದೊಂದು ವಿಕಾರವೂ ಇಲ್ಲ ಎಂಬುದೇ ಜ್ಞಾನಿಯ ನಿಶ್ಚಯವು. ಒಬ್ಬ ಮನುಷ್ಯನು ಹರಿದ ಹಳೆಯ ಬಟ್ಟೆಗಳನ್ನು ಬಿಟ್ಟು ಬೇರೆಯ ಹೊಸ ಬಟ್ಟೆಗಳನ್ನು ಹಾಕಿಕೊಂಡರೆ ಆ ಮನುಷ್ಯನೇ ಮಾರ್ಪಟ್ಟನೆಂದು ನಾವು ತಿಳಿದುಕೊಳ್ಳುವದಿಲ್ಲ. ಹಾಗೆಯೇ ಮನುಷ್ಯನಿಗೆ ಶರೀರಗಳು ಬಂದು ಹೋದರೂ ಆತ್ಮನು ಬೇರೆಯಾಗುವದಿಲ್ಲ; ಅವನಲ್ಲಿ ಯಾವ ಮಾರ್ಪಾಡೂ ಆಗುವದಿಲ್ಲ.

ಆತ್ಮನು ಹಳೆಯ ಬಟ್ಟೆಗಳಂತೆ ಶರೀರಗಳನ್ನು ಬಿಟ್ಟು ಹೊಸ ಶರೀರಗಳನ್ನು ಧರಿಸುತ್ತಿರುತ್ತಾನೆ-ಎಂದು ಭಗವಂತನು ಹೇಳಿರುವ ಉಪಮಾನದಲ್ಲಿ ವಿವಕ್ಷಿತಾಂಶವು ಯಾವದು? ಇದನ್ನು ನಾವು ಸ್ವಲ್ಪ ಲಕ್ಷ್ಯವಿಟ್ಟು ತಿಳಿದುಕೊಳ್ಳುವದು ಅವಶ್ಯವಾಗಿರುತ್ತದೆ. ಏಕೆಂದರೆ ಆತ್ಮನು ಶರೀರಗಳನ್ನು ಧರಿಸುತ್ತಲೂ ಬಿಡುತ್ತಲೂ ಇರುವನೆಂಬ ಜನ್ಮಾಂತರವಾದವನ್ನು ಸಮರ್ಥಿಸುವದಕ್ಕೆ ಈ ಶ್ಲೋಕವು ಬಂದಿದೆ ಎಂದು ಕೆಲವರು ತಪ್ಪಾಗಿ ತಿಳಿದುಕೊಳ್ಳುವ ಸಂಭವವಿರುತ್ತದೆ. ಜನ್ಮಾಂತರವಾದವು ವೇದಸಮ್ಮತವೇ ಆಗಿರುತ್ತದೆ; ಅದರಿಂದ ಶರೀರವೇ ಆತ್ಮನೆಂಬ ಬುದ್ಧಿಯು ಹೋಗಿ ಧರ್ಮದಲ್ಲಿ ಆಸಕ್ತಿಯೂ ಅಧರ್ಮದಲ್ಲಿ ಹೇಯತ್ವಬುದ್ಧಿಯೂ ಉಂಟಾಗುತ್ತದೆ. ಆದ್ದರಿಂದ ಕರ್ಮಕಾಂಡದಲ್ಲಿ ಶರೀರಕ್ಕಿಂತಲೂ ಭಿನ್ನನಾದ ಕರ್ಮಫಲಭೋಕ್ತನೊಬ್ಬನು ಇರುವ ನೆಂದು ಸಮರ್ಥಿಸುವ ವಾಕ್ಯಗಳಿಗೆ ಪ್ರಯೋಜನವಿಲ್ಲದೆ ಇಲ್ಲ. ಆದರೆ ಈಗ ನಾವು ವಿಚಾರಿಸುತ್ತಿರುವ ಪ್ರಕರಣವು ಕರ್ಮದ್ದಲ್ಲ; ಆತ್ಮನು ಕರ್ತನಲ್ಲ, ಭೋಕ್ತೃವಲ್ಲ-ಎಂದು ತಿಳಿಸುವದಕ್ಕಾಗಿ ಬಂದ ಪ್ರಕರಣವಿದು. ಆದ್ದರಿಂದ ಇಲ್ಲಿ ಶರೀರಾದಿಗಳು ನಿಜ ವೆಂದಾಗಲಿ, ಅವುಗಳನ್ನು ಒಂದೊಂದಾಗಿ ಆತ್ಮನು ಪರಮಾರ್ಥವಾಗಿಯೂ ಬಿಡುತ್ತಲೂ ಹೊಸದನ್ನು ತೆಗೆದುಕೊಳ್ಳುತ್ತಲೂ ಹೋಗುತ್ತಿರುವನೆಂದಾಗಲಿ ತಿಳಿಸುವದರಲ್ಲಿ ತಾತ್ಪರ್ಯವಿರುವದಿಲ್ಲ. ಶರೀರಾದಿಗಳು ಅಸತ್ತೆಂದೂ ಅವುಗಳು ಜ್ಞಾನದಿಂದ ಅಂತವುಳ್ಳವುಗಳಾಗುವವೆಂದೂ ಹಿಂದೆಯೂ ಹೇಳಿಯೇ ಇರುತ್ತದೆ. ಆದ್ದರಿಂದ "ಮನುಷ್ಯನು ಹೊಸಬಟ್ಟೆಗಳನ್ನು ಧರಿಸುವಂತೆ ಆತ್ಮನು ಹೊಸ ಶರೀರಗಳನ್ನು ಧರಿಸುತ್ತಿರುವನು" ಎಂಬ ವಾಕ್ಯಕ್ಕೆ ಯಥಾಶ್ರುತವಾಗಿ ಅಕ್ಷರಾರ್ಥವನ್ನು ಕಲ್ಪಿಸುವದಕ್ಕೆ ಬರುವದಿಲ್ಲ. ಬಟ್ಟೆಗಳು ಬದಲಾಯಿಸಿದ ಮಾತ್ರದಿಂದ ಮನುಷ್ಯನು

ಹೇಗೆ ಬದಲಾಯಿಸದೆ ಮೊದಲಿನ ತಾನೇ ಆಗಿರುವನೋ, ಅದರಂತೆ ಶರೀರಗಳು ಬದಲಾಯಿಸಿದ ಮಾತ್ರದಿಂದ ಆತ್ಮನು ಯಾವ ವಿಕಾರವನ್ನೂ ಹೊಂದದೆ ಮೊದಲಿನ ಸ್ವರೂಪದಿಂದಲೇ ಇರುತ್ತಿರುವನು-ಎಂದು ಹೇಳುವದರಲ್ಲಿ ಬಟ್ಟೆಯ ದೃಷ್ಟಾಂತಕ್ಕೆ ಸ್ವಾರಸ್ಯವನ್ನು ಕಲ್ಪಿಸಬೇಕು.

ಮುಂದಿನ ಶ್ಲೋಕದಲ್ಲಿ ಇದೇ ಅರ್ಥವನ್ನು ಪುಷ್ಟಿಗೊಳಿಸಿರುತ್ತದೆ. ಶರೀರವು ಸಾಯುವದೆಂಬ ಕೊನೆಯ ವಿಕಾರವನ್ನು ಹೊಂದಿದ ಮಾತ್ರದಿಂದ ಹೇಗೆ ಆತ್ಮನಿಗೆ ಯಾವ ವಿಕಾರವೂ ಆಗುವದಿಲ್ಲವೋ, ಹಾಗೆಯೇ ಶರೀರವು ಇರುವಾಗ ಅದಕ್ಕೆ ಶಸ್ತ್ರಾದಿಗಳಿಂದ ಗಾಯವಾದರೆ, ಅದು ಬೆಂಕಿಯಿಂದ ಸುಟ್ಟರೆ, ನೀರಿನಿಂದ ನೆನೆದರೆ, ಅಥವಾ ಗಾಳಿಯಿಂದ ಆರಿದರೆ, ಆತ್ಮನಿಗೆ ಆ ಯಾವದೊಂದು ವಿಕಾರವೂ ಆಗುವಂತಿಲ್ಲ, ಶರೀರಾದಿಗಳಿಗೆ ಆಗುವ ಗಾಯ, ಸುಡುವಿಕೆ-ಮುಂತಾದವುಗಳಿಂದಾಗುವ ನೋವು ಆತ್ಮನಿಗೆ ಯಾವಾಗಲೂ ತಟ್ಟುವಂತೆ ಇಲ್ಲ. ಶಬ್ದ, ಸ್ಪರ್ಶ, ರೂಪ, ರಸ, ಗಂಧ- ಎಂಬ ವಿಷಯಗಳಿಂದ ಆಗುವ ಸುಖದುಃಖಗಳು ಶಬ್ದಾದಿರೂಪನಲ್ಲದ ಆತ್ಮನಿಗೆ ಹೇಗೆ ತಾನೆ ತಟ್ಟುವವು? ಆತ್ಮನು ಎಂದೆಂದಿಗೂ ಯಾವ ವಿಕಾರವೂ ಆಗದ ಸ್ವಭಾವದವನು. ಆದ್ದರಿಂದ ಅವನು ನಿತ್ಯನು, ಸರ್ವಗತನು, ಸ್ಥಾಣು, ಅಚಲನು, ಸನಾತನನು ಎಂದು ನಿಶ್ಚಯಿಸಬೇಕು. ಆತ್ಮನನ್ನು ನಾಶಗೊಳಿಸುವದು ಪಂಚಭೂತ ಗಳಿಂದಲೂ ಆಗುವ ಹಾಗಿಲ್ಲ, ಆದ್ದರಿಂದ ಇವನು **ನಿತ್ಯನು**. ಯಾವದು ಪರಿಚ್ಛಿನ್ನವಾಗಿರು ವದೋ ಅದು ನಿತ್ಯವಾಗಿರಲಾರದು; ಈ ಆತ್ಮನು ನಿತ್ಯನಾಗಿರುವದರಿಂದ **ಸರ್ವಗತನು**, ಸರ್ವವ್ಯಾಪಿಯು ಎಂದು ನಿಶ್ಚಯಿಸಬೇಕು. ಆದ್ದರಿಂದಲೇ ಈತನು **ಸ್ಥಾಣು**, ವಿಕಾರವಿಲ್ಲದೆ ಸ್ಥಿರವಾಗಿ ಇರುವವನು. ವಸ್ತುವಿನಲ್ಲಿ ವಿಕಾರವೇ ಇಲ್ಲದಿದ್ದರೆ ಅದು ಎಲ್ಲಿಗೂ ಹೋಗುವಹಾಗಿಲ್ಲವಷ್ಟೆ; ಈ ಆತ್ಮನು ಸ್ಥಿರನಾಗಿರುವದರಿಂದಲೇ ಅಚಲನು. ಈ ಕಾರಣಗಳಿಂದ ಇವನು **ಸನಾತನನು**, ಈಚೆಗೆ ಯಾವದೋ ಒಂದು ಕಾರಣದಿಂದ ಉಂಟಾದವನಲ್ಲ.

ಈ ಆತ್ಮನು **ಅವ್ಯಕ್ತನಾಗಿ**ರುತ್ತಾನೆ, ಯಾವ ಕರಣಗಳಿಗೂ ಗೋಚರನಲ್ಲ. **ಅಚಿಂತ್ಯನಾ**ಗಿರುತ್ತಾನೆ, ಮನಸ್ಸಿನಿಂದ ಅಂಥವನು, ಇಂಥವನು-ಎಂದು ಕಲ್ಪಿಸಿಕೊಳ್ಳು ವದಕ್ಕೆ ಬರುವವನಲ್ಲ. ಇವನಲ್ಲಿ ಯಾವ ಅವಯವಗಳೂ ಇಲ್ಲವಾದ್ದರಿಂದ **ಅವಿಕಾರ್ಯನು**, ಇವನನ್ನು ಹೊರಗಿನ ಯಾವದಾದರೂ ವಸ್ತುವಿನಿಂದ ಮಾರ್ಪಡಿಸುವದಕ್ಕೆ ಆಗುವಹಾಗಿಲ್ಲ. ಇದು ಆತ್ಮನ ತತ್ತ್ವಯಾಥಾತ್ಮ್ಯವನ್ನು ವಿವರಿಸುವ ಪ್ರಕರಣದ ಉಪಸಂಹಾರವು.

ಈ ಪ್ರಕರಣದಲ್ಲಿ ಭಗವಂತನು "ನ ತ್ವಂ ಶೋಚಿತುಮರ್ಹಸಿ" ನೀನು ಶೋಕಿಸಬಾರದು-ಎಂದು ಮತ್ತೆ ಮತ್ತೆ ಹೇಳಿರುವದನ್ನು ನಾವು ಲೆಕ್ಕಿಸಬೇಕು. ದೂರದಲ್ಲಿ ಬಿದ್ದಿರುವ ಹಗ್ಗವನ್ನು ಕಂಡು ಹಾವೆಂದು ನಡುಗುತ್ತಿರುವವನನ್ನು "ಅಯ್ಯ, ಅದು ಹಾವಲ್ಲ, ಹೆದರಬೇಡ" ಎಂದು ಹೇಳಿ ಅದು ಹಗ್ಗವೇ ಎಂಬುದನ್ನು ಅನೇಕ ಕಾರಣಗಳಿಂದ ಗೊತ್ತುಪಡಿಸುತ್ತಾ ಮತ್ತೆಮತ್ತೆ "ಹೆದರದಿರು" ಎಂದು ಹೇಳುವದಕ್ಕೆ ಸಮಾನವಾದ ವಾಕ್ಯವಿದು. ಅರ್ಜುನನ ಶೋಕಕ್ಕೆಲ್ಲ ಆತ್ಮಜ್ಞಾನ ವಿಲ್ಲದ್ದೇ ಕಾರಣವು. ಪ್ರಪಂಚದಲ್ಲಿ ಕಾಣಬರುವ ಶೋಕಕಾರಣಗಳು ಬೇರೆಬೇರೆ ಯಾಗಿರುವಂತೆ ತೋರುತ್ತಿದ್ದರೂ ನಿಜವಾಗಿ ನೋಡಿದರೆ ಅಜ್ಞಾನವೇ ಅದಕ್ಕೆಲ್ಲ ಕಾರಣವು; ಆದ್ದರಿಂದ ಆತ್ಮನನ್ನು ಅರಿತುಕೊಳ್ಳುವದೊಂದೇ ಸಂಸಾರದುಃಖಕ್ಕೆಲ್ಲ ಪರಿಹಾರವೆಂಬುದನ್ನು ಈ ವಾಕ್ಯವು ನೆನಪುಕೊಡುತ್ತದೆ. ಆತ್ಮನು ಅನಿತ್ಯನು, ಪರಿಚ್ಛಿನ್ನನು, ವಿಕಾರಿಯು, ನಾಶವುಳ್ಳವನು-ಎಂದು ಮುಂತಾಗಿ ತಿಳಿದಿರುವದೇ ದುಃಖಮೂಲವಾದ ಅಜ್ಞಾನವು. ಈ ಮೂಲವನ್ನು ಕಿತ್ತುಹಾಕುವದಕ್ಕಾಗಿ ಭಗವಂತನು ಬೇರೆಬೇರೆಯ ಮಾತುಗಳಿಂದ ಆತ್ಮನು ನಿತ್ಯನೆಂದೂ ಸರ್ವಗತನೆಂದೂ ಅದ್ವಿತೀಯನೆಂದೂ ಆನಂದಸ್ವರೂಪನೆಂದೂ ಮತ್ತೆಮತ್ತೆ ಅರ್ಜುನನಿಗೆ ನೆನಪು ಕೊಡುತ್ತಿದಾನೆ. ಆದ್ದರಿಂದ ಇಲ್ಲಿ ಯಾವ ಪುನರುಕ್ತಿಯ ದೋಷವೂ ಇರುವದಿಲ್ಲ. ವಿಷಯವು ಸೂಕ್ಷ್ಮವಾಗಿರುವದರಿಂದ ಅದನ್ನು ಹೀಗೆ ಮತ್ತೆ ಮತ್ತೆ ತಿಳಿಸುವದು ಅನಿವಾರ್ಯವಾಗಿದೆ.

ಇದು ಆತ್ಮತತ್ತ್ವವಿಚಾರದ ಪ್ರಕರಣವೇ ಎಂಬುದು ಸ್ಪಷ್ಟವಾಗಿರುತ್ತದೆಯಷ್ಟೆ. ಆತ್ಮನನ್ನು ಅರಿತುಕೊಂಡರೆ ಶೋಕವಿಲ್ಲವಾದ್ದರಿಂದ ನೀನು ತತ್ತ್ವವೇತ್ತನಾದರೆ ಶೋಕಕ್ಕೆ ಯಾವ ಕಾರಣವೂ ಇಲ್ಲ-ಎಂಬುದನ್ನು ಬಿಡಿಸಿಹೇಳಿ ಶೋಕಕ್ಕೆ ಕಾರಣವಿಲ್ಲ ವೆಂಬುದನ್ನು ಗಟ್ಟಿಗೊಳಿಸುವದಕ್ಕಾಗಿಯೇ ಪ್ರಾಸಂಗಿಕವಾಗಿ ಲೌಕಿಕದೃಷ್ಟಿಯನ್ನೂ ಅವಲಂಬಿಸಿ ಒಂದು ಮಾತನ್ನು ಆಡಿರುತ್ತಾನೆ. "ನಾನು ಹೇಳಿದ ತತ್ತ್ವಜ್ಞಾನದ ಮಾತು ಹಾಗಿರಲಿ, ಸಾಮಾನ್ಯಜನರ ನಂಬಿಕೆಯನ್ನವಲಂಬಿಸಿದರೂ ದುಃಖಕ್ಕೆ ಕಾರಣವೇ ಇರುವದಿಲ್ಲ; ಏಕೆಂದರೆ ಹುಟ್ಟು ಹೊಂದುಗಳನ್ನು ಪಡೆಯುವದೇ ಆತ್ಮನ ಸ್ವಭಾವವೆಂಬುದು ಸಾಮಾನ್ಯರ ಭಾವನೆ. ಅದೇ ನಿಜವಾದರೆ ಶೋಕಿಸುವದಕ್ಕೆ ಕಾರಣವೆಲ್ಲಿದೆ? ಹುಟ್ಟುವವನು ಸಾಯಲೇ ಬೇಕು; ಸತ್ತವನು ಹುಟ್ಟಲೇಬೇಕು. ಈ ಎರಡಕ್ಕೂ ಪರಿಹಾರೋಪಾಯವಿರುವದಿಲ್ಲ. ಯಾವ ರೋಗಕ್ಕೆ ಚಿಕಿತ್ಸೆಯೇ ಇಲ್ಲವೋ ಅದನ್ನು ಅನುಭವಿಸಿಯೇ ತೀರಬೇಕಲ್ಲವೆ? ಎಲ್ಲಿಂದಲೋ ಬಂದು ನಡುವೆ ಕೆಲವು ಕಾಲದ ಮಟ್ಟಿಗೆ ತೋರಿಕೊಂಡಿದ್ದು ಕೊನೆಗೆ ಮರೆಯಾಗಿ ಎಲ್ಲಿಗೋ ಹೋಗಿ

ಬಿಡುವದೇ ಸರ್ವಭೂತಗಳ ಸ್ವಭಾವವಾದರೆ ಅದಕ್ಕಾಗಿ ಶೋಕಿಸಿದರೆ ತಾನೆ ಸ್ವಭಾವವು ಹೇಗೆ ಬದಲಾಯಿಸೀತು? ಆದ್ದರಿಂದಲೂ ನೀನು ಶೋಕಿಸಬಾರದು." ಇದು ಪ್ರಾಸಂಗಿಕವಾದ ಮಾತು.

ಪ್ರಕೃತವಾದ ಆತ್ಮತತ್ತ್ವದ ದೃಷ್ಟಿಯಿಂದ ನೋಡಿದರಂತೂ ಯಾವ ದುಃಖಕ್ಕೂ ಯಾವ ಕಾರಣವೂ ಇರುವದಿಲ್ಲ. ಆದರೆ ಆತ್ಮಜ್ಞಾನವೆಂದರೇನೆಂಬುದನ್ನು ಮಾತ್ರ ನಾವು ಮರೆಯದೆ ಇರಬೇಕು. ಏಕೆಂದರೆ ಆತ್ಮತತ್ತ್ವದ ವಿಷಯಕ್ಕೆ ಪಾರದರ್ಶಿ ಗಳೆನಿಸಿರುವವರು ಬಹು ವಿರಳ. ಆತ್ಮನೆಂಬುದು ನಮ್ಮಗಳ ಪಾಲಿಗೆ ಒಂದು ಅದ್ಭುತವಾದ ವಸ್ತು. ಅದರ ತಿಳಿವಳಿಕೆಯು ಒಂದಿಷ್ಟು ಆದರೆ "ಅಬಬ! ಇಂಥ ಅಗಾಧವಾದ ಜ್ಞಾನವು ನನಗೆ ಉಂಟಾಗಿದೆ" ಎಂದು ಜನರು ತಮ್ಮ ತಿಳಿವಳಿಕೆಗೆ ತಾವೇ ಬೆರಗಾದವರಂತೆ ನಟಿಸುವರು. ಮತ್ತೊಬ್ಬರಿಗೆ ಆತ್ಮತತ್ತ್ವವನ್ನು ಹೇಳುವದಕ್ಕೆ ಹೊರಡುವವರೂ ಅಷ್ಟೇ. ತಾವು ಒಂದಾನೊಂದು ಆಶ್ಚರ್ಯವನ್ನು ತಿಳಿಯ ಹೇಳುವವರಂತೆ ನೀವುಗಳು ತಿಳಿದುಕೊಳ್ಳಬೇಕಾದದ್ದು ಹೀಗೆ, ಹಾಗೆ-ಎಂದು ವರ್ಣಿಸಿ, ಕೇಳುವವರನ್ನು ಬೆರಗುಗೊಳಿಸುವದಕ್ಕೆ ಪ್ರಯತ್ನಿಸುವರು. ಕೇಳುವವರಂತೂ ತಾವು ಎಂದಿಗೂ ಅರಿಯದಂಥ ಅದ್ಭುತವಿಷಯವಿದೆಂದು ಬೆರಗಾಗಿಯೇ ಕೇಳುತ್ತಿರು ವರು. ಆದರೆ ಇದು ಯಾರಿಗೆತಾನೆ ನಿಜವಾಗಿ ತಿಳಿದಿರುತ್ತದೆ? ಅದನ್ನು ನಿರ್ಧರಿಸಿ ಹೇಳುವದು ಕಷ್ಟ. ತತ್ತ್ವವನ್ನು ಬಲ್ಲ ಮಹನೀಯರೂ, ಅವರಿಂದ ಅದನ್ನು ಶ್ರದ್ಧಾಭಕ್ತಿಪೂರ್ವಕವಾಗಿ ಕೇಳಿ ತಿಳಿದುಕೊಳ್ಳುವವರೂ ಅತ್ಯಂತ ವಿರಳ. ಅಂಥ ಗುರುಗಳೂ ಶಿಷ್ಯರೂ ಲೋಕಕ್ಕೇ ಆಶ್ಚರ್ಯಪ್ರಾಯರಾಗಿರುವರು. ಶ್ರೀರಾಮಕೃಷ್ಣರಲ್ಲಿಗೆ ವಿವೇಕಾನಂದರವರು ಬಂದು "ಸ್ವಾಮಿ, ತಾವು ದೇವರನ್ನು ನೋಡಿರುವಿರಾ?" ಎಂದು ಕೇಳಲು "ಹೌದಪ್ಪಾ, ನೋಡಿರುತ್ತೇನೆ. ಬಾ, ನಿನಗೂ ತೋರಿಸುತ್ತೇನೆ" ಎಂದರಂತೆ. ಇಂಥ ಎದೆತಟ್ಟಿಕೊಂಡು ಹೇಳುವ, ಹೇಳಿದಂತೆ ಅನುಗ್ರಹಿಸುವ ಶಕ್ತಿಯುಳ್ಳ, ಗುರುಗಳೂ ಅದನ್ನು ತಿಳಿದುಕೊಳ್ಳಬೇಕೆಂದು ನಿಜವಾಗಿ ತವಕಿಸುತ್ತಿರುವ ಮುಮುಕ್ಷುಗಳೂ ನಮಗೆ ಎಷ್ಟು ಜನರು ಸಿಕ್ಕುತ್ತಾರೆ?

ಜ್ಞಾನಿಗಳೆಂದರೆ ನಮಗಿಂತ ಅತ್ಯಂತ ವಿಲಕ್ಷಣವಾದ ವ್ಯವಹಾರವುಳ್ಳವರು ಎಂಬ ನಂಬಿಕೆಯು ನಮ್ಮಗಳಲ್ಲಿ ಹರಡಿಕೊಂಡುಬಿಟ್ಟಿರುತ್ತದೆ. ಸಾಧುವೇಷದವರು, ಯೋಗಿಗಳು, ಜಟಾಧಾರಿಗಳು, ಅದ್ಭುತಲೀಲೆಗಳನ್ನು ತೋರಿಸುವವರು-ಇಂಥವರನ್ನು ಹುಡುಕಿಕೊಂಡು ಹೋಗಿ ಮೋಸಹೋಗುವವರೇ ಬಹಳ ಮಂದಿ. ಜ್ಞಾನಿಗಳ ಗುರುತು ಯಾವದು? ವಿಲಕ್ಷಣವಾದ ಉಡುಪನ್ನು ಧರಿಸುವದು, ಗಡ್ಡಮೀಸೆಗಳನ್ನು ಬೆಳೆಸಿರುವದು, ಅಥವಾ ಬೋಳಿಸಿರುವದು-ಮುಂತಾದ ಬರಿಯ ಬಾಹ್ಯಚಿಹ್ನಗಳು

ಯಾವ ಕೆಲಸಕ್ಕೂ ಬಾರವು. ಶಾಸ್ತ್ರಗ್ರಂಥಗಳಿಂದ ಓದಿ ಆರಿಸಿಕೊಂಡಿರುವ ಆತ್ಮ ಅನಾತ್ಮ ಸತ್ಯ, ಅಸತ್ಯ, ನಿರ್ವಿಕಾರ, ನಿರಂಜನ-ಮುಂತಾದ ವೇದಾಂತದ ಪಾರಿಭಾಷಿಕಶಬ್ದಗಳನ್ನು ಬಳಸುತ್ತಾ ಶ್ರೋತೃ ಜನರನ್ನು ಬೆರಗುಗೊಳಿಸುವ ಕೌಶಲವು ಕೂಡ ಜ್ಞಾನದ ಹೆಗ್ಗುರುತಾಗಲಾರದು. ಪ್ರೈಮರಿಸ್ಕೂಲುಗಳಿಗಾಗಿ ಬರೆದಿರುವ ಕೆಲವು ಪಠ್ಯಪುಸ್ತಕಗಳಲ್ಲಿ ಭೌತಿಕವಿಜ್ಞಾನದ ಮತ್ತು ಆಚಾರ್ಯರುಗಳ ಉಪದೇಶ ಸಾರವನ್ನು ಹುಡುಗರಿಗಾಗಿ ಬರೆದಿರುತ್ತಾರೆ. ಅವನ್ನು ಓದಿ ಪರೀಕ್ಷೆಯಲ್ಲಿ "ಪ್ಯಾಸು" ಆಗಿರುವ ಹಸುಳೆಗಳು ಪ್ರಶ್ನೆಗಳಿಗೆ ತಕ್ಕ ಉತ್ತರವನ್ನು ಎಷ್ಟೇ ಚಟುವಟಿಕೆಯಿಂದ ಕೊಡುತ್ತಿರಲಿ, ಅವರನ್ನು ಭೌತಿಕಶಾಸ್ತ್ರಜ್ಞರೆಂದಾಗಲಿ, ಮತಾಚಾರ್ಯರೆಂದಾಗಲಿ, ನಾವು ಎಂದಾದರೂ ಭಾವಿಸುವೆವೆ? ಇಲ್ಲ. ಹೀಗಾದಮೇಲೆ ವೇದಾಂತಪುಸ್ತಕದ ಜ್ಞಾನವಿರುವವರನ್ನು ಜ್ಞಾನಿಗಳೆಂದು ಹೇಗೆ ತಾನೆ ಕರೆಯಬಹುದು?

ಆತ್ಮಜ್ಞಾನವೆಂಬುದು ಭಗವಂತನು ತಾನೇ ಅರ್ಜುನನಿಗೆ ಉಪದೇಶ ಮಾಡಿರುವಂಥ ಅನುಭವಾಮೃತವು. ಅದನ್ನು ಪೂರ್ಣವಾಗಿ ದಕ್ಕಿಸಿಕೊಳ್ಳಬೇಕಾದರೆ ಅದಕ್ಕೆ ತಕ್ಕ ಅಧಿಕಾರವನ್ನು ಪಡೆದಿರಬೇಕು. ಅರ್ಜುನನಂಥ ದೈವಸಂಪತ್ತಿನ ಶಿಷ್ಯನುಕೂಡ ಈ ತತ್ತ್ವಜ್ಞಾನವನ್ನು ನೇರಾಗಿ ಅರಗಿಸಿಕೊಳ್ಳುವದಕ್ಕೆ ಶಕ್ತನಾಗಲಿಲ್ಲ ವೆಂಬುದು, ಜ್ಞಾನಾಧಿಕಾರವನ್ನು ಸಂಪಾದಿಸಿಕೊಳ್ಳುವದಕ್ಕೆ ಅವಶ್ಯವಾಗಿರುವ ಮತ್ತೊಂದು ಸುಲಭಸಾಧನವನ್ನು ಮುಂದೆ ಭಗವಂತನು ಉಪದೇಶಿಸಿರುವದರಿಂದಲೇ ವ್ಯಕ್ತವಾಗುತ್ತದೆ. ಹೀಗಿರುವಲ್ಲಿ ಕಲಿಯುಗದವರಾದ, ಹೀನವೀರ್ಯರಾದ, ಕರ್ಮವೇ-ಮುಂತಾದ ಸಾಧನಸಂಪತ್ತಿಯಿಲ್ಲದ, ನಮ್ಮಗಳ ಪಾಡೇನು?

ಆದ್ದರಿಂದ ಇದುವರೆಗೆ ಭಗವಂತನು ಹೇಳಿರುವ ಆತ್ಮಜ್ಞಾನವೆಂಬುದು ಮುಮುಕ್ಷುಗಳಾದವರು ಮುಂದಿಟ್ಟುಕೊಳ್ಳಬೇಕಾದ ಗುರಿಯೆಂದು ಭಾವಿಸಬೇಕೇ ಹೊರತು, ಎರಡು ಗೀತೆಯ ಶ್ಲೋಕಗಳೂ ನಾಲ್ವಾರು ವೇದಾಂತದ ಪಾರಿಭಾಷಿಕ ಶಬ್ದಗಳೂ ತಿಳಿದಮಾತ್ರದಿಂದ ನಮಗೆ ಸಾಕ್ಷಾತ್ತಾಗಿ ಈ ಜ್ಞಾನವೇ ಆಗಿಬಿಟ್ಟಿದೆಯೆಂಬ ಭ್ರಾಂತಿಗೆ ನಾವು ಸಿಕ್ಕಿಕೊಳ್ಳಬಾರದು. ಯಾವ ಆಸ್ತಿಕಜನರು ಈ ದೃಷ್ಟಿಯಿಂದ ಗೀತೆಯನ್ನು ಓದುವರೋ ಅವರಿಗೆ ಇದುವರೆಗೆ ಹೇಳಿರುವ ಜ್ಞಾನವು ಪರೋಕ್ಷ ವಾಗಿಯಾದರೂ ಒಂದಿಷ್ಟು ತಿಳಿಯುವದು; ಅಥವಾ ಇದಕ್ಕೆ ತಕ್ಕ ಯೋಗ್ಯತೆಯನ್ನು ಸಂಪಾದಿಸಿಕೊಳ್ಳಬೇಕೆಂದು ತವಕಿಸುತ್ತಿರುವದರಿಂದ ಅವರಿಗೆ ಭಗವಂತನು ಉಪ ದೇಶಿಸುವ ಕರ್ಮಯೋಗಾದಿಸಾಧನಗಳ ಮರ್ಮವು ಒಂದಿಷ್ಟಾದರೂ ಮನವರಿಕೆ ಯಾಗುವದು.

# ೧೧. ಸಾಂಖ್ಯಬುದ್ಧಿ, ಯೋಗಬುದ್ಧಿ ೨-(೩೯-೪೧)
(೧.೯.೪೬)

ಇದುವರೆಗೆ ಭಗವಂತನು ಅರ್ಜುನನ ಶೋಕಮೋಹಗಳನ್ನು ಕಳೆಯುವ ಜ್ಞಾನೋಪದೇಶವನ್ನು ಮಾಡಿರುತ್ತಾನೆ. ಶೋಕಮೋಹಗಳಿಗೆ ಮೂಲವಾದ ಅಜ್ಞಾನವನ್ನು ತೀರ ಇಲ್ಲವಾಗಿಸಿಬಿಡುವದೇ ಜ್ಞಾನದ ಕೆಲಸವು. ಆದರೆ ಜ್ಞಾನಕ್ಕೆ ತಕ್ಕ ಯೋಗ್ಯತೆಯನ್ನು ಸಂಪಾದಿಸಿಕೊಂಡವರಿಗಲ್ಲದೆ ಉಳಿದವರಿಗೆ ಜ್ಞಾನವು ದಕ್ಕುವ ಹಾಗಿಲ್ಲ. ಆದ್ದರಿಂದ ಜ್ಞಾನಸಾಧನವಾದ ಕರ್ಮಯೋಗವನ್ನು ಹೇಳಲು ಭಗವಂತನು ಹೊರಟಿರುತ್ತಾನೆ.

ನಡುವೆ ಮಹಾಪ್ರಕರಣಕ್ಕೆ ಸೇರದೆ ಪ್ರಾಸಂಗಿಕವಾದ ವಿಷಯಗಳನ್ನು ಹೇಳುವ ಕೆಲವು ಶ್ಲೋಕಗಳು (೨-೩೧ರಿಂದ ೩೮) ಇರುತ್ತವೆ. ಅವುಗಳ ಅರ್ಥವನ್ನು ಮುಂದೆ ಸರಿಯಾದ ಕಡೆಯಲ್ಲಿ ಹೊಂದಿಸಿಕೊಂಡು ವಿಚಾರಮಾಡಬಹುದಾಗಿದೆ. ಸದ್ಯಕ್ಕೆ ಭಗವಂತನು ಅರ್ಜುನನಿಗೆ ಈ ಅಧ್ಯಾಯದಲ್ಲಿ ಉಪದೇಶಮಾಡುವ ಎರಡು ನಿಷ್ಠೆಗಳನ್ನು ವಿಂಗಡಿಸಿ ತಿಳಿಸುವದಕ್ಕಾಗಿ ಹೇಳಿರುವ ಸಂಬಂಧಶ್ಲೋಕವನ್ನು ನಾವು ಪರಿಶೀಲಿಸಬೇಕಾಗಿದೆ.

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬನ್ಧಂ ಪ್ರಹಾಸ್ಯಸಿ ॥** (೨-೩೯)

"ಈವರೆಗೆ ನಿನಗೆ ಸಾಂಖ್ಯವಿಷಯಕವಾದ-ಜ್ಞಾನವನ್ನು ತಿಳಿಸಿಕೊಡುವ-ಬುದ್ಧಿಯನ್ನು ಹೇಳಿರುವೆನು. ಆದರೆ ಇದಕ್ಕೆ ಸಾಧನವಾದ ಯೋಗವಿಷಯದ ಬುದ್ಧಿಯನ್ನು ನಾನೀಗ ತಿಳಿಸುವೆನು, ಕೇಳು. ಎಲೈ ಪಾರ್ಥನೆ, ಈ ಬುದ್ಧಿಯೊಡನೆ ಕೂಡಿದವನಾದರೆ ನೀನು ಕರ್ಮದ ಬಂಧವನ್ನು ನಾಶಗೊಳಿಸಿಕೊಳ್ಳಬಹುದು."

ಭಗವದ್ಗೀತೆಗೆ ಇಡಿಯ ಭೂಮಂಡಲದಲ್ಲಿ ದೊರಕುವ ವಾಙ್ಮಯದಲ್ಲಿ ಯಾವ ಸ್ಥಾನವಿದೆ ಎಂಬುದನ್ನು ತಿಳಿಯುವದಕ್ಕೆ ಈ ವಾಕ್ಯದಲ್ಲಿ ಅವಕಾಶವು ದೊರಕುತ್ತದೆ. ಸುಪ್ರಸಿದ್ಧನಾದ ಜಾನ್‌ರಸ್ಕಿನ್ ಎಂಬಾತನು ತನ್ನ Sesame and Lilies ಎಂಬ ಗ್ರಂಥದಲ್ಲಿ ಪ್ರಪಂಚದ ಗ್ರಂಥಗಳನ್ನೆಲ್ಲ ತಾತ್ಕಾಲಿಕ ಗ್ರಂಥಗಳು, ಸಾರ್ವಕಾಲಿಕಗ್ರಂಥಗಳು-ಎಂಬ ಎರಡು ರಾಶಿಗಳಲ್ಲಿ ಅಡಕಮಾಡಿಬಿಡಬಹುದು, ಎಂದು ಬರೆದಿರುತ್ತಾನೆ. ಯಾವ ಒಳ್ಳೆಯ ಗ್ರಂಥವಾಗಲಿ ಕೆಟ್ಟ ಗ್ರಂಥವಾಗಲಿ ಈ ಎರಡರಲ್ಲೊಂದು ರಾಶಿಗೆ ಸೇರತಕ್ಕದ್ದಾಗಿರುತ್ತದೆ. ಉದಾಹರಣೆಗೆ ಪ್ರಯಾಣದಸುದ್ದಿ, ರಸಹಾಸ್ಯದಿಂದ ಕೂಡಿದ ವಿಷಯನಿರೂಪಣ, ಸುಂದರವಾದ ಕಥೆ, ಸದ್ಯಃಕಾಲದ

ವಿಷಯಗಳ ವಿವರಣ-ಮುಂತಾದ ವಿಷಯಗಳನ್ನು ತಿಳಿಸುವ ಪುಸ್ತಕಗಳನ್ನು ತತ್ಕಾಲದ ಒಳ್ಳೆಯ ಪುಸ್ತಕಗಳೆಂದು ಕರೆಯಬಹುದು. ಅವುಗಳಿಂದ ನಮಗೆ ಹೆಚ್ಚಿನ ಪ್ರಯೋಜನ ವುಂಟೆಂಬುದೂ, ಅವನ್ನು ಓದದೆ ಬಿಡುವದು ತುಂಬ ನಾಚಿಕೆಗೇಡಿನ ವಿಷಯ ವೆಂಬುದೂ ನಿಸ್ಸಂದಿಗ್ಧವಾಗಿರುತ್ತದೆ. ಆದರೆ ನಿಜವಾದ ಶಾಶ್ವತಗ್ರಂಥಗಳನ್ನು ಕೈಬಿಟ್ಟು ಬರಿಯ ಅವುಗಳನ್ನೇ ನಾವು ಹಿಡಿದರೆ ತುಂಬ ಅನ್ಯಾಯವಾಗುತ್ತದೆ. ನಿಜವಾಗಿ ನೋಡಿದರೆ ಅವು ಪುಸ್ತಕಗಳೇ ಅಲ್ಲ. ಪುಸ್ತಕವೆಂದರೆ ಬರಿಯ ಮಾತಿನ ಕಂತೆಯಲ್ಲ, ಅದು ಬರೆದ ವಸ್ತು. ತನಗೆ ತಿಳಿದಿದ್ದನ್ನು ಉಳಿದವರಿಗೂ ತಿಳಿಸಬೇಕೆಂಬ ಒಂದೇ ಉದ್ದೇಶದಿಂದ ಬರೆದದ್ದಾದರೆ ಅದು ಪುಸ್ತಕವಾಗುವದಿಲ್ಲ; ವಿಷಯವು ಶಾಶ್ವತವಾಗಿ ನಿಲ್ಲತಕ್ಕದ್ದಾಗಿದೆ ಎಂಬ ದೃಷ್ಟಿಯಿಂದ ಬರೆದದ್ದಾದರೆ ಮಾತ್ರ ಅದು ನಿಜವಾದ ಗ್ರಂಥವೆನಿಸುತ್ತದೆ. ಅಂಥ ಗ್ರಂಥಕರ್ತನಿಗೆ ಸತ್ಯವಾಗಿ, ಉಪಯುಕ್ತವಾಗಿ ಲೋಕೋಪ ಕಾರಕವಾಗಿ, ಸೌಂದರ್ಯಯುತವಾಗಿ ಇರುವ ಯಾವದೋ ಒಂದು ವಿಷಯವನ್ನು ಹೇಳಬೇಕೆಂದು ಇಚ್ಛೆಯಾಗಿರುತ್ತದೆ. ಅದನ್ನು ಮತ್ತೆ ಯಾರೂ ಈವರೆಗೆ ಹೇಳಿಲ್ಲ ವಾದ್ದರಿಂದ ತಾನು ಅದನ್ನು ಹೇಳಲೇಬೇಕೆಂದೆನಿಸಿರುತ್ತದೆ. ತಾನು ನಿಜವಾಗಿ ಕಂಡ, ತನಗೆ ಸಿಕ್ಕಿದ ಅನುಭವದ ಸಾರವನ್ನು ಶಾಶ್ವತಶಿಲಾಶಾಸನವಾಗಿರಿಸಬೇಕೆಂದು ಅವನು ತವಕಿಸುತ್ತಾನೆ. ಇಂಥ ದೃಷ್ಟಿಯಿಂದ ಬರೆದದ್ದಾದರೆ ಮಾತ್ರ ಅದು ನಿಜವಾದ ಪುಸ್ತಕವು, ಗ್ರಂಥವು, ಎನಿಸುತ್ತದೆ.

ರಸ್ಕಿನ್ ಮಹಾಶಯನು ಹೇಳಿರುವ ಸಾರ್ವಕಾಲಿಕಗ್ರಂಥದ ಮತ್ತೊಂದು ವಿಶೇಷಣವು ಯಾವದೆಂದರೆ, ಅದು ಎಲ್ಲರಿಗೂ ಬಾಗಿಲು ತೆರೆಯುವದಿಲ್ಲ. ಪ್ರಯತ್ನಪೂರ್ವಕವಾಗಿ ತಮ್ಮ ಬುದ್ಧಿಯ ಮಟ್ಟವನ್ನು ಗ್ರಂಥಕರ್ತನ ಬುದ್ಧಿಯ ಮಟ್ಟಕ್ಕೆ ಏರಿಸಿಕೊಂಡು, ಅವನೊಡನೆ ಒಂದಾಗಿ ಬೆರೆತುಕೊಂಡರೆ ಮಾತ್ರ ಆ ಗ್ರಂಥದ ಆನಂದವನ್ನು ಹೊಂದಬಹುದು. ಆ ಗ್ರಂಥಕರ್ತನೊಡನೆ ನಾವು ಈಗಲೂ ವಿನೋದವಾದ ಸಂವಾದವನ್ನು ನಡೆಯಿಸಬಹುದು.

ಸಾರ್ವತ್ರಿಕವಾದ ಶಾಶ್ವತವಾದ ಗ್ರಂಥಗಳನ್ನು ಬರೆಯುವವರು ಮುಖ್ಯವಾಗಿ ಆಪ್ತರಾಗಿರಬೇಕು; ಎಂದರೆ ವಿಷಯಗಳನ್ನು ತಾವು ಮನಗಂಡು, ಜನರ ಮೇಲಿನ ದಯೆಯಿಂದ ಹೇಳುವದಕ್ಕಾಗಿಯೇ ಹೊರಟವರಾಗಿರಬೇಕು. ಈ ದೃಷ್ಟಿಯಿಂದ ನೋಡಿದಾಗ ಭಗವದ್ಗೀತೆಗೆ ಭೂಮಂಡಲದ ಸಾರ್ವತ್ರಿಕಗ್ರಂಥಗಳಲ್ಲಿ ಅಗ್ರಸ್ಥಾನವೇ ಇದೆ ಎಂದರೂ ಸಲ್ಲುತ್ತದೆ. ಏಕೆಂದರೆ ಭಗವಂತನೇ ಧರ್ಮದ ಉದ್ಧಾರಕ್ಕಾಗಿ ಅವತರಿಸಿ ಅರ್ಜುನನ ನಿಮಿತ್ತದಿಂದ ಇಡಿಯ ಲೋಕವೇ ಏಳಿಗೆಯನ್ನು ಹೊಂದಲೆಂಬ ಕೃಪೆಯಿಂದಲೇ ಅನುಗ್ರಹಿಸಿದ ಗ್ರಂಥವಿದು. ಇದರ ಜೊತೆಗೆ ಎಲ್ಲಾ ಕಾಲಗಳ ಎಲ್ಲಾ

ಮಟ್ಟದ ಬುದ್ಧಿಯವರಿಗೂ ಹೊಂದುವಂತೆ ಧರ್ಮದ ಸಾರವನ್ನೆಲ್ಲ ಹಿಂಡಿ ಸ್ವಲ್ಪದರಲ್ಲಿ ಲಲಿತವಾದ ಭಾಷೆಯಿಂದ ಹೇಳಿರುವ ಕೀರ್ತಿಯು ಗೀತೆಗೆ ಮೀಸಲಾಗಿರ ತಕ್ಕದ್ದು. ಪರಮಪುರುಷಾರ್ಥಕ್ಕೆ ಸಾಂಖ್ಯಬುದ್ಧಿಯು ಅತ್ಯಂತ ಅವಶ್ಯವಾಗಿರುತ್ತದೆ ಯೆಂಬುದರಲ್ಲಿ ಸಂಶಯವಿಲ್ಲ; ಈ ವೇದಾರ್ಥವನ್ನು ಅತ್ಯಂತ ಸರಳವಾಗಿ ತಿಳಿಸಿರುವದೊಂದೇ ಗೀತೆಯು ಸಾರ್ವಕಾಲಿಕವಾದ ಗ್ರಂಥವೆನ್ನುವದಕ್ಕೆ ಸಾಕಾದ ಆಧಾರವಾಗಿರುತ್ತದೆ. ಆದರೆ ಈ ಬುದ್ಧಿಯ ಮಟ್ಟಕ್ಕೆ ಏರದವರೇ ಮೂರೂಮುಕ್ಕಾಲೂ ಅರೆವೀಸ ಪಾಲು ಜನರು ಲೋಕದಲ್ಲಿರುತ್ತಾರೆ. ಅವರಿಗೆಲ್ಲ ಈ ಬುದ್ಧಿಯ ಅಂತಸ್ತಿಗೆ ಏರುವ ನಿಚ್ಚಣಿಕೆಯಾದ ಕರ್ಮಯೋಗದ ಬುದ್ಧಿಯನ್ನೂ ವಿಶದಗೊಳಿಸಿರುವದು ಈ ಗ್ರಂಥದ ಸಾರ್ವತ್ರಿಕತ್ವವನ್ನು ಸ್ಥಾಪಿಸಿಕೊಡುತ್ತದೆ.

ಈಗಿನ ಕಾಲದಲ್ಲಿ ಪುಸ್ತಕಗಳ ಕಾಗದ, ರಟ್ಟು, ಅಚ್ಚಿನ ಸೌಂದರ್ಯ-ಮುಂತಾದ ಬಾಹ್ಯಚಿಹ್ನೆಗಳಿಂದಲೂ ಅವುಗಳಿಗೆ ಇಟ್ಟಿರುವ ಬೆಲೆಯಿಂದಲೂ ಪುಸ್ತಕಗಳ ಯೋಗ್ಯತೆಯನ್ನು ಗೊತ್ತುಪಡಿಸುವ ಮನೋವೃತ್ತಿ ಜನಕ್ಕೆ ಉಂಟಾಗಿಬಿಟ್ಟಿರುತ್ತದೆ. ಭಗವದ್ಗೀತೆಯ ಪ್ರತಿಗಳು ಎರಡಾಣೆಗೆ ಒಂದರಂತೆ ಸಹ ಸಿಕ್ಕುತ್ತವೆ. ಇನ್ನು ಜನರ ದೃಷ್ಟಿಯಲ್ಲಿ ಅದರ ಯೋಗ್ಯತೆ ಎಷ್ಟಾಯಿತು! ಆದರೆ ಒಂದು ವಿಷಯ: ಸಾರ್ವ ಕಾಲಿಕವಾದ ಇಂಥ ಗ್ರಂಥಗಳಿಗೆ ಬೆಲೆ ಎಷ್ಟೇ ಇಡಲಿ, ನಮಗೆ ಅವು ತಿಳಿಯಬೇಕಾದರೆ ನಾವು ಅವುಗಳ ಮಟ್ಟಕ್ಕೆ ಏರಬೇಕಾದದ್ದು ಅತ್ಯವಶ್ಯ. ಭಗವದ್ಗೀತೆಯು ಯಾವ ದೇಶದಲ್ಲಿ ಯಾವ ಕಾಲದಲ್ಲಿರುವ ಜನರಿಗಾದರೂ ಹಿತವನ್ನುಪದೇಶಿಸುವಂಥ ಸರ್ವವ್ಯಾಪಕಗ್ರಂಥವಾಗಿರುತ್ತದೆ. ಇಷ್ಟೇ ಅಲ್ಲ. ನಾವು ಯಾವ ಮಟ್ಟದ ಬುದ್ಧಿಯವ ರಾದರೂ ನಮಗೆ ಅದರ ಪ್ರಯೋಜನವು ಆಗದೆ ಇರುವದಿಲ್ಲ. ಅದನ್ನು ಓದಿದಂತೆಲ್ಲ ನಮ್ಮ ಯೋಗ್ಯತೆಯಲ್ಲಿ ಅತಿಶಯವುಂಟಾಗುತ್ತಾ ಹೋಗಿ, ಕೊನೆಯ ಮಟ್ಟವಾದ ಸಾಂಖ್ಯಬುದ್ಧಿಯಲ್ಲಿ ಪ್ರವೇಶವಾಗಿ ಪರಮಪುರುಷಾರ್ಥಪ್ರಾಪ್ತಿ ಯಾಗುವವರೆಗೂ ಬಿಡುವದಿಲ್ಲ, ಈ ದಿವ್ಯಗ್ರಂಥದ ಹಿಡಿತ!

ಆದರೆ ಒಂದು ಮಾತು. ನಾವು ನಿಜವಾಗಿಯೂ ಈ ಗ್ರಂಥವನ್ನು ಓದಬೇಕು; ನಿಜವಾಗಿ ಓದುವದೆಂದರೆ ಪಾರಾಯಣಮಾಡುವದು. ಪಾರಾಯಣವೆಂದರೇ ನೆಂಬುದನ್ನು ಹಿಂದೆ ಒಂದು ಸಲ ಆಗಲೆ ಹೇಳಿರುತ್ತೇನೆ. ಮೊಟ್ಟಮೊದಲು ಭಗವಂತನಲ್ಲಿ ಪೂಜ್ಯಬುದ್ಧಿಯು ಬೇಕು; ಗೀತೆಯಿಂದ ನಾವು ಕಲಿತುಕೊಳ್ಳತಕ್ಕ ವಿಷಯವಿದೆ ಎಂಬ ಶ್ರದ್ಧೆಯು ಇಲ್ಲದೆ ಎಂದಿಗೂ ಅದರಿಂದಾಗುವ ಪ್ರಯೋಜನ ವುಂಟಾಗಲಾರದು. ಹೀಗೆ ಓದಿದರೆ ಶ್ರವಣವಾಗುವದು, ಅಂದರೆ ಭಗವಂತನು ಹೇಳಿದ ವಾಕ್ಯಗಳನ್ನು ನಾವು ಮನಮುಟ್ಟಿ ಕೇಳಿದಂತಾಗುವದು. ಇಷ್ಟೇ ಸಾಲದು.

ಶ್ರವಣಮಾಡಿದ್ದನ್ನು ಮನನಮಾಡಲೂ ಬೇಕು. ಈ ಮನನಕ್ಕೆ "ಆತನ ಅಭಿಪ್ರಾಯವೇನು, ಹೃದಯವೇನು?" ಎಂಬುದನ್ನು ಹಿಂದುಮುಂದಕ್ಕೆ ಹೊಂದಿಸಿಕೊಂಡು ನೋಡುವದು ಅತ್ಯವಶ್ಯವಾಗಿರುತ್ತದೆ.

ಈಗ ಸಂಬಂಧಶ್ಲೋಕದ ಅಭಿಪ್ರಾಯವೇನೆಂಬುದನ್ನು ಸ್ವಲ್ಪ ಮನನ ಮಾಡೋಣ. ಇದುವರೆಗೆ ಭಗವಂತನು ಅರ್ಜುನನಿಗೆ ಸಾಂಖ್ಯಬುದ್ಧಿಯನ್ನು ಹೇಳಿರುತ್ತಾನೆ. ಸಾಂಖ್ಯವೆಂದರೆ ತತ್ತ್ವವನ್ನು ಅರಿತುಕೊಳ್ಳುವದು. ಸಾಂಖ್ಯ ಬುದ್ಧಿಯು ಅಳವಟ್ಟರೆ ನಮ್ಮ ದೃಷ್ಟಿಯೇ ಬೇರೆಯಾಗಿಬಿಡುತ್ತದೆ. ಅಜ್ಞಾನದ ದೃಷ್ಟಿಯಲ್ಲಿ ನಮಗೆ ಕಾಣುತ್ತಿರುವ ಈ ಪ್ರಪಂಚಕ್ಕೆ ಬೇರೆಯ ಬಣ್ಣವೇ ಬಂದುಬಿಡುತ್ತದೆ. ಈಗಿನ ನಾವು ಆಗಿನ ನಾವಾಗಿರುವದಿಲ್ಲ; ಸ್ವರೂಪವೇ ಪೂರ್ತಿಯಾಗಿ ಪರಿವರ್ತನೆಯಾಗಿಬಿಟ್ಟಿರುತ್ತದೆ. ಆದರೆ ಇಂಥ ಬುದ್ಧಿಯು ಅಳವಡುವದಕ್ಕೆ ತಕ್ಕ ಯೋಗ್ಯತೆಯುಂಟಾಗಬೇಕಾದರೆ ಮೊದಲು ಯೋಗಬುದ್ಧಿಯು ಉಂಟಾಗಿರಬೇಕು. ಆದ್ದರಿಂದ ಭಗವಂತನು ಯೋಗದ ವಿಷಯದ ಬುದ್ಧಿಯನ್ನು ಈಗ ಹೇಳುತ್ತಾನೆ. ಈ ಬುದ್ಧಿಯನ್ನು 'ಕೇಳು' ಎಂದು ಹೇಳಿರುವದು ಶ್ರವಣಮಾಡಬೇಕು, ಈ ಮಾತು ಸುಮ್ಮನೆ ಕಿವಿಗೆ ಬಿದ್ದ ಕೂಗಾಗಬಾರದು-ಎಂದು ತಿಳಿಸುವದಕ್ಕೆ.

ಕರ್ಮಯೋಗವು ಸಾಂಖ್ಯಕ್ಕೆ ಅಥವಾ ತತ್ತ್ವಜ್ಞಾನಕ್ಕೆ ಸಾಧನವೆಂಬ ಕಾರಣದಿಂದ ಅದು ಬಹಳ ಸುಲಭವಾದದ್ದೆಂದೂ, ಮಂದಾಧಿಕಾರಿಗಳ ವಿಷಯವೆಂದೂ ಕೆಲವರು ಭಾವಿಸಿ ಮೋಸಹೋಗುತ್ತಾರೆ. ಇದು ಸರಿಯಲ್ಲ. ಕರ್ಮಯೋಗದಲ್ಲಿಯೇ ಬಹಳ ಮೆಟ್ಟಿಲುಗಳಿರುತ್ತವೆ; ಅದಕ್ಕೆ ಸಾಧನವಾಗಿ ಇನ್ನೂ ಕೆಳಗಿನ ಮೆಟ್ಟಿಲುಗಳೂ ಇರುತ್ತವೆ. ಶ್ರೀ ಶಂಕರಾಚಾರ್ಯರವರು ಇಲ್ಲಿ ಹೇಳಿರುವ **ಯೋಗದ ಸ್ವರೂಪವನ್ನು** ಹೀಗೆ ವಿವರಿಸಿರುತ್ತಾರೆ: "ದ್ವಂದ್ವಗಳನ್ನು ನಾಶಗೊಳಿಸಿಕೊಂಡು ಯಾವ ಸಂಗವೂ ಇಲ್ಲದೆ ಈಶ್ವರನ ಆರಾಧನೆಗೆಂದು ಕರ್ಮಯೋಗವನ್ನೂ ಪರಮಾತ್ಮನಲ್ಲಿಯೇ ಮನಸ್ಸನ್ನು ನಿಲ್ಲಿಸಿಕೊಳ್ಳುವ ಸಮಾಧಿಯೋಗವನ್ನೂ ಇಲ್ಲಿ ಯೋಗವೆಂದು ಕರೆದಿರುತ್ತದೆ."

ಇಲ್ಲಿ ಕರ್ಮವೆಂಬ ಮಾತಿನ ಅರ್ಥವನ್ನೇ ಸ್ವಲ್ಪ ಬಿಡಿಸಿ ತಿಳಿದುಕೊಳ್ಳುವದು ಅವಶ್ಯವಾಗುತ್ತದೆ. ಗೀತೆಯು ಎಲ್ಲಾ ಉಪನಿಷತ್ತುಗಳ ಸಾರವು, ಸಕಲವೇದಾರ್ಥ ಸಂಗ್ರಹವು-ಎಂದು ಮೊದಲೇ ಹೇಳಿದ್ದಾಗಿದೆ. ಆದ್ದರಿಂದ ಗೀತೆಯಲ್ಲಿ ಹೇಳಿರುವ ಕರ್ಮತತ್ತ್ವವು ವೇದಕ್ಕನುಸಾರವಾಗಿಯೇ ಇರುವದೆಂಬುದು ಸ್ವಾಭಾವಿಕವಾಗಿರುತ್ತದೆ. ಶಾಸ್ತ್ರೋಕ್ತವಾದ, ವೇದೋಕ್ತವಾದ ಕರ್ಮವನ್ನೇ ಇಲ್ಲಿ ಕರ್ಮವೆಂಬ ಮಾತಿನ ಅರ್ಥವೆಂದು ತಿಳಿಯಬೇಕು. ಶಾಸ್ತ್ರದಲ್ಲಿ ಮಾಡಬೇಕೆಂದು ವಿಧಿಸಿರುವ, ಮಾಡಕೂಡದೆಂದು ನಿಷೇಧಿಸಿರುವ ವ್ಯಾಪಾರವು **ಕರ್ಮವು**. ವೇದದಲ್ಲಿ ಹೇಳಿರುವ ಕರ್ಮವೂ

ಆದರಿಂದ ನಮಗೆ ಉಂಟಾಗಬೇಕಾಗಿರುವ ಜ್ಞಾನವೂ ಲೋಕದಲ್ಲಿ ನಾವು ಕರ್ಮ, ಜ್ಞಾನ-ಎಂಬ ಶಬ್ದಗಳಿಂದ ಕರೆಯುವ ಪದಾರ್ಥಗಳಿಗಿಂತ ಅತ್ಯಂತ ಭಿನ್ನವಾಗಿರುತ್ತವೆ. ಲೋಕದಲ್ಲಿ ನಮಗೆ ಉಂಟಾಗುವ ವ್ಯವಹಾರದ ಜ್ಞಾನವನ್ನೂ, ಜ್ಞಾನದಿಂದ ನಮ್ಮಲ್ಲಿ ತೋರಿಬರುವ ನಡವಳಿಕೆಯನ್ನೂ ಶಾಸ್ತ್ರದಲ್ಲಿ **ಮೃತ್ಯು** ಎಂದು ಕರೆದಿರುತ್ತದೆ; ಲೌಕಿಕಜ್ಞಾನಕರ್ಮಗಳಿಂದ ನಮಗೆ ವ್ಯವಹಾರದಲ್ಲಿ ಸುಖವುಂಟಾಗುವದೆಂಬುದು ನಿಜವಾದರೂ ಶಾಸ್ತ್ರದಲ್ಲಿ ಹೇಳಿರುವ ಜ್ಞಾನಕರ್ಮಗಳಿಗೆ ಹೋಲಿಸಿದರೆ ಆ ಸುಖವು ಮರ್ತ್ಯವಾಗಿರುತ್ತದೆ. ಆದ್ದರಿಂದ ಮರ್ತ್ಯವಾದ ಅಲ್ಪಸುಖಕ್ಕೆ ಕಾರಣವಾಗಿರುವ ಲೌಕಿಕಜ್ಞಾನಕರ್ಮಗಳನ್ನು ಶ್ರುತಿಯಲ್ಲಿ "ಮೃತ್ಯು" ಎಂದು ಕರೆದಿರುತ್ತದೆ. ಇದಕ್ಕಿಂತ ಮೇಲುಮಟ್ಟದ ಒಂದು ಫಲವನ್ನು ಅಮೃತವೆಂದು ಅಲ್ಲಿ ಕರೆದಿರುತ್ತದೆ.

ನಮ್ಮ ಲೌಕಿಕಜ್ಞಾನವು ನಿಜವಾಗಿ ಜ್ಞಾನವೇ ಅಲ್ಲ. ಲೌಕಿಕವ್ಯವಹಾರವು ಬಹುಮಟ್ಟಿಗೆ ಜ್ಞಾನದಿಂದ ಸಾಗುತ್ತಲಿಲ್ಲ. ಜ್ಞಾನವೆಂದು ಬಹುಜನರು ಒಪ್ಪಿರುವದರ ಆಧಾರದಿಂದ ಸಾಗಿರುತ್ತದೆ. ನಮ್ಮಗಳಿಗೆ ನಿಜವೇ ಬೇಕೆಂಬ ಹಂಬಲವಿಲ್ಲ, ನಿಜದ ಹಾಗೆ ಕಂಡರೆ ಸಾಕಾಗಿರುತ್ತದೆ. ತಾನು ಒಬ್ಬನೇ ಇದ್ದರೂ ಇಂಥ ಹೆಸರಿನ ಕಂಪನಿಯೆಂದು ರಬ್ಬರುಸ್ಟಾಂಪು ಮಾಡಿಸಿಕೊಂಡು ವ್ಯವಹಾರಮಾಡುವವರು ಹಲವರು ನಮ್ಮ ನಡುವೆ ಇರುತ್ತಾರೆ. ವಿದ್ಯೆಯ ಇಚ್ಛೆಯೇನೂ ಇಲ್ಲದಿದ್ದರೂ ಕಾಲೇಜಿನಲ್ಲಿ ಓದುತ್ತಾನೆಂಬ ಹೆಸರು ಬಂದರೆ ಸಾಕೆಂದು ಕೆಲವರು ಕಾತುರರಾಗಿರುತ್ತಾರೆ. ಷೇಕ್ಸ್ಪಿಯರ್, ಕಾಳಿದಾಸ.. ಮುಂತಾದ ಕವಿಗಳ ಹೃದಯವನ್ನು ಅರಿತುಕೊಳ್ಳುವ ಯೋಗ್ಯತೆಯಾಗಲಿ ಇಚ್ಛೆಯಾಗಲಿ ಇಲ್ಲದಿದ್ದರೂ ಅವರ ಕೆಲವು ವಾಕ್ಯಗಳನ್ನು ಸಭೆಗಳಲ್ಲಿ, ಅಥವಾ ನಾಲ್ಕು ಜನರು ಸೇರಿದಾಗ, ಉದಾಹರಿಸಿ ವಿದ್ಯಾವಂತರೆನ್ನಿಸಿ ಕೊಳ್ಳಬೇಕೆಂದು ಅನೇಕರು ತವಕಿಸುತ್ತಾರೆ. ಐಶ್ವರ್ಯವಂತರಲ್ಲದವರೂ ತಮ್ಮಲ್ಲಿರುವ ಒಂದೆರಡು ಭಾರಿಯ ಬೆಲೆಯ ವಸ್ತ್ರಗಳನ್ನೂ ಚಿನ್ನ ಬೆಳ್ಳಿಯ ಒಡವೆಗಳನ್ನೂ ಜನರೆದುರಿಗೆ ತೋರಿಸಿಕೊಳ್ಳಬೇಕೆಂದು ಹವಣಿಸುತ್ತಾರೆ. ಇತ್ಯಾದಿ. ಹೀಗೆ ನಮ್ಮ ವ್ಯವಹಾರದಲ್ಲಿಯೇ ನಮಗೆ ತತ್ತ್ವವು ಬೇಕಿಲ್ಲದಿರುವಾಗ ಶಾಸ್ತ್ರದ ತತ್ತ್ವವು ನಮ್ಮ ಮನಸ್ಸಿಗೆ ಎಷ್ಟು ದೂರವಾಯಿತು! ಅದರ ಜ್ಞಾನಕ್ಕೆ ಸಾಧನವಾಗಿರುವ ನಡವಳಿಕೆಯು ಎಷ್ಟು ದೂರವಾಯಿತು!

ಲೋಕದಲ್ಲಿ ಇಂಥ ಜನರೇ ಬಹಳವಾಗಿರುತ್ತಾರಾದ್ದರಿಂದ ಇವರಿಗೆ ನಿಜವನ್ನು ತಿಳಿಯಬೇಕೆಂಬ ಹಂಬಲ ಉಂಟಾಗುವ ಹಾಗಿಲ್ಲ. ಆಶೆಯೇ ನಮ್ಮ ವ್ಯವಹಾರಕ್ಕೆಲ್ಲ ತಳಹದಿ; ಆಶೆಯು ಪೂರ್ಣವಾಗುವದಕ್ಕೆ ಏನು ಮಾಡಬೇಕೋ ಅದೇ ನಮಗೆ ಕರ್ಮ, ಅದರ ತಿಳಿವಳಿಕೆಯೇ ಜ್ಞಾನ. ಈ ಜ್ಞಾನಕರ್ಮಗಳು ಮೃತ್ಯುರೂಪ ವಾಗಿರುವವೆಂದು ತಿಳಿಸಿ ಇಹಪರಸುಖವನ್ನು ಕೊಡುವ ಕರ್ಮವನ್ನು ಶಾಸ್ತ್ರಗಳು

ವಿವರಿಸುತ್ತವೆ. ಆಶೆಯನ್ನು ಕ್ರಮಬದ್ಧವಾಗಿ ಪೂರ್ಣಮಾಡುವ ಕೆಲವು ಕರ್ಮಗಳನ್ನೂ ಶಾಸ್ತ್ರದಲ್ಲಿ ವಿಧಿಸಿರುತ್ತದೆ; ಅದಕ್ಕೆ **ಕಾಮ್ಯಕರ್ಮ**ವೆಂದು ಹೆಸರು. ನಿತ್ಯಕರ್ಮವು ಆಶೆಯನ್ನು ತೊರೆದು ಮಾಡುವ ಕರ್ಮವೆಂದು ಹೇಳಿದೆನಷ್ಟೆ; ಕಾಮ್ಯಕರ್ಮದಿಂದಾಗುವಂಥ ಕಡಿಮೆಯ ತರದ ಫಲದ ಆಶೆಯಿಲ್ಲದ ಕರ್ಮವೆಂದೇ ಅದಕ್ಕೆ ಅರ್ಥವೇ ಹೊರತು ಯಾವ ಫಲವೂ ಇಲ್ಲದ ಕರ್ಮವೆಂದೇನೂ ಅರ್ಥವಲ್ಲ. ರೈಲುಪ್ರಯಾಣಕ್ಕಾಗಿ ಹೊರಟ ವಿವೇಕಿಯು ಸ್ವಲ್ಪ ನಸ್ಯಕ್ಕಾಗಿ ತನ್ನ ಕಾಲವನ್ನು ಕಳೆದುಕೊಂಡು ಪ್ರಯಾಣವನ್ನು ನಿಲ್ಲಿಸುವದಿಲ್ಲವಲ್ಲವೆ? ಇದರಂತೆಯೇ ವೇದೋಕ್ತವಾದ ನಿತ್ಯಕರ್ಮದ ಉತ್ತಮ ಫಲವು ಬೇಕಾದರೆ ಕಾಮ್ಯಕರ್ಮದ ಕ್ಷುದ್ರಫಲಗಳ ಆಶೆಯನ್ನು ತೊರೆಯಬೇಕಾಗುವದು.

ಇದಿಷ್ಟೂ ವೇದದ ಕರ್ಮಕಾಂಡದ ಮಾತಾಯಿತು. ಇನ್ನು ಜ್ಞಾನಕಾಂಡದ ಕಡೆಗೆ ತಿರುಗಿದರೆ ಅಲ್ಲಿ ಈ ಕರ್ಮವನ್ನೇ ಇನ್ನೂ ಉತ್ತಮವಾದ ಫಲವನ್ನು ಕೊಡುವಂತೆ ಉಪಯೋಗಿಸಿರುತ್ತದೆ. ಕರ್ಮಕಾಂಡದ ದೃಷ್ಟಿಯಿಂದ ನೋಡಿದರೆ ಕರ್ಮಕ್ಕೆ ಇಷ್ಟು ಮಹತ್ತ್ವವಿದೆ ಎಂಬುದು ಕಾಣುವದೇ ಇಲ್ಲ. ಸರ್.ಎಮ್. ವಿಶ್ವೇಶ್ವರಯ್ಯನವರಿಗೆ ಬಾಲ್ಯದಲ್ಲಿ ಅವರ ಹಿರಿಯರು ಹೇಳಿದ ಬುದ್ಧಿವಾದವಾಗಲಿ, ಹಾಕಿಕೊಟ್ಟ ಒಳ್ಳೆಯ ನಡತೆಯ ಮೇಲುಪಂಕ್ತಿಯಾಗಲಿ, ಅವರ ಜೀವಮಾನದಲ್ಲಿ ಅವರನ್ನು ಇಂಥ ಉನ್ನತಿಗೇರಿಸುವದೆಂದು ಅವರಿಗೆ ಚಿಕ್ಕತನದಲ್ಲಿ ಗೊತ್ತಿದ್ದಿತೆ? ಹೀಗೆಯೇ ಹುಡುಗರಿಗೆ ಉಪನಯನವನ್ನು ಮಾಡಿಸುವ ಸಂಸ್ಕಾರವು ವೇದದಲ್ಲಿ ಹೇಳಿರುವ ಉತ್ಕೃಷ್ಟಸಾಧನವಾಗಿದೆ ಎಂದು ಆಗ ತಿಳಿಯುವಹಾಗಿರುವದಿಲ್ಲ. ಅದೊಂದು ಕರ್ಮಕಾಂಡದ ಅಪ್ಪಣೆಯನ್ನು ಪಾಲಿಸುವ ವಿಧಾನವಾಗಿರುತ್ತದೆ, ಅಷ್ಟೆ. ಆದರೆ ಬ್ರಹ್ಮಜ್ಞಾನವಾದಾಗ? ಉಪನಯನದಲ್ಲಿ ತಮಗೆ ನಿಜವಾಗಿಯೂ **ಬ್ರಹ್ಮೋಪದೇಶವೇ** ಆಗಿತ್ತೆಂದು ಸ್ಪಷ್ಟವಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ ಕರ್ಮವು ಕರ್ಮಕಾಂಡದಲ್ಲಿ ಹೇಳಿರುವ ಫಲವನ್ನು ಕೊಡುವದಕ್ಕೆ ಮಾತ್ರವೇ ಅಲ್ಲ; ಪರಮಾರ್ಥವಾಗಿಯೂ ಅಮೃತವಾಗಿರುವ ಮೋಕ್ಷವನ್ನು ಕೊಡುವ ಜ್ಞಾನಕ್ಕೆ ಸಾಧನವಾಗಿರುವದೆಂದು ಹೇಳಬೇಕಾಗಿರುವದು. ಇದೇ ಉಪನಿಷತ್ತುಗಳಲ್ಲಿ ಕರ್ಮವನ್ನು ಮತ್ತೆ ವಿಧಾನಮಾಡಿರುವದಕ್ಕೂ ಅದನ್ನು ಪ್ರಶಂಸೆಮಾಡಿರುವದಕ್ಕೂ ಕಾರಣ. ಉಪನಿಷತ್ತುಗಳ ಸಾರವಾದ ಗೀತೆಯಲ್ಲಿ ಹೀಗೆ ಮುಮುಕ್ಷುಗಳಿಗೆ ಬೇಕಾಗಿರುವ ಕರ್ಮವನ್ನೇ **ಕರ್ಮಯೋಗ**ವೆಂದು ಕರೆದಿರುತ್ತದೆ.

ಕರ್ಮಯೋಗದ ತತ್ತ್ವವನ್ನು ಅರಿಯುವ ಬುದ್ಧಿಯ ಮಟ್ಟವು ಯಾವದೆಂಬುದು ಈವರೆಗಿನ ವಿಚಾರದಿಂದ ಸ್ವಲ್ಪಮಟ್ಟಿಗೆ ಗೊತ್ತಾಗಿರಬಹುದು. ಭಗವಂತನು ಅರ್ಜುನನಿಗೆ "ಇಗೊ, ಇಲ್ಲಿಯವರೆಗೆ ಸಾಂಖ್ಯಬುದ್ಧಿಯನ್ನು ಹೇಳಿರುತ್ತೇನೆ; ಈಗ ಯೋಗಬುದ್ಧಿಯನ್ನು ಹೇಳುತ್ತೇನೆ" ಎಂದು ಹೇಳಿದ ವಾಕ್ಯಕ್ಕೂ ಸ್ವಲ್ಪಮಟ್ಟಿಗೆ ಅರ್ಥವು

ವಿಶದವಾಗಿರಬೇಕು. "ಈ ಬುದ್ಧಿಯುಂಟಾದರೆ ನೀನು ಕರ್ಮಬಂಧವನ್ನು ನಾಶ ಮಾಡಿಕೊಳ್ಳಬಹುದು" ಎಂದು ಕರ್ಮಯೋಗವನ್ನು ಹೊಗಳಿರುವದಕ್ಕೆ ಕಾರಣವೂ ಈಗ ಸ್ಪಷ್ಟವಾಗುತ್ತದೆ. ಕರ್ಮವನ್ನು ಮಾಡಿ ಇಹದಲ್ಲಿ ಸುಖವನ್ನೂ ಪರದಲ್ಲಿ ಸದ್ಗತಿಯನ್ನೂ ಪಡೆಯಬಹುದಾದರೂ, ಕರ್ಮಯೋಗವನ್ನು ಮಾಡಿದರೆ ಮತ್ತೆ ಸಂಸಾರದಲ್ಲಿ ತೊಳಲುವ ಕರ್ಮಬಂಧವು ಸಡಿಲವಾಗುವದೆಂಬ ವಿಶೇಷಫಲವು ದೊರಕುತ್ತದೆ.

ಅರ್ಜುನನು ಜ್ಞಾನಯೋಗದ ವಿಚಾರವನ್ನು ಕೇಳುವದಕ್ಕೂ ಅದಕ್ಕೆ ಅವಶ್ಯವಾದ ಕರ್ಮಯೋಗವನ್ನು ಮಾಡುವದಕ್ಕೂ ಬೇಕಾದ ಅರ್ಹತೆಯನ್ನು ಹೊಂದಿರುತ್ತಾನೆ. ಆದ್ದರಿಂದ ಭಗವಂತನು ಅವನಿಗೆ ಜ್ಞಾನವನ್ನು ಮೊದಲು ಹೇಳಿ ಅದಕ್ಕೆ ಸಾಧನವಾದ ಕರ್ಮಯೋಗವನ್ನು ಉಪದೇಶಿಸಿರುತ್ತಾನೆ. ಆದರೆ ಅರ್ಜುನನ ಬುದ್ಧಿಯ ಮಟ್ಟಕ್ಕೂ ಏರದ ನಮ್ಮಂಥವರು ಏನು ಮಾಡಬೇಕು? ಅಂಥವರು ತಾವು ಈಗಿರುವ ಸ್ಥಿತಿಯನ್ನು ಚೆನ್ನಾಗಿ ಅರಿತುಕೊಂಡು ಮೊದಲು ಸಹಜವಾದ ವ್ಯವಹಾರವನ್ನು ಮಾಡುವದಕ್ಕೆ ಪ್ರಾರಂಭಿಸಬೇಕು. ಮನೋವಾಕ್ಕಾಯಗಳಿಗೆ ಹೊಂದಿಕೆಯಿರುವಂತೆ ನೋಡಿಕೊಂಡು ಋಜುಭಾವದಿಂದ ವರ್ತಿಸುತ್ತಾ ಇಂಥ ಯೋಗ್ಯತೆಯನ್ನು ಪಡೆಯ ಬೇಕೆಂಬ ಬಯಕೆಯನ್ನು ತಂದುಕೊಳ್ಳಬೇಕು. ಯಥಾಶಕ್ತಿಯಾಗಿ ನಮ್ಮನಮ್ಮ ಕರ್ಮಗಳನ್ನು ನೆರವೇರಿಸುವದಕ್ಕೆ ಪ್ರಯತ್ನಿಸಬೇಕು. ಹಾಗಾದರೆ ಭಗವಂತನ ಅನುಗ್ರಹದಿಂದ ನಮಗೂ ಸತ್ಸಹವಾಸವೂ ದೊಡ್ಡವರ ಉಪದೇಶವೂ ದೊರೆತು ಕರ್ಮಯೋಗದ ಗುಟ್ಟು ಮನಸ್ಸಿಗೆ ಹೊಳೆಯುವದು.

## ೧೨. ಜ್ಞಾನದೃಷ್ಟಿ, ಕರ್ಮದೃಷ್ಟಿಗಳು ೨-(೪೨)

### (೮.೯.೪೬)

ಶೋಕಮೋಹಾದಿಗಳೇ ಸಂಸಾರಕ್ಕೆ ಬೀಜವು. ಅಜ್ಞಾನವಿರುವವರೆಗೆ ಈ ಶೋಕಮೋಹಾದಿಗಳು ತೊಲಗಲಾರವು. ಅಜ್ಞಾನವೋ, ತತ್ತ್ವಜ್ಞಾನವು ಬಂದಲ್ಲದೆ ಹೋಗುವಹಾಗಿಲ್ಲ. ಹೀಗೆ ತತ್ತ್ವಜ್ಞಾನವೇ ಶೋಕಮೋಹಗಳನ್ನು ಕಳೆಯುವದಕ್ಕೆ ಬೇಕೆಂಬ ಕಾರಣದಿಂದ ಭಗವಂತನು ಅರ್ಜುನನ ಶೋಕಮೋಹಗಳನ್ನು ನೀಗುವದಕ್ಕಾಗಿ ತತ್ತ್ವಜ್ಞಾನವನ್ನು ಉಪದೇಶಿಸಲು ಪ್ರಾರಂಭಿಸಿದನು.

ಅಜ್ಞಾನವೆಂದರೆ ತಪ್ಪುತಿಳಿವಳಿಕೆ. ಜ್ಞಾನವೆಂದರೆ ಸರಿಯಾದ ತಿಳಿವಳಿಕೆ. ವಿಷಯವು ಹೇಗಿರುವದೋ ಹಾಗೆಯೇ ತಿಳಿಸುವ ಜ್ಞಾನವು ಸರಿಯಾದ ಜ್ಞಾನವು;

ಇದ್ದದ್ದನ್ನು ಬಿಟ್ಟು ಮತ್ತೊಂದು ರೀತಿಯಿಂದ ಅದನ್ನು ತಿಳಿಯುವಂತೆ ಮಾಡುವ ತಿಳಿವಳಿಕೆಯು ಅಜ್ಞಾನವು. ಇಲ್ಲಿ ಅಜ್ಞಾನವೆಂಬುದೂ ಒಂದು ಬಗೆಯ ಜ್ಞಾನವೇ ಆಗಿರುತ್ತದೆಂಬುದನ್ನೂ, ತತ್ತ್ವವನ್ನು ತಿಳಿಸುವದರ ಮೂಲಕವೇ ಮತ್ತೊಂದು ಜ್ಞಾನವು ಅದನ್ನು ತಪ್ಪೆಂದು ತೋರಿಸಿಕೊಡುವದೆಂಬುದನ್ನೂ, ನಾವು ಮನದಂದು ಕೊಳ್ಳಬೇಕು. ಯಾವ ತಪ್ಪುತಿಳಿವಳಿಕೆಯೇ ಆಗಲಿ, ನಾವು ಬೇಕೆಂತ ಮಾಡಿಕೊಂಡ ತಿಳಿವಳಿಕೆಯಾಗಿರುವದಿಲ್ಲ; ಅವಿಚಾರಸ್ಥಿತಿಯಲ್ಲಿ ಅದು ಸಹಜವಾಗಿ ತಾನೇ ಇದ್ದು ಕೊಂಡುಬಿಟ್ಟಿರುತ್ತದೆ. ಇದೂ ಅಲ್ಲದೆ ಯಾವ ತಪ್ಪುತಿಳಿವಳಿಕೆಯೂ ಸರಿಯಾದ ಜ್ಞಾನವುಂಟಾಗುವವರೆಗೆ ತಾನು ತಪ್ಪುತಿಳಿವಳಿಕೆ ಎಂದು ಹೇಳಿಕೊಳ್ಳುವದಿಲ್ಲ. ಆದರೆ ಜ್ಞಾನವು ಉಂಟಾದ ಕ್ಷಣವೇ, ಅಜ್ಞಾನದ ಜೊಳ್ಳುತನವು ಗೊತ್ತಾಗಿಬಿಡುತ್ತದೆ. ದೂರಕ್ಕೆ ಒಂದು ಹಾವಿರುವದೆಂದು ನಮಗೆ ತೋರುವಾಗ ಅಲ್ಲಿ ನಿಜವಾದ ಹಾವಿರಲಿ, ಬಿಡಲಿ, ಹಾವಿನ ತಿಳಿವಳಿಕೆಯು "ಇದು ನಿಜವಾದ ಹಾವು" ಎಂದೇ ಹೇಳುತ್ತಿರುತ್ತದೆ. ಆದರೆ ಹತ್ತಿರಕ್ಕೆ ಬೆಳಕನ್ನು ತೆಗೆದುಕೊಂಡುಹೋಗಿ ನೋಡಿದಾಗ 'ಇದು ಹಗ್ಗವೇ' ಎಂಬ ತಿಳಿವಳಿಕೆಯುಂಟಾದರೆ ಮೊದಲಿನ ಜ್ಞಾನವು ಅಜ್ಞಾನವೆಂದು ತಟ್ಟನೆ ತಿಳಿದುಬಿಡುತ್ತದೆ. ಇಷ್ಟೇ ಅಲ್ಲ, ಆ ಅಜ್ಞಾನದಿಂದ ಆಗಿದ್ದ ಅಂಜಿಕೆ, ನಡುಕ-ಮುಂತಾದವುಗಳನ್ನು ನೆನಸಿಕೊಂಡರೆ ನಗುವೂ ನಾಚಿಕೆಯೂ ಬರುತ್ತದೆ.

ಇದರಂತೆ ಪ್ರಕೃತದಲ್ಲಿ ಅರ್ಜುನನಿಗೆ ಉಂಟಾಗಿದ್ದ ಶೋಕಮೋಹಾದಿಗಳಿಗೆ ಬೀಜವಾಗಿರುವ ಅಜ್ಞಾನವನ್ನು ಕಳೆಯುವದಕ್ಕಾಗಿ ಭಗವಂತನು ಪರಮಾರ್ಥ ತತ್ತ್ವವನ್ನು ನೆನಪುಮಾಡಿಕೊಡಬೇಕಾಯಿತು. ಅರ್ಜುನನಿಗೆ ಇಡಿಯ ದೃಶ್ಯದ ತಿರುಳು ಪರಮಾತ್ಮನೇ, ಪರಮಾತ್ಮನಲ್ಲದಂತೆ ಯಾವದು ತೋರಿದರೂ ಅದು ಅಸತ್ತೇ-ಎಂಬ ಜ್ಞಾನವನ್ನು ತಿಳಿಸಿಕೊಟ್ಟನು. ಆತ್ಮರು ಅನೇಕರು, ಕರ್ತೃಭೋಕ್ತೃ ಸ್ವರೂಪರು, ಜನ್ಮಾದಿವಿಕಾರಗಳುಳ್ಳವರು-ಎಂಬ ಅಜ್ಞಾನವನ್ನು ಕಳೆಯುವದಕ್ಕೆ ಈ ಜ್ಞಾನವಲ್ಲದೆ ಮತ್ತೆ ಯಾವ ಪರಿಹಾರೋಪಾಯವೂ ಇಲ್ಲವೇ ಇಲ್ಲ.

ಹಗ್ಗದ ಹಾವು ಮುಂತಾದವನ್ನು ತೋರಿಸುವಂಥ ತಪ್ಪುತಿಳಿವುಗಳು ಹೋಗುವದಕ್ಕೆ ಬೇಕಾದ ಸರಿಯಾದ ತಿಳಿವಳಿಕೆಯುಂಟಾಗುವದಕ್ಕೆ ಮತ್ತೊಬ್ಬರ ಉಪದೇಶವೇ ಬೇಕೆಂಬ ನಿಯಮವಿಲ್ಲ. ಚೆನ್ನಾಗಿ ಬೆಳಕು ಹರಡಿಕೊಂಡರೆ, ಅಥವಾ ತಾನೇ ಸ್ವಲ್ಪ ಧೈರ್ಯವನ್ನು ಮಾಡಿಕೊಂಡು ಹತ್ತಿರಕ್ಕೆ ಹೋಗಿ ವಸ್ತುವನ್ನು ಪರೀಕ್ಷಿಸಿದರೆ, ಸರಿಯಾದ ತಿಳಿವಳಿಕೆಯುಂಟಾಗಿಬಿಡುತ್ತದೆ. ಮೊದಲು ಇದ್ದದ್ದು ಅಜ್ಞಾನವೆಂಬುದೂ ಸ್ಪಷ್ಟವಾಗಿ ಬಿಡುತ್ತದೆ. ಆದರೆ ಎಲ್ಲಾ ಅಜ್ಞಾನಗಳೂ ಇಷ್ಟು ಸುಲಭವಾಗಿ

ಹೋಗುವದಿಲ್ಲ; ಏಕೆಂದರೆ ಅವು ಲೋಕದಲ್ಲಿ ಬಹುಜನರಿಗೆ ಸಮಾನವಾದ ಭ್ರಾಂತಿಗಳಾಗಿರುತ್ತವೆ. ಉದಾಹರಣೆಗೆ ದೇಹವೇ ತಾವೆಂಬ ಬುದ್ಧಿಯು ಬಹುಮಟ್ಟಿಗೆ ಎಲ್ಲ ಜನರಿಗೂ ಹೇಳಿಕೊಡದೆ ಉಂಟಾಗಿರುತ್ತದೆ. ದೇಹಕ್ಕಿಂತ ಬೇರೆಯಾದ ಆತ್ಮನೊಬ್ಬನಿರುವನೆಂದು ತಾರ್ಕಿಕರು ಯುಕ್ತಿಯಿಂದಲೂ ಮೀಮಾಂಸಕರು ಶಾಸ್ತ್ರ ಪ್ರಮಾಣದಿಂದಲೂ ಹೇಳಿಕೊಟ್ಟಮೇಲೂ ಅನೇಕರಿಗೆ ಅಂಥ ಆತ್ಮನ ಇರವಿನಲ್ಲಿ ನಂಬಿಕೆಯುಂಟಾಗುವದೇ ಇಲ್ಲ. ಒಂದು ವೇಳೆ ಶಾಸ್ತ್ರದ ಮೇಲಿನ ವಿಶ್ವಾಸದಿಂದ ದೇಹಕ್ಕಿಂತ ಬೇರೆಯಾದ ಆತ್ಮನೊಬ್ಬನಿರುವನೆಂದೂ ಅವನು ತನ್ನ ಧರ್ಮಾಧರ್ಮ ಗಳಿಗನುಸಾರವಾಗಿ ಲೋಕಾಂತರವನ್ನೂ ಜನ್ಮಾಂತರವನ್ನೂ ಪಡೆಯುವನೆಂದೂ ನಂಬಿದರೂ ಎದುರಿಗೆ ಕಾಣುವ ದೇಹಾತ್ಮಬುದ್ಧಿಯು ತಪ್ಪೆಂದು ಸ್ಫುಟವಾಗುವದು ಕಷ್ಟವಾಗುತ್ತದೆ. ದೇಹಾದಿಗಳಿಗೆ ಆಗುವ ಶೀತೋಷ್ಣಸುಖದುಃಖಾದಿಗಳು ತಮಗೆ ಆಗುತ್ತಿರುವವೆಂದು ಅನುಭವದಿಂದ ಗೊತ್ತಾಗುತ್ತಿರುವದರಿಂದಲೂ, ಇದು ದೇಹ, ಇವನು ಆತ್ಮನು ಎಂದು ವಿಂಗಡವಾಗಿ ಯಾರಿಗೂ ತೋರದೆ ಇರುವದರಿಂದಲೂ, ದೇಹಾತ್ಮಬುದ್ಧಿಯು ಅಜ್ಞಾನ ಎಂದು ತೋರುವದೇ ಇಲ್ಲ. ಇದರಂತೆ ಅನಾತ್ಮ ಪ್ರಪಂಚವೆಲ್ಲವೂ ಅಸತ್ತು, ಆತ್ಮನೊಬ್ಬನೇ ಸತ್ತು; ಆತ್ಮನು ನಿತ್ಯನಿರ್ವಿಕಾರನು, ಅವ್ಯಯನು, ಆನಂದಸ್ವರೂಪನು-ಎಂದು ಗುರುವು ತಿಳಿಸಿದರೆ 'ನಿಜ' ಎಂದು ಕೂಡಲೆ ಒಪ್ಪುವ ಉತ್ತಮಾಧಿಕಾರಿಗಳು ಬಹು ವಿರಳ. ಒಂದೊಂದು ಶರೀರಕ್ಕೆ ಒಬ್ಬೊಬ್ಬ ಆತ್ಮನಿರುವನೆಂದೂ, ಈ ಆತ್ಮರುಗಳು ಬಗೆಬಗೆಯ ಕರ್ಮಗಳನ್ನು ಮಾಡುತ್ತಲೂ ಅವುಗಳ ಫಲಗಳನ್ನು ಅನುಭವಿಸುತ್ತಲೂ ರಾಗದ್ವೇಷಗಳಿಂದ ಕೂಡಿ ಒಬ್ಬರನ್ನೊಬ್ಬರು ಪ್ರೀತಿಸುತ್ತಲೂ ಅಥವಾ ಹಗೆಮಾಡುತ್ತಲೂ ಇರುವರೆಂದೂ ಅನುಮಾನಾದಿಪ್ರಮಾಣಗಳಿಂದ ಸಿದ್ಧವಾಗುತ್ತಿರುವಲ್ಲಿ ಆತ್ಮನು ಒಬ್ಬನೇ, ಅವನು ನಿತ್ಯಶುದ್ಧಬುದ್ಧಮುಕ್ತಸ್ವಭಾವನು-ಎಂದು ಒಪ್ಪುವದು ಕಡುಕಷ್ಟವಾಗಿರುತ್ತದೆ. ಸಂಸಾರಿಗಳಾದ ಆತ್ಮರು ಅನೇಕರಿರುವರೆಂಬುದಕ್ಕೆ ಲೌಕಿಕರ ಅನುಭವವೇ ಅಲ್ಲದೆ ಬೇರೆಬೇರೆ ಕರ್ಮಗಳನ್ನು ವಿಧಿಸುವ ಅಥವಾ ನಿಷೇಧಿಸುವ ಶಾಸ್ತ್ರವಚನಗಳೂ ಸಾಧಕವಾಗಿರುತ್ತವೆ. ಏಕೆಂದರೆ ಒಬ್ಬನೇ ಆತ್ಮನಾದರೆ ಇಂಥವನು ಇಂಥ ಕರ್ಮವನ್ನು ಮಾಡಬೇಕು, ಅಥವಾ ಬಿಡಬೇಕು-ಎಂದು ವಿಧಿಸುವ ಶಾಸ್ತ್ರವಚನವು ವ್ಯರ್ಥವಾಗಿ ಬಿಡುತ್ತದೆ. ಆದ್ದರಿಂದ ಕರ್ಮವಚನಗಳ ಪ್ರಾಮಾಣ್ಯದಿಂದಲೂ ಆತ್ಮರು ಹಲವರಿದ್ದಾರೆಂದು ತೋರುತ್ತಿರುವದು. ಹೀಗೆ ಭಗವಂತನು ಹೇಳಿದ ಸಾಂಖ್ಯಬುದ್ಧಿಯು ಯಾರಿಗಿಲ್ಲವೋ ಅವರಿಗೆ ಈವರೆಗೆ ಭಗವಂತನು ಉಪದೇಶಿಸಿರುವ ಜ್ಞಾನವು ಸರಿಯೆಂದು ತಿಳಿಯುವದಕ್ಕೆ ಆಗುವಹಾಗಿಲ್ಲ.

ಆದ್ದರಿಂದಲೇ ಜ್ಞಾನಕ್ಕೆ ಅಧಿಕಾರವು ಬೇಕು ಎನ್ನುತ್ತಾರೆ. ಮುಂದೆ ಭಗವಂತನು ಮತ್ತೊಂದು ಬುದ್ಧಿಯನ್ನು ಉಪದೇಶಿಸಲು ಹೊರಟಿರುವದಕ್ಕೂ ಇದೇ ಕಾರಣವು. ಜ್ಞಾನವೆಂಬುದು ಯಾವ ಅಡ್ಡಿಯೂ ಇಲ್ಲದೆ ಎಲ್ಲರಿಗೂ ಹತ್ತುವಹಾಗಿದ್ದಿದ್ದರೆ ಇಂಥವರಿಗೆ ಮಾತ್ರ ಜ್ಞಾನವನ್ನು ಹೇಳಬೇಕು ಎಂಬ ನಿಯಮಕ್ಕೆ ಕಾರಣವಿರುತ್ತಿರಲಿಲ್ಲ, ಜ್ಞಾನಕ್ಕಾಗಿ ಸಾಧನವನ್ನು ಉಪದೇಶಿಸುವ ಆವಶ್ಯಕತೆಯೂ ಇರಲಿಲ್ಲ.

ಇಲ್ಲಿ ಒಂದು ಶಂಕೆ. ವಸ್ತುವಿನ ಜ್ಞಾನಕ್ಕೆ ಏನೇನು ಅಡ್ಡಿಗಳಿರಬಹುದೋ ಅವು ಯಾವವೂ ಪ್ರಕೃತಕ್ಕೆ ಹೊಂದುವಹಾಗೆ ಕಾಣುವದಿಲ್ಲ. ಒಂದು ವಸ್ತು ನಮಗಿಂತ ದೂರವಾದ ದೇಶದಲ್ಲಿದ್ದರೆ ಅದನ್ನು ಇಲ್ಲಿಯೇ ಇದ್ದುಕೊಂಡು ಅರಿಯುವದು ಆಗಲಾರದು; ಅಥವಾ ಒಂದು ಘಟನೆಯು ಕಾಲಾಂತರದಲ್ಲಿ ಆಗುವದಾಗಿದ್ದರೆ ಅದನ್ನು ಇಂದೇ ತಿಳಿದುಕೊಳ್ಳುವದು ಆಗಲಾರದು; ಅಥವಾ ಅರಿತುಕೊಳ್ಳಬೇಕಾದ ವಸ್ತುವಿಗೂ ನಮಗೂ ನಡುವೆ ಯಾವದಾದರೊಂದು ಮತ್ತೊಂದು ವಸ್ತು ಅಡ್ಡವಾಗಿದ್ದರೆ ಆಗಲೂ ನಡುವೆ ಇರುವ ವಸ್ತುವನ್ನು ತೆಗೆದು ಹಾಕಿದಲ್ಲದೆ ಆ ಅರಿಯಬೇಕಾದ ವಸ್ತುವು ಕಾಣಿಸಿಕೊಳ್ಳಲಾರದು. ಆದರೆ ಭಗವಂತನು ಹೇಳಿರುವ ಅವಿನಾಶಿಯಾದ ಆತ್ಮನೆಂಬ ವಸ್ತುವು ಇದೆಲ್ಲವನ್ನೂ ವ್ಯಾಪಿಸಿರುತ್ತದೆ. ಅದು ಎಲ್ಲಾ ಕಡೆಯಲ್ಲಿಯೂ ಎಲ್ಲಾ ಕಾಲದಲ್ಲಿಯೂ ಎಲ್ಲಾ ವಸ್ತುಗಳಲ್ಲಿಯೂ ಇದ್ದುಕೊಂಡಿರುತ್ತದೆ. ಹೀಗಿರುವಲ್ಲಿ ಅದಕ್ಕೆ ದೇಶಕೃತವಾದ, ಕಾಲಕೃತವಾದ ಅಥವಾ ವಸ್ತುಕೃತವಾದ ಪ್ರತಿಬಂಧಕವು ಹೇಗೆ ತಾನೆ ಇದ್ದೀತು? ಯಾವ ತಡೆಯೂ ಇಲ್ಲದಿದ್ದರೆ ಇಂಥ ಪರಮಾತ್ಮವಸ್ತುವನ್ನು ಅರಿತುಕೊಳ್ಳುವದಕ್ಕೆ ಅಡ್ಡಿ ಎಲ್ಲಿರುತ್ತದೆ?

ಈ ಶಂಕೆಗೆ ಪರಿಹಾರವೇನೆಂದರೆ, "ನಿಜ, ಭಗವಂತನು ಹೇಳಿರುವಂತೆ ಆತ್ಮ ವಸ್ತು ಸರ್ವವ್ಯಾಪಿಯಾಗಿ ಯಾವ ಪರಿಚ್ಛೇದವೂ ಇಲ್ಲದೆ ಇರುತ್ತದೆ. ಇದೂ ಅಲ್ಲದೆ ಅದು ನಮ್ಮಗಳ ಆತ್ಮನೇ ಆಗಿರುವದರಿಂದ ನಮಗೂ ಅದಕ್ಕೂ ಯಾವ ದೇಶಕಾಲವಸ್ತುಗಳ ವ್ಯವಧಾನವೂ ಇರುವದಕ್ಕೆ ಕಾರಣವೇ ಇಲ್ಲ. ಆದರೆ ಇಲ್ಲಿ ಒಂದು ದೊಡ್ಡ ಆತಂಕವಿರುತ್ತದೆ. ಅದೇನೆಂದರೆ ನಮ್ಮ ದೃಷ್ಟಿಯು ಆತ್ಮನ ಕಡೆಗೆ ತಿರುಗಿರುವದಿಲ್ಲ. ನಾವು ಆತ್ಮನನ್ನು ನೋಡುವದಕ್ಕೆ ಬೇಕಾದ ದೃಷ್ಟಿಯನ್ನು ಅವಲಂಬಿಸಿಲ್ಲ. ಆ ದೃಷ್ಟಿಗೆ ವಿರುದ್ಧವಾಗಿರುವ ಅವಿದ್ಯಾದೃಷ್ಟಿಯನ್ನು ಅವಲಂಬಿಸಿರುತ್ತೇವೆ. ಆತ್ಮನನ್ನು ನಾವು ಅರಿತುಕೊಳ್ಳದೆ ಇರುವದಕ್ಕೆ ದೇಶಕೃತವಾದ, ಕಾಲಕೃತವಾದ, ಅಥವಾ ವಸ್ತುಕೃತವಾದ ವ್ಯವಧಾನವಿರುವದಿಲ್ಲ; ಆದರೆ ಅವಿದ್ಯೆ ಎಂಬ ತಪ್ಪುತಿಳಿವಳಿಕೆಯ ವ್ಯವಧಾನವಿರುತ್ತದೆ. ಒಬ್ಬ ಮನುಷ್ಯನು ಕನ್ನಡಕವನ್ನು ಹಾಕಿಕೊಂಡು ಓದುತ್ತಿರುವಾಗ ಒಂದು ಬಿಳಿಯ ಚುಕ್ಕೆ ಪುಸ್ತಕದ ಮೇಲೆ ಓಡಾಡುತ್ತಿರುವಂತೆ ಕಾಣಿಸುತ್ತದೆ. ಇದು

ಯಾರೋ ಒಬ್ಬರಿಗಲ್ಲ, ಎಲ್ಲರಿಗೂ ಕಾಣಿಸುತ್ತದೆ. ಇದರ ಕಾರಣವನ್ನು ತಿಳಿಯದವರು ಯಾವದೋ ಒಂದು ಪ್ರಾಣಿಯು ಅಲ್ಲಿರಬೇಕೆಂದು ಭಾವಿಸಿ ಅದನ್ನು ಒರೆಸಿ ಹಾಕುವದಕ್ಕೆ ಹೋಗಬಹುದು. ಆದರೆ ನಿಜವನ್ನು ತಿಳಿದವರು ಕನ್ನಡಕದ ಉಪಾಧಿಯಿಂದ ಹೀಗೆ ತೋರುತ್ತಿದೆ ಎಂಬ ನಿಶ್ಚಯವನ್ನು ಮಾಡಿಕೊಂಡು ಸುಮ್ಮನಿರುವರು. ಅಜ್ಞಾನದೃಷ್ಟಿಗೂ ಶಾಸ್ತ್ರಜ್ಞಾನದೃಷ್ಟಿಗೂ ಇರುವ ಭೇದವು ಇಲ್ಲಿ ಎದ್ದುಕಾಣುತ್ತದೆ. ಅಜ್ಞನಿಗೆ ಯಾವದೊಂದು ತೋರಿದರೂ ಅದಕ್ಕೊಂದು ಕಾರಣವಿರಬೇಕು. ಯಾವದೊಂದು ಸಿಕ್ಕಬೇಕಾದರೂ ಅಥವಾ ಯಾವದೊಂದು ತೊಲಗಬೇಕಾದರೂ ಅದಕ್ಕೊಂದು ಕೆಲಸವನ್ನು ಮಾಡಬೇಕು. ಇದಕ್ಕೇನು ಮಾಡಬೇಕು, ಇದಕ್ಕೇನು ಮಾಡಬಾರದು? ಎಂದು ವಿಚಾರಿಸುವದೇ ಅಜ್ಞಾನಿಗಳ ಕರ್ಮದೃಷ್ಟಿಯು; ಇದರ ನಿಜವೇನು? ನನ್ನ ಜ್ಞಾನವು ಸರಿಯೊ, ತಪ್ಪೊ-ಎಂದು ವಿಚಾರಿಸುವದೇ ಜ್ಞಾನದೃಷ್ಟಿಯು.

ಅರ್ಜುನನು ಅಜ್ಞಾನದೃಷ್ಟಿಯನ್ನವಲಂಬಿಸಿದ್ದರಿಂದ "ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ" ನನಗೆ ಯಾವದು ಮಾಡತಕ್ಕದ್ದೋ ತಿಳಿಯದೆ ನಿನ್ನನ್ನು ಕೇಳುತ್ತಿದ್ದೇನೆ ಎಂದು ಕರ್ಮದೃಷ್ಟಿಯ ಪ್ರಶ್ನೆಯನ್ನು ಹಾಕಿದನು. ಆದರೆ ಭಗವಂತನು ಅರ್ಜುನನಿಗೆ ಜ್ಞಾನಕರ್ಮದೃಷ್ಟಿಗಳ ವಿವೇಕವನ್ನು ತೋರಿಸುವದಕ್ಕೋಸ್ಕರ "ಅರ್ಜುನ, ನೀನು ಧರ್ಮಾಧರ್ಮಗಳ ಸ್ವರೂಪವನ್ನೇ ಬಲ್ಲವನಂತೆ ತತ್ತ್ವಜ್ಞಾನಿಗಳ ಮಾತನ್ನಾಡುತ್ತಿರುವೆ, ಅಜ್ಞಾನಿಗಳಂತೆ ಶೋಕವನ್ನೂ ಮಾಡುತ್ತಿರುವೆಯಲ್ಲ!" ಎಂದು ಉತ್ತರವನ್ನು ಪ್ರಾರಂಭಿಸಿದನು. "ಇರುವದು ಹೋಗುವದಿಲ್ಲ, ಇಲ್ಲದ್ದು ಬರುವದಿಲ್ಲ; ಆತ್ಮನೊಬ್ಬನೇ ಸತ್ತು, ಮಿಕ್ಕದ್ದೆಲ್ಲವೂ ಅಸತ್ತು" ಎಂದು ಸದ್ವಸ್ತುವಿನ ವಿವೇಕಜ್ಞಾನವನ್ನು ಬೋಧಿಸಿದನು. ಆದರೂ ಈ ಸಾಂಖ್ಯದೃಷ್ಟಿಯ ಬೋಧೆಯು ಅರ್ಜುನನಿಗೆ ನಾಟಲಿಲ್ಲ. ಅವನು ನೇರಾಗಿ ತತ್ತ್ವಜ್ಞಾನಕ್ಕೆ ಏರದೆ ಇರುವದಕ್ಕೆ ಕರ್ಮದೃಷ್ಟಿಯಿದ್ದದ್ದೇ ಕಾರಣ. ಆದ್ದರಿಂದ ಭಗವಂತನು ಅರ್ಜುನನ ಮಟ್ಟಕ್ಕೇ ಇಳಿದು ಅವನನ್ನು ಮೆಲ್ಲಗೆ ಮೇಲಕ್ಕೆ ಕರೆದುಕೊಂಡುಹೋಗುವ ಪ್ರಯತ್ನವನ್ನು ಮಾಡುವದಕ್ಕಾಗಿ "ಇದುವರೆಗೆ ನಿನಗೆ ಸಾಂಖ್ಯಬುದ್ಧಿಯನ್ನು ಉಪದೇಶಿಸಿದೆನು. ಇನ್ನು ಯೋಗಬುದ್ಧಿಯನ್ನು ಉಪದೇಶಿಸುವೆನು" ಎಂದು ಮೊದಲುಮಾಡಿದನು.

ಕರ್ಮಯೋಗವು ಜ್ಞಾನಕ್ಕೆ ಸಾಧನವು ಹೇಗೆಂಬುದನ್ನು ವಿವೇಚನಾಪೂರ್ವಕವಾಗಿ ತಿಳಿದುಕೊಳ್ಳಬೇಕು. ಕರ್ಮದೃಷ್ಟಿಯನ್ನು ಕಳೆದು ಜ್ಞಾನದೃಷ್ಟಿಯನ್ನು ಸಂಪಾದಿಸಿಕೊಳ್ಳುವದಕ್ಕೆ ಸಹಾಯಮಾಡುವದೇ ಯಾವಾಗಲೂ ಅದರ ಗುರಿಯಾಗಿರುತ್ತದೆ. ಕರ್ಮದೃಷ್ಟಿಯನ್ನು ಎರಡು ಬಗೆಯಿಂದ ಕಳೆಯಬಹುದು. ಈ ದೃಷ್ಟಿಯು ಅಜ್ಞಾನದ ಫಲವೆಂಬುದನ್ನು ತತ್ತ್ವಬೋಧೆಯಿಂದ ತಿಳಿಸಿಕೊಡುವದು ಒಂದು ಉಪಾಯ;

ಇದನ್ನೇ ಭಗವಂತನು ಸಾಂಖ್ಯಬುದ್ಧಿಯ ಉಪದೇಶದಲ್ಲಿ ಲಕ್ಷ್ಯದಲ್ಲಿಟ್ಟಿದ್ದು. ಆದರೆ ಯಾರಿಗೆ ನೇರಾಗಿ ಜ್ಞಾನಕ್ಕೆ ಹಾರುವ ಶಕ್ತಿಯಿರುವದಿಲ್ಲವೋ ಅಂಥವರನ್ನು ತತ್ತ್ವಜ್ಞಾನಕ್ಕೆ ಹತ್ತಿರಹತ್ತಿರವಾಗಿರುವಂಥ ಕರ್ಮಕ್ಕೆ ಹತ್ತಿಸುವದೇ ಉಪಾಯ ವಾಗಿರುತ್ತದೆ. ಭಗವಂತನು ಈ ಎರಡನೆಯ ಉಪಾಯವನ್ನು ಈಗ ಉಪ ಯೋಗಿಸಿರುತ್ತಾನೆ.

ಕರ್ಮಯೋಗವು ಜ್ಞಾನಕ್ಕೆ ಸಾಧನವೆಂಬುದನ್ನು ಕೇಳಿ ಕೆಲವರು ಕರ್ಮಯೋಗವು ನೇರಾಗಿಯೇ ಜ್ಞಾನವೆಂದೋ ಅಥವಾ ಜ್ಞಾನವನ್ನು ಎಳೆದು ತಂದುಕೊಡುವದೆಂದೋ ಭ್ರಮಿಸುವದುಂಟು. ಇದು ಸರಿಯಲ್ಲ. ಸಾಂಖ್ಯ ಬುದ್ಧಿಯಾಯಿತು, ಈಗ ಕರ್ಮಬುದ್ಧಿ ಯನ್ನು ಹೇಳಿರುತ್ತದೆ-ಎಂಬ ವಿಭಾಗವನ್ನು ಮಾಡಿಕೊಂಡು ಸಾಂಖ್ಯದಂತೆ ಕರ್ಮ ಯೋಗವೂ ನೇರಾಗಿ ಪರಮಪುರುಷಾರ್ಥಸಾಧನವೆಂದು ತಿಳಿದರೆ ಜ್ಞಾನದೃಷ್ಟಿಗೂ ಕರ್ಮದೃಷ್ಟಿಗೂ ಇರುವ ತಾರತಮ್ಯವನ್ನೇ ಮರೆತಂತೆ ಆಗಿಬಿಡುತ್ತದೆ. ಚಿತ್ತಶುದ್ಧಿ ಯಾಗುವದಕ್ಕೆ ಕರ್ಮವನ್ನೂ ಮನಸ್ಸಮಾಧಾನಕ್ಕೆ ಪ್ರಾಣಾಯಾಮವನ್ನೂ ಶಾಸ್ತ್ರದಲ್ಲಿ ಹೇಳಿರುವದುಂಟು. ಆದರೆ ಅದರ ಉದ್ದೇಶವನ್ನು ಮರೆತು ಅವನ್ನು ಮಾಡುವವರೇ ಜ್ಞಾನಿಗಳು ಎಂದು ಹಲವರು ಭ್ರಾಂತರಾಗಿರುತ್ತಾರೆ. ಅದು ಸರಿಯಲ್ಲ. ಯೋಗವೆಂದರೆ ಸಾಂಖ್ಯಕ್ಕೆ, ಜ್ಞಾನಕ್ಕೆ, ಉಪಾಯವು; ಕರ್ಮವನ್ನು ಅಥವಾ ಮತ್ತೆ ಯಾವದಾದರೊಂದು ಉಪಾಯವನ್ನು ಹೇಗೆ ಅನುಷ್ಠಾನಮಾಡಿದರೆ ಮನಸ್ಸು ಸಾಂಖ್ಯಬುದ್ಧಿಯ ಮಟ್ಟಕ್ಕೆ ಏರಬಹುದೋ ಹಾಗೆ ಮಾಡಿದರೆ ಮಾತ್ರ ಅದು ಯೋಗವಾಗುವದು. **ಇದೇ ಕರ್ಮಯೋಗವು.**

ಕರ್ಮಯೋಗಿಗಳೆಂದರೆ ಯಾರು? ಯಾರು ಚಟುವಟಿಕೆಯಿಂದ ಲೋಕೋಪ ಕಾರಕವಾದ ಕೆಲಸವನ್ನು ಮಾಡುತ್ತಿರುವರೋ ಅವರನ್ನು ಕರ್ಮಯೋಗಿಗಳೆಂದು ಕರೆಯುವ ವಾಡಿಕೆಯು ಹೆಚ್ಚುತ್ತಿದೆ. ಆದರೆ ಗೀತೆಯಲ್ಲಿ ಹೇಳಿರುವ ಕರ್ಮಯೋಗಿಗಳು ಲೋಕಸೇವಾನಿರತರಲ್ಲ. **ಶಾಸ್ತ್ರೀಯಕರ್ಮಗಳನ್ನು ಯಥಾಶಕ್ತಿಯಾಗಿ ಈಶ್ವರಾರಾಧನ ಬುದ್ಧಿಯಿಂದ ಮಾಡುತ್ತಿರುವ ಸಾಧಕರೇ ಇಲ್ಲಿ ಕರ್ಮಯೋಗಿಗಳು.** ಕರ್ಮದಿಂದ ಇಷ್ಟಪ್ರಾಪ್ತಿಯೂ ಅನಿಷ್ಟನಿವೃತ್ತಿಯೂ ಆಗುವದೆಂದು ಕರ್ಮಿಗಳು ಹೇಳುವರು; ಕರ್ಮವನ್ನು ಮಾಡಿ ಅಥವಾ ಬಿಟ್ಟು ಇಂಥಿಂಥ ಫಲವನ್ನು ಪಡೆಯ ಬೇಕೆಂಬುದು ಅವರ ಅಭಿಪ್ರಾಯ. ಆದರೆ ಜ್ಞಾನದಿಂದ ಇಷ್ಟಪ್ರಾಪ್ತಿಯನ್ನಾಗಲಿ ಅನಿಷ್ಟನಿವೃತ್ತಿಯನ್ನಾಗಲಿ ಮಾಡಿಕೊಳ್ಳಬೇಕೆಂದು ಬಯಸುವವರು ಒಂದನ್ನು ಮಾಡಿ ಒಂದನ್ನು ಪಡೆಯಬೇಕಾಗಿರುವದಿಲ್ಲ. ಕ್ರಿಯೆ, ಕಾರಕ, ಫಲ-ಇವುಗಳ ವಿವೇಚನೆಯನ್ನು ಮಾಡಿಕೊಂಡು, ಕರ್ತೃವಾದ ತನಗೆ ಶಾಸ್ತ್ರದಲ್ಲಿ ವಿಧಿಸಿರುವ ಕರ್ಮದಲ್ಲಿ ಸರಿಯಾದ

ಕಾರಕಗಳನ್ನು ಉಪಯೋಗಿಸಿ ಮಾಡಿ, ಉಕ್ತವಾದ ಫಲವನ್ನು ಪಡೆಯಬೇಕು-ಎಂಬುದು ಕರ್ಮಿಗಳ ಗುರಿ. ಕಾಮ್ಯಕರ್ಮಗಳನ್ನು ಯಥಾವಿಧಿಯಾಗಿ ಈ ದೃಷ್ಟಿಯಿಂದಲೇ ಮಾಡಬೇಕು. ಆದರೆ ತತ್ತ್ವಜ್ಞಾನಕ್ಕೆ ತಡೆಯಾಗಿರುವ ಅಡ್ಡಿಗಳನ್ನು ಕಳೆದುಕೊಳ್ಳಬೇಕು, ಅದಕ್ಕೆ ಬೇಕಾದ ಯೋಗ್ಯತೆಯನ್ನು ಸಂಪಾದಿಸಿಕೊಳ್ಳಬೇಕು-ಎಂದು ಬಯಸುವ ಅರ್ಜುನನಂಥವರು ನಿಷ್ಕಾಮಕರ್ಮಗಳನ್ನು ಪರಮೇಶ್ವರಾರ್ಪಣ ಬುದ್ಧಿಯಿಂದ ಮಾಡಬೇಕು. ಆಗ ಕರ್ಮವನ್ನು ಮಾಡಿಯೇ ಕರ್ಮದೃಷ್ಟಿಯನ್ನು ಮೀರುವ ಬಗೆ ಹೇಗೆಂಬುದು ಗೊತ್ತಾಗುತ್ತದೆ. ಕಾಮ್ಯಕರ್ಮವು ಜ್ಞಾನಕ್ಕೆ ಏಕೆ ಅಡ್ಡಿ, ನಿಷ್ಕಾಮ ಕರ್ಮದಿಂದ ಸಾಂಖ್ಯಬುದ್ಧಿಯು ಹೇಗೆ ಮೈಗೂಡಿಕೊಳ್ಳುವದು-ಇವೇ ಮುಂತಾದ ವಿಷಯಗಳನ್ನು ಇನ್ನು ನಾವು ವಿಚಾರಮಾಡಬಹುದಾಗಿದೆ.

## ೧೩. ಕರ್ಮಯೋಗಕ್ಕೆ ಅವತರಣಿಕೆ ೨-(೪೩-೪೪)

(೧೫.೯.೪೭)

ಇದುವರೆಗೆ ಕರ್ಮದ ವಿಚಾರವನ್ನು ಸ್ವಲ್ಪಮಟ್ಟಿಗೆ ಹೇಳಿದ್ದಾಗಿದೆ. ಆದರೆ ಗೀತಾಶಾಸ್ತ್ರವು ಅದನ್ನು ವಿವರಿಸುವದಕ್ಕಾಗಿ ಬಂದಿರುವದಿಲ್ಲ. ಸಂಸಾರಬಂಧದಿಂದ ಬಿಡುಗಡೆಯಾಗಬೇಕೆಂದು ಹಂಬಲಿಸುತ್ತಿರುವ ಮುಮುಕ್ಷುಗಳಿಗೆ ಮುಕ್ತಿಸಾಧನವನ್ನು ಉಪದೇಶಿಸುವದಕ್ಕೆ ಬಂದಿರುತ್ತದೆ. ಅರ್ಜುನನಿಗೆ ಶಾಸ್ತ್ರದಲ್ಲಿ ಕೆಲವು ಕರ್ಮಗಳನ್ನು ವಿಧಿಸಿದೆಯೆಂದೂ ಮತ್ತೆ ಕೆಲವನ್ನು ನಿಷೇಧಮಾಡಿದೆಯೆಂದೂ ತಿಳಿದಿತ್ತು. ಆದರೆ ಶೋಕಮೋಹಗಳಿಗೆ ವಶನಾಗಿ ಪರಧರ್ಮವನ್ನು ಸ್ವಧರ್ಮವೆಂದು ಅವನು ಬಗೆದನು. ಆ ಶೋಕಮೋಹಗಳನ್ನು ನೀಗುವದಕ್ಕೆ ಭಗವಂತನು ಹೊರಟನು. ಆದ್ದರಿಂದ ಇಲ್ಲಿ ಕರ್ಮಿಗಳಿಗಾಗಿ ವೇದದ ಕರ್ಮಕಾಂಡದಲ್ಲಿ ಹೇಳಿದ ಕರ್ಮಗಳನ್ನು ಹೇಗೆ ಮಾಡಬೇಕು? -ಎಂಬುದನ್ನು ತಿಳಿಸುವದೇ ಭಗವಂತನ ಗುರಿ.

**ನಿತ್ಯ, ನೈಮಿತ್ತಿಕ, ಕಾಮ್ಯ, ಪ್ರಾಯಶ್ಚಿತ್ತ, ಪ್ರತಿಷಿದ್ಧ**-ಈ ಕರ್ಮಗಳನ್ನೆಲ್ಲ ಕರ್ಮ ಕಾಂಡದಲ್ಲಿ ತಿಳಿಸಿದೆ. ಇವುಗಳ ತತ್ತ್ವವನ್ನು ಜೈಮಿನಿಗಳು ತಮ್ಮ ಪೂರ್ವ ಮೀಮಾಂಸಾದಲ್ಲಿ ವಿಚಾರಮಾಡಿಯೂ ಇರುತ್ತಾರೆ. ನಿತ್ಯಕರ್ಮವನ್ನು ಬಿಟ್ಟು ಉಳಿದವುಗಳಿಗೆ ಒಂದೊಂದು ವಿನಿಯೋಗವಿದೆ. **ಕಾಮ್ಯಕರ್ಮ**ಗಳನ್ನು ಮಾಡಿದರೆ ಆಯಾ ಕಾಮಗಳು ದೊರಕುತ್ತವೆ. **ಪ್ರಾಯಶ್ಚಿತ್ತಕರ್ಮ**ದಿಂದ ಇಂಥಿಂಥ ದೋಷಗಳು ಹೋಗುತ್ತವೆ ಎಂದು ಶಾಸ್ತ್ರದಲ್ಲಿ ಹೇಳಿದೆ. **ಪ್ರತಿಷಿದ್ಧಕರ್ಮ**ಗಳನ್ನು ಮಾಡಿದರೆ

ದೋಷವು ಗಂಟುಬೀಳುತ್ತದೆ. ಆಯಾ ನಿಮಿತ್ತದಿಂದ ಆಯಾ ನೈಮಿತ್ತಿಕಕರ್ಮವನ್ನು ಮಾಡಿದರೆ ಆಯಾ ಪ್ರಯೋಜನಗಳಾಗುವವು. ಆದರೆ ನಿತ್ಯಕರ್ಮಗಳ ವಿಚಾರವೇನು? ನಿತ್ಯಕರ್ಮಕ್ಕೆ ಫಲವಿಲ್ಲ, ಆದರೆ ಅದನ್ನು ಮಾಡದಿದ್ದರೆ ಪ್ರತ್ಯವಾಯವುಂಟಾಗುತ್ತದೆ ಎಂದು ಮೀಮಾಂಸಕರು ಹೇಳುತ್ತಾರೆ. ಈ ಕರ್ಮಗಳನ್ನು ಮಾಡದಿದ್ದರೆ ಮನುಷ್ಯನು ಆ ಕಾಲದಲ್ಲಿ ಮಾಡಬಾರದ ಕರ್ಮಗಳನ್ನು ಅವಶ್ಯವಾಗಿ ಮಾಡುವನಾದ್ದರಿಂದ ಅದರಿಂದ ದೋಷವುಂಟಾಗುವದೆಂದೂ ಕೆಲವರು ಹೇಳುತ್ತಾರೆ. ಅವುಗಳು ಹಿಂದೆ ಬಂದೊದಗಿರುವ ದುರಿತದ ಕ್ಷಯವನ್ನುಂಟುಮಾಡುವವೆಂದು ಆಚಾರ್ಯರು ಅಭಿಪ್ರಾಯಪಟ್ಟಿರುತ್ತಾರೆ. ಇದೆಲ್ಲ ಕರ್ಮಕಾಂಡದೃಷ್ಟಿಯಿಂದ ಆಡಿದ ಮಾತಾಯಿತು. ಈಗ ಇದೇ ಕರ್ಮಗಳನ್ನು ಮುಮುಕ್ಷುವಾದವನು ಹೇಗೆ ಮಾಡಬೇಕು?- ಎಂಬುದನ್ನು ಭಗವಂತನು ತಿಳಿಸುತ್ತಿದಾನೆ. "ಇದುವರೆಗೆ ಸಾಂಖ್ಯಬುದ್ಧಿಯ ವಿಚಾರವನ್ನು ಹೇಳಿದೆನು! ಈಗ ಯೋಗಬುದ್ಧಿಯನ್ನು ಹೇಳುವೆನು. ಈ ಯೋಗಬುದ್ಧಿಯಿಂದ ಕರ್ಮಬಂಧವನ್ನು ನಾಶಮಾಡಿಕೊಳ್ಳಬಹುದು" ಎಂಬ ವಾಕ್ಯವನ್ನು ಮನಸ್ಸಿನಲ್ಲಿ ಹೊರಳಿಸಿದರೆ ಇದು ಸ್ಪಷ್ಟವಾಗುತ್ತದೆ. ಈಗ ನಾನು ಹೇಳುವದು ಬರಿಯ ಕರ್ಮವನ್ನಲ್ಲ. ಕರ್ಮದ ಬಂಧವನ್ನು ಕಳಚಿಕೊಳ್ಳುವದಕ್ಕೆ ಮಾಡಬೇಕಾದ ಕರ್ಮವನ್ನು- ಎಂಬುದು ಭಗವಂತನ ವಾಕ್ಯದ ಸ್ವಾರಸ್ಯವು. "ಕರ್ಮವು ಒಂದಲ್ಲ ಒಂದು ಫಲವನ್ನು ಕೊಡುತ್ತಿರುವದರಿಂದ ಕರ್ಮ, ಫಲ, ಅದರ ಭೋಗ, ವಾಸನೆ, ಮತ್ತೆ ಕರ್ಮ-ಹೀಗೆ ಕರ್ಮಬಂಧವು ಬಂಡಿಯ ಗಾಲಿಯಂತೆ ತಿರುಗುತ್ತಲೇ ಇರುತ್ತದೆ. ಆದರೆ ಕರ್ಮಗಳನ್ನು ಒಂದು ಬಗೆಯಲ್ಲಿ ಮಾಡಿದರೆ, ವಿಷದಿಂದ ವಿಷವನ್ನು ಅರಗಿಸುವಂತೆಯೂ, ಅಜೀರ್ಣವಾದ ಆಹಾರವನ್ನು ಶುಂಠಿಯ ಲೇಹವೆಂಬ ಆಹಾರದಿಂದಲೇ ಅರಗಿಸಿಕೊಳ್ಳುವಂತೆಯೂ ಕರ್ಮದಿಂದಲೇ ಕರ್ಮಬಂಧವನ್ನು ತಪ್ಪಿಸಿಕೊಳ್ಳಬಹುದು. ಅದನ್ನು ಹೇಳುತ್ತೇನೆ, ಕೇಳು" -ಎಂದು ಭಗವಂತನು ಹೇಳುತ್ತಿದಾನೆ.

ಇಲ್ಲಿ ಹೇಳಿರುವ ಕರ್ಮವೂ ಕರ್ಮಬಂಧವೂ ಶಾಸ್ತ್ರೀಯಕರ್ಮಕ್ಕೆ ಸಂಬಂಧಪಟ್ಟದ್ದೆಂಬುದನ್ನು ಮರೆಯಬಾರದು. ಕರ್ಮವೆಂದರೆ ಕರ್ಮವೆಂದಿಷ್ಟೇ ಅರ್ಥವಾದರೂ ಶಾಸ್ತ್ರದಲ್ಲಿ ವಿಹಿತವಾಗಿರುವದನ್ನೇ ಇಲ್ಲಿ ಕರ್ಮವೆಂದು ಕರೆದಿರುತ್ತದೆ. ಲೌಕಿಕಕರ್ಮವು ಕುರುಡನ ಕೈಯಲ್ಲಿರುವ ಕವಣೆಯಂತೆ ಇರುತ್ತದೆ; ಅದರಿಂದ ಯಾವಾಗ ಎಂಥ ಫಲವಾಗುವದೆಂಬುದು ನಿಯತವಾಗಿರುವದಿಲ್ಲ. ಶಾಸ್ತ್ರೀಯಕರ್ಮವು ಹಾಗಲ್ಲ; ಅದು ವ್ಯವಸ್ಥಿತವಾಗಿ ಹೀಗೆಯೇ ಫಲವನ್ನು ಕೊಡುವದೆಂದು ಗೊತ್ತಾಗಿರುತ್ತದೆ. ಕರ್ಮಮಾತ್ರಕ್ಕೆ ದೋಷವು ಇದ್ದೇ ಇರುತ್ತದೆ; ಆದರೆ ಕರ್ಮಗಳಲ್ಲಿ ಅವುಗಳ ಫಲದ ದೃಷ್ಟಿಯಿಂದ ತಾರತಮ್ಯವಿದೆ. ಹೀಗೆ ನೋಡಿದಾಗ ಕರ್ಮಗಳಲ್ಲೆಲ್ಲ ಶಾಸ್ತ್ರೀಯಕರ್ಮವು

ಅತ್ಯಂತ ಸ್ವಲ್ಪ ದೋಷವುಳ್ಳದ್ದೂ ಬಹಳ ಗುಣವುಳ್ಳದ್ದೂ ಆಗಿರುತ್ತದೆ. ಜ್ಞಾನದೃಷ್ಟಿಯಿಂದ ನೋಡಿದಾಗ ಮಾತ್ರ ಎಂಥ ಉತ್ಕೃಷ್ಟವಾದ ಶಾಸ್ತ್ರೀಯಕರ್ಮವಾಗಲಿ ಬಂಧಕವಾಗದೆ ಬಿಡುವದೇ ಇಲ್ಲ. ಈಗ ಆ ಬಂಧವನ್ನು ತಪ್ಪಿಸಿಕೊಳ್ಳುವದಕ್ಕೆ ಕರ್ಮಾನುಷ್ಠಾನದಲ್ಲಿ ಅನುಸರಿಸಬೇಕಾದ ಯೋಗಬುದ್ಧಿಯನ್ನು ಹೇಳುವದಕ್ಕೆ ಭಗವಂತನು ಪ್ರಾರಂಭಿಸಿರುತ್ತಾನೆ.

ತತ್ತ್ವಜ್ಞಾನದಿಂದಲೇ ಕರ್ಮಬಂಧವು ತಪ್ಪೀತೇ ಹೊರತು ಮತ್ತೇತರಿಂದಲೂ ತಪ್ಪಲಾರದು-ಎಂಬುದು ಶಾಸ್ತ್ರದ ಪರಮಸಿದ್ಧಾಂತವು. ಆದರೆ ನಮ್ಮಲ್ಲಿ ಬಹುಜನರಿಗೆ ಜ್ಞಾನಕ್ಕೆ ತಕ್ಕ ಯೋಗ್ಯತೆಯಿರುವದಿಲ್ಲ. ಆದ್ದರಿಂದ ಉತ್ತಮಾಧಿಕಾರಿಗಳನ್ನು ಬಿಟ್ಟರೆ ಹೆಚ್ಚಿನ ಸಂಖ್ಯೆಯ ಜನರು ಇದುವರೆಗೆ ಹೇಳಿರುವ ಸಾಂಖ್ಯಬುದ್ಧಿಯನ್ನು ಅವಲಂಬಿಸುವದಕ್ಕೆ ಅನರ್ಹರೇ ಆಗಿರುತ್ತಾರೆ. ಕರ್ಮವಾಸನೆಯಿಂದ ಕೂಡಿದ್ದರೂ ಈ ಸಂಸಾರ ಬಂಧದಿಂದ ಹೇಗಾದರೂ ಬಿಡುಗಡೆಯನ್ನು ಹೊಂದಬೇಕೆಂಬ ಹವಣಿಕೆಯೂ ಇರುವವರು ಕೆಲವರಿರುತ್ತಾರೆ. ಅಂಥವರಿಗೆ ಕರ್ಮಗಳನ್ನು ಮಾಡಿಯೂ ಕರ್ಮಬಂಧದಿಂದ ತಪ್ಪಿಸಿಕೊಳ್ಳುವ ಬಗೆಯನ್ನು ಹೇಳುವದಕ್ಕೆ ಸಾಂಖ್ಯಬುದ್ಧಿಗೆ ಕ್ರಮಕ್ರಮವಾಗಿ ಒಯ್ಯುವ ಒಂದು ಬುದ್ಧಿಯನ್ನು ಉಪದೇಶಿಸಬೇಕಾಗುತ್ತದೆ. ಇದೇ ಯೋಗಬುದ್ಧಿ. ಈ ಯೋಗಬುದ್ಧಿಯನ್ನು ಹೊಗಳಿ "ಅರ್ಜುನನೆ, ನೀನು ಈ ಬುದ್ಧಿಯನ್ನು ಆಶ್ರಯಿಸಿದರೆ ಕರ್ಮಬಂಧವನ್ನು ತಪ್ಪಿಸಿಕೊಳ್ಳಬಹುದು" ಎಂದು ಹೇಳಿರುವಲ್ಲಿ ಅದನ್ನು ಸಾಂಖ್ಯಬುದ್ಧಿಗೆ ಹೋಲಿಸಿಲ್ಲ. ಯೋಗಬುದ್ಧಿಯಿಲ್ಲದೆ ಕರ್ಮವನ್ನು ಅನುಷ್ಠಾನ ಮಾಡುವ ಬುದ್ಧಿಗೆ ಹೋಲಿಸಿರುತ್ತದೆ ಎಂದು ತಿಳಿಯಬೇಕು.

ಇಲ್ಲಿ ಕರ್ಮಯೋಗವನ್ನು ಹೊಗಳಿರುವದೇಕೆ? ಎಂದರೆ ಅದನ್ನು ಮುಮುಕ್ಷುಗಳಿಗೆ ವಿಧಿಸುವದಕ್ಕಾಗಿ. ಕರ್ಮಕಾಂಡದಲ್ಲಿ ಕರ್ಮವನ್ನು ವಿಧಿಸುವಾಗ ಅದನ್ನು ಹೊಗಳುವದಕ್ಕೆ ಅರ್ಥವಾದವನ್ನು ಹೇಳಿರುವದುಂಟು. ಉದಾಹರಣೆಗೆ "ವಾಯುದೇವತೆಗೆ ಇಂಥ ಪಶುವನ್ನು ಕೊಡಬೇಕು. ವಾಯುವು ಕ್ಷಿಪ್ರತಮವಾದ ದೇವತೆಯಲ್ಲವೆ? ಆದ್ದರಿಂದ ಆ ದೇವತೆಗೆ ಈ ಪಶುವನ್ನು ಕೊಡುವವನಿಗೆ ಕ್ಷಿಪ್ರವಾಗಿ ಫಲವಾಗುತ್ತದೆ" ಎಂದು ಒಂದು ಕರ್ಮವನ್ನು ಹೊಗಳಿದೆ. ಹೀಗೆಯೇ ಇಲ್ಲಿ ಕರ್ಮಯೋಗವನ್ನು ಹೊಗಳಿರುತ್ತದೆ. ಇಲ್ಲಿ ಹೊಗಳುವದಕ್ಕೆ ಉಪಯೋಗಿಸಿರುವದೆಲ್ಲ ಈ ಯೋಗದಲ್ಲಿ ನಿಜವಾಗಿಯೂ ಇರುವ ಗುಣವನ್ನೇ ಹೇಳಿದ್ದೆಂದು ತಿಳಿಯಬೇಕು. ಬೇಸಾಯ ಮಾಡಿದವರಿಗೆ ಸರಿಯಾಗಿ ಕೆಲಸವನ್ನು ಮಾಡಿದ್ದರೂ ಫಲವಾಗಬೇಕೆಂಬ ನಿಯಮವಿಲ್ಲ; ವೈದ್ಯರು ಚಿಕಿತ್ಸೆಯನ್ನು ಮಾಡುವಾಗ, ಇರುವ ರೋಗವು ಹೋಗುವದರ ಬದಲು ಹೊಸದೊಂದು ರೋಗವು ಗಂಟುಬಿದ್ದರೂ ಬೀಳಬಹುದು. ಹಾಗೆಯೇ ಶಾಸ್ತ್ರೀಯ

ಕರ್ಮದಲ್ಲಿಯೂ ಕ್ರಮವನ್ನು ಹಿಡಿದು ಮಾಡದೆ ಇರುವಾಗ ಫಲವಿಲ್ಲದೆ ಹೋಗಿ ಬರಿಯ ಆಯಾಸಮಾತ್ರವಾಗಿಬಿಡಬಹುದು; ಅಥವಾ ತಪ್ಪಾಗಿ ಮಾಡಿದ್ದರಿಂದ ವಿಪರೀತಫಲವೂ ಆಗಿಬಿಡಬಹುದು. ಆದರೆ ಈ ಕರ್ಮಯೋಗದಲ್ಲಿ ಹಾಗಿಲ್ಲ. ಇದನ್ನು ಮಾಡಿದರೆ ಫಲವಿಲ್ಲವೆಂಬುದಾಗಲಿ ವಿಪರೀತಫಲವೇ ಆಗುವದೆಂಬುದಾಗಲಿ ಎಂದಿಗೂ ಇಲ್ಲ. ಇದನ್ನು ಒಂದಿಷ್ಟು ಮಾಡಿದರೂ ಸಾಕು, ಮಹಾಭಯರೂಪವಾದ ಸಂಸಾರಬಂಧದಿಂದಲೇ ಬಿಡುಗಡೆಮಾಡಿಸಿಬಿಡುತ್ತದೆ. ಕರ್ಮದ ಪರಿಮಾಣಕ್ಕೆ ತಕ್ಕಂತೆಯೇ ಫಲವಿರಬೇಡವೆ? ಸ್ವಲ್ಪವೇ ಕರ್ಮಯೋಗವನ್ನು ಮಾಡಿದರೆ ಮಹಾ ಭಯದಿಂದ ಬಿಡುಗಡೆಯಾಗುವದು ಹೇಗೆ?- ಎಂದು ಶಂಕಿಸಬಾರದು. ಆಟಂಬಾಂಬಿನ ಪ್ರಯೋಗದಂಥ ಸಣ್ಣ ಕೆಲಸಕ್ಕೆ ಮಹಾದುಷ್ಫಲವಾದದ್ದು ಎಲ್ಲರಿಗೂ ತಿಳಿದಿರುತ್ತದೆ. ಆ ಬಾಂಬಿನ ಪ್ರಯೋಗವು ಪ್ರಕೃತಿಯ ನಿಯಮಕ್ಕೆ ಒಳಪಟ್ಟದ್ದು; ಪ್ರಕೃತವಾದ ವಿಚಾರವು ಕರ್ಮನಿಯಮಕ್ಕೆ ಒಳಪಟ್ಟದ್ದು. ಕರ್ಮವು ಬಂಧವನ್ನುಂಟುಮಾಡುವ ದಾದರೂ ಕರ್ಮಯೋಗದ ನಿಯಮವನ್ನು ಅನುಸರಿಸಿದರೆ ಅದು ಬಂಧದಿಂದ ಬಿಡುಗಡೆಯನ್ನೇ ಮಾಡಿಸಿಬಿಡುತ್ತದೆ. ಕರ್ಮಕಾಂಡದಲ್ಲಿ ಕರ್ಮಗಳನ್ನು ವಿನಿಯೋಗಿಸಿ ರುವದು ಕ್ಲಿಪ್ತವಾದ ಪರಿಮಿತವಾದ ಫಲವನ್ನು ಕೊಡುವದಕ್ಕೆ. ಆದರೆ ಜ್ಞಾನಕಾಂಡದಲ್ಲಿ ಇದೇ ಕರ್ಮಗಳನ್ನು ವಿನಿಯೋಗಿಸಿರುವದು ಚಿತ್ತಶುದ್ಧಿಯಮೂಲಕವಾಗಿ ಜ್ಞಾನವನ್ನು ತಂದುಕೊಡುವದಕ್ಕೆ. ಈ ವಿನಿಯೋಗಭೇದವನ್ನು ತಿಳಿಸಿಕೊಡುವದಕ್ಕೇ ಭಗವಂತನು ಈ ಕರ್ಮಯೋಗವನ್ನು ಹೊಗಳಿರುತ್ತಾನೆ.

ಮೊಟ್ಟಮೊದಲು ಈ ಯೋಗದಲ್ಲಿರುವ ವಿಶೇಷವೇನೆಂದರೆ 'ವ್ಯವಸಾಯವು' ದೃಢವಾದ ಮನೋನಿಶ್ಚಯವು. "ನಾನು ಇನ್ನು ಎಂದಿಗೂ ಕಾಮಕ್ರೋಧಗಳಿಗೆ ವಶ ನಾಗುವದಿಲ್ಲ, ಸಂಸಾರದಿಂದ ಬಿಡುಗಡೆಯನ್ನು ಹೊಂದುವದೇ ನನ್ನ ಜೀವನದ ಉದ್ದೇಶವು" ಎಂಬ ಮನೋನಿಶ್ಚಯವೇ **ವ್ಯವಸಾಯವು**. ಈ ವ್ಯವಸಾಯವು ಕರ್ಮಯೋಗದಲ್ಲಿರುತ್ತದೆ. ಆದರೆ ಸುಮ್ಮನೆ ಕರ್ಮಗಳನ್ನು ಮಾಡುವವರಿಗೆ ಇದು ಇರುವದಿಲ್ಲ. ಭಗವಂತನು ಇಲ್ಲಿ ಕಾಮ್ಯಕರ್ಮಗಳನ್ನು ನಿಂದಿಸಿರುತ್ತಾನಷ್ಟೆ. ನಾಸ್ತಿಕರು ಕರ್ಮದಿಂದ ಪ್ರಯೋಜನವಿಲ್ಲವೆಂದು ಹೇಳುವಂತೆ ಇಲ್ಲಿ ಭಗವಂತನು ಕಾಮ್ಯ ಕರ್ಮಗಳನ್ನು ನಿಂದಿಸಿರುತ್ತಾನೆಂದು ಭಾವಿಸಬಾರದು. ಒಂದನ್ನು ನಿಂದಿಸುವದು ಮತ್ತೊಂದನ್ನು ಹೊಗಳುವದಕ್ಕೆ; ಅಪ್ರಕೃತವಾದ ಕಾಮ್ಯಕರ್ಮವನ್ನು ನಿಂದಿಸಿರುವದು ಪ್ರಕೃತವಾಗಿ ವಿಧಿಸಬೇಕೆಂದಿರುವ ಕರ್ಮಯೋಗವನ್ನು ಹೊಗಳುವದಕ್ಕೆ. ಆದ್ದರಿಂದ ಕಾಮ್ಯಕರ್ಮದ ನಿಂದೆಯನ್ನು ಕರ್ಮಯೋಗದಲ್ಲಿರುವ ವಿಶೇಷವನ್ನು ತಿಳಿಸುವದಕ್ಕಾಗಿ

ಮಾಡಿರುತ್ತದೆ ಎಂಬುದನ್ನು ನೆನಪಿಟ್ಟು ಈ ಕಾಮ್ಯಕರ್ಮನಿಂದಾಶ್ಲೋಕಗಳ ಅರ್ಥವನ್ನು ತಿಳಿದುಕೊಳ್ಳಬೇಕಾಗಿರುತ್ತದೆ.

ಕಾಮ್ಯಕರ್ಮದವರ ಬುದ್ಧಿಯು ಹೇಗಿರುವದು? ಕಾಮ್ಯಕರ್ಮವನ್ನು ಹೊಗಳುವವರ ಮಾತು ನೋಡುವದಕ್ಕೆ ರಮಣೀಯವಾಗಿರುವ ಮುತ್ತುಗದ ಹೂವಿನಂತೆ ಮನಸ್ಸನ್ನೇನೋ ಆಕರ್ಷಿಸುತ್ತದೆ. ಆದರೆ ಕರ್ಮಯೋಗದ ಫಲಕ್ಕೆ ಕಾಮ್ಯಕರ್ಮವನ್ನು ಹೋಲಿಸಿದರೆ ಅದರ ಜೊಳ್ಳುತನವು ಕಾಣಬರುವದು. ಏನೂ ತಿಳಯದ ಚಿಕ್ಕ ಮಕ್ಕಳಿಗೆ ಬೆಲ್ಲ, ಮಿಠಾಯಿ, ಕಲ್ಲುಸಕ್ಕರೆ-ಎಂದು ಸವಿಸವಿಯಾದ ತಿಂಡಿಗಳ ಹೆಸರನ್ನು ಕೇಳಿದರೆ ನಾಲಗೆಯಲ್ಲಿ ನೀರೂರುವಂತೆ ಕಾಮಾತ್ಮರಾದವರಿಗೆ ಕಾಮ್ಯಕರ್ಮಗಳನ್ನು ಹೊಗಳುವ ಅರ್ಥವಾದಗಳನ್ನು ಕೇಳಿದರೆ ಕಿವಿ ನೆಟ್ಟಗಾಗುತ್ತದೆ. ವೇದದಲ್ಲಿ ಹೇಳಿರುವ ಫಲಗಳಲ್ಲೆಲ್ಲ ಸ್ವರ್ಗಕ್ಕಿಂತ ಹೆಚ್ಚಿನ ಫಲವಿಲ್ಲವೆಂದು ಅವರು ಭಾವಿಸುವರು. ಬಗೆಬಗೆಯ ಭೋಗಗಳನ್ನು ಅನುಭವಿಸುವದೇ ಪುರುಷಾರ್ಥವೆಂದು ಅವರ ನಂಬಿಕೆಯಾಗಿರುತ್ತದೆ. ಭೋಗ, ಐಶ್ವರ್ಯ ಇವುಗಳಲ್ಲಿ ನೆಟ್ಟ ಚಿತ್ತವುಳ್ಳವರಾದ ಅವರಿಗೆ ಜನ್ಮ, ಕರ್ಮ, ಫಲ-ಎಂಬ ಸಂತತವಾದ ಸಂಸಾರಚಕ್ರದಲ್ಲಿ ತೊಳಲಿಸುವ ಕಾಮ್ಯಕರ್ಮಗಳಿಗೂ ಜನ್ಮಸಂಸಾರಬಂಧನದಿಂದಲೇ ಪಾರುಮಾಡಿಸುವ ಕರ್ಮಯೋಗಕ್ಕೂ ಇರುವ ತಾರತಮ್ಯವು ಹೇಗೆ ಮನವರಿಕೆಯಾದೀತು? ಕೊರಳಿಗೆ ಪಟ್ಟಿಯನ್ನು ಕಟ್ಟಿ ಸರಪಳಿಯಿಂದ ಬಿಗಿದು ಕಾಲಕಾಲಕ್ಕೆ ಒಂದಿಷ್ಟು ಹಿಟ್ಟುಹಾಕುವವನನ್ನು ಕಂಡರೆ ಬಾಲವನ್ನು ಅಲ್ಲಾಡಿಸುವ ಊರುನಾಯಿಗೆ, ಸ್ವತಂತ್ರವಾಗಿ ಕಾಡಿನಲ್ಲಿ ಅಲೆದುಕೊಂಡಿರುವ ಕಾಡುನಾಯಿಯ ಮನೋವೃತ್ತಿಯ ಅರಿವು ಹೇಗಾದೀತು? ಚಿತ್ರದ ದ್ರಾಕ್ಷಿಗಳಿಗೆ ಮನಸೋತು ಹಾರಿಬರುವ ಮೂಢಪಕ್ಷಿಗಳಂತೆ ಸಾತಿಶಯವಾಗಿರುವ ಪರಿಮಿತವಾದ ಫಲಗಳಲ್ಲಿ ಆಸೆಯಿರುವವರಿಗೆ ಗೀತೋಕ್ತವಾದ ಕರ್ಮಯೋಗದಿಂದಾಗುವ ಮನಸ್ಸಮಾಧಾನವಾಗಲಿ ವ್ಯವಸಾಯಾತ್ಮಕಬುದ್ಧಿಯಾಗಲಿ ಎಂದಿಗೂ ರುಚಿಸಲಾರದು.

ಇದುವರೆಗೆ ಭಗವಂತನು ಕರ್ಮಯೋಗದ ಗುಣಕಥನವನ್ನು ಮಾಡಿ ಅದರ ಕಡೆಗೆ ಅರ್ಜುನನ ಮನಸ್ಸನ್ನು ಒಲಿಸಿಕೊಂಡಿರುತ್ತಾನೆ. "ಇದು ಉತ್ತಮವಾದ ಔಷಧ; ತಾವು ಮನಸ್ಸು ಗಟ್ಟಿಮಾಡಿ ಒಂದಿಷ್ಟು ಪಥ್ಯವನ್ನು ಮಾಡಿದರೆ ಸಾಕು, ಇದರಿಂದ ವಜ್ರಕಾಯವೇ ದೊರೆಯುವದು" ಎಂದು ಔಷಧಿಯನ್ನು ಹೊಗಳುವ ವೈದ್ಯನಂತೆ ಕರ್ಮಯೋಗವನ್ನು ಹೊಗಳಿ ಅದರ ಮರ್ಮವನ್ನು ತಿಳಿಸುವದಕ್ಕೆ ಪ್ರಾರಂಭಿಸಿರುತ್ತಾನೆ. ಇನ್ನು ಕರ್ಮಯೋಗವೆಂದರೇನೆಂಬುದನ್ನು ಬಿಡಿಸಿ ನೋಡೋಣ.

# ೧೪. ಕರ್ಮಯೋಗದ ಗುರಿ ೨-(೪೫-೪೬)

(೨೨.೯.೪೬)

ಭಗವಂತನು ಸಾಂಖ್ಯಬುದ್ಧಿಯನ್ನು ಹೇಳಿದ ಬಳಿಕ ಯೋಗಬುದ್ಧಿಯನ್ನು ಹೇಳುವದಕ್ಕೆ ಪ್ರಾರಂಭಿಸಿ ಕರ್ಮಯೋಗಕ್ಕೂ ಬರಿಯ ಕರ್ಮಕ್ಕೂ ಇರುವ ಅಂತರವು ಮೇರುಪರ್ವತಕ್ಕೂ ಸಾಸುವೆಕಾಳಿಗೂ ಇರುವ ಅಂತರವೆಂಬುದನ್ನು ತೋರಿಸಿರುತ್ತಾನೆ. "ವೇದಗಳೆಲ್ಲವೂ ತ್ರೈಗುಣ್ಯವಿಷಯವಾಗಿರುತ್ತವೆ; ಅರ್ಜುನನೆ, ನೀನು ನಿಸ್ತ್ರೈಗುಣ್ಯನಾಗು, ನಿರ್ದ್ವಂದ್ವನಾಗು, ನಿತ್ಯಸತ್ತ್ವಸ್ಥನಾಗು, ನಿರ್ಯೋಗಕ್ಷೇಮನಾಗು, ಆತ್ಮವಂತನಾಗು" ಎಂಬುದು ಆತನ ಉಪದೇಶವು.

ವೇದವೆಂದರೆ ಇಲ್ಲಿ ಕರ್ಮಕಾಂಡಭಾಗವು. "ವೇದವು ತ್ರೈಗುಣ್ಯವನ್ನು ಹೇಳುತ್ತದೆ, ನೀನು ನಿಸ್ತ್ರೈಗುಣ್ಯನಾಗು" ಎಂಬ ವಾಕ್ಯವನ್ನು ಮೇಲೆಮೇಲೆ ನೋಡಿದರೆ "ನೀನು ವೇದವನ್ನು ಬಿಡು, ವೇದೋಕ್ತಕರ್ಮಗಳನ್ನು ಮಾಡಬೇಡ" ಎಂದು ಅರ್ಥವಾಗುತ್ತದೆ. ಆದರೆ ನಿಜವು ಹಾಗಿಲ್ಲ, ವೇದೋಕ್ತಕರ್ಮವನ್ನೇನೋ ಮಾಡಬೇಕು, ಆದರೆ ನಿಸ್ತ್ರೈಗುಣ್ಯನಾಗಿ ಮಾಡುವದನ್ನು ಕಲಿಯಬೇಕು. "ಯಾರು ನಿಸ್ತ್ರೈಗುಣ್ಯರಾಗಿರುವರೋ ಅವರಿಗೆ ವಿಧಿಯೆಲ್ಲಿಯದು?' ಎಂಬ ವಾಕ್ಯವೊಂದುಂಟು. ಅವಿವೇಕಿಗಳಾದವರು ತಾವು ತ್ರಿಗುಣಾತೀತರೆಂದು ಹೇಳಿಕೊಳ್ಳುತ್ತಾ ಸ್ವೇಚ್ಛಾಚಾರವನ್ನು ಅವಲಂಬಿಸಿರುತ್ತಾರೆ. ಅಂಥ ಮೂರ್ಖರ ಮಾತು ಅಂತಿರಲಿ. ನಿಜವಾಗಿ ನಿಸ್ತ್ರೈಗುಣ್ಯರಾಗುವದೆಂದರೇನೆಂಬುದು ಈ ಗೀತೆಯ ಹದಿನಾಲ್ಕನೆಯ ಅಧ್ಯಾಯದಲ್ಲಿ ಸ್ಪಷ್ಟವಾಗುತ್ತದೆ. ಸದ್ಯಕ್ಕೆ ಈ ಶ್ಲೋಕಕ್ಕೆ ಅರ್ಥವಾಗುವಷ್ಟುಮಟ್ಟಿಗೆ ಗುಣಗಳ ವಿಚಾರವನ್ನು ಸ್ವಲ್ಪ ತಿಳಿದುಕೊಳ್ಳಬೇಕಷ್ಟೆ; ಅದರ ಪ್ರಯತ್ನವನ್ನು ಮಾಡೋಣ. ಸಾಂಖ್ಯರು ಸತ್ತ್ವ, ರಜ, ತಮ-ಎಂಬ ಮೂರು ಗುಣಗಳು ಇಡಿಯ ಜಗತ್ತೆಲ್ಲವನ್ನೂ ವ್ಯಾಪಿಸಿಕೊಂಡಿರುವವೆಂದೂ, ಇಲ್ಲಿ ಎಲ್ಲಾ ವಸ್ತುಗಳೂ ಗುಣಮಯವಾಗಿರುವವೆಂದೂ ಹೇಳುವರು. ಸಾಮಾನ್ಯವಾಗಿ ಮನುಷ್ಯರು ಗುಣಗಳನ್ನೂ ತನ್ನನ್ನೂ ವಿಂಗಡಿಸಿಕೊಳ್ಳದೆ ಇರುವದರಿಂದ ಆಯಾ ಗುಣಗಳ ಸ್ವಭಾವವೇ ಅವನದಾಗಿಬಿಟ್ಟಿರುತ್ತದೆ. ಇದರಿಂದ ಮನುಷ್ಯರನ್ನು ಸಾತ್ತ್ವಿಕರು, ರಾಜಸರು, ತಾಮಸರು-ಎಂದು ಮೂರು ವಿಧವಾಗಿ ವಿಂಗಡಿಸಬಹುದು. ಮನುಷ್ಯರು ತಮ್ಮತಮ್ಮ ಸ್ವಭಾವಕ್ಕೆ ಅನುಗುಣವಾಗಿ ಬಾಹ್ಯಪ್ರಪಂಚದ ವಸ್ತುಗಳನ್ನು ಬಯಸುತ್ತಿರುವರು. ಸಾತ್ತ್ವಿಕರಿಗೆ ಸಾತ್ತ್ವಿಕಪದಾರ್ಥಗಳ ಬಯಕೆ, ರಾಜಸರಿಗೆ ರಾಜಸಪದಾರ್ಥಗಳ ಬಯಕೆ, ತಾಮಸರಿಗೆ ತಾಮಸಪದಾರ್ಥಗಳ ಬಯಕೆ-ಹೀಗೆ

ಮನುಷ್ಯರೆಲ್ಲರಿಗೂ ಅವರವರ ಸ್ವಭಾವಗುಣಕ್ಕೆ ಅನುಗುಣವಾಗಿ ಕಾಮವುಂಟಾಗು ತ್ತಿರುವದಷ್ಟೆ. ವೇದದಲ್ಲಿ ಇಂಥ ತ್ರಿಗುಣಾತ್ಮಕರನ್ನು ಮನಸ್ಸಿನಲ್ಲಿಟ್ಟು ಬೇರೆಬೇರೆಯ ಕರ್ಮಗಳನ್ನು ವಿಧಿಸಿರುತ್ತದೆ. ಆದ್ದರಿಂದ ಜನರಿಗೆ ಆಗುವ ಫಲಗಳೂ ಆಯಾ ಕರ್ಮಕ್ಕೆ ತಕ್ಕಂತೆ ತ್ರಿಗುಣಾತ್ಮಕವಾಗಿರುವದು ಸ್ವಾಭಾವಿಕವಾಗಿರುತ್ತದೆ. ಇದನ್ನೇ ಈ ಶ್ಲೋಕದ ಪ್ರಥಮಪಾದದಲ್ಲಿ ಭಗವಂತನು "ತ್ರೈಗುಣ್ಯವಿಷಯಾ ವೇದಾಃ" ಎಂದು ಹೇಳಿರುತ್ತಾನೆ. ವೇದಗಳು ತ್ರೈಗುಣ್ಯವಿಷಯವಾಗಿರುತ್ತವೆ, ಎಂದರೆ ತ್ರಿಗುಣಾತ್ಮಕವಾದ ಸಂಸಾರಫಲವನ್ನು ಕೊಡುವ ಕರ್ಮಗಳನ್ನೇ ವಿಧಿಸುತ್ತವೆ ಎಂದರ್ಥ.

ಆದರೆ ಈಗ ಭಗವಂತನು ಹೇಳುವ ಕರ್ಮಯೋಗವು ತ್ರಿಗುಣಗಳನ್ನು ಮೀರಿ ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳುವದಕ್ಕೆ ಬೇಕಾದ ಯೋಗ್ಯತೆಯನ್ನು ಕೊಡ ತಕ್ಕದ್ದು. ಇದನ್ನು ತಿಳಿಸುವದಕ್ಕಾಗಿ "ನಿಸ್ತ್ರೈಗುಣ್ಯೋ ಭವಾರ್ಜುನ" ಅರ್ಜುನನೆ ನಿಸ್ತ್ರೈಗುಣ್ಯನಾಗು- ಎಂದು ಬೋಧಿಸಿರುತ್ತಾನೆ. ಇಡಿಯ ಸಂಸಾರವೇ ತ್ರಿಗುಣಾತ್ಮಕ ವಾಗಿರುವದರಿಂದ ನಿಸ್ತ್ರೈಗುಣ್ಯನಾಗುವದಕ್ಕೆ ಸಂಸಾರವೆಲ್ಲವೂ ಅಸತ್ತೆಂದು ತಿಳಿದು ಸದ್ರೂಪನಾದ ಪರಮಾತ್ಮನ ಜ್ಞಾನವನ್ನು ಸಂಪಾದಿಸಿಕೊಳ್ಳಬೇಕಷ್ಟೆ; ಆ ಜ್ಞಾನವನ್ನು ಪಡೆದುಕೊಳ್ಳುವದಕ್ಕೆ ಪ್ರಯತ್ನವನ್ನು ಮಾಡು ಎಂದರ್ಥ. 'ನಿಸ್ತ್ರೈಗುಣ್ಯನಾಗು' ಎಂದು ವಿಧಿಸುವದಕ್ಕೆ ಬರುವದಿಲ್ಲ; ಅದು ಜ್ಞಾನದಿಂದ ತಾನೇ ಆಗುವ ಫಲವು. ಇದು ಜ್ಞಾನದ ಪ್ರಕರಣವಲ್ಲ, ಕರ್ಮಯೋಗದ ಪ್ರಕರಣ. ಆದ್ದರಿಂದ 'ನಿಸ್ತ್ರೈಗುಣ್ಯನಾಗು' ಎಂಬ ವಾಕ್ಯಕ್ಕೆ ನಿಷ್ಕಾಮನಾಗು, ಕಾಮಗಳನ್ನು ಗೆಲ್ಲುವ ಉಪಾಯವನ್ನು ಮಾಡು-ಎಂದೇ ಅರ್ಥಮಾಡಬೇಕು. ಯಾರು ಕಾಮಾತ್ಮರಾಗಿರುವರೋ ಅವರು ತ್ರಿಗುಣಾತ್ಮಕವಾದ ಸಂಸಾರವನ್ನೇ ಪಡೆಯುತ್ತಿರುತ್ತಾರೆ. ಆದ್ದರಿಂದ ಮುಮುಕ್ಷುವಾದವನು ಮೊದಲು ಕಾಮಗಳನ್ನು ಗೆದ್ದುಕೊಳ್ಳಬೇಕು. ಹಿಂದಿನ ಶ್ಲೋಕಗಳಲ್ಲಿ ಕಾಮ್ಯಕರ್ಮವನ್ನು ನಿಂದಿಸಿರುವದಕ್ಕೂ ಇದೇ ತಾತ್ಪರ್ಯ.

ಇನ್ನು ಕಾಮವನ್ನು ಗೆಲ್ಲುವ ಬಗೆ ಹೇಗೆ? ಇದಕ್ಕೆ ಯಾವ ಸಾಧನವನ್ನು ಮಾಡಬೇಕು? ಎಂದರೆ ಭಗವಂತನು ಅದಕ್ಕೆ ಮೂರುನಾಲ್ಕನೆಯ ಪಾದಗಳಲ್ಲಿ ಉತ್ತರವನ್ನು ಹೇಳಿರುತ್ತಾನೆ. "ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್" 'ನಿರ್ದ್ವಂದ್ವನಾಗು' ಎಂದರೆ ದ್ವಂದ್ವಗಳನ್ನು ಮೀರು ಎಂದರ್ಥ. ಜ್ಞಾನಿಯು 'ಶೀತೋಷ್ಣಾದಿದ್ವಂದ್ವಗಳು ಆಗಮಾಪಾಯವುಳ್ಳವು, ಅಸದ್ರೂಪವಾಗಿರುತ್ತವೆ' ಎಂದು ಅರಿತುಕೊಂಡು ಅವುಗಳನ್ನು ಮೀರಿರುತ್ತಾನೆ. ಕರ್ಮಯೋಗಿಯು ಅವುಗಳು ಬಂದರೆ ಸಹಿಸಿಕೊಂಡು ಹಿಗ್ಗದೆ ಕುಗ್ಗದೆ ಇರುವದನ್ನು ಅಭ್ಯಾಸಮಾಡಬೇಕು.

ಲೋಕದಲ್ಲಿ ಮನುಷ್ಯನನ್ನು ಎಷ್ಟೋ ಬೇಕುಬೇಡಗಳು ಕಾಡುತ್ತಿರುವವು. ಆದರೆ ಕರ್ಮಯೋಗಿಯು ಅವುಗಳಿಗೆ ವಶನಾಗದೆ ಇರಬೇಕು. ಹೊರಗಿನ ಶೀತೋಷ್ಣಾದಿ ದ್ವಂದ್ವಗಳ ಸ್ವಭಾವವು ಆಗಾಗ್ಗೆ ಬದಲಾಯಿಸುತ್ತಿರುವದರಿಂದ ಅವುಗಳು ಹೀಗೆಯೇ ಇರಬೇಕೆಂದು ಹಠವನ್ನು ಮಾಡದೆ **"ಇದೇನೂ ಹೀಗೆಯೇ ಇರುವದಿಲ್ಲಾ; ಇಷ್ಟಕ್ಕೆ ನನ್ನ ಮನಸ್ಸಿನ ಸಮಾಧಾನವನ್ನೇಕೆ ಕೆಡಿಸಿಕೊಳ್ಳಲಿ?"- ಎಂದು ತಾಳ್ಮೆಯನ್ನು ತಂದು ಕೊಳ್ಳಬೇಕು. ಇದರಿಂದ ಕಾಮದ ಉಪಟಳವು ಕಡಿಮೆಯಾಗುವದು.**

ಮನುಷ್ಯನಿಗೆ ಮೂರು ಗುಣಗಳು ಸ್ವಭಾವದಿಂದಲೇ ಅಂಟಿಕೊಂಡಿರುವದರಿಂದ ಯಾವದಾದರೊಂದು ಗುಣವು ತನ್ನ ಕಾರ್ಯವನ್ನು ಬುದ್ಧಿಯಲ್ಲಿ ಉಂಟುಮಾಡಿಯೇ ತೀರಬೇಕಲ್ಲವೆ? ಆಗ ಹೊರಗಿನ ವಸ್ತುಗಳು ಆಯಾ ಪರಿಸ್ಥಿತಿಗನುಸಾರವಾಗಿ ಬೇಕೆಂದೂ ಬೇಡವೆಂದೂ ತೋರಬೇಕಲ್ಲವೆ? ಹೀಗಿರುವಲ್ಲಿ ನಿಸ್ತ್ರೈಗುಣ್ಯನಾಗುವದು ಅಥವಾ ನಿಷ್ಕಾಮನಾಗುವದು ಹೇಗೆ? ಎಂದು ಕೇಳಬಹುದು. ಅದಕ್ಕೆ ಉಪಾಯವನ್ನು 'ನಿತ್ಯಸತ್ತ್ವಸ್ಥಃ' ಎಂಬ ವಿಶೇಷಣದಿಂದ ಹೇಳಿರುತ್ತದೆ. ಸತ್ತ್ವವು ಶುದ್ಧಸತ್ತ್ವವೆಂದೂ ಮಿಶ್ರಸತ್ತ್ವವೆಂದೂ ಎರಡು ಬಗೆಯಾಗಿರುವದು. ಸತ್ತ್ವವು ರಜಸ್ತಮೋಗುಣಗಳಿಂದ ಕೂಡಿದ್ದರೆ ಮಿಶ್ರಸತ್ತ್ವವೆನಿಸುತ್ತದೆ. ನಾವು ಸಾಮಾನ್ಯವಾಗಿ ಸಾತ್ತ್ವಿಕರೆನ್ನುವ ಜನರಲ್ಲಿ ರಜಸ್ತಮೋಗುಣಗಳ ಸಂಬಂಧವು ತಕ್ಕಮಟ್ಟಿಗೆ ಇದ್ದೇ ಇರುತ್ತದೆ. ಮುಮುಕ್ಷುಗಳಾದವರು ತಮೋಗುಣದಿಂದಾಗುವ ನಿದ್ರಾಲಸ್ಯಾದಿಗಳನ್ನು ಚಟುವಟಿಕೆಯ ರೂಪವಾದ ರಜೋಗುಣದಿಂದ ಗೆದ್ದುಕೊಳ್ಳಬೇಕು; ರಜೋಗುಣದಿಂದಾಗುವ ಮನಸ್ಸಿನ ಚಾಂಚಲ್ಯವೇ ಮುಂತಾದದ್ದನ್ನು ಮೌನ, ತಪಸ್ಸು, ಧ್ಯಾನ,- ಮುಂತಾದ ಸಾತ್ತ್ವಿಕಸಾಧನಗಳಿಂದ ಗೆಲ್ಲಬೇಕು. ಹೀಗೆ ಯಾವನು ಯಾವಾಗಲೂ ಸತ್ತ್ವಗುಣ ಪ್ರಧಾನವಾದ ಸಾದನಗಳಲ್ಲಿಯೇ ನಿರತನಾಗಿರುವನೋ ಅವನನ್ನು ವ್ಯವಹಾರ ದೃಷ್ಟಿಯಿಂದ ನಿಸ್ತ್ರೈಗುಣ್ಯನಾದವನೆಂದು ಕರೆಯಬಹುದು.

"ನಿರ್ಯೋಗಕ್ಷೇಮಃ" ಎಂಬ ವಿಶೇಷಣವು ನಿಸ್ತ್ರೈಗುಣ್ಯನಾಗುವದಕ್ಕೆ ಒಂದು ಮುಖ್ಯಸಾಧನವನ್ನು ತಿಳಿಸಿಕೊಡುತ್ತದೆ. ಯೋಗವೆಂದರೆ ವಸ್ತುಗಳ ಪ್ರಾಪ್ತಿ, ಕ್ಷೇಮವೆಂದರೆ ಸಿಕ್ಕಿರುವದನ್ನು ಹೋಗದಂತೆ ಕಾಪಾಡಿಕೊಳ್ಳುವದು. 'ಇದನ್ನು ಸಂಪಾದಿಸಿಕೊಳ್ಳಬೇಕು. ಇದನ್ನು ಕಾಪಾಡಿಕೊಳ್ಳಬೇಕು" ಎಂಬ ಎರಡು ಮಾತುಗಳಲ್ಲಿ ನಮ್ಮ ಸಾಂಸಾರಿಕವ್ಯವಹಾರವನ್ನೆಲ್ಲ ಅಡಕಮಾಡಿಬಿಡಬಹುದು. "ನಾವು ಕ್ಷೇಮ, ನಿಮ್ಮ ಯೋಗಕ್ಷೇಮಕ್ಕೆ ಆಗಿಂದಾಗ್ಗೆ ಬರೆಯಿಸುತ್ತಾ ಇರಬೇಕು" ಎಂಬ ಪತ್ರದ

ಒಕ್ಕಣೆಯಲ್ಲಿ ಈ ಅರ್ಥವು ಎದ್ದು ಕಾಣಿಸುತ್ತಿರುತ್ತದೆ. ವ್ಯಾವಹಾರಿಕರಾದವರು ಯೋಗಕ್ಷೇಮವನ್ನು ನೋಡಿಕೊಳ್ಳುವದು ಯುಕ್ತವೇ ಆಗಿರುತ್ತದೆ; ಭಗವದ್ಗೀತೆಯು ಮುಮುಕ್ಷುಗಳಿಗಾಗಿ ಉಪದಿಷ್ಟವಾಗಿರುವದರಿಂದ ನಮ್ಮಂಥವರಿಗೆ ಅದರ ಉಪದೇಶವು ಏತಕ್ಕೂ ಬರುವದಿಲ್ಲವೆಂದು ತಿಳಿಯುವ ಹಾಗಿಲ್ಲ. ಏಕೆಂದರೆ ಜನರು ಅವರವರ ಸ್ವಭಾವಕ್ಕೆ ತಕ್ಕಂತೆ ಬೇರೆಬೇರೆಯ ಅಂತಸ್ತಿನಲ್ಲಿರುತ್ತಾರೆ. ಸಾಮಾನ್ಯರು ಲೌಕಿಕ ವ್ಯವಹಾರದಲ್ಲಿ ದಕ್ಷರಾಗಲು ಹವಣಿಸಬೇಕಾಗಿರುತ್ತದೆ. ಅದರಲ್ಲಿ ನೊಂದವರಿಗೆ ಜನ್ಮಾಂತರ ಲೋಕಾಂತರಗಳ ಸಂಬಂಧವುಳ್ಳ ಶಾಸ್ತ್ರೀಯಕರ್ಮವು ರುಚಿಸುತ್ತದೆ. ಆ ಬಳಿಕ ಮುಮುಕ್ಷುಗಳಾದವರಿಗೆ ಕರ್ಮಯೋಗವು ಬೇಕಾಗುತ್ತದೆ. ಕರ್ಮಯೋಗಕ್ಕೆ ಯೋಗ್ಯತೆಯಿಲ್ಲದಿದ್ದರೂ ಗೀತಾಶ್ರವಣವನ್ನು ಮಾಡುವದರಿಂದ ಪ್ರಯೋಜನವಿಲ್ಲದೆ ಹೋಗುವದಿಲ್ಲ. ಏಕೆಂದರೆ ಅದರಿಂದ ನಾವು ಒಂದು ಉತ್ಕೃಷ್ಟವಾದ ಗುರಿಯನ್ನಿಟ್ಟು ಕೊಂಡು ಅದನ್ನು ಮುಟ್ಟಲು ಪ್ರಯತ್ನವನ್ನು ಮಾಡುವೆವು. "ಆಶೆಯು ಕೆಟ್ಟದ್ದು, ಆಶೆಯುಳ್ಳವರು ಎಲ್ಲರಿಗೂ ಆಳಾಗಿರುತ್ತಾರೆ"- ಎಂಬ ಉಕ್ತಿಯನ್ನು ಮನದಂದರೆ ದುರಾಶೆಯನ್ನು ಬಿಡುವದಕ್ಕೂ ಬರುಬರುತ್ತಾ ಆಶೆಯನ್ನು ಹಿಡಿತದಲ್ಲಿಟ್ಟುಕೊಳ್ಳುವದಕ್ಕೂ ಪ್ರಯತ್ನಿಸುವರು. ಹೀಗೆಯೇ ದ್ವಂದ್ವಾತೀತರಾಗಬೇಕು, ಸತ್ತ್ವಸ್ಥರಾಗಬೇಕು- ಎಂಬುದೇ ಮುಂತಾದ ಉಪದೇಶಗಳಿಂದಲೂ ಸಾಮಾನ್ಯವ್ಯಾವಹಾರಿಕರಿಗೂ ಎಷ್ಟೋ ಪ್ರಯೋಜನವಿರುತ್ತದೆ.

ಇದಂತಿರಲಿ; ಈಗ ಪ್ರಕೃತಶ್ಲೋಕದ ಅರ್ಥವನ್ನು ಉಪಸಂಹಾರ ಮಾಡೋಣ. ಯಾರು ಆತ್ಮವಂತರಾಗಿರುವರೋ, ಎಂದರೆ ಎಚ್ಚರತಪ್ಪದೆ ಕರ್ಮಯೋಗದಲ್ಲಿ ನಿರತರಾಗಿರುವರೋ, ಅವರು ಯೋಗಕ್ಷೇಮಗಳ ಹಂಗನ್ನು ತೊರೆದು ಸತ್ತ್ವಗುಣ ನಿಷ್ಠರಾಗಿ ದ್ವಂದ್ವಗಳನ್ನು ಸಹಿಸಿಕೊಂಡು ತ್ರಿಗುಣಾತೀತರಾಗುವದಕ್ಕೆ ಒಂದೇ ಸಮನೆ ಪ್ರಯತ್ನಿಸುತ್ತಿರಬೇಕು. ಸಾಂಖ್ಯರಿಗೆ ಇದೆಲ್ಲವೂ ಜ್ಞಾನಬಲದಿಂದಲೇ ಸಿದ್ಧವಾಗಿರುತ್ತದೆ. ಅವರು ನಿತ್ಯಸತ್ಯರೂಪನಾದ ಆತ್ಮನಲ್ಲಿಯೇ ಇದ್ದುಕೊಂಡು ತ್ರಿಗುಣಗಳನ್ನೂ ದ್ವಂದ್ವ ಗಳನ್ನೂ ಯೋಗಕ್ಷೇಮಗಳನ್ನೂ ಅಸತ್ತೆಂದೇ ಅರಿತುಕೊಂಡುಬಿಟ್ಟಿರುವದರಿಂದ ಅವರು ಹೊಸದಾಗಿ ಸರಿಪಡಿಸಿಕೊಳ್ಳಬೇಕಾದದ್ದೇನೂ ಇರುವದಿಲ್ಲ. ಆದರೆ ಮುಂದೆ ದೊಡ್ಡ ಹುದ್ದೆಯನ್ನು ವಹಿಸಬೇಕಾಗಿರುವ ಉದ್ಯೋಗಸ್ಥನು ತರಬೇತಿಯಲ್ಲಿರುವಾಗ ಮುಂದೆ ತಾನು ಮಾಡಬೇಕಾಗುವದನ್ನೆಲ್ಲ ಈಗ ಪ್ರಯತ್ನಪೂರ್ವಕವಾಗಿ ಕಲಿಯು ತ್ತಿರುವಂತೆ ಕರ್ಮಯೋಗಿಯು ಸಾಂಖ್ಯದೃಷ್ಟಿಯನ್ನವಲಂಬಿಸಿದಾಗ ಸ್ವಭಾವಸಿದ್ಧವಾಗ ಬೇಕಾದದ್ದನ್ನು ಈಗ ಸಾಧನಮಾಡುತ್ತಿರುವನು.

ಮುಂದಿನ ಶ್ಲೋಕದಲ್ಲಿ ಜ್ಞಾನಿಯ ಲಕ್ಷಣವನ್ನು ಹೇಳಿರುವದು ಇದೇ ಕಾರಣದಿಂದ. ಈ ಪ್ರಕರಣವು ಜ್ಞಾನದ ಪ್ರಕರಣವಲ್ಲವಾದರೂ ಕರ್ಮಯೋಗವು ಇಂಥ ಜ್ಞಾನವನ್ನು ತಂದುಕೊಡುತ್ತದೆಯೆಂದು ಅದನ್ನು ಹೊಗಳುವದಕ್ಕಾಗಿ ಈ ಲಕ್ಷಣವನ್ನು ಹೇಳಿರುತ್ತದೆ: "ಎಲ್ಲೆಲ್ಲಿಯೂ ನೀರಿರುವ ದೊಡ್ಡ ಜಲಾಶಯದಲ್ಲಿ ಹೇಗೆ ಸಣ್ಣಪುಟ್ಟ ಕೆರೆಕುಂಟೆಗಳ ಪ್ರಯೋಜನವೆಲ್ಲವೂ ಅಡಕವಾಗಿರುವದೋ, ಹಾಗೆ ಸರ್ವವೇದೋಕ್ತಕರ್ಮಗಳ ಫಲವೂ ಜ್ಞಾನಿಗೆ ಆಗುವ ಫಲದಲ್ಲಿ ಅಡಕವಾಗಿರುತ್ತದೆ." ಈ ಶ್ಲೋಕದ ಅಭಿಪ್ರಾಯವನ್ನು ವಿವರಿಸುವಾಗ ಶ್ರೀಶಂಕರಾಚಾರ್ಯರು ಉಪ ನಿಷತ್ತಿನಲ್ಲಿ ಹೇಳಿರುವ ಒಂದು ದೃಷ್ಟಾಂತವನ್ನು ಉದಾಹರಿಸಿರುತ್ತಾರೆ. ಪೂರ್ವಕಾಲದಲ್ಲಿ ಆಡುತ್ತಿದ್ದ ಪಗಡೆಯ ಆಟದಲ್ಲಿ ಲೆತ್ತದಲ್ಲಿ ನಾಲ್ಕು ಕಡೆಗೂ ಕ್ರಮವಾಗಿ ೧, ೨, ೩, ೪, ಎಂಬ ಗರಗಳು ಇರುತ್ತಿದ್ದವು; ಇದಕ್ಕೆ ಕ್ರಮವಾಗಿ ಕಲಿ, ದ್ವಾಪರ, ತ್ರೇತಾ, ಕೃತ,- ಎಂಬ ಹೆಸರುಗಳಿದ್ದವು. ಕಲಿ, ದ್ವಾಪರ, ತ್ರೇತಾ-ಈ ಗರಗಳು ಬಿದ್ದವರಿಗೆ ಆಯಾ ಸಂಖ್ಯೆಯೇ ಬಿದ್ದಷ್ಟು ಫಲವಾಗುತ್ತಿತ್ತು; ಆದರೆ 'ಕೃತ' (೪) ಎಂಬ ಗರಬಿದ್ದವರಿಗೆ ಮಾತ್ರ ಅದರ ಕೆಳಗಿನ ಗರಗಳೂ ಸೇರಿ ಹೋಗುತ್ತಿದ್ದವು, ಎಂದರೆ ೪ + ೩ + ೨ + ೧ =೧೦ ಹತ್ತು ಬಿದ್ದಂತೆ ಎಣಿಕೆಯಾಗುತ್ತಿತ್ತು. ಈ ದೃಷ್ಟಾಂತದಲ್ಲಿ ಕೃತವೆಂಬ ಗರವನ್ನು ಗೆದ್ದುಕೊಂಡರೆ ಹೇಗೆ ಕೆಳಗಿನ ಗರಗಳು ತಾವೇ ಬಂದು ಸೇರಿಹೋಗುತ್ತವೆಯೋ, ಹಾಗೆಯೇ ಪರಮಾತ್ಮನ ಜ್ಞಾನವನ್ನು ಸಂಪಾದಿಸಿಕೊಂಡವನಿಗೆ ಕರ್ಮಗಳ ಫಲವೂ ಆ ಜ್ಞಾನಫಲದಲ್ಲಿಯೇ ಸೇರಿ ಹೋಗಿರುತ್ತದೆ-ಎಂಬುದು ಉಪನಿಷದ್ವಾಕ್ಯದ ಅರ್ಥ. ಜ್ಞಾನಿಯು ಯಾವ ವರ್ಣಾಶ್ರಮದಲ್ಲಿಯೇ ಇರಲಿ, ಅವನಿಗೆ ಅಲ್ಲಿಯೇ ಅಶ್ವಮೇಧಾದಿಕರ್ಮಗಳ ಫಲವು ಕೂಡ ಲಭಿಸುತ್ತದೆ. ಅರ್ಜುನ, ಜ್ಞಾನವು ಇಂಥ ಮಹಾಫಲವುಳ್ಳದ್ದು. ಆದ್ದರಿಂದ ನೀನು ಅದರ ಕಡೆಗೆ ಲಕ್ಷ್ಯವಿಟ್ಟು ಸಣ್ಣಪುಟ್ಟ ಫಲಗಳ ಆಸೆಯನ್ನು ತೊರೆದು ಕರ್ಮಯೋಗವನ್ನು ಮಾಡು. ಏಕೆಂದರೆ ಕರ್ಮಯೋಗವೇ ಈ ಜ್ಞಾನಕ್ಕೆ ತಕ್ಕ ಯೋಗ್ಯತೆಯನ್ನು ತಂದುಕೊಡುವದು ಎಂದು ಕರ್ಮಯೋಗವನ್ನು ಭಗವಂತನು ಹೊಗಳುತ್ತಿದಾನೆ. ಕರ್ಮಯೋಗವೂ ಈ ವಿಷಯದಲ್ಲಿ ಜ್ಞಾನದಂತೆಯೇ; ಅದಕ್ಕೆ ಆಯಾಸ ಕಡಿಮೆ, ಫಲ ಹೆಚ್ಚು-ಎಂಬುದು ಇದರಿಂದ ಸೂಚಿತವಾಗಿರುತ್ತದೆ.

ಈ ದಿನ ನಾವು ಕರ್ಮಯೋಗದ ಗುರಿಯನ್ನೂ ಅದರಲ್ಲಡಕವಾಗಿರುವ ತತ್ತ್ವವನ್ನೂ ಸ್ವಲ್ಪಮಟ್ಟಿಗೆ ತಿಳಿದದ್ದಾಯಿತು. ಇನ್ನು ಕರ್ಮಯೋಗದ ಶರೀರವನ್ನು ಸ್ವಲ್ಪಮಟ್ಟಿಗೆ ಪರಿಚಯಮಾಡಿಕೊಳ್ಳಬೇಕಾಗಿರುತ್ತದೆ.

# ೧೫. ಕರ್ಮಯೋಗದ ಸ್ವರೂಪ ೨-(೪೭-೪೯)

(೬.೧೦.೪೬)

ಜ್ಞಾನಿಯಂತೆ ಕರ್ಮಯೋಗಿಯೂ ನಿಸ್ತ್ರೈಗುಣ್ಯನಾಗಬೇಕೆಂದು ಭಗವಂತನು ಉಪದೇಶಿಸಿರುವದನ್ನು ಹಿಂದೆಯೇ ಹೇಳಿದ್ದಾಗಿದೆ. ಜ್ಞಾನಿಯು ತ್ರಿಗುಣಾತೀತನಾಗಿ ದ್ವಂದ್ವಗಳನ್ನು ಮೀರಿ ನಿತ್ಯಸತ್ತ್ವಸ್ಥನಾಗಿ ಆತ್ಮವಂತನಾಗಿರುವದು ಜ್ಞಾನನಿಷ್ಠೆಯ ಬಲದಿಂದ. ಆತ್ಮನನ್ನು ಬಿಟ್ಟರೆ ಮತ್ತೆ ಯಾವದೂ ಪರಮಾರ್ಥವಾಗಿಲ್ಲ ಎಂಬ ಉತ್ತಮವಾದ ತಿಳಿವಳಿಕೆಯ ಬಲದಿಂದ ಅವನು ಗುಣಗಳನ್ನೂ ಗುಣಗಳ ಕಾರ್ಯವಾದ ದ್ವಂದ್ವಗಳನ್ನೂ ಮೀರಿರುತ್ತಾನೆ. ಅವನ ದೃಷ್ಟಿಯಿಂದ ಅದೆಲ್ಲವೂ ಆತ್ಮನೇ ಆಗಿರುತ್ತದೆ. ಆದ್ದರಿಂದ ಅವನಿಗೆ ಗುಣಗಳ ಬಂಧವು ಒಂದಿಷ್ಟೂ ಇರುವ ದಿಲ್ಲ. ಕರ್ಮಯೋಗಿಗೆ ದ್ವೈತಜ್ಞಾನವಿದೆಯಾದರೂ ಅವನು ಗುಣಗಳನ್ನು ಒಂದೊಂದಾಗಿ ಗೆದ್ದುಕೊಳ್ಳುತ್ತಾನೆ; ಕೆಳಕೆಳಗಿನ ಗುಣವನ್ನು ಮೇಲುಮೇಲಿನ ಗುಣವನ್ನವಲಂಬಿಸಿ ಮೆಟ್ಟಿಹಾಕುತ್ತಾನೆ. ದ್ವಂದ್ವಗಳು ನಿತ್ಯಸತ್ತ್ವಸ್ಥನಾದ ಅವನನ್ನು ಕಾಡದೆ ಇರುತ್ತವೆ. ಜ್ಞಾನಿಯ ಆತ್ಮಜ್ಞಾನವು ಎಲ್ಲೆಲ್ಲಿಯೂ ನೀರಿರುವ ಜಲಾಶಯದಂತೆ ವಿಶಾಲವಾಗಿ ಎಲ್ಲದರ ತಿರುಳಾದ ಪರಮಾತ್ಮನನ್ನು ಸಾಕ್ಷಾತ್ಕಾರಮಾಡಿಕೊಟ್ಟಿರು ವದರಿಂದ ಜ್ಞಾನಿಗೆ ದೊರಕದೆ ಇರುವ ಫಲವೇ ಇಲ್ಲ; ವೇದದಲ್ಲಿ ಹೇಳಿರುವ ಕರ್ಮಗಳ ಫಲವೆಲ್ಲ ಆ ಜ್ಞಾನದ ಫಲದಲ್ಲಿ ಸೇರಿಹೋಗಿರುತ್ತದೆ. ಇದರಂತೆ ಕರ್ಮಯೋಗಿಯು ಮಾಡುವ ಕರ್ಮವೂ ಉಳಿದವರು ಮಾಡುವ ಬಿಡಿಬಿಡಿಯ ಕರ್ಮಗಳ ಫಲವನ್ನೆಲ್ಲ ತನ್ನಲ್ಲಿ ಅಡಕಮಾಡಿಕೊಂಡಿರುತ್ತದೆ. ಮಿಕ್ಕವರು ಮಾಡುವ ಕರ್ಮಕ್ಕೆ ಇಂತಿಷ್ಟೆಂಬ ಅಳತೆಯ ಸುಖವುಂಟಾಗುತ್ತದೆ; ಆದರೆ ಕರ್ಮಯೋಗಿಯ ಕರ್ಮಕ್ಕೆ ಚಿತ್ತಶುದ್ಧಿಯ ಮೂಲಕವಾಗಿ ದೊರೆಯುವ ಆನಂದವು ಮಿಕ್ಕ ಎಲ್ಲಾ ಸುಖಗಳನ್ನೂ ಮೀರಿಸುವದಾಗಿರುತ್ತದೆ. ಕರ್ಮಯೋಗಿಗೆ ಆ ಸುಖಗಳೆಲ್ಲ ತನ್ನ ಆನಂದದಲ್ಲಿಯೇ ಸೇರಿಹೋಗಿರುತ್ತವೆ ಎಂಬ ತೃಪ್ತಿಯಿರುತ್ತದೆ. ಹೀಗೆ ಸಾಂಖ್ಯದೃಷ್ಟಿ ಯಿಂದ ಜ್ಞಾನಯೋಗವನ್ನು ಹೊಂದಲಾರದ ಮುಮುಕ್ಷುಗಳು ಕರ್ಮಯೋಗದಿಂದಲೇ ಜ್ಞಾನಿಗೆ ದಕ್ಕುವ ಆನಂದವನ್ನು ಪಡೆಯುವ ಉಪಾಯವನ್ನು ಕೈಗೊಂಡಿದ್ದಾರೆ ಎಂದು ಹಿಂದಿನ ಉಪನ್ಯಾಸದಲ್ಲಿ ಹೇಳಿದ್ದಾಯಿತು. ಈಗ ಜ್ಞಾನಿಗೆ ಹೇಗೆ ಯಾವ ಕರ್ಮವೂ ಬಂಧಕವಾಗಿರುವದಿಲ್ಲವೋ ಹಾಗೆಯೇ ಕರ್ಮಯೋಗಿಗೂ ಬಂಧಕವಾಗುವದಿಲ್ಲ; ಜ್ಞಾನಿಯಂತೆ ಕರ್ಮಯೋಗಿಯೂ ಸಂಸಾರಬಂಧದಿಂದ ಬಿಡುಗಡೆಯಾಗುತ್ತಾನೆ-

ಎಂಬುದಕ್ಕೆ ಕಾರಣವನ್ನು ತಿಳಿಸುವದಕ್ಕಾಗಿ ಭಗವಂತನು ಕರ್ಮಯೋಗಿಯು ಅನುಸರಿಸುವ ಕರ್ಮಯೋಗದ ತತ್ತ್ವವನ್ನು ವಿವರಿಸುತ್ತಾನೆ.

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ ॥**(೨-೪೭)

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ॥**(೨-೪೮)

"ಅರ್ಜುನನೆ, ನಿನಗೆ ಕರ್ಮದಲ್ಲಿಯೇ ಅಧಿಕಾರವು, ಫಲಗಳಲ್ಲಿ ಎಂದಿಗೂ ಅಧಿಕಾರವಿರಬಾರದು, ನೀನು ಕರ್ಮಫಲಕ್ಕೆ ಹೇತುವಾಗಬಾರದು, ಅಕರ್ಮದಲ್ಲಿಯೂ ನಿನಗೆ ಸಂಗವು ಇಲ್ಲದಿರಲಿ. ಯೋಗದಲ್ಲಿದ್ದುಕೊಂಡು, ಸಂಗವನ್ನು ಬಿಟ್ಟು ಸಿದ್ಧಿಯಾಗಲಿ ಆಗದಿರಲಿ, ಸಮನಾಗಿದ್ದುಕೊಂಡು ಕರ್ಮಗಳನ್ನು ಮಾಡು. ಸಮತ್ವವೇ ಯೋಗವು" ಎಂಬುದು ಶ್ಲೋಕಗಳ ಅರ್ಥವು.

ಈ ಶ್ಲೋಕಗಳಲ್ಲಿ ಜ್ಞಾನಿಗಳಿಗೆ ಕರ್ಮವು ಏಕೆ ಬಂಧಕವಾಗಿಲ್ಲ?- ಎಂಬುದನ್ನೂ ಕರ್ಮಯೋಗಿಯು ಹೇಗೆ ಮಾಡಿದರೆ ಅವನಿಗೂ ಅದು ಬಂಧಕವಾಗುವದಿಲ್ಲವೆಂಬುದನ್ನೂ ಸೂತ್ರರೂಪವಾಗಿ ತಿಳಿಸಿರುತ್ತದೆ. ಇವುಗಳಲ್ಲಿ ಮೊದಲನೆಯ ಶ್ಲೋಕದ ನಾಲ್ಕು ಪಾದಗಳು ಕರ್ಮಯೋಗವೆಂಬ ಮಂಚಕ್ಕೆ ನಾಲ್ಕು ಕಾಲುಗಳು ಎಂದು **ಬಾಲಗಂಗಾಧರತಿಲಕ**ರವರು ತಮ್ಮ "ಗೀತಾರಹಸ್ಯದಲ್ಲಿ" ಬರೆದಿರುತ್ತಾರೆ. ಈಗ ಈ ಶ್ಲೋಕದ ಪಾದಗಳನ್ನು ಒಂದೊಂದಾಗಿ ವಿವರಣೆಗೆ ತೆಗೆದುಕೊಳ್ಳೋಣ.

"**ನಿನಗೆ ಕರ್ಮದಲ್ಲಿಯೇ ಅಧಿಕಾರವು.**" ಈ ವಾಕ್ಯದಲ್ಲಿ ಅರ್ಜುನನಿಗೆ ಭಗವಂತನು ಕರ್ಮವನ್ನು ಬಿಡಬಾರದೆಂದು ಒತ್ತಿಹೇಳಿರುತ್ತಾನೆ. ಜ್ಞಾನಿಗಳಿಗೆ ಆತ್ಮನನ್ನು ಬಿಟ್ಟರೆ ಮತ್ತೆ ಯಾವದೂ ಪರಮಾರ್ಥವಾಗಿರುವದಿಲ್ಲ; ಆದ್ದರಿಂದ ಆತ್ಮಸ್ವರೂಪವೇ ತಾವೆಂದು ನಿಶ್ಚಯಿಸಿಕೊಂಡಿರುವ ಅವರಿಗೆ ಯಾವ ಕರ್ಮವೂ ಇರುವದಿಲ್ಲ ಎಂದು ಹೇಳಿದೆ. ಇದರ ರಹಸ್ಯವನ್ನು ತಿಳಿಯಲಾರದೆ ಅಜ್ಞರೂ ಆಲಸರೂ ಆದವರು ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಕರ್ಮತ್ಯಾಗವನ್ನು ಮಾಡಿದರೆ ತಾವೂ ಜ್ಞಾನಿಗಳ ಮಟ್ಟಕ್ಕೆ ಏರಿದಂತಾಗುವದೆಂದು ಭಾವಿಸಿಕೊಳ್ಳಬಹುದು. ಇದು ಸರಿಯಲ್ಲ. ಯಾರಿಗೆ ಕರ್ತೃತ್ವಬುದ್ಧಿಯು ಬಲವಾಗಿರುವದೋ ಅಂಥ ರಾಜಸತಾಮಸ ಪ್ರಕೃತಿಯ ಜನರು ಸುಮ್ಮಸುಮ್ಮನೆ ಕರ್ಮಸಂನ್ಯಾಸವನ್ನು ಮಾಡಬಾರದು; ಅಂಥವರಿಗೆ ಕರ್ಮದಿಂದಲೇ ಶ್ರೇಯಸ್ಸಾಗುವದು ಎಂಬುದು ವಾಕ್ಯದ ಅಭಿಪ್ರಾಯ.

"ಫಲಗಳಲ್ಲಿ ಅಧಿಕಾರವಿರಬಾರದು" ಎಂಬ ವಾಕ್ಯವು ಅರ್ಜುನರಿಗೆ ಮತ್ತೊಂದು ಎಚ್ಚರಿಕೆಯನ್ನು ಕೊಡುತ್ತದೆ. ಕರ್ಮವನ್ನು ಮಾಡುವದು ಫಲಕ್ಕಾಗಿ; ಆದ್ದರಿಂದ ಕರ್ಮವನ್ನು ಮಾಡುವದರಿಂದಲೇ ಶ್ರೇಯಸ್ಸು ಎಂದರೆ, ಕರ್ಮಫಲವನ್ನು ಅನುಭವಿಸುವದೇ ಶ್ರೇಯಸ್ಕರವೆಂದು ಹೇಳಿದಂತೆ ಆಯಿತೆಂದು ಸಾಮಾನ್ಯಬುದ್ಧಿಯವರಿಗೆ ತೋಚುತ್ತದೆ. ಕರ್ಮಕ್ಕೆ ಫಲವನ್ನು ಶಾಸ್ತ್ರದಲ್ಲಿಯೇ ಹೇಳಿರುವದರಿಂದ ಕರ್ಮವನ್ನು ಮಾಡಿ ಫಲವನ್ನು ಹೊಂದುವದಕ್ಕೆ ಪ್ರಯತ್ನಿಸುವದು ತಪ್ಪಲ್ಲ; ಆದರೆ ಜ್ಞಾನಿಗಳಂತೆ ಕರ್ಮಬಂಧವನ್ನು ತಪ್ಪಿಸಿಕೊಳ್ಳಬೇಕು ಎಂದು ಹಾತುವರಿಯುತ್ತಿರುವ ಮುಮುಕ್ಷುಗಳು ಮಾತ್ರ ಫಲಕ್ಕೆ ಕೈನೀಡಬಾರದು. ಇದಕ್ಕಾಗಿಯೇ ಹಿಂದೆ ಕಾಮ್ಯಕರ್ಮಗಳನ್ನು ನಿಂದಿಸಿರುವದು. ಯಾರು ಫಲಕ್ಕಾಗಿಯೇ ಕರ್ಮವನ್ನು ಮಾಡುವರೋ ಅವರು ಕರ್ಮದ ಒಡೆಯರಾಗಿರುವದರ ಬದಲು ತಾವೇ ಕರ್ಮದ ಅಡಿಯಾಳಾಗುತ್ತಾರೆ. ಫಲದ ಆಶೆಯಿಂದ ಕರ್ಮವನ್ನು ಮಾಡಿದರೆ ಫಲವು ನಮ್ಮನ್ನು ಎಲ್ಲಿಗೆ ಒಯ್ಯುವದೋ ಅಲ್ಲಿಗೆ ಹೋಗುವ ಬಿಟ್ಟಿಯಾಳುಗಳಾಗುವೆವು. ಕಾಮ್ಯಕರ್ಮಗಳಿಂದ ಬೇರೆ ಬೇರೆಯ ಜನ್ಮಗಳುಂಟಾಗಿ ಆಯಾ ಫಲವನ್ನುಣ್ಣುವದು ಅನಿವಾರ್ಯವಾಗುತ್ತದೆ. ಆ ಜನ್ಮಗಳ ಹೊಸಹೊಣೆಗಾರಿಕೆಯೂ ತಪ್ಪಿದ್ದಲ್ಲ. ಇದನ್ನು ಸ್ಪಷ್ಟಪಡಿಸುವದಕ್ಕೆ ಒಂದು ಉಪಕಥೆಯನ್ನು ಹೇಳುವರು- ಒಂದೂರಿನಲ್ಲಿ ಒಬ್ಬ ನೇಯಿಗೆಯವನಿದ್ದನು. ಅವನಿಗೆ ಉದ್ಯೋಗದಿಂದ ಬರುವ ಉತ್ಪತ್ತಿಯು ಹೊಟ್ಟೆಬಟ್ಟೆಗೆ ನೇರವಾಗಿದ್ದರೂ ಎಷ್ಟು ವರ್ಷಗಳಾದರೂ ಹಣವು ಶೇಖರವಾಗಲಿಲ್ಲ. ಹೀಗಿರುವಲ್ಲಿ ಒಂದು ದಿನ ಅವನು ಒಂದು ಹಾಳು ಗೋಡೆಯ ಹತ್ತಿರ ಕುಳಿತಿರುವಾಗ "ಕ್ಯಾತಯ್ಯನ ಬಿಟ್ಟಿ ಮಾಡುವೆಯ?" ಎಂದು ಯಾರೋ ನುಡಿದಂತೆ ಆಯಿತು. ಗಾಬರಿಯಿಂದ ಮನೆಗೆ ಬಂದು ಈ ಅಶರೀರವಾಣಿಯನ್ನು ಕುರಿತು ಮನಸ್ಸಿನಲ್ಲಿ ಹೊರಳಿಸಿ ಹೊರಳಿಸಿ ನೋಡಿದ ಬಳಿಕ ಮಾರನೆಯ ದಿನವೂ ಅಲ್ಲಿಗೆ ಹೋದನು. ಮತ್ತೆ ಅದೇ ವಾಣಿಯು ಕೇಳಿಬಂತು. ನೇಯಿಗೆಯವನು ಕುತೂಹಲದಿಂದ "ಆಗಲಿ, ಮಾಡುತ್ತೇನೆ" ಎಂದು ಉತ್ತರವನ್ನು ಕೊಟ್ಟನೊ ಇಲ್ಲವೊ, ಕೂಡಲೆ ಹಾಳುಗೋಡೆಯಿಂದ ಒಂದು ಕೊಡ ಝಣ ಝಣ ಶಬ್ದವನ್ನು ಮಾಡುತ್ತಾ ಹೊರಕ್ಕೆ ಬಂತು. ಆಗ ನಸುಗತ್ತಲೆಯಾಗಿತ್ತು. ಅದನ್ನು ಮನೆಗೆ ತಂದು ಯಾರೂ ಕಾಣದಂತೆ ಮೊಹರು ಒಡೆದು ನೋಡುವಲ್ಲಿ ಅದರ ತುಂಬ ಹೊನ್ನುಗಳಿದ್ದವು. ಈ ಸೀಮೆಯನ್ನೇ ಬಿಟ್ಟು ಬೇರೆಯ ದೇಶಕ್ಕೆ ಹೋಗಿ ಅಲ್ಲಿ ಈ ಬಂಡವಾಳದ ಆಧಾರದಿಂದ ಹೊಸ ವ್ಯಾಪಾರವನ್ನೇ ಕೈಕೊಳ್ಳಬೇಕೆಂದು ಯೋಚಿಸಿ ಅವನು ಕೊಡವನ್ನು ಹೆಗಲಮೇಲೆ ಇರಿಸಿಕೊಂಡು ಜನರು ನಡೆಯುವ ದಾರಿಯನ್ನು ಬಿಟ್ಟು ಕಾಡೆನ್ನದೆ ಮೇಡೆನ್ನದೆ ಒಂದೇ ಸಮನೆ ಒಂದು ದಿನವೆಲ್ಲ ನಡೆದು ಬಹಳ

ಆಯಾಸದಿಂದ ಸಂಜೆಯ ಹೊತ್ತಿಗೆ ಒಂದು ಹಳ್ಳಿಯ ಮುಂದಿನ ದೇವಸ್ಥಾನದ ಜಗಲಿಯ ಮೇಲೆ ಇಳಿದುಕೊಂಡನು. ಊರೊಳಗೆಲ್ಲ ಸುತ್ತಿಸುತ್ತಿ ಯಾರನ್ನು ಕೇಳಿದರೂ ಆ ರಾತ್ರೆ ತಂಗುವದಕ್ಕೆ ಸ್ಥಳನ್ನು ಕೊಡದೆಹೋದರು; ಕೊನೆಗೆ ಒಬ್ಬ ಮಹಾಶಯನು ತಮ್ಮ ಚಿಕ್ಕ ಮನೆಯಲ್ಲಿ ಸ್ಥಳವೇನೂ ಇಲ್ಲವಾದರೂ ದನದ ಕೊಟ್ಟಿಗೆಯಲ್ಲಿ ಬೇಕಾದರೆ ಮಲಗಿದ್ದು ಬೆಳಗ್ಗೆ ಎದ್ದು ಹೋಗಬಹುದೆಂದು ಅನುಮತಿಯಿತ್ತನು. ವಿಜನವಾದ ಸ್ಥಳವೇ ದೊರೆತಂತೆ ಆಯಿತೆಂದು ಹಿಗ್ಗಿದ ನೇಯಿಗೆಯವನು ರಾತ್ರಿ ಊಟವನ್ನು ಕೂಡ ಮಾಡದೆ ಆಯಾಸದಿಂದ ಆ ಕೊಟ್ಟಿಗೆಯಲ್ಲಿಯೇ ನಿದ್ರೆಯ ವಿಶ್ರಾಂತಿಯನ್ನು ಹೊಂದಿದನು. ಮನೆಯ ಯಜಮಾನನು ಮನೆಯ ಹೊರಬಾಗಿಲು, ಕೊಟ್ಟಿಗೆ ಮುಂತಾದವುಗಳನ್ನೆಲ್ಲ ತಾನೇ ನೋಡಿಯೇ ಮಲಗಿಕೊಳ್ಳುವ ಪದ್ಧತಿಯಂತೆ ಆ ದಿನವೂ ಬಂದು ನೋಡುವಲ್ಲಿ ನೇಯಿಗೆಯವನು ನಿದ್ರಿಸುತ್ತಿದ್ದುದನ್ನೂ ಅವನ ತಲೆದಸಿಯಲ್ಲಿ ಒಂದು ಕೊಡವಿದ್ದದ್ದನ್ನೂ ಕಂಡು ಕೌತುಕದಿಂದ ಕೊಡವನ್ನು ಎತ್ತಿಕೊಂಡು ಒಳಕ್ಕೆ ಹೋಗಿ ನೋಡಿದನು. ಅದರ ತುಂಬ ಹೊನ್ನುಗಳಿದ್ದದ್ದನ್ನು ಕಂಡು ಅವನಿಗೆ ಆದ ಆನಂದಕ್ಕೆ ಪಾರವೇ ಇಲ್ಲ. ಇತ್ತ ನೇಯಿಗೆಯವನು ಮುಂಜಾವಕ್ಕೇ ಎದ್ದು ತನ್ನ ಪಯಣವನ್ನು ಮುಂದುವರಿಯಿಸಬೇಕೆಂದು ನೋಡುತ್ತಾನೆ, ಹೊನ್ನಿನ ಕೊಡವು ಮಾಯವಾಗಿಬಿಟ್ಟಿದೆ! ಅತ್ಯಂತದುಃಖಾಕ್ರಾಂತನಾಗಿ ಅವನು ಕೂಡಲೆ ಗಟ್ಟಿಯಾಗಿ ಅಳುವದಕ್ಕೆ ಮೊದಲು ಮಾಡಿದನು. ನೆರಹೊರೆಯವರೆಲ್ಲರೂ ಗದ್ದಲವೇನೆಂದು ವಿಚಾರಿಸುವದಕ್ಕೆ ಬಂದರು. ಆಗ ನಡೆದ ಜನರ ಮಾತುಕಥೆಯಲ್ಲಿ ಮನೆಯ ಯಜಮಾನನ ಹೆಸರು "ಕ್ಯಾತಯ್ಯ" ಎಂಬುದು ನೇಯಿಗೆಯವನ ಕಿವಿಗೆ ಬಿತ್ತು. ಅಶರೀರವಾಣಿಯು ನುಡಿದಂತೆ ತಾನು 'ಕ್ಯಾತಯ್ಯನ ಬಿಟ್ಟಿಯನ್ನು ಮಾಡುವದಕ್ಕೇ' ಇಷ್ಟೆಲ್ಲ ಮಾಡಿದೆನಲ್ಲ!- ಎಂದು ಆ ಬಡಪಾಯಿಯು ತನ್ನಲ್ಲಿ ತಾನೇ ನಾಚಿಕೊಂಡು ಅಲ್ಲಿ ನಿಲ್ಲದೆ ಕೂಡಲೆ ಊರಿನ ಕಡೆಗೆ ಹಿಂತಿರುಗಿಬಿಟ್ಟನು! ಫಲಕ್ಕಾಗಿ ಕರ್ಮವನ್ನು ಮಾಡುವವರೆಲ್ಲರೂ ಹೀಗೆಯೇ ಕ್ಯಾತಯ್ಯನ ಬಿಟ್ಟಿಯನ್ನು ಮಾಡುತ್ತಿರುತ್ತಾರೆ. ಯಾರು ಈ ಬಿಟ್ಟಿಯ ಕೆಲಸಕ್ಕೆ ಬೇಸತ್ತಿರುವರೋ ಅವರು ಫಲದಾಸೆಗೆ ಒಳಗಾಗದೆ ಕರ್ಮಯೋಗವನ್ನು ಕೈಕೊಳ್ಳುತ್ತಾರೆ.

**"ಕರ್ಮಫಲಹೇತುವಾಗಬೇಡ"** ಎಂಬ ಮೂರನೆಯ ವಾಕ್ಯದ ಅರ್ಥವನ್ನು ಇದರಿಂದಲೇ ವಿವರಿಸಿದಂತೆ ಆಯಿತೆಂದು ತಿಳಿಯಬೇಕು. ಏಕೆಂದರೆ ಯಾರು ಫಲದಾಸೆಯಿಂದ ಕರ್ಮವನ್ನು ಮಾಡುವರೋ ಅವರು ಕರ್ಮಫಲಕ್ಕೆ ಹೇತುವಾಗುವರು, ಎಂದರೆ ಜನ್ಮಾಂತರವನ್ನು ಪಡೆದು ಶರೀರವನ್ನು ಧರಿಸುವದಕ್ಕೆ ಗುತ್ತಿಗೆಯನ್ನು ಹೊತ್ತವರಾಗುವರು. ಈ ಸಂಸಾರದ ಲಕ್ಷಣವೇನು? ಇದರಿಂದ

ಬಿಡುಗಡೆ ಹೇಗಾಗುವದು?-ಎಂಬುದನ್ನು ತಿಳಿಸುವದಕ್ಕೆ **ನ್ಯಾಯಸೂತ್ರದಲ್ಲಿ** ಹೀಗೆಂದು ಹೇಳಿರುತ್ತದೆ: "ದುಃಖಜನ್ಮಪ್ರವೃತ್ತಿದೋಷಮಿಥ್ಯಾಜ್ಞಾನಾನಾಮುತ್ತರೋತ್ತರಾಪಾಯೇ ತದನಂತರಾಪಾಯಾದಪವರ್ಗಃ" ಮನುಷ್ಯನಿಗೆ ತಪ್ಪುತಿಳಿವಳಿಕೆಯಿಂದ ರಾಗದ್ವೇಷ ಗಳುಂಟಾಗುವವು; ಈ ದೋಷಗಳಿಂದ ಮನುಷ್ಯನು ಕರ್ಮಗಳಲ್ಲಿ ತೊಡಗುತ್ತಾನೆ; ಆ ಕರ್ಮಗಳ ಫಲವನ್ನು ಉಪಭೋಗಿಸುವದಕ್ಕಾಗಿ ಮತ್ತೊಂದು ಜನ್ಮವನ್ನು ಪಡೆದು ಅಲ್ಲಿಯ ಸಂಸಾರದುಃಖವನ್ನು ಅನುಭವಿಸುತ್ತಾನೆ. ಆದ್ದರಿಂದ ಯಾರಿಗೆ ರಾಗ ದ್ವೇಷಗಳಿರುವವೋ ಅವರು ಯಾವದಾದರೊಂದು ಇಷ್ಟವಾದ ಫಲವನ್ನು ದೊರಕಿಸಿ ಕೊಳ್ಳುವದಕ್ಕೂ ಅನಿಷ್ಟವಾದದ್ದನ್ನು ತೊಲಗಿಸಿಕೊಳ್ಳುವದಕ್ಕೂ ಅವಶ್ಯವಾಗಿ ಕರ್ಮಗಳನ್ನು ಮಾಡುವರು, ಜನ್ಮಾಂತರದುಃಖವನ್ನೂ ಹೊಂದುವರು. ಆದ್ದರಿಂದ "ಅರ್ಜುನ, ಬಿಟ್ಟಿಯ ಕೆಲಸವನ್ನು ಮಾಡುವ ಕಾಮ್ಯಕರ್ಮಕ್ಕೆ ಕೈಹಾಕದಿರು" ಎಂಬುದು ವಾಕ್ಯದ ಅರ್ಥವು.

"ಹಾಗಾದರೆ ಕರ್ಮವನ್ನೇ ಬಿಟ್ಟರಾಯಿತು; ಕರ್ಮವೇ ಅಲ್ಲವೇ, ನಮ್ಮನ್ನು ಫಲದಾಸೆಯ ಗುಂಡಿಯಲ್ಲಿ ಕೆಡಹುವದು?" ಎಂದು ಅಕರ್ಮದಲ್ಲಿ ಆಸಕ್ತಿಯುಂಟಾಗ ಬಹುದು. ಇದನ್ನು ತೊಲಗಿಸುವದಕ್ಕಾಗಿ **"ಅಕರ್ಮದಲ್ಲಿ ನಿನಗೆ ಎಂದೂ ಸಂಗವು ಆಗದಿರಲಿ"** ಎಂದು ಭಗವಂತನು ಎಚ್ಚರಿಕೆಯನ್ನು ಕೊಟ್ಟಿರುತ್ತಾನೆ. ಕರ್ಮ ವನ್ನು ಮೀರುವ ಸಾಂಖ್ಯಕ್ಕೂ ಅಕರ್ಮದಲ್ಲಿ ಸಕ್ತನಾಗುವ ಹೇಡಿತನಕ್ಕೂ ಅಜಗಜಾಂತರ ವಿದೆ. ಆದ್ದರಿಂದ ಸಾಂಖ್ಯದೃಷ್ಟಿಯನ್ನು ಕ್ರಮಕ್ರಮವಾಗಿ ಸಂಪಾದಿಸಬೇಕೆಂಬವನು ಎಂದಿಗೂ ಅಕರ್ಮದ ಪ್ರೇಮಕ್ಕೆ ವಶನಾಗಬಾರದು.

ಹೀಗೆ ಕರ್ಮಯೋಗವನ್ನು ಮಾಡಬೇಕೆನ್ನುವವನು ತನ್ನ ಎಲ್ಲೆಕಟ್ಟನ್ನು ಮೀರದಂತೆ ನಾಲ್ಕು ದಿಕ್ಕಿನಲ್ಲಿಯೂ ಈ ಬೇಲಿಗಳನ್ನು ಹಾಕಿಕೊಂಡಿರಬೇಕು. **ಕರ್ಮಯೋಗ ವೆಂಬುದು ಒಂದು ಕುಶಲವಿದ್ಯೆ.** ಅದರಲ್ಲಿ ಫಲಾಸಕ್ತಿಯಿಲ್ಲದಿರಬೇಕು ಎಂಬುದು ಮೂಲಮಂತ್ರ ವಾಗುತ್ತದೆ. ಕರ್ಮವನ್ನು ಮಾಡಿದರೆ ಫಲವು ಉಂಟಾಗದೆ ಇರುವದೆ?- ಎಂದು ಯಾರಾದರೂ ಕೇಳಬಹುದು. ಉಂಟಾಗಲಿ, ಆದರೆ ಕರ್ಮಯೋಗಿಯು ಅದರಲ್ಲಿ ಸಕ್ತನಾಗಿರುವದು ಬೇಡ; ಅದಕ್ಕಾಗಿಯೇ ಕರ್ಮವನ್ನು ಮಾಡುವದು ಬೇಡ. ಈ ಅಭಿಪ್ರಾಯವನ್ನು ಮುಂದಿನ ಶ್ಲೋಕದಲ್ಲಿ ಸ್ಪಷ್ಟಪಡಿಸಿರುತ್ತದೆ. ಕರ್ಮಗಳನ್ನು ಮಾಡಲೇಬೇಕು, ಫಲಕ್ಕೆ ವಶನಾಗಬಾರದು. ಇದು ಹೇಗೆ? ಎನ್ನುವೆಯಾ? "ಅರ್ಜುನ, ಯೋಗದಲ್ಲಿದ್ದುಕೊಂಡು ಅಸಕ್ತನಾಗಿರು, ಬರಿಯ ಕರ್ಮವನ್ನು ಮಾಡಿದರೆ ಫಲದ ಅಂಟು ತಪ್ಪಲಾರದು; ಆದರೆ ಯೋಗದಲ್ಲಿದ್ದು ಕೊಂಡರೆ ಸಂಗವುಂಟಾಗುವದಿಲ್ಲ. ಕರ್ಮಧ ಫಲವು, ಸಿದ್ಧಿಯಾಗಲಿ ಸಿದ್ಧಿಯಾಗದಿರಲಿ,

ಮನಸ್ಸು ಒಂದೇ ಸಮವಾದ ಸ್ಥಿತಿಯಲ್ಲಿರಬೇಕು. ಸಮನಾಗಿ ಏರುಪೇರಿಲ್ಲದೆ ಇರುವದೇ **ಯೋಗವು**" ಎಂದು ಭಗವಂತನು ಉಪದೇಶಿಸಿರುತ್ತಾನೆ. ಕರ್ಮಯೋಗ ದಲ್ಲಿ ಸಂಗವಿಲ್ಲದಿರುವದೆಂಬುದು ಬಹಳ ಮುಖ್ಯವು. ಕರ್ಮಸಂಗ, ಫಲಸಂಗ-ಎರಡೂ ಸಂಗವೇ. "ಈ ಕರ್ಮವು ನನ್ನ ಕರ್ಮವು; ಇದು ನೆರವೇರಿದರೆ ನಾನು ಬದುಕಿದೆ, ಇಲ್ಲದಿದ್ದರೆ ಕೆಟ್ಟೆ. ಇದಕ್ಕೆ ಯಾರೊಬ್ಬರೂ ಅಡ್ಡಬರಬಾರದು, ಯಾವ ಅಡ್ಡಿಯೂ ಇಲ್ಲದೆ ಈ ಕರ್ಮವನ್ನು ಮಾಡುವೆನು" ಎಂಬುದು **ಕರ್ಮಸಂಗವು**. "ಈ ಫಲಕ್ಕಾಗಿಯೇ ಕರ್ಮವನ್ನು ಮಾಡುವೆನು, ಈ ಫಲವಾಗದಿದ್ದರೆ ಕರ್ಮದಿಂದ ತಾನೆ ಆಗತಕ್ಕದ್ದೇನು?" ಎಂದು ಫಲದಲ್ಲಿ ಮನಸ್ಸು ಅಂಟಿಕೊಂಡಿರುವದು **ಫಲಸಂಗವು**. ಕರ್ಮಸಂಗವಾಗಲಿ, ಅಕರ್ಮಸಂಗವಾಗಲಿ, ಫಲಸಂಗವಾಗಲಿ, ಫಲಭೋಗ ಸಂಗವಾಗಲಿ-ಯಾವದೊಂದು ಸಂಗವೂ ಇರಲೇಬಾರದು. ಹಾಗೆ ಮಾಡುವದು ಕರ್ಮಯೋಗವು. ಗೀತೆಯಲ್ಲಿ **ಅನಾಸಕ್ತಿಯೋಗ**ವನ್ನು ಹೇಳಿದೆ ಎಂದು ಮಹಾತ್ಮ ಗಾಂಧಿಯವರು ಅಭಿಪ್ರಾಯಪಟ್ಟಿರುವದನ್ನು ನಾವುಗಳು ಮನಸ್ಸಿಗೆ ತಂದುಕೊಳ್ಳ ಬಹುದು. ವ್ಯವಹಾರದ ಕರ್ಮ ಗಳನ್ನೂ ಅವರು ಅನಾಸಕ್ತಿಯೋಗವಾಗಿ ಹೇಗೆ ತಿರುಗಿಸಿಕೊಂಡಿರುವರೆಂಬುದನ್ನು ನಾವು ಲಕ್ಷ್ಯವಿಟ್ಟು ನೋಡುವದು ಲಾಭದಾಯಕ ವಾಗಿರುವದು. ಇದನ್ನೇ ಇಲ್ಲಿ ಭಗವಂತನು **ಯೋಗಬುದ್ಧಿ**ಯೆಂದು ವರ್ಣಿಸುತ್ತಿರುವದು.

ಈ ಬುದ್ಧಿಯಿಂದ ಕೂಡಿದ ಕರ್ಮವು ಹೆಚ್ಚಿನ ಕರ್ಮವು. ಇದರ ಸಂಬಂಧವಿಲ್ಲದೆ ಮಾಡುವ ಕರ್ಮವು **ಅವರಕರ್ಮವು**, ಕೀಳುಕರ್ಮವು. ಯಾರು ಫಲಹೇತು ಗಳಾಗಿರುವರೋ, ಫಲಕ್ಕಾಗಿ ಕರ್ಮವನ್ನು ಮಾಡಿ ಸಂಸಾರದಲ್ಲಿ ತೊಳಲುವದಕ್ಕೆ ತಾವೇ ಕಾರಣವನ್ನು ಕಲ್ಪಿಸಿಕೊಳ್ಳುತ್ತಿರುವರೋ, ಅವರು ಕೃಪಣರು. ಅವರಿಗೆ ಪುಣ್ಯಫಲವೋ ಪಾಪಫಲವೋ ತಪ್ಪದೆ ಗಂಟುಬಿದ್ದಿರುತ್ತದೆ. ಕಸ್ತೂರಿಯಿರುವಲ್ಲಿ ವಾಸನೆಯಿರಬಾರದೆಂದರೆ ಆದೀತೇ? ಆದರೆ ಯಾವನಿಗೆ ಈ ಸಮತ್ವರೂಪವಾದ ಯೋಗಬುದ್ಧಿಯು ಅಳವಟ್ಟಿರುವದೋ ಅವನು ಪಾಪಪುಣ್ಯಗಳ ತೊಡಕನ್ನು ಬಿಡಿಸಿಕೊಳ್ಳುತ್ತಾನೆ. ಕರ್ಮವೆಂಬುದೆಲ್ಲವೂ ಬಂಧಕವಾಗಿರುವದಿಲ್ಲ; ಯಾವನು ಕರ್ಮಾಸಕ್ತನಾಗಿರುವನೋ ಯಾವನು ಫಲಾಸಕ್ತನಾಗಿರುವನೋ ಅವನ ಕರ್ಮವು ಮಾತ್ರ ಬಂಧಕವು. ಯೋಗಬುದ್ಧಿಯಿಂದ ಕರ್ಮವನ್ನು ಮಾಡುವದೆಂಬುದೊಂದು ಕುಶಲವಿದ್ಯೆ. ಬಣ್ಣದಲ್ಲಿ ಪೊರಕೆಯನ್ನು ಅದ್ದಿ ಗೋಡೆಯ ಮೇಲೆ ಎಳೆದರೆ ಅಸಹ್ಯವಾದ ಬರೆಬರೆಯಾದ ಗೀಟುಗಳು ಕಾಣಿಸಿಕೊಳ್ಳುವವು. ಆದರೆ ಕುಶಲನಾದ ಚಿತ್ರಗಾರನು ತೂಲಿಕೆಯಿಂದ ಬರೆದ ಗೀಟುಗಳು ಬಳ್ಳಿಗಳಾಗಿಯೂ, ಹಕ್ಕಿಗಳಾಗಿಯೂ, ಮನುಷ್ಯರಾಗಿಯೂ ಕಾಣಿಸಿಕೊಳ್ಳುವವು! ಇದರಂತೆ ಕುಶಲನಾದ ಕರ್ಮಯೋಗಿಯು

ಫಲಸಂಗವೆಂಬ ದೋಷವನ್ನು ಕಳೆದು ಮಾಡುವ ಕರ್ಮವು ಅಂತಃಕರಣಭಿತ್ತಿಯ ಮೇಲೆ ಉತ್ತಮವಾದ ಚಿತ್ರವೊಂದನ್ನು ಮೂಡಿಸುವದು. ಅವನು ಕರ್ಮದಿಂದ ಆಗುವ ಶುಭಾಶುಭಫಲಗಳನ್ನು ಮೀರಿ ಜನ್ಮಬಂಧದಿಂದ ಬಿಡುಗಡೆಯನ್ನು ಹೊಂದಿ ನಿತ್ಯನಿರತಿಶಯವಾದ ನಿರ್ದುಷ್ಟವಾದ ಕೈವಲ್ಯಾನಂದವನ್ನು ಪಡೆಯುವನು.

ಕರ್ಮಫಲದಲ್ಲಿ ಅನಾಸಕ್ತನಾಗಿ ಸಮತೆಯಿಂದ ಕರ್ಮಯೋಗವನ್ನು ಮಾಡುವದು ಹೇಗೆ ಸಾಧ್ಯವಾಗುವದೆಂಬುದನ್ನು ಗೀತೆಯಲ್ಲಿ ಮುಂದೆ ವಿವರಿಸಲಾಗುವದು. ಇದರಲ್ಲಿ ಭಗವಂತನನ್ನು ಕೇಂದ್ರವಾಗಿಟ್ಟುಕೊಂಡು ಕರ್ಮಮಾಡುವದೆಂಬ ಅಂಶವನ್ನು ಭಕ್ತಿಯೋಗವೆಂದು ಕರೆಯುತ್ತಾರೆ. ಅದನ್ನು ಈಗಲೇ ಲಕ್ಷ್ಯದಲ್ಲಿಟ್ಟು ಎರಡು ಮಾತುಗಳನ್ನು ಹೇಳುವೆನು. ಧರ್ಮಾಧರ್ಮರೂಪವಾಗಿರುವ ಕರ್ಮಬಂಧವನ್ನು ತಪ್ಪಿಸಿಕೊಳ್ಳುವದಕ್ಕೆ ಗೀತಾಶಾಸ್ತ್ರದಲ್ಲಿ ಎರಡು ಉಪಾಯಗಳನ್ನು ಹೇಳಿರುತ್ತದೆ. ಜ್ಞಾನಿಯಾದವನು ಆತ್ಮನೊಬ್ಬನೇ ಪರಮಾರ್ಥಸತ್ಯವೆಂಬುದನ್ನು ನಿಸ್ಸಂಶಯವಾಗಿ ಮನದಟ್ಟುಮಾಡಿಕೊಂಡು ವ್ಯವಹರಿಸುತ್ತಾನೆ. ಎಲ್ಲವೂ ತೋರಿಕೆ, ಇದರ ತಿರುಳೆಲ್ಲವೂ ಪರಮಾತ್ಮನೇ- ಎಂಬ ತಿಳಿವಳಿಕೆಯಿಂದ ಅವನಿಗೆ ಧರ್ಮಾಧರ್ಮಗಳ ಬಂಧವು ಇಲ್ಲವಾಗುವದು. ಜ್ಞಾನಿಯಲ್ಲಿ ಯಾವ ಕರ್ತೃತ್ವವೂ ಇಲ್ಲ, ಆದ್ದರಿಂದ ಭೋಕ್ತೃತ್ವವೂ ಇಲ್ಲ. ಅವನಿಗೆ ಕರ್ಮದ ಸಂಗವಾಗಲಿ ಫಲದ ಸಂಗವಾಗಲಿ ಇರುವದೆಂದು ಹೇಳುವದು ಎಚ್ಚೆತ್ತವನಿಗೆ ಕನಸಿನ ಕರ್ಮಫಲಗಳ ಸೋಂಕು ಇನ್ನೂ ಇದೆ ಎಂದಂತೆಯೇ ಸರಿ. ಇದು ಸಾಂಖ್ಯಬುದ್ಧಿಯನ್ನವಲಂಬಿಸಿ ಕರ್ಮವನ್ನು ಮೀರುವ ಉಪಾಯ. ಇನ್ನು ಕರ್ಮಯೋಗವೆಂಬ ಎರಡನೆಯ ಉಪಾಯವನ್ನು ಅವಲಂಬಿಸುವವರಿಗೆ ಕರ್ತೃತ್ವಬುದ್ಧಿಯು ಇದ್ದೇ ಇರುತ್ತದೆಯಾದರೂ ಅವರು "ಇದೆಲ್ಲವೂ ಭಗವಂತನದೇ; ನಾನು ಆತನ ಭೃತ್ಯನಂತೆ ಕರ್ಮವನ್ನು ಮಾಡುತ್ತಿದ್ದೇನೆ, ಈ ಕರ್ಮಗಳ ಫಲದಲ್ಲಿ ನನಗೆ ಯಾವ ಭಾಗವೂ ಇರುವದಿಲ್ಲ" ಎಂದು ಸರ್ವದಾ ಮನಸ್ಸಿನಲ್ಲಿ ಭಾವಿಸುತ್ತಿರುವರು. ಅವರಿಗೂ ಜನ್ಮಬಂಧವಿಲ್ಲ.

ಮನುಷ್ಯನಿಗೆ ಅನೇಕ ಜನ್ಮಗಳುಂಟೆಂಬುದನ್ನು ಮುಸಲ್ಮಾನ್, ಕ್ರಿಸ್ತಿಯನ್ ಮುಂತಾದ ಕೆಲವು ಮತಗಳಲ್ಲಿ ಒಪ್ಪಿರುವದಿಲ್ಲ. ಆದರೆ ನಾವು ಮಾಡುವ ಕರ್ಮಕ್ಕೆ ಅನುಗುಣವಾಗಿ ಫಲವು ಈ ಜನ್ಮದಲ್ಲಲ್ಲದಿದ್ದರೆ ಮತ್ತೊಂದು ಜನ್ಮದಲ್ಲಿಯಾದರೂ ಆಗುವದೆಂದು ನಂಬುವವರಿಗೆ ಪಾಪದ ಅಂಜಿಕೆಯೂ ಪುಣ್ಯಫಲದಲ್ಲಿ ಭರವಸೆಯೂ ಸಹಜವಾಗಿ ಉಂಟಾಗುತ್ತವೆ ಎಂಬುದನ್ನು ನಾವು ಲಕ್ಷ್ಯದಲ್ಲಿಡಬೇಕು. ದಯಾಮಯನಾದ ಈಶ್ವರನು ಒಂದೇ ಒಂದು ಜನ್ಮದಲ್ಲಿ ನಮ್ಮನ್ನು ಪರೀಕ್ಷೆಮಾಡಿ ಸ್ವರ್ಗಕ್ಕೋ ನರಕಕ್ಕೋ ಹಾಕಿಬಿಡುವನೆನ್ನುವದಕ್ಕಿಂತ, ಒಂದಲ್ಲ ಒಂದು ಜನ್ಮದಲ್ಲಿ ಜನರು

ಪುಣ್ಯವನ್ನು ಮಾಡಿ ಬದುಕಿಕೊಳ್ಳಲಿ ಎಂದು ಅವಕಾಶವನ್ನು ಕಲ್ಪಿಸಿರುತ್ತಾನೆಂದು ನಂಬುವದು ಈಶ್ವರನ ವಿಷಯದಲ್ಲಿಯೂ ಹೆಚ್ಚು ಉದಾರವಾದ ಕಲ್ಪನೆಯನ್ನು ಮಾಡಿಕೊಂಡಂತೆ ಆಗುವದು. ಈ ಜನ್ಮದಲ್ಲಿ ಜನರುಗಳಲ್ಲಿ ಕಾಣುವ ಮನಸ್ಸಿನ ಸ್ವಭಾವವೈಚಿತ್ರ್ಯವು ಹಿಂದಿನ ಜನ್ಮದ ಸಂಸ್ಕಾರದ ಫಲವೆಂದು ನಂಬುವದೂ ಯುಕ್ತಿಯುಕ್ತವಾಗಿರುತ್ತದೆ. ಇಲ್ಲದಿದ್ದರೆ ಪರಮೇಶ್ವರನೇ ಒಬ್ಬೊಬ್ಬರನ್ನು ಒಂದೊಂದು ಬಗೆಯಾಗಿ ಸೃಷ್ಟಿಸುತ್ತಾನೆಂದು ಆತ್ಮನಲ್ಲಿ ಪಕ್ಷಪಾತದೋಷವನ್ನು ಆರೋಪಿಸಿದಂತೆ ಆಗುತ್ತದೆ. ಈ ಎಲ್ಲಾ ಕಾರಣಗಳಿಂದ ಜನ್ಮಾಂತರವುಂಟೆಂದು ನಂಬುವದು ಯುಕ್ತಿ ವಿರುದ್ಧವೇನೂ ಅಲ್ಲವೆಂದು ಏರ್ಪಡುತ್ತದೆ. ಇದು ಶ್ರುತಿಸ್ಮೃತಿಸಿದ್ಧವೂ ಆದ ನಂಬಿಕೆ ಯಾಗಿರುವವರಿಂದ ಆಸ್ತಿಕರಿಗೆಲ್ಲ ಉಪಾದೇಯವೂ ಆಗಿರುತ್ತದೆ.

ಹುಟ್ಟುವದು, ಸಾಯುವದು, ಮತ್ತೆ ಹುಟ್ಟುವದು -ಹೀಗೆ ಜನ್ಮಗಳ ಸಾಲು ಕಡಿವಡಿಯದೆ ಇರುವದಾದರೆ ಈ ಜನ್ಮಬಂಧಕ್ಕೆ ಕೊನೆಯಾಗುವದು ಎಂದು? ಮತ್ತೆಮತ್ತೆ ಹುಟ್ಟಿ ಸಂಸಾರದ ದುಃಖವನ್ನು ಅನುಭವಿಸುವದೇ ಮನುಷ್ಯನ ಸ್ವಭಾವವಾಗಿಬಿಟ್ಟರೆ, ಇದರಿಂದ ಬಿಡುಗಡೆಯಾಗುವದಾದರೂ ಹೇಗೆ?- ಎಂದು ಯಾರಾದರೂ ಶಂಕಿಸಬಹುದು. ಈ ಶಂಕೆಗೆ ಶಾಸ್ತ್ರವೇ ಸಮಾಧಾನವನ್ನು ಹೇಳಿರುತ್ತದೆ. ಯಾವ ಜನ್ಮದಲ್ಲಿ ಮನುಷ್ಯನಿಗೆ ಕರ್ಮಬಂಧದ ಸಂಕೋಲೆಯಿಂದ ತಪ್ಪಿಸಿಕೊಳ್ಳಬೇಕೆಂಬ ಸದಿಚ್ಛೆಯುಂಟಾಗುವದೋ, ಯಾವ ಜನ್ಮದಲ್ಲಿ ದೊಡ್ಡವರ ಸಹವಾಸದಿಂದ ಕರ್ಮ ಯೋಗವನ್ನು ಮಾಡಿ ಚಿತ್ತಶುದ್ಧಿಯನ್ನು ಹೊಂದಿ ಜ್ಞಾನವನ್ನು ಪಡೆದುಕೊಳ್ಳುವನೋ, ಆಗ ಕರ್ಮದೃಷ್ಟಿಯಿಂದ ಉಂಟಾಗಿದ್ದ ಬಂಧವು ಕಳಚಿಹೋಗುವದು. ನಿರ್ದುಷ್ಟವಾದ ನಿತ್ಯಾನಂದವಾದ ಆತ್ಮಪದದ ಪ್ರಾಪ್ತಿಯಾಗುವದು. ಕನಸಿನಲ್ಲಿ ಅನಾದ್ಯನಂತವಾಗಿ ಕಾಣುತ್ತಿದ್ದ ನಮ್ಮ ಸುಖದುಃಖಗಳ ಪರಂಪರೆಯು ಎಚ್ಚರವಾದ ಕೂಡಲೆ ಆತ್ಯಂತಿಕವಾಗಿ ನಾಶವಾಗುವದಲ್ಲವೆ? ಅದರಂತೆಯೇ ಇಲ್ಲಿಯೂ ತಿಳಿಯಬೇಕು.

ಇಲ್ಲಿಗೆ ಕರ್ಮಯೋಗದ ವಿಚಾರವು ಮುಗಿದಂತಾಯಿತು. ಈಗ ಈ ಕರ್ಮ ಯೋಗಕ್ಕೂ ಸ್ವಧರ್ಮದೃಷ್ಟಿಯಿಂದ ಕರ್ಮವನ್ನು ಮಾಡುವ ಅನುಷ್ಠಾನಕ್ಕೂ ಇರುವ ತಾರತಮ್ಯವನ್ನು ನಾವು ತಿಳಿದುಕೊಳ್ಳಬಹುದು. ಎರಡನೆಯ ಅಧ್ಯಾಯದಲ್ಲಿ ಸಾಂಖ್ಯಬುದ್ಧಿಯಿಂದ ಆತ್ಮವಿಚಾರವನ್ನು ಮಾಡುವಾಗ ಪ್ರಾಸಂಗಿಕವಾಗಿ (೩೧ರಿಂದ ೩೮ನೇ ಶ್ಲೋಕದವರೆಗೆ) ಸ್ವಧರ್ಮದೃಷ್ಟಿಯ ಕರ್ಮವನ್ನು ವಿವರಿಸಲಾಗಿದೆ. "ಸ್ವಧರ್ಮ ದೃಷ್ಟಿಯಿಂದ ಯುದ್ಧವನ್ನು ಮಾಡಿದರೆ ಸ್ವರ್ಗದ ಬಾಗಿಲು ತಾನೇ ಹಾರುಹೊಡೆದು ಕೊಳ್ಳುವದು. ಯುದ್ಧದಲ್ಲಿ ಸೋತು ಹತನಾದರೆ ಸ್ವರ್ಗ, ಗೆದ್ದು ಬದುಕಿದರೆ ರಾಜ್ಯಭೋಗ-ಹೀಗೆ ಎರಡು ವಿಧದಿಂದಲೂ ಉತ್ತಮಫಲವನ್ನೇ ಕೊಡುವ

ಧರ್ಮಯುದ್ಧವನ್ನು ಏತಕ್ಕೆ ಬಿಡಬೇಕು? ಇದನ್ನು ಮಾಡದೆ ಬಿಟ್ಟರೆ ನಿನಗೆ ಅಪಯಶಸ್ಸೂ ಬರುವದು. ಆದ್ದರಿಂದ ಅರ್ಜುನನೆ, ಏಳು, ಯುದ್ಧಮಾಡು" ಎಂದು ಭಗವಂತನು ಉಪದೇಶಿಸಿರುತ್ತಾನೆ. ಸ್ವಧರ್ಮವನ್ನು ಮಾಡಬೇಕೆಂದು ಹೀಗೆ ಉಪದೇಶಿಸಿರುವದು ಫಲದ ದೃಷ್ಟಿಯಿಂದ. ಫಲತ್ಯಾಗವನ್ನು ಮಾಡಿ ಸಮತ್ವ ಬುದ್ಧಿಯಿಂದ ಕರ್ಮವನ್ನು ಮಾಡುವ ಕರ್ಮಯೋಗಕ್ಕೂ ಇದಕ್ಕೂ ಯಾವ ಸಂಬಂಧವೂ ಇಲ್ಲ. "ಸುಖದುಃಖಗಳನ್ನೂ ಲಾಭಾಲಾಭಗಳನ್ನೂ ಜಯಾಪಜಯ ಗಳನ್ನೂ ಸಮವಾಗಿ ಮಾಡಿಕೊಂಡು ಯುದ್ಧವನ್ನೇ ಮಾಡಿದರೆ ನಿನಗೆ ಪಾಪವಿಲ್ಲ" ಎಂಬ ಉಪದೇಶವನ್ನು ಕಂಡು ಕೆಲವರು ಇಲ್ಲಿಯೂ ಕರ್ಮಯೋಗದಂತೆ ಸಮತ್ವವನ್ನೇ ಉಪದೇಶಿಸಿದೆ ಎಂದು ಭ್ರಾಂತರಾಗುವರು. ಆದರೆ ಇಲ್ಲಿ ಹೇಳಿರುವ ಸಮತ್ವವು ಬೇರೆಯ ಜಾತಿಯದು. ನಿನಗೆ ಈ ಯುದ್ಧದಿಂದ ಸುಖವಾಗಲಿ ದುಃಖವಾಗಲಿ, ಎರಡನ್ನೂ ಸಮವಾಗಿ ತಿಳಿದು, ಯಾವದನ್ನೂ ಲೆಕ್ಕಿಸದೆ, ಯುದ್ಧ ಮಾಡು. ಆಗ ನಿನಗೆ ಇದರಿಂದ ಪಾಪವಾಗುವದಿಲ್ಲ, ಕೆಟ್ಟ ಫಲವಾಗುವದಿಲ್ಲ-ಎಂದು ಭಗವಂತನು ಉಪದೇಶಿಸಿರುತ್ತಾನೆ. ಪುಣ್ಯಪಾಪಗಳೆರಡನ್ನೂ ಮೀರುವ ಉಪಾಯವಾದ ಕರ್ಮಯೋಗದ ಸಮತೆಗೆ ಇದು ಹೇಗೆ ಸರಿಗಟ್ಟೀತು? ಸ್ವಧರ್ಮದೃಷ್ಟಿಯಿಂದ ಮಾಡುವ ಯುದ್ಧವುಕೂಡ ಕರ್ಮಯೋಗಕ್ಕೆ ಹೋಲಿಸಿದರೆ ಕೆಳಮಟ್ಟದ ಕರ್ಮವೇ ಆಗುವದು. "ಫಲಹೇತುಗಳಾದವರು ಕೃಪಣರು" ಎಂಬ ಭಾವನೆಯ ಕರ್ಮಯೋಗವು ಇದಕ್ಕಿಂತಲೂ ಬಹಳ ಉನ್ನತವಾದ ಅಂತಸ್ತಿನಲ್ಲಿರುವದೆಂಬುದು ಸ್ಪಷ್ಟವಾಗಿರುತ್ತದೆ.

"ಸಮತ್ವಂ ಯೋಗ ಉಚ್ಯತೇ" ಎಂಬ ವಾಕ್ಯವು ಗೀತಾರಹಸ್ಯವನ್ನು ಬಿಚ್ಚಿ ತೋರಿಸುವ ಮಂತ್ರವೆಂದು ಭಾವಿಸಬೇಕು. ಗೀತೋಕ್ತಯೋಗಗಳಲ್ಲೆಲ್ಲ ಒಂದಲ್ಲದಿದ್ದರೆ ಒಂದು ಬಗೆಯ ಸಮತ್ವವಿರುತ್ತದೆ ಎಂದು ದೊಡ್ಡವರೊಬ್ಬರು ಅಪ್ಪಣೆಮಾಡಿರುತ್ತಾರೆ. ಕರ್ಮಯೋಗ, ಧ್ಯಾನಯೋಗ, ಭಕ್ತಿಯೋಗ, ಜ್ಞಾನಯೋಗ-ಇವುಗಳಲ್ಲಿರುವ ಸಮತ್ವದ ಸ್ವರೂಪವನ್ನು ಭಗವಂತನು ಅರ್ಜುನನಿಗೆ ಉಪದೇಶಿಸಿರುವ ರೀತಿಯಲ್ಲಿ ಅರಿತುಕೊಂಡರೆ ಗೀತಾರ್ಥವೇ ನಮ್ಮ ವಶವಾಗುವದು-ಎಂದು ಅವರ ಅಭಿಪ್ರಾಯ. ಇವರ ವಿವರವನ್ನು ಮುಂದೆ ಸಂದರ್ಭಾನುಸಾರವಾಗಿ ತಿಳಿಸುವ ಪ್ರಯತ್ನವನ್ನು ಮಾಡುವೆನು. ಸದ್ಯಕ್ಕೆ ಕರ್ಮಯೋಗದಿಂದಾಗುವ ದೃಷ್ಟಫಲವನ್ನು ಕುರಿತು ನಾವು ವಿಚಾರಮಾಡಬೇಕಾಗಿರುತದೆ.

# ೧೬. ಕರ್ಮಯೋಗದಿಂದ ದೊರಕುವ ಸ್ಥಿತಪ್ರಜ್ಞೆ ೨-(೪೯-೫೫)

(೧೩.೧೦.೪೬)

ಭಗವದ್ಗೀತೆಯು ಉಪನಿಷತ್ತುಗಳ ಸಾರವನ್ನೇ ತಿಳಿಸುವದಕ್ಕೆ ಹೊರಟಿರುವ ಗ್ರಂಥವೆಂದು ಆಗಲೇ ತಿಳಿಸಿದ್ದಾಗಿದೆ. ಆದ್ದರಿಂದ ಇದಕ್ಕೂ ಉಪನಿಷತ್ತುಗಳಿಗೆ ಹೇಗೋ ಹಾಗೆ ಸಂಸಾರಕಾರಣವಾದ ಅಜ್ಞಾನವನ್ನು ಕಳೆಯುವ ಜ್ಞಾನವನ್ನು ತಿಳಿಸಿಕೊಡುವದೇ ಮುಖ್ಯವಾದ ಗುರಿಯಾಗಿರುತ್ತದೆ. ಜ್ಞಾನದಿಂದಲೇ ಅಮೃತತ್ವವು ದೊರಕುತ್ತದೆ ಎಂಬುದು ಉಪನಿಷತ್ತುಗಳ ಸಿದ್ಧಾಂತವು. ಆದರೆ ಆ ಜ್ಞಾನವನ್ನು ಪಡೆದುಕೊಳ್ಳುವದು ಹೇಗೆ? "ಹೇರಳವಾದ ಹಣವು ಬೇಕಾದರೆ ಕುಬೇರನ ಗೆಳೆತನವನ್ನು ಮಾಡಿಕೊಳ್ಳಿರಿ" ಎಂದು ಯಾರು ಬೇಕಾದರೂ ನಮಗೆ ಉಪದೇಶವನ್ನು ಮಾಡಬಹುದು. ಆದರೆ ಆ ಸ್ನೇಹವು ದೊರಕುವ ಬಗೆ ಹೇಗೆ?- ಎಂಬುದನ್ನು ತಿಳಿಸದಿದ್ದರೆ ಅವರ ಉಪದೇಶವು ಫಲಕಾರಿಯಾಗಲಾರದು. ಇದರಂತೆ ಅಮೃತತ್ವವು ಬೇಕಾದರೆ ಜ್ಞಾನವನ್ನು ಸಂಪಾದಿಸಿಕೊಳ್ಳಿರಿ ಎಂಬ ಉಪದೇಶವು ನಮ್ಮಲ್ಲಿ ಬಲು ಮಂದಿಗೆ ಫಲಕಾರಿಯಾಗುವದಿಲ್ಲ. ಜ್ಞಾನವು ನಮಗೆ ಎಟಕುವ ಮಟ್ಟಕ್ಕೆ ನಾವು ಏರುವದು ಹೇಗೆ? ಇದನ್ನು ಹೇಳಿಕೊಡುವವರು ನಮಗೆ ಮೊದಲು ಬೇಕಾಗಿರುತ್ತದೆ.

ಇದಲ್ಲದೆ ಅಲ್ಪದೃಷ್ಟಿಯ ಸಾಧಾರಣಜನರಿಗೆ ಆತ್ಮಜ್ಞಾನವು ಬೇಕೆನಿಸಿರುವದೇ ಇಲ್ಲ. ಇಲ್ಲಿ ಯಾವದಾದರೊಂದು ಕರ್ಮವನ್ನು ಮಾಡಿ ಅದರ ಫಲವನ್ನು ಪಡೆದು ಸುಖಿಸಬೇಕೆಂಬುದೇ ಬಹುಜನರ ಮನಸ್ಸಿಗೆ ಹಿಡಿಯುವ ಮಾರ್ಗ. ಶಾಸ್ತ್ರದಲ್ಲಿ ಹೇಳಿರುವ ಕರ್ಮಗಳನ್ನು ಮಾಡಬೇಕೆಂಬ ಮನಸ್ಸು ಉಂಟಾಗಿದ್ದರೂ ಅಲ್ಲಿ ಹೇಳಿರುವ ಕಾಮ್ಯಕರ್ಮಗಳಿಗೆ ಮನಸ್ಸನ್ನು ಜೋಲುಬಿಡುವವರೇ ಬಹಳ. ಫಲದಾಸೆಯು ಇರುವವರೆಗೆ ಸ್ವಧರ್ಮವನ್ನು ಬಿಟ್ಟು ಪರಧರ್ಮವನ್ನು ಕೂಡ ಮಾಡಿಬಿಡಬಹುದು ಎಂಬ ಮನೋವೃತ್ತಿಯು ಉಂಟಾಗಲೇ ಬಹುದಾಗಿದೆ. ಇದರಿಂದಲೇ ಶೋಕಮೋಹಗಳ ನೆಲೆವೀಡಾದ ಸಂಸಾರದಲ್ಲಿ ಜೀವರುಗಳು ಮುಳುಮುಳುಗಿ ಏಳುತ್ತಿರುವರು. ಹೀಗಿರುವಲ್ಲಿ ಯಾವನೋ ಒಬ್ಬ ಪುಣ್ಯಶಾಲಿಗೆ ಮಾತ್ರ ಈ ಶೋಕಮೋಹಗಳ ಕಾಟವನ್ನು ತಪ್ಪಿಸಿಕೊಳ್ಳಬೇಕೆಂಬ ಇಚ್ಛೆಯು ಬಲವಾಗಿ ಎದ್ದುಕೊಳ್ಳುವದು. ಅಂಥ ಮುಮುಕ್ಷುವಿನ ಉಪಕಾರಕ್ಕಾಗಿ ಭಗವದ್ಗೀತೆಯಲ್ಲಿ ಕರ್ಮಯೋಗವನ್ನು ಉಪದೇಶಿಸಿರುತ್ತದೆ. ಅಲ್ಪವಾದ ಕರ್ಮಫಲಗಳನ್ನು ಮರೆಯಿಸಿ

ಮಹಾಫಲವಾದ ಜ್ಞಾನದ ಕಡೆಗೆ ಒಯ್ಯುವ ಕರ್ಮಯೋಗವನ್ನು ಇಲ್ಲಿ ಉಪ ದೇಶಿಸಿರುತ್ತದೆ.

ಭಗವಂತನು ಈವರೆಗೆ ಕರ್ಮಯೋಗದ ಹೆಚ್ಚುಗಾರಿಕೆಯನ್ನೂ ಅದರ ಸ್ವರೂಪವನ್ನೂ ಅದನ್ನು ಅನುಷ್ಠಾನಮಾಡುವ ಬಗೆಯನ್ನೂ ಅರ್ಜುನನಿಗೆ ವಿವರಿಸಿ ತಿಳಿಯಹೇಳಿ ಈಗ ಈ ಕರ್ಮಯೋಗವನ್ನು ಮಾಡುವದರಿಂದಾಗುವ ಮಹಾಫಲವನ್ನು ತಿಳಿಸುವದಕ್ಕೆ ಪ್ರಾರಂಭಿಸಿರುತ್ತಾನೆ. "ಅರ್ಜುನನೆ, ಜನರು ಕರ್ಮಗಳ ವಿಚಾರವನ್ನೂ ಕರ್ಮಫಲಗಳ ವಿಚಾರವನ್ನೂ ಹೇಳುವ ವೇದವಚನಗಳನ್ನು ಶ್ರವಣಮಾಡಿಮಾಡಿ, ಆಯಾ ಕರ್ಮಗಳನ್ನು ಮಾಡಿಮಾಡಿ, ಫಲಗಳನ್ನು ಅನುಭವಿಸಿ ಅನುಭವಿಸಿ, ಕರ್ಮಫಲವಾಸನೆಯನ್ನು ಅಂತಃಕರಣದಲ್ಲಿ ತುಂಬಿಕೊಂಡುಬಿಟ್ಟಿರುವರು. ಕರ್ಮವಾಸನೆ ಯಿಂದ ಕಲುಷಿತವಾದ ಅವರ ಚಿತ್ತವು ಒಂದಿಷ್ಟೂ ನಿಲುಗಡೆಗೆ ಬರುವಂತಿಲ್ಲ. ಎಲ್ಲಿಯಾದರೂ ಕರ್ಮಫಲವನ್ನು ಹೇಳುವ ವಾಕ್ಯವು ಕಿವಿಗೆ ಬಿದ್ದರೆ ಕೂಡಲೆ ಅವರು ಆ ಕರ್ಮದ ವಿಚಾರವನ್ನು ಮುಂದುವರಿಯಿಸುವದಕ್ಕೆ ತವಕಿಸುತ್ತಿರುತ್ತಾರೆ. ಆದರೆ ಯಾವ ಮಹನೀಯನು ನಾನು ಹೇಳಿರುವ ಕರ್ಮಯೋಗವನ್ನು ಒಂದೇ ನಿಶ್ಚಯದಿಂದ ಅನುಷ್ಠಾನಮಾಡಿರುವನೋ ಅವನಿಗೆ ಸತ್ತ್ವಶುದ್ಧಿಯುಂಟಾಗಿಬಿಡುತ್ತದೆ, ಆಗ ಅವನಿಗೆ ಉತ್ತಮವಾದ ಆತ್ಮಜ್ಞಾನವು ಉಂಟಾಗಿಬಿಡುತ್ತದೆ. ಆ ಉತ್ತಮವಾದ ಜ್ಞಾನದಿಂದ ಕರ್ಮವಾಸನೆಯ ಮೋಹಾತ್ಮಕವಾದ ಕಲ್ಮಷವು ಅತ್ಯಂತವಾಗಿ ನಾಶವಾಗಿ ಬಿಡುತ್ತದೆ. ಆಗ್ಗೆ ಇನ್ನು ಕರ್ಮಫಲಗಳ ವಾಕ್ಯಗಳನ್ನು ಶ್ರವಣಮಾಡುವ ತಹತಹವು ಇರುವದೇ ಇಲ್ಲ; ಆ ಬಗೆಯ ವಚನಗಳಲ್ಲಿ ಅವನಿಗೆ ಅತ್ಯಂತವಾಗಿ ವೈರಾಗ್ಯ ವುಂಟಾಗಿಬಿಡುತ್ತದೆ. ಅಷ್ಟೇ ಅಲ್ಲ, ಇದುವರೆಗೆ ತಾನು ಈ ಬಗೆಯ ಸೆಳೆತಕ್ಕೆ ಸಿಕ್ಕಿ ಬಿದ್ದಿದ್ದೆನಲ್ಲ!- ಎಂದು ಅವನಿಗೆ ನಾಚಿಕೆಯೂ ಉಂಟಾಗಿಬಿಡುತ್ತದೆ" ಹೀಗೆಂದು ಭಗವಂತನು ಕರ್ಮಯೋಗದ ಫಲವನ್ನು ಕೊಂಡಾಡಿರುತ್ತಾನೆ.

ಕರ್ಮಯೋಗದಿಂದ ಆಗುವ ಮೊದಲನೆಯ ದೃಷ್ಟಫಲವು "ಯದಾ ತೇ ಮೋಹಕಲಿಲಮ್" ಎಂಬ ಶ್ಲೋಕದಲ್ಲಿ ಉಕ್ತವಾಗಿರುತ್ತದೆ. ಕ್ರಿಯಾಕಾರಕಫಲಗಳ ವಾಸನೆಯನ್ನೇ ಗಟ್ಟಿಗೊಳಿಸುವ ವೇದವಚನಗಳ ಶ್ರವಣದಿಂದ ಉಂಟಾಗಿದ್ದ ಅಂತಃಕರಣದ ಚಾಂಚಲ್ಯವು ಹೋಗಿ ಸಮತ್ವದ ನಿಶ್ಚಲತೆಯು ಉಂಟಾಗುವದೇ ಈ ಮೊದಲನೆಯ ಫಲವು. ಆಗಲೆ ಅಂತಃಕರಣವು ಆತ್ಮನಲ್ಲಿ ನೆಲೆನಿಲ್ಲುವದಕ್ಕೆ ತಕ್ಕದ್ದಾಗುತ್ತದೆ. ಯಾವನು ಹೀಗೆ ಕರ್ಮಯೋಗದಿಂದ **ಚಿತ್ತಶುದ್ಧಿ**ಯನ್ನು ಹೊಂದಿರು ವನೋ, ಯಾವನ ಚಿತ್ತವು **ವಿಕ್ಷೇಪ**ವಿಲ್ಲದೆ, ಅತ್ತಿತ್ತ ಚಲಿಸದೆ, ಪರಮಾತ್ಮನಲ್ಲಿಯೇ **ಸಮಾಧಾನ**ದಿಂದ ನಿಂತುಕೊಳ್ಳುವದೋ, ಅವನಿಗೇ ಪರಮಾರ್ಥವನ್ನು ತಿಳಿಸುವ

ಸಾಂಖ್ಯದೃಷ್ಟಿಯ ಜ್ಞಾನಯೋಗವು ದಕ್ಕುವದು. ಅವನ ತಿಳಿವಳಿಕೆಯೇ ನೆಲೆಗೆ ನಿಂತಿರುವದು, ಅವನೇ **ಸ್ಥಿತಪ್ರಜ್ಞನು**. ಸ್ಥಿತಪ್ರಜ್ಞನೆಂದರೆ ಯೋಗದ ಸಮಾಧಿಯನ್ನು ಪಡೆದುಕೊಂಡವನು ಎಂದು ಕೆಲವರು ಭಾವಿಸಿರುತ್ತಾರೆ. "ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ। ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ"- ಎಂಬ ಶ್ಲೋಕದಲ್ಲಿ 'ನಿಶ್ಚಲಾ' 'ಸಮಾಧಿ', 'ಯೋಗ' ಎಂಬ ಮಾತುಗಳಿಂದ ಅವರಿಗೆ ಈ ಭ್ರಮೆಯುಂಟಾಗಿರುತ್ತದೆ. ಇಲ್ಲಿ ಪಾತಂಜಲಯೋಗದ ವಿಚಾರವನ್ನು ಹೇಳಿರುವದೇ ಇಲ್ಲವೆಂಬುದು ಪ್ರಕರಣದಿಂದಲೇ ಸ್ಪಷ್ಟವಾಗಿರುತ್ತದೆ. ಆ ಯೋಗದಲ್ಲಿ ಕುದುರೆಗೆ ನಡಿಗೆಯನ್ನು ಕಲಿಸುವಂತೆ ಚಿತ್ತವೃತ್ತಿಗಳನ್ನು ಹತೋಟಿಗೆ ತಂದುಕೊಳ್ಳುವ ಕ್ರಮವನ್ನು ಬೋಧಿಸಿರುತ್ತದೆ; ಯೋಗಕ್ಕೆ 'ಈಶ್ವರಪ್ರಣಿಧಾನದಿಂದಲೂ' ಪ್ರಯೋಜನ ವಾಗುವದೆಂದು ಯೋಗಸೂತ್ರದಲ್ಲಿ ಹೇಳಿರುತ್ತದೆ. ಆದರೆ ಭಗವದ್ಗೀತೆಯಲ್ಲಿ ಹೇಳಿರುವ ಸಾಧಕನಿಗೆ ಈಶ್ವರಪ್ರಣಿಧಾನವೇ, ಆತ್ಮನಲ್ಲಿಯೇ ಚಿತ್ತವನ್ನಿಡುವ ದೆಂಬುದೊಂದೇ, ಸಾಧನವು. ಪ್ರಕೃತಶ್ಲೋಕದಲ್ಲಿ **ಸಮಾಧಿಯೆಂದರೆ** ಆತ್ಮನೇ. ಪರಮಾತ್ಮನಲ್ಲಿ ಮನಸ್ಸಿಟ್ಟರೆ ಅದು ಸಮಾಧಾನವನ್ನು ಹೊಂದೀತೇ ಹೊರತು ಕರ್ಮಫಲಗಳಲ್ಲಿಟ್ಟರೆ ಹೊಂದಲಾರದು ಎಂಬುದನ್ನು ತಿಳಿಸುವದಕ್ಕೆ ಈ ವಿಶೇಷಣವನ್ನು ಕೊಟ್ಟಿರುತ್ತದೆ. ಇದಲ್ಲದೆ **ಯೋಗವೆಂದರೆ** ಇಲ್ಲಿ ಚಿತ್ತವೃತ್ತಿಗಳ ನಿರೋಧವಲ್ಲ; ಪರಮಾತ್ಮನ ಸಂಬಂಧದಿಂದ ದೊರೆಯುವ ಜ್ಞಾನನಿಷ್ಠೆ, ಮತ್ತು ಅದರಿಂದ ದೊರೆಯುವ ಪರಮಶಾಂತಿ. ಗೀತೆಯ ಉಪಕ್ರಮದಲ್ಲಿ ಭಗವಂತನು "ನೀನು ಅಶೋಚ್ಯರನ್ನು ಕುರಿತು ಶೋಕಿಸುತ್ತಿರುವೆ, ಆದರೆ ಪ್ರಜ್ಞಾವಂತರು ಹೀಗೆ ಎಂದಿಗೂ ಶೋಕಿಸುವದಿಲ್ಲ" ಎಂದು ಹೇಳಿದ್ದನಷ್ಟೆ; ಈಗ ಆ ಪ್ರಜ್ಞಾವಂತರ ಸ್ವರೂಪವನ್ನು ವರ್ಣಿಸುವದಕ್ಕಾಗಿ ಅವರ ಲಕ್ಷಣವನ್ನು ಹೇಳುವದಕ್ಕೆ ಪ್ರಾರಂಭಿಸಿರುತ್ತಾನೆ. ಅರ್ಜುನನಿಗೆ ಕರ್ಮಫಲವಾಸನೆಯು ತಪ್ಪಿ, ಬುದ್ಧಿಯ ಚಾಂಚಲ್ಯವು ಹೋಗಿ, ಈ ಪ್ರಜ್ಞೆಯು ನಿಲ್ಲುವಂತಾಗಲಿ! ಈ ಪ್ರಜ್ಞೆಯನ್ನು ಗುರಿಯಾಗಿಟ್ಟುಕೊಂಡು ಅವನು ಇದನ್ನು ಮುಟ್ಟುವದಕ್ಕೆ ತಕ್ಕ ಸಾಧನಗಳನ್ನು ಕೈಗೊಳ್ಳಲಿ!- ಎಂಬುದೇ ಭಗವಂತನ ಉದ್ದೇಶವು.

ಇಲ್ಲಿ ಒಂದು ಎಚ್ಚರಿಕೆಯ ಮಾತನ್ನು ಆಡುವದು ಅವಶ್ಯವಾಗಿರುತ್ತದೆ. ಈ ಅಧ್ಯಾಯದಲ್ಲಿ ಹೇಳಿರುವ ಜ್ಞಾನದ ಮತ್ತು ಕರ್ಮಯೋಗದ ವಾಕ್ಯಗಳನ್ನು ಓದಿ ನಾವೂ ಜ್ಞಾನಿಗಳೆಂದೂ ಕರ್ಮಯೋಗಿಗಳೆಂದೂ ತಿಳಿದುಕೊಳ್ಳುವ ಭ್ರಾಂತಿಗೆ ಎಂದೂ ಒಳಗಾಗಬಾರದು. ಆತ್ಮನು ಏಕನು, ಅದ್ವಿತೀಯನು, ನಿರ್ವಿಕಾರನು, ಅಚಿಂತ್ಯನು, ಅವ್ಯಕ್ತನು, ಸರ್ವರ ಆತ್ಮನು -ಎಂದು ಮುಂತಾಗಿ ವೇದಾಂತದ ಮಾತುಗಳನ್ನು ಬಳಸುತ್ತಿರುವವರೆಲ್ಲ ಜ್ಞಾನಿಗಳಾಗಲಾರರು. ಗೀತೋಕ್ತಜ್ಞಾನವು

ನಮಗೆ ನಿಜವಾಗಿ ಅಳವಟ್ಟಿದೆಯೆ, ಇಲ್ಲವೆ?- ಎಂಬುದು ವ್ಯವಹಾರದಲ್ಲಿ ನಾವು ನಡೆದುಕೊಳ್ಳುವ ರೀತಿಯಿಂದಲೇ ಸ್ಫುಟವಾಗುತ್ತದೆ. ಏಕ, ಅದ್ವಿತೀಯ, ಅಖಂಡ-ಮುಂತಾದ ಶಬ್ದಗಳು ನಮ್ಮ ಪಾಲಿಗೆ ಅರ್ಥವಿಲ್ಲದ ಬರಿಯ ಮಾತುಗಳಾಗಿರುತ್ತವೆ. ಸಾಧಾರಣವಾಗಿ ಇಂಥ ವೇದಾಂತದ ಮಾತುಗಳನ್ನು ಬಳಸುತ್ತಾ ಗಲಾಟೆಯನ್ನು ಎಬ್ಬಿಸುತ್ತಿರುವವರು ವ್ಯವಹಾರದಲ್ಲಿ ಮಿಕ್ಕವರಿಗಿಂತ ಯಾವ ವಿಶೇಷವರ್ತನೆಯವರೂ ಆಗಿರುವದಿಲ್ಲ. ಈ ಶಬ್ದಜ್ಞಾನವು ಅವರಿಗೆ ವ್ಯವಹಾರದಲ್ಲಿ ಯಾವ ಪ್ರಯೋಜನವನ್ನೂ ಮಾಡಿಕೊಡುವಂತಿರುವದಿಲ್ಲ. ಕೆಲವು ಜಿಂಕೆಗಳು ಒಂದು ಕಡೆಯಲ್ಲಿ ಗುಂಪುಕೂಡಿ "ನಾವೇನೂ ನಾಯಿಗಳಿಗಿಂತ ಕಡಿಮೆಯಿಲ್ಲ; ಇಗೋ, ನಮ್ಮ ಚೂಪಾದ ಈ ಕೊಂಬುಗಳಿಂದ ತಿವಿದರೆ ನಾಯಿಯ ಹೊಟ್ಟೆಯ ಈ ಕಡೆಯಲ್ಲಿ ಹೊಕ್ಕು ಆ ಕಡೆಗೆ ಬರುವಂತಿವೆ. ಓಡುವದರಲ್ಲಿಯೂ ನೆಗೆಯುವದರಲ್ಲಿಯೂ ನಾಯಿಗಳು ನಮ್ಮನ್ನು ಸರಿಗಟ್ಟಿಯಾವೇನು? ಚಂಗನೆ ಹಾರಿದರೆ ನಾವು ಎಷ್ಟು ದೂರ ನೆಗೆಯಬಲ್ಲೆವು! ಹೀಗಿರುವಲ್ಲಿ ನಾವೇಕೆ ನಾಯಿಗಳಿಗೆ ಹೆದರಬೇಕು?" ಎಂದು ಕೊಚ್ಚಿಕೊಳ್ಳುತ್ತಿದ್ದವಂತೆ. ಅಷ್ಟರಲ್ಲಿಯೇ ಒಂದು ಬೇಟೆಯ ನಾಯಿ ಬಗುಳುವ ಧ್ವನಿ ಕೇಳಿಸಿತಂತೆ. ಕೂಡಲೆ ಜಿಂಕೆಗಳು ಚದರಿ ಒಂದೊಂದು ಒಂದೊಂದು ಕಡೆಗೆ ನೆಗೆದು ಓಡಿಹೋದವಂತೆ! ಜಿಂಕೆಗಳ ಸಭೆಯು ಅಲ್ಲಿಗೆ ಬರಖಾಸ್ತಾಯಿತಂತೆ! ಹೀಗೆಯೇ ಇರುತ್ತದೆ, ಬರಿಯ ಬಾಯಿವೇದಾಂತಿಗಳ ಪಾಡು! ಅವರಿಗೆ ಭಗವದ್ಗೀತೆಯ ಜ್ಞಾನವೂ ಮೈಗೂಡಿರುವದಿಲ್ಲ; ಅಲ್ಲಿ ಹೇಳಿರುವ ಸರ್ವಾತ್ಮನ ತಾದಾತ್ಮ್ಯವು ಅವರಿಗೆ ಉಂಟಾಗಿಯೂ ಇರುವದಿಲ್ಲ. ಅವರ ಪ್ರಜ್ಞೆಯು ನಿಲುಗಡೆಗೆ ಬಂದಿರುವದಿಲ್ಲ; ಅವರಿಗೆ ಶೋಕಮೋಹಗಳ ಸಂಸಾರದ ಭಯವು ತಪ್ಪುವಂತೆಯೂ ಇಲ್ಲ.

ಆದ್ದರಿಂದ ನಾವುಗಳು ಇನ್ನೂ ಸ್ಥಿತಪ್ರಜ್ಞರಲ್ಲ; ಸ್ಥಿತಪ್ರಜ್ಞೆಯನ್ನು ಸಂಪಾದಿಸಿ ಕೊಡಬಲ್ಲ ಕರ್ಮಯೋಗಕ್ಕೂ ಅರ್ಹರಾಗಿಲ್ಲ. ಅಷ್ಟೇಕೆ? ನಮ್ಮಲ್ಲಿ ಬಲುಮಂದಿ ಇನ್ನೂ ಶಾಸ್ತ್ರೋಕ್ತಕರ್ಮಗಳನ್ನು ಕೂಡ ಸರಿಯಾಗಿ ಶ್ರದ್ಧೆಯಿಂದ ಮಾಡುವ ಅಭ್ಯಾಸವನ್ನು ಇಟ್ಟುಕೊಂಡಿರುವದಿಲ್ಲ. ಇದನ್ನು ಚೆನ್ನಾಗಿ ಮನದಂದುಕೊಂಡು ಒಣಹೆಮ್ಮೆಗೆ ಎಡೆಗೊಡದೆ, ನಮ್ಮ ನಮ್ಮ ಯೋಗ್ಯತೆಗಳಿಗೆ ತಕ್ಕ ಸಾಧನಗಳನ್ನು ಕೈಗೊಳ್ಳಬೇಕು. ಗೀತೆಯಲ್ಲಿ ಹೇಳಿರುವ ಜ್ಞಾನವೂ ಕರ್ಮಯೋಗವೂ ನಮಗೆ ಧ್ಯೇಯವಾಗಿರಬೇಕು. ಗೀತೋಕ್ತಜ್ಞಾನವು ಬಂದದ್ದಕ್ಕೆ ಗುರುತೇನೆಂದರೆ: ಕರ್ಮಫಲ ವಚನಗಳನ್ನಾಗಲಿ ಕರ್ಮವಚನಗಳನ್ನಾಗಲಿ ಕೇಳುವ ಕೌತುಕವು ನಮ್ಮಲ್ಲಿ ಅಳಿಸಿ ಹೋಗುವದು. ಆಗ ಶ್ರೋತವ್ಯವೂ ಇಲ್ಲ, ಶ್ರುತವೂ ಇಲ್ಲ; ಕರ್ತವ್ಯವೂ ಇಲ್ಲ, ಕೃತವೂ ಇಲ್ಲ. ಬೆಂಕಿಯ ಕಡ್ಡಿಯನ್ನು ಗೀರುತ್ತಿರುವದು ಎಲ್ಲಿಯ ತನಕ? ಬೆಳಕು

ಬರುವ ತನಕ. ಜ್ಞಾನವು ಬಂದ ಸಮಕಾಲದಲ್ಲಿಯೇ ನಾವು ಕರ್ಮಬಂಧದಿಂದ ಮುಕ್ತರಾಗಿ ಬಿಡುವೆವು, ಕೃತಕೃತ್ಯರಾಗಿಬಿಡುವೆವು. ಹೀಗಿರುವದರಿಂದ ನಾವು ಕ್ರಮಕ್ರಮವಾಗಿ ಸಾಧನದ ಮೆಟ್ಟಿಲುಗಳನ್ನು ಏರುತ್ತಾ ಹೋಗಬೇಕು. ಶಾಸ್ತ್ರೋಕ್ತ ಕರ್ಮವನ್ನು ಈಶ್ವರಾರ್ಪಣಬುದ್ಧಿಯಿಂದ ಮಾಡುವ ಕರ್ಮಯೋಗದ ಮೂಲಕವಾಗಿ ಸ್ಥಿತಪ್ರಜ್ಞೆಯನ್ನು ಪಡೆದುಕೊಳ್ಳುವದಕ್ಕೆ ಬಲವಾದ ಪ್ರಯತ್ನವನ್ನು ಮಾಡಬೇಕಾಗಿರುತ್ತದೆ. ಸ್ಥಿತಪ್ರಜ್ಞರಾದಾಗ ನಮ್ಮ ಮನಸ್ಸು ಈಗಿನ ಚಾಂಚಲ್ಯವನ್ನು ಬಿಟ್ಟುಬಿಡುತ್ತದೆ; ಪರಮಾತ್ಮನಲ್ಲಿಯೇ ನಿಂತು ಸಮಾಧಾನವನ್ನು ಪಡೆದುಕೊಳ್ಳುತ್ತದೆ. ಈಗಿನ ನಮ್ಮ ಮನಸ್ಸನ್ನು ಚಿಟ್ಟೆಯ ಹುಳುವಿಗೆ ಹೋಲಿಸಿದರೆ ಆಗಿನ ಮನಸ್ಸನ್ನು ಜೇನುಹುಳುವಿಗೆ ಹೋಲಿಸಬಹುದು. ಚಿಟ್ಟೆಯ ಹುಳು ಹೂವಿನಿಂದ ಹೂವಿಗೆ ಹಾರಾಡುತ್ತಾ ನಿಂತಲ್ಲಿ ನಿಲ್ಲದೆ ಕಾಲಹರಣವನ್ನು ಮಾಡುತ್ತಿರುತ್ತದೆ. ಅದಕ್ಕೆ ಎಲ್ಲಿಯೂ ಹೂವಿನ ರಸದ ಸವಿಯು ದಕ್ಕುವಹಾಗಿರುವದಿಲ್ಲ. ಆದರೆ ಜೇನುಹುಳುವು ಯಾವ ಹೂವಿನ ಮೇಲೆ ಕೂರುವದೋ ಅದರ ರಸವನ್ನು ಚೆನ್ನಾಗಿ ಹೀರಿಕೊಳ್ಳುವವರೆಗೆ ಅಲ್ಲಿಂದ ಮೇಲಕ್ಕೇಳುವದೇ ಇಲ್ಲ. ಸ್ಥಿತಪ್ರಜ್ಞನಾದವನು ಹೀಗೆಯೇ ಆತ್ಮಾನಂದಾಮೃತದ ರಸವನ್ನು ಸವಿಯುವದರಲ್ಲಿ ಮಗ್ನನಾಗಿಬಿಟ್ಟಿರುತ್ತಾನೆ!

ಸ್ಥಿತಪ್ರಜ್ಞನ ಹೊಗಳಿಕೆಯನ್ನು ಕೇಳಿ ಅರ್ಜುನನಿಗೆ ಹೆಚ್ಚಿನ ಕುತೂಹಲವಾಯಿತು. ಸ್ಥಿತಪ್ರಜ್ಞನ ನಡೆನುಡಿಗಳು ಹೇಗಿರುವವು? ಪರಮಾತ್ಮನಲ್ಲಿ ನೆಲೆನಿಲ್ಲುವ ಜ್ಞಾನಯೋಗವು ಅವನಿಗೆ ದಕ್ಕಿರುವದು ಹೇಗೆ? ಅವನು ಮತ್ತೊಬ್ಬರ ವಿಷಯದಲ್ಲಿ ಹೇಗಿರುವನು? ಅವನನ್ನು ಜನರು ಹೇಗೆ ಗೌರವಿಸುವರು? ಇದನ್ನೆಲ್ಲ ತಿಳಿದುಕೊಳ್ಳಬೇಕೆಂಬ ತವಕದಿಂದ ಅವನು ಭಗವಂತನನ್ನು ಕೇಳಿದನು. ಅದಕ್ಕೆ ಭಗವಂತನು ಹೇಳಿದ ಉತ್ತರವನ್ನು ಈಗ ನಾವು ಮನಸ್ಸಿಗೆ ತಂದುಕೊಳ್ಳಬೇಕು.

**ಸ್ಥಿತಪ್ರಜ್ಞನ ಮೊಟ್ಟಮೊದಲನೆಯ ಲಕ್ಷಣವಿದು: ಸ್ಥಿತಪ್ರಜ್ಞನಾದವನು ಮನಸ್ಸಿನಲ್ಲಿರುವ ಕಾಮಗಳನ್ನು ಸಂಪೂರ್ಣವಾಗಿ ಬಿಟ್ಟುಬಿಟ್ಟಿರುತ್ತಾನೆ.** ಸಾಮಾನ್ಯವಾಗಿ ನೋಡಿದರೆ ಮನಸ್ಸೆಂದರೆ ಕಾಮಗಳ ಕಂತೆಯಾಗಿರುತ್ತದೆ. ಮನಸ್ಸಿನಲ್ಲಿ ಕಾಮಗಳು ಇರುತ್ತವೆ ಎನ್ನುವದಕ್ಕಿಂತ ಮನಸ್ಸೇ ಕಾಮಗಳು ಎಂದರೂ ಸಲ್ಲುವಂತಿರುತ್ತದೆ. ಈ ಕಾಮಗಳೋ ಅನಂತವಾಗಿರುತ್ತವೆ. ಇವು ವ್ಯಕ್ತವಾಗಿರಲಿ, ಅವ್ಯಕ್ತವಾಗಿರಲಿ, ಎಲ್ಲವನ್ನೂ ಸಂಪೂರ್ಣವಾಗಿ ಸ್ಥಿತಪ್ರಜ್ಞನು ಬಿಟ್ಟುಬಿಟ್ಟಿರುತ್ತಾನೆ. ಅವನು ಆತ್ಮನಲ್ಲಿಯೇ ಆತ್ಮನಿಂದ ತುಷ್ಟನಾಗಿರುತ್ತಾನೆ. ಅವನಿಗೆ ತನ್ನ ಆತ್ಮನಿಗಿಂತ ಬೇರೆಯಾದ ಕಾಮಗಳು ಇರುವದೇ ಇಲ್ಲ; ಆದ್ದರಿಂದ ಅವನು ಕಾಮಗಳಿಗೆ ವಶನಾಗಿರುವದಿಲ್ಲ.

ಇನ್ನು **ಎರಡು ಮೂರನೆಯ ಲಕ್ಷಣಗಳಿವು;** ಸ್ಥಿತಪ್ರಜ್ಞನು ದುಃಖವು ಬರುವದೆಂದು ತಳಮಳಗೊಳ್ಳುವದಿಲ್ಲ; ಸುಖವು ಬರುವದೆಂಬ ನಿರೀಕ್ಷೆಯಿಂದ ಮನಸ್ಸನ್ನು ಚಂಚಲಗೊಳಿಸಿಕೊಳ್ಳುವದಿಲ್ಲ. ಅವನು ಒಳ್ಳೆಯದಾದರೆ ಹಿಗ್ಗುವದಿಲ್ಲ; ಕೆಟ್ಟದ್ದಾದರೆ ಅದನ್ನು ಹಗೆಮಾಡುವದಿಲ್ಲ. ಹೀಗೆ ವಿಷಯಗಳ ಕಾಮವಿಲ್ಲದೆ, ಸುಖದುಃಖಗಳಿಂದ ಏರುಪೇರನ್ನು ಪಡೆಯದೆ, ಒಳ್ಳೆಯದನ್ನು ಹೊಗಳದೆ, ಕೆಟ್ಟದ್ದನ್ನು ತೆಗಳದೆ ಇರುವ ಸ್ಥಿತಪ್ರಜ್ಞೆಯ ಚಿತ್ತವು ಯಾವ ಸಾಧನದಿಂದ ಅವನಿಗೆ ಪ್ರಾಪ್ತವಾಗಿರುತ್ತದೆ?- ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರವು ಆತ್ಮಜ್ಞಾನದ ಸ್ವಭಾವದಲ್ಲಿರುತ್ತದೆ. ಇರುವದೆಲ್ಲ ಒಂದೇ ಪರಮಾತ್ಮವಸ್ತು, ಅದಕ್ಕಿಂತ ಬೇರೆಯಾಗಿ ಯಾವದೊಂದೂ ನಿಜವಾಗಿ ಇರುವದಿಲ್ಲ. ಆತ್ಮವ್ಯತಿರಿಕ್ತವಾದದ್ದೆಲ್ಲವೂ-ಕಾಮ, ಸುಖ, ದುಃಖ, ರಾಗ, ದ್ವೇಷ ಎಲ್ಲವೂ ಅಸತ್ತಾಗಿರುತ್ತದೆ ಎಂಬುದು ಆತ್ಮಜ್ಞಾನವು. ಇಲ್ಲದಿರುವ ವಿಷಯಗಳಲ್ಲಿ, ಇಲ್ಲದಿರುವ ಕಾಮವು ಆಗುವದೆಂದರೇನು? ಇಲ್ಲದ ಊರಿಗೆ ತಹಶೀಲ್ದಾರನಾದೆನೆಂದು ಯಾರಾದರೂ ಹಿಗ್ಗುವರೆ? ಅಥವಾ ಆ ಊರಿಗೆ ತನಗೆ ಬರಿಯ ದಫೇದಾರಿಯ ಕೆಲಸವಾಯಿತೆಂದು ವ್ಯಸನಪಡುವರೆ? ಜ್ಞಾನಿಯ ಮನಸ್ಸಿನ ಸ್ಥಿತಿಯನ್ನೂ ಹೀಗೆಯೇ ಅರಿಯಬೇಕು. ವಿಷಯ, ಭೋಗ, ಸುಖ, ದುಃಖ, ಪಾಪ, ಪುಣ್ಯ-ಎಲ್ಲವೂ ಅಸತ್ತೆಂದು ತಿಳಿಯುವವರು ಭಂಡರಂತೆ ಎಲ್ಲವನ್ನೂ ಕಡೆಗಣಿಸುವರು ಎಂದು ಭಾವಿಸಬಾರದು. ಭಂಡರಾದವರು ಸತ್ಯವಾಗಿ ಕಾಣಿಸುವ ಪದಾರ್ಥಗಳನ್ನೂ ಅವುಗಳಿಂದಾಗುವ ಶುಭಾಶುಭಗಳನ್ನೂ ಲೆಕ್ಕಿಸದೆ ಭೋಗಲಂಪಟರಾಗಿ ಸ್ವೇಚ್ಛೆಯಿಂದ ನಡೆಯುತ್ತಿರುವರು. ಸ್ಥಿತಪ್ರಜ್ಞರು ಹಾಗಲ್ಲ. ಅವರು ನಡೆನುಡಿಗಳಲ್ಲಿ ಉಳಿದವರಿಗೆ ಮೇಲುಪಙ್ಕ್ತಿಯಾಗಿದ್ದುಕೊಂಡೇ ತಮ್ಮ ಜ್ಞಾನದಿಂದ ಕಾಮಕರ್ಮಗಳನ್ನು ಮೀರಿರುತ್ತಾರೆ.

ಸ್ಥಿತಪ್ರಜ್ಞರಾದ ಮಹಾತ್ಮರು ಹೇಗಾದರೂ ಇರಲಿ. ಅವರ ಸ್ಥಿತಿಗೂ ನಮ್ಮ ಸ್ಥಿತಿಗೂ ಸಂಬಂಧವೇ ಇಲ್ಲವಲ್ಲ! ಈಗ ಅವರ ಲಕ್ಷಣಗಳನ್ನು ಅರಿತುಕೊಂಡು ನಾವೇನು ಮಾಡಬೇಕಾಗಿದೆ?- ಎಂದು ನಮ್ಮಲ್ಲಿ ಪ್ರಶ್ನೆಯು ಎದ್ದುಕೊಳ್ಳಬಹುದು. ಅದಕ್ಕೆ ಉತ್ತರವು ಇಷ್ಟೇ: ನಾವೂ ಕಾಮಗಳನ್ನು ಆದಷ್ಟು ಮಟ್ಟಿಗೆ ಬಿಡುವದಕ್ಕೆ ಪ್ರಯತ್ನವನ್ನು ಮಾಡಬೇಕು. ಕಾಮಗಳನ್ನು ಬೇಕೆಂತ ಔತಣಕೊಟ್ಟು ಕರೆಯುವ ಅಭ್ಯಾಸವನ್ನು ಬಿಡಬೇಕು. ಸ್ಥಿತಪ್ರಜ್ಞರಿಗೆ ಸುಖದುಃಖಗಳು ಅಸತ್ತಾಗಿರುವಂತೆ ನಮಗೆ ಅಸತ್ತಾಗಿರುವದಿಲ್ಲವಾದರೂ ಅವುಗಳನ್ನು ಸ್ಥೈರ್ಯದಿಂದ ಎದುರಿಸುವ ಅಭ್ಯಾಸವನ್ನು ಮಾಡಬೇಕು. ಶುಭಾಶುಭಗಳು ಬಂದೊದಗಿದಂತೆ ಅನುಭವಿಸುತ್ತಾ ಮನಸ್ಸಿನ ಸಮಾಧಾನವನ್ನು ಆದಷ್ಟು ಮಟ್ಟಿಗೆ ಕಾಪಾಡಿಕೊಳ್ಳುವದಕ್ಕೆ ಪ್ರಯತ್ನಿಸಬೇಕು.

ಯಥಾಶಕ್ತಿಯಾಗಿ ಶಾಸ್ತ್ರೋಕ್ತಕರ್ಮಗಳನ್ನು ಈಶ್ವರಾರ್ಪಣಬುದ್ಧಿಯಿಂದ ಮಾಡುವ ಕರ್ಮಯೋಗವನ್ನು ಅಭ್ಯಾಸಮಾಡಬೇಕು. ಅಥವಾ ಅದಕ್ಕೆ ಸಿದ್ಧವಾಗುವ ಹಂಬಲ ವನ್ನಾದರೂ ಹುಟ್ಟಿಸಿಕೊಳ್ಳಬೇಕು. ಈಶ್ವರನ ಪಾದಸೇವೆಯನ್ನು ಮಾಡುವದೊಂದೇ ಅಸಾರವಾದ ಈ ಸಂಸಾರದಲ್ಲಿ ಸಾರವು-ಎಂದು ಪುರಾಣವಚನವಿದೆ. ಹೀಗೆ ಶಾಸ್ತ್ರೋಕ್ತಕರ್ಮಗಳನ್ನು ಮಾಡುತ್ತಿರುವಾಗ ಹಿಂದಿನ ಕರ್ಮಕ್ಕೆ ಅನುಗುಣವಾಗಿ ಯಾವದಾದರೊಂದು ದುಃಖಪ್ರದವಾದ ಸನ್ನಿವೇಶವು ಒದಗಿದರೆ ಅಷ್ಟುಮಾತ್ರದಿಂದ ಕರ್ಮವೇ ನಿಷ್ಫಲವೆಂದು ಭಾವಿಸುವ ದುರ್ಬುದ್ಧಿಗೆ ವಶರಾಗಬಾರದು. ಪಾಂಡವರಿಗೆ ಕೌರವರು ಹೂಡಿದ ಕಪಟದ್ಯೂತದ ಫಲವಾಗಿ ವನವಾಸವು ಪ್ರಾಪ್ತವಾದಾಗ ದ್ರೌಪದಿಯು ಧರ್ಮರಾಯನನ್ನು ಕುರಿತು "ನೃಪೋತ್ತಮನೆ, ಸತ್ಯಧರ್ಮಗಳನ್ನು ಬಿಡದೆ ಪ್ರಜಾವತ್ಸಲನಾಗಿ ರಾಜ್ಯಪರಿಪಾಲನೆಯನ್ನು ಮಾಡುತ್ತಾ ಗೋಬ್ರಾಹ್ಮಣಸೇವೆ ಯನ್ನು ಮಾಡಿಕೊಂಡೇ ಬರುತ್ತಿದ್ದ ನಿನ್ನಂಥವನಿಗೂ ಇಂಥ ದುರವಸ್ಥೆಯಾಗಬಹುದೆ?" ಎಂದು ದುಃಖವನ್ನು ಪ್ರದರ್ಶನಮಾಡಿದಳಂತೆ. ಆಗ ಆತನು "ಕ್ಷತ್ರಿಯವಂಶದಲ್ಲಿ ಹುಟ್ಟಿದವಳಾದ ನೀನೂ ಇಂಥ ಮಾತನ್ನಾಡಬಹುದೆ? ಇಂಥ ಸುಖಕ್ಕಾಗಿ ಇಂಥ ಧರ್ಮವನ್ನು ಮಾಡುವೆನೆಂದು ಸತ್ಕರ್ಮಗಳನ್ನು ಕಾಮಸಂಕಲ್ಪಪೂರ್ವಕವಾಗಿ ಆಚರಿಸುವದಕ್ಕೆ ನಾನೇನಾದರೂ ಧರ್ಮದ ವ್ಯಾಪಾರಿಯೇನು? ಒಂದಿಷ್ಟು ದುಃಖವು ಬಂದಮಾತ್ರದಿಂದ ಮನಸ್ಸಿನ ಸಮಾಧಾನವನ್ನು ಕಳೆದುಕೊಳ್ಳಬಹುದೆ? ಹಿಮ ವತ್ಪರ್ವತದಂತೆ ಅಚಲನಾಗಿ, ಸುಖದುಃಖಗಳಿಂದ ಮನಸ್ಸಿನಲ್ಲಿ ಹೊಯ್ದಾಡದೆ, ಎಲ್ಲರಿಗೂ ಯಾವಾಗಲೂ ಸಂತೋಷವನ್ನು ಉಂಟುಮಾಡುತ್ತಿರುವದೇ ನನ್ನ ಕರ್ತವ್ಯವು" ಎಂದು ಉತ್ತರಕೊಟ್ಟನಂತೆ. ನಾವುಗಳೆಲ್ಲರೂ ಇಂಥ ಮನಃಸ್ಥಿತಿಯನ್ನು ಆದರ್ಶವಾಗಿಟ್ಟುಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಸ್ಥಿತಪ್ರಜ್ಞನ ಲಕ್ಷಣವನ್ನು ತಿಳಿಸುವ ವಾಕ್ಯವು ಹೀಗೆಂದು ನಮಗೆ ಬೋಧಿಸುತ್ತದೆ.

ಇನ್ನು **ಸ್ಥಿತಪ್ರಜ್ಞನ ನಾಲ್ಕನೆಯ ಲಕ್ಷಣವೇನು?** ಅವನ ಇಂದ್ರಿಯಗಳು ಹೊರಹೊಮ್ಮುವದೇ ಇಲ್ಲ. ಆಮೆಯು ತನ್ನ ಕಾಲುಗಳನ್ನು ಒಳಕ್ಕೆ ಸರಿಯಿಸಿಕೊಳ್ಳುವಂತೆ ಅವನು ಇಂದ್ರಿಯಗಳನ್ನು ವಿಷಯಗಳಿಂದ ಒಳಕ್ಕೆ ಎಳೆದುಕೊಳ್ಳುತ್ತಿರುವನು. ಸ್ಥಿತ ಪ್ರಜ್ಞನು ಹೀಗೆ ಇಂದ್ರಿಯಗಳನ್ನು ಎಳೆದುಕೊಳ್ಳುವನೆಂದು ಹೇಳುವದೂ ವ್ಯಾವಹಾರಿಕ ವಾದ ನಮ್ಮಗಳ ದೃಷ್ಟಿಯಿಂದ. ಏಕೆಂದರೆ ಆತನ ಪರಮಾರ್ಥದೃಷ್ಟಿಯಲ್ಲಿ ಇಡಿಯ ಬ್ರಹ್ಮಾಂಡವೇ ಪರಮಾತ್ಮನಾಗಿಬಿಟ್ಟಿರುತ್ತದೆ. ಹಿಂದೆ ಜನಕಚಕ್ರವರ್ತಿಯ ಎದುರಿಗೆ ಒಬ್ಬ ಜ್ಞಾನಿಯನ್ನು ಅಪರಾಧಿಯೆಂದು ರಾಜಪುರುಷರು ತಂದು ನಿಲ್ಲಿಸಿದರಂತೆ. ಆಗ ರಾಜನು ಇಂಥ ತಪ್ಪು ಮಾಡುವವನು ನಮ್ಮ ರಾಜ್ಯದಲ್ಲಿರತಕ್ಕದ್ದಲ್ಲ ಎಂದುಕೊಂಡು

"ಎಲಾ, ನಿನ್ನನ್ನು ಗಡೀಪಾರು ಮಾಡಿದ್ದೇವೆ; ನೀನು ಕೂಡಲೆ ನಮ್ಮ ರಾಜ್ಯವನ್ನು ಬಿಟ್ಟು ಹೋಗಬೇಕು" ಎಂದು ನುಡಿದನು. ಆಗ ಎದುರಿಗೆ ನಿಂತ ಜ್ಞಾನಿಯು "ಮಹಾಸ್ವಾಮಿ, ತಮ್ಮ ರಾಜ್ಯವು ಎಲ್ಲಿಯವರೆಗೆ ಇದೆ? ಇದರ ಗಡಿ ಯಾವದು?" ಎಂದು ಕೇಳಿದನು. ಕೂಡಲೆ ಜನಕನಿಗೆ ಪರಮಾರ್ಥತತ್ತ್ವದ ಸ್ಮರಣೆ ಬಂತು. ಆಗ ಅವನು ಹೇಳಿದ ಒಂದು ಗಾಥೆಯನ್ನು ಮಹಾಭಾರತದಲ್ಲಿ ಬರೆದಿರುತ್ತದೆ: "ಸರ್ವಪೃಥ್ವಿಯೂ ನನ್ನದೇ, ಅಥವಾ ನನ್ನದೆಂಬುದು ಯಾವದೂ ಇಲ್ಲ. ಆದ್ದರಿಂದ ಎಲೈ ಬ್ರಾಹ್ಮಣನೆ, ನೀನು ಸುಖವಾಗಿ ನಿನಗೆ ಇಷ್ಟಬಂದಲ್ಲಿ ಇರು" ಎಂದನಂತೆ! ಇದು ಸ್ಥಿತಪ್ರಜ್ಞನ ದೃಷ್ಟಿ. ಎಲ್ಲವೂ ಪರಮಾತ್ಮನಿಂದ ವ್ಯಾಪ್ತವಾಗಿರುವಾಗ "ಇಲ್ಲಿಯ ವರೆಗೆ ನಾನು, ಇಲ್ಲಿಂದ ಮುಂದಕ್ಕೆ ವಿಷಯಗಳು, ಈ ವಿಷಯಗಳನ್ನು ನಾನು ಭೋಗಿಸಿ ಸುಖವನ್ನು ಪಡೆಯುವೆನು" ಎಂಬ ಭಾವನೆಯು ಅವನಲ್ಲಿ ಹೇಗೆ ತಲೆ ದೋರಿಕೊಂಡೀತು? "ಈ ಜಗತ್ತಿನಲ್ಲಿರುವದೆಲ್ಲ ಈಶ್ವರಭಾವನೆಯಿಂದ ಮುಚ್ಚುವದಕ್ಕೆ ಅರ್ಹವಾದದ್ದು; ಈಶ್ವರನಿಗಿಂತ ಬೇರೆ ಯಾವದೊಂದೂ ಇರುವದೇ ಇಲ್ಲ. ಆದ್ದರಿಂದ ತ್ಯಾಗದಿಂದಲೇ ನಿನ್ನನ್ನು ನೀನು ಕಾಪಾಡಿಕೊ. ಇಲ್ಲಿ ಇದು ಇಂಥವರ ಧನವೆಂಬುದೆಲ್ಲಿದೆ?" ಎಂದು ಉಪನಿಷತ್ತಿನಲ್ಲಿ ಉಪದೇಶಿಸಿರುತ್ತದೆ. ಈ ಉಪದೇಶ ವನ್ನು ಸ್ಥಿತಪ್ರಜ್ಞರಲ್ಲದ ನಾವೂ ನಮ್ಮ ಕೈಯಲ್ಲಾದ ಮಟ್ಟಿಗೆ ಆಚರಣೆಗೆ ತರುವದಕ್ಕೆ ಪ್ರಯತ್ನಿಸಬೇಕು. "ಇಡಿಯ ಜಗತ್ತೇ ಈಶ್ವರನಿಂದ ವ್ಯಾಪ್ತವಾಗಿರುತ್ತದೆ; ಎಲ್ಲವೂ ಆತನಿಗೇ ಸೇರಿದ್ದು" ಎಂಬ ಭಾವನೆಯಿಂದ ನಾವು ಅಸ್ತೇಯವನ್ನು ಅಭ್ಯಾಸಮಾಡಬೇಕು. ಈಶ್ವರನು ಕೊಟ್ಟಷ್ಟರಿಂದ ತೃಪ್ತರಾಗಿ ತಪ್ಪುದಾರಿಯಿಂದ ಮತ್ತೇನನ್ನೂ ಬಯಸದೆ ನಮ್ಮ ಇಂದ್ರಿಯಗಳನ್ನು ಬಿಗಿಹಿಡಿದಿಟ್ಟುಕೊಳ್ಳುವದಕ್ಕೆ ಪ್ರಯತ್ನಿಸುತ್ತಿರಬೇಕು. ಇಂದ್ರಿಯ ಗಳನ್ನು ಹೊರಕ್ಕೆ ಜೋಲುಬಿಡುವವರಿಗೆ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡಿರು ವವರ ಸ್ಥಿತಪ್ರಜ್ಞೆಯು ಎಂದಿಗೂ ದಕ್ಕಲಾರದು. ಆದ್ದರಿಂದ ಇಂದ್ರಿಯಗಳು ಮುಂದುಮುಂದಕ್ಕೆ ನುಗ್ಗುವ ಅಭ್ಯಾಸವನ್ನು ತಡೆದು ಆದಷ್ಟುಮಟ್ಟಿಗೂ ಹಿಂದು ಹಿಂದಕ್ಕೆ ಎಳೆದುಕೊಳ್ಳುವ ಅಭ್ಯಾಸವನ್ನು ನಾವು ಮಾಡುತ್ತಿರಬೇಕು.

ಸ್ಥಿತಪ್ರಜ್ಞನ ಲಕ್ಷಣಗಳೂ ಅವುಗಳನ್ನು ಗುರಿಯಾಗಿಟ್ಟುಕೊಂಡು ಮುಮುಕ್ಷುಗಳು ಮಾಡಬೇಕಾದ ಸಾಧನಗಳೂ ಇನ್ನೂ ಕೆಲವು ಇವೆ. ಅದನ್ನು ಮುಂದಿನ ವಾರ ವಿವೇಚನೆಮಾಡೋಣ.

# ೧೭. ಸ್ಥಿತಪ್ರಜ್ಞನ ಲಕ್ಷಣಗಳು ೨-(೫೬-೬೩)

## (೨೦.೧೧.೫೬)

ಸ್ಥಿತಪ್ರಜ್ಞನ ಲಕ್ಷಣಗಳನ್ನು ಮುಮುಕ್ಷುಗಳಿಗಾಗಿಯೇ ಹೇಳಿರುತ್ತದೆ. ಆದರೂ ಮುಮುಕ್ಷುಗಳಲ್ಲದವರೂ ಆ ಧರ್ಮಗಳನ್ನು ತಮ್ಮ ಕೈಯಲ್ಲಾದಷ್ಟು ಮಟ್ಟಿಗೆ ಅನುಸರಿಸುವದರಿಂದ ಒಳ್ಳೆಯದಾಗುವದು. ನಗರರಕ್ಷಣೆಯನ್ನು ಮಾಡುವದು ಪೋಲೀಸಿನವರ ಕರ್ತವ್ಯ; ಆದರೆ ಅವರ ಕಾರ್ಯದಲ್ಲಿ ತೊಡಕುಂಟಾಗದಂತೆ ನಗರದವರೂ ಸಹಾಯಮಾಡುವದು ಅವರಿಗೇ ಹಿತಕರವಾಗಿರುತ್ತದೆ. ಆದ್ದರಿಂದ ನಾವುಗಳು ಮುಮುಕ್ಷುಗಳಲ್ಲದಿದ್ದರೂ ಸ್ಥಿತಪ್ರಜ್ಞನ ಲಕ್ಷಣಗಳನ್ನು ತಿಳಿದುಕೊಂಡು ನಮ್ಮ ನಮ್ಮ ಯೋಗ್ಯತೆಗೆ ತಕ್ಕಂತೆ ಆ ಲಕ್ಷಣಗಳನ್ನು ಗುರಿಯಾಗಿಟ್ಟುಕೊಂಡು ಸಾಧನಗಳನ್ನು ಕೈಕೊಳ್ಳುವದು ಒಳ್ಳೆಯದು.

ಸ್ಥಿತಪ್ರಜ್ಞನಿಗೆ ಜ್ಞಾನವು ಪರಮಾತ್ಮನಲ್ಲಿ ಅಲುಗಾಡದೆ ನಿಂತುಬಿಟ್ಟಿರುತ್ತದೆ. ಆದ್ದರಿಂದ ಅವನಿಗೆ ಪರಮಾತ್ಮನನ್ನು ಅರಿಯದ್ದೆಂಬ ಅಜ್ಞಾನವು ಇರುವದೇ ಇಲ್ಲ. ಅಜ್ಞಾನದ ಫಲವು ಕಾಮವು; ಆದ್ದರಿಂದ ಅವನಿಗೆ ಕಾಮಗಳು ಒಂದಿಷ್ಟೂ ಇರುವದಿಲ್ಲ. ಸ್ಥಿತಪ್ರಜ್ಞರಾದ ಜ್ಞಾನಿಗಳು ತಮ್ಮೊಳಗಿನ ಪರಮಾತ್ಮನಲ್ಲಿ ನೆಟ್ಟ ಮನಸ್ಸುಳ್ಳವರಾಗಿರುವದರಿಂದ ಅವರು **ಅಂತರ್ಮುಖರು**. ಮಿಕ್ಕವರು ಅಜ್ಞಾನದಿಂದ ಹೊರಗಿನ ವಿಷಯಗಳನ್ನು ಕಾಣುತ್ತಾ ಅವುಗಳಲ್ಲಿಯೇ ನೆಟ್ಟ ಮನಸ್ಸುಳ್ಳವ ರಾಗಿರುತ್ತಾರಾದ್ದರಿಂದ **ಬಹಿರ್ಮುಖರು**. ಬಹಿರ್ಮುಖರಿಗೆ ಯಾವಾಗಲೂ ವಿಷಯ ಗಳಲ್ಲಿ, ಅನಾತ್ಮವಸ್ತುಗಳಲ್ಲಿ, ಸತ್ಯತ್ವಬುದ್ಧಿಯಿರುತ್ತದೆ; ಅವುಗಳಲ್ಲಿ ಕಾಮವೂ ಇರುತ್ತದೆ. ಕಾಮದಿಂದ ಬೇಕಾದದ್ದನ್ನು ಸಂಪಾದಿಸುವದಕ್ಕೂ ಬೇಡದ್ದನ್ನು ದೂರವಾಗಿಡುವದಕ್ಕೂ ಪ್ರಯತ್ನಿಸುತ್ತಿರುತ್ತಾರೆ. ಅವಿದ್ಯಾಕಾಮಕರ್ಮಗಳೇ ಅವರ ಗುರುತು. ಅವಿದ್ಯಾಕಾಮಕರ್ಮಗಳಲ್ಲಿ ತೊಳಲುತ್ತಿರುವದರಿಂದ ಅವರನ್ನು ಸಂಸಾರಿಗಳು ಎಂದು ಕರೆಯುತ್ತಾರೆ. ಸ್ಥಿತಪ್ರಜ್ಞರು ಸಂಸಾರಿಗಳ ವರ್ತನೆಗೆ ತೀರ ವಿರುದ್ಧವಾಗಿರುತ್ತಾರೆ; ಅವರಲ್ಲಿ ಅವಿದ್ಯಾಕಾಮಕರ್ಮಗಳು ಇರುವದೇ ಇಲ್ಲ.

ಹಿಂದಿನ ಉಪನ್ಯಾಸದಲ್ಲಿ ಸ್ಥಿತಪ್ರಜ್ಞರ ಕೆಲವು ಲಕ್ಷಣಗಳನ್ನು ಹೇಳಿರುತ್ತದೆ. ಆ ಲಕ್ಷಣಗಳಲ್ಲಿ ಕಾಮಗಳನ್ನು ಸಂಪೂರ್ಣವಾಗಿ ತ್ಯಾಗಮಾಡಿರುವದೆಂಬ ಲಕ್ಷಣವು ಮೊಟ್ಟಮೊದಲನೆಯದು. ಅವರು ಸುಖದುಃಖಗಳಲ್ಲಿ ಸಮರಾಗಿದ್ದುಕೊಂಡಿರುವರು. ಬಂದ ಶುಭಾಶುಭಗಳ ವಿಷಯದಲ್ಲಿ ಯಾವ ಆಸಕ್ತಿಯನ್ನೂ ತೋರದೆ ಇರುವರು-

ಎಂಬುದು ಮತ್ತೊಂದು ಲಕ್ಷಣವು. ಅವರ ಇಂದ್ರಿಯಗಳು ಹೊರಹೊಮ್ಮದೆ ಇರುವವೆಂಬುದು ಇನ್ನೊಂದು ಲಕ್ಷಣವು. ಇಷ್ಟು ಲಕ್ಷಣಗಳನ್ನು ಹಿಂದೆ ತಿಳಿಸಿದ್ದಾಗಿದೆ.

ಈ ಎಲ್ಲಾ ಲಕ್ಷಣಗಳಲ್ಲಿಯೂ ಕಾಮರಾಹಿತ್ಯವೆಂಬುದೇ ಮುಖ್ಯ. ಕಾಮವಿದ್ದವನಿಗೇ ವಿಷಯಗಳಲ್ಲಿ ಸುಖದುಃಖಗಳ ಲಕ್ಷ್ಯವೂ ಶುಭಾಶುಭಗಳಲ್ಲಿ ರಾಗ ದ್ವೇಷವೂ ಇರುವವು; ಕಾಮವಿದ್ದವನಿಗೆ ವಿಷಯಗಳನ್ನು ಕಂಡಮಾತ್ರದಿಂದ ಇಂದ್ರಿಯಗಳು ಜೋಲುಬೀಳುವವು. ಆದರೆ ಸ್ಥಿತಪ್ರಜ್ಞರಿಗೆ ಪರಮಾತ್ಮನಲ್ಲಿಯೇ ಮನಸ್ಸು ಸಹಜವಾಗಿದ್ದುಕೊಂಡಿರುವದರಿಂದ ಕಾಮಾದಿಗಳು ಯಾವವೂ ಇರುವದಿಲ್ಲ; ನಮ್ಮಗಳಿಗೆ ಹೊರಗಿನ ವಿಷಯಗಳಲ್ಲಿಯೇ ಮನಸ್ಸು ಸಹಜವಾಗಿದ್ದುಕೊಂಡಿರುತ್ತದೆ; ಆದ್ದರಿಂದ ವಿಷಯಗಳ ಸ್ಮರಣೆಯಿಂದ, ನಿರೀಕ್ಷಣೆಯಿಂದ, ವಿಷಯಗಳು ಹತ್ತಿರಕ್ಕೆ ಬಂದಾಗ ಅಥವಾ ನಮ್ಮನ್ನು ಬಿಟ್ಟು ಅಗಲಿದಾಗ ಮನಸ್ಸಿನಲ್ಲಿ ಒದ್ದಾಟವೂ ದುಃಖವೂ ಆಗುತ್ತಲೇ ಇರುವವು.ಶುಕರಿಗೆ ತಲೆಯ ಮೇಲೆಕುಂಭವನ್ನಿಟ್ಟುಮಿಥಿಲಾನಗರಿಯನ್ನೆಲ್ಲ ಸುತ್ತಿಸಿದಾಗ ಅವರಿಗೆ ಕುಂಭದ ಕಡೆಗೇ ಯೋಚನೆಯು ಇದ್ದದ್ದರಿಂದ ನಗರದ ನೋಟಗಳು ಯಾವವೂ ಮನಸ್ಸಿಗೆ ಹತ್ತಲೇಇಲ್ಲ-ಎಂದು ಭಾರತದಲ್ಲಿದೆ. ಇದರಂತೆ ಪರಮಾತ್ಮನ ಚಿಂತೆಯ ಪ್ರಾಬಲ್ಯದಿಂದ ಸ್ಥಿತಪ್ರಜ್ಞರ ಇಂದ್ರಿಯಗಳು ಒಳಸರಿದು ಬಿಟ್ಟಿರುವವು, ಹೊರಗಿನ ಅರಿವೇ ಅವರಿಗೆ ಇರುವದಿಲ್ಲ. ಆಶ್ರಮಗಳಲ್ಲಿದ್ದ ಋಷಿಗಳನ್ನು ಯಾರಾದರೂ ನೋಡುವದಕ್ಕೆ ಬಂದಾಗ ಧ್ಯಾನಮಗ್ನರಾಗಿದ್ದ ಆ ಮಹಾತ್ಮರು ಎಚ್ಚತ್ತುನೋಡುವಾಗ "ನೀವು ಯಾರು! ಯಾವಾಗ ಬಂದಿರಿ?" ಎಂದು ಕೇಳುತ್ತಿದ್ದರೆಂದು ಪುರಾಣಗಳಲ್ಲಿ ವರ್ಣಿಸಿರುವದನ್ನು ನೆನಪಿಗೆ ತಂದುಕೊಳ್ಳಿರಿ. ಪರಮಾತ್ಮನ ಚಿಂತೆಯಿಂದ ಇಂದ್ರಿಯಗಳಿಗೆ ವಿಷಯಗಳು ಎಷ್ಟು ಅಪರಿಚಿತವಾಗುವವು ಎಂಬುದು ಆಗ ಮನದಟ್ಟಾಗುತ್ತದೆ.

"ವಿಷಯಾ ವಿನಿವರ್ತಂತೇ" ಎಂಬ ಶ್ಲೋಕದಲ್ಲಿ ಸ್ಥಿತಪ್ರಜ್ಞರ ಇಂದ್ರಿಯಗಳು ಉಪಸಂಹೃತವಾಗಿರುವವಲ್ಲದೆ, ಅವರಿಗೆ ಮನಸ್ಸು ಪರಮಾತ್ಮನಲ್ಲಿಯೇ ನಿಂತು ಬಿಟ್ಟಿರುವದರಿಂದ ಅವರಿಗೆ ವಿಷಯದ ವಾಸನೆಯೂ ಹೋಗಿಬಿಟ್ಟಿರುವದೆಂಬುದನ್ನು ಸ್ಪಷ್ಟಪಡಿಸಿರುತ್ತದೆ. ಈ ಶ್ಲೋಕದಲ್ಲಿರುವ 'ಆಹಾರ' ಎಂಬ ಮಾತಿಗೆ ತಿನ್ನುವ ಪದಾರ್ಥ ಎಂದಿಷ್ಟೇ ಅರ್ಥವಲ್ಲ; ಇಂದ್ರಿಯಗಳಿಗೆ ಯಾವ ಯಾವದು ವಿಷಯವೋ, ಯಾವಯಾವ ವಿಷಯವನ್ನು ಅವು ಆಹರಣಮಾಡಿ, ತಂದು, ಜೀವನಿಗೆ ಒಪ್ಪಿಸುವವೋ ಅದೆಲ್ಲವೂ ಆಹಾರವೇ. ಇಂದ್ರಿಯಗಳಿಗೆ ತಮ್ಮ ತಮ್ಮ ಆಹಾರವು ದೊರೆತರೆ ಕೌಶಲವು ಹೆಚ್ಚುತ್ತದೆ. ಅವು ಎಷ್ಟೆಷ್ಟು ವಿಷಯಸೇವನೆಯಲ್ಲಿ ನಿರತವಾಗುವವೋ ಅಷ್ಟಷ್ಟು ಸೂಕ್ಷ್ಮವಾಗುತ್ತವೆ ಎಂದು ಯೋಗಶಾಸ್ತ್ರದಲ್ಲಿ ಹೇಳಿರುತ್ತದೆ. ಆದ್ದರಿಂದ

ಅವಕ್ಕೆ ಕೆಲವು ದಿನಗಳವರೆಗೆ ಆಹಾರವನ್ನು ಹಾಕದೆ ಇದ್ದರೆ ಅವು ಹಿಂತಿರುಗುವವು, ಸೊರಗುವವು; ಅವುಗಳ ಕೌಶಲವು ಕಡಿಮೆಯಾಗುವದು, ಅವು ಮೊಂಡಾಗುವವು. ಆದರೆ ವಿಷಯದ ರಾಗವು ಮಾತ್ರ ಮನಸ್ಸಿನಲ್ಲಿ ಉಳಿದುಕೊಂಡೇ ಇರುತ್ತದೆ. ಶ್ರೀರಾಮಕೃಷ್ಣಪರಮಹಂಸರು ಹೇಳಿರುವ ಒಂದು ದೃಷ್ಟಾಂತವನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು— ಕೆಲವು ಜನ ಸಂನ್ಯಾಸಿಗಳು ಒಂದು ಕಡೆಯಲ್ಲಿ ಕುಳಿತು ತತ್ತ್ವವಿಚಾರವನ್ನು ಮಾಡುತ್ತಿದ್ದರು. ಆಗ ಆ ಕಡೆಯಲ್ಲಿ ಒಬ್ಬ ಹೆಣ್ಣುಮಗಳು ಹೋಗುತ್ತಿದ್ದಳು. ಸಂನ್ಯಾಸಿಗಳಲ್ಲಿ ಒಬ್ಬನು ಕತ್ತೆತ್ತಿ ಆಕೆಯ ಕಡೆಗೆ ಒಮ್ಮೆ ನೋಡಿದನು. ಮಿಕ್ಕ ಸಂನ್ಯಾಸಿಗಳಿಗೆ ಆಶ್ಚರ್ಯವಾಯಿತು. ಕುತೂಹಲದಿಂದ ವಿಚಾರಿಸುವಲ್ಲಿ ಆ ಸಂನ್ಯಾಸಿಯು ಗೃಹಸ್ಥಾಶ್ರಮದಿಂದ ಸಂನ್ಯಾಸವನ್ನು ಸ್ವೀಕರಿಸಿದವನೆಂದು ತಿಳಿಯಬಂತು! ಅವನು ವಿಷಯಲೋಲುಪನಲ್ಲವಾದರೂ ಹಿಂದೆ ಅವನಿಗೆ ಆಗಿದ್ದ ಸ್ತ್ರೀಸಂಪರ್ಕದ ವಾಸನೆ ಇನ್ನೂ ಗುಪ್ತವಾಗಿ ಉಳಿದುಕೊಂಡುಬಿಟ್ಟಿತ್ತು! ಇಂಥ ವಿಷಯರಸವು, ಇಂದ್ರಿಯಗಳನ್ನು ಹಿಮ್ಮೆಟ್ಟಿಸಿಕೊಂಡ ಮಾತ್ರದಿಂದ ಹೋಗುವದಿಲ್ಲ. ಪರಮಾತ್ಮನನ್ನು ಕಂಡಬಳಿಕ ಅದು ಹೋಗಿಬಿಡುತ್ತದೆ. ಅದೇಕೆ? ಎಂದರೆ ಪರಮಾತ್ಮನೇ ಎಲ್ಲದರ ರಸವು, ಮನುಷ್ಯನಿಗೆ ಆನಂದವಾಗುವದು ಪರಮಾತ್ಮರಸದಿಂದಲೇ ಎಂದು ಶ್ರುತಿಯು ಸಾರುತ್ತಿದೆ. ಅಂಥ ಪರಮಾತ್ಮನೆಂಬ ರಸವನ್ನು ಕಂಡುಕೊಂಡರೆ, ಸುಮ್ಮನೆ ಅದರ ಶ್ರವಣಮಾಡಿದರಲ್ಲ, ಸಾಕ್ಷಾತ್ಕಾರಮಾಡಿಕೊಂಡರೆ, ಆಗ ವಿಷಯಗಳು ನೀರಸವಾಗಿ ತೋರುತ್ತವೆ. ಸ್ಥಿತಪ್ರಜ್ಞರಿಗೆ ಇಂಥ ರಸರೂಪನಾದ ಪರಮಾತ್ಮನ ದರ್ಶನವಾಗಿರುತ್ತದೆ.

ಈಗ ಇದುವರೆಗೆ ಹೇಳಿರುವ ವಿಷಯವನ್ನೇ ಭಗವಂತನು ಉಪಸಂಹಾರ ಮಾಡುತ್ತಾನೆ. ಭಗವಂತನಿಗೆ ಅರ್ಜುನನು ಉದ್ಧಾರವಾಗಬೇಕು, ಅವನು ಇಂದ್ರಿಯಗಳ ಕಾಟಕ್ಕೆ ಸಿಕ್ಕಿಕೊಳ್ಳಬಾರದು ಎಂಬ ಅಭಿಪ್ರಾಯವಿರುವದರಿಂದ ಅದೇ ವಿಷಯವನ್ನೇ ಮತ್ತೆ ಮತ್ತೆ ಹೇಳುತ್ತಿದಾನೆ. ಸಾಧಕನಾದವನು ಇಂದ್ರಿಯಗಳನ್ನು ಹೇಗೆ ಗೆಲ್ಲಬೇಕು? ಎಷ್ಟೇ ವಿವೇಕಿಯಾಗಿರಲಿ, ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಳ್ಳಬೇಕೆಂದು ಎಷ್ಟೇ ಪ್ರಯತ್ನವನ್ನು ಮಾಡಲಿ, ಇಂದ್ರಿಯಗಳು ಮನಸ್ಸನ್ನು ಜಗ್ಗಿ ಎಳೆದುಕೊಂಡುಬಿಡುತ್ತವೆ. ಆದರೆ ಅವುಗಳೆಲ್ಲವನ್ನೂ ವಶದಲ್ಲಿಟ್ಟುಕೊಂಡು, ಯುಕ್ತನಾಗಿ, ಪರಮಾತ್ಮಪರನಾಗಿ ಕುಳಿತುಕೊಳ್ಳಬೇಕು. ಯುಕ್ತನೆಂದರೆ ಮನಸ್ಸನ್ನು ಸಮಾಧಾನದಲ್ಲಿಟ್ಟುಕೊಂಡವನು; ಯೋಗ (ಸಮಾಧಾನ), ಯುಕ್ತ (ಸಮಾಹಿತಚಿತ್ತನು)- ಎಂಬ ಮಾತುಗಳು ಈ ಅರ್ಥದಲ್ಲಿ ಮುಂದೆ ಆರನೆಯ ಅಧ್ಯಾಯದಲ್ಲಿ ಬರುತ್ತವೆ. ಇದೊಂದು ಪಾರಿಭಾಷಿಕ ಶಬ್ದವು. ಕರ್ಮಯೋಗವೆಂಬ ಅರ್ಥದಲ್ಲಿ ಈ ಅಧ್ಯಾಯದಲ್ಲಿ ಯೋಗಶಬ್ದವನ್ನು

ಉಪಯೋಗಿಸಿದ್ದರೂ ಇಲ್ಲಿ 'ಯುಕ್ತ' ನೆಂದರೆ ಈ ಅರ್ಥವೇ ಸರಿ ಎಂಬುದು ಸಂದರ್ಭದಿಂದಲೇ ಸ್ಪಷ್ಟವಾಗುತ್ತದೆ. ಇಂದ್ರಿಯಗಳು ನಿಮ್ಮ ಮನಸ್ಸನ್ನು ಎಳೆಯುತ್ತಿದ್ದರೂ ಅವಕ್ಕೆ ವಶರಾಗದೆ, ಅವುಗಳನ್ನು ಹಿಂಜಗ್ಗಿ, ಮನಸ್ಸನ್ನು ಹರಿಯಗೊಡದೆ ಇರಬೇಕು ಎಂದರ್ಥ. ವಿಷಯಗಳ ಸನ್ನಿಧಿಯಲ್ಲಿ ಮನಸ್ಸು ಹರಿದಾಡದಂತೆ ಇರುವದು ಹೇಗೆ ಸಾಧ್ಯ? ಎಂದರೆ ಅದಕ್ಕೆ "ಮತ್ಪರಃ" ಎಂಬ ವಿಶೇಷಣವು ಉತ್ತರವು. ಇಂದ್ರಿಯಗಳನ್ನು ಗೆಲ್ಲುವದಕ್ಕೆ ನಾವು ನಾವೇ ಪ್ರಯತ್ನಿಸಿದರೆ ಸಾಧ್ಯವಿಲ್ಲ; ಅದಕ್ಕೆ ಪರಮಾತ್ಮನ ಬಲವು ಬೇಕು. ಒಬ್ಬ ಭಕ್ತನು ಹೀಗೆಂದು ಹಾಡಿರುತ್ತಾನೆ: "ಸದ್ದು ಮಾಡದಿರಿ ಸರ್ವೇಂದ್ರಿಯಂಗಳಿರ ಮುದ್ದುರಾಮನ ಪೂಜಿಪೆ" ಪರಮಾತ್ಮನ ಕಡೆಗೆ ನಮ್ಮ ಮನಸ್ಸು ಹೋಗುವದಕ್ಕೆ ಮೊದಲಾದರೆ ಸಾಕು, ಇಂದ್ರಿಯಗಳ ಹಾವಳಿಯು ಕಡಿಮೆಯಾಗಿಬಿಡುತ್ತದೆ. ಅವುಗಳ ಮೇಲೆ ನಮ್ಮ ಅಧಿಕಾರವು ನಡೆಯುವದಕ್ಕೆ ಮೊದಲಾಗುತ್ತದೆ. ಈಗ ಹಾಗಿಲ್ಲ. ನಾವು "ಭವತಿ ಭಿಕ್ಷಾಂ ದೇಹಿ" ಎಂದು ಐದು ಇಂದ್ರಿಯಗಳನ್ನೂ ಅಂಗಲಾಚಿ ಬೇಡಿಕೊಳ್ಳುತ್ತಿದೇವೆ. ಇಂದ್ರಿಯಗಳ ಮೇಲೆ ನಮ್ಮ ಪ್ರಭುತ್ವವು ಸಾಗುವದಕ್ಕೆ ನಾವು ಭಗವತ್ಪರರಾಗುವದೇ ಉಪಾಯ. ಪರಮಾತ್ಮನಲ್ಲಿ ಮನಸ್ಸು ನಿಲ್ಲುವದಕ್ಕೆ ಏನು ಮಾಡಬೇಕು? ಪರಮಾತ್ಮನ ಕಡೆಗೆ ತಿರುಗಬೇಕು. ಅವನನ್ನು ಲಕ್ಷ್ಯದಲ್ಲಿಡಬೇಕು. ಅವನೇ ನಮಗೆ ಬೇಕಾಗಬೇಕು. ಹೊರಗಿನ ವಸ್ತುಗಳು ನಮಗೆ ಬೇಕಾಗಿರುವವರೆಗೆ ನಮಗೆ ಗೋಳಾಟವು ತಪ್ಪಿದ್ದಲ್ಲ. ಭಗವಂತನಿಗೆ ನಮ್ಮನ್ನು ನಾವು ಸಮರ್ಪಣೆಮಾಡಿಕೊಂಡುಬಿಡೋಣ. ರಾಜನ ಆಪ್ತಸ್ನೇಹಿತನಾದವನಿಗೆ, ರಾಜನ ಹೃದಯವು ತಿಳಿಯುವದು; ರಾಜನ ಬಳಿಯಲ್ಲಿ ಸಲಿಗೆಯಿಂದ ಇರುತ್ತಾನೆಂದು ಆದ ಒಡನೆ ಮಿಕ್ಕವರೆಲ್ಲರೂ ಹೇಳಿದಂತೆ ಕೇಳುವರು. ಇದರಂತೆ ಭಗವಂತನಲ್ಲಿ ತತ್ಪರನಾಗಿರುವವನಿಗೆ ಸರ್ವವೂ ವಶದಲ್ಲಿರುವದು, ಇಂದ್ರಿಯಗಳು ಅವನಿಗೆ ಅಡಿಯಾಳಾಗಿರುವವು.

ಸ್ಥಿತಪ್ರಜ್ಞನ ಲಕ್ಷಣಗಳನ್ನು ಬಗೆಬಗೆಯಾಗಿ ವರ್ಣಿಸಿದ್ದರೂ "ಕಾಮವನ್ನು ಸ್ಥಿತಪ್ರಜ್ಞನು ಗೆದ್ದುಕೊಂಡಿರುತ್ತಾನೆ; ಅವನಿಗೆ ಪರಮಾತ್ಮನ ಜ್ಞಾನವೇ ಅದಕ್ಕೆ ಸಾಧನವಾಗಿರುತ್ತದೆ. ಆದ್ದರಿಂದ ನಾವೂ ಭಗವಂತನಲ್ಲಿ ಮನಸ್ಸನ್ನಿಟ್ಟು ಕಾಮವನ್ನು ಗೆದ್ದುಕೊಳ್ಳುವದಕ್ಕೆ ಪ್ರಯತ್ನಿಸಬೇಕು" ಎಂಬಿಷ್ಟರಲ್ಲಿಯೇ ಎಲ್ಲವೂ ಅಡಕವಾಗಿರುವದೆಂದು ಹೇಳಬಹುದಾಗಿದೆ. ಈ ಸಾಧನವನ್ನು ಮಾಡುವದಕ್ಕೆ ಅನುಕೂಲಿಸುವಂತೆ ಮಿಕ್ಕ ವಿವರಗಳನ್ನು ಕೊಟ್ಟಿರುತ್ತದೆ. ಪರಮಾತ್ಮನನ್ನು ಚಿಂತಿಸುವವನಿಗೆ ಎಲ್ಲಾ ಪುರುಷಾರ್ಥವೂ ಕೈಸೇರುವದು. ವಿಷಯವನ್ನು ಚಿಂತಿಸುವವನಿಗೆ ಎಲ್ಲಾ ಅನರ್ಥಗಳೂ

ಬಂದೊದಗುವವು. ಇದನ್ನು ವಿವರಿಸಿ ಹೇಳುವದು ಈ ಪ್ರಕರಣದಲ್ಲಿ ಮುಖ್ಯ ವಾಗಿರುತ್ತದೆ.

ಮನಸ್ಸಿನಲ್ಲಿ ವಿಷಯವನ್ನೇ ಚಿಂತಿಸುವ ಸಂಸಾರಿಗಳಿಗೆ ಆಗುವ ಅನರ್ಥಗಳನ್ನು "ಧ್ಯಾಯತೋ ವಿಷಯಾನ್" ಮುಂತಾದ ಶ್ಲೋಕಗಳಲ್ಲಿ ವರ್ಣಿಸಿರುತ್ತದೆ. ಸಂಸಾರಿ ಗಳಿಗೆ ವಿಷಯದ ಸಂಗವೆಂಬುದು ಸಹಜವಾಗಿರುತ್ತದೆ. ಅವರ ಮನಸ್ಸು ವಿಷಯಗಳಿಗೆ ಅಂಟಿಕೊಂಡೇ ಇರುತ್ತದೆ. ಇದಕ್ಕೆ **ಸಂಗ**ವೆಂದು ಹೆಸರು. ವಿಷಯಚಿಂತನೆಯಿಂದ ಈ ಸಂಗವು ಬಲಿತುಕೊಂಡಿರುತ್ತದೆ; ಸಂಗದಿಂದ ಚಿಂತೆಯು ಬೆಳೆದುಕೊಳ್ಳುತ್ತಿರುತ್ತದೆ. ಮನಸ್ಸು ಹೊರಕ್ಕೆ ಬಂದರೆ ಸರಿ, ಸಂಗವು **ಕಾಮ**ವಾಗುತ್ತದೆ. ವಿಷಯಗಳ ಕಡೆಗೆ ತಿರುಗಿದ ಸಂಗವೇ ಕಾಮವೆಂಬ ರೂಪವನ್ನು ಧರಿಸುವದು; ಕಾಮಕ್ಕೆ ವಿಷಯವು ದೊರಕದಿದ್ದರೆ, ಕಾಮಕ್ಕೆ ಅಡ್ಡಿಯಾದರೆ **ಕ್ರೋಧ**ವು ತಲೆದೋರುತ್ತದೆ. ಕ್ರೋಧವು ಆವರಿಸಿದಂತೆಲ್ಲ ಮನಸ್ಸಿಗೆ ಏನೂ ತೋಚದಂತೆ ಆಗಿಬಿಡುತ್ತದೆ. ಆ ಸ್ಥಿತಿಗೆ **ಸಮ್ಮೋಹ** ಎಂದು ಹೆಸರು. ಸಮ್ಮೋಹದಿಂದ ಸ್ಮೃತಿಯು ಹೋಗಿಬಿಡುವದು; **ಸ್ಮೃತಿಭ್ರಂಶ**ದಿಂದ ಬುದ್ಧಿಯು ನಾಶವಾಗುವದು: **ಬುದ್ಧಿನಾಶ**ದಿಂದ ಮನುಷ್ಯನು ಹಾಳಾಗುವನು. ಸ್ಮೃತಿ, ಬುದ್ಧಿ-ಇವುಗಳು ಮನುಷ್ಯನ ವ್ಯವಹಾರಕ್ಕೆ ಎಷ್ಟು ಅವಶ್ಯವೆಂಬುದನ್ನು ಪರೀಕ್ಷಿಸಿದ ಮೇಲೆಯೇ ತಿಳಿಯುತ್ತದೆ. ನಮ್ಮ ಅಂತಃಕರಣದಿಂದಲೇ ನಾವು ನಮ್ಮ ವ್ಯವಹಾರವನ್ನೆಲ್ಲ ಸಾಗಿಸುತ್ತಿರುವೆವು. ಅಂತಃಕರಣವನ್ನು ಗಡಿಯಾರದಂಥ ಒಂದು ಯಂತ್ರಕ್ಕೆ ಹೋಲಿಸಿದರೆ ಆ ಗಡಿಯಾರಕ್ಕೆ ಕೀಲುಕೊಡುವದೇ ಸ್ಮೃತಿ ಎನ್ನಬಹುದು. ಪ್ರತಿಯೊಂದು ವಸ್ತುವನ್ನು ಕಂಡ ಒಡನೆ ಹಿಂದಿನ ಅನುಭವದ ನೆನಪಿನ ಬಲದಿಂದಲೇ ನಾವು ಅದನ್ನು ಗುರುತಿಸುವೆವು; ಮುಂದೆ ಅದನ್ನು ನಮಗೆ ಬೇಕಾದಂತೆ ಉಪಯೋಗಿಸುವದಕ್ಕೆ ಪ್ರಯತ್ನಿಸುವದೂ ಈ ನೆನಪಿನ ಬಲದಿಂದಲೇ. ಸ್ಮೃತಿಶಕ್ತಿಯು ಹೋಗಿಬಿಟ್ಟರೆ ನಮ್ಮ ಯಾವದೊಂದು ವ್ಯವಹಾರವೂ ಸಾಗಲಾರ ದೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇನ್ನು ಬುದ್ಧಿ ಎಂಬುದು ಇದನ್ನು ಮಾಡಬೇಕು, ಇದನ್ನು ಮಾಡಬಾರದು-ಎಂಬ ವಿವೇಕದ ಹೆಸರು. ಯಾವನಿಗೆ ಯಾವ ನೆನಪೂ ಇಲ್ಲವೋ ಅವನಿಗೆ ಇದು ಬೇಕಾದದ್ದು, ಇದು ಬೇಡವಾದದ್ದು-ಎಂದು ತಿಳಿಯುವದು ಹೇಗೆ? ಅದು ತಿಳಿಯದೆ ಇದ್ದರೆ ಇದನ್ನು ಮಾಡಬೇಕು, ಇದನ್ನು ಮಾಡಬಾರದು-ಎಂಬ ವಿವೇಕವುಂಟಾಗುವದು ತಾನೆ ಹೇಗೆ? ವಿವೇಕಪ್ರತ್ಯಯವನ್ನು ಬ್ಯಾಂಕುಗಳಲ್ಲಿ ಉಪಯೋಗಿಸುವ ಟೋಕನ್-ಗಳೆಂಬ ಸಂಕೇತದ ವಸ್ತುಗಳಿಗೆ ಹೋಲಿಸಬಹುದು. ನಾವು ಬ್ಯಾಂಕುಗಳಲ್ಲಿ ಕೊಡುವ ಚೆಕ್ಕುಗಳಿಗೆ ಬದಲು ಅವರು ನಮಗೆ ಟೋಕನ್‌ಗಳನ್ನು ಕೊಡುತ್ತಾರೆ; ಆ ಟೋಕನ್‌ಗಳನ್ನು ಸರಾಫರಿಗೆ ಕೊಟ್ಟರೆ

ಅವರು ಹಣವನ್ನು ಸಲ್ಲಿಸುವರು. ಇದು ಬ್ಯಾಂಕಿನ ಕ್ರಮ. ವ್ಯವಹಾರದ ಬ್ಯಾಂಕಿನಲ್ಲಿಯೂ ಹೀಗೆಯೇ. ನಮ್ಮ ಅಂತಃಕರಣಗಳಲ್ಲಿ ಉಂಟಾಗುವ ವಿವೇಕರೂಪವಾದ ಪ್ರತ್ಯಯಗಳೇ ಇಲ್ಲಿ ಟೋಕನ್‌ಗಳೆಂಬ ಸಂಕೇತಗಳು; ಈ ಸಂಕೇತಗಳ ಮೂಲಕವಾಗಿಯೇ ನಾವು ವಸ್ತುಗಳನ್ನು ಪಡೆಯುವೆವು, ಕರ್ತವ್ಯಾಕರ್ತವ್ಯಗಳನ್ನು ನಿಶ್ಚಯಿಸುವೆವು. ಯಾವಾಗ ಟೋಕನ್‌ಗಳಂತಿರುವ ಬುದ್ಧಿಪ್ರತ್ಯಯಗಳು ವ್ಯವಸ್ಥಿತವಾಗಿ ಉಂಟಾಗುವದಿಲ್ಲವೋ ಆಗ ವಸ್ತುವಿವೇಕವಾಗಲಿ ಕಾರ್ಯಾಕಾರ್ಯವಿವೇಕವಾಗಲಿ ಇಲ್ಲದಿರುವದರಿಂದ ವ್ಯವಹಾರವೇ ಇಲ್ಲದಂತಾಗಿಬಿಡುವದು. ಆಗ ಮನುಷ್ಯನು ಇದ್ದರೂ ಸತ್ತಂತೆಯೇ ಸರಿ.

ಹೀಗೆ ನೋಡುವಾಗ ಮನುಷ್ಯನ ವ್ಯಕ್ತಿತ್ವವು ಇರಬೇಕಾದರೆ, ಅವನು ಪುರುಷಾರ್ಥಸಾಧನೆಗೆ ಯೋಗ್ಯನಾಗಿ ಉಳಿಯಬೇಕಾದರೆ, ಅವನ ಬುದ್ಧಿಯು ವ್ಯವಸ್ಥಿತವಾಗಿರಬೇಕು; ಅದಕ್ಕೆ ಸ್ಮೃತಿಯು ಅವಶ್ಯ; ಸ್ಮೃತಿಯು ನೆಟ್ಟಗಿರಬೇಕಾದರೆ ನಮ್ಮ ಮನಸ್ಸಿನಲ್ಲಿ ಕಾಮಕ್ರೋಧಗಳಿಂದ ಸಮ್ಮೋಹವುಂಟಾಗಬಾರದು; ಅದು ಆಗದೆ ಇರಬೇಕಾದರೆ ವಿಷಯಸಂಗವಿರಬಾರದು; ಸಂಗವು ಹೋಗಬೇಕಾದರೆ ವಿಷಯಧ್ಯಾನವು ತಪ್ಪಬೇಕು. ಹೀಗೆ ವಿಷಯಧ್ಯಾನವೇ ಸರ್ವಾನರ್ಥಕ್ಕೂ ಮೂಲವೆಂದು ಏರ್ಪಡುತ್ತದೆ. ವಿಷಯಧ್ಯಾನದಿಂದ ಈ ಕ್ರಮದಲ್ಲಿ ನಾವು ಬೀಳುವೆವೆಂದು ಮನಸ್ಸಿಗೆ ಬಂದರೆ, ನಾವು ಏಳುವದಕ್ಕೆ ಈ ಅನರ್ಥಕಾರಣಗಳನ್ನು ತಪ್ಪಿಸಿಕೊಳ್ಳಬೇಕೆಂದು ತಾನೇ ಸಿದ್ಧವಾಗುತ್ತದೆ. ವಿಷಯಚಿಂತನೆಯನ್ನು ಮಾಡುತ್ತಿದ್ದರೆ ಕಾಮಕ್ರೋಧಗಳು ನಮಗೆ ಅರಿವಾಗದಂತೆಯೇ ಮೆಲ್ಲಮೆಲ್ಲಗೆ ಬಂದು ಮೇಲೆ ಹತ್ತಿಕೊಂಡುಬಿಡುತ್ತವೆ. ಆದರೆ ಎಚ್ಚರಿಕೆಯಿಂದ ಇದ್ದು ನಮ್ಮನ್ನು ನಾನೇ ಪರೀಕ್ಷಿಸಿಕೊಳ್ಳುತ್ತಿದ್ದರೆ "ಓಹೊ, ನಾನು ವಿಷಯಚಿಂತನೆಯಲ್ಲಿದ್ದೆನು, ಇದರಿಂದ ನನಗೆ ವಿಷಯದಲ್ಲಿ ಸಂಗವುಂಟಾಯಿತು. ಇದರಿಂದಲೇ ನನಗೆ ಈ ವಿಷಯಗಳ ಕಾಮವುಂಟಾಗಿದೆ. ಬೆಳ್ಳುಳ್ಳಿಯನ್ನು ತಿಂದವನ ಉಸಿರಿನಲ್ಲಿಯೂ ಬೆಳ್ಳುಳ್ಳಿ ವಾಸನೆಯೇ ತೋರುವಂತೆ ವಿಷಯಚಿಂತನೆಯಿಂದ ನನ್ನ ವ್ಯವಹಾರವೇ ವಿಷಯಮಯವಾಗಿಬಿಟ್ಟಿರುತ್ತದೆ" ಎಂದು ಗೊತ್ತಾಗಿಬಿಡುತ್ತದೆ. ಹೀಗೆ ಮೆಲ್ಲಮೆಲ್ಲಗೆ ನಾವು ಬೀಳುತ್ತಿರುವದನ್ನು ಕಂಡುಕೊಂಡು ಉಪಾಯದಿಂದ ಮೇಲಕ್ಕೇಳಬಹುದಾಗುತ್ತದೆ.

ಸ್ಥಿತಪ್ರಜ್ಞರು ಆತ್ಮಜ್ಞಾನದ ಬಲದಿಂದ ಆತ್ಮಚಿಂತನೆಯಲ್ಲಿಯೇ ನಿಂತಿರುವದರಿಂದ ಅವರಿಗೆ ಯಾವ ಅನರ್ಥಗಳೂ ಆಗಿರುವದಿಲ್ಲ ಎಂಬ ಲಕ್ಷಣವಾಕ್ಯವನ್ನು ಮನನ ಮಾಡಿದರೆ ಸಂಸಾರದ ಅನರ್ಥಪರಂಪರೆಯಿಂದ ಪಾರಾಗುವದಕ್ಕೆ ಭಗವಚ್ಚಿಂತನೆಯೇ ಮುಖ್ಯವಾದ ಉಪಾಯವೆಂಬುದು ತಾನೇ ಹೊಳೆಯುತ್ತದೆ. ಆದ್ದರಿಂದ ಅವರ ವರ್ತನೆಯನ್ನು ವಿಚಾರಮಾಡುವದು ಸಾಧಕರಿಗೆಲ್ಲ ಪ್ರಯೋಜನಕರವಾಗಿರುತ್ತದೆ.

# ೧೮. ಸ್ಥಿತಪ್ರಜ್ಞನೂ ಅವನಿಗೆ ದೊರೆಯುವ ಮಹಾಫಲವೂ ೨-(೬೪-೭೨)

(೨೭.೧೦.೪೬)

ಸ್ಥಿತಪ್ರಜ್ಞನ ಲಕ್ಷಣವನ್ನು ಹೇಳುವದಕ್ಕೆ ಪ್ರಾರಂಭಿಸಿ ಮುಖ್ಯವಾಗಿ ಅವನಿಗೆ ಪರಮಾತ್ಮನಿಷ್ಠೆಯಿರುವದರಿಂದ ವಿಷಯಧ್ಯಾನಕ್ಕೆ ಅವಕಾಶವಿಲ್ಲ; ವಿಷಯಧ್ಯಾನದಿಂದ ಆಗುವ ಅನರ್ಥಗಳೂ ಅವನಿಗೆ ಆಗುವದಿಲ್ಲ ಎಂಬುದನ್ನು ತಿಳಿಸಿದ್ದಾಯಿತು. ವಿಷಯಧ್ಯಾನದಿಂದ ಮನುಷ್ಯನು ಹೇಗೆ ಕೆಡುತ್ತಾನೆ? ಅವನಿಗೆ ಸಂಗ, ಕಾಮ, ಕ್ರೋಧ, ಸಮ್ಮೋಹ, ಸ್ಮೃತಿಭ್ರಂಶ, ಬುದ್ಧಿನಾಶ-ಇವುಗಳು ಸಮುದ್ರದ ಅಲೆಗಳಂತೆ ಒಂದರ ಹಿಂದೊಂದು ಒದಗಿ ಅವನ ವ್ಯಕ್ತಿತ್ವವನ್ನೇ ಹೇಗೆ ಹಾಳುಮಾಡುತ್ತವೆ?- ಎಂಬುದನ್ನು ವಿವರವಾಗಿ ತಿಳಿಸಿದ್ದಾಯಿತು. ಈಗ ಹೇಗಾದರೆ ಮನುಷ್ಯನು ಬದುಕುತ್ತಾನೆ, ಪುರುಷಾರ್ಥಭಾಗಿಯಾಗುತ್ತಾನೆ?- ಎಂಬುದನ್ನು ತಿಳಿಸುವದಕ್ಕಾಗಿ ಸ್ಥಿತಪ್ರಜ್ಞನು ಇಂದ್ರಿಯಗಳನ್ನು ನಿಗ್ರಹಿಸಿರುವದರ ರಹಸ್ಯವನ್ನು ಇನ್ನಷ್ಟು ವಿವರಿಸುತ್ತಾರೆ.

ಇಂದ್ರಿಯಗಳನ್ನು ವಿಷಯಗಳಲ್ಲಿ ಹರಿಯಬಿಟ್ಟರೆ ಅವು ಮನಸ್ಸನ್ನೂ ತಮ್ಮೊಡನೆ ಎಳೆದುಕೊಂಡು ಹೋಗುತ್ತವೆ; ಅವುಗಳನ್ನು ಬಿಗಿಹಿಡಿದು ಸುಮ್ಮನೆ ಕುಳಿತಿದ್ದರೂ ವಿಷಯಗಳಲ್ಲಿ ರಾಗವು ಇದ್ದೇ ಇರುತ್ತದೆ. ಆದ್ದರಿಂದ ವಿವೇಕಿಯಾದವನು ಹೇಗೆ ವರ್ತಿಸಬೇಕು? ಇದಕ್ಕೆ ಉತ್ತರವು ಈ ಶ್ಲೋಕದಲ್ಲಿದೆ:

**ರಾಗದ್ವೇಷವಿಯುಕ್ತೈಸ್ತು ವಿಷಯಾನಿನ್ದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥** (೨-೬೪)

ವಿಷಯಗಳಲ್ಲಿ ಅನುರಾಗವನ್ನು ಹೆಚ್ಚಿಸಿಕೊಳ್ಳುತ್ತಲಿರಬಾರದು; ಅವುಗಳು ನಮ್ಮ ಅನರ್ಥಕ್ಕೆ ಕಾರಣವೆಂದು ಅವನ್ನು ಹಗೆಮಾಡಲೂ ಬಾರದು. ವಿಷಯಗಳು ಹತ್ತಿರಕ್ಕೆ ಬಂದರೆ ಹಿಗ್ಗಬಾರದು, ಹೋದರೆ ಕುಗ್ಗಬಾರದು. ಅವುಗಳಿಗೆ ಯಾವ ಹೆಚ್ಚಿನ ಬೆಲೆಯನ್ನೂ ಕೊಡದೆ ಸಮಯೋಚಿತವಾಗಿ ಒದಗಿದಂತೆ ಅವನ್ನು ಇಂದ್ರಿಯಗಳಿಂದ ಅನುಭವಿಸುತ್ತಾ ಹೋಗಬೇಕು. ಹಿಂದೆ ದಾವಣಗೆರೆಯಲ್ಲಿದ್ದಾಗ ನಮ್ಮ ಮನೆಗೆ ಕೆಲವರು ಮಾಧ್ವರ ಹುಡುಗರು ಓದುವದಕ್ಕೆ ಬರುತ್ತಿದ್ದರು. ಅವರ ಮನೆಯವರು ವೀರವೈಷ್ಣವರಾದ್ದರಿಂದ ಏಕಾದಶಿಯ ದಿನ ಅವರಿಗೆ ತಿಂಡಿಯನ್ನೂ ಕೊಡುತ್ತಿರಲಿಲ್ಲ. ಆದರೆ ಹುಡುಗರು ತಮ್ಮ ಹಸಿವನ್ನು ಹೇಗೆ ತಡೆದುಕೊಳ್ಳಬೇಕು?- ಎಂಬುದು ಮಾತ್ರ ಅವರ ಮನಸ್ಸಿಗೆ ಹೊಳೆದಿರಲಿಲ್ಲ. ಇದರ ಫಲವಾಗಿ ಆ ಹುಡುಗರು ಅವರಿವರ ಮನೆಯಲ್ಲಿ ಏನಾದರೂ ತಿಂಡಿಯನ್ನು ಮನೆಯವರಿಗೆ

ತ್ರಿಳಿಯದಂತೆ ತಿನ್ನುವ ಅಭ್ಯಾಸವನ್ನು ಮಾಡಿದರು! ಏಕಾದಶಿಯ ದಿನ ಶುದ್ಧೋಪವಾಸವು ಉತ್ತಮವಾದರೂ ಅತ್ಯಂತವಾಗಿ ಇಂದ್ರಿಯಗಳನ್ನು ಬಲಾತ್ಕಾರದಿಂದ ಸೊರಗಿಸುವದರ ಬದಲು ಅನುಕಲ್ಪಗಳನ್ನು ಮಾಡಿಕೊಂಡು ಕ್ರಮಕ್ರಮವಾಗಿ ಉಪವಾಸಕ್ಕೆ ಹತ್ತಿಸಬೇಕೆಂದು ಹೇಳಿರುವ ಶಾಸ್ತ್ರವಚನವನ್ನು ಅವರಿಗೆ ಉಪಯೋಗಿಸಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು!

ಆಯಾ ಕಾಲಕ್ಕೆ ಒದಗಿದಂತೆ ವಿಷಯಗಳನ್ನು ಅನುಭವಿಸಬೇಕೆಂದು ಹೇಳಿದ್ದರಲ್ಲಿ ಸ್ವೇಚ್ಛಾಚಾರಕ್ಕೂ ಅವಕಾಶವಿದೆ. ಆದರೆ ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡು ವಿಷಯಗಳನ್ನು ಭೋಗಿಸಬೇಕೆಂದು ಈ ಶ್ಲೋಕದಲ್ಲಿ ಹೇಳಿರುವದರಿಂದ ಸ್ವೇಚ್ಛಾಚಾರವನ್ನು ತಡೆಗಟ್ಟಿದಂತಾಯಿತು. ಮಿಂದು ಮಡಿಯುಟ್ಟು ದೇವರ ನೈವೇದ್ಯವಾದ ಬಳಿಕವೇ ಊಟಮಾಡಬೇಕು, ಕೈಕಾಲು ತೊಳೆದುಕೊಂಡು ಶುಚಿಯಾಗಿಯೇ ತಿಂಡಿಯನ್ನು ತಿನ್ನಬೇಕು-ಎಂದೀ ಪರಿಯಲ್ಲಿ ನಿಯಮಗಳನ್ನು ಏರ್ಪಡಿಸಿಕೊಂಡರೆ ಇಂದ್ರಿಯಗಳು ವಶವಾಗಿರುವವು. ಅಂಥ ಇಂದ್ರಿಯಗಳಿಂದ ಆಯಾ ಕಾಲಕ್ಕೆ ಒದಗಿದ ವಿಷಯಗಳನ್ನು ರಾಗದ್ವೇಷವಿಲ್ಲದೆ ಸೇವಿಸುತ್ತಾ ಹೋಗಬೇಕು.

ಇನ್ನೊಂದು ಮಾತು. ಇಂದ್ರಿಯಗಳಿಗೆಲ್ಲ ಮೂಲವಾಗಿ ಪ್ರವರ್ತಕವಾದದ್ದು ಮನಸ್ಸು. ಇಂದ್ರಿಯಗಳು ಕುದುರೆಗಳೆಂತಲೂ ಮನಸ್ಸು ಕಡಿವಾಣವೆಂತಲೂ ಉಪನಿಷತ್ತಿನಲ್ಲಿ ವರ್ಣಿಸಿರುತ್ತದೆ. ಆದ್ದರಿಂದ ವಿಧೇಯಾತ್ಮನಾಗಿ, ಮನಸ್ಸನ್ನು ತಾನು ಹೇಳಿದಂತೆ ಕೇಳುವಂತೆ ಮಾಡಿಕೊಂಡು, ಬಳಿಕ ಇಂದ್ರಿಯಗಳಿಂದ ವಿಷಯಗಳನ್ನು ಭೋಗಿಸುವದಕ್ಕೆ ಪ್ರಯತ್ನಿಸಬೇಕು. ಹಾಗಾದರೆ ಮನಸ್ಸಿಗೆ ಪ್ರಸಾದವುಂಟಾಗುತ್ತದೆ, ಅದು ತಿಳಿಯಾಗುತ್ತದೆ. ಮನಸ್ಸುಬಂದಂತೆ ಯಾವ ನಿಯಮವೂ ಇಲ್ಲದೆ ಇಂದ್ರಿಯಗಳಿಂದ ಅವು ಹರಿದ ಕಡೆಯಲ್ಲಿ ಕಾಣುವ ವಿಷಯಗಳನ್ನು ಭೋಗಿಸುವದಕ್ಕೆ ತೊಡಗಿದವರಿಗೆ ವಿಷಯಗಳ ವಾಸನೆಯು ಮನಸ್ಸಿನಲ್ಲಿ ಇಳಿದುಕೊಂಡು ಅದನ್ನು ಬಗ್ಗಡವಾಗಿ ಮಾಡಿಬಿಡುತ್ತದೆ. ಆದರೆ ಮನಸ್ಸನ್ನು ಹಿಡಿತದಲ್ಲಿಟ್ಟುಕೊಂಡು, ಇಂದ್ರಿಯಗಳನ್ನೂ ವಶದಲ್ಲಿಟ್ಟುಕೊಂಡು ರಾಗದ್ವೇಷವಿಲ್ಲದೆ ವಿಷಯಗಳನ್ನು ಸೇವಿಸುವದರಿಂದ ಈ ದೋಷವು ಕಡಿಮೆಯಾಗಿ ಮನಸ್ಸು ಸ್ವಚ್ಛವಾಗುತ್ತಾ ಬರುತ್ತದೆ. ಮನಸ್ಸು ಪ್ರಸನ್ನವಾದರೆ ಯಾವ ದುಃಖಗಳೂ ಆಗುವದಕ್ಕೆ ಎಡೆಯಿರುವದಿಲ್ಲ. ಏಕೆಂದರೆ ಯಾರ ಚಿತ್ತವು ಪ್ರಸನ್ನವಾಗುವದೋ ಅವನಿಗೆ ಬುದ್ಧಿಯು ಚಾಂಚಲ್ಯವಿಲ್ಲದೆ ನಿಲ್ಲುತ್ತದೆ.

ಇದು ಹೇಗೆಂಬುದನ್ನು ಈ ಶ್ಲೋಕದಲ್ಲಿ ವಿವರಿಸಿರುತ್ತದೆ:-

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾನ್ತಿರಶಾನ್ತಸ್ಯ ಕುತಃ ಸುಖಮ್ ॥** (೨-೬೬)

ಯಾವನು ಮನಸ್ಸನ್ನು ನಿರ್ಮಲವಾಗಿರಿಸಿಕೊಂಡು ಸಮಾಧಾನಸ್ಥಿತಿಯಲ್ಲಿಟ್ಟು ಕೊಳ್ಳುವನೋ ಅವನಿಗೆ ವಿವೇಕರೂಪವಾದ ಬುದ್ಧಿಯುಂಟಾಗುವದು, ಅವನಿಗೇ ಆತ್ಮಭಾವನೆಯುಂಟಾಗುವದು. ಅವನ ಇಂಥ ಭಾವನೆಯಿಂದ, ಮನಸ್ಸೆಲ್ಲ ಆತ್ಮ ವಿಚಾರದಿಂದ ಊಡಿಕೊಂಡುಬಿಡುವದರಿಂದ ಅದು ಶಾಂತಿಯನ್ನು ಪಡೆಯುತ್ತದೆ. ಎಂದಿಗೆ ಶಾಂತಿಯು ದೊರಕುವದೋ ಅಂದು ಸುಖವೂ ನಮ್ಮದಾಗುತ್ತದೆ. ಆದ್ದರಿಂದ ಮನಸ್ಸು ಪ್ರಸನ್ನವಾಗಿ, ಬುದ್ಧಿಯು ಚಾಂಚಲ್ಯವನ್ನು ಬಿಟ್ಟು ಆತ್ಮ ಭಾವನೆಯಿಂದಲೇ ಕಾಲವನ್ನು ಕಳೆಯುವ ಪ್ರಯತ್ನವನ್ನು ಮಾಡಬೇಕು. ಹೊರಗೆ ಇಂದ್ರಿಯಗಳಿಗೂ ಒಳಗೆ ಮನಸ್ಸಿಗೂ ಸರಿಯಾದ ಕೆಲಸವನ್ನು ಕೊಡಬೇಕು. ಒಂದು ಮುಹೂರ್ತ, ಒಂದುಕ್ಷಣ, ಆತ್ಮಚಿಂತೆಯಿಲ್ಲದಿದ್ದರೂ ಅನರ್ಥವು ಬರುವದಕ್ಕೆ ಅವಕಾಶವಾಗುವದೆಂದು ಮುಮುಕ್ಷುಗಳಾದವರಿಗೆ ದೊಡ್ಡವರು ಉಪದೇಶಿಸಿರುತ್ತಾರೆ. ಆದರೆ ಸಂಸಾರಿಗಳಾದ ನಾವುಗಳು ವಿಷಯವೇ ಸರ್ವಸ್ವವೆಂದು ಭಾವಿಸಿ, ಅದರ ಚಿಂತೆಯಲ್ಲಿಯೇ ಕಾಲವನ್ನು ಕಳೆಯುತ್ತಿರುವೆವು. ಅದಿಲ್ಲದಿದ್ದರೆ ನಾವೇ ಹೋದೆವು ಎಂದು ಎಣಿಸಿಕೊಂಡಿರುವೆವು. ಸಾತ್ತ್ವಿಕವಿಚಾರಗಳನ್ನು ನಾವು ಮಾಡುವದಿಲ್ಲವೆಂಬುದು ಹಾಗಿರಲಿ, ಮಾಡುವವರನ್ನು ಕೂಡ ಹಾಸ್ಯಮಾಡುತ್ತಿರುವೆವು! ವಿಷಯಚಿಂತನೆ ಯಿರುವಾಗ ಆತ್ಮಚಿಂತನೆಯಿರಲಾರದು, ಆತ್ಮಚಿಂತನೆಯಿರುವಾಗ ವಿಷಯಚಿಂತನೆ ಯಿರಲಾರದು, ಇದು ಖಂಡಿತ. ನಮ್ಮಗಳ ಅವಸ್ಥೆಯನ್ನು ನೋಡಿಕೊಳ್ಳಿರಿ. ಸ್ಥಿತಪ್ರಜ್ಞನ ಲಕ್ಷಣವನ್ನು ಕೇಳಿದರೆ ನಾವು ಹಾಗಿರಬೇಕು ಎನಿಸುತ್ತದೆ. ಆದರೆ ಅವನ ಸ್ವಭಾವವನ್ನು ಗುರಿಯಾಗಿಟ್ಟುಕೊಂಡು ಮಾಡುವ ಸಾಧನವು ಮಾತ್ರ ನಮಗೆ ಬೇಡವಾಗಿರುತ್ತದೆ. ಇಲ್ಲಿ ಹೇಳಿರುವ ಲಕ್ಷಣಗಳು ಇಂಥ ಅಡ್ಡಂಬಡಕಮನಸ್ಸಿನವರಿಗಲ್ಲ. ಪೂರ್ವಜನ್ಮದ ಸುಕೃತದಿಂದ ಜಿಜ್ಞಾಸುಗಳಾಗಿ, ಮುಮುಕ್ಷುಗಳಾಗಿ, ನಾವೂ ಸ್ಥಿತಪ್ರಜ್ಞನ ಸ್ಥಿತಿಗೆ ಏರಬೇಕು; ಅದಕ್ಕೆ ತಕ್ಕ ಸಾಧನಗಳನ್ನು ಕೈಕೊಳ್ಳಬೇಕು-ಎಂದು ಹಂಬಲಿಸುತ್ತಿರುವ ಮಹಾಶಯರಿಗೆ. ಮನುಷ್ಯನು ಏನನ್ನು ಚಿಂತಿಸುತ್ತಾನೋ ಅವನ ಮನಸ್ಸು ಅದರ ಆಕಾರವಾಗಿಬಿಡುತ್ತದೆ. ನಮ್ಮ ಮನಸ್ಸು ಏನನ್ನು ಚಿಂತಿಸುತ್ತಿರುವದೋ ಅದೇ ನಾವು. ವಿಷಯಚಿಂತಕರು ವಿಷಯಿಗಳು; ಅವರಿಗೆ ವಿಷಯಗಳಿಂದಾಗುವ ಸುಖದುಃಖಗಳು ಸಿಕ್ಕುವವೇ ಹೊರತು ಪರಮಾತ್ಮನ ನಿತ್ಯಸುಖವು ದಕ್ಕಲಾರದು ಆತ್ಮಚಿಂತಕರು ಮುಮುಕ್ಷುಗಳು; ಅವರಿಗೆ ಪರಮಾತ್ಮನ ನಿತ್ಯಶಾಂತಿಯೂ ನಿತ್ಯಸುಖವೂ ದೊರೆ ಯುವದೇ ಹೊರತು ವಿಷಯಗಳಿಂದಾಗುವ ಅನರ್ಥಗಳು ಅವರ ಹತ್ತಿರ ಸುಳಿದಾಡ ಲಾರವು. ಅವಿವೇಕಿಗಳಾದ ವಿಷಯಿಗಳಿಗೆ ಹೇಗೆ ವಿಷಯದಲ್ಲಿಯೇ ಪ್ರೀತಿಯಿರು ವದೋ, ಅವರು ಹೇಗೆ ವಿಷಯಗಳನ್ನೇ ಮನಸ್ಸಿನಲ್ಲಿ ಯಾವಾಗಲೂ ಹೊರಳಾಡಿಸು

ತ್ತಿರುವರೋ ಹಾಗೆ ವಿವೇಕಿಗಳಾದವರು ಆತ್ಮನನ್ನೇ ಎಡೆಬಿಡದೆ ಮನಸ್ಸಿನಲ್ಲಿ ಹೊರಳಾಡಿಸುತ್ತಿರುವರು. ಇಂಥ ಆತ್ಮರತರಿಗೆ ಆತ್ಮಕ್ರೀಡರಿಗೆ, ನಿತ್ಯಶಾಂತಿಯೂ ನಿತ್ಯಸುಖವೂ ಕಟ್ಟಿಟ್ಟ ಬುತ್ತಿಯು. ಅವರು ಖಂಡಿತವಾಗಿ ಸ್ಥಿತಪ್ರಜ್ಞರಾಗುವರು.

ಇದುವರೆಗೆ ಮಾಡಿದ ಉಪದೇಶದ ಸಾರವಿದು. ಮನಸ್ಸಿನ ಚಿಂತನೆಯು ಮನುಷ್ಯನ ಏಳುಬೀಳುಗಳನ್ನು ಗೊತ್ತುಪಡಿಸುತ್ತದೆ. ವಿಷಯಗಳನ್ನು ಇಂದ್ರಿಯಗಳಿಂದ ಅನುಭವಿಸಬೇಕೆ ಬೇಡವೆ, ಎಂಬುದು ಇಲ್ಲಿ ಮುಖ್ಯವಲ್ಲ; ಇಂದ್ರಿಯಗಳಿಂದ ಅನುಭವಿಸುವಾಗ ಮನಸ್ಸಿನ ಸ್ಥಿತಿ ಹೇಗಿರಬೇಕು?- ಎಂಬುದೇ ಮುಖ್ಯ. ಒಬ್ಬ ಹುಡುಗನು ಒಂದು ಹಸುವನ್ನು ಮೇಯಿಸುವದಕ್ಕೆಂದು ಅದಕ್ಕೆ ಒಂದು ಹಗ್ಗವನ್ನು ಕಟ್ಟಿಕೊಂಡು ಕೈಯಲ್ಲಿ ಹಗ್ಗವನ್ನು ಹಿಡಿದಿರುತ್ತಾನೆಂದು ಇಟ್ಟುಕೊಳ್ಳಿ. ಹಸುವಿಗೆ ಅವರೆಕಾಯಿಯ ಸೊಗಡು ಮೂಗಿಗೆ ಬಡಿಯುತ್ತಲೂ ಹತ್ತಿರವಿರುವ ಹೊಲಕ್ಕೆ ನುಗ್ಗಬೇಕೆನಿಸುತ್ತದೆ. ಆಗ ಹುಡುಗನು ಏನುಮಾಡಬೇಕು? ಹಗ್ಗವನ್ನು ಬಿಗಿಯಾಗಿ ಹಿಡಿದುಕೊಂಡು ಹಸುವನ್ನು ನಯಭಯಗಳಿಂದ ಹೊಲದ ಗಡಿಯನ್ನು ದಾಟಿಸಿ ಬಿಡಬೇಕು. ಅದರ ಬದಲು ಅವನು ಹಗ್ಗವನ್ನು ಸಡಿಲಬಿಟ್ಟರೆ? ಕೇಳಬೇಕೆ? ಹಗ್ಗವನ್ನೂ ಹಗ್ಗವನ್ನು ಹಿಡಿದುಕೊಂಡಿರುವ ಹುಡುಗನನ್ನೂ ಎಳೆದುಕೊಂಡೇ ಹಸು ಹೊಲಕ್ಕೆ ನುಗ್ಗಿಬಿಡುತ್ತದೆ! ಸಾಧಕನಾದವನು ಭಗವಂತನ ಚಿಂತನೆಯಲ್ಲಿಯೇ ಇದ್ದರೂ ಇಂದ್ರಿಯಗಳು ವಿಷಯಕ್ಷೇತ್ರಕ್ಕೆ ನುಗ್ಗುವದಕ್ಕೆ ಹೋಗುವ ಸ್ವಭಾವವನ್ನು ಬಿಟ್ಟಿರುವದಿಲ್ಲ. ಆಗ ವಿವೇಕದಿಂದ ಮನಸ್ಸನ್ನು ತಡೆಗಟ್ಟಿ ಇಟ್ಟುಕೊಂಡರೆ ಅಪಾಯವಿಲ್ಲ. ಹಾಗಿಲ್ಲದೆ ಅದನ್ನು ಸಡಿಲಬಿಟ್ಟರೆ ಸಾಕು, ಕೂಡಲೆ ಅದನ್ನೂ ಎಳೆದುಕೊಂಡೇ ಇಂದ್ರಿಯಗಳು ಕಂಡಕಡೆಗೆ ಹೋಗಿಬಿಡುತ್ತವೆ. ಹೀಗಿರುವಲ್ಲಿ ವಿಷಯಗಳನ್ನು ಅನುಭವಿಸುವದಕ್ಕೆ ಇಂದ್ರಿಯಗಳು ಹೊರಟಾಗ ಮನಸ್ಸನ್ನೂ ಅವುಗಳ ಸಹಾಯಕ್ಕೇ ಬಿಟ್ಟರೆ ಹೇಳತಕ್ಕದ್ದೇನು! ಗಾಳಿಗೆ ಸಿಕ್ಕಿಬಿದ್ದಿರುವ ದೋಣಿಯಂತೆ ಮನಸ್ಸು ಎಲ್ಲಿಗೋ ಕೊಚ್ಚಿಕೊಂಡು ಹೋಗಿಬಿಡುತ್ತದೆ. ಸ್ಥಿತಪ್ರಜ್ಞನಾದವನು ಇಂದ್ರಿಯಗಳನ್ನು ಎಲ್ಲಾ ವಿಷಯಗಳಿಂದಲೂ ಬಿಗಿಯಾಗಿ ಸೆಳೆದುಕೊಂಡು ಪರಮಾತ್ಮ ಚಿಂತನೆಯಲ್ಲಿಯೇ ಮುಳುಗಿಬಿಟ್ಟಿರುತ್ತಾನೆ. ಅದು ಅವನಿಗೆ ಸ್ವಭಾವವಾಗಿಬಿಟ್ಟಿರುತ್ತದೆ. ಮುಮುಕ್ಷು ಗಳಾದವರು ಪ್ರಯತ್ನಪೂರ್ವಕವಾಗಿ ಅವನಂತೆಯೇ ಭಗವಚ್ಚಿಂತನೆಯ ಮೂಲಕವಾಗಿ ಮನಸ್ಸನ್ನು ಇಂದ್ರಿಯಗಳ ಕಡೆಗೆ ಚಲಿಸದಂತೆ ತಡೆದಿಟ್ಟುಕೊಳ್ಳಬೇಕು. ಮುಮುಕ್ಷು ಗಳಲ್ಲದವರುಕೂಡ ವ್ಯವಹಾರದಲ್ಲಿ ವಿಷಯಗಳ ಕಡೆಗೆ ಇಂದ್ರಿಯಗಳು ಹರಿಯುವದಕ್ಕೆ ಮೊದಲುಮಾಡಿದಾಗ ಭಗವಂತನ ನಾಮಸ್ಮರಣೆಯೇ ಮುಂತಾದ ಉಪಾಯಗಳಿಂದ ಮನಸ್ಸನ್ನು ಹಿಡಿತಲ್ಲಿಟ್ಟುಕೊಂಡರೆ ಎಷ್ಟೋ ಅನರ್ಥಗಳಿಂದ ಪಾರಾಗಬಹುದು.

ಸ್ಥಿತಪ್ರಜ್ಞನ ಲಕ್ಷಣವನ್ನು ಹೇಳಿದ್ದಾಗಿದೆ ಅದರ ಸಾರಾಂಶವನ್ನು ಹಿಂಡಿ ಸ್ವಲ್ಪದರಲ್ಲಿ ಹೇಳಿದರೆ ಇಷ್ಟರಲ್ಲಿ ಅಡಕವಾಗುತ್ತದೆ. ಸ್ಥಿತಪ್ರಜ್ಞನ ಜ್ಞಾನವು ನಮ್ಮ ಜ್ಞಾನಕ್ಕಿಂತ ತೀರ ವಿಲಕ್ಷಣವಾಗಿರುತ್ತದೆ; ಅವನ ವ್ಯವಹಾರವೂ ಹೀಗೆಯೇ ವಿಲಕ್ಷಣವಾಗಿರುತ್ತದೆ. ಮುಂದಿನ ಮೂರು ಶ್ಲೋಕಗಳಲ್ಲಿ ಈ ಅಭಿಪ್ರಾಯವನ್ನು ವಿವರಿಸಿರುತ್ತದೆ:

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥** (೨-೬೯)

ಸಮಸ್ತ ಪ್ರಾಣಿಗಳಿಗೂ ಯಾವದು ರಾತ್ರಿಯೋ ಅದರಲ್ಲಿ ಸಂಯಮಿಯಾದ ಸ್ಥಿತಪ್ರಜ್ಞನು ಎಚ್ಚತ್ತಿರುವನು. ಆದರೆ ಭೂತಗಳು ಯಾವದರಲ್ಲಿ ಎಚ್ಚತ್ತಿರುವವೋ ಅದು ಬಲ್ಲ ಮುನಿಗೆ ರಾತ್ರೆಯಾಗಿರುವದು-ಎಂಬುದು ಶ್ಲೋಕದ ಅಕ್ಷರಾರ್ಥವು. ಸಂಸಾರಿಜೀವರುಗಳ ವ್ಯವಹಾರವೆಲ್ಲವೂ ಅದು ಲೌಕಿಕವ್ಯವಹಾರವಾಗಲಿ ವೈದಿಕ ವ್ಯವಹಾರವಾಗಲಿ- ಸದಸದ್ವಿವೇಕಜ್ಞಾನವು ಉದಯಿಸಿರುವ ಸ್ಥಿತಪ್ರಜ್ಞನಿಗೆ ಅವಿದ್ಯಾ ಕಾರ್ಯವಾಗಿರುವದರಿಂದ ಸಂಪೂರ್ಣವಾಗಿ ತೊಲಗಿರುತ್ತದೆ ಎಂಬುದು ಇದರ ತಾತ್ಪರ್ಯವು. ಜ್ಞಾನಿಗಳು ಲೋಕವಿಲಕ್ಷಣಪುರುಷರಾದ್ದರಿಂದ ಮಿಕ್ಕವರು ಎಚ್ಚತ್ತಿರುವಾಗ ಅವರು ನಿದ್ರಿಸುತ್ತಿರುವರು, ಮಿಕ್ಕವರು ನಿದ್ರಿಸುತ್ತಿರುವಾಗ ಅವರು ಎಚ್ಚತ್ತಿರುವರು-ಎಂದು ವಿಜಾತೀಯವಾದ ಅರ್ಥವನ್ನು ಮಾಡಿಕೊಂಡು ಒಬ್ಬ ಮುದುಕನು ತಾನೂ ಸ್ಥಿತಪ್ರಜ್ಞನಾಗಬೇಕೆಂದು ರಾತ್ರೆ ಸರಿಹೊತ್ತಿನಲ್ಲಿ ಎಚ್ಚರವಾಗಿ ಕುಳಿತಿರುತ್ತಿದ್ದನು; ಎಲ್ಲರೂ ಏಳುವ ಹೊತ್ತಿಗೆ ಗೊರಕೆಯಿಡುತ್ತಿದ್ದನು! ಜ್ಞಾನಿಗಳೆಂದರೆ ಇಂಥ ಅವಿವೇಕಿಗಳಲ್ಲ. ಸಂಸಾರಿಗಳು ಎಚ್ಚರವಾಗಿದ್ದುಕೊಂಡು ವ್ಯವಹಾರಮಾಡುತ್ತಿರುವದು ಅಜ್ಞಾನನಿದ್ರೆಯಲ್ಲಿ ಅವರು ಕಾಣುತ್ತಿರುವ ಕನಸೇ ಹೊರತು ಪರಮಾರ್ಥವಲ್ಲ. ಅವರಿಗೆ ಕಾಣಿಸುವ ದ್ವೈತವು ಅತ್ಯಂತವಾಗಿ ಅಸತ್ತಾಗಿರುವದರಿಂದ ಆ ಮಾಯಾ ನಿದ್ರೆಯಿಂದ ಎಚ್ಚೆತ್ತಿರುವ ಸ್ಥಿತಪ್ರಜ್ಞನಿಗೆ ಎಂದಿಗೂ ಅದು ಸತ್ಯವಾಗಿ ತೋರುವದಿಲ್ಲ. ಅವನಿಗೆ ತೋರುತ್ತಿರುವ ಅದ್ವೈತತತ್ತ್ವವು ಮಿಕ್ಕ ಅಜ್ಞಜೀವರಿಗೆ ಕಾಣಿಸುವದೇ ಇಲ್ಲ. ದಟ್ಟವಾದ ಕತ್ತಲೆಯಲ್ಲಿ ಎದುರಿಗೇ ವಸ್ತುಗಳಿದ್ದರೂ ವಿಂಗಡವಾಗಿ ಕಾಣಿಸುವದಿಲ್ಲ. ಅಲ್ಲವೆ? ಇದರಂತೆ ಗಾಢವಾದ ಸಂಸಾರದ ಕಗ್ಗತ್ತಲೆಯಲ್ಲಿ ತಿರುಗುತ್ತಿರುವ ಜೀವರಿಗೆ ಅಜನಾಗಿ, ಅದ್ವಯನಾಗಿ, ಕೂಟಸ್ಥವಾಗಿರುವ ಆತ್ಮನು ಕಾಣಿಸುವದೇ ಇಲ್ಲ. ಜ್ಞಾನಿಗೆ ವಿಷಯಗಳ ಪ್ರಪಂಚವು ಕಾಣಿಸುವದಿಲ್ಲ, ಅಜ್ಞಾನಿಗಳಿಗೆ ಆತ್ಮತತ್ತ್ವವು ಕಾಣಿಸುವದಿಲ್ಲ. ಕಾಗೆಗೂಬೆಗಳ ರಾತ್ರೆಗಳಂತೆ ಅವರ ವ್ಯವಹಾರಗಳು ಹೀಗೆ ಅತ್ಯಂತ ವಿರುದ್ಧ ಸ್ವಭಾವದವಾಗಿರುತ್ತವೆ. ಆದರೆ ಜ್ಞಾನಿಗೆ ತೋರುವ ಆತ್ಮತತ್ತ್ವವೇ

ಸತ್ಯವೆಂದೂ ಮಿಕ್ಕವರಿಗೆ ಕಾಣುವ ಪ್ರಪಂಚವು ಮಿಥ್ಯೆಯೆಂತಲೂ ಹೇಗೆ ನಿರ್ಣಯಿಸುವದು? ಎಂದರೆ "ಪಶ್ಯತೋ ಮುನೇಃ" ಎಂಬ ವಿಶೇಷಣದಲ್ಲಿ ಇದಕ್ಕೆ ಉತ್ತರವಿದೆ. ಅಜ್ಞಾನಿಗಳು ಅದ್ವಿತೀಯವಾದ ಆತ್ಮತತ್ತ್ವವನ್ನು ಎಂದಿಗೂ ಕಂಡರಿಯರು. ಅವರು ತಮಗೆ ಅದು ಕಾಣಿಸದೆ ಇರುವದರಿಂದ ಅದು ಇಲ್ಲವೇ ಇಲ್ಲ ಎಂದು ಬಗೆಯುತ್ತಾರೆ. ಆದರೆ ಸ್ಥಿತಪ್ರಜ್ಞನು ಹಾಗಲ್ಲ. ಅವನಿಗೆ ಸಂಸಾರಿಗಳಿಗೆ ಕಾಣಿಸುವ ದ್ವೈತಪ್ರಪಂಚವೂ ಕಾಣಿಸುತ್ತಿದೆ; ಆದರೆ ಪರಮಾರ್ಥತತ್ತ್ವವು ಎಲ್ಲವನ್ನೂ ವ್ಯಾಪಿಸಿಕೊಂಡಿರುವದರಿಂದ ಅದಕ್ಕಿಂತ ಸ್ವತಂತ್ರವಾಗಿ ಬೇರೆಯಾಗಿರುವ ಯಾವ ಅನಾತ್ಮಪ್ರಪಂಚವೂ ನಿಜವಾಗಿ ಇಲ್ಲ ಎಂಬ ಮನವುಳ್ಳವನಾದ್ದರಿಂದ ಅವನು ತತ್ತ್ವವನ್ನು ಬಲ್ಲ ಮುನಿಯಾಗಿರುತ್ತಾನೆ. ಕಣ್ಣುಕಾಣದೆ ಇರುವವನು ನಡುಹಗಲಿನಲ್ಲಿ ಬೀದಿಯಲ್ಲಿ ನಿಂತು 'ಆಕಾಶದಲ್ಲಿ ಸೂರ್ಯನಿಲ್ಲ' ಎನ್ನುವದಕ್ಕೂ ಕಣ್ಣಿರುವವನು ಅಮಾವಾಸ್ಯೆಯ ರಾತ್ರೆಯ ಸರಿಹೊತ್ತಿನಲ್ಲಿ ಎಲ್ಲಿ ನೋಡಿದರೂ ಕತ್ತಲೆಯು ಆವರಿಸಿರುವದನ್ನು ಕಂಡು "ಈಗ ಸೂರ್ಯನು ಕಾಣಿಸುತ್ತಿಲ್ಲ; ರಾತ್ರೆಯಲ್ಲಿ ಸೂರ್ಯನು ಹೇಗೆ ಕಾಣುವನು?" ಎಂದು ಚಿಂತಿಸುವದಕ್ಕೂ ಎಂಥ ತಾರತಮ್ಯವಿರುವದೋ ಅಂಥ ತಾರತಮ್ಯವು ಇಲ್ಲಿಯೂ ಇರುವದು. ದೂರದಲ್ಲಿ ಕಾಣುವ ತೋರಿಕೆಯ ಹಾವು ಹಾವೆಂದೇ ತಿಳಿದಿರುವ ಅಜ್ಞನ ದೃಷ್ಟಿಗೂ ಅದು ಹಾವಿನಂತೆ ಕಂಡರೂ ನಿಜವಾಗಿ ಅದು ಹಗ್ಗವೇ ಎಂದು ಬಲ್ಲವನ ದೃಷ್ಟಿಗೂ ಇರುವ ತಾರತಮ್ಯವನ್ನು ನಾವು ಮನಸ್ಸಿಗೆ ತಂದುಕೊಳ್ಳಬೇಕು. ಇರುವ ಒಂದೇ ತತ್ತ್ವದಲ್ಲಿ ಬಹುಮುಖವಾಗಿ ತೋರುತ್ತಿರುವ ಈ ದುಃಖಮಯವಾದ ಪ್ರಪಂಚವನ್ನು ಅಜ್ಞರು ಕಾಣುತ್ತಿರುವರು; ಅವರಿಗೆ ಈ ದುಃಖಮಯವಾದ ವಿಷಯಪ್ರಪಂಚವು ಸತ್ಯವೇ ಆಗಿರುವದರಿಂದ ಅವರು ಅವಿದ್ಯಾಕಾಮಕರ್ಮಗಳಿಂದ ಸಂಸಾರದಲ್ಲಿ ತೊಳಲುತ್ತಿರುವರು. ಆದರೆ ಸ್ಥಿತಪ್ರಜ್ಞನಾದವನಿಗೆ ಇದೇ ಪ್ರಪಂಚವು ಕಾಣುತ್ತಿರುವದಾದರೂ ತೋರುತ್ತಿರುವ ಆಕಾರದಿಂದ ಇದು ಸತ್ಯವೆಂಬ ಭಾವನೆಯೇನೂ ಅವನಿಗೆ ಇರುವದಿಲ್ಲ. ಇದರ ತಿರುಳಾಗಿರುವ ಪರಮಾತ್ಮತತ್ತ್ವದ ರೂಪದಿಂದಲೇ ಇದು ಸತ್ಯವು ಎಂಬುದು ಅವನ ನಿಶ್ಚಯವಾಗಿರುತ್ತದೆ. ಆದ್ದರಿಂದ ಅವನಿಗೆ ಈ ಪ್ರಪಂಚದ ಸುಖದುಃಖಗಳಿಂದ ಮನಸ್ಸು ಒಂದಿಷ್ಟೂ ಏರುಪೇರನ್ನು ಹೊಂದುವದಿಲ್ಲ. ಹೀಗೆ ಜ್ಞಾನಿಯ ಮತ್ತು ಅಜ್ಞಾನಿಗಳ ತಿಳಿವಳಿಕೆಯಲ್ಲಿ ಬಹಳ ಹೆಚ್ಚುಕಡಿಮೆಯಿರುತ್ತದೆ.

ಇದರಂತೆ ಅವರ ವ್ಯವಹಾರದಲ್ಲಿಯೂ ಹೆಚ್ಚುಕಡಿಮೆಯಿರುವದು ಸ್ವಾಭಾವಿಕವಾಗಿರುತ್ತದೆ. ಅದನ್ನು ಮುಂದಿನ ಶ್ಲೋಕಗಳೆರಡೂ ವರ್ಣಿಸುತ್ತವೆ. ಹಿಂದಿನ ಹಗ್ಗದಹಾವಿನ ದೃಷ್ಟಾಂತದಲ್ಲಿ ಹಾವನ್ನು ಸತ್ಯವೆಂದು ತಿಳಿದವನು ಗಡಗಡನೆ

ನಡುಗುತ್ತಾ ದೂರಕ್ಕೆ ಓಡಿಹೋಗುತ್ತಾನೆ; ಆದರೆ ಅದು ಹಗ್ಗವೆಂದು ಅರಿತಿರುವವನು ಅವನ ಅಂಜಿಕೆಯನ್ನು ಕಂಡು ಮುಗುಳುನಗೆ ನಗುತ್ತಾನೆ. ಇದರಂತೆ ಯಾವನಿಗೆ ಈ ಪ್ರಪಂಚದಲ್ಲಿರುವ ವಿಷಯಗಳು ಸತ್ಯವೆಂದು ಗಟ್ಟಿಯಾದ ನಂಬಿಕೆಯಿರುವದೋ ಅವನು ವಿಷಯಗಳಲ್ಲಿ ರಾಗದ್ವೇಷವನ್ನು ಅವಶ್ಯವಾಗಿ ಮಾಡುವನು. ಅವನನ್ನು ಕಾಮಗಳು ತಮ್ಮ ಇಚ್ಛೆಯಂತೆ ಕುಣಿಸುತ್ತಿರುವವು. ಆದರೆ ಯಾವ ಮಹಾತ್ಮನಿಗೆ ಕಾಣುವ ಪ್ರಪಂಚವೆಲ್ಲವೂ ಪರಮಾತ್ಮಮಯವಾಗಿರುವದೋ, ಪರಮಾತ್ಮನಿಗಿಂತ ಬೇರೆಯಾಗಿ ಕಾಮಗಳ ಪ್ರಪಂಚವೇ ಇಲ್ಲವೋ ಅವನಿಗೆ ಶಾಂತಿಸುಖಗಳು ಮುಡುಪಾಗಿರುವವು. ನಮಗೆ ಕಾಮಗಳಾಗಿ ಕಾಣುವ ವಿಷಯಗಳು ಅವನ ಬಳಿಗೆ ಬಂದರೆ ಅವನು ಅವನ್ನೆಲ್ಲ ಆತ್ಮನೆಂದೇ ಕಾಣುವನು. ಸಮುದ್ರಕ್ಕೆ ದಿನದಿನವೂ ಸಿಂಧು, ಗಂಗೆ, ಬ್ರಹ್ಮಪುತ್ರಾ, ಕೃಷ್ಣಾ, ಕಾವೇರಿ-ಮುಂತಾದ ನದಿಗಳು ಬಂದು ತಮ್ಮ ನೀರನ್ನು ಹಾಕುತ್ತಲೇ ಇರುವವು; ಅವುಗಳ ನೀರುಗಳ ಸ್ವಭಾವವು ಒಂದೇ ಬಗೆಯಾಗಿರುವದಿಲ್ಲ. ಆದರೂ ಯಾವ ನದಿಯ ನೀರು ಬಂದು ಸೇರಿದರೂ ಸಮುದ್ರವು ಸಮುದ್ರವೇ ಆಗಿರುತ್ತದೆ. ಕಡಲಿನಲ್ಲಿ ಬಿದ್ದಮೇಲೆ ನದಿಗಳು ತಮ್ಮ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವದು ಆಗುವದೇ ಇಲ್ಲ. ಇದರಂತೆ ಸ್ಥಿತಪ್ರಜ್ಞನಲ್ಲಿ ಕಾಮಗಳು ತಮ್ಮ ವ್ಯಕ್ತಿತ್ವವನ್ನು ಎಂದಿಗೂ ಉಳಿಸಿಕೊಳ್ಳಲಾರವು; ಅವೆಲ್ಲವೂ ಆತ್ಮನೇ ಆಗಿಬಿಡುತ್ತವೆ. ಕಾಮಗಳು ಇಲ್ಲದಿದ್ದರೆ, ಇದ್ದರೆ, ಅವುಗಳನ್ನು ಉಪಭೋಗಿಸಿದರೆ-ಯಾವಾಗಲೂ ಸ್ಥಿತಪ್ರಜ್ಞನು ಸ್ಥಿತಪ್ರಜ್ಞನೇ. ಮೇರೆದಪ್ಪದೆ, ಸ್ವಭಾವದಲ್ಲಿ ಬೇರ್ಪಡದೆ ಇರುವ ಸಮುದ್ರದಂತೆ ಅವನು ಶಾಂತನಾಗಿರುತ್ತಾನೆ. ಅವನು ಯಾವ ವಿಷಯಗಳನ್ನು ಸೇವಿಸಿದರೂ ವಿಷಯಗಳಲ್ಲಾಗಲಿ ದೇಹೇಂದ್ರಿಯಗಳಲ್ಲಾಗಲಿ ನಾನು, ನನ್ನದು-ಎಂಬ ಭಾವನೆಯನ್ನು ಎಳ್ಳಷ್ಟೂ ಮಾಡಿಕೊಳ್ಳದೆ ಇರುತ್ತಾನೆ. ಆದ್ದರಿಂದಲೇ ಅವನಿಗೆ ಲೋಕವಿಲಕ್ಷಣವಾದ ಶಾಂತಿಯು ದೊರಕಿರುತ್ತದೆ.

ಭಗವಂತನು ಅರ್ಜುನನಿಗೆ ಸ್ಥಿತಪ್ರಜ್ಞನ ಲಕ್ಷಣವನ್ನು ಹೇಳಿದ ಬಳಿಕ ಕೊನೆಯಲ್ಲಿ ಹೇಳಿದ ವಾಕ್ಯವು ಮನನಯೋಗ್ಯವಾಗಿರುತ್ತದೆ:

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಸ್ಯಾಮನ್ತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥** (೨.೭೨)

ಇದು "ಬ್ರಾಹ್ಮೀ ಸ್ಥಿತಿ" ಪರಮಾತ್ಮನಲ್ಲಿಯೇ ನಿಂತಿರುವ ರೀತಿಯು, "ನಾನು ಪರಮಾತ್ಮನಲ್ಲಿಯೇ ಇದೇನೆ" ಎಂಬ ತಿಳಿವಳಿಕೆಯು ಸ್ಫುಟವಾಗಿದ್ದರೆ ಈ ಸ್ಥಿತಿ ಬಂದಂತೆ ಆಯಿತು. ನಾವುಗಳೆಲ್ಲರೂ ಪರಬ್ರಹ್ಮದಲ್ಲಿಯೇ, ಪರಮಾತ್ಮನಲ್ಲಿಯೇ,

ಇರುತ್ತೇವೆ. ಆದರೆ ನಮಗೆ ಅದು ತಿಳಿಯದು. ಕೊರಮರು, ಕೊರಚರು-ಮುಂತಾದ ಕೆಲವು ಜಾತಿಯವರು ಮಗುವನ್ನು ತಮ್ಮ ಬೆನ್ನಿಗೆ ಕಟ್ಟಿಕೊಂಡು ಓಡಾಡುತ್ತಿರುವದನ್ನು ನಾವು ನೋಡಿರುವೆವಲ್ಲವೆ? ಆ ಮಗು ತಾಯಿಯ ಬೆನ್ನಿನ ಮೇಲೆ ಕುಳಿತಿದ್ದರೂ, ಬೆಳಗಿನಿಂದ ಸಾಯಂಕಾಲದವರೆಗೂ ತಾಯಿಯ ಜೊತೆಯಲ್ಲಿಯೇ ಸಂಚರಿಸುತ್ತಿದ್ದರೂ, ತಾಯಿಯ ಮುಖವನ್ನು ಮಾತ್ರ ಕಂಡಿರುವದಿಲ್ಲ. ಅಲ್ಲವೆ? ಇದರಂತೆಯೇ ನಾವು ಪರಮಾತ್ಮನ ಜೊತೆಯಲ್ಲಿಯೇ ಇರುತ್ತೇವೆ, ಪರಮಾತ್ಮನು ನಮ್ಮನ್ನು ಬಿಟ್ಟು ಒಂದು ಗಳಿಗೆಯೂ ಬೇರೆಯಿರುವದಿಲ್ಲ. ಆದರೂ ನಾವು ಪರಮಾತ್ಮನೆಂದರೆ ಯಾರೆಂಬುದನ್ನು ಅರಿಯೆವು! ಸ್ಥಿತಪ್ರಜ್ಞನು ಹಾಗಲ್ಲ. ತಾನು ಪರಮಾತ್ಮನಲ್ಲಿಯೇ ನಿಂತಿರುತ್ತೇನೆ, ಪರಮಾತ್ಮನನ್ನು ಬಿಟ್ಟು ಕದಲುವದಕ್ಕೂ ನನಗೆ ಆಗಲಾರದು-ಎಂಬುದನ್ನು ಅವನು ಮನಗಂಡಿರುತ್ತಾನೆ. ಮುಮುಕ್ಷುಗಳಾದವರು ಅವನ ಈ ಸ್ಥಿತಿಯನ್ನು ಪಡೆಯುವದಕ್ಕೆ ಸಾಧನವನ್ನು ಮಾಡುತ್ತಲೇ ಇರುವದರಿಂದ ಅವರೂ ಒಂದು ರೀತಿಯಿಂದ ಬ್ರಾಹ್ಮೀ ಸ್ಥಿತಿಯಲ್ಲಿರುವರೆಂದು ಹೇಳಬಹುದು.

ಸ್ಥಿತಪ್ರಜ್ಞನ ಲಕ್ಷಣವನ್ನು ಏತಕ್ಕೆ ಹೇಳಿದೆ ಎಂಬುದನ್ನು ಈಗ ಸ್ವಲ್ಪ ಮಟ್ಟಿಗೆ ತಿಳಿದಂತೆ ಆಗಿರುತ್ತದೆ. ಯಾರು ಈ ಸಂಸಾರದ ದುಃಖಕ್ಕೆ ಬೇಸತ್ತು, ಇದರಿಂದ ಪಾರಾಗಬೇಕೆಂದು ಹವಣಿಸುತ್ತಿರುವರೋ ಅಂಥವರು ಹೇಗೆ ನಡೆದುಕೊಳ್ಳಬೇಕು?-ಎಂಬುದನ್ನು ತಿಳಿಸುವದಕ್ಕೆ ಈ ವಿಚಾರವು ಬಂದಿರುತ್ತದೆ. ನಾವುಗಳೇನೂ ಮುಮುಕ್ಷುಗಳಲ್ಲ, ನಮ್ಮಲ್ಲಿ ಬಹುಮಂದಿ ಮುಮುಕ್ಷುಗಳಲ್ಲವೆಂದು ಧಾರಾಳವಾಗಿ ಹೇಳಬಹುದು. ಆದರೂ ನಮ್ಮ ವ್ಯವಹಾರದಲ್ಲಿ ನಮಗೆ ಎಷ್ಟೋ ಮುಗ್ಗಟ್ಟುಗಳು ಬರುತ್ತವೆ. ಜೀವನವನ್ನು ಸಲೀಸಾಗಿ ನಡೆಯಿಸಿಕೊಂಡು ಸುಖದಿಂದ ಕಾಲಕ್ಷೇಪವನ್ನು ಮಾಡುವದಕ್ಕೆ ಅಡ್ಡಿಯಾಗಿರುವದು ಯಾವದು?—ಎಂದು ನಾವು ಆಗಾಗ್ಗೆ ಮನಸ್ಸಿನಲ್ಲಿ ಶಂಕಿಸುತ್ತಿರುತ್ತೇವೆ. ಶಾಸ್ತ್ರದಲ್ಲಿ ಅದಕ್ಕೆ ಉತ್ತರವನ್ನು ಹೇಳಿದೆ. ನಾವು ಕಾಮಕಾಮಿಗಳು; ವಿಷಯಗಳನ್ನು ಅನುಭವಿಸಿ ಸುಖಿಸಬೇಕೆಂಬ ಕಾಮವು ನಮ್ಮಲ್ಲಿ ಬಲವಾಗಿರುತ್ತದೆ. ಕಾಮವು ನಮ್ಮನ್ನು ನಿಂತಲ್ಲಿ ನಿಲ್ಲಗೊಡದೆ ವಿಷಯಗಳ ಬೇಟೆಯನ್ನು ಮಾಡುತ್ತಾ ಅಲೆದಾಡುವಂತೆ ಮಾಡಿಬಿಟ್ಟಿರುತ್ತದೆ. ಬೇಟೆಯಾಡುವವರಿಗೆ ಮೃಗವು ಇಗೊ ಸಿಕ್ಕಿತು, ಅಗೊ ಸಿಕ್ಕಿತು-ಎಂದು ತೋರುತ್ತಿದ್ದರೂ ಹೇಗೋ ನುಣುಚಿಕೊಂಡು ಹೋಗಿಬಿಡುವಂತೆ ವಿಷಯಗಳೂ ಸುಖಸಂಪತ್ತುಗಳೂ ನಮ್ಮಿಂದ ಹೇಗೋ ನುಣುಚಿಕೊಳ್ಳುತ್ತಿರುವವು. ನಾವು ಅವನ್ನು ಬೇಟೆಯಾಡುತ್ತಾ ಅವುಗಳಿಗಾಗಿ ಎಷ್ಟೋ ಜನ್ಮಗಳನ್ನು ಎತ್ತಿರುವೆವು. ಇನ್ನೂ ಎಷ್ಟೋ ಜನ್ಮಗಳನ್ನು ಎತ್ತಲು ಸಜ್ಜುಮಾಡಿ ಕೊಳ್ಳುತ್ತಿರುವೆವು! ಸ್ವಲ್ಪಕಾಲವೇ ಯೌವನವಿರುತ್ತದೆ, ಭೋಗಶಕ್ತಿಯು ಬಹಳಕಾಲ

ವಿರುವದಿಲ್ಲ; ಭೋಗಸಾಮಗ್ರಿಗಳೂ ಯಾವಾಗಲೂ ಸಿಕ್ಕುವದಿಲ್ಲ. ಆದ್ದರಿಂದ ವಿಷಯಗಳು ದೊರೆತಾಗ ಅದನ್ನು ಅನುಭವಿಸಿಬಿಡುವದು ಒಳ್ಳೆಯದು—ಎಂಬುದು ನಮ್ಮಲ್ಲಿ ಕೆಲವರ ಭಾವನೆ. ಅಯ್ಯೊ, ನಮಗೆ ವಿಷಯಗಳು ಸಿಕ್ಕಲಿಲ್ಲವಲ್ಲ, ಅಥವಾ ಸಿಕ್ಕಿದರೂ ಅವನ್ನು ಅನುಭವಿಸುವದಕ್ಕೆ ಅಡ್ಡಿಯಾಗಿ ಹಲವು ರೋಗರುಜಿನಗಳು ನಮ್ಮನ್ನು ಕಾಡುತ್ತಿರುವವಲ್ಲ! ಎಂದು ಹಲುಬುತ್ತಿರುವವರು ಮತ್ತೆ ಕೆಲವರು! ವಿಷಯಗಳ ಸಂಪಾದನೆ ಕಷ್ಟ, ಸಿಕ್ಕಿದವುಗಳನ್ನು ಕಾಪಾಡಿಕೊಳ್ಳುವದು ಕಷ್ಟ, ಕಾಪಾಡಿಕೊಂಡವುಗಳನ್ನು ಅನುಭವಿಸುವ ಯೋಗವುಂಟಾಗುವದೂ ಕಷ್ಟ! ಈ ಕಷ್ಟಪರಂಪರೆಯಲ್ಲಿ ಕಾಮಕಾಮಿಗಳಾದ ನಮ್ಮಗಳಿಗೆ ಮನಶ್ಶಾಂತಿ ಎಲ್ಲಿಂದ ಬರಬೇಕು?

ನಮ್ಮಲ್ಲಿ ಮತ್ತೆ ಕೆಲವರಿರುತ್ತಾರೆ. ಅವರಿಗೆ ವಿಷಯಭೋಗವೂ ಬೇಕು, ಸಿಕ್ಕಿದರೆ ಮೋಕ್ಷವೂ ಬೇಕು! ಅವರು ಹೀಗೆನ್ನುತ್ತಿರುವರು; ಪರಮೇಶ್ವರನು ದಯಾಳುವೆಂದು ಶಾಸ್ತ್ರದಲ್ಲಿ ಕೊಂಡಾಡಿದೆ. ಸಾಯುವ ಕಾಲದಲ್ಲಿ ಸ್ಮರಣೆ ಮಾಡಿದವರಿಗೂ ತನ್ನ ಉತ್ತಮಪದವಿಯನ್ನು ಕೊಡುತ್ತಾನಂತೆ. ಅಜಮಿಳನೆಂಬ ಬ್ರಾಹ್ಮಣನು ಮಾಡಬಾರದ ಪಾಪಗಳನ್ನು ಮಾಡಿ ಸಾಯುವ ಕಾಲದಲ್ಲಿ ಮಗನನ್ನು 'ನಾರಾಯಣ' ಎಂದು ಕೂಗಿದ ಮಾತ್ರದಿಂದ ಕರುಣಾಳುವಾದ ಭಗವಂತನು ವೈಕುಂಠಪದವಿಯನ್ನೇ ಇತ್ತನೆಂದು ಪುರಾಣಗಳಲ್ಲಿದೆ. ಆದ್ದರಿಂದ ನಾವೂ ಆ ಕಾಲಕ್ಕೆ ಪರಮೇಶ್ವರನ ನಾಮಸ್ಮರಣೆಯನ್ನು ಮಾಡಿದರೆ ಆಗದೆ? ಹೀಗೆಂಬುದು ಅವರ ವಿಚಿತ್ರವಾದ ವಿಚಾರಸರಣಿಯು. ಎಂಥ ಮೂರ್ಖತನವಿದು! ಶರೀರವು ಗಟ್ಟಿ ಮುಟ್ಟಾಗಿರುವಾಗ, ಮನಸ್ಸು ಇನ್ನೂ ಅಲ್ಪಸ್ವಲ್ಪವಾದರೂ ನಾವು ಹೇಳಿದಂತೆ ಕೇಳುತ್ತಿರುವಾಗ, ಪರಮೇಶ್ವರನ ಚಿಂತೆಗೆ ಒಲಿಯದವರು, ಕೈಕಾಲುಗಳ ನರಗಳು ಸೇದಿಕೊಳ್ಳುತ್ತಿರುವ, ಕಫವಾತಪಿತ್ಥಗಳಿಂದ ಗಂಟಲು ಕಟ್ಟಿಕೊಳ್ಳುವ, ಸಂಸಾರದ ಮಕ್ಕಳುಮರಿಗಳ ಚಿಂತೆಯಿಂದ ಚಿತ್ತವು ಆಕ್ರಾಂತವಾಗಿ ಮುಂಗಾಣದೆ ಇರುವ, ಮರಣಸಮಯದಲ್ಲಿ ಭಗವಂತನ ಚಿಂತೆಯೆ? ಸುಭಿಕ್ಷೆಯ ಸಮಯದಲ್ಲಿ ಒಬ್ಬ ಬ್ರಾಹ್ಮಣನಿಗೆ ಒಂದು ಕವಡೆಯ ದಾನವನ್ನೂ ಮಾಡದವನು ಬರಗಾಲದಲ್ಲಿ ಸಾವಿರ ಜನರಿಗೆ ಸಂತರ್ಪಣೆ ಮಾಡಿಸುವೆನೆಂಬ ಸಂಕಲ್ಪವಲ್ಲವೆ, ಇದು? "ಸ್ಥಿತ್ವಾ ಸ್ಯಾಮನ್ತಕಾಲೇಽಪಿ" (ಅಂತಕಾಲದಲ್ಲಿ ಈ ಸ್ಥಿತಿಯಲ್ಲಿದ್ದರೂ) ಎಂದು ಗೀತೆಯಲ್ಲಿ ಹೇಳಿರುವದು ಮರಣಕಾಲದ ವಿಷಯವಲ್ಲ; ಮನುಷ್ಯನು ವಾರ್ಧಕ್ಯದಲ್ಲಿ ಈ ಸ್ಥಿತಿಯನ್ನು ಪಡೆದುಕೊಂಡರೂ ಸಾಕು, ಇದರ ಫಲವು ಸಿಕ್ಕಿಬಿಡುತ್ತದೆ; ಆದ್ದರಿಂದ ವಿವೇಕಿಯಾದವನು ಇಲ್ಲಿ ಹೇಳಿರುವ ಸಾಧನಗಳಿಗೆ ಫಲವು ಸಿಕ್ಕುತ್ತದೆಯೋ ಇಲ್ಲವೋ ಎಂಬ ಸಂಶಯಕ್ಕೆ ಬೀಳದೆ ಈಗಿನಿಂದಲೇ ಅಭ್ಯಾಸಮಾಡುತ್ತಾ ಹೋಗಬೇಕು ಎಂಬುದೇ ಈ ವಾಕ್ಯದ ಉದ್ದೇಶವು.

ಮೂರು ಗಳಿಗೆಯ ಬಾಳಿಗಾಗಿ, ಇಲ್ಲಿ ಸಿಕ್ಕೀತೋ ಇಲ್ಲವೋ ಎಂಬ ಸಂಶಯಾಸ್ಪದವಾದ ವಿಷಯಭೋಗಗಳಿಗಾಗಿ, ಪರಮಪುರುಷಾರ್ಥದ ಸಾಧನವನ್ನು ಕಳೆದುಕೊಳ್ಳುವದು ಎಂದಿಗೂ ಜಾಣತನವಲ್ಲ. ಮರಗಿಡಗಳಂತೆ ಸೋಮಾರಿಗಳಾಗಿ ನಿಂತಲ್ಲಿ ನಿಲ್ಲುವದಾಗಲಿ, ಹಂದಿನರಿನಾಯಿಗಳಂತೆ ವಿಷಯಭೋಗದಿಂದ ತೃಪ್ತನಾಗುವದಾಗಲಿ, ಕೊನೆಗೆ ಸತ್ಕರ್ಮಸದಾಚಾರಗಳಿಂದ ಶ್ರೋತ್ರಿಯನೆನಿಸಿಕೊಂಡಿರುವದಾಗಲಿ ಮನುಷ್ಯಜನ್ಮದ ಉದ್ದೇಶವಲ್ಲ. ನಾವುಗಳೆಲ್ಲರೂ ಭಗವಂತನೆಂಬ ತಾಯಿಯ ಮಡಿಲಲ್ಲಿಯೇ ಇರುವೆವಾದರೂ ಆ ಆನಂದವನ್ನು ಮರೆತು ಎತ್ತಲೋ ತಿರುಗಿಕೊಂಡು ಎಲ್ಲಿಯೋ ದೂರದಲ್ಲಿ ಕಾಣುತ್ತಿರುವ ಬೆಂಕಿಯನ್ನು ಹಣ್ಣೆಂದು ಭ್ರಮಿಸಿ ಅದನ್ನು ಹಿಡಿದುಕೊಳ್ಳುವದಕ್ಕೆಂದು ಹವಣಿಸುತ್ತಾ ಅಳುತ್ತಿರುವ ಮಕ್ಕಳಾಗಿರುವೆವು. ನಾವು ಆನಂದಸ್ವರೂಪನಾದ ಪರಮಾತ್ಮನಲ್ಲಿಯೇ ಇರುತ್ತೇವೆ; ನಮಗೆ ಆತನಿಗಿಂತ ಬೇರೆಯಾಗಿ ಪಡೆದುಕೊಳ್ಳಬೇಕಾದದ್ದು ಯಾವದೊಂದೂ ಇರುವದೇ ಇಲ್ಲ. ಇದನ್ನು ತಿಳಿದುಕೊಂಡು ನಲಿಯುವದೇ ನಮ್ಮ ಜನ್ಮದ ಪರಮೋದ್ದೇಶವು. ನಮಗೆ ಈಗ ನಾವೇನು ಮಾಡಬೇಕು? ಎನ್ನುವದೇ ತಿಳಿಯದು. ವಾಲ್ಮೀಕಿಯು ದುಷ್ಟ ಕಿರಾತರ ಸಹವಾಸದಿಂದ ದಾರಿಹೋಕರನ್ನು ಸುಲಿಗೆಮಾಡುತ್ತಿರುವಲ್ಲಿ ದಯಾಳುಗಳಾದ ನಾರದರ ಸಹವಾಸದಿಂದ ತಾನು ಮಾಡುತ್ತಿರುವ ದುಷ್ಕೃತ್ಯದ ಪರಿಣಾಮವನ್ನೂ ತಾನು ಮಾಡಬೇಕಾದ ಕರ್ತವ್ಯವನ್ನೂ ಅರಿಯುವ ಸುಯೋಗವು ಅವನಿಗೆ ದೊರೆಯಿತು. ಅವರ ಉಪದೇಶದಿಂದ ಶ್ರೀರಾಮಮಂತ್ರದ ಜಪವೂ ರಾಮಭಕ್ತಿಯೂ ಅಂಕುರಿಸಿದವು. ಮುಂದೆ ಆತನು ಮುನಿಪುಂಗವನಾಗಿ ತನ್ನ ತಪೋಮಹಿಮೆಯಿಂದ ಲೋಕಕ್ಕೇ ಕಲ್ಯಾಣವನ್ನುಂಟುಮಾಡುವ ಶ್ರೀ ರಾಮಾಯಣವನ್ನು ರಚಿಸಿದನು! ಇದರಂತೆಯೇ ನಮಗೂ ಸತ್ಪುರುಷರ ಸಹವಾಸವು ದೊರೆತರೆ, ನಾವು ಅವರ ಸದುಪದೇಶಕ್ಕೆ ಕಿವಿಗೊಟ್ಟರೆ, ಪರಮಾತ್ಮನ ಕಡೆಗೆ ನಮ್ಮ ಮನಸ್ಸನ್ನು ತಿರುಗಿಸಿಕೊಳ್ಳಬಹುದು, ನಮ್ಮ ಜೀವನದ ಸಾರ್ಥಕ್ಯವನ್ನೂ ಉಂಟುಮಾಡಿಕೊಳ್ಳಬಹುದು. ಈಗಿನಿಂದ ಪ್ರಯತ್ನಪಟ್ಟರೆ ನಮಗೂ ಸ್ಥಿತಪ್ರಜ್ಞನ ಸ್ಥಿತಿಯಲ್ಲದಿದ್ದರೆ ಆ ಸ್ಥಿತಿಗೆ ಪ್ರಯತ್ನಮಾಡುವ ಸಾಧಕನ ಸ್ಥಿತಿಯಾದರೂ ದೊರಕಬಹುದು. "ಸ್ಥಿತ್ವಾಸ್ಯಾಮನ್ತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ" ಆ ಸ್ಥಿತಿಯಲ್ಲಿ ಅಂತ್ಯವಯಸ್ಸಿನಲ್ಲಿದ್ದರೂ ಸಾಕು, ಬ್ರಹ್ಮಾನಂದವು ಇಲ್ಲಿಯೇ ಪ್ರಾಪ್ತವಾಗುವದು. ಭಗವಂತನ ದಯೆಯಿಂದ ನಮಗೆಲ್ಲರಿಗೂ ಭಗವಂತನ ಕಡೆಗೆ ತಿರುಗುವ ಸತ್ಸಂಕಲ್ಪವು ಉದಯಿಸಲಿ! ನಮ್ಮನಮ್ಮ ಯೋಗ್ಯತೆಗೆ ತಕ್ಕ ಸಾಧನಗಳನ್ನು ಮಾಡುವದಕ್ಕೆ ಪ್ರಾರಂಭಿಸುವ ಸದ್ಬುದ್ಧಿಯೂ ಮೊಳೆತುಕೊಳ್ಳಲಿ!

# ೧೯. ಕರ್ಮಯೋಗ-ಜ್ಞಾನಯೋಗಗಳ ಸಂಬಂಧ ೩-(೧-೪)

## (೩.೧೧.೪೬)

ಎರಡನೆಯ ಅಧ್ಯಾಯದಲ್ಲಿ ಮುಖ್ಯವಾಗಿ ಸಾಂಖ್ಯವನ್ನು ಅಥವಾ ಆತ್ಮಜ್ಞಾನವನ್ನು ಹೇಳಿದ ಬಳಿಕ ಭಗವಂತನು ಯೋಗವನ್ನು ಹೇಳಿದನು. ಜ್ಞಾನಿಗಳಿಗೆ ದೊರಕುವ ಸ್ಥಿತಪ್ರಜ್ಞೆಯನ್ನೂ ಆ ಪ್ರಜ್ಞೆಯಿಂದ ದೊರಕುವ ಪರಮಶಾಂತಿ ರೂಪವಾದ ಮೋಕ್ಷವನ್ನೂ ತಿಳಿಸಿದನು. ಸ್ಥಿತಪ್ರಜ್ಞನಾದವನು ಸಕಲಕಾಮಗಳನ್ನೂ ಸಂಪೂರ್ಣವಾಗಿ ಬಿಡುವದರಿಂದ ಅವನಿಗೆ ಬ್ರಾಹ್ಮೀಸ್ಥಿತಿಯು ದೊರಕುತ್ತದೆ ಎಂದು ತಿಳಿಸಿ ಈ ಸ್ಥಿತಿಯಲ್ಲಿರುವವನಿಗೆ ಯಾವ ಮೋಹವೂ ಇಲ್ಲ ಎಂಬ ಮಂಗಲಕರವಾದ ಪ್ರಯೋಜನವನ್ನು ಹೇಳಿದನು.

ಬಂಧವಾಗಲಿ ಮೋಕ್ಷವಾಗಲಿ ಮನಸ್ಸಿಗೆ ಸಂಬಂಧಪಟ್ಟಿರುತ್ತದೆ ಎಂಬುದನ್ನು ನಾವು ಇಲ್ಲಿ ಮರೆಯದೆ ನೆನಪಿನಲ್ಲಿಟ್ಟುಕೊಂಡಿರಬೇಕು. ಬಂಧವೆಂದರೆ ಕರ್ಮದ ಬಂಧವು; ಪಾಪಕರ್ಮವಾಗಲಿ ಪುಣ್ಯಕರ್ಮವಾಗಲಿ ಕಾಮವಿಲ್ಲದೆ ಉಂಟಾಗುವದಿಲ್ಲ. "ಜೀವನು ಏನೇನು ಮಾಡುತ್ತಾನೋ ಅದೆಲ್ಲವೂ ಕಾಮದ ಚೇಷ್ಟೆಯೇ" ಎಂದು ಮನುವು ಹೇಳಿರುತ್ತಾನೆ. ಕಾಮವೆಂಬ ಡವಾಲಿಯನ್ನು ಹಾಕಿಕೊಂಡು ಮನುಷ್ಯನು ವಿಷಯದ ಸೇವಕನಾಗಿ ಅತ್ತಿತ್ತ ಹರಿದಾಡುತ್ತಾ ಸಂಕಟಪಡುತ್ತಿರುತ್ತಾನೆ. ಆಶೆಗೆ ದಾಸರಾಗಿರುವವರು ಲೋಕಕ್ಕೆಲ್ಲ ದಾಸರು. ಆದ್ದರಿಂದ ಕರ್ಮಬಂಧವೆಂದರೆ ಕಾಮಬಂಧವೇ; ಕಾಮಗಳಿಂದ ಬಿಡುಗಡೆಯಾಗುವದೇ ಮೋಕ್ಷವು.

ಸ್ಥಿತಪ್ರಜ್ಞರಾದ ಸಾಂಖ್ಯರು ಈ ಕಾಮದಿಂದ ಬಿಡುಗಡೆಹೊಂದಿರುತ್ತಾರೆ. ಕಾಮಿಗಳಾದವರು ಹೊರಗಿನ ವಸ್ತುಗಳಲ್ಲಿ ಬೇಕು, ಬೇಡ-ಎಂಬ ಎರಡು ಬುದ್ಧಿಗಳಿಂದ ಪ್ರೇರಿತರಾಗಿ ಅಲೆದಾಡುತ್ತಿರುವರು; ಆದರೆ ಸಾಂಖ್ಯರು ವಿಷಯಗಳನ್ನೂ ಅವುಗಳಿಂದಾಗುವ ಸುಖದುಃಖಗಳನ್ನೂ ಮಿಥ್ಯೆ ಎಂದು ಅರಿತುಕೊಂಡಿರುವದರಿಂದ ಅವರಿಗೆ ವಿಷಯಗಳಲ್ಲಿ ಕಾಮದ ಬಂಧವುಂಟಾಗುವ ಹಾಗಿಲ್ಲ. ಒಂದು ಹಣ್ಣು ತನಗೆ ಬೇಕೆಂದು ಅದರ ಕಡೆಗೆ ಧಾವಿಸುತ್ತಿರುವವನು ಅದು ನಿಜವಾದ ಹಣ್ಣಲ್ಲವೆಂದೂ ಬರಿಯ ಬಣ್ಣದ ಹಣ್ಣೆಂದೂ ಅರಿವುಂಟಾದರೆ ಆ ಕೂಡಲೆ ತನ್ನ ಓಟವನ್ನು ನಿಲ್ಲಿಸಿಬಿಡುತ್ತಾನೆ. ಅಲ್ಲವೆ? ಇದರಂತೆ ಹೊರಗಿನ ವಿಷಯಗಳು ಬರಿಯ ಹುಸಿತೋರಿಕೆ ಎಂದು ಅರಿತುಕೊಂಡಿರುವದರಿಂದ ಸ್ಥಿತಪ್ರಜ್ಞನು ಅವುಗಳನ್ನು ಕಾಮಿಸದೆ ಇರುತ್ತಾನೆ.

ಕನ್ನಡಿಯ ಮೇಲೆ ಬೆರಳನ್ನಿಟ್ಟರೆ, ಆ ಬೆರಳಿಗೆ ತಾಕುವಂತೆ ತೋರುವ ಬೆರಳು ನಿಜವಾದ ಬೆರಳಲ್ಲವೆಂದು ನಮಗೆಲ್ಲರಿಗೂ ನಿಶ್ಚಯವಾಗಿರುತ್ತದೆ. ಆದ್ದರಿಂದಲೇ ನಮಗೆ ಆ ಕನ್ನಡಿಯ ಬೆರಳನ್ನು ಮುಟ್ಟಿದಂತೆ ತೋರಿದರೂ ನಿಜವಾಗಿ ಒಬ್ಬರ ಬೆರಳನ್ನು ಮುಟ್ಟಿದೆವೆಂಬ ತಿಳಿವಳಿಕೆಯಾಗಲಿ, ಅದರಿಂದ ಹರ್ಷವಿಷಾದಗಳಾಗಲಿ ಉಂಟಾಗುವದಿಲ್ಲ. ಇದರಂತೆ "ನಾನು ಕಾಮಗಳಿಗೆ ಆಶ್ರಯನಲ್ಲ, ವಿಷಯಗಳ ಸೋಂಕಿನಿಂದ ಇಂದ್ರಿಯಗಳ ಮೂಲಕವಾಗಿ ಆಗುವಂತೆ ತೋರುವ ಸುಖದುಃಖ ಗಳಿಗೂ ಆಶ್ರಯನಲ್ಲ" ಎಂದು ನಿಶ್ಚಯಿಸಿಕೊಂಡಿರುವ ಸಾಂಖ್ಯರಿಗೆ ಆಧ್ಯಾತ್ಮಿಕವಾದ ಇಂದ್ರಿಯಾದಿಗಳೂ ಆಧಿಭೌತಿಕವಾದ ವಿಷಯಗಳೂ ಕನಸಿನ ಇಂದ್ರಿಯಗಳಂತೆಯೂ ವಿಷಯಗಳಂತೆಯೂ ತೋರುತ್ತಿರುವದರಿಂದ ವಿಷಯಗಳ ಕಾಮವಾಗಲಿ, ಆ ಕಾಮದಿಂದಾಗುವ ಬಂಧವಾಗಲಿ ಇರುವದೇ ಇಲ್ಲ. ಆದ್ದರಿಂದ ಅವರು ಜೀವನ್ಮುಕ್ತ ರೆನಿಸಿರುವರು.

ಇನ್ನು ಕರ್ಮಯೋಗಿಗಳು ಕಾಮಬಂಧದಿಂದ ಬಿಡುಗಡೆಯಾಗುವ ಪರಿ ಹೇಗೆಂದರೆ: ಅವರಿಗೆ ಕ್ರಿಯೆ, ಕಾರಕ, ಫಲ-ಇವು ಯಾವುವೂ ಮಿಥ್ಯೆಯಲ್ಲವಾದರೂ ಸುಖದುಃಖಗಳು ಆಗಮಾಪಾಯಿಗಳು, ಎಂದರೆ ಬರುತ್ತವೆ ಹೋಗುತ್ತವೆ, ಎಂಬ ನಿಶ್ಚಯವಿರುತ್ತದೆ. ಹೀಗೆ ಸ್ವಲ್ಪ ಕಾಲದ ಮಟ್ಟಿಗೆ ತೋರಿಕೊಳ್ಳುವ ಸುಖದುಃಖಗಳಿಂದ ಏರುಪೇರಾಗದೆ ಇರುವದಕ್ಕೆ, ಅವರು ಕರ್ಮಗಳನ್ನು ಭಗವಂತನ ಪ್ರೀತಿಯಾಗಲೆಂಬ ಸದುದ್ದೇಶದಿಂದ ಮಾಡುತ್ತಾ ಕರ್ಮದ ಫಲವನ್ನು ಕೋರದೆ ಇರುವದೇ ಕಾರಣ ವಾಗಿರುತ್ತದೆ. "ನಾನು ಯಾವ ಕರ್ಮವನ್ನೂ ನನಗಾಗಿ ಮಾಡುತ್ತಲಿಲ್ಲ, ಭೃತ್ಯನಂತೆ ಪರಮೇಶ್ವರನ ಪ್ರೀತ್ಯರ್ಥವಾಗಿ ಎಲ್ಲವನ್ನೂ ಮಾಡುತ್ತಿರುವೆನು" ಎಂಬ ಬುದ್ಧಿಯು ಕರ್ಮಯೋಗಿಗಳಲ್ಲಿ ನೆಲಸಿರುತ್ತದೆ. ಪರಮೇಶ್ವರನು ನಿತ್ಯಮುಕ್ತನಾದ್ದರಿಂದ ಆತನಿಗೆ ಕರ್ಮದ ಸಂಗವಿರುವದಿಲ್ಲ; ಪರಮೇಶ್ವರನ ಆಳಾಗಿರುವ ಕರ್ಮಯೋಗಿಗೆ ಫಲಾಸಕ್ತಿ ಯಾಗಲಿ ಕರ್ಮಸಂಗವಾಗಲಿ ಇರುವದಿಲ್ಲವಾದ್ದರಿಂದ ಅವನಿಗೂ ಕಾಮದ ಬಂಧ ವಿರುವದಿಲ್ಲ.

ಹೀಗೆ ನೋಡಿದರೆ ಫಲಿತಾಂಶದೃಷ್ಟಿಯಿಂದ ಸಾಂಖ್ಯವೂ ಕರ್ಮಯೋಗವೂ ಒಂದೇ ಆಗಿರುತ್ತವೆ. ಸಾಂಖ್ಯರು, ಕರ್ಮಯೋಗಿಗಳು-ಇಬ್ಬರಿಗೂ ಕಾಮದ ಬಂಧ ವಿರುವದಿಲ್ಲ. ಸಾಂಖ್ಯರಿಗೆ ತತ್ತ್ವಜ್ಞಾನದಿಂದ ಕಾಮದ ಉಪಟಳವು ತಪ್ಪಿರುತ್ತದೆ; ಕರ್ಮಯೋಗಿಗಳಿಗೆ ಪರಮೇಶ್ವರನ ಭಕ್ತಿಯಿಂದ ಅದು ತೊಲಗಿರುತ್ತದೆ. ಹೀಗೆ ಕರ್ಮಯೋಗಿಗಳೂ ಪರಂಪರೆಯಿಂದ ಸ್ಥಿತಪ್ರಜ್ಞರೇ ಆಗುವರೆಂಬುದರಮೇಲೆ ಭಗವಂತನು ಅಧ್ಯಾಯಾಂತದಲ್ಲಿ ಜ್ಞಾನವನ್ನೇ ಹೊಗಳಿರುತ್ತಾನೆ.

ಆದರೆ ಅರ್ಜುನನಿಗೆ ಕರ್ಮಯೋಗದ ನಿಜವಾದ ಸ್ಥಾನವು ಚೆನ್ನಾಗಿ ಮನದಟ್ಟಾಗಲಿಲ್ಲ. "ಕರ್ಮವನ್ನೂ ಕಾಮವನ್ನೂ ಸಂಪೂರ್ಣವಾಗಿ ಬಿಟ್ಟು ಪರಮ ಶಾಂತಿಯನ್ನು ಹೊಂದುವದಕ್ಕೆ ಸಾಂಖ್ಯರ ಜ್ಞಾನವೇ ಮುಖ್ಯಸಾಧನವೆಂದು ಭಗವಂತನು ಹೇಳಿರುತ್ತಾನೆ. ಹೀಗಿರುವಲ್ಲಿ ನಾನು ಮಾತ್ರ ಕರ್ಮವನ್ನು ಏತಕ್ಕೆ ಮಾಡಬೇಕು?" ಎಂಬ ಶಂಕೆಯು ಅವನ ಅಂತಃಕರಣದಲ್ಲಿ ಮೊಳೆಯಿತು. ಆಗ ಅವನು ಈ ಪ್ರಶ್ನೆಯನ್ನು ಹಾಕಿದನು: "ಎಲೈ ಜನಾರ್ದನನೆ, ಕರ್ಮಕ್ಕಿಂತಲೂ ಜ್ಞಾನವೇ ಮೇಲೆಂಬುದು ನಿನ್ನ ಅಭಿಪ್ರಾಯವಾದರೆ ನನ್ನನ್ನೇಕೆ ಈ ಘೋರವಾದ ಕರ್ಮದೊಳಕ್ಕೆ ತಳ್ಳುತ್ತಿರುವೆ? ಕಲಬೆರಕೆಯ ಮಾತಿನಿಂದ ನನ್ನನ್ನು ಭ್ರಾಂತಿಗೊಳಿಸುವಂತೆ ಕಾಣುತ್ತಿರುವೆಯಲ್ಲ! ಆದ್ದರಿಂದ ಜ್ಞಾನವೋ ಕರ್ಮವೋ, ಯಾವದೊಂದರಿಂದ ನನಗೆ ಮುಕ್ತಿಯಾದೀತೋ ಅದನ್ನು ನಿಶ್ಚಯಿಸಿ ಇದನ್ನೇ ಮಾಡು ಎಂದು ಹೇಳಿಬಿಡು!"

ಭಗವಂತನ ಉಪದೇಶಕ್ಕೆ ಅರ್ಜುನನ ಮನಸ್ಸಿನಲ್ಲಾದ ಮೊದಲನೆಯ ಪ್ರತಿಕ್ರಿಯೆಯು ಇದು. ಅರ್ಜುನನು ಸ್ವಜನರನ್ನು ಕೊಲ್ಲುವದು ಪಾಪವು ಎಂದು ಯುದ್ಧಮಾಡಲೊಲ್ಲೆನೆಂದು ಸುಮ್ಮನಾದಾಗ ಭಗವಂತನು ಜ್ಞಾನವನ್ನು ಹೇಳುವದಕ್ಕೆ ಪ್ರಾರಂಭಿಸಿದನು; ಅರ್ಜುನನ್ನು ಏಳು, ಕರ್ಮವನ್ನು ಮಾಡು ಎಂದನು. ಇವೆರಡೂ ಒಂದಕ್ಕೊಂದು ಹೊಂದದ ಮಾತುಗಳಾಗಿ ಕಾಣುತ್ತಿವೆ. ಇದರ ಮುಂದೆ ಭಗವಂತನು ಸಾಂಖ್ಯವೆಂಬ ಹೆಸರಿನಿಂದ ಜ್ಞಾನವನ್ನೂ ಯೋಗವೆಂಬ ಹೆಸರಿನಿಂದ ಕರ್ಮವನ್ನೂ ವಿಸ್ತರಿಸಿ ಹೇಳಿದನು; ಕೊನೆಯಲ್ಲಿ ಜ್ಞಾನದ ಹೆಚ್ಚುಗಾರಿಕೆಯನ್ನೇ ಹೊಗಳಿ, ಜ್ಞಾನದಿಂದಲೇ ಮುಕ್ತಿ ಎಂದು ಹೇಳಿರುತ್ತಾನೆ. ಹಾಗಾದರೆ ನಾನು ಕರ್ಮವನ್ನು ಮಾಡುವದಿಲ್ಲವೆಂದು ಹೇಳಿದ್ದರಲ್ಲಿ ತಪ್ಪೇನು? ಭಗವಂತನ ಮತದಲ್ಲಿಯೂ ಕರ್ಮಕ್ಕಿಂತ ಜ್ಞಾನವೇ ಶ್ರೇಯಸ್ಕರವೆಂದಾಯಿತು. ಹಾಗಾದರೆ ನನಗೆ ಕರ್ಮವನ್ನು ಉಪದೇಶಿಸಿರುವದರ ರಹಸ್ಯವೇನು? ಹೀಗೆ ಉತ್ತಮವಾದ ಜ್ಞಾನವನ್ನು ಬೋಧಿಸಿದ ಬಳಿಕವೂ ಕರ್ಮವನ್ನು ಅದರ ಜೊತೆಗೇ ಸೇರಿಸಿ ಉಪದೇಶಿಸಿರುವದರ ಗುಟ್ಟೇನು? ಇದೀಗ ಅರ್ಜುನನ ಪ್ರಶ್ನೆ.

ಅರ್ಜುನನಿಗೆ ಉಂಟಾಗಿದ್ದ ಶಂಕೆಯು ಈಗಲೂ ಕೆಲವರಿಗೆ ಉಂಟಾಗುತ್ತಲೇ ಇದೆ. ಜ್ಞಾನವೂ ಕರ್ಮವೂ ಬೇರೆಬೇರೆಯ ಅಧಿಕಾರಿಗಳಿಗೆ ಹೇಳತಕ್ಕವುಗಳಾದ್ದರಿಂದ ಕರ್ಮಕ್ಕೆ ಯಾರು ಅಧಿಕಾರಿಗಳೋ ಅವರಿಗೆ ಜ್ಞಾನವನ್ನು ಉಪದೇಶಿಸಬಾರದು ಎಂದೇ ಅವರ ಅಭಿಪ್ರಾಯವಿರುತ್ತದೆ. ಅದ್ವೈತಜ್ಞಾನವನ್ನು ಉಪದೇಶಿಸುವದು ಉತ್ತಮಾಧಿಕಾರಿಗಳಲ್ಲದವರಿಗೆ ಅಪಾಯಕರವೆಂದು ಕೂಡ ಅವರು ಭಾವಿಸುತ್ತಾರೆ! ನನ್ನ ಮಿತ್ರರಾದ ಒಬ್ಬ ಶಾಸ್ತ್ರಿಗಳೊಡನೆ ವೇದಾಂತವಿಚಾರವನ್ನು ಮಾಡುತ್ತಿದ್ದ

ಮಹಾಶಯರೊಬ್ಬರು "ಮಂದಾಧಿಕಾರಿಗಳಿಗೆ ಅದ್ವೈತಜ್ಞಾನವನ್ನು ಉಪದೇಶಿಸುವವರನ್ನು ಪ್ರಾಸಿಕ್ಯೂಷನ್ ಮಾಡಿಸಬೇಕು" ಎಂದು ಒತ್ತಿ ನುಡಿದರಂತೆ! ಆಗ ನಿಜವನ್ನು ಪ್ರಕಟಮಾಡುವ ಇಚ್ಛೆಯಿಂದ ಶಾಸ್ತ್ರಿಗಳು "ಸರಿ, ಹಾಗಾದರೆ ಶ್ರೀಕೃಷ್ಣನನ್ನು ಮೊದಲು ಪ್ರಾಸಿಕ್ಯೂಷನ್ ಮಾಡಿಸಬೇಕಾಗುತ್ತದೆ; ಏಕೆಂದರೆ ಆತನು ಕರ್ಮಕ್ಕೆ ಅಧಿಕಾರಿಯಾದ ಅರ್ಜುನನಿಗೂ ಜ್ಞಾನವನ್ನು ಉಪದೇಶಿಸಿರುತ್ತಾನೆ" ಎಂದು ಉತ್ತರಕೊಟ್ಟರಂತೆ! ಭಗವಂತನು ಅರ್ಜುನನಿಗೆ ಜ್ಞಾನವನ್ನು ಉಪದೇಶಿಸಿರುತ್ತಾನೆಂಬುದು ನಿಶ್ಚಿತವಾಗಿರುತ್ತದೆ; ಅರ್ಜುನನು ಕರ್ಮಕ್ಕೇ ಅಧಿಕಾರಿಯೆಂದೂ ಭಗವಂತನೇ ಹೇಳಿರುತ್ತಾನೆಂಬುದೂ ಅಷ್ಟೇ ಖಂಡಿತವಾಗಿ ನಿಶ್ಚಯವಾಗಿರುತ್ತದೆ. ಆದ್ದರಿಂದ ಅರ್ಜುನನು ಕರ್ಮಕ್ಕೇ ತಕ್ಕವನಾಗಿದ್ದರೂ ಅವನಿಗೆ ಜ್ಞಾನವನ್ನೂ ಉಪದೇಶಿಸಿರುವದು ಏಕೆ?- ಎಂಬುದನ್ನು ನಾವು ಸಾವಧಾನವಾಗಿ ವಿಚಾರಿಸುವದು ಅವಶ್ಯವಾಗಿರುತ್ತದೆ.

ಇದಿರಲಿ, ಅರ್ಜುನನು ಕೇಳಿದ ಪ್ರಶ್ನೆಯನ್ನು ಪೂರ್ಣವಾಗಿ ಮೊದಲು ವಿಮರ್ಶಿಸೋಣ. "ಭಗವಂತನೆ, ಜ್ಞಾನವೇ ಹೆಚ್ಚೆಂದು ನೀನು ಹೇಳಿರುತ್ತೀಯಲ್ಲ, ಹೀಗಿದ್ದರೂ ಘೋರವಾದ ಕರ್ಮದೊಳಕ್ಕೆ ನನ್ನನ್ನೇಕೆ ದೂಡುತ್ತಿರುವೆ?" ಎಂದು ಅವನು ಕೇಳಿರುತ್ತಾನೆ. ಆದರೆ ಭಗವಂತನು ನಿಜವಾಗಿ ಉಪದೇಶಿಸಿರುವದು ಏನು? ಜ್ಞಾನಕ್ಕಿಂತ ಕರ್ಮವು ಹೆಚ್ಚೆಂದಾಗಲಿ ಕಡಿಮೆ ಎಂದಾಗಲಿ, ಅಥವಾ ಕರ್ಮಕ್ಕಿಂತ ಜ್ಞಾನವು ಹೆಚ್ಚೆಂದಾಗಲಿ ಕಡಿಮೆ ಎಂದಾಗಲಿ ಆತನು ಹೇಳಿರುವದಿಲ್ಲ. ಸ್ಥಿತಪ್ರಜ್ಞನು ಶಾಂತಿಯನ್ನು ಹೊಂದುತ್ತಾನೆ, ಬ್ರಾಹ್ಮೀಸ್ಥಿತಿಯನ್ನು ಪಡೆದುಕೊಳ್ಳುತ್ತಾನೆ ಎಂದು ಮಾತ್ರ ಹೇಳಿರುತ್ತಾನೆ. ಅಷ್ಟು ಮಾತ್ರದಿಂದ ಅರ್ಜುನನು ಜ್ಞಾನವು ಹೆಚ್ಚೆಂದೂ ಕರ್ಮವು ಕಡಿಮೆಯ ಸಾಧನವೆಂದೂ ತಿಳಿದುಕೊಂಡುಬಿಟ್ಟಿರುತ್ತಾನೆ, ಅಷ್ಟೆ. ಅರ್ಜುನನು ಭ್ರಾಂತನಾಗಿ ಹಾಕಿದ ಪ್ರಶ್ನೆಯಿದು ಎಂಬುದನ್ನು ನಾವು ನೆನಪಿಡಬೇಕು. ಭ್ರಾಂತರಾದವರಿಗೆ ತಾವು ತಪ್ಪಾಗಿ ತಿಳಿದುಕೊಂಡಿದ್ದೇವೆ ಎಂದು ಆ ಕಾಲಕ್ಕೆ ತಿಳಿದಿರುವದಿಲ್ಲ. ಆದ್ದರಿಂದಲೇ ಅರ್ಜುನನು, "ಭಗವಂತ, ನೀನು ವ್ಯಾಮಿಶ್ರವಾದ, ಜ್ಞಾನವನ್ನೂ ಕರ್ಮವನ್ನೂ ಕಲೆಬೆರಕೆಮಾಡಿದ, ವಾಕ್ಯದಿಂದ ನನ್ನ ಬುದ್ಧಿಗೆ ಭ್ರಾಂತಿಯನ್ನುಂಟುಮಾಡುವಂತೆ ತೋರುತ್ತಿದೆ. ನೀನು ನನ್ನ ಭ್ರಾಂತಿಯನ್ನು ಕಳೆಯುವದಕ್ಕೇ ಹೊರಟವನಾದರೂ ಹೀಗೇಕೆ ನುಡಿಯುತ್ತಿರುವೆಯೋ ನನಗೆ ತಿಳಿಯುವಂತಿಲ್ಲ; ಆದ್ದರಿಂದ ನಾನು ಸಾಂಖ್ಯರ ದೃಷ್ಟಿಯನ್ನವಲಂಬಿಸಿ ಜ್ಞಾನವನ್ನೇ ಕೈಕೊಳ್ಳಬೇಕೋ ಅಥವಾ ಕರ್ಮವನ್ನೇ ಮಾಡಬೇಕೋ ಯಾವದಾದರೊಂದನ್ನು 'ಇದೇ ನಿನಗೆ ತಕ್ಕ ಸಾಧನವು' ಎಂದು ನಿಶ್ಚಯಿಸಿ ಹೇಳಿಬಿಡು" ಎಂದು ಕೇಳಿಕೊಂಡಿರುತ್ತಾನೆ.

ಅರ್ಜುನನಿಗೆ ಉತ್ತರವನ್ನು ನಿಶ್ಚಿತವಾಗಿರುವ ವಾಕ್ಯರೂಪದಲ್ಲಿ ಪಡೆದುಕೊಳ್ಳಬೇಕೆಂಬ ಕುತೂಹಲವುಂಟಾಗಿದೆ. ಆದರೆ ಉತ್ತರವನ್ನು ಯಾವಾಗಲೂ ಅಷ್ಟು ನಿಶ್ಚಿತರೂಪದಲ್ಲಿ ಹೇಳುವದು ಆಗುವದಿಲ್ಲ. ಪ್ರಶ್ನೆಯಲ್ಲಿಯೇ ಏನಾದರೂ ತಪ್ಪಿದ್ದರೆ, ಆಗ ಕೇಳಿದವನ ಪ್ರಶ್ನೆಗೆ ಅನುಗುಣವಾಗಿಯೇ ನಿಶ್ಚಿತವಾಗಿ ಉತ್ತರವನ್ನು ಹೇಳುವದು ಆಗಲಾರದು. "ನೀನು ನಿಮ್ಮಪ್ಪನನ್ನು ಹೊಡೆಯುವದನ್ನು ಬಿಟ್ಟುಬಿಟ್ಟೆಯ?" ಎಂಬ ಪ್ರಶ್ನೆಗೆ ಬಿಟ್ಟೆ ಅಥವಾ ಬಿಟ್ಟಿಲ್ಲ ಎಂದು ವಿಂಗಡಿಸಿ ಒಂದು ಮಾತಿನಲ್ಲಿ ಉತ್ತರವನ್ನು ಹೇಳುವದಕ್ಕೆ ಬರುವದಿಲ್ಲ. ಅಪ್ಪನನ್ನು ಹೊಡೆಯುವ ಅಪರಾಧವನ್ನು ಎಂದಿಗೂ ಮಾಡದೆ ಇರುವವನು 'ಹೊಡೆಯುವದನ್ನು ಬಿಟ್ಟೆ' ಎಂದರೂ 'ಬಿಟ್ಟಿಲ್ಲ' ಎಂದರೂ ಮೊದಲು ಹೊಡೆಯುತ್ತಿದ್ದೆ ಎಂದೇ ಒಪ್ಪಿಕೊಂಡಂತೆ ಆಗುವದಿಲ್ಲವೆ? ಇದರಂತೆ "ಜ್ಞಾನವು ಕರ್ಮಕ್ಕಿಂತ ಹೆಚ್ಚಾಗಿದ್ದರೆ" ಎಂದು ಕೇಳುವ ಪ್ರಶ್ನೆಯ ಅಭಿಪ್ರಾಯವನ್ನು ಒಪ್ಪಿಕೊಂಡು ಉತ್ತರವನ್ನು ಹೇಳುವದಕ್ಕೆ ಆಗುವಂತಿಲ್ಲ. ಆದ್ದರಿಂದ ಭಗವಂತನು ಅರ್ಜುನನ ಭ್ರಾಂತಿಯನ್ನೇ ತೊಲಗಿಸುವದಕ್ಕಾಗಿ ಮುಂದಿನ ಉತ್ತರವನ್ನು ಹೇಳಬೇಕಾಯಿತು.

ಭಗವದ್ಗೀತೆಯಲ್ಲಿ ಆಗಾಗ್ಗೆ "ಶ್ರೀ ಭಗವಾನ್ ಉವಾಚ" ಎಂಬ ಮಾತುಗಳು ಏತಕ್ಕೆ ಮತ್ತೆ ಮತ್ತೆ ಬರುತ್ತಿರುವುವು? ಎಂಬ ಬಗ್ಗೆ ಉತ್ತರವನ್ನು ಈ ಮೊದಲೇ ಹೇಳಿರುತ್ತೇನೆ. ಇದು ಶ್ರೀಕೃಷ್ಣಾರ್ಜುನಸಂವಾದರೂಪವಾದ ಒಂದು ಗ್ರಂಥವಾದರೂ 'ಅರ್ಜುನ ಉವಾಚ' 'ಶ್ರೀಕೃಷ್ಣ ಉವಾಚ' ಎಂಬ ರೂಪದಲ್ಲಿ ಬಂದಿದ್ದರೆ ಸಾಕಾಗಿತ್ತು; ಶ್ರೀಕೃಷ್ಣನನ್ನು ಯಾವಾಗಲೂ ಇಲ್ಲಿ ಭಗವಂತನೆಂದೇ ಕರೆದಿರುತ್ತದೆ. ಆದ್ದರಿಂದ ವಸುದೇವನ ಪುತ್ರನಾದ ಶ್ರೀಕೃಷ್ಣನೆಂಬ ವ್ಯಕ್ತಿಯು ತನ್ನ ಸಂಬಂಧಿಯೊಬ್ಬನಿಗೆ ಹೇಳಿದ ಗ್ರಂಥವಿದೆಂದು ಭಾವಿಸುವದಕ್ಕೂ ಅವಕಾಶವಾಗದಂತೆ ಇದು ಭಗವಂತನೇ ಹೇಳಿದ್ದು ಎಂದು ವ್ಯಾಸರು ನಮಗೆ ಮತ್ತೆ ಮತ್ತೆ ನೆನಪುಕೊಡುತ್ತಿದ್ದಾರೆ. ಈ ಅಭಿಪ್ರಾಯವು ಮನಸ್ಸಿನಲ್ಲಿದ್ದರೆ ಅರ್ಜುನನು ಕೇಳಿದ ಪ್ರಶ್ನೆಯು ನಮ್ಮದೂ ಆಗುವದು; ಉತ್ತರವು ನಮಗೂ ಹೇಳಿದ್ದಾಗುವದು. ಈ ಭಾವನೆಯಿಂದ ಯಾರು ಗ್ರಂಥವನ್ನು ಪಾರಾಯಣಮಾಡುವರೋ ಅವರಿಗೇ ಇದರ ಪೂರ್ಣಪ್ರಯೋಜನವು ದೊರೆಯುವದು. ಆದ್ದರಿಂದ ಅರ್ಜುನನ ಪ್ರಶ್ನೆಯನ್ನು ಈ ದೃಷ್ಟಿಯಿಂದಲೇ ವಿಮರ್ಶೆಮಾಡೋಣ.

ಅರ್ಜುನನ ಪ್ರಶ್ನೆಯೇನು? "ಕರ್ಮಕ್ಕಿಂತ ಜ್ಞಾನವು ಹೆಚ್ಚಿನದಾದರೆ ನನ್ನನ್ನೇಕೆ ಕರ್ಮವನ್ನು ಮಾಡಬೇಕೆನ್ನುತ್ತೀಯೆ?" ಎಂದು ಅವನು ಕೇಳಿರುತ್ತಾನೆ. ಆದರೆ ಭಗವಂತನು ತತ್ತ್ವದೃಷ್ಟಿಯ ಸಾಂಖ್ಯರೆಂಬ ಉತ್ತಮಾಧಿಕಾರಿಗಳಿಗೆ ಜ್ಞಾನವನ್ನೂ ಅದಿಲ್ಲದವರಿಗೆ ಕರ್ಮವನ್ನೂ ಉಪದೇಶಿಸಿರುತ್ತಾನೆ. ಅರ್ಜುನನ್ನು ತನ್ನ ಯೋಗ್ಯತೆಯನ್ನು

ಪರೀಕ್ಷಿಸಿಕೊಂಡಿದ್ದರೆ ತಾನು ಕರ್ಮಯೋಗವನ್ನೇ ಮಾಡತಕ್ಕದ್ದೆಂದು ನಿರ್ಣಯಿಸಿ ಬಿಡುತ್ತಿದ್ದನು. ಆದರೆ ಅವನಿಗೆ ತನ್ನ ಯೋಗ್ಯತೆಯ ಅಂತಸ್ತು ತಿಳಿಯಲಿಲ್ಲ. ಇದಲ್ಲದೆ ಭಗವಂತನು ಕರ್ಮಯೋಗವೂ ಸಾಂಖ್ಯವೂ ಎರಡು ಸ್ವತಂತ್ರವಾದ ಸಾಧನಗಳೆಂದೂ ಹೇಳಿರುವದಿಲ್ಲ. ಕರ್ಮಯೋಗವೂ ನೇರಾಗಿ ಮೋಕ್ಷಸಾಧನವಲ್ಲ; ಜ್ಞಾನಕ್ಕೆ ಉಪಾಯವಾಗಿರುವದರಿಂದ ಅದು ಜ್ಞಾನದ ಮೂಲಕವಾಗಿ ಪರಮ ಪುರುಷಾರ್ಥವನ್ನು ಕೊಡಬೇಕಾಗಿರುತ್ತದೆ. ಇದೂ ಅರ್ಜುನನಿಗೆ ತಿಳಿಯಲಿಲ್ಲ. ಆದ್ದರಿಂದ ಭಗವಂತನು ಇದನ್ನೆಲ್ಲ ಕ್ರಮಕ್ರಮವಾಗಿ ಸ್ಪಷ್ಟಗೊಳಿಸುವದಕ್ಕೆ ಪ್ರಾರಂಭಿಸಿ ಈ ಉತ್ತರವನ್ನು ಹೇಳುತ್ತಿದ್ದಾನೆ.

**ನ ಕರ್ಮಣಾಮನಾರಮ್ಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥** (೩-೪)

"ಅರ್ಜುನ, ನಾನು ಎರಡು ನಿಷ್ಠೆಯನ್ನು ಹಿಂದೆ ಹೇಳಿರುತ್ತೇನೆ. ಸಾಂಖ್ಯರಿಗೆ ಜ್ಞಾನಯೋಗ, ಯೋಗಿಗಳಿಗೆ ಕರ್ಮಯೋಗ- ಹೀಗೆ ಎರಡು ನಿಷ್ಠೆಗಳನ್ನು ಉಪದೇಶಿಸಿರುತ್ತೇನೆ. ಕರ್ಮಗಳನ್ನು ಮಾಡದೆ ಇರುವದರಿಂದ ನೈಷ್ಕರ್ಮ್ಯವು ಸಿಕ್ಕುವದಿಲ್ಲ; ಕರ್ಮವನ್ನು ಬಿಟ್ಟಮಾತ್ರದಿಂದಲೂ ಸಿದ್ಧಿಯನ್ನು ಹೊಂದುವ ದಕ್ಕಾಗುವದಿಲ್ಲ" ಎಂಬುದು ಶ್ಲೋಕದ ಅರ್ಥವು. ಈ ಶ್ಲೋಕದಲ್ಲಿ ಕರ್ಮಯೋಗ ಜ್ಞಾನಯೋಗಗಳ ಸಂಗಮವೆಲ್ಲಿ ಎಂಬುದನ್ನು ಸಂಗ್ರಹವಾಗಿ ತಿಳಿಸಿರುತ್ತದೆ. ಆದ್ದರಿಂದ ಇದನ್ನು ಸ್ವಲ್ಪ ಬಿಡಿಸಿ ತಿಳಿದುಕೊಳ್ಳುವದರಿಂದ ಪ್ರಯೋಜನವುಂಟು.

ಆತ್ಮನು ನಿಷ್ಕ್ರಿಯನು, ಕರ್ತೃಭೋಕ್ತೃವಲ್ಲ-ಎಂಬುದನ್ನು ಹಿಂದಿನ ಅಧ್ಯಾಯದಲ್ಲಿ "ನ ಜಾಯತೇ ಮ್ರಿಯತೇ ವಾ" (೨೦), "ವೇದಾವಿನಾಶಿನಂ ನಿತ್ಯಮ್" (೨೧) ಎಂದು ಮೊದಲಾದ ಸ್ಥಳಗಳಲ್ಲಿ ತಿಳಿಸಿತ್ತು. ಅಲ್ಲಿ ಬಹು ಸಂಗ್ರಹವಾಗಿ ಹೇಳಿರುವದನ್ನೇ ವಿಸ್ತರಿಸಿ ಇನ್ನು ಮುಂದೆ ತಿಳಿಸಬೇಕಾಗಿದೆ. ಆತ್ಮನು ನಿಷ್ಕ್ರಿಯನು ಎಂದರೆ ಹೇಗೆ? ಕರ್ಮವನ್ನು ಮಾಡದೆ ಸುಮ್ಮನೆ ಕುಳಿತಿರುವ ಅಲಸರು ಈ ನಿಷ್ಕ್ರಿಯಾತ್ಮಸ್ಥಿತಿಯನ್ನು ಪಡೆದಿರುವರೆನ್ನುವದಕ್ಕಾದೀತೆ? ಜ್ಞಾನಿಗಳು ಕರ್ಮವನ್ನು ಮೀರಿರುವರೆಂಬ ಮಾತನ್ನು ಕೇಳಿದ ಮೂಢರು ಯಾವ ಕರ್ಮವನ್ನೂ ಮಾಡುವದಕ್ಕೇ ಪ್ರಾರಂಭಿಸದೆ ಇರಬಹುದು; ಅಷ್ಟು ಮಾತ್ರದಿಂದ ಅವರಿಗೆ ನೈಷ್ಕರ್ಮ್ಯರೂಪವಾದ ಜ್ಞಾನನಿಷ್ಠೆಯು ದೊರೆತೀತೆ? ಎಂದಿಗೂ ಇಲ್ಲ. ಏಕೆಂದರೆ ಕರ್ಮವನ್ನು ಮಾಡದೆ ಫಲವನ್ನು ಬಯಸುವ ಸೋಮಾರಿಗಳಿಗೆ ಶಾಸ್ತ್ರವಿಧಿಯನ್ನು ಪಾಲಿಸದೆ ಇರುವದರಿಂದಾಗುವ ದುಷ್ಫಲವೇ ಗಂಟುಬೀಳುತ್ತದೆ. ಹಾಗಾದರೆ ಕರ್ಮವನ್ನು ಮಾಡಿದರೆ ನೈಷ್ಕರ್ಮ್ಯಕ್ಕೆ ಮತ್ತೂ ದೂರವಾಗುವದಿಲ್ಲವೆ? ಕರ್ಮವನ್ನು ಮಾಡುತ್ತಾ ಕರ್ಮವನ್ನು ಮೀರುವದಕ್ಕಾದೀತೆ?-

ಎಂದು ಯಾರಿಗಾದರೂ ಶಂಕೆಯುಂಟಾಗಬಹುದು. ಈ ಶಂಕೆಯು ಸರಿಯಲ್ಲ. ಏಕೆಂದರೆ ಕರ್ಮವನ್ನು ಮಾಡಿ ಅದನ್ನು ಬಂಧಕವಾಗಿ ಮಾಡಿಕೊಳ್ಳುವದಕ್ಕೂ ಆಗುತ್ತದೆ. ಅದನ್ನೇ ಕರ್ಮವನ್ನು ಮೀರುವದಕ್ಕೆ ಉಪಾಯವನ್ನಾಗಿ ಮಾಡಿಕೊಳ್ಳುವದಕ್ಕೂ ಆಗುತ್ತದೆ. ಆದ್ದರಿಂದಲೇ ಭಗವಂತನು ಕರ್ಮವನ್ನು ಬಿಡಬೇಡ, ಅದನ್ನು ಸರಿಯಾಗಿ ಮಾಡಿ ಜ್ಞಾನನಿಷ್ಠೆಯನ್ನು ಸಂಪಾದಿಸಿಕೊಳ್ಳುವದಕ್ಕೆ ಯತ್ನಿಸು-ಎಂದು ಅರ್ಜುನನಿಗೆ ಉಪದೇಶಿಸುತ್ತಿದಾನೆ.

ಆದ್ದರಿಂದ "ನಾನು ಕರ್ಮವನ್ನು ಮಾಡುವದೇ ಇಲ್ಲ, ಅದನ್ನು ಪ್ರಾರಂಭಿಸಿದರಲ್ಲವೆ, ಕರ್ಮಬಂಧವುಂಟಾಗುತ್ತದೆ?"- ಎಂದು ಯೋಚಿಸಿಕೊಳ್ಳಬಾರದು. ಈ ಕಾರಣದಿಂದಲೇ ಕರ್ಮವನ್ನು ಮಾಡುತ್ತಿರುವವರು ಬಿಡಲೂ ಬಾರದು. ಜ್ಞಾನಿಗಳು ಕರ್ಮಸಂನ್ಯಾಸವನ್ನು ಮಾಡಿರುತ್ತಾರೆಂಬ ಮಾತನ್ನು ಕೇಳಿದ ಮೂರ್ಖರು ತಾವೂ ಕರ್ಮವನ್ನು ಬಿಟ್ಟು ಸಂನ್ಯಾಸಿಗಳಾದರೆ ಇಷ್ಟಾರ್ಥಪ್ರಾಪ್ತಿಯಾಗುವದೆಂದು ಬಗೆಯುವರು. ಅದು ಎಂದಿಗೂ ಸರಿಯಲ್ಲ. ಏಕೆಂದರೆ ಜ್ಞಾನದಿಂದ ಮಾಡುವ ಕರ್ಮಸಂನ್ಯಾಸವೇ ಬೇರೆ; ಅಜ್ಞರು ಕರ್ಮವನ್ನು ಬಿಟ್ಟು ಸುಮ್ಮನಿರುವ ಸಂನ್ಯಾಸವೇ ಬೇರೆ. ಸಂನ್ಯಾಸವನ್ನು ಉತ್ತಮಾಶ್ರಮವೆಂದೂ ಮೋಕ್ಷಾಶ್ರಮವೆಂದೂ ಸ್ಮೃತಿಗಳಲ್ಲಿ ಹೊಗಳಿರುವದು ನಿಜ; ಆದರೆ ಜ್ಞಾನಸಹಿತವಾದ ಸಂನ್ಯಾಸವನ್ನೇ ಹಾಗೆಂದು ಹೊಗಳಿರುತ್ತದೆಯೇ ಹೊರತು ಬರಿಯ ಸಂನ್ಯಾಸವನ್ನಲ್ಲ. ಆದ್ದರಿಂದಲೇ ಇಲ್ಲಿ ಭಗವಂತನು "**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ**" ಬರಿಯ ಸಂನ್ಯಾಸದಿಂದಲೇ ಸಿದ್ಧಿಯನ್ನು ಹೊಂದುವದಿಲ್ಲ-ಎಂದು ಹೇಳಿರುತ್ತಾನೆ.

ಇದುವರೆಗೆ ಹೇಳಿರುವದರ ಸಾರವಿಷ್ಟು. ಕರ್ಮಕ್ಕೆ ಅಧಿಕಾರಿಯಾದವನು ಎಂದಿಗೂ ಕರ್ಮವನ್ನು ಬಿಡಬಾರದು; ಅವಶ್ಯವಾಗಿ ಕರ್ಮವನ್ನು ಮಾಡುತ್ತಲೇ ಇರಬೇಕು. ಆದರೆ ಕರ್ಮವನ್ನು ಜ್ಞಾನಕ್ಕೆ ಉಪಾಯವಾಗುವಂತೆ, ಕರ್ಮದ ಕಟ್ಟನ್ನು ಬಿಚ್ಚಿಕೊಳ್ಳುವದಕ್ಕೆ ಸಹಾಯವಾಗುವಂತೆ, ಮಾಡಬೇಕು. ಕರ್ಮವನ್ನು ಸರಿಯಾಗಿ ಮಾಡುವದೆಂಬುದೊಂದು ಕೌಶಲವು. ಕರ್ಮವನ್ನು ಸುಮ್ಮನೆ ಮಾಡುತ್ತಿದ್ದರೆ ಬಂಧಕವಾಗುತ್ತದೆ, ಅದನ್ನು ಬಿಟ್ಟರೂ ಬಂಧಕವಾಗುತ್ತದೆ. ಸಿಪಾಯಿಗಳು ಸಾಲಾಗಿ ಶಿಸ್ತಿನಿಂದ ನಡೆಯುತ್ತಿರುವಾಗ ಅದರಲ್ಲಿ ಯಾವನೊಬ್ಬನು ತಪ್ಪುಹೆಜ್ಜೆ ಹಾಕಿದರೂ ಸಾಲಿನ ಅಂದವು ಕೆಡುತ್ತದೆ; ಸುಮ್ಮನೆ ನಿಂತರೂ ಸಾಲು ಕೆಡುತ್ತದೆ. ಸಾಲು ಒಂದೇ ವ್ಯವಸ್ಥೆಯಿಂದ ಇರಬೇಕಾದರೆ ಎಲ್ಲರೂ ಒಂದೇ ಸಮನೆ, ಒಂದೇ ಕಾಲಪ್ರಮಾಣದಿಂದ, ಮುಂದು ಮುಂದಕ್ಕೆ ಹೆಜ್ಜೆ ಹಾಕುತ್ತಲೇ ಇರಬೇಕು, ಅಲ್ಲವೆ? ಇದರಂತೆ ಮುಮುಕ್ಷುವಾದವನು ಕರ್ಮವನ್ನು ಮಾಡದೆ ಸುಮ್ಮನೆ ನಿಲ್ಲಲೂ ಬಾರದು, ತಪ್ಪಾದ

ಪ್ರಕಾರದಿಂದ ಕರ್ಮವನ್ನು ಮಾಡಲೂ ಬಾರದು. ಆತ್ಮಾರಾಮರಾಗಿರುವ ಜ್ಞಾನಿಗಳು ತ್ರೈಗುಣ್ಯವನ್ನು ಮೀರಿರುತ್ತಾರೆ. "**ನಿಸ್ತ್ರೈಗುಣ್ಯೇ ಪಥಿ ವಿಚರತಾಂ ಕೋ ವಿಧಿಃ ಕೋ ನಿಷೇಧಃ**" ತ್ರೈಗುಣ್ಯವಿಲ್ಲದ ಹಾದಿಯಲ್ಲಿ ಅಡ್ಡಾಡುತ್ತಿರುವವರಿಗೆ ಯಾವ ನಿಷೇಧವು?- ಎಂಬ ವಚನವು ಕರ್ತೃತ್ವಬುದ್ಧಿಯಿರುವ ನಮ್ಮಂಥವರಿಗೂ ಅನ್ವಯಿಸುವದೆಂಬ ದಡ್ಡತನಕ್ಕೆ ಹೋಗಿ ಸ್ವೇಚ್ಛಾಚಾರವನ್ನು ಅವಲಂಬಿಸಬಾರದು. ಕರ್ಮವನ್ನು ಮಾಡಿದರೂ ಬಿಟ್ಟರೂ ನಮಗೆ ಅವಶ್ಯವಾಗಿ ಫಲವಾಗಿಯೇ ತೀರುತ್ತದೆ. ಔಷಧಿಯನ್ನು ತೆಗೆದುಕೊಳ್ಳುವಾಗ ನಮ್ಮ ರೋಗಕ್ಕೆ ತಕ್ಕ ಔಷಧಿಯನ್ನು ಸರಿಯಾದ ಪ್ರಮಾಣದಲ್ಲಿ ತೆಗೆದುಕೊಳ್ಳಬೇಕು; ಕಾಲವನ್ನನುಸರಿಸಿ ಕ್ರಮವಾಗಿ ತೆಗೆದುಕೊಳ್ಳಬೇಕು; ಪಥ್ಯವನ್ನೇ ಸೇವನೆಮಾಡಬೇಕು-ಇವೇ ಮುಂತಾದ ಹಲವು ಕ್ರಮಗಳನ್ನು ಅನುಸರಿಸಬೇಕಾಗುತ್ತದೆ. ಹಾಗಾದರೆ ಅದರಿಂದ ಆಗುವ ಫಲವು ನಮಗೆ ದೊರಕುತ್ತದೆ; ಇಲ್ಲದಿದ್ದರೆ ಅದರಿಂದ ಕೆಟ್ಟಫಲವೇ ಆದರೂ ಆಗಿಬಿಡಬಹುದು. ಇದರಂತೆ ಕರ್ಮಕ್ಷೇತ್ರದಲ್ಲಿರುವವರೂ ನೈಷ್ಕರ್ಮ್ಯವೆಂಬ ಆತ್ಮಸ್ಥಿತಿಗೆ ಏರಬೇಕಾದರೆ ಕ್ರಮವನ್ನನುಸರಿಸಿಯೇ ಕರ್ಮವನ್ನು ಮಾಡುತ್ತಿರಬೇಕು. ಕರ್ಮಕ್ಕೇ ಕೈಹಾಕದೆ ಇರುವೆನೆಂಬ ಸಂಕಲ್ಪವನ್ನೂ ಮಾಡಬಾರದು, ಹುಚ್ಚು ಹುಚ್ಚಾಗಿ ಮನಬಂದಂತೆಯೂ ಮಾಡಬಾರದು, ಅಥವಾ ಅರ್ಧರ್ಧವಾಗಿ ಮಾಡಿ ಬೇಸರದಿಂದ ಕೈಬಿಡಲೂ ಬಾರದು. ಕರ್ಮವನ್ನು ಹೇಗೆ ಮಾಡಿದರೆ ನೈಷ್ಕರ್ಮ್ಯವು ದಕ್ಕುವದೋ ಆ ಕ್ರಮವನ್ನು ಅನುಸರಿಸುವವರೇ ಕರ್ಮಯೋಗಿಗಳು.

## ೨೦. ಕರ್ಮವನ್ನು ಹೇಗೆ ಮಾಡಬೇಕು? ೩-(೫-೯)

(೧೦.೧೧.೪೭)

ಕರ್ಮಯೋಗವು ನೈಷ್ಕರ್ಮ್ಯವೆಂಬ ಜ್ಞಾನನಿಷ್ಠೆಗೆ ಕರೆದುಕೊಂಡು ಹೋಗುವ ದಾರಿಯು. ಕರ್ಮವನ್ನು ಬಿಟ್ಟಮಾತ್ರದಿಂದ ಸಿದ್ಧಿಯಿಲ್ಲ, ಜ್ಞಾನ ರಹಿತವಾದ ಬರಿಯ ಕರ್ಮಸಂನ್ಯಾಸದಿಂದ ಪರಮಪುರುಷಾರ್ಥವು ಎಂದಿಗೂ ದೊರೆಯಲಾರದು. ಆದ್ದರಿಂದ ಕರ್ಮವನ್ನು ಬಿಡಬೇಡ ಎಂದು ಭಗವಂತನು ಅರ್ಜುನನಿಗೆ ಉಪದೇಶಿಸಿರುತ್ತಾನಷ್ಟೆ. ಕರ್ಮವನ್ನು ತಪ್ಪದೆ ಮಾಡಲೇಬೇಕೆಂಬುದಕ್ಕೆ ಈಗ ಇನ್ನೂ ಒಂದು ಕಾರಣವನ್ನು ಹೇಳುತ್ತಿದಾನೆ—

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥** (೩-೫)

ಕರ್ಮವನ್ನು ಮಾಡದೆ ಒಂದು ಕ್ಷಣವೂ ಯಾವನೊಬ್ಬನೂ ಇರುವದಿಲ್ಲ. ಏಕೆಂದರೆ ಪ್ರಕೃತಿಜವಾದ ಗುಣಗಳು ಪ್ರತಿಯೊಬ್ಬನನ್ನೂ ಯಾವದಾದರೊಂದು ಕೆಲಸದಲ್ಲಿ ತೊಡಗಿಸುತ್ತಲೇ ಇರುವವು. ಗೀತೆಯಲ್ಲಿ ಪ್ರಕೃತಿ ಎಂಬ ಶಬ್ದವು ಇಲ್ಲಿ ಮೊದಲು ಬಂದಿರುತ್ತದೆ. ಇದನ್ನು ಸ್ವಲ್ಪ ವಿವರಿಸಿ ತಿಳಿದುಕೊಳ್ಳಬೇಕು. ಸಾಂಖ್ಯಶಾಸ್ತ್ರದಂತೆ ಸತ್ತ್ವ, ರಜಸ್ಸು, ತಮಸ್ಸು-ಎಂಬ ಮೂರು ಗುಣಗಳೂ ಸಮಪ್ರಧಾನವಾಗಿದ್ದರೆ ಆ ಗುಂಪಿಗೆ ಪ್ರಧಾನವೆಂದು ಹೆಸರು. ಪ್ರಧಾನವೇ ಕ್ರಮಕ್ರಮವಾಗಿ ಈ ಜಗತ್ತಿನ ರೂಪದಲ್ಲಿ ಪರಿಣಾಮವಾಗಿರುವವರಿಂದ ಅದು ಜಗತ್ತಿಗೆ ಪ್ರಕೃತಿಯು ಎಂದರೆ ಕಾರಣವು, ಅದರಿಂದುಂಟಾಗಿರುವ ಜಗತ್ತು ಅದರ ವಿಕೃತಿಯು ಎಂದು ಸಾಂಖ್ಯರು ಹೇಳುತ್ತಾರೆ. ಪ್ರಕೃತಿಯಿಂದ ಉಂಟಾಗಿರುವ ತತ್ತ್ವಗಳಲ್ಲಿ ಒಂದೊಂದೂ ಮತ್ತೊಂದಕ್ಕೆ ಪ್ರಕೃತಿವಿಕೃತಿಭಾವದಿಂದ ಸಂಬಂಧಿಸಿರುವದೆಂದು ಸಾಂಖ್ಯರು ಹೇಳುತ್ತಾರಾದರೂ ಎಲ್ಲಕ್ಕೂ ಮೂಲವಾಗಿರುವ ಪ್ರಧಾನವನ್ನೇ ಮುಖ್ಯವಾಗಿ ಪ್ರಕೃತಿ ಎಂದು ಅವರು ಕರೆಯುತ್ತಾರೆ. ಈ ಅಭಿಪ್ರಾಯವನ್ನು ಸ್ವಲ್ಪ ಮಾರ್ಪಡಿಸಿಕೊಂಡು ಗೀತೆಯಲ್ಲಿಯೂ ಪ್ರಕೃತಿ ಎಂಬ ಮಾತನ್ನು ಬಳಸಿರುತ್ತದೆ. ಪ್ರಕೃತಿಯಿಂದಲೇ ಆಧ್ಯಾತ್ಮಿಕ, ಆಧಿಭೌತಿಕ ಎಂದು ವಿಂಗಡವಾಗಿರುವ ಜಗತ್ತೆಲ್ಲವೂ ಉಂಟಾಗಿರುವದರಿಂದ ಈ ಮೂರು ಗುಣಗಳ ಸ್ವಭಾವವೇ ಎಲ್ಲೆಲ್ಲಿಯೂ ತೋರಿಕೊಳ್ಳುತ್ತಿರುವದು. ಈ ಮೂರು ಗುಣಗಳಲ್ಲಿ ಯಾವದು ಮನುಷ್ಯನ ಅಂತಃಕರಣದಲ್ಲಿ ಎದ್ದು ತೋರಿಕೊಳ್ಳುವದೋ ಅವನ ಬುದ್ಧಿಯೂ ಅವನು ಮಾಡುವ ಕರ್ಮವೂ ಅದರ ಸ್ವಭಾವವನ್ನೇ ಅನುಸರಿಸಿರುವವು.

ಪ್ರಕೃತದಲ್ಲಿ ಭಗವಂತನು ಹೇಳಿರುವದೇನೆಂದರೆ, ಮನುಷ್ಯನು ಒಂದು ಕ್ಷಣವೂ ಸುಮ್ಮನೆ ಇರುವದಕ್ಕೆ ಆಗುವ ಹಾಗೇ ಇರುವದಿಲ್ಲ. ಸತ್ತ್ವಗುಣದಿಂದ ಸಾತ್ತ್ವಿಕಕರ್ಮವನ್ನೋ, ರಜೋಗುಣದಿಂದ ರಾಜಸಕರ್ಮವನ್ನೋ ತಮೋಗುಣದಿಂದ ತಾಮಸಕರ್ಮವನ್ನೋ, ಯಾವದಾದರೊಂದು ಕರ್ಮವನ್ನು ಮಾಡುತ್ತಲೇ ಇರುವನು. ತಾನು ಒಲ್ಲೆನೆನ್ನುತ್ತಿದ್ದರೂ ಪ್ರಕೃತಿಯು ಅವನನ್ನು ಬೆನ್ನಿನ ಮೇಲೆ ಗುದ್ದಿ ಕೆಲಸವನ್ನು ಮಾಡಿಸುತ್ತಲೇ ಇರುವದು. ಜನರು ಗುಣಗಳೆಂಬ ಪಿಶಾಚಿಗಳಿಗೆ ವಶರಾಗಿ ಕೆಲಸಮಾಡುತ್ತಿರುತ್ತಾರೆ. ಕರ್ಮವೆಂಬುದು ಅವರ ವಶದಲ್ಲಿಲ್ಲ; ಅವರೇ ಕರ್ಮಕ್ಕೆ ವಶರಾಗಿ ದುಡಿಯುತ್ತಿರುತ್ತಾರೆ. ಆಶೆಯೆಂಬುದು ಅವರನ್ನು ಹಾಗೆ ಮಾಡಿಸುತ್ತಿರುತ್ತದೆ. ಇದು ಲೋಕಸ್ಥಿತಿ.

ಈಗ ಅರ್ಜುನನ ಪ್ರಶ್ನೆಯನ್ನು ಮತ್ತೆ ವಿಮರ್ಶಿಸೋಣ. ಅರ್ಜುನನು ಕೇಳಿರುವದೇನು? ಜ್ಞಾನವು ಕರ್ಮಕ್ಕಿಂತ ಹೆಚ್ಚಿನದಾಗಿದ್ದರೆ, ನನ್ನನ್ನೇಕೆ ಕರ್ಮಕ್ಕೆ

ಹತ್ತಿಸುತ್ತಿರುವೆಯಯ್ಯ ಕೇಶವನೆ?- ಎಂದಲ್ಲವೆ, ಅವನ ಪ್ರಶ್ನೆ? ಈ ಪ್ರಶ್ನೆಯಲ್ಲಿ ಯಾವ ಭಾವವು ಅಡಗಿದೆ? ನಾನು ಕರ್ಮವನ್ನಾದರೂ ಜ್ಞಾನವನ್ನಾದರೂ ಆರಿಸಿಕೊಳ್ಳಲು ಸ್ವತಂತ್ರನಾಗಿರುತ್ತೇನೆ; ಹೀಗಿರುವಲ್ಲಿ ನಾನೇಕೆ ಘೋರವಾದ ಕರ್ಮವನ್ನು ಮಾಡಬೇಕು?- ಎಂದು ಅರ್ಜುನನು ಯೋಚಿಸುತ್ತಿರುತ್ತಾನೆ. ಆದರೆ ವಸ್ತುಸ್ಥಿತಿಯೇ ಬೇರೆಯಾಗಿದೆ. ಕರ್ಮವನ್ನು ಮಾಡುವದಾಗಲಿ ಬಿಡುವದಾಗಲಿ ಅವನ ಅಧೀನವಾಗಿರುವದಿಲ್ಲ. ಅವನು ಮೊದಲು ಕ್ಷತ್ರಿಯಸ್ವಭಾವಕ್ಕೆ ವಶನಾಗಿ ಕೌರವರನ್ನೆಲ್ಲ ಯುದ್ಧದಲ್ಲಿ ಒಕ್ಕಲಿಕ್ಕುವೆನೆಂದು ರಥವನ್ನು ಮುಂದಕ್ಕೆ ನಡೆಯಿಸಿದನು. ಆದರೆ ಅಷ್ಟರಲ್ಲಿ ಅವನನ್ನು ಸ್ವಜನರ ಮೇಲಿನ ಕೃಪೆಯಿಂದ ಮತ್ತೊಂದು ಸ್ವಭಾವವು ಆವರಿಸಿಕೊಂಡಿತು. ಆಗ ಅವನು ಇನ್ನು ಯುದ್ಧಮಾಡಲೊಲ್ಲೆನೆಂದು ಸುಮ್ಮನೆ ಕುಳಿತನು. ಶ್ರೀಕೃಷ್ಣನು ಎಷ್ಟು ಎಚ್ಚರಿಸಿದರೂ ಅವನಿಗೆ ಯುದ್ಧವು ಬೇಕಾಗಲೇ ಇಲ್ಲ! ಇದೆಲ್ಲ ಅರ್ಜುನನು ಸ್ವತಂತ್ರವಾಗಿ ಮಾಡಿದ್ದಲ್ಲ, ಪ್ರಕೃತಿಯ ಗುಣಗಳು ಅವನನ್ನು ಹಾಗೆ ಪ್ರೇರಿಸಿದವು. ಒಂದು ವೇಳೆ ಇನ್ನೊಮ್ಮೆ ಅವನನ್ನು ಕ್ಷತ್ರಿಯರಿಗೆ ಸಹಜವಾದ ಶೌರ್ಯಾದಿಗುಣಗಳನ್ನು ಎಬ್ಬಿಸುವ ರಜೋಗುಣವು ಆಕ್ರಮಿಸಿಕೊಂಡರೆ? ಆಗ ಅವನು ಮತ್ತೆ ಯುದ್ಧಕ್ಕೆ ಭುಜವನ್ನು ತಟ್ಟಿಕೊಂಡು ಮುಂದೆ ಬರುವದು ಖಂಡಿತ! ಹೀಗಿರುವಲ್ಲಿ "ನಾನು ಕರ್ಮವನ್ನೇಕೆ ಮಾಡಲಿ?" ಎಂದು ಕೇಳುವದು ಎಂಥ ನಗೆಗೇಡಿನ ಪ್ರಶ್ನೆ!

ಹೀಗಿರುವದರಿಂದ ಕರ್ಮವನ್ನು ಬಿಡುವದು ಯಾರಿಂದಲೂ ಆಗುವ ಹಾಗೆಯೇ ಇಲ್ಲ. ಒಂದು ವೇಳೆ ಕರ್ಮವನ್ನು ಬಿಡುತ್ತೇವೆಂದರೂ ಬಲಾತ್ಕಾರದಿಂದ ಸರ್ವೇಂದ್ರಿಯಗಳನ್ನೂ ಚಲಿಸದಂತೆ ತಡೆದುಕೊಳ್ಳಬಹುದು. ಆದರೆ ಕರ್ಮದ ವಾಸನೆಯನ್ನೇ ಇಲ್ಲದಂತೆ ಮಾಡಿಕೊಳ್ಳುವದು ಸಾಮಾನ್ಯರಿಗೆ ಎಂದಿಗೂ ಆಗುವದಿಲ್ಲ. ಆದ್ದರಿಂದ ಅವರು ಹೊರಗೆ ಕರ್ಮವನ್ನು ಮಾಡದೆ ಇದ್ದರೂ ಮನಸ್ಸಿನಲ್ಲಿ ಮಾಡುತ್ತಲೇ ಇರುತ್ತಾರೆ. ಇದು ಮಿಥ್ಯಾಚಾರವು, ತೋರಿಕೆಯ ಆಚಾರವು. ಒಬ್ಬ ಕಳ್ಳನೂ ಒಬ್ಬ ಚಾಡಿಕೋರನೂ ಸಾಧುಗಳಂತೆ ವೇಷವನ್ನು ಹಾಕಿಕೊಂಡು ಪಂಢರಪುರದಲ್ಲಿ ಚಂದ್ರಭಾಗಾತೀರದಲ್ಲಿ ಕುಳಿತಿದ್ದರಂತೆ. ಆದರೆ ಕಳ್ಳನಿಗೆ ಕಳ್ಳತನದ ವಾಸನೆ ಹೋಗಿರಲಿಲ್ಲ; ಅವನು ಸ್ನಾನಕ್ಕೆ ಇಳಿದಿದ್ದ ಒಬ್ಬ ಸಾಧ್ವೀಮಣಿಯ ಒಡವೆಯನ್ನು ಮರಳಿನಲ್ಲಿ ಹೂತಿಟ್ಟು ಜಪಕ್ಕೆ ಕುಳಿತನು. ಆಕೆಯು ತನ್ನ ಒಡವೆಯ ವಿಚಾರವಾಗಿ ಹತ್ತಿರವಿದ್ದವರನ್ನು ವಿಚಾರಮಾಡುತ್ತಿರುವಲ್ಲಿ ಚಾಡಿಕೋರನು ಜಪಮಾಡುತ್ತಲೇ ಕಳ್ಳಸಾಧುವಿನ ಕಡೆಗೆ ಬೆರಳುಸನ್ನೆ ಮಾಡಿದನಂತೆ! ಆದ್ದರಿಂದ ನಾವು ಕರ್ಮವನ್ನು ಮಾಡುವಾಗ ಸ್ವತಂತ್ರರಾಗಿರುತ್ತೇವೆಂದು ಬಗೆಯುವದು ಎಷ್ಟು

ತಪ್ಪೋ, ಅದನ್ನು ಬಲಾತ್ಕಾರದಿಂದ ಬಿಟ್ಟಾಗ ಸ್ವತಂತ್ರರಾಗಿ ಬಿಟ್ಟೆವೆಂದು ಬಗೆಯುವದೂ ಅಷ್ಟೇ ತಪ್ಪು.

ಹೀಗಿರುವದಕ್ಕಿಂತಲೂ ಇಂದ್ರಿಯಗಳನ್ನೇ ಮನಸ್ಸಿನಿಂದ ಬಿಗಿಹಿಡಿದುಕೊಂಡು ಕರ್ಮಯೋಗವನ್ನು ಕರ್ಮೇಂದ್ರಿಯಗಳಿಂದ ಮಾಡುವದು ಒಳ್ಳೆಯದು. ಯಾವನು ಅಸಕ್ತನಾಗಿ ಈ ಕರ್ಮಯೋಗವನ್ನು ಮಾಡುವನೋ ಅವನು ಬಲಾತ್ಕಾರದಿಂದ ಇಂದ್ರಿಯಗಳನ್ನು ಬಿಗಿಹಿಡಿದು ವಿಷಯಗಳ ಚಿಂತನೆಯನ್ನು ಮಾಡುವ ಮಿಥ್ಯಾಚಾರ ನಿಗಿಂತಲೂ ಉತ್ತಮನು. ಅಸಕ್ತನೆಂದರೆ ಸಕ್ತನಲ್ಲದವನು. ಯಾವನ ಮನಸ್ಸು ತನ್ನ ಕರ್ಮದಲ್ಲಿ ಅಂಟಿಕೊಳ್ಳುವದೋ ಅವನು ಸಕ್ತನು. ಉದಾಹರಣೆಗೆ ಸೈಕಲು ಸವಾರಿಯಲ್ಲಿ ಮನಸ್ಸು ಅಂಟಿಕೊಂಡಿರುವವನೊಬ್ಬನು ಮತ್ತೊಬ್ಬರ ಮನೆಯ ಕೆಲಸವನ್ನು ಆ ಸೈಕಲಿನ ಆಸೆಯಿಂದ ಮಾಡಿಕೊಳ್ಳುತ್ತಾ ಇರುತ್ತಾನೆಂದು ಇಟ್ಟುಕೊಳ್ಳಿರಿ; ಅವನು ಕೆಲಸಮಾಡುತ್ತಿರುವದು ತನ್ನ ಸ್ವಾತಂತ್ರ್ಯದಿಂದಲ್ಲ, ಸೈಕಲಿನ ಆಸೆಯು ಅವನನ್ನು ಹಾಗೆ ಸುತ್ತಿಸುತ್ತಾ ಇರುತ್ತದೆ. ಬೊಂಬೆಗಳು ಯಾವದಾದರೊಂದು ಯಂತ್ರದ ಪ್ರೇರಣೆಯಿಂದ ಕತ್ತನ್ನು ಅಲ್ಲಾಡಿಸಿದರೆ, ಅವು ಸಂಗೀತದ ಸ್ವಾರಸ್ಯವನ್ನು ಅರಿತು ಹಾಗೆ ಮಾಡಿದವೆಂದು ನಾವುಗಳು ಯಾರೂ ಭಾವಿಸುವದಿಲ್ಲ. ಹೀಗೆಯೇ ಸಕ್ತನಾದವನು ಕರ್ಮವನ್ನು ಮಾಡಿದರೂ ಅವನಿಗೆ ಸ್ವಾತಂತ್ರ್ಯವಿಲ್ಲ, ಬಿಟ್ಟರೂ ಅವನಿಗೆ ಕರ್ಮತ್ಯಾಗದಲ್ಲಿ ಸ್ವಾತಂತ್ರ್ಯವಿಲ್ಲ. ಇದಕ್ಕೆ ಬದಲು ಅಸಕ್ತನಾದವನು ಎಲ್ಲರಂತೆಯೇ ಕರ್ಮೇಂದ್ರಿಯಗಳಿಂದ ಕರ್ಮವನ್ನು ಮಾಡುತ್ತಿದ್ದರೂ ಮನಸ್ಸಿನಲ್ಲಿ ಇಂದ್ರಿಯಗಳನ್ನು ಬಿಗಿಹಿಡಿದುಕೊಂಡಿರುವದರಿಂದ ಅವನಿಗೆ ಕರ್ಮಫಲದ ಅಂಟು ಹತ್ತುವದಿಲ್ಲ. ಸಾಮಾನ್ಯರು ವಿಷಯಾಸಕ್ತಿಯನ್ನು ಇಟ್ಟುಕೊಂಡಿರುವದರಿಂದ ಅವರು ಕರ್ಮವನ್ನು ಬಿಟ್ಟರೂ ಅವರ ಕರ್ಮದ ಗಂಟು ಬಿಚ್ಚದೆ ಇರುತ್ತದೆ; ಅಸಕ್ತರಾದವರು ಕರ್ಮವನ್ನು ಮಾಡುತ್ತಿದ್ದರೂ ಅವರು ಮಾಡಿದಂತೆ ಆಗುವದಿಲ್ಲ.

ಆದ್ದರಿಂದ ಭಗವಂತನ ಉಪದೇಶವೇನೆಂದರೆ: "ಅರ್ಜುನನೆ, ನೀನು ನಿನಗೆ ಅವಶ್ಯಕರಣೀಯವಾದ ಕರ್ಮವನ್ನು ಮಾಡುತ್ತಲೇ ಇರು. ಏಕೆಂದರೆ ಕರ್ಮವನ್ನು ಮಾಡುವದೇ ಬಿಡುವದಕ್ಕಿಂತ ಒಳ್ಳೆಯದು. ಕರ್ಮವನ್ನು ಮಾಡುವದೇ ಇಲ್ಲವೆಂದರೆ ನಿನ್ನ ದೇಹಯಾತ್ರೆಯು ಕೂಡ ಸಾಗಲಾರದು. ಆದ್ದರಿಂದ ಎಲ್ಲಾ ಕರ್ಮಗಳನ್ನೂ ಬಿಟ್ಟು ಸ್ಥಾವರಗಳಂತೆ ಇರುವ ಹುಚ್ಚಿಗೆ ಕೈಹಾಕಬೇಡ. ಕರ್ಮವನ್ನು ಬಿಡುವದು ಆಗದ ಮಾತಾದ್ದರಿಂದ ಸರಿಯಾದ ರೀತಿಯಲ್ಲಿ ಮಾಡು."

ಅರ್ಜುನನು ಕೇಳಿದ ಪ್ರಶ್ನೆಯು ಒಂದೇ ಒಂದು. "ನನ್ನನ್ನೇಕೆ ಘೋರವಾದ ಕರ್ಮದಲ್ಲಿ ಹಾಕುತ್ತಿದ್ದೀಯೆ?" ಎಂದು ಅವನು ಗೊಣಗುಟ್ಟಿದನು. ಭಗವಂತನು

ಅವನಿಗೆ ಕರ್ಮದ ತತ್ತ್ವವನ್ನೇ ಹೇಳುವದಕ್ಕೆ ಮೊದಲುಮಾಡಿರುತ್ತಾನೆ. ಕರ್ಮವನ್ನು ಸಂಪೂರ್ಣವಾಗಿ ಬಿಡುವದು ಸಾಧ್ಯವಿಲ್ಲ. ಸಾಮಾನ್ಯರು ತಿಳಿದುಕೊಂಡಿರುವ ರೀತಿಯಲ್ಲಿ ಕರ್ಮವನ್ನು ಬಿಟ್ಟರೂ ಮಾಡಿದಂತೆಯೇ ಆಗುತ್ತದೆ. ಆದ್ದರಿಂದ ಕರ್ಮವನ್ನು ಬಿಡುವೆನೆಂಬ ಮೋಹವನ್ನು ಕಳೆದುಕೊಳ್ಳಬೇಕು. ಕರ್ಮವು ಬಂಧಕವಾಗದೆ ಇರುವದಕ್ಕೆ ಅದನ್ನು ಬಿಡುವದು ಉಪಾಯವಲ್ಲ; ಕರ್ಮವನ್ನು ಹೇಗೆ ಮಾಡಬೇಕು ಎಂದು ತಿಳಿದು ಸರಿಯಾದ ಕ್ರಮದಿಂದ ಮಾಡುವದೇ ಉಪಾಯವು. ಕರ್ಮವನ್ನು ಪ್ರಕೃತಿಪರವಶರಾಗಿ ಗುಲಾಮರಂತೆ ಮಾಡುವದನ್ನು ತಪ್ಪಿಸಿಕೊಳ್ಳಬೇಕು; ಅದನ್ನು ನಮ್ಮ ವಶಕ್ಕೆ ತಂದುಕೊಂಡು ಅದಕ್ಕೆ ಒಡೆಯರಾಗಿ ಮಾಡಬೇಕು. ಕರ್ಮಯೋಗವನ್ನು ಮಾಡಬೇಕು. ಇದು ಭಗವಂತನ ಉಪದೇಶದ ಸಾರವು.

ಕರ್ಮವನ್ನು ಮಾಡದೆ ಇರುವದು ನೈಷ್ಕರ್ಮ್ಯಕ್ಕೆ ಉಪಾಯವಲ್ಲ; ಕರ್ಮವನ್ನು ಮಾಡುವದೇ ಅದಕ್ಕೆ ಸಾಧಕವಾಗುತ್ತದೆ. ಕರ್ಮವನ್ನು ಬಿಡುವದು ಆಗುವ ಹಾಗೂ ಇಲ್ಲ. ಆದ್ದರಿಂದ ಕರ್ಮದಲ್ಲಿ ಸಂಗವಿಲ್ಲದೆ ಅದನ್ನು ಮಾಡುತ್ತಾ ಜ್ಞಾನನಿಷ್ಠೆಗೆ ಉಪಾಯವಾಗುವಂತೆ ತಿರುಗಿಸಿಕೊಳ್ಳಬೇಕು - ಎಂದು ಹೇಳಿದ್ದಾಯಿತಷ್ಟೆ. ಈಗ ಕರ್ಮವನ್ನು ಸಂಗವಿಲ್ಲದೆ ಮಾಡುವದಕ್ಕೆ ಉಪಾಯವೇನೆಂಬುದನ್ನು ತಿಳಿಸುವದಕ್ಕೆ ಭಗವಂತನು ಹೊರಟಿರುತ್ತಾನೆ.

**ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬನ್ಧನಃ।**
**ತದರ್ಥಂ ಕರ್ಮ ಕೌನ್ತೇಯ ಮುಕ್ತಸಂಗಃ ಸಮಾಚರ ॥** (೩-೯)

"ಕರ್ಮವನ್ನು ಯಜ್ಞಾರ್ಥವಾಗಿ ಮಾಡಬೇಕು. ಹಾಗಾದರೆ ಅದು ಬಂಧಕವಾಗುವದಿಲ್ಲ. ಆದ್ದರಿಂದ ಅರ್ಜುನನೆ, ಯಜ್ಞಾರ್ಥವಾಗಿ ಕರ್ಮವನ್ನು ಮುಕ್ತಸಂಗನಾಗಿ ಆಚರಿಸುತ್ತಿರು". ಈ ಶ್ಲೋಕದಲ್ಲಿ ಹೇಳಿರುವ "ಯಜ್ಞಾರ್ಥ ಕರ್ಮ"ವೆಂದರೆ ಏನೆಂಬುದನ್ನು ಸ್ವಲ್ಪ ವಿವರವಾಗಿ ತಿಳಿದುಕೊಳ್ಳಬೇಕು. ವೇದದಲ್ಲಿ ಕರ್ಮಕಾಂಡವೆಂದೂ ಜ್ಞಾನಕಾಂಡವೆಂದೂ ಎರಡು ಮುಖ್ಯ ಭಾಗಗಳಿರುವವು. ಕರ್ಮಕಾಂಡದಲ್ಲಿ ಹೇಳಿರುವ ಕರ್ಮಗಳಲ್ಲಿ ಯಜ್ಞವೆಂಬುದು ಬಲುಹೆಚ್ಚಿನದಾಗಿರುತ್ತದೆ. ಆ ಯಜ್ಞವನ್ನು ಮಾಡಿ ಪುರುಷಾರ್ಥವನ್ನು ಪಡೆಯಬಹುದೆಂದು ಫಲಕೀರ್ತಿಯನ್ನು ಮಾಡಿದ ಬಳಿಕ ಯಜ್ಞಕ್ಕೆ ಬೇಕಾದ ಉಪಕರಣಗಳು ಇಂಥಿಂಥವು, ಅದನ್ನು ಮಾಡುವದಕ್ಕೆ ಅಧಿಕಾರಿಯಾದ ಯಜಮಾನನು ಇಂಥವನು ಎಂದು ಹೇಳಿರುವದಲ್ಲದೆ ಯಜ್ಞವನ್ನು ಇಂಥಿಂಥ ದೇವತೆಗಳನ್ನು ಕುರಿತು ಮಾಡಬೇಕೆಂದೂ ಅಲ್ಲಿ ವಿವರಿಸಿ ಹೇಳಿರುತ್ತದೆ. ಯಜ್ಞ, ಯಾಗ-ಎಂಬ ಶಬ್ದಗಳು ಯಜ್ ಎಂಬ ಧಾತುವಿನಿಂದ ಹುಟ್ಟಿರುತ್ತವೆ. ದೇವತೆಯನ್ನು ಪೂಜಿಸುವದು, ದೇವತೆಗಾಗಿ ತನ್ನದಾಗಿರುವ ವಸ್ತುವನ್ನು ಕೊಡುವದು-

ಎಂಬ ಅರ್ಥವು ಈ ಧಾತುವಿನ ಅರ್ಥದಲ್ಲಿ ಸೇರಿರುತ್ತದೆ. ಇನ್ನು ಜ್ಞಾನಕಾಂಡಕ್ಕೆ ಬಂದರೆ ಅಲ್ಲಿ "ಇರುವ ತತ್ತ್ವವೆಲ್ಲ ಪರಮಾತ್ಮನೊಬ್ಬನೇ, ಅವನಲ್ಲಿಯೇ ಎಲ್ಲಾ ದೇವತೆಗಳೂ ಅಡಕವಾಗಿರುತ್ತಾರೆ" ಎಂಬುದನ್ನು ಉಪದೇಶಮಾಡುವದೇ ಗುರಿಯಾಗಿರುತ್ತದೆ. ಋಗ್ವೇದದಲ್ಲಿ **"ಏಕಂ ಸದ್ವಿಪ್ರಾ ಬಹುಧಾ ವದನ್ತಿ"** ಇರುವದೊಂದನ್ನೇ ವಿಪ್ರರು ಬಲುಬಗೆಯ ಹೆಸರುಗಳಿಂದ ಕರೆಯುತ್ತಾರೆ; ಇಂದ್ರ, ಮಿತ್ರ, ವರುಣ ಮುಂತಾದ ಹೆಸರುಗಳಿಂದ ಆ ಒಂದು ತತ್ತ್ವವನ್ನೇ ಕರೆಯುವರು- ಎಂಬರ್ಥದ ವಾಕ್ಯವೊಂದಿದೆ. ಅದರಲ್ಲಿ ಈ ಜ್ಞಾನಕಾಂಡದ ಅಭಿಪ್ರಾಯವು ಬೀಜರೂಪದಲ್ಲಿ ಗರ್ಭಿತವಾಗಿರುತ್ತದೆ. ಕರ್ಮಕಾಂಡದಲ್ಲಿ ಹೇಳಿರುವ ಕರ್ಮಗಳನ್ನು ಜ್ಞಾನಕಾಂಡದಲ್ಲಿ ಮತ್ತೊಂದು ಸಲ ವಿಧಿಸುವದಕ್ಕೆ ಕಾರಣವೇನೆಂದರೆ, ಹಿಂದೆ ಆಯಾ ಕರ್ಮವನ್ನು ಬರಿಯ ಕರ್ಮದೃಷ್ಟಿಯಿಂದ- ಎಂದರೆ ಇಂಥ ಅಧಿಕಾರಿಯು ಫಲದ ಗುರಿಯಿಂದ ಈ ಕ್ರಮದಲ್ಲಿ ಮಾಡಿದರೆ ಇಂಥ ಫಲವು ಉಂಟಾಗುತ್ತದೆ ಎಂದು ತಿಳಿಸುವ ಕ್ರಿಯಾಕಾರಕಫಲಗಳು ಸತ್ಯವೆಂದು ಭಾವಿಸುವ ವ್ಯಾವಹಾರಿಕ ದೃಷ್ಟಿಯಿಂದ-ಕರ್ಮಕಾಂಡದಲ್ಲಿ ವಿಧಿಸಿತ್ತು; ಈಗ ಅದೇ ಕರ್ಮವನ್ನು ಚಿತ್ತಶುದ್ಧಿಯನ್ನು ಕೊಟ್ಟು, ಜ್ಞಾನಯೋಗ್ಯತೆಯನ್ನೂ ಜ್ಞಾನನಿಷ್ಠೆಯನ್ನೂ ಕ್ರಮಕ್ರಮವಾಗಿ ಕೊಡುವಂತೆ ಅನುಷ್ಠಾನಮಾಡಬೇಕೆಂಬ ಮುಮುಕ್ಷುಗಳ ದೃಷ್ಟಿಯಿಂದ ವಿಧಿಸಿರುತ್ತದೆ. ಈಗ ಕರ್ಮವು ಕರ್ಮಯೋಗವಾಗಿರುತ್ತದೆ.

ಈ ದೃಷ್ಟಿಯಿಂದ ಕರ್ಮವನ್ನು ಮಾಡುವವರು ಮೊದಲು ತಿಳಿಯಬೇಕಾದದ್ದೇನೆಂದರೆ ಯಜ್ಞವು ಕೇವಲ ಇಂದ್ರಾದಿಗಳೆಂಬ ಬಿಡಿ ದೇವತೆಗಳಿಗಾಗಿ ಮಾಡತಕ್ಕ ಅನುಷ್ಠಾನವಿಶೇಷವೆಂಬ ಭಾವನೆಯು ಸರಿಯಲ್ಲ. ಈಗ ಯಜ್ಞವು ಯಾರಿಗೋಸ್ಕರ? ಯಾವ ದೇವತೆಯನ್ನುದ್ದೇಶಿಸಿ ಯಜ್ಞವನ್ನು ಮಾಡುತ್ತೇವೆ?- ಎಂದರೆ ಪರಮಾತ್ಮನಿಗಾಗಿ, ಸರ್ವದೇವಾತ್ಮಕನಾಗಿರುವ ವಿಷ್ಣುವನ್ನುದ್ದೇಶಿಸಿ, ಮಾಡುತ್ತೇವೆ. ಯಜ್ಞವೆಂಬುದೇ ವಿಷ್ಣುವಿನ ಹೆಸರು; **"ಯಜ್ಞೋ ವೈ ವಿಷ್ಣುಃ"** ಎಂಬ ವೇದವಾಕ್ಯದಲ್ಲಿಯೇ ಈ ಅಭಿಪ್ರಾಯವಿರುತ್ತದೆ. ದೇವತೆಗಳನ್ನುದ್ದೇಶಿಸಿ ಫಲಾಪೇಕ್ಷೆಯಿಂದ ಮಾಡುವ ಕರ್ಮವು **'ಅಪರಕರ್ಮವು'**, ಕೀಳು ಕರ್ಮವು; ಪರಮಾತ್ಮನನ್ನುದ್ದೇಶಿಸಿ, ವಿಷ್ಣುಪ್ರೀತ್ಯರ್ಥವಾಗಿ ಮಾಡುವ ನಿಷ್ಕಾಮಕರ್ಮವು ಬುದ್ಧಿಯುಕ್ತಕರ್ಮವು, **ಕರ್ಮಯೋಗವು**. ಆದ್ದರಿಂದಲೇ ಭಗವಂತನು "ಕರ್ಮವು ಬಂಧಕವಾಗುವದು ನಿಜ; ಆದರೆ ಯಜ್ಞಾರ್ಥವಲ್ಲದ, ಪರಮೇಶ್ವರನಾದ ವಿಷ್ಣುವಿನ ಪ್ರೀತಿಗಾಗಿ ಮಾಡದೆ ಇರುವ, ಕರ್ಮವು ಮಾತ್ರ ಜನರಿಗೆ ಬಂಧಕವಾಗುತ್ತದೆ. ಆದ್ದರಿಂದ ನೀನು ಯಜ್ಞಾರ್ಥವಾಗಿ ಕರ್ಮವನ್ನು ಮುಕ್ತಸಂಗನಾಗಿ ಆಚರಿಸು" ಎಂದು ಅರ್ಜುನನಿಗೆ ಉಪದೇಶಿಸಿರುತ್ತಾನೆ. ಪರಮೇಶ್ವರನ

ಪ್ರೀತ್ಯರ್ಥವಾಗಿ ಕರ್ಮವನ್ನು ಮಾಡುವದೇ ಸಂಗವನ್ನು ಬಿಡುವದಕ್ಕೂ ಫಲಾಭಿ ಸಂಧಿಯನ್ನು ಬಿಡುವದಕ್ಕೂ, ಆ ಮೂಲಕವಾಗಿ ಕರ್ಮಬಂಧದಿಂದ ಬಿಡುಗಡೆಯಾಗಿ ಜ್ಞಾನನಿಷ್ಠೆಗೆ ಬೇಕಾದ ಯೋಗ್ಯತೆಯನ್ನು ಸಂಪಾದಿಸಿಕೊಳ್ಳುವದಕ್ಕೂ ಪರಮೋ ಪಾಯವು. ಕರ್ಮಯೋಗವಾಗಿ ಮಾರ್ಪಡಿಸಿಕೊಂಡಾಗಲೇ ಕರ್ಮವು ಕಳೆಗಟ್ಟುವದು. ಕರ್ಮವನ್ನು ಮಾಡುವದಾಗಲಿ, ಯಾವ ಕರ್ಮವನ್ನು ಮಾಡಬೇಕೆಂಬುದಾಗಲಿ ಮುಖ್ಯವಲ್ಲ; ಕರ್ಮವನ್ನು ಹೇಗೆ ಮಾಡಬೇಕು?- ಎಂಬುದೇ ಇಲ್ಲಿ ಮುಖ್ಯವು.

ಅರ್ಜುನನು ಹೇಳಿದಂತೆ ಕರ್ಮವು ಘೋರವಾಗಿರುವದು ಯಾವಾಗ? ತನಗಾಗಿ ಮಾಡುವಾಗ. ಆಗ ಅದು ಬಂಧಕವಾಗುವದು ಖಂಡಿತ. ಆದರೆ ಪರಮೇಶ್ವರನ ಪ್ರೀತ್ಯರ್ಥವಾಗಿ ಸ್ವಧರ್ಮವಾಗಿರುವ ಯುದ್ಧವನ್ನು ಮಾಡಿದರೆ ಅದೇ ಯುದ್ಧವೇ ಉತ್ಕೃಷ್ಟಕರ್ಮವಾಗುವದು, ತನ್ನ ಘೋರತ್ವವನ್ನೂ ಬಂಧಕತ್ವವನ್ನೂ ಕಳೆದುಕೊಳ್ಳುವದು. ಭಗವಂತನು ಉಪದೇಶಿಸುತ್ತಿರುವ ಕರ್ಮದ ಜಾಡೇ ಬೇರೆ. ಅದು ಅರ್ಜುನನು ತಿಳಿದುಕೊಂಡಿದ್ದ ಜಾತಿಯ ಕರ್ಮವಲ್ಲ. "ಪೂಜಾರ್ಹರಾದ ಭೀಷ್ಮರನ್ನೂ ದ್ರೋಣರನ್ನೂ ಬಾಣದಿಂದ ಹೊಡೆದು ಹೇಗೆ ಯುದ್ಧಮಾಡಲಿ?" ಎಂದು ಕೇಳಿದ್ದ ಪ್ರಶ್ನೆಗೆ ಇಲ್ಲಿ ಭಗವಂತನ ಉತ್ತರವಿದೆ. ಈ ಯುದ್ಧವು ಅರ್ಜುನನು ಮಾಡಿಕೊಂಡಿದ್ದ ಅರ್ಥದ ಯುದ್ಧವಲ್ಲ; ಇದು ಪರಮೇಶ್ವರನ ಆರಾಧನೆ. ಅವನು ಬಿಡುವ ಬಾಣಗಳು ಈಗ ಬರಿಯ ಬಾಣಗಳಲ್ಲ, ಅದೊಂದು ಪುಷ್ಪಾಂಜಲಿ! ಸಾಧಾರಣಜನರು ಕರ್ಮವನ್ನು ಮಾಡಿದರೆಷ್ಟು, ಬಿಟ್ಟರೆಷ್ಟು: ಪರಮೇಶ್ವರನ ಭಕ್ತನಾಗಿ ಅವನ ಪ್ರೀತ್ಯರ್ಥವಾಗಿ ಮಾಡುವ ಕರ್ಮವೇ ನಿಜವಾದ ಕರ್ಮವು. ಆದ್ದರಿಂದ "ಅರ್ಜುನನೆ, ನೀನು ಮುಕ್ತಸಂಗನಾಗಿ ಈ ಯುದ್ಧಕರ್ಮವನ್ನು ಕೂಡ ಯಜ್ಞಾರ್ಥವಾಗಿ ಮಾಡು. ನಿನಗೆ ಇಹದಲ್ಲಿ ಜಯವೂ ಕೀರ್ತಿಯೂ ಲಭಿಸುವದು, ಪರದಲ್ಲಿ ಗತಿಯೂ ಆಗುವದು; ಆದರೆ ಅದೆಲ್ಲ ಆನುಷಂಗಿಕಫಲವು. ಪರಮೇಶ್ವರನ ಪ್ರೀತ್ಯರ್ಥವಾಗಿ ಮಾಡಿದ ಕರ್ಮದಿಂದ ನೀನು ಕರ್ಮವನ್ನೂ ಮೀರಿ ಜ್ಞಾನನಿಷ್ಠೆಗೇ ಯೋಗ್ಯನಾಗಿಬಿಡುವೆ. ಇದಕ್ಕಿಂತ ನಿನಗಿನ್ನೇನು ಹೆಚ್ಚಿನ ಫಲವು ಬೇಕು?" ಎಂದು ಭಗವಂತನು ಉಪದೇಶಿಸಿರುತ್ತಾನೆ. ಕರ್ಮಯೋಗದ ಲಕ್ಷಣವು ಇಲ್ಲಿ ಪೂರ್ಣ ವಾಯಿತು. ಇಲ್ಲಿ ಮುಂದಿನ ಶ್ಲೋಕಗಳಲ್ಲಿ ಯಜ್ಞವಿಚಾರವು ಬಂದಿರುತ್ತದೆಯಷ್ಟೆ. ಅದು ಕರ್ಮಯೋಗವನ್ನು ಯಜ್ಞಾರ್ಥವಾಗಿ ಮಾಡಬೇಕೆಂದು ಹೇಳಿದ ಪ್ರಸಂಗದಿಂದ ಯಜ್ಞವನ್ನು ಹೊಗಳುವದಕ್ಕಾಗಿ ಬಂದಿರುತ್ತದೆ. ನಾವು ಪ್ರಸಕ್ತವಾದ ಕರ್ಮಯೋಗವನ್ನೇ ಲಕ್ಷ್ಯದಲ್ಲಿಟ್ಟುಕೊಂಡೇ ಆ ಭಾಗವನ್ನೂ ಮನನಮಾಡಬೇಕು.

# ೨೧. ಯಜ್ಞಾರ್ಥಕರ್ಮ ೩-(೧೦-೧೭)

(೧೭.೧೧.೪೭)

ಹಿಂದಿನ ಉಪನ್ಯಾಸವನ್ನು ಸಂಗ್ರಹಿಸಿ ಮನಸ್ಸಿನಲ್ಲಿಟ್ಟುಕೊಂಡೇ ಮುಂದಿನ ಗ್ರಂಥಭಾಗದ ಅರ್ಥವನ್ನು ನಾವು ಗ್ರಹಿಸಬೇಕಾಗಿದೆ. ಕರ್ಮಕ್ಕೂ ಜ್ಞಾನಕ್ಕೂ ಒಂದು ನಿಕಟಸಂಬಂಧವಿರುತ್ತದೆ. ಅದನ್ನರಿತುಕೊಂಡೇ ಕರ್ಮವನ್ನು ಮಾಡಬೇಕು. ಸರಿಯಾದ ಕ್ರಮದಲ್ಲಿ ಕರ್ಮವನ್ನು ಮಾಡುವದರಿಂದಲೇ ಕರ್ಮದ ಬಂಧವು ಬಿಚ್ಚಿಕೊಳ್ಳುವದು. ಕರ್ಮವನ್ನು ಬಿಡುವದು ಹೇಗೆಂಬುದನ್ನು ತಿಳಿಯದೆ ಜನರು ಸುಮ್ಮನೆ ಕರ್ಮೇಂದ್ರಿಯ ಗಳನ್ನು ಸಂಯಮನಮಾಡಿಕೊಂಡರೆ ಕರ್ಮವನ್ನು ಬಿಟ್ಟಂತಾಯಿತೆಂದು ತಪ್ಪಾಗಿ ತಿಳಿದುಕೊಳ್ಳುವರು. ಮನಸ್ಸಿನಿಂದ ವಿಷಯಗಳನ್ನು ಸ್ಮರಿಸುತ್ತಿದ್ದರೆ ಇಂದ್ರಿಯಗಳಿಂದ ಕರ್ಮವನ್ನು ಮಾಡದೆ ಇದ್ದರೂ ಮಾಡಿದಂತೆ; ಮನಸ್ಸಿನ ಕರ್ಮವೂ ವಾಸನೆಯೂ ಇರುವವರೆಗೆ ಕರ್ಮವನ್ನು ಬಿಟ್ಟಂತೆ ಆಗುವದೇ ಇಲ್ಲ. ರಾಗದ್ವೇಷಾದಿಗಳಿಲ್ಲದೆ ಕರ್ಮವನ್ನು ಮಾಡಿದರೂ ಮಾಡಿದಂತೆ ಅಲ್ಲ. ಜನಸಂಗವನ್ನು ಬಿಡಬೇಕೆಂದು ಒಬ್ಬನು ಒಂದು ಏಕಾಂತವಾದ ಗವಿಯಲ್ಲಿ ಅಡಗಿಕೊಂಡನಂತೆ; ತಾನು ಮಹಾ ತಪಸ್ವಿಯೆಂದೂ ಸಿದ್ಧಪುರುಷನೆಂದೂ ಜನರು ಭಾವಿಸುವರೆಂದು ಅವನು ಮನಸ್ಸಿನಲ್ಲಿ ಎಣಿಸಿಕೊಂಡಿದ್ದನು. ಅಷ್ಟರಲ್ಲಿ ಒಳಗಿನಿಂದ ಒಂದು ಜ್ವಾಲಾಮುಖಿಯೆದ್ದು ಅವನನ್ನು ಸುಟ್ಟು ಅವನ ಎಲುಬಿನ ಪಂಜರವನ್ನು ಹೊರಕ್ಕೆಸೆಯಿತಂತೆ! ಜನರೆಲ್ಲರೂ ಅವನ ದುರವಸ್ಥೆಯನ್ನು ತಿಳಿದು ಮರುಗಿದರಂತೆ. ಇದಕ್ಕೆ ಬದಲು ಅವನು ಜನರ ನಡುವೆಯೇ ಇದ್ದು ಮನಸ್ಸಿನ ಅಶುಭವಾಸನೆಗಳನ್ನು ಗೆದ್ದುಕೊಂಡಿದ್ದರೆ ಅಷ್ಟರಿಂದಲೇ ಅವನಿಗೆ ಏಕಾಂತವಾಸವು ಲಭಿಸಿಬಿಡುತ್ತಿತ್ತು.

ಕರ್ಮಜಡರಾದವರು ಸಂಗದಿಂದಲೂ ಫಲದಾಶೆಯಿಂದಲೂ ಕರ್ಮಕ್ಕೆ ಕಟ್ಟು ಬಿದ್ದಿರುತ್ತಾರೆ. ವಿವೇಕಿಗಳಾದವರು ಮನಸ್ಸಿನಿಂದ ಇಂದ್ರಿಯಗಳನ್ನು ಬಿಗಿಹಿಡಿದುಕೊಂಡು ಕರ್ಮಯೋಗವನ್ನು ಅನುಷ್ಠಾನಮಾಡುತ್ತಾ ಕರ್ಮದ ಬಂಧವನ್ನು ಮೀರುತ್ತಾರೆ. ಆದ್ದರಿಂದ ಸಂಗ, ಫಲದಾಶೆ-ಇವೆರಡೂ ಇಲ್ಲದಿದ್ದರೆ ಕರ್ಮವನ್ನು ಮಾಡಿದರೂ ಮಾಡದಂತೆಯೇ. ಅಂಥ ಕರ್ಮಯೋಗದಿಂದ ಜ್ಞಾನಕ್ಕೆ ತಕ್ಕ ಯೋಗ್ಯತೆಯು ಬರುತ್ತದೆ.

ಕರ್ಮವನ್ನು ಸುಮ್ಮನೆ ಬಿಟ್ಟಮಾತ್ರದಿಂದ ಜನರಿಗೆ ಯಾವ ಉತ್ಕೃಷ್ಟ ಫಲವೂ ದೊರಕುವದಿಲ್ಲ. ಅವರಿಗೆ ನಿತ್ಯಜೀವನವ್ಯವಹಾರವು ಕೂಡ ಸಾಗುವ ಹಾಗಿಲ್ಲ. ಇನ್ನು ಅವರಿಗೆ ಕರ್ಮದ ಕಟ್ಟನ್ನು ಕಳಚಿಕೊಳ್ಳುವ ಆಶೆ ಎಲ್ಲಿ ಬಂತು? ಆದ್ದರಿಂದ

ಕರ್ಮವನ್ನು ಬಿಡುವ ಹುಚ್ಚಿಗೆ ಹೋಗಬಾರದು. ಕರ್ಮದಲ್ಲಿ ನನ್ನ ಕರ್ಮವೆಂಬ ಸಂಗವನ್ನೂ, ಫಲವು ನನಗೆ ದೊರಕುವದಕ್ಕಾಗಿ ಕರ್ಮವನ್ನು ಮಾಡುತ್ತಿದ್ದೇನೆ ಎಂಬ ಫಲಾಭಿಸಂಧಿಯನ್ನೂ ತೊರೆಯುವದಕ್ಕೇ ಹವಣಿಸಬೇಕು. ಇದಕ್ಕೆ ಯಜ್ಞಾರ್ಥವಾದ ಕರ್ಮವೇ ಉಪಾಯ.

ಪರಮಾತ್ಮನಿಗೆ ಯಜ್ಞನೆಂದು ಹೆಸರು; ಅವನ ಪ್ರೀತ್ಯರ್ಥವಾಗಿ ಮಾಡುವ ಯಾಗಕ್ಕೂ ಯಜ್ಞವೆಂದು ಹೆಸರು. ಯಜ್ಞವನ್ನು ದೇವತೆಗಳಿಗಾಗಿ ಮಾಡುತ್ತೇವೆ; ದೇವತೆಗಳು ಪ್ರೀತರಾದರೆ ತಮ್ಮ ಪ್ರಭಾವದಿಂದ ನಮ್ಮ ಇಷ್ಟಾರ್ಥಗಳನ್ನು ನೆರವೇರಿಸುವರು. ಆದರೆ ದೇವತೆಗಳಲ್ಲಿರುವ ಆ ಶಕ್ತಿಯೂ ಪರಮಾತ್ಮನದೇ; ಆದ್ದರಿಂದ ಪರಮಾತ್ಮನಿಗೆ ಯಜ್ಞನೆಂಬ ಹೆಸರು ಮುಖ್ಯಾರ್ಥದಲ್ಲಿಯೇ ಒಪ್ಪುತ್ತದೆ. ಯಾವನ ಪ್ರೀತ್ಯರ್ಥವಾಗಿ ಯಜ್ಞವನ್ನು ಮಾಡುವರೋ ಆ ಪರಮೇಶ್ವರನೇ ಯಜ್ಞನು. ಆದ್ದರಿಂದ ಪರಮೇಶ್ವರನಿಗೇ ನಮ್ಮ ಕರ್ಮಗಳೆಲ್ಲವನ್ನೂ ಸಮರ್ಪಣೆಮಾಡಬೇಕು. ಇದೇ ಕರ್ಮಯೋಗದ ಬೀಗದ ಕೈ.

ಪರಮೇಶ್ವರನಿಗೆ ಕರ್ಮವನ್ನು ಅರ್ಪಿಸುವದೆಂದರೇನು? ನಿಜವಾಗಿ ಇಡಿಯ ಜಗತ್ತೇ ಪರಮಾತ್ಮನದು. ಇಲ್ಲಿ ನಡೆಯುತ್ತಿರುವ ವ್ಯಾಪಾರಗಳೆಲ್ಲವೂ ಆತನ ವಶದಲ್ಲಿಯೇ ಇರುತ್ತವೆ. ಆದರೂ ನಾವು "ಈ ಕರ್ಮವು ನಾನು ಮಾಡಬೇಕಾದದ್ದು; ಈ ಕಾರಕಗಳನ್ನು ನಾನು ಸಂಪಾದಿಸಿಕೊಂಡಿರುತ್ತೇನೆ; ಇದರಿಂದಾಗುವ ಫಲವು ನನಗೆ ಆಗಬೇಕು"- ಎಂದು ನಾನು ನನ್ನದೆಂಬ ಅಭಿಮಾನವನ್ನು ಹತ್ತಿಸಿಕೊಂಡಿರುತ್ತೇವೆ. ಈ ಮಿಥ್ಯಾಭಿಮಾನವನ್ನು ಬಿಟ್ಟರೆ ಕರ್ಮವು ಪರಮೇಶ್ವರನಿಗೆ ಅರ್ಪಿತವಾಗುತ್ತದೆ, ನಮ್ಮ ತಪ್ಪು ನೇರ್ಪಾಗುತ್ತದೆ. ಹೀಗೆ ಈಶ್ವರನಿಗೆ ಅರ್ಪಿತವಾದ ಕರ್ಮವೇ ಜ್ಞಾನಸಾಧನವಾದ ಕರ್ಮವು. ಇಂಥ ಕರ್ಮಗಳಲ್ಲಿ ಯಜ್ಞವು ಹೆಚ್ಚಿನದಾದ್ದರಿಂದ ಈಗ ಯಜ್ಞವನ್ನು ಹೊಗಳುವದಕ್ಕೆ ಪ್ರಾರಂಭಿಸಿರುತ್ತದೆ. ಆದ್ದರಿಂದ ಪರಮೇಶ್ವರನಿಗೆ ಅರ್ಪಣೆಮಾಡುವ ಯಜ್ಞವನ್ನು ಇಲ್ಲಿ ವಿಧಾನಮಾಡಿದೆ ಎಂದು ಭಾವಿಸಬೇಕು. ಕರ್ಮಕಾಂಡದಲ್ಲಿ ಯಜ್ಞವನ್ನು ವಿಧಾನಮಾಡಿ ಆಗಿರುವದರಿಂದಲೂ ಇದು ಮುಮುಕ್ಷುಗಳಿಗಾಗಿ ಉಪದೇಶಿಸಿರುವ ಕರ್ಮಯೋಗದ ಪ್ರಕರಣವಾದ್ದರಿಂದಲೂ ಹೀಗೆ ಅರ್ಥಮಾಡುವದು ಯುಕ್ತವಾಗಿರುತ್ತದೆ.

ಹಿಂದೆ ಪ್ರಜಾಪತಿಬ್ರಹ್ಮನು ಪ್ರಜೆಗಳನ್ನೂ ಯಜ್ಞಗಳನ್ನೂ ಜೊತೆಯಲ್ಲಿಯೇ ಸೃಷ್ಟಿಮಾಡಿ ದೇವತೆಗಳಿಗೂ ಜನರಿಗೂ ಇರುವ ಸಂಬಂಧವನ್ನು ತಿಳಿಸಿಕೊಟ್ಟಿರುತ್ತಾನೆ. ಯಜ್ಞವೆಂಬುದು ದೇವತೆಗಳಿಗೆ ತೃಪ್ತಿಯಾಗಲೆಂದು ಮಾಡುವ ಕರ್ಮವು; ದೇವತೆಗಳೂ ಮನುಷ್ಯರೂ ಯಜ್ಞವೆಂಬ ಕರ್ಮದಿಂದ ನಿತ್ಯಸಂಬದ್ಧರಾಗಿರುತ್ತಾರೆ. ಮನುಷ್ಯರು

ದೇವತೆಗಳಿಗೆ ತೃಪ್ತಿಯನ್ನುಂಟುಮಾಡುವ ಯಜ್ಞವನ್ನು ಮಾಡುತ್ತಲೇ ಇರಬೇಕು; ದೇವತೆಗಳೂ ಮನುಷ್ಯರ ಇಷ್ಟಾರ್ಥಗಳನ್ನು ನೆರವೇರಿಸುತ್ತಲೇ ಇರಬೇಕು. ಯಜ್ಞವೆಂಬುದು ಇಷ್ಟವಾದದ್ದನ್ನೆಲ್ಲ ಕರೆಯುವ ಕಾಮಧೇನುವಾಗಿರುತ್ತದೆ. ಜೀವನ ಬಾಳಿನಲ್ಲಿ ಒಂದು ಹೊಂದಿಕೆಯಿರಬೇಕು. ಹಾರ್ಮೋನಿಯಮ್ಮಿಗೆ ಹಾಕಿರುವ ಸ್ವರದ ಪಟ್ಟಿಗಳು ಹೊಂದುಗೆಯಾಗಿರುವವರೆಗೂ ಅವುಗಳಿಂದ ಹೊರಡುವ ಸ್ವರಗಳು ಒಂದಕ್ಕೊಂದು ಹೊಂದಿಕೊಂಡು ಸುನಾದವನ್ನು ಕೊಡುತ್ತಿರುವವು. ಇದರಂತೆ ನಮ್ಮ ಜೀವನದಲ್ಲಿ ಧರ್ಮವೆಂಬ ಸುನಾದವು ಹೊರಡುತ್ತಿರುವಂತೆ ನಾವೂ ದೇವತೆಗಳೂ ಹೊಂದುಗೆಯಿಂದಿರಬೇಕು. ಒಬ್ಬರಿಗೊಬ್ಬರು ನೆರವಾಗುತ್ತಾ ಇರುವವರೆಗೆ ನಮಗೆ ಶ್ರೇಯಸ್ಸು ಕಟ್ಟಿಟ್ಟ ಬುತ್ತಿಯಾಗಿರುತ್ತದೆ. ಮನುಷ್ಯರು ಯಜ್ಞವನ್ನು ಮಾಡಿ ದೇವತೆಗಳನ್ನು ತೃಪ್ತಿಗೊಳಿಸುತ್ತಿರಬೇಕು. ಆಗ ಅವರು ಪ್ರಸನ್ನರಾಗಿ ಮನುಷ್ಯರ ಪಾಪವು ತೊಲಗುವಂತೆ ಅನುಗ್ರಹಿಸಿ ಅವರ ಪುಣ್ಯದ ಫಲವಾಗಿ ಮಳೆಬೆಳೆಗಳನ್ನೂ ಕಾಲಕಾಲಕ್ಕೆ ಕೊಡುವರು. ಆ ದೇವತೆಗಳು ಕೊಟ್ಟ ಧನಧಾನ್ಯವನ್ನೂ ಭೋಗಸಾಮಗ್ರಿಗಳನ್ನೂ ಅವರಿಗೆ ಸಮರ್ಪಿಸಿಯೇ, ಅವರಿಗೆ ನಿವೇದಿಸಿದ ಶೇಷವಾಗಿ ಮಾಡಿಕೊಂಡೇ, ಮನುಷ್ಯರು ಅನುಭವಿಸುತ್ತಿರಬೇಕು. ನಮ್ಮ ಸುಖಸಾಮಗ್ರಿಗಳೆಲ್ಲ ದೇವತೆಗಳು ನಮಗೆ ಕೊಟ್ಟಿರುವ ಧರ್ಮೋಪಕರಣಗಳು. ಮಂಡಿಯ ಸಾಹುಕಾರನಿಂದ ವ್ಯಾಪಾರಕ್ಕೆಂದು ತಂದ ಪದಾರ್ಥಗಳನ್ನು ಮಾರಾಟಮಾಡಿದ ಬಳಿಕ ಅವನಿಗೆ ಸಲ್ಲತಕ್ಕದ್ದನ್ನು ಸಲ್ಲಿಸಿಯೇ ಹೇಗೆ ಚಿಲ್ಲರೆ ಅಂಗಡಿಯವನು ತನ್ನ ಲಾಭವನ್ನು ತನಗಾಗಿ ಉಪಯೋಗಿಸಿ ಕೊಳ್ಳುವನೋ, ಹಾಗೆಯೇ, ನಾವುಗಳೂ ದೇವತೆಗಳ ಅನುಗ್ರಹವಾಗಿ ನಮಗೆ ದೊರಕಿರುವ ಭೋಗಗಳನ್ನು ಅವರಿಗೆ ಕೊಟ್ಟೇ, ಅವರ ಉಪಕಾರವನ್ನು ಸ್ಮರಣೆ ಮಾಡಿಕೊಂಡೇ, ಯಜ್ಞಶಿಷ್ಟವಾದ ಭಾಗವನ್ನು ಉಪಯೋಗಿಸಿಕೊಳ್ಳಬೇಕು. ಇಲ್ಲದಿದ್ದರೆ ಅವರ ಸ್ವತ್ತನ್ನು ಕಳವು ಮಾಡಿದಂತೆ ಆಗುತ್ತದೆ. ಯಜ್ಞವನ್ನು ಮಾಡಿ ಉಳಿದ ಭಾಗವನ್ನು ಉಣ್ಣುವದರಿಂದ ನಮ್ಮ ಸಕಲಪಾಪಗಳೂ ಪರಿಹಾರವಾಗುವವು. ಆದರೆ ದೇವತೆಗಳ ಅರ್ಪಣೆಗಲ್ಲದೆ ತಮಗೋಸ್ಕರವೆಂದೇ ಯಾರು ಅಡಿಗೆಯನ್ನು ಮಾಡಿ ಕೊಳ್ಳುವರೋ ಅವರು ತಿನ್ನುವದು ಅನ್ನವಲ್ಲ, ಪಾಪವನ್ನೇ ಅವರು ದಿನದಿನವೂ ಉಣ್ಣುತ್ತಿರುವರು! ದೇವತೆಗಳ ಒಟ್ಟೇ ಪರಮಾತ್ಮನು; ಪರಮಾತ್ಮನ ಶಕ್ತಿವಿಶೇಷಗಳೇ ದೇವತೆಗಳು. ಆದ್ದರಿಂದ ನಾವು ಮಾಡುವ ಕರ್ಮವನ್ನೆಲ್ಲ ಪರಮಾತ್ಮನಿಗೆ ಅರ್ಪಣೆಮಾಡುತ್ತಿರಬೇಕು. ಯಜ್ಞರೂಪವಾದ ಕರ್ಮದಲ್ಲಿ ನಮ್ಮದೆಂಬುದು ಯಾವದು ಇದೆ? ಹೊರಗೆ ಇರುವ ಭೂಮಿ, ಮರಗಿಡಗಳು, ಪ್ರಾಣಿಗಳು, ಹಾಲು, ಮೊಸರು, ತುಪ್ಪ - ಮುಂತಾದದ್ದೆಲ್ಲವೂ ನಮಗೆ ಪರಮೇಶ್ವರನ ಅನುಗ್ರಹವಾಗಿ

ಆಗಲೇ ಸಿದ್ಧವಾಗಿರುತ್ತದೆ. ಇಷ್ಟೇ ಅಲ್ಲ, ನಮ್ಮ ಶರೀರಕರಣಗಳೂ ಮನೋಬುದ್ಧಿಗಳು ಕೂಡ ಎಲ್ಲವೂ ನಮಗೆ ಆತನೇ ಕೃಪೆಯಿಂದ ಕೊಟ್ಟವುಗಳಾಗಿವೆ. ಇವುಗಳನ್ನು ಮಿಥ್ಯಾಭಿಮಾನದಿಂದ ನಮ್ಮದೆಂದುಕೊಂಡರೆ ಚೌರ್ಯವಲ್ಲದೆ ಮತ್ತೇನು? ಇದೇ ವಸ್ತುಗಳನ್ನೇ ಆತನಿಗೆ ಅರ್ಪಣೆಮಾಡುವ ಯಜ್ಞಕ್ಕಾಗಿ ಉಪಯೋಗಿಸಿಕೊಳ್ಳುವದು ಕರ್ಮಯೋಗದ ಕೌಶಲವು.

ಶ್ರುತಿಸ್ಮೃತಿಗಳಲ್ಲಿ ವರ್ಣಿತವಾಗಿರುವ ಯಜ್ಞವಾದದ ಅಭಿಪ್ರಾಯವನ್ನು ನಾವು ಮೊದಲು ತಿಳಿದುಕೊಳ್ಳಬೇಕು. ಯಜ್ಞವೆಂದರೆ ತ್ಯಾಗವು; ತ್ಯಾಗರೂಪವಾದ ಯಜ್ಞವಿಲ್ಲದವನ ಬಾಳು ವ್ಯರ್ಥ. ಅನ್ನದಿಂದಲೇ ಎಲ್ಲಾ ಭೂತಗಳೂ ಹುಟ್ಟಿರುವವು; ನಮ್ಮೆಲ್ಲರ ಶರೀರಗಳೂ ಅನ್ನಮಯವಾಗಿರುತ್ತವೆ. ಆದರೆ ಅನ್ನವುಂಟಾಗುವದಕ್ಕೆ ಮಳೆ ಬೇಕು. ಈ ಮಳೆಯು ಯಜ್ಞದಿಂದ ಉಂಟಾಗುತ್ತದೆ. ಮಳೆಯಲ್ಲಿ ಅನ್ನವನ್ನುಂಟು ಮಾಡುವ ಮಳೆಯೆಂದೂ ಬರಿಯ ಮಳೆಯೆಂದೂ ಎರಡು ವಿಧ. ಅತಿವೃಷ್ಟಿ, ಅನಾವೃಷ್ಟಿ-ಮುಂತಾದ ರೂಪದಿಂದ ಬೀಳುವ ಮಳೆಯೂ ಮರುಭೂಮಿಯಲ್ಲಿ ಸುರಿಯುವ ಮಳೆಯೂ ಬರಿಯ ಮಳೆ. ಆದರೆ ಅನ್ನವನ್ನು ಕೊಡುವ ಮಳೆಯು ಯಜ್ಞದಿಂದಲೇ ಉಂಟಾಗತಕ್ಕದ್ದು. ತ್ಯಾಗರೂಪವಾದ ಯಜ್ಞವಿಲ್ಲದೆ ಎಂದಿಗೂ ಮಳೆಬೆಳೆಗಳು ಆಗಲಾರವು. ಬೀಜವನ್ನು ನನ್ನದಲ್ಲವೆಂದು ಭೂಮಿಯಲ್ಲಿ ತ್ಯಾಗ ಮಾಡಿದರೇ ಅಲ್ಲವೆ, ಒಂದಕ್ಕೆ ಹತ್ತಾಗಿ ಫಲವಾಗುವದು? ಒಂದು ಹಣ್ಣು ತೆಂಗಿನಕಾಯಿಯನ್ನು ನೆಲದಲ್ಲಿ ಹೂಳಿದರೇ ಅಲ್ಲವೆ, ನೂರಾರು ಕಾಯಿಗಳನ್ನು ಹಲವು ವರ್ಷಗಳವರೆಗೆ ಕೊಡುವ ತೆಂಗಿನ ಮರವು ಹುಟ್ಟುವದು? ಜನರು ಈಗಲೂ ತಿಳಿದೋ ತಿಳಿಯದೆಯೋ ತ್ಯಾಗರೂಪವಾದ ಯಜ್ಞವನ್ನು ಮಾಡುತ್ತಲೇ ಇರುವರು; ಆದ್ದರಿಂದಲೇ ಇನ್ನೂ ಮಳೆಬೆಳೆಗಳು ಆಗುತ್ತಿರುತ್ತವೆ. ಕೆಲವು ವೇಳೆ ಜನರು ಎಷ್ಟೋ ಹಣವನ್ನು ದಂಡವಾಗಿ ತೆರುತ್ತಾರೆ; ಆಗ ಅದನ್ನು ದಾನವೆಂದು ಕರೆಯುವದಕ್ಕೆ ಆಗುವದಿಲ್ಲ. ಮನಃಪೂರ್ವಕವಾಗಿ ಕೊಟ್ಟದ್ದೇ ದಾನವೆನಿಸುವದು. ಇದರಂತೆ ಮನಃಪೂರ್ವಕವಾಗಿ ಪರಮೇಶ್ವರನಿಗೆ ಪ್ರೀತಿಯಾಗಲೆಂಬ ಉದ್ದೇಶದಿಂದ ಮಾಡಿದ ಕರ್ಮವೇ ನಿಜವಾದ ಯಜ್ಞವೆನಿಸುತ್ತದೆ. ಯಾವದಾದರೊಂದು ಕೆಲಸವನ್ನು ಮಾಡಿದರೆ ಯಜ್ಞವಾಗುವದಿಲ್ಲ; ವೇದೋಕ್ತಕರ್ಮವನ್ನು ವಿಧಿಪೂರ್ವಕವಾಗಿ ದೇವತಾಪ್ರೀತ್ಯರ್ಥವಾಗಿ ಮಾಡಿದರೆ ಮಾತ್ರ ಯಜ್ಞವಾಗುತ್ತದೆ. ಆ ವೇದವು ಅಕ್ಷರನೆಂಬ ಹೆಸರಿನ ಪರಮಾತ್ಮನಿಂದ ಅಯತ್ನಪೂರ್ವಕವಾಗಿ, ಉಸಿರಾಡಿದಂತೆ ಲೀಲಾನ್ಯಾಯದಿಂದ ತೋರಿಕೊಳ್ಳುತ್ತದೆ. ಈ ರೀತಿಯಲ್ಲಿ ನೋಡಿದರೆ ಪರಮಾತ್ಮನ ಉಸಿರಾಗಿ ಪರಮಾತ್ಮನಂತೆ ನಿತ್ಯವಾಗಿರುವ ವೇದದಲ್ಲಿ ಹೇಳಿರುವ ಸತ್ಕರ್ಮವೇ

ಯಜ್ಞವೆನಿಸುವದು. ಈ ಯಜ್ಞದಿಂದ ಮಳೆಬೆಳೆಗಳು, ಅವುಗಳಿಂದ ಪ್ರಾಣಿಗಳ ಉತ್ಪತ್ತಿಯಾಗುವದು. ವೇದ, ವೇದೋಕ್ತಕರ್ಮ, ಯಜ್ಞ, ಮಳೆ, ಅನ್ನ, ಪ್ರಾಣಿಗಳು-ಹೀಗೆ ನಡೆಯುತ್ತಿರುವ ಧರ್ಮಚಕ್ರವನ್ನು ಯಾವಾತನು ಅನುಸರಿಸುವದಿಲ್ಲವೋ ಯಾವನು ಇಂದ್ರಿಯಗಳನ್ನು ಬರಿಯ ವಿಷಯಗಳ ಬೇಟೆಯಲ್ಲಿಯೇ ಆಡಿಸುತ್ತಿರುವನೋ, ಅವನ ಆಯುಸ್ಸೆಲ್ಲವೂ ಪಾಪಮಯವಾಗಿರುತ್ತದೆ, ಅವನ ಬಾಳು ವ್ಯರ್ಥ.

ಇಡಿಯ ಜಗತ್ತು ಯಜ್ಞವೆಂಬ ಕ್ರಿಯಾವಿಶೇಷದಿಂದಲೇ ತನ್ನ ಬಾಳುವೆಯನ್ನು ಸಾಗಿಸುತ್ತಿರುತ್ತದೆ. ಜಗತ್ತಿನಲ್ಲಿ ಪೈರುಪಚ್ಚೆಗಳು ಹೇರಳವಾಗಿ ಹುಟ್ಟಿ ಹಲವು ಪ್ರಾಣಿಗಳು ಉತ್ಪನ್ನರಾಗಿ ಸುಖದಿಂದ ಬಾಳುವದಕ್ಕೆ ಯಜ್ಞವೇ ಕಾರಣವಾಗಿರುತ್ತದೆ. ಯಜ್ಞವಾಗಿ ಅಗ್ನಿಯಲ್ಲಿ ಶ್ರದ್ಧೆಯಿಂದ ಅರ್ಪಿಸಿದ ಆಹುತಿಯು ಸೂರ್ಯನನ್ನು ಸೇರಿ ಮಳೆಯಾಗಿ ಬೀಳುವದೆಂದೂ ಅದರಿಂದ ಅನ್ನವೂ ಅನ್ನದಿಂದ ಪ್ರಜೆಗಳೂ ಉಂಟಾಗುವವು ಎಂದೂ ಸ್ಮೃತಿವಚನವುಂಟು. ಈ ಧರ್ಮಚಕ್ರವು ಎಂದೆಂದಿಗೂ ಕೀಲುಕೊಟ್ಟಿರುವ ಗಡಿಯಾರದ ಹಾಗೆ ಒಂದೇ ಸಮನೆ ನಡೆಯುತ್ತಲೇ ಇರುವದು. ಯಜ್ಞದ ಸೊಲ್ಲೇ ಇಲ್ಲದ ಪ್ರದೇಶಗಳಲ್ಲಿ ಮಳೆ ಹುಯ್ಯಬಹುದು. ಆದರೆ ಆ ಮಳೆಯಿಂದ ಸತ್ಪ್ರಜೆಗಳು ಹುಟ್ಟಿ ಶ್ರೇಯಸ್ಸನ್ನು ಪಡೆಯುವದಕ್ಕೆ ಸಹಾಯವಾಗಲಾರದು. ಆದ್ದರಿಂದ ಲೋಕಸ್ಥಿತಿಗೆ ಕಾರಣವಾಗಿರುವ ಯಜ್ಞದಲ್ಲಿ, ನಮ್ಮ ಸ್ಥಾನವು ಯಾವದು-ಎಂಬುದನ್ನು ಅರಿತುಕೊಂಡು ಆಸ್ತಿಕನಾದವನು ಕರ್ಮದಲ್ಲಿ ತೊಡಗಬೇಕು. ಈ ಕರ್ಮವನ್ನು ಪರಮೇಶ್ವರನ ಪ್ರೀತ್ಯರ್ಥವಾಗಿ ಅನುಷ್ಠಾನಮಾಡಬೇಕು-ಎಂಬುದು ಭಗವಂತನ ಉಪದೇಶವು.

ಭಗವಂತನು ಸಾಂಖ್ಯರಿಗೆ ಜ್ಞಾನಯೋಗವೆಂದೂ ಯೋಗಿಗಳಿಗೆ ಕರ್ಮಯೋಗವೆಂದೂ ಎರಡು ನಿಷ್ಠೆಗಳಲ್ಲಿ ಉಪದೇಶಿಸಿ ಯೋಗದೃಷ್ಟಿಯನ್ನವಲಂಬಿಸಿದವರು ಕರ್ಮವನ್ನು ಮಾಡಲೇಬೇಕು, ಅದರಿಂದಲೇ ಅವರಿಗೆ ಶ್ರೇಯಸ್ಸಾಗುತ್ತದೆ ಎಂಬುದಕ್ಕೆ ಹಲವು ಕಾರಣಗಳನ್ನು ಈವರೆಗೆ ಕೊಟ್ಟಿರುತ್ತಾನೆ. ಕರ್ಮವನ್ನು ಬಿಡುವವರನ್ನು ಎರಡು ಗುಂಪಾಗಿ ಮಾಡಬಹುದು. ಸ್ವೇಚ್ಛಾಚಾರಿಯಾಗಿರುವವನಿಗೆ ಯಾವ ಪುರುಷಾರ್ಥವೂ ಬೇಕಾಗಿರುವದಿಲ್ಲ; ಆದ್ದರಿಂದ ಅವನು ಸದ್ಯಃಫಲವನ್ನು ಕೊಡುವದೆಂದು ತಾನು ನಂಬಿದ ಆಚಾರವನ್ನೇ ಅನುವರ್ತಿಸುತ್ತಾನೆ, ಶಾಸ್ತ್ರೋಕ್ತಕರ್ಮವನ್ನು ಬಿಟ್ಟುಬಿಡುತ್ತಾನೆ. ಸಾಂಖ್ಯದೃಷ್ಟಿಯನ್ನವಲಂಬಿಸಿದ ಜ್ಞಾನಿಯೋ ಎಂದರೆ ಅವನು ಕೃತಕೃತ್ಯನಾಗಿರುವದರಿಂದ ಅವನಿಗೆ ಯಾವದೊಂದು ಫಲವೂ ಆಗಬೇಕಾದದ್ದು ಉಳಿದಿರುವದಿಲ್ಲ. ಆದ್ದರಿಂದ ಅವನಿಗೂ ಕರ್ತವ್ಯವು ಇರುವದಿಲ್ಲ. ಇನ್ನು ಈ ಎರಡು ಪಂಗಡಕ್ಕೂ ಸೇರದೆ ಕಾಮ್ಯಕರ್ಮಗಳ ಕ್ಷುದ್ರಫಲಗಳನ್ನೂ ಬಯಸದೆ

ಇರುವ ಮುಮುಕ್ಷುವಿರುವನಲ್ಲ, ಅವನು ಕರ್ಮಯೋಗವನ್ನು ಮಾಡಬೇಕು. ಈ ಅಧಿಕಾರವಿಭಾಗವನ್ನು ಮತ್ತೆ ನೆನಪುಕೊಡುವದಕ್ಕಾಗಿ ಭಗವಂತನು ಈ ಮಾತನ್ನು ಆಡಿರುತ್ತಾನೆ:

**ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**

**ಆತ್ಮನ್ಯೇವ ಚ ಸನ್ತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥** (೩-೧೭)

"ಆದರೆ ಯಾವನು ಆತ್ಮರತಿಯಾಗಿರುವನೋ ಆತ್ಮತೃಪ್ತನಾಗಿರುವನೋ, ಆತ್ಮನಲ್ಲಿಯೇ ಸಂತುಷ್ಟನಾಗಿರುವನೋ ಅವನಿಗೆ ಕಾರ್ಯವಾದದ್ದು ಇರುವದಿಲ್ಲ." ಜ್ಞಾನಿಯು ಆತ್ಮರತಿಯು; ಅವನ ಮನಸ್ಸು ಆತ್ಮನಲ್ಲಿಯೇ ಆಡುತ್ತಿರುವದು, ಸಾಮಾನ್ಯರ ಮನಸ್ಸಿನಂತೆ ವಿಷಯಗಳಲ್ಲಿ ಆಡುತ್ತಿರುವದಿಲ್ಲ; ಅವನು ಆತ್ಮತೃಪ್ತನಾಗಿ ರುತ್ತಾನೆ. ಅಜ್ಞರಂತೆ ಆಹಾರವೇ ಮುಂತಾದವುಗಳಿಂದಾಗುವ ತೃಪ್ತಿಯನ್ನು ಬಯಸುವವನಲ್ಲ, ಆತ್ಮಸಂತುಷ್ಟನಾಗಿರುತ್ತಾನೆ. ಅವನು ಹೊರಗಿನ ಪದಾರ್ಥಗಳನ್ನು ಪಡೆದ ಮೇಲೆ ಸಂತೋಷವನ್ನು ಪಡೆಯಬೇಕಾಗಿರುವದಿಲ್ಲ. ತನ್ನ ದೇಹವು ಬದುಕಿರುವದಕ್ಕಾಗಲಿ, ಭೋಗಾದಿಗಳು ದೊರೆಯುವದಕ್ಕಾಗಲಿ ಹೊರಗಿನ ಯಾವ ವಸ್ತುವನ್ನೂ ಅವಲಂಬಿಸದೆ, ತನ್ನಲ್ಲಿ ತಾನು ನಿರಾಯಾಸವಾಗಿ ಸುಖದಿಂದ ಇರುವದಕ್ಕೆ ಆತ್ಮಸ್ವರೂಪವನ್ನೇ ಅವಲಂಬಿಸಿರುವವನು ಯಾವನೋ ಅಂಥವನಿಗೆ ಯಾವ ಕರ್ತವ್ಯವೂ ಇರುವದಿಲ್ಲ. ಇಂಥದ್ದು ಬೇಕು, ಇಂಥದ್ದು ಬೇಡ-ಎಂಬ ಹಂಬಲಿಕೆ ಯಾವನಿಗೆ ಇರುವದೋ ಅವನಿಗೆ ತನ್ನ ಹಂಬಲವನ್ನು ನೆರವೇರಿಸಿ ಕೊಳ್ಳುವದಕ್ಕೆ ಮತ್ತೊಂದು ವಸ್ತುವಿನ ಅವಲಂಬನೆಯೂ ಅದಕ್ಕಾಗಿ ಮಾಡಬೇಕಾದ ಕರ್ತವ್ಯವೂ ಅವಶ್ಯವಾಗಿರುವವು. ಆದರೆ ತನ್ನಲ್ಲಿ ತಾನು ನೆಲೆನಿಂತಿರುವ ತೃಷ್ಣಾರಹಿತನಿಗೆ ಯಾವ ಪದಾರ್ಥದ ಗರಜು ಇದ್ದೀತು? ಇಡಿಯ ಜಗತ್ತನ್ನೇ ಜಯಿಸಿದವನೆಂದು ಪ್ರಖ್ಯಾತಿಪಡೆದಿದ್ದ ಅಲೆಕ್ಸಾಂಡರ್ ಮಹಾಶಯನು ಒಮ್ಮೆ ಸೀನೋ ಎಂಬ ತತ್ತ್ವ ಜ್ಞಾನಿಯ ದರ್ಶನಕ್ಕೆ ಬಂದನಂತೆ. ಆ ವಿರಕ್ತನು ಒಂದು ಪೀಪಾಯಿಯನ್ನೇ ತನ್ನ ವಸತಿಯ ಮನೆಯಾಗಿ ಆರಿಸಿಕೊಂಡಿದ್ದನು; ಕುಡಿಯುವದಕ್ಕೆ ಒಂದು ಕಮಂಡಲು ಕೂಡ ಅವನಲ್ಲಿರಲಿಲ್ಲ. ಚಕ್ರವರ್ತಿಯು ಬಹಳ ಹೊತ್ತು ಆ ಮೌನಿಯ ಎದುರಿಗೆ ನಿಂತಿದ್ದರೂ ತನ್ನ ಕಡೆಗೆ ತಿರುಗಿಕೂಡ ನೋಡದೆ ಇದ್ದ ಆತನನ್ನು "ಜಗಜ್ಜೇತೃವಾದ ಅಲೆಗ್ಝಾಂಡರನು ನಾನು; ನನ್ನಿಂದ ಆಗಬೇಕಾದ ಸೇವೆ ಏನಾದರೂ ಉಂಟೆ?" ಎಂದು ಕೇಳಲು ಆ ವಿರಾಗಿಯು "ಅಪ್ಪಾ, ದೇವರು ಕೊಟ್ಟಿರುವ ಬಿಸಿಲಿಗೆ ಅಡ್ಡಲಾಗಿ ನಿಂತಿರುವೆಯಲ್ಲ! ಸ್ವಲ್ಪ ಅತ್ತ ಸರಿ. ಇದೇ ನಿನ್ನಿಂದ ಆಗಬೇಕಾಗಿರುವ ಉಪಕಾರವು" ಎಂದನಂತೆ! ಇಂಥ ಮಹಾತ್ಮರಿಗೆ ಯಾವದಾದರೂ ಕರ್ಮವನ್ನು

ಮಾಡಿದ್ದರಿಂದ ಆಗಬೇಕಾದ ಪ್ರಯೋಜನವು ಯಾವದು? ಅಥವಾ ಕರ್ಮವನ್ನು ಬಿಟ್ಟಿದ್ದರಿಂದ ಅವರಿಗೆ ಆಗುವ ನಷ್ಟವಾದರೂ ಏನು? ಅಂಥವರಿಗೆ ಈ ಲೋಕದಲ್ಲಿ ಮತ್ತೆ ಯಾರನ್ನಾದರೂ ಆಶ್ರಯಿಸಿ ಸಾಧಿಸಿಕೊಳ್ಳಬೇಕಾದ ಪುರುಷಾರ್ಥವೇ ಇರುವದಿಲ್ಲ.

ಹೀಗೆ ಸಾಂಖ್ಯದೃಷ್ಟಿಯನ್ನವಲಂಬಿಸಿದ ಜ್ಞಾನಿಯನ್ನು ಬಿಟ್ಟರೆ ಮತ್ತೆ ಯಾರೊಬ್ಬರೂ ಕರ್ಮವನ್ನು ಬಿಟ್ಟು ಸುಖವನ್ನು ಹೊಂದಲಾರರು. ಆದ್ದರಿಂದ ಭಗವಂತನು ಅರ್ಜುನನಿಗೆ ಕರ್ಮವನ್ನೇ ಮಾಡುವಂತೆ ಉಪದೇಶಿಸಿರುತ್ತಾನೆ. ಆದರೆ ಕಾಮಿಗಳಂತೆ ಫಲಾಸಕ್ತಿಯಿಂದ ಕರ್ಮವನ್ನು ಮಾಡಿ ಬದ್ಧನಾಗದೆ ಇರುವದಕ್ಕಾಗಿ ಕರ್ಮವನ್ನು ಕರ್ಮಯೋಗವಾಗಿ ತಿರುಗಿಸಿಕೊಂಡು ಮಾಡಬೇಕು; ಹಾಗಾದರೆ ಮಾತ್ರ ಕರ್ಮದ ಬಂಧವೂ ತಪ್ಪಿ ಚಿತ್ತಶುದ್ಧಿಯ ಮೂಲಕ ಜ್ಞಾನವನ್ನೂ ಪಡೆದು ಕರ್ಮವನ್ನು ಮೀರಬಹುದು-ಎಂಬುದು ಭಗವಂತನ ಆಶಯವು. ಇಲ್ಲಿಗೆ ಅರ್ಜುನನು ಕೇಳಿದ್ದ ಪ್ರಶ್ನೆಗೆ ಉತ್ತರವು ಬಂದಂತಾಯಿತು. ಕರ್ಮಕ್ಕಿಂತ ಜ್ಞಾನವು ಹೆಚ್ಚಿನದು ಎಂಬುದು ಭಗವಂತನ ಅಭಿಪ್ರಾಯವಲ್ಲ; ಜ್ಞಾನವು ಸಾಂಖ್ಯರಿಗೆ, ಕರ್ಮವು ಯೋಗಿಗಳಿಗೆ ಎಂಬುದೇ ಆತನ ಅಭಿಪ್ರಾಯ. ಕರ್ಮವು ಘೋರವಾಗಿರುವದರಿಂದ ಅದನ್ನು ಮಾಡಬಹುದೆ? ಎಂಬ ಶಂಕೆಗೆ ಪರಿಹಾರವೂ ಬಂದಂತಾಯಿತು. ಫಲಾಸಕ್ತಿಯಿಂದ ಮಾಡಿದ ಕರ್ಮವು ಘೋರವಾಗಬಹುದು. ಯಜ್ಞಾರ್ಥವಾಗಿ, ಪರಮೇಶ್ವರಪ್ರೀತ್ಯರ್ಥವಾಗಿ, ಮಾಡಿದ ಕರ್ಮವು ಜ್ಞಾನನಿಷ್ಠೆಯನ್ನು ಮುಟ್ಟುವದಕ್ಕೇ ಸಾಧನವಾಗಿರುವದರಿಂದ ಅದು ಎಂದಿಗೂ ಘೋರವಲ್ಲ; ಅದನ್ನು ಮುಮುಕ್ಷು ವಾದವನು ಅವಶ್ಯವಾಗಿ ಮಾಡುತ್ತಿರಬೇಕು. ಅದರಿಂದಲೇ ಪರಮಪುರುಷಾರ್ಥ ಪ್ರಾಪ್ತಿಯಾಗುತ್ತದೆ.

## ೨೨. ಲೋಕಸಂಗ್ರಹಾರ್ಥವಾದ ಕರ್ಮ ೩-(೧೮-೩೦)

(೨೪.೧೧.೪೬)

ಕರ್ಮವನ್ನು ಮಾಡುವದು ಅವಶ್ಯವೆಂಬುದನ್ನು ಅನೇಕ ಕಾರಣಗಳಿಂದ ಸಿದ್ಧಪಡಿಸಿಕೊಟ್ಟ ಬಳಿಕ ಭಗವಂತನು, ಕರ್ಮವನ್ನು ಯಜ್ಞಾರ್ಥವಾಗಿ, ಎಂದರೆ ಪರಮೇಶ್ವರನ ಪ್ರೀತ್ಯರ್ಥವಾಗಿ ಮಾಡಿದರೆ ಬಂಧಕ್ಕೆ ಕಾರಣವಿರುವುದಿಲ್ಲವೆಂದೂ ಪರಮ ಪುರುಷಾರ್ಥಕ್ಕೆ ಕಾರಣವಾಗುವದೆಂದೂ ಪ್ರತಿಪಾದಿಸಿರುತ್ತಾನೆ. ಜ್ಞಾನನಿಷ್ಠೆಗೆ ತಕ್ಕವರಾಗುವದಕ್ಕೆ ಮುಮುಕ್ಷುಗಳಿಗೆ ಕರ್ಮವೇ ಬೇಕಾದದ್ದೆಂದು ಹೇಳಿರುತ್ತಾನೆ. ಕೃತಕೃತ್ಯರಾದ ಜ್ಞಾನಿಗಳು ಕೂಡ ಕರ್ಮವನ್ನು ಮಾಡುವ ಆಶ್ರಮದಲ್ಲಿದ್ದರೆ ಅದನ್ನು ಬಿಡದೆ ಮಾಡುತ್ತಾರೆ. ಅದರಿಂದ ಲೋಕಕ್ಕೆ ಕಲ್ಯಾಣವೇ ಆಗುವದೆಂದು ಈಗ ಪ್ರತಿಪಾದಿಸುವದಕ್ಕೆ ಹೊರಟಿರುತ್ತಾನೆ.

"ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ" ಜನಕನೇ ಮುಂತಾದವರು ಕರ್ಮದಿಂದಲೇ ಸಂಸಿದ್ಧಿಯನ್ನು ಹೊಂದಿದವರು ಎಂದು ಹೇಳಿರುವದು ಹಿಂದಿನ ಪ್ರಸಿದ್ಧರಾದ ರಾಜರುಗಳೂ ಕರ್ಮಸಂನ್ಯಾಸವನ್ನು ಮಾಡಬೇಕೆಂದು ಮನಸ್ಸು ಬಂದಾಗ ಕರ್ಮದ ಮಹತ್ತ್ವವನ್ನು ತಿಳಿದುಕೊಂಡು ಕರ್ಮವನ್ನೇ ಮಾಡುತ್ತಿದ್ದು ಅದರಿಂದಲೇ ಕ್ರಮಕ್ರಮವಾಗಿ ಜ್ಞಾನನಿಷ್ಠೆಯನ್ನು ಪಡೆದುಕೊಂಡರೆಂದು ತಿಳಿಸುವದಕ್ಕೆ. ಜನಕನು ಸಂನ್ಯಾಸಾಶ್ರಮವನ್ನು ಸ್ವೀಕರಿಸುವೆನೆಂದು ಹೊರಟಾಗ ಆತನ ಹೆಂಡತಿಯು ಕರ್ಮಯೋಗದ ಮಹತ್ತ್ವವನ್ನು ತಿಳಿಸಿ ಕ್ಷತ್ರಿಯನಾದ ಅವನಿಗೆ ಕರ್ಮವನ್ನು ಮಾಡುವದೇ ಶ್ರೇಯಸ್ಕರವೆಂದು ಬಿನ್ನವಿಸಿಕೊಂಡಳೆಂದೂ ರಾಜನು ಅದಕ್ಕೆ ಒಪ್ಪಿ ಸಂನ್ಯಾಸವನ್ನು ಸ್ವೀಕರಿಸದೆ ಕರ್ಮಯೋಗಿಯಾಗಿಯೇ ರಾಜ್ಯಭಾರವನ್ನು ಮಾಡುತ್ತಿದ್ದನು ಎಂದೂ ಒಂದು ಕಥೆಯನ್ನು ಭಾರತದಲ್ಲಿ ಬರೆದಿದೆ. ಆ ಕಥೆಯನ್ನು ಭಗವಂತನು ನೆನಪುಕೊಡುವದಕ್ಕಾಗಿ ಜನಕನ ಪರಾಮರ್ಶವನ್ನು ಮಾಡಿರುತ್ತಾನೆಂದು ಭಾವಿಸಿದರೆ ಕರ್ಮವೇ ನಿನಗೂ ಶ್ರೇಯಸ್ಸಿಗೆ ಸಾಧನವಾದ್ದರಿಂದ ನೀನೂ ಜನಕನಂತೆ ಅಸಕ್ತನಾಗಿ ಕರ್ಮಯೋಗವನ್ನು ಮಾಡು ಎಂದು ಹಿಂದೆ ಹೇಳಿದ್ದಕ್ಕೇ ಪುಷ್ಟಿಯನ್ನು ಕೊಡುವದಕ್ಕಾಗಿ ಈ ವಾಕ್ಯವು ಬಂದಿದೆ ಎಂದು ತಿಳಿಯಬಹುದಾಗಿದೆ. ಜನಕರಾಜನು ತತ್ತ್ವಜ್ಞಾನಿಯೇ ಆಗಿದ್ದರೂ ರಾಜ್ಯಭಾರವನ್ನು ವಹಿಸಿಕೊಂಡೇ ಕೆಲವು ಕಾಲ ಇರುತ್ತಿದ್ದನೆಂದೂ ಆಗ ಅವನ ಸಭೆಗೆ ಹಲವು ಜನ ತತ್ತ್ವವೇತ್ತರಾದ ಮಹರ್ಷಿಗಳು ಕೂಡ ಬಂದು ಅವನೊಡನೆ ತತ್ತ್ವವಿಚಾರವನ್ನು ಮಾಡುತ್ತಿದ್ದರೆಂದೂ ಭಾರತದಲ್ಲಿಯೇ ಉಲ್ಲೇಖವಿರುತ್ತದೆ. ಆ ವಿಷಯವನ್ನು ಇಲ್ಲಿ ಭಗವಂತನು ಪರಾಮರ್ಶಮಾಡಿರುತ್ತಾನೆಂದು ಭಾವಿಸಿದರೆ ಜ್ಞಾನಿಗಳಾದ ಜನಕಾದಿಗಳು ಕೂಡ ತಮಗೆ ಕರ್ಮದಿಂದ ಆಗಬೇಕಾದ ಪ್ರಯೋಜನವು ಯಾವದೊಂದೂ ಇಲ್ಲದಿದ್ದರೂ ಕರ್ಮವನ್ನು ಮಾಡಿಕೊಂಡೇ ಕೊನೆಗೆ ಮುಕ್ತಿಯನ್ನು ಪಡೆದರು. ಅವರು ಕರ್ಮಸಂನ್ಯಾಸವನ್ನು ಮಾಡಲೇ ಇಲ್ಲ; ಕರ್ಮವು ಅವರ ಜ್ಞಾನಕ್ಕೆ ಯಾವ ಬಗೆಯಿಂದಲೂ ಅಡ್ಡಿಯಾಗಲಿಲ್ಲ ಎಂಬುದು ಈ ವಾಕ್ಯದ ಅರ್ಥವೆಂದು ತಿಳಿಯಬೇಕಾಗುತ್ತದೆ.

ಈ ಎರಡನೆಯ ಅಭಿಪ್ರಾಯವನ್ನು ಮುಂದೆ "ಲೋಕಸಂಗ್ರಹವಾಗುವದೆಂಬುದನ್ನು ಕಂಡಾದರೂ ನೀನು ಕರ್ಮವನ್ನು ಮಾಡುವದು ಒಳ್ಳೆಯದು" ಎಂಬ ವಾಕ್ಯದಿಂದ ಭಗವಂತನು ಸ್ಫುಟಗೊಳಿಸಿರುತ್ತಾನೆ. ಇಲ್ಲಿ ಲೋಕಸಂಗ್ರಹವನ್ನು ಮಾಡುವ ಆಧಿಕಾರಿಕಪುರುಷರ ವಿಷಯವನ್ನು ಪ್ರಸ್ತಾಪಿಸಿರುತ್ತದೆ. ಒಂದು ಊರಿನಲ್ಲಿ ಜನರಲ್ಲಿ ಗಲಾಟೆಯೆದ್ದುಕೊಂಡರೆ ಸರ್ಕಾರದವರು ತುಂಟರಾದವರಲ್ಲಿ ಮುಖ್ಯರಾದವರನ್ನು ಲಾಕಪ್ಪಿಗೆ ಕೂಡಿಸಿ ಬೆದರಿಸುತ್ತಾರೆ. ಮತ್ತೆ ಕೆಲವರನ್ನು ಕರೆಯಿಸಿ,

"ನೀವುಗಳು ಊರಲ್ಲಿ ಗಲಭೆಯಾಗದಂತೆ ನೋಡಿಕೊಂಡು ಪೋಲೀಸಿನವರಿಗೆ ಸಹಾಯವನ್ನು ಮಾಡಿ" ಎಂದು ನಯವಾದ ಮಾತುಗಳಿಂದ ಬುದ್ಧಿವಾದವನ್ನು ಹೇಳುತ್ತಾರೆ. ನ್ಯಾಯಪಕ್ಷಪಾತಿಗಳಾಗಿ ನಾಗರಿಕರ ಹೊಣೆಗಾರಿಕೆಯನ್ನು ಅರಿತಿರುವ ಅಲ್ಪಸಂಖ್ಯೆಯ ಕೆಲವರನ್ನು ತಮ್ಮ ಅಂತರಂಗಕ್ಕೆ ಸೇರಿಸಿಕೊಂಡು ಜನರನ್ನು ಸಮಾಧಾನಗೊಳಿಸುವ ಕೆಲಸಕ್ಕೆ ಹತ್ತಿಸುತ್ತಾರೆ. ಅಲ್ಲವೆ? ಇದರಂತೆ ಪರಮೇಶ್ವರನ ರಾಜ್ಯಕ್ಕೆ ಸೇರಿದ ಪ್ರಜೆಗಳಲ್ಲಿ ಹಲವರು ತಾವು ಮಾಡುವ ಪುಣ್ಯಾಪಾಪಗಳ ಫಲವನ್ನು ಅನುಭವಿಸುವ ಬದ್ಧರಾಗಿರುತ್ತಾರೆ. ಮತ್ತೆ ಕೆಲವರು ಫಲಾಶೆಯಿಲ್ಲದೆ ಭಗವಂತನ ಪ್ರೀತಿಯಾಗಲೆಂದು ಕರ್ಮವನ್ನು ಮಾಡುವ ಕರ್ಮಯೋಗಿಗಳಾಗಿರುತ್ತಾರೆ. ಮತ್ತೆ ಕೆಲವರು ಮುಕ್ತರಾಗಿ ಕರ್ಮಫಲವನ್ನು ಸರ್ವಥಾ ಬಯಸದವರಾಗಿದ್ದರೂ ಜನರನ್ನು ಸನ್ಮಾರ್ಗಕ್ಕೆ ಹತ್ತುವಂತೆ ಮಾಡುವದಕ್ಕಾಗಿ ಭಗವಂತನು ಅವರನ್ನು ಕರ್ಮವನ್ನಾಚರಿಸುವ ಕೆಲಸಕ್ಕೆ ನಿಯೋಜಿಸುತ್ತಾನೆ. ಇಂಥವರೇ ಆಧಿಕಾರಿಕಪುರುಷರಾದ **ಜೀವನ್ಮುಕ್ತರು**. ಶ್ರುತಿ, ಸ್ಮೃತಿ - ಇವುಗಳಲ್ಲದೆ ಸದಾಚಾರವೂ ಧರ್ಮವನ್ನು ನಿರ್ಧರಿಸುವದಕ್ಕೆ ಸಾಧನವೆಂದು ಮನ್ವಾದಿಗಳು ಹೇಳಿರುವ ವಚನದಲ್ಲಿ ಸದಾಚಾರ ವೆಂದರೆ ಇಂಥ ಮಹಾತ್ಮರು ಮಾಡುವ ಆಚಾರವೇ ಆಗಿರುತ್ತದೆ. ಶ್ರೇಷ್ಠರಾದವರು ಯಾವ ಯಾವ ಆಚಾರವನ್ನು ಇಟ್ಟುಕೊಂಡಿರುವರೋ ಅದನ್ನು ಸಾಮಾನ್ಯಜನರು ಅನುಸರಿಸು ತ್ತಾರೆ. ಅವರು ಯಾವ ಧರ್ಮಾನುಷ್ಠಾನವನ್ನು ಪ್ರಮಾಣವೆನ್ನುವರೋ ಅದನ್ನೇ ಉಳಿದವರೂ ಪ್ರಮಾಣಯುಕ್ತವೆಂದು ಭಾವಿಸುತ್ತಾರೆ. ಆದ್ದರಿಂದಲೇ ಇಂಥ ಜ್ಞಾನಿಗಳು ಗೃಹಸ್ಥಾಶ್ರಮದಲ್ಲಿರುವಾಗ ತಮಗೆ ಕರ್ಮದಿಂದ ಯಾವದೊಂದು ಪ್ರಯೋಜನವೂ ಇಲ್ಲದಿದ್ದರೂ ಜನರಿಗೆ ಮಾದರಿಯಾಗಿರುವಂತೆ ಸತ್ಕರ್ಮವನ್ನೇ ಆಚರಿಸುತ್ತಿರುತ್ತಾರೆ. ಈ ಮಹಾತ್ಮರು ಯಾವದಾದರೊಂದು ಆಶೆಯಿಂದ ಅಥವಾ ಭಯದಿಂದ ಕರ್ಮವನ್ನು ಮಾಡುವದಿಲ್ಲ, ಅವರಿಗೆ ಯಾವದೊಂದು ಕರ್ತವ್ಯವೂ ಇರುವದಿಲ್ಲ. ಕರ್ಮವನ್ನು ಮಾಡುತ್ತಿರುವದೇ ಅವರಿಗೆ ಒಂದು ಬಗೆಯ ಆನಂದ ವಾಗಿರುತ್ತದೆ. ನಿಜವಾಗಿ ನೋಡಿದರೆ ಕರ್ಮದ ಪುಣ್ಯಫಲವನ್ನು ಅನುಭವಿಸುವ ವರೆಂದರೆ ಇಂಥ ಮಹಾಪುರುಷರೇ. "ಅಧ್ಯಾತ್ಮಜ್ಞಾನಿಯಲ್ಲದವನಿಗೆ ಕರ್ಮದ ಫಲವೇ ದೊರೆಯುವದಿಲ್ಲ" ಎಂಬ ಮನುಸ್ಮೃತಿಗೆ ಇದೇ ಅಭಿಪ್ರಾಯ. ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುವವರು ಇಂಥ ಮಹನೀಯರು. ಭಗವಂತನು ಅರ್ಜುನನಿಗೆ "ನೀನು ಮುಮುಕ್ಷುವಾದರೆ ಕರ್ಮಯೋಗವನ್ನು-ಫಲಾಶೆಯಾಗಲಿ ಸಂಗವಾಗಲಿ ಇಲ್ಲದೆ ಭಗವದರ್ಥವಾದ ಕರ್ಮವನ್ನು-ಮಾಡು; ಹಾಗಿಲ್ಲದೆ ನೀನು ಮುಕ್ತನಾಗಿದ್ದರೂ ನಿನಗೆ ಕರ್ಮಾಚರಣೆಯಿಂದ ಯಾವ ಅಡಚಣೆಯಿಲ್ಲದ್ದರಿಂದ

ಆಧಿಕಾರಿಕಪುರುಷರಂತೆ ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುತ್ತಿರು. ಯಾವ ದೃಷ್ಟಿಯಿಂದ ನೋಡಿದರೂ ಕರ್ಮವನ್ನು ಬಿಡುವೆನೆಂದು ಯೋಚಿಸುವದಕ್ಕೆ ಕಾರಣವಿಲ್ಲ" ಎಂದು ಉಪದೇಶಿಸಿರುತ್ತಾನೆ.

ಜ್ಞಾನಿಗಳು ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುವರೆಂದದ್ದರಿಂದ ಅವರು ಕರ್ಮವನ್ನು ಮಾಡುವವರಂತೆ ನಟಿಸುತ್ತಾರೆಂದು ಅರ್ಥವನ್ನು ಮಾಡಬಾರದು. ಅವರು ಎಲ್ಲರಂತೆಯೇ ಕರ್ಮವನ್ನು ಸಹಜವಾಗಿ ಮಾಡುವರು; ಶಾಸ್ತ್ರೋಕ್ತವಾದ ರೀತಿಯಲ್ಲಿಯೇ ಮಾಡುತ್ತಿರುವರು. ಆದರೆ ಅವರು ಮಾಡುವದು ಶಾಸ್ತ್ರವಿಧಿಗೆ ಕಟ್ಟುಬಿದ್ದಾಗಲಿ, ಅಥವಾ ಮಾಡದಿದ್ದರೆ ಆಗುವ ಪ್ರತ್ಯವಾಯಭಯದಿಂದಾಗಲಿ, ಮಾಡಿದರೆ ಆಗುವ ಫಲದ ಲೋಭದಿಂದಾಗಲಿ ಅಲ್ಲ. ಏಕೆಂದರೆ ಅವರ ದೃಷ್ಟಿಯಲ್ಲಿ ಕ್ರಿಯಾಕಾರಕಫಲವೆಲ್ಲವೂ ಪರಮಾತ್ಮಸ್ವರೂಪವೇ ಆಗಿರುತ್ತದೆ. ಜ್ಞಾನಿಗಳು ಕರ್ಮವನ್ನು ಮಾಡಿದರೂ ಆ ಕರ್ಮದ ಲೇಪವು ಅವರಿಗಿರುವದಿಲ್ಲ; ಅವರು ಎಂದಿಗೂ ಕರ್ಮವನ್ನು ಬಿಡದೆ ತಮ್ಮ ವರ್ಣಾಶ್ರಮಗಳಿಗೆ ತಕ್ಕಂತೆ ಆಚರಿಸುತ್ತಲೇ ಇರುವದು ಮಿಕ್ಕವರಿಗೆ ಆದರ್ಶವೂ ಆಗಿರುತ್ತದೆ. ಈ ವಿಷಯದಲ್ಲಿ ಸರ್ವಜ್ಞನೂ ನಿತ್ಯಶುದ್ಧಬುದ್ಧ ಮುಕ್ತಸ್ವಭಾವನೂ ಆದ ಭಗವಂತನ ಉದಾಹರಣೆಯನ್ನು ತೆಗೆದುಕೊಂಡರೆ ಈ ಕರ್ಮತತ್ತ್ವವು ಇನ್ನಷ್ಟು ಸ್ಫುಟವಾಗಿ ನಮಗೆ ಗೊತ್ತಾಗುವದು. ಭಗವಂತನಿಗೆ ಇಂಥದ್ದೊಂದು ಕರ್ಮವನ್ನು ಮಾಡಿಯೇ ತೀರಬೇಕೆಂದು ಯಾವ ಶಾಸ್ತ್ರದ ನಿರ್ಬಂಧವೂ ಇರುವದಿಲ್ಲ. ಆತನು ಮೊದಲೇ ಪಡೆಯದೆ ಇದ್ದು ಕರ್ಮಾಚರಣೆಯಿಂದ ಪಡೆದುಕೊಳ್ಳಬೇಕಾಗಿರುವದೆಂಬ ಫಲವು ಯಾವದೊಂದೂ ಇರುವದಿಲ್ಲ. ಆದರೂ ಆತನು ತನ್ನ ಅವತಾರಗಳಲ್ಲೆಲ್ಲ ಆಯಾ ವರ್ಣಾಶ್ರಮಾಚಾರದ ಕರ್ಮಗಳನ್ನು ನಿಯಮದಿಂದ ಆಚರಿಸಿ ಜನರಿಗೆ ತೋರಿಸಿರುತ್ತಾನೆ. ವಾಮನಾವತಾರದಲ್ಲಿ ಬ್ರಹ್ಮಚರ್ಯವನ್ನು ಪಾಲಿಸಿ ಲೋಕಕ್ಕೆಲ್ಲ ಮೇಲುಪಙ್ಕ್ತಿಯೆನಿಸಿಕೊಂಡಿರುತ್ತಾನೆ. ಕೃಷ್ಣಾವತಾರದಲ್ಲಿ ಕ್ಷತ್ರಿಯಕರ್ಮವನ್ನು ಆಚರಿಸಿ ಜನರಿಗೆ ಕರ್ತವ್ಯಕರ್ಮವನ್ನು ಬೋಧಿಸಿರುತ್ತಾನೆ. ಭಾರತಯುದ್ಧದಲ್ಲಿ ತಾನು ಭಾಗವನ್ನು ವಹಿಸುವದಿಲ್ಲವೆಂದು ಪ್ರತಿಜ್ಞೆಮಾಡಿ ಸಾರಥ್ಯವನ್ನು ಮಾತ್ರ ವಹಿಸಿದರೂ ಅಲ್ಲಿಯೂ ತನ್ನ ಕರ್ತವ್ಯವನ್ನು ಉತ್ತಮರೀತಿಯಿಂದ ಮಾಡಿ ತೋರಿಸಿರುತ್ತಾನೆ. ಅದರಂತೆ ನೀನೂ ಕರ್ಮಫಲದ ಸಂಬಂಧವಿಲ್ಲದೆಯೇ ಕರ್ಮವನ್ನು ಮಾಡು ಎಂದು ಅರ್ಜುನನಿಗೆ ಉಪದೇಶಿಸಿರುತ್ತಾನೆ.

ದೊಡ್ಡವರನ್ನು ಅನುಕರಿಸುವಾಗ ಅವರ ಮೇಲುಪಙ್ಕ್ತಿಯನ್ನು ನಾವು ಹೇಗೆ ಹಿಂಬಾಲಿಸಬೇಕೆಂಬುದರಲ್ಲಿ ಎಚ್ಚರಿಕೆಯಿರಬೇಕು. ಮಹಾತ್ಮರಾದವರು ಬೇರೆ ಬೇರೆಯ

ಸಂದರ್ಭಗಳಲ್ಲಿ ಹಾಗೆ ಏತಕ್ಕೆ ನಡೆದುಕೊಂಡರೆಂಬುದನ್ನು ನಿಶ್ಚಯಿಸುವದು ನಮ್ಮಂಥವರಿಗೆ ಕಷ್ಟವಾಗುತ್ತದೆ. ಅಂಥವರು ಏನಾದರೊಂದು ತಪ್ಪುಮಾಡಿದ್ದರೆ ಅದನ್ನು ಪ್ರಯತ್ನಮಾಡಿ ತಿದ್ದಿಕೊಂಡು ತಾವು ಸರಿಯಾದ ಮಾರ್ಗದಲ್ಲಿ ನಡೆದು ಇತರರಿಗೂ ತಿಳಿಸಿ ಸನ್ಮಾರ್ಗಕ್ಕೆ ಹತ್ತಿಸುವದರಿಂದ ಸುಪ್ರಸಿದ್ಧರಾಗಿರುತ್ತಾರೆ. ಇದನ್ನರಿಯದೆ ಅವರ ತಪ್ಪು ನಡತೆಯೆಂದು ನಿಶ್ಚಿತವಾದದ್ದನ್ನೆಲ್ಲ ನಾವೂ ಅನುಕರಿಸಹೋದರೆ ಅಂಧಾನುಕರಣವಾಗುತ್ತದೆ. ಒಬ್ಬ ಹೆಣ್ಣುಮಗಳು ತಪ್ಪುದಾರಿಯಲ್ಲಿ ಹೋದಾಗ ಅವಳ ತಾಯಿಗೆ "ಅಮ್ಮಾ, ಮಗಳನ್ನು ಸ್ವಲ್ಪ ನೋಡಿಕೊಳ್ಳಿ" ಎಂದು ನೆರೆಯವರು ಎಚ್ಚರಿಸಿದರು. ಆಕೆಯು "ಅಹಲ್ಯೆಯಂಥವರೂ ಹಾಗೆ ಮಾಡಿದ್ದಾರೆ, ನಮ್ಮ ಪಾಡೇನು?" ಎಂದು ಉತ್ತರವಿತ್ತಳು! ಅಹಲ್ಯೆಯು ಯಾವದೋ ಒಂದು ವಿಷಘಳಿಗೆಯಲ್ಲಿ ಧರ್ಮಚ್ಯುತಳಾದ್ದರಿಂದ ಈಗ ಪ್ರಾತಃಸ್ಮರಣೀಯಳಾಗಿಲ್ಲ. ಆಕೆಯು ಹಲವು ವರ್ಷಗಳವರೆಗೆ ಮಾಡಿದ ತಪಸ್ಸಿನಿಂದಲೂ ಭಗವಂತನ ಅನುಗ್ರಹಕ್ಕೆ ಪಾತ್ರಳಾದ ಕಾರಣದಿಂದಲೂ ಲೋಕಕ್ಕೆಲ್ಲ ಎಚ್ಚರಿಕೆಯನ್ನೂ ಮಾದರಿಯ ನಡತೆಯನ್ನೂ ತಿಳಿಸುವ ಮಹಾಮಹಿಮಳಾದಳು. ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುತ್ತಿರುವ ಮಹಾತ್ಮರನ್ನು ನಾವು ಯಾವ ಭಾಗದಲ್ಲಿ ಅನುಕರಿಸಬೇಕೆಂಬುದನ್ನು ಇಲ್ಲಿ ಸಂಕ್ಷೇಪ ವಾಗಿ ಹೇಳಿದರೆ, "ಅವರು ಹೇಗೆ ತಮ್ಮ ಜ್ಞಾನಬಲದಿಂದ ಕರ್ಮದ ಸಂಗವಾಗಲಿ ಫಲಭೋಗದ ಬಂಧವಾಗಲಿ ಇಲ್ಲದಂತೆ ಕರ್ಮನಿರತರಾಗುವರೋ ಹಾಗೆ ಮುಮುಕ್ಷು ಗಳಾದವರೂ ಪ್ರಯತ್ನಪೂರ್ವಕವಾಗಿ ಕರ್ಮಸಂಗವೂ ಫಲಾಭಿಸಂಧಿಯೂ ಇಲ್ಲದೆ ಕರ್ಮವನ್ನು ಮಾಡುತ್ತಿರಬೇಕು" ಎಂಬಿಷ್ಟರಲ್ಲಿ ಅಡಕವಾಗುತ್ತದೆ. ಭಗವಂತನು ನಿತ್ಯಮುಕ್ತನು, ಜ್ಞಾನಿಗಳು ಬುದ್ಧಮುಕ್ತರು; ಮುಮುಕ್ಷುಗಳಾದವರು ಅವರ ಮೇಲು ಪಙ್ಕ್ತಿಯನ್ನು ಎಲ್ಲಾ ವಿಷಯಗಳಲ್ಲಿಯೂ ಅನುಕರಿಸುವದು ಅಸಾಧ್ಯ. ಕರ್ಮಫಲದ ಅಂಟಿಲ್ಲದಂತೆ ಕರ್ಮವನ್ನು ಬಿಡದೆ ಮಾಡುತ್ತಿರುವದೆಂಬ ಒಂದಂಶದಲ್ಲಿ ಮಾತ್ರ ಕೃತಕೃತ್ಯರಾದ ಜ್ಞಾನಿಗಳನ್ನು ಅನುಕರಿಸುವದಕ್ಕೆ ಮುಮುಕ್ಷುಗಳು ಪ್ರಯತ್ನಿಸಬಹುದು. ಇದನ್ನು ತಿಳಿದು ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುವ ಜ್ಞಾನಿಗಳು ಭಗವಂತನಂತೆಯೇ ತಮ್ಮ ತಮ್ಮ ವರ್ಣಾಶ್ರಮದ ಕರ್ಮಗಳನ್ನು ತಪ್ಪದೆ ಸರಿಯಾಗಿ ಮಾಡುತ್ತಿರುವರು. ಆದ್ದರಿಂದಲೇ ಭಗವಂತನು "ನಾನು ಕರ್ಮವನ್ನು ಮಾಡದೆ ಬಿಟ್ಟರೆ, ಜನರೂ ನನ್ನನ್ನು ಅನುಸರಿಸಿ ಕರ್ಮವನ್ನು ಬಿಟ್ಟಾರು; ಆದ್ದರಿಂದ 'ಈ ಲೋಕವು ಹಾಳಾಗದೆ ಇರಲಿ, ವರ್ಣಾಶ್ರಮಧರ್ಮಗಳು ಸಂಕರವಾಗದೆ ಇರಲಿ' ಎಂಬ ಅಭಿಪ್ರಾಯದಿಂದ ಕರ್ಮವನ್ನು ಬಿಡದೆ ಮಾಡುತ್ತಲೇ ಇರುವೆನು" ಎಂದು

ಲೋಕಸಂಗ್ರಹವನ್ನು ಮಾಡುವ ಜ್ಞಾನಿಗಳು ಹೇಗೆ ನಡೆದುಕೊಳ್ಳುವರು ಎಂದರೆ ಅಜ್ಞಾನಿಗಳು ಕರ್ಮದಲ್ಲಿ ಹೇಗೆ ಸಕ್ತರಾಗಿ ಮಾಡುತ್ತಿರುವರೋ ಹಾಗೆಯೇ ತಾವೂ ಅಸಕ್ತರಾಗಿ ಮಾಡುತ್ತಿರುವರು. ಅವರು ಆತ್ಮಜ್ಞರಲ್ಲದವರಿಗೆ "ಕರ್ಮವು ಅವಿದ್ಯಾಕೃತವಾದ್ದರಿಂದ ಅದನ್ನು ಮಾಡತಕ್ಕದ್ದಲ್ಲ" ಎಂದು ಬೋಧಿಸಿ ಕರ್ಮ-ಬ್ರಹ್ಮ ಎರಡರಿಂದಲೂ ಭ್ರಷ್ಟರನ್ನಾಗಿ ಮಾಡುವ ಕೆಲಸಕ್ಕೆ ಕೈಹಾಕುವದಿಲ್ಲ. ತಾವೂ ಕರ್ಮವನ್ನೇ ಮಾಡುತ್ತಾ, ಎಲ್ಲರನ್ನೂ ಕರ್ಮಮಾರ್ಗದಲ್ಲಿ ಪ್ರವರ್ತಿಸುವಂತೆ ಪ್ರೇರಿಸುತ್ತಿರುವರು. ಕರ್ಮವೆಂಬುದೆಲ್ಲ ಸತ್ತ್ವ, ರಜಸ್ಸು, ತಮಸ್ಸು-ಎಂಬ ಪ್ರಕೃತಿಯ ಗುಣಗಳ ನಿಮಿತ್ತದಿಂದಲೇ ಆಗುತ್ತಿರುವದೇ ಹೊರತು ಆತ್ಮನಿಗೆ ಸೇರಿರುವ ದಿಲ್ಲ-ಎಂಬುದು ಆತ್ಮಜ್ಞಾನಿಗಳ ನಿಶ್ಚಯವಾಗಿರುತ್ತದೆ. ಆದರೆ ಇಂದ್ರಿಯರೂಪವಾಗಿರುವ ಗುಣಗಳೇ ವಿಷಯರೂಪವಾಗಿರುವ ಗುಣಗಳಲ್ಲಿ ಪ್ರವರ್ತಿಸುತ್ತಿರುತ್ತವೆ ಎಂದು ಅವರು ಬಲ್ಲರು. ಆದರೆ ಪ್ರಕೃತಿಯ ಗುಣಗಳ ಸಮ್ಮೋಹವನ್ನು ಹೊಂದಿರುವ ಜನರು ಗುಣಗಳ ಕರ್ಮದಲ್ಲಿ ಸಕ್ತರಾಗಿ ತಾವೇ ಕರ್ಮವನ್ನು ಮಾಡುತ್ತಿರುವೆವೆಂದು ಭಾವಿಸುವರು. ಗುಣಗಳನ್ನೂ ತಮ್ಮ ಸ್ವರೂಪವಾದ ಆತ್ಮನನ್ನೂ ವಿಂಗಡಿಸಿ ಅಸದ್ರೂಪವಾದ ಗುಣಗಳು ಮಾಡುವ ಕರ್ಮಕ್ಕೂ ತಮಗೂ ಸಂಬಂಧವಿಲ್ಲವೆಂಬ ತತ್ತ್ವವನ್ನು ಅರಿಯದೆ ಇರುವದರಿಂದ ಅವರ ಜ್ಞಾನವು ಅಸಂಪೂರ್ಣವಾಗಿರುತ್ತದೆ. ಜ್ಞಾನಿಯೊಬ್ಬನೇ ಸಂಪೂರ್ಣವಾದ ಜ್ಞಾನವುಳ್ಳವನು. ಆತ್ಮನನ್ನು ಆಯಾ ಇಂದ್ರಿಯ ಕರ್ಮಗಳಿಂದ ವಿಂಗಡಿಸದೆ, ನೋಡುತ್ತೇನೆ, ಕೇಳುತ್ತೇನೆ, ಮೂಸುತ್ತೇನೆ, ಮುಟ್ಟುತ್ತೇನೆ-ಎಂದು ಆಯಾ ಕರ್ಮವನ್ನು ಮಾಡುತ್ತಿರುವ ಸ್ವಭಾವವೇ ತನ್ನದೆಂದು ಅರಿಯುವದು ಆತ್ಮನನ್ನು ಸಂಕೋಚಪಡಿಸುವದರಿಂದ ಅಕೃತ್ಸ್ನಜ್ಞಾನವು, ಅಸಂಪೂರ್ಣಜ್ಞಾನವು. ಇಂದ್ರಿಯಕರ್ಮಗಳಿಂದ ಆತ್ಮನನ್ನು ಬಿಡಿಸಿಕೊಂಡು ಅಸಂಗನಾದ ಆತ್ಮನಿಗೆ ಯಾವ ಕರ್ಮವೂ ಇಲ್ಲವಾದ್ದರಿಂದ ನಾನು ನಿಜವಾಗಿ ಅಕರ್ತನು ಎಂದು ಅರಿತುಕೊಳ್ಳುವದು ಕೃತ್ಸ್ನಜ್ಞಾನವು, ಸಂಪೂರ್ಣಜ್ಞಾನವು. ಮುಮುಕ್ಷುಗಳಾದವರು ಅಕೃತ್ಸ್ನಜ್ಞಾನಿಗಳಾದರೂ ಕರ್ಮಯೋಗದ್ವಾರದಿಂದ ಮುಂದೆ ಪೂರ್ಣಜ್ಞಾನವನ್ನೇ ಪಡೆದುಕೊಳ್ಳಬಹುದಾದ್ದರಿಂದ ಜ್ಞಾನಿಗಳು ಅವರನ್ನು ಕರ್ಮಯೋಗದಲ್ಲಿ ತೊಡಗಿಸುವರೇ ಹೊರತು ಅಕಾಲದಲ್ಲಿ ಅವರಿಗೆ ತತ್ತ್ವಜ್ಞಾನವನ್ನು ಬೋಧಿಸಿ ಅವರ ಬುದ್ಧಿಯು ಸನ್ಮಾರ್ಗವನ್ನು ಬಿಟ್ಟು ಚಲಿಸುವಂತೆ ಮಾಡುವದಿಲ್ಲ.

ಆದರೆ ಕರ್ಮಯೋಗದಿಂದ ಚಿತ್ತಶುದ್ಧಿಯನ್ನು ಹೊಂದಿರುವ ಅಧಿಕಾರಿಗಳಿಗೆ ಅವರು ತತ್ತ್ವಜ್ಞಾನವನ್ನು ಉಪದೇಶಿಸುವದಕ್ಕೂ ಹಿಂಜರಿಯುವುದಿಲ್ಲ; ಅವರಿಗೆ ಮತ್ತೆ ಮತ್ತೆ ಉಪದೇಶಿಸಿಯಾದರೂ ಪರಮಾರ್ಥವನ್ನು ಮನಗಾಣಿಸುವರು.

ವಿಷ್ಣುಪುರಾಣದಲ್ಲಿ "ಅದ್ವೈತಪ್ರಕರಣ" ವೆಂಬ ಒಂದು ಭಾಗವು ಇರುತ್ತದೆ. ಅದರಲ್ಲಿ ಋಭುನಿದಾಘರ ಸಂವಾದವಿದೆ. ನಿದಾಘನೆಂಬ ಬ್ರಾಹ್ಮಣನು ಋಭುವಿಗೆ ಮೃಷ್ಟಾನ್ನವನ್ನು ಭೋಜನಮಾಡಿಸಿದ ಬಳಿಕ "ಮಹಾಸ್ವಾಮಿ, ತೃಪ್ತಿಯಾಯಿತೆ?" ಎಂದು ಕೇಳಲು ಋಭು "ಅಪ್ಪ, ಹಸಿವು ಯಾರಿಗೋ ಅವನು ಊಟಮಾಡುತ್ತಾನೆ; ಉಂಡವನಿಗೇ ಅಲ್ಲವೆ, ತೃಪ್ತಿಯಾಗುವದು?" ಎಂದು ಉತ್ತರವಿತ್ತನು. ಹಸಿವು ಬಾಯಾರಿಕೆ- ಮುಂತಾದವು ಆತ್ಮನ ಧರ್ಮಗಳಲ್ಲವೆಂಬುದನ್ನು ತಿಳಿಸಿ ಆತ್ಮಸ್ವರೂಪ ವನ್ನು ವಿಸ್ತಾರವಾಗಿ ಅಲ್ಲಿ ಋಭು ಹೇಳಿರುತ್ತಾನೆ. ಪ್ರಪಂಚವೆಲ್ಲವೂ ವಾಸುದೇವಮಯ ವಾಗಿರುವದೆಂಬುದನ್ನೂ ಪರಮಾರ್ಥದೃಷ್ಟಿಯಿಂದ ನೋಡಿದರೆ ಪರಮಾತ್ಮನಿಗಿಂತ ಬೇರೆಯಾಗಿ ಯಾವದೊಂದೂ ಇಲ್ಲವೆಂಬುದನ್ನೂ ವಿಸ್ತಾರವಾಗಿ ಪ್ರತಿಪಾದಿಸಿರುತ್ತಾನೆ.

ಇದಿರಲಿ, ಪ್ರಕೃತದಲ್ಲಿ ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುವ ಜ್ಞಾನಿಗಳ ವಿಚಾರವು ಏತಕ್ಕೆ ಬಂದಿದೆ ಎಂಬುದನ್ನು ನಾವು ವಿಮರ್ಶಿಸುವದು ಯುಕ್ತವಾಗಿರುತ್ತದೆ. ಅರ್ಜುನನು "ಕರ್ಮಕ್ಕಿಂತ ಜ್ಞಾನವೇ ಹೆಚ್ಚಿಂದಾದರೆ ನನ್ನನ್ನೇಕೆ ಘೋರವಾದ ಕರ್ಮದಲ್ಲಿ ತೊಡಗಿಸುತ್ತಿರುವೆ?" ಎಂದು ಪ್ರಶ್ನೆಮಾಡಿರುತ್ತಾನೆ. ಭಗವಂತನು ಮುಮುಕ್ಷುವಾದವನು ಕರ್ಮವನ್ನು ಮಾಡಲೇಬೇಕೆಂಬುದಕ್ಕೆ ಅನೇಕ ಕಾರಣಗಳನ್ನು ಹೇಳುವ ಪ್ರಸಂಗದಲ್ಲಿ ಈ ಲೋಕಸಂಗ್ರಹದ ವಿಚಾರವು ಬಂದಿರುತ್ತದೆ, ಇದೇನೂ ಜ್ಞಾನಪ್ರಕರಣವಲ್ಲ; ಆದ್ದರಿಂದ ಜ್ಞಾನಿಯು ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡಬೇಕು ಎಂದು ವಿಧಿಸುವ ಪ್ರಕರಣವಿದಲ್ಲ, ಜ್ಞಾನಿಗಳು ವಿಧಿಕಿಂಕರರಲ್ಲವಾದ್ದರಿಂದ ಅವರಿಗೆ "ಹೀಗೆ ಮಾಡಬೇಕು, ಹೀಗೆ ಮಾಡಬಾರದು"- ಎಂದು ಹೇಳುವದಕ್ಕೂ ಬರುವದಿಲ್ಲ. "ಅಜ್ಞರು ಮಾತ್ರ ಕರ್ಮದಿಂದ ಬದ್ಧರಾಗುತ್ತಾರೆ, ಜ್ಞಾನಿಗಳು ಕರ್ಮವನ್ನು ಮಾಡಿದರೂ ತತ್ತ್ವಜ್ಞಾನದ ಬಲದಿಂದ ನಿರ್ಲಿಪ್ತರಾಗಿರುತ್ತಾರೆ. ನೀನೂ ಜ್ಞಾನಿಗಳಂತೆ ಕರ್ಮಬಂಧವನ್ನು ಮೀರಲೆಳಸುವೆಯಾದರೆ ಈಗ ನಾನು ಹೇಳುವ ಕರ್ಮಯೋಗವನ್ನು ಮಾಡು. ಜ್ಞಾನಿಗಳು ಮಾಡುವ ಕರ್ಮವು ನಿನಗೆ ಮಾದರಿಯಾಗಲಿ; ಅವರಂತೆಯೇ ಕರ್ಮಸಂಗವಿಲ್ಲದೆ ಫಲಾಶೆಯಿಲ್ಲದೆ ಕರ್ಮವನ್ನು ಮಾಡಬೇಕು" ಎಂದು ಉಪದೇಶಿಸುವದೇ ಭಗವಂತನ ಉದ್ದೇಶವಾಗಿರುತ್ತದೆ.

ಆದ್ದರಿಂದಲೇ ಈಗ ಪ್ರಕೃತವಾದ ಕರ್ಮಯೋಗವನ್ನೇ ವಿಧಿಸುವದಕ್ಕೆ ಭಗವಂತನು ಹೊರಟಿರುತ್ತಾನೆ.

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥** (೩-೩೦)

ಕರ್ಮಯೋಗವನ್ನು ಹೇಗೆ ಮಾಡಬೇಕು? ನಿರಾಶಿಯಾಗಿ, ನಿರ್ಮಮನಾಗಿ ಮಾಡಬೇಕು; ಎಂದರೆ ಕರ್ಮದಲ್ಲಿ ನನ್ನದೆಂಬ ಸಂಗವಿಲ್ಲದೆ, ಫಲವು ಬೇಕೆಂಬ ಅಭಿಲಾಷೆಯಿಲ್ಲದೆ ಮಾಡಬೇಕು. ಅದಕ್ಕೆ ಉಪಾಯವೇನೆಂದರೆ, ಸರ್ವಕರ್ಮಗಳನ್ನೂ ಭಗವಂತನಲ್ಲಿ ಸಂನ್ಯಾಸಮಾಡಬೇಕು. "ನಾನು ಮಾಡುವ ಕರ್ಮವು ಯಾವದೂ ನನಗಾಗಿ ಫಲವನ್ನು ಸಂಪಾದಿಸಿಕೊಳ್ಳುವದಕ್ಕಲ್ಲ, ಇದೆಲ್ಲವೂ ಪರಮೇಶ್ವರನ ಆರಾಧನೆಗೆ"-ಎಂಬ ವಿವೇಕಬುದ್ಧಿಯನ್ನು ಅವಲಂಬಿಸಿ, ಗರ್ಭದಾಸನಾದವನು ಎಂದಿಗೂ ಯಾವ ಕರ್ಮದ ಲೇಪವೂ ಇಲ್ಲದಂತೆ ಇದು ಮಾಡತಕ್ಕದ್ದು ಎಂಬ ಬುದ್ಧಿಯಿಂದಲೇ ಹೇಗೆ ಮಾಡುವನೋ, ಮತ್ತು ತಾನು ಮಾಡುವದೆಲ್ಲವನ್ನೂ ಹೇಗೆ ಯಜಮಾನನಿಗೇ ಒಪ್ಪಿಸುತ್ತಾ ಬರುವನೋ, ಹಾಗೆಯೇ ಕರ್ಮಯೋಗಿಯೂ ಕರ್ಮವನ್ನು ಮಾಡುತ್ತಿರಬೇಕು. "ಅರ್ಜುನ, ನೀನು ನಿನ್ನ ಕರ್ಮವಾದ ಯುದ್ಧವನ್ನು ನಿನಗಾಗಿ, ನಿನ್ನ ಪ್ರಯೋಜನಕ್ಕಾಗಿ, ಮಾಡಬೇಡ; 'ಪರಮೇಶ್ವರನ ಕರ್ಮವಿದು' ಎಂದು ಮಾಡುತ್ತಿರು. ಮನೋವಾಕ್ಕಾಯಗಳಲ್ಲಿ ಯಾವ ಸಂತಾಪವನ್ನೂ ಹಚ್ಚಿಕೊಳ್ಳದೆ ವಿಗತಜ್ವರನಾಗಿ ಯುದ್ಧವನ್ನು ಮಾಡು. ಹಾಗಾದರೆ ನಿನಗೆ ಗೆಲವೂ ಆಗುವದು, ಕರ್ಮದ ಬಂಧವೂ ಇಲ್ಲ" ಎಂದು ಭಗವಂತನು ಉಪದೇಶಿಸಿರುತ್ತಾನೆ.

ಅರ್ಜುನನು ಕೇಳಿದ್ದು "ನನಗೆ ಕರ್ಮವೊ, ಜ್ಞಾನವೊ? ಜ್ಞಾನವನ್ನು ಹೊಗಳಿ ಕರ್ಮವನ್ನೇಕೆ ಮಾಡೆನ್ನುತ್ತಿ?" ಎಂಬುದು. ಭಗವಂತನು ಹೇಳಿದ್ದು "ನೀನು ಕರ್ಮವನ್ನು ಮಾಡಲೇಬೇಕು, ಯುದ್ಧವನ್ನು ಮಾಡಲೇಬೇಕು; ಆದರೆ ಕರ್ಮವನ್ನು ನಾನು ಹೇಳಿದಂತೆ ಕರ್ಮಯೋಗವನ್ನಾಗಿ ತಿರುಗಿಸಿಕೊಂಡು ಮಾಡಬೇಕು" ಎಂಬುದು. ಭಗವಂತನು ಹೇಳುತ್ತಿರುವದು ಬರಿಯ ಕರ್ಮವಲ್ಲ, ಕರ್ಮಯೋಗ-ಎಂಬುದನ್ನು ನಾವು ಇಲ್ಲಿ ಮರೆಯದೆ ಇರಬೇಕು.

## ೨೩. ಭಗವದರ್ಥಕರ್ಮ ೩-(೩೧-೩೫)

(೧.೧೨.೪೬)

"ಭಗವಂತನಲ್ಲಿ ಎಲ್ಲಾ ಕರ್ಮವನ್ನೂ ಸಂನ್ಯಾಸಮಾಡಿ, ನಿರಾಶಿಯಾಗಿ ನಿರ್ಮಮನಾಗಿ ಕರ್ತವ್ಯಕರ್ಮವನ್ನು ಮಾಡಬೇಕು." ನನ್ನ ಕರ್ಮ, ನನ್ನ ಫಲ-ಎಂಬ ಭಾವನೆಯನ್ನು ದೂರಮಾಡಬೇಕು. ಭೃತ್ಯನಂತೆ, ಯಂತ್ರದಂತೆ, ಕರ್ಮವನ್ನು

ಮಾಡುತ್ತಿರಬೇಕು. "ಎಲ್ಲವೂ ಭಗವಂತನದೇ, ನನ್ನದೇನೂ ಇಲ್ಲ" ಎನ್ನುತ್ತಿರಬೇಕು. ಇದೇ ಕರ್ಮಯೋಗದ ತಿರುಳು. ಗಡಿಯಾರದಲ್ಲಿ ಗಂಟೆಯ ಮಿನಿಟಿನ ಮುಳ್ಳುಗಳೂ ಸಣ್ಣಪುಟ್ಟ ಚಕ್ರಗಳೂ ಒಂದೇ ಸಮನೆ ವ್ಯವಸ್ಥೆಯಿಂದ ತಿರುಗುತ್ತಿರುತ್ತವೆಯಷ್ಟೆ. ಆದರೆ ಅವೇ ಸ್ವತಂತ್ರವಾಗಿ ತಿರುಗುತ್ತಿರುವವೇನು? ಇಲ್ಲ. ಒಳಗೆ ಇರುವ ಮೇನ್‌ಸ್ಪ್ರಿಂಗ್ ಎಂಬ ಚಾಲಕವಿಶೇಷವು ಅವುಗಳನ್ನು ಪ್ರೇರಿಸುತ್ತಿದೆ. ಹೀಗೆಯೇ ನಾನು ಮಾಡುತ್ತಿರುವ ಕರ್ಮವೆಲ್ಲ ಪರಮಾತ್ಮನೆಂಬ ಮೇನ್‌ಸ್ಪ್ರಿಂಗಿನ ಪ್ರೇರಣೆಯಿಂದ ನಡೆಯುತ್ತಿರುವದು. ಗಡಿಯಾರದಲ್ಲಿರುವ ಸ್ಪ್ರಿಂಗು ತಾನೂ ಕೆಲಸಮಾಡುತ್ತಿರುವದು; ಆದರೆ ನಾವು ಸರ್ವಕರಣಗಳಿಂದಲೂ ಮಾಡುತ್ತಿರುವ ಕೆಲಸಗಳು ಭಗವಂತನ ಸನ್ನಿಧಿಮಾತ್ರದಿಂದಲೇ ನಡೆಯುತ್ತಿರುವವು! ಭಗವಂತನು ಮಾಡಿಸುತ್ತಿರುವದು ಹೇಗೆ? ತನ್ನ ವ್ಯಾಪಾರದಿಂದಲೆ? ಅಲ್ಲ; ಕರ್ಮವನ್ನು ಮಾಡುವ ಜೀವರನ್ನು ಮಾಡುವಂತೆ ಪ್ರೇರಿಸುವಾತನು ಆತನೇ. ಆತನ ಪ್ರೇರಣೆಯಿಲ್ಲದೆ ಯಾವದೊಂದು ವ್ಯಾಪಾರವೂ ನಡೆಯುವಂತಿಲ್ಲ! ಆತನ ಪ್ರೇರಣೆಯಿಲ್ಲದೆ ಒಂದು ಹುಲ್ಲುಕಡ್ಡಿ ಕೂಡ ಅಲುಗಾಡಲಾರದು. ಗ್ರಹಗಳು ಎಡೆಬಿಡದೆ ಒಂದು ಕ್ರಮದಿಂದ ತಿರುಗುತ್ತಿರುವವು ಎಂದು ಜ್ಯೋತಿಃಶಾಸ್ತ್ರದಲ್ಲಿ ಹೇಳಿರುತ್ತದೆ; ಆದರೆ ಅವು ತಿರುಗುವದಕ್ಕೆ ಮೂಲ ಕಾರಣವು ಯಾವದು? ಭಗವಂತನ ಪ್ರೇರಣೆ. ಗ್ರಹಗಳು ಏಕಾದಶಸ್ಥಾನದಲ್ಲಿದ್ದರೆ ಒಳ್ಳೆಯ ಫಲವನ್ನು ಕೊಡುವವೆಂದು ಫಲಜ್ಯೋತಿಷದಲ್ಲಿದೆ, ಆದರೆ ಭಗವಂತನ ಅನುಗ್ರಹವಾದರೆ ಎಲ್ಲಾ ಗ್ರಹಗಳೂ ಇದ್ದಲ್ಲಿಯೇ ಇದ್ದು ಏಕಾದಶಸ್ಥಾನದ ಫಲವನ್ನೇ ಕೊಡುವವು! ಈ ಭಾವನೆಯಿಂದ ಕರ್ಮವನ್ನು ಮಾಡಿದರೆ ಭಗವಂತನಲ್ಲಿ ಸರ್ವಕರ್ಮಗಳನ್ನೂ ಸಂನ್ಯಾಸಮಾಡಿದಂತೆ ಆಯಿತು.

'ಸಂನ್ಯಸ್ಯ' ಎಂಬ ಮಾತಿಗೆ 'ಚೆನ್ನಾಗಿ ಇಟ್ಟು' ಎಂದರ್ಥ. ಭಗವಂತನಲ್ಲಿ ಕರ್ಮಗಳನ್ನು ಚೆನ್ನಾಗಿ ಇಡಬೇಕು. ಈಗ ನಾವು ಈ ಕರ್ಮವು ನನ್ನದು- ಎಂಬ ಅಭಿಮಾನವನ್ನು ಹೊಂದಿ ಕರ್ಮದ ಫಲವಾಗಿ ಒಳ್ಳೆಯ ಕೆಟ್ಟ ಜನ್ಮಗಳನ್ನು ಪಡೆಯುತ್ತಾ ಸಂಸಾರದಲ್ಲಿ ತೊಳಲುತ್ತಿರುವೆವು. 'ಮಯಿ ಸಂನ್ಯಸ್ಯ' ನನ್ನಲ್ಲಿ ಕರ್ಮವನ್ನು ಇಟ್ಟು ಮಾಡು; ನಿನ್ನಲ್ಲಿ ಭ್ರಾಂತಿಯಿಂದ ಇಟ್ಟುಕೊಂಡು 'ಅಧ್ಯಸ್ಯ' ಮಾಡಬೇಡ ಎಂದು ಭಗವಂತನು ಉಪದೇಶಿಸಿರುತ್ತಾನೆ. ನಮ್ಮವಲ್ಲದ ಕರ್ಮಗಳನ್ನು ನಮ್ಮವೆಂದು ಭ್ರಾಂತಿಯಿಂದ ತಿಳಿದುಕೊಂಡು ನಾವು ಕರ್ಮವನ್ನು ಮಾಡುತ್ತಿರುವೆವು. ಈ ಭ್ರಾಂತಿಯನ್ನು ಸಂಪೂರ್ಣವಾಗಿ ತೊಡೆದುಹಾಕಿ ಕರ್ಮಗಳಿಗೆಲ್ಲ ಪ್ರೇರಕನು, ಮೂಲಸ್ಥಾನವು, ಭಗವಂತನು-ಎಂದು ಅವುಗಳನ್ನು ಆತನಲ್ಲಿಯೇ ವಿವೇಕದಿಂದ ಇಡಬೇಕು.

ಇದಲ್ಲದೆ ಈಗ ನಾವು ಬಹಿಶ್ಚಿತ್ತರಾಗಿರುವೆವು, ಹೊರಗಿನ ವಿಷಯಗಳನ್ನೇ ಚಿಂತಿಸುತ್ತಿರುವೆವು. ಗುಣಮಯವಾದ ಹೊರಗಿನ ನಾಟಕದ ಪಾತ್ರಗಳನ್ನೇ ನೋಡುತ್ತಾ ಕಾಲಹಾಕುತ್ತಿರುವೆವು. ಈ ಹೊರಮುಖವನ್ನು ತಿರುಗಿಸಿ ಅಧ್ಯಾತ್ಮಚಿತ್ತರಾಗಬೇಕು. ಒಳಮುಖರಾಗಿ, ಈ ಗುಣಮಯನಾಟಕವೆಲ್ಲವೂ ಭಗವಂತನ ಲೀಲೆ ಎಂದು ಅರಿತುಕೊಳ್ಳಬೇಕು. ಆಗ ನಮಗೆ ಕರ್ಮದಲ್ಲಿ ನನ್ನದೆಂಬ ಅಭಿಮಾನವಾಗಲಿ, ನನಗೆ ಫಲವು ಆಗಬೇಕೆಂಬ ಆಶೆಯಾಗಲಿ, ಇರುವದಿಲ್ಲ. ವ್ಯವಹಾರವು ನಮಗೆ ಭಾರ ವಾಗುವದಿಲ್ಲ. ಎಲ್ಲವನ್ನೂ ಭಗವಂತನೇ ನೆರವೇರಿಸುತ್ತಿರುವನೆಂಬ ಭಾವನೆಯಿಂದ ನಿಶ್ಚಿಂತರಾಗಿ ವಿಗತಜ್ವರರಾಗಿ ಅಂತಃಕರಣದಲ್ಲಿ ಕೋಪತಾಪಗಳು ಯಾವವೂ ಇಲ್ಲದೆ, ಶಾಂತರಾಗಿ ಕರ್ಮವನ್ನು ಮಾಡುವದಕ್ಕೆ ಯೋಗ್ಯರಾಗುವೆವು.

ಈ ಅಭಿಪ್ರಾಯವನ್ನು ಭಗವಂತನು ಅರ್ಜುನನಿಗೆ ಹೇಳಿರುತ್ತಾನೆ. ಆದ್ದರಿಂದ ನಾವು ಸ್ವಲ್ಪವೂ ಹಿಂದುಮುಂದೆ ನೋಡದೆ ನಂಬಿ ಇದರಂತೆ ನಡೆಯುವದಕ್ಕೆ ಮೊದಲುಮಾಡಬೇಕು. ಭಗವಂತನಲ್ಲಿ ತೆರಪಿಲ್ಲದೆ ಶ್ರದ್ಧೆಯಿರಬೇಕು. ಅಂಧಶ್ರದ್ಧೆ ಯಾದರೂ ಚಿಂತೆಯಿಲ್ಲ, ಅಸೂಯೆಯಿರಬಾರದು. "ಶ್ರೀಕೃಷ್ಣನು ದ್ವಾಪರಯುಗದಲ್ಲಿ ಅರ್ಜುನನಿಗೆ ಯುದ್ಧಕಾಲದಲ್ಲಿ ಹೇಳಿದ್ದು ಇದು! ಈಗಿನ ನವನಾಗರಿಕತೆಯ ನಮ್ಮಗಳಿಗೆ ಏನು ಬೇಕೆಂಬುದನ್ನು ಅವನು ಹೇಗೆ ಬಲ್ಲನು?" ಎಂಬ ಕುತ್ಸಿತ ಬುದ್ಧಿಯಿರಬಾರದು. ದೊಡ್ಡವರಲ್ಲಿ ಅಸೂಯೆಯಿರುವದು ಬಹಳ ಅಪಾಯಕರವು. ಕೆಲವು ವರ್ಷಗಳ ಹಿಂದೆ ಒಬ್ಬ ಸಾಧುಗಳಿದ್ದರು. ಅವರು ಭಜನೆಮಾಡುತ್ತಿದ್ದದ್ದನ್ನು ಕಂಡು ನಾಸ್ತಿಕಭಾವದಿಂದ ಒಬ್ಬನು "ಭಗವಂತನಿಗೆ ಕಿವಿ ಕೇಳದೇನು? ಇಷ್ಟು ಗಟ್ಟಿಯಾಗಿ ಏತಕ್ಕೆ ಕೂಗಬೇಕು?" ಎಂದು ಹಾಸ್ಯಮಾಡಿದನು. ಅವರು "ನಮ್ಮ ಭಜನೆಯು ನಮ್ಮ ಆರ್ತಸ್ಥಿತಿಯನ್ನೂ ಭಕ್ತಿಯನ್ನೂ ಸೂಚಿಸುವದಲ್ಲದೆ ಭಗವಂತನ ಕಿವುಡುತನಕ್ಕೇನೂ ಗುರುತಲ್ಲ" ಎಂದು ಸಮಾಧಾನವನ್ನು ಹೇಳಿದರೂ ಆ ಅವಿವೇಕಿಯು ಮತ್ತೆ ಮತ್ತೆ ಅಪಹಾಸ್ಯವಾಗಿ ಮಾತಾಡುತ್ತಲೇ ಇದ್ದನು. ಭಗವಂತನಲ್ಲಿದ್ದ ಅವನ ಅಸೂಯಾಗುಣವನ್ನು ತಾಳಲಾರದೆ ಆ ಸಾಧುಗಳು, "ಛೇ ಹುಚ್ಚ! ಹಾಗಲ್ಲ. ನೀನು ಕೃತಾರ್ಥನಾಗಬೇಕಂದಿದ್ದರೆ, ಭಜನೆಮಾಡು; ಇಲ್ಲದಿದ್ದರೆ ಬಿಡು" ಎಂದು ಸ್ವಲ್ಪ ಬಿರುಸಾಗಿ ಮಾತನಾಡಿದರು. ದೊಡ್ಡವರ ಮನಸ್ಸಿಗೆ ಸಂತಾಪವನ್ನುಂಟು ಮಾಡಿದ್ದರ ಫಲವಾಗಿ ಮುಂದೆ ಆತನಿಗೆ ಹುಚ್ಚೇ ಹಿಡಿದುಬಿಟ್ಟಿತು! ದಿವ್ಯಜ್ಞಾನವು ಬರುವದಂತಿರಲಿ, ಲೌಕಿಕಜ್ಞಾನವೂ ಹೋಯಿತು!" ಯಾರು ನನ್ನ ಮತವನ್ನು ಅನುಷ್ಠಾನ ಮಾಡುವರೋ ಅವರು ಮುಕ್ತರಾಗುವರು; ಆದರೆ ಯಾರು ಅಸೂಯೆ ಯಿಂದ ಈ ನನ್ನ ಅಭಿಪ್ರಾಯದಂತೆ ನಡೆಯದೆ ಇರುವರೋ ಅವರು ಯಾವ

ಜ್ಞಾನವೂ ಇಲ್ಲದ ಮೂಢರಾಗುವರೆಂದು ತಿಳಿ” ಎಂಬ ಭಗವಂತನ ವಾಕ್ಯದ ಅಭಿಪ್ರಾಯವನ್ನು ಚೆನ್ನಾಗಿ ಮನಸ್ಸಿಗೆ ತಂದುಕೊಂಡು ನಾವುಗಳೂ ಶ್ರದ್ಧೆಯಿಂದ ಕರ್ಮಯೋಗವನ್ನು ಮಾಡುವದಕ್ಕೆ ಕೈಹಾಕಬೇಕು.

ಭಗವಂತನಲ್ಲಾಗಲಿ ಭಗವದ್ಭಕ್ತರಲ್ಲಾಗಲಿ ಮಾಡಿದ ಅಪರಾಧವು ತಪ್ಪದೆ ದುಷ್ಫಲವನ್ನು ಕೊಡುತ್ತದೆ. ದೊಡ್ಡವರನ್ನು ಬಯ್ದರೆ ಅದರಿಂದ ಅವರಿಗೇನೂ ಆಗಲಾರದು; ಏಕೆಂದರೆ ದೊಡ್ಡವರು ಯಾವಾಗಲೂ ಸ್ತುತಿನಿಂದೆಗಳನ್ನು ಮೀರಿರುತ್ತಾರೆ. ವಿಳಾಸವು ಸರಿಯಾಗಿಲ್ಲದ ಕಾಗದವನ್ನು ಟಪ್ಪಾಲು ಇಲಾಖೆಯವರು “ವಿಳಾಸದಾರರು ಪತ್ತೆಯಾಗಲಿಲ್ಲ” ಎಂದು ಷರಾ ಬರೆದು ಕಾಗದವನ್ನು ಬರೆದವರಿಗೇ ಹಿಂತಿರುಗಿಸಿ ಕೊಡುತ್ತಾರೆ; ವಿಳಾಸದಾರರು 'ನಮಗೆ ಈ ಕಾಗದವು ಅವಶ್ಯವಿಲ್ಲ' ಎಂದು ಬರೆದು ಹಿಂತಿರುಗಿಸಿದರೂ ಹೀಗೆಯೇ ಬರೆದ ಕಾಗದವು ಬರೆದವನಿಗೇ ಬಂದುಬಿಡುತ್ತದೆ. ಇದರಂತೆ ಭಗವದ್ಭಕ್ತರಲ್ಲಿಯೂ ಅಸೂಯೆಯನ್ನು ತೋರಿಸಿದ್ದರ ಫಲವಾಗಿ ಹಾಗೆ ತೋರಿಸಿದವರಿಗೇ ಇಹಪರದಲ್ಲಿ ಜ್ಞಾನದ ಲಾಭವು ಇಲ್ಲದೆ ಹೋಗುತ್ತದೆ. ಆದರೆ ಭಗವಂತನಲ್ಲಿಯೂ ಭಗವದ್ಭಕ್ತರಲ್ಲಿಯೂ ಶ್ರದ್ಧಾಭಕ್ತಿಗಳನ್ನಿಟ್ಟುಕೊಂಡು ಸನ್ಮಾರ್ಗವನ್ನು ಅವಲಂಬಿಸುವವರಿಗೆ ಕರ್ಮಯೋಗವು ಅಳವಡುತ್ತದೆ. ಚಿತ್ತವು ಶುದ್ಧಿಯಾಗುತ್ತದೆ, ಜ್ಞಾನನಿಷ್ಠೆಗೆ ಬೇಕಾದ ಯೋಗ್ಯತೆಯೂ ಉಂಟಾಗುತ್ತದೆ.

ಹೀಗಿದ್ದರೂ ಲೋಕದಲ್ಲಿ ಭಗವಂತನ ಮತವನ್ನು ಅನುಸರಿಸದೆ ಉನ್ಮಾರ್ಗದಲ್ಲಿ ಹೋಗುವವರೇ ಬಹಳ. ಇದೇಕೆಂದರೆ ಜೀವರುಗಳು ತಮ್ಮ ತಮ್ಮ ಪ್ರಕೃತಿಯನ್ನೇ ಅನುಸರಿಸುತ್ತಾರೆ. ಅಲಸರೂ ವಿಷಯಾಸ್ತಕರೂ ಆಗಿರುವವರು ಹಲವು ಮಂದಿ ಇರುತ್ತಾರೆ. ಅವರಿಗೆ ಭಗವಂತನ ವಿಷಯವೇ ತಿಳಿಯದು; ಅವರ ವ್ಯವಹಾರದ ಅಂಗಡಿಯಲ್ಲಿ ಭಗವಂತನ ಖಾತೆಯೇ ಇರುವದಿಲ್ಲ. ಇನ್ನು ಕೆಲವರು ಶಾಸ್ತ್ರೋಕ್ತಕರ್ಮ ಗಳನ್ನು ಮಾಡುವರಾದರೂ ಫಲಾಸಕ್ತರಾಗಿರುತ್ತಾರೆ; ಆದ್ದರಿಂದ ಅವರಿಗೂ ಭಗವಂತನು ಉಪದೇಶಿಸಿರುವ ಕರ್ಮಯೋಗವು ರುಚಿಸುವದಿಲ್ಲ. ಆದ್ದರಿಂದ ಜನರು ತಮ್ಮ ಮನಸ್ಸಿನ ಒಲವನ್ನು ಅನುಸರಿಸುವರೇ ಹೊರತು ಭಗವಂತನ ಕಡೆಗೆ ತಿರುಗುವದಿಲ್ಲ. ಸಾಮಾನ್ಯರ ಸ್ವಭಾವವೇ ಹೀಗೆ. ಹೀಗಿರುವದರಿಂದ ಶಾಸ್ತ್ರದ ವಿಧಿಯಾಗಲಿ, ಭಗವಂತನ ಅಥವಾ ದೊಡ್ಡವರ ನಿಗ್ರಹವಾಗಲಿ ಏನೂ ಮಾಡಲಾರದು. ಸಾಮಾನ್ಯ ಜನರು ತಮ್ಮ ಇಂದ್ರಿಯಗಳನ್ನು ತಡೆದುಕೊಂಡು ಕರ್ಮಯೋಗವನ್ನು ಮಾಡೋಣ ವೆಂದು ಹೊರಟರೂ ಪ್ರಕೃತಿಯು ಅವರನ್ನು ವಿಷಯಗಳ ಕಡೆಗೇ ಜಗ್ಗಿಬಿಡುತ್ತದೆ. ಅವರು ಸ್ವಧರ್ಮವನ್ನು ಬಿಟ್ಟು ಪರಧರ್ಮವನ್ನು ಅಥವಾ ಅಧರ್ಮವನ್ನು

ಮಾಡಿಯಾದರೂ ಇಂದ್ರಿಯಾರ್ಥಗಳನ್ನು ಸಂಪಾದಿಸಿಕೊಳ್ಳುವದಕ್ಕೆ ಪರವಶರಾಗಿಯೇ ಯತ್ನಿಸುತ್ತಾರೆ.

"ನಿಗ್ರಹದಿಂದ ಏನೂ ಪ್ರಯೋಜನವಿಲ್ಲ. ನಮ್ಮ ನಮ್ಮ ಪ್ರಕೃತಿಯು ನಾವು ಒಲ್ಲೆವೆಂದರೂ ಮಾಡಬಾರದ ಕರ್ಮವನ್ನು ಮಾಡಿಸಿಯೇ ಬಿಡುತ್ತದೆ. ಇದೆಲ್ಲ ವಿಧಿವಿಲಾಸವು" ಎಂದು ದೈವವಾದವನ್ನು ಅವಲಂಬಿಸಿ ಕೈಗಳನ್ನು ಮುದುರಿಕೊಂಡು ಒಂದು ಕಡೆ ಕುಳಿತುಬಿಡಲೆಂದು ಭಗವಂತನು ಇಲ್ಲಿ ಹೇಳುತ್ತಲಿಲ್ಲ. ಆದ್ದರಿಂದಲೇ ಆತನು ಈ ಮಾತನ್ನು ಆಡಿರುತ್ತಾನೆ:

**ಇಂದ್ರಿಯಸ್ಯೇನ್ದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪನ್ಥಿನೌ ॥** (೩-೩೪)

ಪ್ರತಿಯೊಂದು ಇಂದ್ರಿಯಕ್ಕೂ ತನ್ನ ತನ್ನ ವಿಷಯದಲ್ಲಿ ರಾಗದ್ವೇಷಗಳು ಸಹಜವಾಗಿಯೇ ವ್ಯವಸ್ಥಿತವಾಗಿರುತ್ತವೆ. ಆದರೆ ವಿವೇಕಿಯಾದವನು ಆ ರಾಗ ದ್ವೇಷಗಳಿಗೆ ತಾನು ವಶನಾಗಬಾರದು. ಪ್ರಕೃತಿಯು ನಮ್ಮನ್ನು ಎಳೆಯುವದು ಸಹಜವಾಗಿರುತ್ತದೆ; ಆದರೆ ಅದನ್ನು ವಶಪಡಿಸಿಕೊಳ್ಳುವದಕ್ಕೆ ಪ್ರಯತ್ನಮಾಡುವದು ನಮ್ಮ ಕರ್ತವ್ಯ. ಪ್ರಕೃತಿಯನ್ನು ಹೀಗೆ ವಶಪಡಿಸಿಕೊಳ್ಳುವದೇ ಕರ್ಮಯೋಗದ ಮೊದಲನೆಯ ಕೆಲಸ.

ಪ್ರಕೃತಿಯನ್ನು ವಶಪಡಿಸಿಕೊಳ್ಳುವೆನೆಂದು ಯಾವದಾದರೊಂದು ಕರ್ಮವನ್ನು ಮಾಡಿದರೆ ಆಗುವದಿಲ್ಲ; ತನ್ನ ಧರ್ಮವು ವಿಗುಣವಾಗಿದ್ದರೂ ಅದರಲ್ಲಿ ಸ್ವಲ್ಪ ದೋಷವಿದ್ದರೂ ಚಿಂತೆಯಿಲ್ಲ, ಅದನ್ನೇ ಮಾಡಬೇಕು.

(ಇಲ್ಲಿ ಒಬ್ಬರು ಸಭಿಕರು ಒಂದು ಪ್ರಶ್ನೆಯನ್ನು ಮಾಡಿದರು: ಸ್ವಧರ್ಮವೆಂದರೇನು? ವರ್ಣಾಶ್ರಮವೊ, ಅಥವಾ ಅವರವರು ಕೈಗೊಂಡ ಕರ್ಮವೊ?)

ಗೀತೆಯು ವೇದಾರ್ಥವನ್ನು ವಿವರಿಸುವದಕ್ಕೆ ಬಂದಿರುತ್ತದೆ. ಆದ್ದರಿಂದ ಇಲ್ಲಿ ಕರ್ಮವೆಂದರೆ ಶಾಸ್ತ್ರದಲ್ಲಿ ಹೇಳಿರುವ ಕರ್ಮವೇ; ಸ್ವಧರ್ಮವೆಂದರೆ ಶಾಸ್ತ್ರದಲ್ಲಿ ಹೇಳಿರುವ ಸ್ವಧರ್ಮವೇ ಸರಿ. ಲೌಕಿಕಕರ್ಮವಾಗಲಿ ಲೌಕಿಕಜ್ಞಾನವಾಗಲಿ ಇಲ್ಲಿ ಪ್ರತಿಪಾದ್ಯವಾದ ವಿಷಯವಲ್ಲ. ಅದು ಮೃತ್ಯು, ಅಲ್ಪಫಲವನ್ನು ಕೊಡತಕ್ಕದ್ದು-ಎಂದು ವೇದದಲ್ಲಿ ಹೇಳಿರುತ್ತದೆ. ಶಾಸ್ತ್ರದಲ್ಲಿ ಹೇಳಿರುವ ಕರ್ಮವು ಅಮೃತವಾಗಿರುತ್ತದೆ. ಸ್ವಧರ್ಮವು ಎಂದರೆ ತನ್ನ ಧರ್ಮವು. ಉಸಿರಾಡುವದು ತನ್ನ ಧರ್ಮವಾದರೂ ಅದು ಈ ಅರ್ಥದಲ್ಲಿ ಸ್ವಧರ್ಮವಲ್ಲ; ಏಕೆಂದರೆ ಅದನ್ನು ಶಾಸ್ತ್ರವು ಹೊಸದಾಗಿ ಹೇಳಿಕೊಡಬೇಕಾದದ್ದೇನೂ ಇರುವದಿಲ್ಲ. ಶಾಸ್ತ್ರದಲ್ಲಿ ಕೆಲವು ಕರ್ಮಗಳನ್ನು ವಿಧಿಸಿರುತ್ತದೆ, ಮತ್ತೆ ಕೆಲವನ್ನು ನಿಷೇಧಿಸಿರುತ್ತದೆ. ಸರ್ವಥಾ ಆಗದೆ ಇರುವ ಕರ್ಮವನ್ನು

ಶಾಸ್ತ್ರವು ಹೇಳುವದಿಲ್ಲ. ಅನೇಕರು ಶಾಸ್ತ್ರದಲ್ಲಿ ಹೇಳಿರುವ ವರ್ಣಾಶ್ರಮಧರ್ಮವನ್ನು ಈಗ ಅನುಸರಿಸುವದಕ್ಕೆ ಬರುವದಿಲ್ಲವಾದ್ದರಿಂದ ಕಾಲಕ್ಕೆ ತಕ್ಕಂತೆ ವರ್ತಿಸಬೇಕು. ಈಗ ಬ್ರಾಹ್ಮಣಾದಿಗಳು ತಮ್ಮ ತಮ್ಮ ಧರ್ಮವನ್ನು ಅನುಸರಿಸುವದಕ್ಕೆ ಸಾಧ್ಯವಿಲ್ಲ; ಆದ್ದರಿಂದ ಏನಾದರೊಂದು ಉದ್ಯೋಗವನ್ನು ಕೈಗೊಳ್ಳಬೇಕು-ಎನ್ನುವರು. ಆದರೆ ಅದು ಶಾಸ್ತ್ರೀಯವಾಗಲಾರದು. ಅತೀಂದ್ರಿಯವಾದ ಫಲವಿರುವ ಕರ್ಮಗಳನ್ನು ಶಾಸ್ತ್ರವು ವಿಧಿಸಿರುತ್ತದೆ. ಶಾಸ್ತ್ರದಲ್ಲಿ ಶ್ರದ್ಧೆಯಿಟ್ಟು ಮಾಡಿಯೇ ಅದರ ಫಲವನ್ನು ನಾವು ಅನುಭವಿಸಬೇಕಾಗಿದೆ. ದೃಷ್ಟಫಲವುಳ್ಳ ವೈದ್ಯಶಾಸ್ತ್ರದಂಥ ಶಾಸ್ತ್ರದಲ್ಲಿಕೂಡ ಶ್ರದ್ಧೆಯು ಅವಶ್ಯವಾಗುತ್ತದೆ. ರಕ್ತವರ್ಧಕವಾದ ಔಷಧಿಯನ್ನು ವೈದ್ಯನು ಕೊಟ್ಟರೆ, ಇದರಲ್ಲಿ ರಕ್ತವಿಲ್ಲವಲ್ಲ!- ಎಂದು ಶಂಕಿಸುವದಕ್ಕೆ ಆಗುವದಿಲ್ಲ; ಕುಡಿದು ಪರೀಕ್ಷಿಸಿ ನೋಡ ಬೇಕಾಗುತ್ತದೆ. ಒಂದಾನೊಂದು ಬೀಜವನ್ನು ಬಿತ್ತಿದರೆ ಕೆಂಪಾಗಿರುವ ದೊಡ್ಡ ಹೂವು ಬಿಡುತ್ತದೆ ಎಂದು ತೋಟಗಾರನು ಕೊಟ್ಟರೆ 'ಈ ಬೀಜದಲ್ಲಿ ಕೆಂಪು ಹೂ ಬಿಡುವ ಲಕ್ಷಣವು ತೋರುವದಿಲ್ಲವಲ್ಲ!' ಎಂದು ಸಂಶಯಪಡುವದು ಸರಿಯಾಗು ವದಿಲ್ಲ. ಅದನ್ನು ಬಿತ್ತಿ ಗೊಬ್ಬರವನ್ನು ಹಾಕಿ ನೀರೆರೆದೇ ನೋಡಬೇಕು. ಲೌಕಿಕವಾದ ತಿಳಿವಳಿಕೆಯಲ್ಲಿಯೇ ಹೀಗೆ ಕಾಲಾಂತರದಲ್ಲಿ ಆಗುವ ಫಲವು ತತ್ಕಾಲಕ್ಕೆ ಅತೀಂದ್ರಿಯ ವಾಗಿರುತ್ತದೆ. ಹೀಗಿರುವಲ್ಲಿ ನಿಯತವಾಗಿ ಅದೃಷ್ಟಫಲವನ್ನೇ ಕೊಡುವ ಕರ್ಮವನ್ನು ಶಾಸ್ತ್ರವು ವಿಧಿಸಿದರೆ ಅದರಲ್ಲಿ ಎಂಥ ಶ್ರದ್ಧೆ ಇರಬೇಕಾಯಿತು! ಶಾಸ್ತ್ರದಲ್ಲಿ ಹೇಳಿರುವದು ವರ್ಣಾಶ್ರಮಧರ್ಮವೇ; ಅದನ್ನು ಮಾಡಿದರೆ ಕಾಲಾಂತರದಲ್ಲಿ ಲೋಕಾಂತರದಲ್ಲಿ ಫಲವಾಗುತ್ತದೆ. ಆ ಫಲವು ಸರ್ವಥಾ ಅತೀಂದ್ರಿಯವಾಗಿರುತ್ತದೆ. ಫಲಾಸಕ್ತಿಯಿಲ್ಲದೆ ಅದೇ ಕರ್ಮವನ್ನು ಭಗವತ್ಪ್ರೀತಿಗೆಂದು ಮಾಡಿದರೆ ಈ ಜನ್ಮದಲ್ಲಿಯೇ ಚಿತ್ತಶುದ್ಧಿ ಎಂಬ ಅತೀಂದ್ರಿಯಫಲವಾಗುತ್ತದೆ. ವೈದ್ಯಶಾಸ್ತ್ರದಲ್ಲಿ ಹೇಳಿದ ಔಷಧದಿಂದ ಕಾಲಾಂತರದಲ್ಲಿ ಆಗುವ ದೃಷ್ಟಫಲದಂತೆಯೇ ಇದಕ್ಕೂ ಶ್ರದ್ಧೆ ಬೇಕಾಗುತ್ತದೆ. "ಎಷ್ಟೋ ಜನರು ಈ ಔಷಧವನ್ನು ಸೇವಿಸಿ ಗುಣವನ್ನು ಹೊಂದಿರುತ್ತಾರೆ" ಎಂಬ ನಂಬಿಕೆಯಿಂದ ನಾವೂ ಔಷಧವನ್ನು ಸೇವಿಸುವಂತೆ "ಹಿಂದೆ ಅನೇಕರು ಕರ್ಮದಿಂದ ಚಿತ್ತಶುದ್ಧಿಯನ್ನೂ ಜ್ಞಾನವನ್ನೂ ಹೊಂದಿರುತ್ತಾರೆ; ನಾನೂ ಇದನ್ನು ಮಾಡುವೆನು" ಎಂದು ನಂಬಿಕೆಯಿಂದ ಅನುಷ್ಠಾನಮಾಡಿದರೆ ಕಾಲಾನುಕಾಲಕ್ಕೆ ಫಲವು ತಪ್ಪದೆ ಆಗುತ್ತದೆ.

ಶಾಸ್ತ್ರದಲ್ಲಿ ಹೇಳಿರುವ ಕರ್ಮವನ್ನು ನ್ಯೂನಾತಿರಿಕ್ತವಿಲ್ಲದಂತೆ ಮಾಡುವದು ಕಷ್ಟವೇ ಸರಿ. ಅದಕ್ಕೆ ಬಹಳ ಅಡ್ಡಿಗಳಿರುವದೂ ನಿಜ. ಆದರೆ ಮನಃಪೂರ್ವಕವಾಗಿ ನಮ್ಮ ಕೈಯಲ್ಲಾದಮಟ್ಟಿಗೆ ಉತ್ತಮರೀತಿಯಿಂದ ಮಾಡುವೆನೆಂದು ಹೊರಡಬೇಕು.

ಬರಿಯ ಕರ್ಮವು ಪರಿಪೂರ್ಣವಾಗುವದು ಅಸಾಧ್ಯವೇ ಆದರೂ ಭಗವಂತನಿಗೆ ಅರ್ಪಣೆಮಾಡಿದ ಕರ್ಮದಲ್ಲಿ ವಿಶೇಷವುಂಟು. ಪರೀಕ್ಷಾಪತ್ರಗಳಿಗೆ ಉತ್ತರವಾಗಿ ಬರೆದಿರುವ ಗಣಿತದಲ್ಲಿ ಲೆಕ್ಕಕ್ಕೆ ಕರಾರುವಾಕ ಸರಿಯಾಗಿರುವ ಉತ್ತರವು ಇಲ್ಲದಿದ್ದರೂ ಲೆಕ್ಕವನ್ನು ಮಾಡುವ ವಿಧಾನವು ಸರಿಯಾಗಿದ್ದರೆ ಪ್ರಯತ್ನಮಾಡಿದ್ದಾನೆ ಎಂದು ಪರೀಕ್ಷಕರು ಅದಕ್ಕೂ ಗುಣಸಂಖ್ಯೆಯನ್ನು ಕೊಡುತ್ತಾರೆ. ಇದರಂತೆ ನಾವು ಯಥಾ ಶಕ್ತಿಯಾಗಿ ಮಾಡಿದ ಕರ್ಮವನ್ನು ಭಗವಂತನಿಗೆ ಅರ್ಪಣೆಮಾಡಿದರೆ ಸರ್ವಜ್ಞನೂ ದಯಾಮಯನೂ ಆದ ಆ ದೇವನು ಅವಶ್ಯವಾಗಿ ಕರ್ಮವನ್ನು ಪರಿಪೂರ್ಣವಾಗುವಂತೆ ಅನುಗ್ರಹಿಸಿ ಅದಕ್ಕೆ ಫಲವನ್ನು ಕೊಡುವನೆಂಬುದರಲ್ಲಿ ಸಂಶಯವೇನು?

## ೨೪. ಮುಮುಕ್ಷುಗಳನ್ನು ತಪ್ಪುಹಾದಿಗೆ ಎಳೆಯುವ ಕಾಮ ೩-(೩೬-೪೩)

(೮.೧೨.೪೬)

"ಭಗವದರ್ಥವಾಗಿ ಕರ್ಮಗಳನ್ನು ಮಾಡುತ್ತಲಿರಬೇಕು; ಸಂಗವನ್ನೂ ಫಲಾಭಿಸಂಧಿಯನ್ನೂ ಬಿಡಬೇಕು" ಎಂಬುದು ಭಗವಂತನ ಮತವು. ಆದರೆ ಜನರು ಈ ಭಗವಂತನ ಮತವನ್ನು ಅನುಸರಿಸದೆ ಫಲಾಭಿಲಾಷೆ ಮತ್ತು ಸಂಗ—ಇವುಗಳಿಂದ ಕೂಡಿಯೇ ಕರ್ಮವನ್ನು ಮಾಡುತ್ತಿರುವರು—ಇದೇಕೆ? ಸ್ವಧರ್ಮವನ್ನು ಮಾಡಿ ಅದನ್ನು ಈಶ್ವರನಿಗೆ ಅರ್ಪಿಸಬೇಕು ಎಂಬುದು ಭಗವಂತನ ಮತವು. ಆದರೂ ಈಶ್ವರನನ್ನು ಮರೆತು ತಮ್ಮ ಧರ್ಮವನ್ನು ಬಿಟ್ಟು ಪರಧರ್ಮವನ್ನು ಮಾಡುವದಕ್ಕೂ ಹೊರಡುತ್ತಾರೆ. ಇದೇಕೆ? ಇದನ್ನು ತಿಳಿಯಬೇಕೆಂದು ಅರ್ಜುನನು ಕೇಳುತ್ತಿದಾನೆ:

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥** (೩-೩೬)

ಮನುಷ್ಯನಿಗೆ ಹೀಗೆ ಮಾಡಬಾರದು ಎಂದು ತಿಳಿದಿದ್ದರೂ ಆ ಮಾಡಬಾರದ ಕೆಲಸವನ್ನೂ ಯಾರೋ ಅವನಿಂದ ಬಲಾತ್ಕಾರದಿಂದ ಮಾಡಿಸುವಂತೆ ಕಾಣಿಸುತ್ತಿದೆ.

ನಮಗೆಲ್ಲರಿಗೂ ಸತ್ಕರ್ಮವನ್ನೇ ಮಾಡಬೇಕು, ದೊಡ್ಡವರ ಹಾದಿಯಲ್ಲಿಯೇ ನಡೆದು ಕೃತಾರ್ಥರಾಗಬೇಕು-ಎಂಬ ಅಭಿಲಾಷೆಯಿರುತ್ತದೆ. ಬಹಳ ಸಂದರ್ಭಗಳಲ್ಲಿ "ಇದು ಮಾಡಬಾರದ ಕೆಲಸ, ಇದನ್ನು ಮಾಡುವದಕ್ಕೆ ನನ್ನ ಮನಸ್ಸು ಒಪ್ಪುವದಿಲ್ಲ" ಎಂದುಕೊಳ್ಳುತ್ತಿರುವೆವು. ಆದರೂ ಅದು ಹೇಗೋ ಅಂಥ ಕರ್ಮವನ್ನೂ ನಾವು ಮಾಡಿಯೇ ಬಿಡುವೆವಲ್ಲ! ಇದೇಕೆ?

ಈ ವಿಷಯವನ್ನು ಹಿಂದೆಯೇ ಎಷ್ಟೋ ಸಲ ಹೇಳಿರುತ್ತದೆಯಾದರೂ ಇದನ್ನೇ ಮುಖ್ಯವಾಗಿಟ್ಟುಕೊಂಡು ಎಲ್ಲಿಯೂ ಹೇಳಿಲ್ಲ. ಆದ್ದರಿಂದ ಇಲ್ಲಿ ವ್ಯಾಸರು ಅರ್ಜುನನ ಪ್ರಶ್ನೆ, ಭಗವಂತನ ಉತ್ತರ—ಎಂಬ ರೂಪದಿಂದ ಇದನ್ನೇ ನೇರಾಗಿ ತಿಳಿಸುವದಕ್ಕೆ ಹೊರಟಿರುತ್ತಾರೆ. ಭಗವಂತನ ಉತ್ತರವನ್ನು ಈಗ ವಿಮರ್ಶಿಸೋಣ:

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್॥** (೩-೩೭)

ನಮಗಿಂತ ಬೇರೆಯಾದ ಯಾವದೋ ಒಂದು ತತ್ತ್ವವು ನಮ್ಮನ್ನು ವಶ ಗೊಳಿಸಿಕೊಂಡು ಮಾಡಬಾರದ ಕೆಲಸವನ್ನು ನಮ್ಮಿಂದ ಮಾಡಿಸುತ್ತಿರುವದಲ್ಲ, ನಮ್ಮ ಕಾಮವೇ ಇದಕ್ಕೆ ಕಾರಣವಾಗಿರುತ್ತದೆ. ಸಂಗದಿಂದ ಕಾಮವಾಗುತ್ತದೆ ಎಂದು ಹಿಂದೆಯೇ ಹೇಳಿರುತ್ತದೆ. ಕಾಮಾತ್ಮರಾದವರು ಕಾಮ್ಯಕರ್ಮವನ್ನೇ ಮಾಡುತ್ತಿರುತ್ತಾರೆ, ಅವರಿಗೆ ಕರ್ಮಯೋಗದ ನಿಶ್ಚಯಾತ್ಮಕಬುದ್ಧಿಯು ಉಂಟಾಗಲಾರದು ಎಂದೂ ಹಿಂದೆ ಹೇಳಿರುತ್ತದೆ. ಇಂದ್ರಿಯಗಳು ವಿಷಯವನ್ನು ಹಿಂಬಾಲಿಸುವಲ್ಲಿ ಮನಸ್ಸನ್ನು ಅವುಗಳ ಹಿಂದೆ ಬಿಟ್ಟರೆ ಆಗ ಸಮುದ್ರದಲ್ಲಿ ಹಡಗನ್ನೊಯ್ಯುವ ಗಾಳಿಯಂತೆ ಕಾಮವು ವಿವೇಕವನ್ನು ಎಳೆದುಕೊಂಡು ಹೋಗುತ್ತದೆ ಎಂದು ಹೇಳಿದ್ದಾಗಿದೆ. ಈ ಪ್ರಸಿದ್ಧವಾದ ಕಾಮವೇ ನಮ್ಮನ್ನು ಕರ್ಮಯೋಗದ ಹಾದಿಯಿಂದ ತಪ್ಪಿಸಿ ತಪ್ಪುದಾರಿಗೆ ಒಯ್ಯುವದು. ಈ ಕಾಮಕ್ಕೆ ಕ್ರೋಧ, ಲೋಭ, ಸಂಮೋಹ-ಮುಂತಾದ ಬಗೆಬಗೆಯ ರೂಪಾಂತರಗಳುಂಟು. ಯಾವ ರೂಪವಾದರೇನು? ಎಲ್ಲವೂ ಕಾಮವೇ. ನಾವು ಮಾಡಬಾರದ ಕೆಲಸವನ್ನು ಮಾಡುವಂತೆ ಪ್ರೇರಿಸಿದ್ದೆಲ್ಲವೂ ಕಾಮವೆಂದೇ ತಿಳಿಯಬೇಕು. ಪ್ರಕೃತಿಯಿಂದ ಪ್ರೇರಿತರಾಗಿ ಅದರಂತೆಯೇ ಜೀವರುಗಳು ನಡೆಯುತ್ತಿರುವರು ಎಂದು ಆಗಲೆ ಹೇಳಿಲ್ಲವೆ? ಪ್ರಕೃತಿಯಲ್ಲಿರುವ ರಜೋಗುಣದ ಕಾರ್ಯವೇ ಈ ಕಾಮವೆಂಬುದು. ಈ ಕಾಮವು ಎದ್ದುಕೊಂಡಾಗ ಯುಕ್ತಾಯುಕ್ತವಿವೇಕವಿರುವದಿಲ್ಲ. ಇದು 'ಮಹಾಶನವು', ಬಕಾಸುರನಂತೆ ಇದಕ್ಕೆ ಆಹಾರವು ಬಹಳ ಬೇಕು; ಇದಕ್ಕೆ ಎಷ್ಟು ವಿಷಯಗಳನ್ನು ಕೊಟ್ಟರೂ ತೃಪ್ತಿಯಾಗುವದಿಲ್ಲ. ಇದರಂಥ ಕೆಟ್ಟ ವೃತ್ತಿಯು

ಇನ್ನೊಂದಿಲ್ಲ. ಕಾಮವೇ ಪಾಪವು, ಕಾಮವಿಲ್ಲದಿರುವದೇ ಸದಾಚಾರವು. ಆದ್ದರಿಂದಲೇ **"ಕಾಮೋಽಕಾರ್ಷೀತ್"** (ಕಾಮವು ಮಾಡಿತು) ಎಂಬ ಮಂತ್ರದ ಜಪವನ್ನು ಉಪಾಕರ್ಮದಲ್ಲಿ ದ್ವಿಜರು ಮಾಡುತ್ತಾರೆ. ಕಾಮಪ್ರೇರಿತರಾಗಿಯೇ ಸ್ವಧರ್ಮವನ್ನು ಬಿಟ್ಟು ಜನರು ಪರಧರ್ಮಕ್ಕೆ ಕೈಹಾಕುತ್ತಾರೆ. ಇದೇ ಜನರನ್ನು ಪಾಪದೊಳಕ್ಕೆ ದೂಡುವ ಶತ್ರುವೆಂದೂ ತಿಳಿಯಬೇಕು.

ಹೊಗೆಯು ಬೆಂಕಿಯನ್ನು ಮುಸುಕಿಕೊಳ್ಳುವಂತೆಯೂ ಕನ್ನಡಿಯನ್ನು ಧೂಳು ಮುಚ್ಚಿಕೊಳ್ಳುವಂತೆಯೂ ಗರ್ಭವನ್ನು ಮೇಲ್ಪೊರೆಯು ಸುತ್ತಿಕೊಂಡಿರು ವಂತೆಯೂ ಈ ಕಾಮವು ಜ್ಞಾನವನ್ನು ಆವರಿಸಿಕೊಂಡಿರುತ್ತದೆ. "ಕಾಮವು ಪೂರ್ಣವಾಯಿತು, ಇಲ್ಲಿಂದ ಮುಂದಕ್ಕೆ ಇದರ ಉಪಟಳವಿಲ್ಲ" ಎಂಬುದಿಲ್ಲ. "ಕಾಮಗಳನ್ನು ಉಪ ಭೋಗಿಸುವದರಿಂದ ಕಾಮವು ಎಂದಿಗೂ ಉಪಶಾಂತವಾಗುವದಿಲ್ಲ; ವಿಷಯಗಳ ಉಪಭೋಗದಿಂದ ತುಪ್ಪವನ್ನು ಸುರಿದ ಬೆಂಕಿಯಂತೆ ಅದು ಮತ್ತೂ ಹೆಚ್ಚಾಗಿ ಬೆಳೆಯುತ್ತದೆ" ಎಂದು ಮನು ಹೇಳಿರುತ್ತಾನೆ. ಬೆಂಕಿಗೆ ಎಷ್ಟು ಕಟ್ಟಿಗೆಯನ್ನು ಹಾಕಿದರೂ ಸಾಲದು, ಕಾಮಕ್ಕೆ ಎಷ್ಟು ವಿಷಯಗಳನ್ನು ಕೊಟ್ಟರೂ ಸಾಲದು. ಆದ್ದರಿಂದ ಇವೆರಡನ್ನೂ 'ಅನಲ'-ಸಾಲದು-ಎಂದೇ ಕರೆಯಬಹುದು.

ಕಾಮವೆಂಬುದು ವಿವೇಕಿಗೆ ನಿತ್ಯವೈರಿಯಾಗಿರುತ್ತದೆ. ಕಾಮವು ಬರುವದರೊಳಗೆ "ಇಗೊ, ಇದು ನನ್ನನ್ನು ಹಾಳುಮಾಡುವದು" ಎಂದು ಅವನು ಮೊದಲೇ ತಿಳಿದು ಕೊಂಡು ಎಚ್ಚರಿಕೆಯಿಂದ ಅದನ್ನು ದೂರಮಾಡಿಕೊಳ್ಳುತ್ತಾನೆ. ಆದರೆ ಅವಿವೇಕಿ ಯಾದವನು ಕಾಮವು ಬಂದಾಗ ಅದನ್ನು ಮಿತ್ರನಂತೆ ಬರಮಾಡಿಕೊಂಡು ಕೊನೆಗೆ ಅದರಿಂದಾದ ದುಷ್ಪರಿಣಾಮವನ್ನು ಮನಗಂಡು "ಅಯ್ಯೊ, ಕೆಟ್ಟೆನಲ್ಲ!" ಎಂದು ಕೊರಗುತ್ತಾನೆ. ಆದ್ದರಿಂದ ಕಾಮವೆಂಬುದು ತಿಳಿದವನಿಗೇ ನಿತ್ಯವೈರಿಯು-ಎಂದು ಭಗವಂತನು ಹೇಳಿರುತ್ತಾನೆ. ಆದ್ದರಿಂದ ಯಾವನು ವಿವೇಕಿಯಾಗಿ ಕರ್ಮವನ್ನು ತನಗೆ ಬಂಧಕವಾಗಿ ಮಾಡಿಕೊಳ್ಳದೆ ಅದನ್ನು ಮೋಚಕಸಾಮಗ್ರಿಯಾಗಿ ತಿರುಗಿಸಿಕೊಳ್ಳ ಬೇಕೆಂದು ಬಯಸುತ್ತಾನೋ ಅವನು ಮೊದಲಿನಿಂದಲೂ ಕಾಮವನ್ನು ಶತ್ರುವಿನಂತೆ ಭಾವಿಸಿ ಅದನ್ನು ತನ್ನ ವಶದಲ್ಲಿಟ್ಟುಕೊಳ್ಳುವದಕ್ಕೆ ಪ್ರಯತ್ನಿಸಬೇಕು.

ಶತ್ರುವನ್ನು ಜಯಿಸಬೇಕೆನ್ನುವವನು ಶತ್ರುವಿಗೆ ಬಲವನ್ನು ಕೊಡುವ ದುರ್ಗವನ್ನು ಮೊದಲು ವಶಪಡಿಸಿಕೊಳ್ಳಬೇಕು. ಪಾಳೆಯಗಾರರು ದುರ್ಗಗಳನ್ನು ಏರ್ಪಡಿಸಿಕೊಂಡು, ತಮಗೆ ಬೇಕಾದ ಆಹಾರದಿನಸುಗಳನ್ನೂ ಮದ್ದು ಗುಂಡುಗಳನ್ನೂ ಅದರಲ್ಲಿಟ್ಟುಕೊಂಡು, ಊರ ಮುಂದಿನ ಹೆಬ್ಬಾಗಿಲನ್ನು ಬಲವಾಗಿ ಹಾಕಿಸಿ, ಒಳಗೆ ಸುರಕ್ಷಿತವಾಗಿರುತ್ತಿದ್ದಂತೆ

ಕಾಮವೂ ಒಂದು ದುರ್ಗವನ್ನು ಮಾಡಿಕೊಂಡಿರುತ್ತದೆ. ದುರ್ಗದಲ್ಲಿರುವವರು ತಮಗೆ ಬೇಕಾದಾಗ ಹೊರಕ್ಕೆ ಬರುವದಕ್ಕೆ ಕೆಲವು ಕಳ್ಳದಾರಿಗಳನ್ನು ಮಾಡಿಕೊಂಡಿರುವಂತೆ ಕಾಮವೂ ಇಂದ್ರಿಯಗಳೆಂಬ ಐದು ಕಳ್ಳಗಂಡಿಗಳನ್ನು ಮಾಡಿಕೊಂಡಿರುತ್ತದೆ; ಮನಸ್ಸು, ಬುದ್ಧಿ-ಎಂಬ ವಾಸಸ್ಥಾನವನ್ನು ಮಾಡಿಕೊಂಡಿರುತ್ತದೆ. ಈ ಇಂದ್ರಿಯಗಳ ಮೂಲಕ ಕಾಮವು ಮನುಷ್ಯನನ್ನು ಬಗೆಬಗೆಯಾಗಿ ಮೋಹಗೊಳಿಸುತ್ತಾ ಹಲವು ಬಿಲಗಳನ್ನು ಮಾಡಿಕೊಂಡಿರುವ ಇಲಿಯಂತೆ ತಪ್ಪಿಸಿಕೊಳ್ಳುತ್ತಾ ಗೋಳುಗುಟ್ಟಿಸುತ್ತಿರುತ್ತದೆ. ಆದ್ದರಿಂದ ಇಂದ್ರಿಯಗಳೆಂಬ ಕಳ್ಳಗಂಡಿಗಳನ್ನು ಮೊದಲು ಮುಚ್ಚಿಹಾಕಿ, ಈ ಕಾಮವು ಹೊರಕ್ಕೆ ತಲೆಹಾಕದಂತೆ ಮಾಡಿಕೊಳ್ಳಬೇಕು. ಬಳಿಕ ಮನಸ್ಸನ್ನೂ ಬುದ್ಧಿಯನ್ನೂ ವಶಪಡಿಸಿಕೊಳ್ಳಬೇಕು.

ಕಾಮವನ್ನು ಗೆದ್ದುಕೊಳ್ಳುವದೆಂಬುದು ಒಂದು ದೊಡ್ಡ ತಂತ್ರವು. ಅರಿಬಲದಲ್ಲಿ ಅಲ್ಲಿ ತೋರಿ ಇಲ್ಲಿ ಹಾರುತ್ತಾ ಬಹಳವಾಗಿ ಕಿರುಕುಳದ ತೊಂದರೆಗಳನ್ನು ಮಾಡುತ್ತಲೇ ಇರುವ ವೀರಭಟನನ್ನು ಕೊಲ್ಲುವದಕ್ಕೆ ಮಾಡುವ ಉಪಾಯಗಳನ್ನೆಲ್ಲ ಇದನ್ನು ನಾಶಮಾಡುವದಕ್ಕೂ ಮಾಡಬೇಕಾಗುತ್ತದೆ. ಇದು ಸಾಧಕನಿಗೆ ಬಲಿಷ್ಠನಾದ ಶತ್ರುವು; ಇದು ಹಲವು ಬಗೆಗಳಿಂದ ಸಾಧಕರ ಕಣ್ಣಿಗೆ ಮಣ್ಣೆರಚಿ ಹೇಗೋ ತಪ್ಪಿಸಿಕೊಂಡುಬಿಡುತ್ತದೆ. ಒಂದು ಕಡೆಯಿಂದ ಇದನ್ನು ಓಡಿಸಿದರೆ ಮತ್ತೊಂದು ಕಡೆಯಲ್ಲಿ ಕಾಣಿಸಿಕೊಂಡು ಉರವಣಿಸುತ್ತಾ ಮೇಲ್ವಾಯ್ದು ಬರುತ್ತಿರುವದು. ಆದ್ದರಿಂದ ಇದನ್ನು ಗೆಲ್ಲುವದಕ್ಕೆ ಒಂದು ವ್ಯವಸ್ಥಿತವಾದ ಕ್ರಮವನ್ನು ಕೈಗೊಳ್ಳಬೇಕಾಗಿರುತ್ತದೆ. ಇಂದ್ರಿಯಗಳನ್ನು ಮೊದಲು ಹಿಡಿತದಲ್ಲಿಟ್ಟುಕೊಳ್ಳಬೇಕೆಂದು ಹೇಳಿದೆಯಷ್ಟೆ; ಆದರೆ ಇಂದ್ರಿಯಗಳಿಗೆ ಬೆಂಬಲವಾಗಿ ಅವುಗಳ ಒಳಗೆ ಸೂಕ್ಷ್ಮವಾಗಿ ಅವೆಲ್ಲವನ್ನೂ ವ್ಯಾಪಿಸಿಕೊಂಡು ಕುಣಿಸುತ್ತಿರುವದು ಮನಸ್ಸು. ಆದ್ದರಿಂದ ಮನಸ್ಸು ನಮಗೆ ಅಳವಟ್ಟ ಹೊರತು ಇಂದ್ರಿಯಗಳು ಸಂಪೂರ್ಣವಾಗಿ ವಶಕ್ಕೆ ಬರುವದಿಲ್ಲ. ಸಂಕಲ್ಪವಿಕಲ್ಪರೂಪವಾದ ಮನಸ್ಸಿಗಿಂತಲೂ ನಿಶ್ಚಯಾತ್ಮಕವಾದ ಬುದ್ಧಿಯು ಇನ್ನೂ ಸೂಕ್ಷ್ಮವೂ ವ್ಯಾಪಕವೂ ಆಗಿರುತ್ತದೆ. ಯಾವನಿಗೆ ಬುದ್ಧಿಯು ಹಿಡಿತಕ್ಕೆ ಸಿಕ್ಕಿರುವದೋ ಅವನಿಗೆ ಮನಸ್ಸೂ ಇಂದ್ರಿಯಗಳೂ ಸಿಕ್ಕಿದಂತೆಯೇ ಸರಿ. ದೊಡ್ಡದೊಂದು ಯಂತ್ರಕ್ಕೆ ಚಾಲಕವಾದ ಮೂಲದ ಕೀಲು ಎಲ್ಲಿದೆ ಎಂಬುದನ್ನು ತಿಳಿದುಕೊಂಡರೆ ಇಡಿಯ ಯಂತ್ರವೇ ನಮ್ಮ ವಶವಾಗುವ ಹಾಗೆ ಮನ ಇಂದ್ರಿಯಗಳ ಒಟ್ಟು ಸಂಘಾತವೂ ಬುದ್ಧಿಯೆಂಬ ಕೀಲನ್ನು ವಶಪಡಿಸಿಕೊಂಡಮಾತ್ರದಿಂದ ನಮ್ಮ ವಶಕ್ಕೆ ಬರುತ್ತದೆ. ಕಾಮವು ಇಂದ್ರಿಯಗಳಲ್ಲಿ ತೋರಿದರೂ ಅದು ನಿಜವಾಗಿ ಮನಸ್ಸಿನಲ್ಲಿ ಬುದ್ಧಿಯ ಮೂಲಕವಾಗಿ ತೋರಿಕೊಳ್ಳುತ್ತಿರುವದು.

ಈ ಮೂರರ ವ್ಯಾಪಾರಗಳನ್ನು ಚೆನ್ನಾಗಿ ವಿಂಗಡಿಸಿ ತಿಳಿದುಕೊಳ್ಳುವದರಿಂದ ಕಾಮವನ್ನು ಗೆಲ್ಲುವದಕ್ಕೆ ಸಹಾಯವಾಗುವದು. ವಿಷಯಗಳು ನಮ್ಮ ಎದುರಿಗೆ ಬಂದ ಕೂಡಲೆ ಇಂದ್ರಿಯಗಳಲ್ಲಿ ಒಂದು ಬಗೆಯ ಪ್ರತಿಕ್ರಿಯೆಯುಂಟಾಗುತ್ತದೆ. ಈ ಪ್ರತಿಕ್ರಿಯೆಯಿಂದ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ವಿಕಲ್ಪಗಳು ಮನಸ್ಸಿನಲ್ಲಿ ಏರ್ಪಡುತ್ತವೆ. ಈ ವಿಕಲ್ಪಗಳನ್ನು ಒಟ್ಟುಗೂಡಿಸಿ 'ಇದು ಇಂಥ ವಸ್ತು' ಎಂಬ ಅರಿವನ್ನು ಬುದ್ಧಿಯು ಉಂಟುಮಾಡಿ ಜೀವನಿಗೆ ಒಪ್ಪಿಸುತ್ತದೆ. ಆಗ ಹಿಂದೆ ಹಲವು ಬಾರಿ ಅನುಭವಿಸಿದ ವಾಸನೆಯಿಂದ ಜೀವನು ಮತ್ತೊಮ್ಮೆ ಈ ವಿಷಯವನ್ನು ಅನುಭವಿಸಬೇಕೆಂದು ನಿಶ್ಚಯಿಸಿ, ಅದಕ್ಕನುಗುಣವಾಗಿ ಸಂಕಲ್ಪಿಸಿ ಆ ಕಾರ್ಯವನ್ನು ನೆರವೇರಿಸುವದಕ್ಕಾಗಿ ಕರ್ಮೇಂದ್ರಿಯಗಳನ್ನು ಪ್ರೇರಿಸುತ್ತಾನೆ. ಆಗ ಕರ್ಮೇಂದ್ರಿಯಗಳು ತಮ್ಮ ತಮ್ಮ ವ್ಯಾಪಾರವನ್ನು ನೆರವೇರಿಸಿ ಜೀವನಿಗೆ ವಿಷಯದ ಉಪಭೋಗವನ್ನು ತಂದುಕೊಟ್ಟು ಕಾಮದ ಬೀಜಗಳನ್ನು ಅಂತಃಕರಣದಲ್ಲಿ ಬಿತ್ತುತ್ತವೆ. ಹೀಗೆ ವಿಷಯಗಳ ಅರಿವು, ಕಾಮವಾಸನೆಯು ಎದ್ದುಕೊಳ್ಳುವದು, ಕಾಮೋಪಭೋಗಕ್ಕಾಗಿ ಯತ್ನಿಸಿ ಕರ್ಮವನ್ನು ಮಾಡುವದು, ವಿಷಯಗಳನ್ನು ಅನುಭವಿಸುವದು, ಅನುಭವದಿಂದ ವಾಸನೆಯು ಅಂತಃಕರಣದಲ್ಲಿ ಬೀಡುಬಿಟ್ಟುಕೊಳ್ಳುವದು, ಮತ್ತೆ ಕಾಲಾನುಕಾಲಕ್ಕೆ ವಿಷಯದ ಅರಿವು ಆದಾಗ ಅದನ್ನು ಪಡೆಯುವದಕ್ಕೆ ಯತ್ನಿಸುವದು-ಎಂಬ ಕ್ರಮದಿಂದ ಕಾಮದ ವಿಲಾಸವು ಚಕ್ರದಂತೆ ಅನವರತವಾಗಿ ತಿರುಗುತ್ತಲೇ ಇರುತ್ತದೆ.

ಆದರೆ ಯಾವಾಗ ವಿವೇಕಿಯಾದವನು ಇಂದ್ರಿಯಾದಿಗಳ ಸಂಬಂಧವನ್ನು ಅರಿತುಕೊಂಡು ಇಂದ್ರಿಯಗಳು, ಮನಸ್ಸು, ಬುದ್ಧಿ-ಇವುಗಳನ್ನು ಮೀರಿರುವ ಶುದ್ಧಾತ್ಮವನ್ನು ಕಂಡುಕೊಳ್ಳುವನೋ ಅವನಿಗೆ ಕಾಮದ ಕಾಟವು ಅತ್ಯಂತವಾಗಿ ತೊಲಗುವದು. ಜ್ಞಾನಿಯಾದವನು ತನ್ನ ಜ್ಞಾನದ ಬಲದಿಂದಲೇ ಸರ್ವಕಾಮಗಳನ್ನೂ ಗೆದ್ದುಕೊಂಡುಬಿಡುತ್ತಾನೆ. ಪರಮಾರ್ಥದೃಷ್ಟಿಯಿಂದ ನೋಡಿದರೆ ಆತ್ಮನೊಬ್ಬನೇ ಇರುವವನು, ಅವನಲ್ಲಿ ಬುದ್ಧಿಯನ್ನೂ ಮನಸ್ಸನ್ನೂ ಇಂದ್ರಿಯಗಳನ್ನೂ ಕಲ್ಪಿಸಿಕೊಂಡು ಜೀವರುಗಳು ತಮ್ಮಲ್ಲಿಲ್ಲದ ಸಂಸಾರದುಃಖವನ್ನು ಅನುಭವಿಸುತ್ತಿರುವರು. ಆದ್ದರಿಂದ ಶ್ರುತಿಯಲ್ಲಿ ಈ ಅಧ್ಯಾರೋಪವನ್ನು ಅಲ್ಲಗಳೆಯುವ **ಅಧ್ಯಾತ್ಮಯೋಗವನ್ನು** ಉಪದೇಶಿಸಿರುತ್ತದೆ. ಹೇಗೆಂದರೆ ವಾಕ್ಕೇ ಮುಂತಾದ ಇಂದ್ರಿಯಗಳನ್ನು ಮನಸ್ಸಿನಲ್ಲಿ ಲಯಮಾಡಿಕೊಳ್ಳಬೇಕು; ಎಂದರೆ ಮನಸ್ಸಿನ ವೃತ್ತಿಗಳಿಗಿಂತ ಬೇರೆಯಾಗಿ ಇಂದ್ರಿಯಗಳ ವ್ಯಾಪಾರವೇ ಇಲ್ಲವೆಂಬುದನ್ನು ಅರಿತು ಎಲ್ಲವೂ ಮನಸ್ಸೇ ಎಂದು ನಿಶ್ಚಯಿಸಿ ಕೊಳ್ಳಬೇಕು. ಆ ಮನಸ್ಸನ್ನು ನಿಶ್ಚಯಾತ್ಮಕವಾದ ಬುದ್ಧಿಯಲ್ಲಿ ಲಯಗೊಳಿಸಿಕೊಳ್ಳಬೇಕು.

ವಿಷಯಗಳನ್ನು ವಿಕಲ್ಪಿಸುವದರಲ್ಲಿರುವ ದೋಷವನ್ನು ಗೊತ್ತುಪಡಿಸಿಕೊಂಡು ಮನಸ್ಸಿನ ಚಾಂಚಲ್ಯವನ್ನೆಲ್ಲ ನೀಗಿಕೊಂಡು, ನಿಶ್ಚಯಾತ್ಮಕವಾದ ಬುದ್ಧಿಯಲ್ಲಿ ನೆಲೆನಿಲ್ಲಬೇಕು. ಆಮೇಲೆ ಆ ಬುದ್ಧಿಗೂ ಸಾಕ್ಷಿಯಾಗಿರುವ ಆತ್ಮನ ಸ್ವರೂಪವನ್ನು ಹಿಡಿದು ಅನಾತ್ಮಸಂಬಂಧವನ್ನೇ ಕಳಚಿಕೊಳ್ಳಬೇಕು. ಈ ರೀತಿಯಲ್ಲಿ ಇಂದ್ರಿಯಗಳು, ಮನಸ್ಸು, ಬುದ್ಧಿ-ಈ ಕ್ರಮದಿಂದ ಬುದ್ಧಿಗಿಂತಲೂ ಆಚೆ ಇರುವ ಶುದ್ಧಾತ್ಮಸ್ವರೂಪವನ್ನು ಯಾವನು ಕಂಡುಕೊಳ್ಳುವನೋ ಅವನಿಗೆ ಕಾಮದ ಉಪಟಳವು ಇನ್ನು ಎಂದೆಂದಿಗೂ ಇರುವದಿಲ್ಲ.

ಭಗವಂತನು ಅರ್ಜುನನಿಗೆ ಮಾಡಿದ ಉಪದೇಶವು ಈಗ ಎಲ್ಲಿಗೆ ಬಂದು ನಿಂತಂತಾಯಿತು?- ಎಂಬುದನ್ನು ಒಮ್ಮೆ ಮನಸ್ಸಿಗೆ ತಂದುಕೊಂಡು ಈ ಉಪನ್ಯಾಸವನ್ನು ಉಪಸಂಹಾರಮಾಡೋಣ. ಮುಮುಕ್ಷುವಾದವನು ಫಲಾಭಿಲಾಷೆಯನ್ನು ಬಿಟ್ಟು ಸಂಗವಿಲ್ಲದೆ ಕರ್ಮಯೋಗವನ್ನು ಮಾಡುವದಕ್ಕೆ ಕಾಮವೇ ಅಡ್ಡಿಯಾಗಿರುತ್ತದೆ. ಈ ಕಾಮವೇ ಕ್ರೋಧಾದಿಗಳ ರೂಪವನ್ನೂ ತಾಳುತ್ತಾ ಸಾಧಕರನ್ನು ಅಡ್ಡಹಾದಿಗೆ ಎಳೆಯುವದಾದ್ದರಿಂದ ಇದನ್ನು ಗೆಲ್ಲುವದಕ್ಕೆ ಮೊದಲು ಪ್ರಯತ್ನವನ್ನು ಮಾಡಬೇಕು. ಇಂದ್ರಿಯಗಳು, ಮನಸ್ಸು, ಬುದ್ಧಿ-ಇವೇ ಕಾಮಕ್ಕೆ ಆಶ್ರಯವಾಗಿರುವದರಿಂದ ಇವನ್ನು ಕ್ರಮಕ್ರಮವಾಗಿ ವಶಕ್ಕೆ ತಂದುಕೊಳ್ಳಬೇಕು. ಹೀಗಾದರೆ ಕರ್ಮಯೋಗವು ದಕ್ಕುತ್ತದೆ, ಜ್ಞಾನವೂ ಸಿದ್ಧಿಸುತ್ತದೆ. ಒಮ್ಮೆ ಜ್ಞಾನವು ದೊರಕಿತೆಂದರೆ ಇಂದ್ರಿಯಗಳಾಗಲಿ, ಮನಸ್ಸಾಗಲಿ, ಬುದ್ಧಿಯಾಗಲಿ, ಆತ್ಮನಿಗಿಂತ ಬೇರೆಯಾಗಿ ಕಾಣಿಸಿಕೊಳ್ಳುವದೇ ಇಲ್ಲ; ಆದ್ದರಿಂದ ಬುದ್ಧಿಯನ್ನೂ ದಾಟಿ ಸಾಕ್ಷಿಯಾಗಿ ನಿಂತಿರುವ ಆತ್ಮನ ಸ್ವರೂಪವನ್ನು ಕಂಡುಕೊಂಡು ಅಲ್ಲಿಯೇ ನಿಂತವರಿಗೆ ಎಲ್ಲಾ ಇಂದ್ರಿಯಗಳೂ ಅತ್ಯಂತವಾಗಿ ವಶವಾಗಿ ಕಾಮಗಳೆಲ್ಲವೂ ಮಾಯವಾಗಿಬಿಡುತ್ತವೆ. ಆದರೆ ಆ ಜ್ಞಾನವನ್ನು ಮುಟ್ಟುವವರೆಗೂ ಕರ್ಮಯೋಗವನ್ನು ಮಾಡುವ ಮುಮುಕ್ಷುವು ಎಚ್ಚರಿಕೆಯಿಂದ ಇಂದ್ರಿಯಾದಿಗಳನ್ನು ವಶದಲ್ಲಿಟ್ಟುಕೊಂಡಿರಬೇಕು. ಬುದ್ಧಿಯಿಂದಾಚೆಗೆ ಇರುವ ಆತ್ಮನನ್ನೇ ತನ್ನ ಗುರಿಯಾಗಿಟ್ಟುಕೊಂಡು ಕರ್ಮಯೋಗವನ್ನು ಪ್ರಯತ್ನಪೂರ್ವಕವಾಗಿ ಅನುಷ್ಠಾನಮಾಡುತ್ತಿರಬೇಕು. ಕರ್ಮಯೋಗಿಗೆ ಕಾಮಗಳು ಅಡ್ಡಬರುವಾಗಲೆಲ್ಲ ಪರಮೇಶ್ವರನನ್ನು ಮತ್ತೆ ಮತ್ತೆ ನೆನಪಿಗೆ ತಂದುಕೊಂಡು ಕರ್ಮಯೋಗವನ್ನು ಮಾಡುವದಕ್ಕೆ ಹೊರಡುವದೇ ನಿರಾತಂಕವಾಗಿ ತನ್ನ ಗುರಿಯನ್ನು ಮುಟ್ಟುವದಕ್ಕೆ ಉಪಾಯವಾಗಿರುತ್ತದೆ.

# ೨೫. ಭಗವಂತನ ಜನ್ಮಕರ್ಮಗಳ ತತ್ತ್ವ ೪-(೧-೧೦)

(೧೫.೧೨.೪೬)

ಮೂರನೆಯ ಅಧ್ಯಾಯದಲ್ಲಿ ಕರ್ಮವನ್ನು ಮಾಡಲೇಬೇಕೆಂಬುದಕ್ಕೆ ಬಗೆ ಬಗೆಯ ಕಾರಣಗಳನ್ನು ಹೇಳಿದ ಬಳಿಕ ಪರಮೇಶ್ವರಪ್ರೀತ್ಯರ್ಥವಾದ ಯಜ್ಞವೆಂಬ ಭಾವನೆಯಿಂದ ಮಾಡಿದ ಕರ್ಮವು ಬಂಧದಿಂದ ಬಿಡುಗಡೆಮಾಡುವದಕ್ಕೆ ಕಾರಣ ವೆಂದು ತಿಳಿಸಿದ್ದಾಗಿರುತ್ತದೆ. ಈ ಬಗೆಯ ಕರ್ಮವೇ ಕರ್ಮಯೋಗವೆನಿಸುತ್ತದೆ; ಕರ್ಮಯೋಗದಲ್ಲಿ ಸಂಗತ್ಯಾಗ, ಫಲತ್ಯಾಗ ಇವೇ ಮುಖ್ಯವಾಗಿರುತ್ತದೆಂದೂ ಹೇಳಿದ್ದಾಗಿದೆ. ಈ ತ್ಯಾಗಕ್ಕೆ ಅಡ್ಡಿಯಾಗಿರುವದು ಕಾಮವು. ರಜೋಗುಣದಿಂದಾಗಿರುವ ಕಾಮವೇ ಕ್ರೋಧಾದಿಗಳ ರೂಪವನ್ನು ಧರಿಸಿ ಮುಮುಕ್ಷುವನ್ನು ಅಡ್ಡಹಾದಿಗೆ ಒಯ್ಯುತ್ತದೆ; ಆದ್ದರಿಂದ ಅದನ್ನು ಮೊದಲು ಹಿಡಿತದಲ್ಲಿಟ್ಟುಕೊಳ್ಳಬೇಕು. ಕಾಮವು ಇಂದ್ರಿಯ, ಮನಸ್ಸು, ಬುದ್ಧಿ-ಇವುಗಳನ್ನು ಆಶ್ರಯಿಸಿಯೇ ಪ್ರಬಲವಾಗಿರುವದರಿಂದ ಅವುಗಳನ್ನು ಒಂದೊಂದಾಗಿ ಗೆದ್ದುಕೊಂಡು, ಸಂಸ್ಕೃತವಾದ ಅಂತಃಕರಣದಿಂದ ತನ್ನನ್ನು ತಾನೇ ಜಯಿಸಿಕೊಂಡು, ಬುದ್ಧಿಯನ್ನೂ ದಾಟಿರುವ ಪರಮಾತ್ಮನನ್ನೇ ಲಕ್ಷ್ಯದಲ್ಲಿಟ್ಟುಕೊಂಡು, ಕರ್ಮಯೋಗವನ್ನು ಮಾಡುತ್ತಿರಬೇಕು. ಹಾಗಾದರೆ ಜ್ಞಾನ ನಿಷ್ಠೆಯು ದೊರಕಿ ಸಕಲಪಾಪಗಳೂ ಅತ್ಯಂತವಾಗಿ ನಾಶವಾಗಿ ಮುಕ್ತನಾಗುತ್ತಾನೆ ಎಂದು ಉಪಸಂಹಾರಮಾಡಿರುತ್ತದೆ.

ಪರಮಾತ್ಮಜ್ಞಾನವೇ ಶೋಕಮೋಹಗಳನ್ನು ನಾಶಪಡಿಸುವ ಸಾಂಖ್ಯದೃಷ್ಟಿಯ ಜ್ಞಾನಯೋಗವು; ಆ ಜ್ಞಾನಯೋಗಕ್ಕೆ ಉಪಾಯವಾಗಿ ಈಶ್ವರಾರ್ಪಣಬುದ್ಧಿಯಿಂದ ಮಾಡುವ ಕರ್ಮವೇ ಕರ್ಮಯೋಗವು. ಇಷ್ಟೇ ಸಕಲಗೀತಾರ್ಥವು. ಆದ್ದರಿಂದ ಭಗವಂತನು ತನ್ನ ಉಪದೇಶವು ಮುಗಿದಂತಾಯಿತೆಂದು ತಾನು ಹೇಳಿದ ಕರ್ಮಯೋಗ ಪ್ರಾಪ್ಯವಾದ ಜ್ಞಾನಯೋಗವನ್ನು ಅಭ್ಯಾಸಮಾಡಿದ ಆಚಾರ್ಯಪರಂಪರೆಯನ್ನು ತಿಳಿಸುವದರ ಮೂಲಕ ಹೊಗಳಿ ಉಪಸಂಹಾರಮಾಡುವದಕ್ಕೆ ಪ್ರಾರಂಭಿಸಿರುತ್ತಾನೆ.

"ಈ ಯೋಗವನ್ನು ನಾನು ಹಿಂದೆ ಸೃಷ್ಟಿಯ ಆದಿಯಲ್ಲಿ ವಿವಸ್ವಂತನಿಗೆ ಹೇಳಿಕೊಟ್ಟಿದ್ದೆನು. ವಿವಸ್ವಂತನು ಅಥವಾ ಸೂರ್ಯನು ಮನುವಿಗೆ ಇದನ್ನು ಹೇಳಿಕೊಟ್ಟನು; ಆ ಮನುವು ತನ್ನ ಮಗನಾದ ಇಕ್ಷ್ವಾಕುವಿಗೆ ತಿಳಿಸಿದನು. ಈ ಯೋಗವನ್ನು ರಾಜರಿಗೆ ವಿಶೇಷವಾಗಿ ಏತಕ್ಕೆ ಹೇಳಿಕೊಟ್ಟಿದ್ದೆಂದರೆ ಅವರಿಗೆ ಆಧ್ಯಾತ್ಮಿಕಬಲವು ಬೇಕು; ಆ ಬಲದಿಂದ ಅವರು ಧರ್ಮವನ್ನು ಕಾಪಾಡಬಲ್ಲವ

ರಾಗಿರಬೇಕು, ಬ್ರಾಹ್ಮಣ್ಯದಿಂದ ಧರ್ಮವು ರಕ್ಷಿತವಾಗಿರುತ್ತದೆ; ಸುಶಿಕ್ಷಿತರಾದ ಕ್ಷತ್ರಿಯರು ಬ್ರಾಹ್ಮಣ್ಯವನ್ನು ಕಾಪಾಡುತ್ತಾರೆ. ಆದ್ದರಿಂದ ಕ್ಷತ್ರಿಯರಾದ ಆಚಾರ್ಯರ ಪರಂಪರೆಯೊಂದನ್ನು ಏರ್ಪಡಿಸಿ ಈ ಯೋಗವನ್ನು ನಾನು ಲೋಕದಲ್ಲಿ ಹರಡಿದೆನು. ಈ ಯೋಗವು ಅವ್ಯಯವಾದದ್ದು; ಏಕೆಂದರೆ ಇದರ ಫಲವು ಎಂದಿಗೂ ನಾಶವಾಗುವದಿಲ್ಲ. ಸ್ವರೂಪದಿಂದಲೂ ಇದು ನಾಶವಾಗತಕ್ಕದ್ದಲ್ಲವಾದರೂ ಇದನ್ನು ಅನುಷ್ಠಾನಮಾಡುವವರು ಅಜಿತೇಂದ್ರಿಯರಾದರೆ ಸಂಪ್ರದಾಯಪರಂಪರೆಯು ಕಡಿದುಹೋಗುತ್ತದೆ. ಹೀಗೆ ಆಗಿಂದಾಗ್ಗೆ ಸಂಪ್ರದಾಯವಿಚ್ಛೇದವಾದಾಗ ನಾನು ಮತ್ತೆ ಮತ್ತೆ ಅದನ್ನು ಮತ್ತೊಬ್ಬ ಯೋಗ್ಯಅಧಿಕಾರಿಯ ಮೂಲಕವಾಗಿ ಪ್ರಚಾರಗೊಳಿಸುವೆನು. ಈ ಯೋಗವೆಂಬುದು ಒಂದು ಉತ್ತಮರಹಸ್ಯವು; ಇದರಿಂದಲೇ ಪರಮ ಪುರುಷಾರ್ಥವು ಸಿದ್ಧವಾಗುತ್ತದೆ. ಆದ್ದರಿಂದ ಈ ಸಂಪ್ರದಾಯವನ್ನು ಮತ್ತೆ ಉಜ್ಜೀವನಗೊಳಿಸುವದಕ್ಕಾಗಿ ಇದೇ ಯೋಗವನ್ನೇ ನಿನಗೆ ಹೇಳಿರುತ್ತೇನೆ"- ಎಂದು ಭಗವಂತನು ತಾನು ಉಪದೇಶಿಸಿರುವ ಜ್ಞಾನಯೋಗವನ್ನು ಹೊಗಳಿರುತ್ತಾನೆ.

ಭಗವಂತನು ಹೇಳಿರುವ ಯೋಗವು ಕರ್ಮಯೋಗ, ಜ್ಞಾನಯೋಗ ಎಂದು ಎರಡಲ್ಲ; ಕರ್ಮಯೋಗೋಪಾಯದಿಂದ ಪಡೆಯಬೇಕಾಗಿರುವ ಜ್ಞಾನಯೋಗವೇ ನಿಜವಾದ ಯೋಗವು-ಎಂಬುದನ್ನು ನಾವು ಮರೆಯಬಾರದು. ಭಗವಂತನು ಅರ್ಜುನನಿಗೆ ಜ್ಞಾನಯೋಗವನ್ನೇ ಮೂಲತಃ ಹೇಳುವದಕ್ಕೆ ಪ್ರಾರಂಭಿಸಿದನು; ಅದಕ್ಕೆ ಉಪಾಯವಾಗಿ ಕರ್ಮಯೋಗವನ್ನು ಹೇಳಿದನು. ಒಂದು ಮದುವೆಗಾಗಿ ಏರ್ಪಡಿಸುವ ಪೂರ್ವಸಿದ್ಧತೆಯೆಲ್ಲವೂ 'ಮದುವೆ' ಎಂಬುದರಲ್ಲಿಯೇ ಅಡಕವಾಗುವಂತೆ ಕರ್ಮಯೋಗವೂ 'ಯೋಗ'ದಲ್ಲಿ ಅಡಕವಾಗಿರುತ್ತದೆ. ಆದ್ದರಿಂದ ಮುಖ್ಯಾರ್ಥದಲ್ಲಿ ಜ್ಞಾನಯೋಗವೇ ಯೋಗವು. ಅದು ಉತ್ತಮವಾದ ರಹಸ್ಯವು, ಎಂದರೆ ಅಧಿಕಾರಿಗಳಿಗೆ ಮಾತ್ರ ದೊರೆಯತಕ್ಕದ್ದು. ಎಲ್ಲರೂ ಗೀತೆಯನ್ನು ಓದಬಹುದು. ಆದರೆ ಭಗವಂತನು ಉಪದೇಶಿಸಿರುವ ಗೀತಾಧಾರೆಗೆ ಯಾರ ಮನಸ್ಸು ಒಲಿಯುವದೋ, ಯಾರು ತಮ್ಮ ವಿಚಾರಧಾರೆಯನ್ನು ಗೀತಾವಿಚಾರಧಾರೆಯಲ್ಲಿ ಒಂದುಗೂಡಿಸಿಕೊಳ್ಳಲು ಸಿದ್ಧರಾಗಿರುವರೋ ಅವರಿಗೆ ಮಾತ್ರವೇ ಗೀತೋಪದೇಶವು ನಿಜವಾದ ಉಪದೇಶವಾಗುವದು. ಮಿಕ್ಕವರಿಗೆ ಅದು ಎಂದಿಗೂ ಭೇದಿಸುವದಕ್ಕಾಗದ ಒಗಟಾಗಿರುತ್ತದೆ, ಅರ್ಜುನನು ಭಗವದ್ಭಕ್ತನಾದ್ದರಿಂದ "ಇದನ್ನು ನಿನಗೆ ಹೇಳಿರುತ್ತೇನೆ" ಎಂದು ವಿಶೇಷರೂಪದಿಂದ ಭಗವಂತನು ಹೇಳಿದ್ದು ಯುಕ್ತವಾಗಿರುತ್ತದೆ.

ಶ್ರೀಕೃಷ್ಣನು ಭಗವಂತನೇ ಎಂಬುದನ್ನು ನಮಗೆ ನೆನಪುಕೊಡುವದಕ್ಕಾಗಿ ಇಲ್ಲಿ ಕೃಷ್ಣನ ಜನ್ಮದ ವಿಷಯವಾದ ಅರ್ಜುನನ ಪ್ರಶ್ನೆಯನ್ನೂ ಭಗವಂತನ ಉತ್ತರವನ್ನೂ

ಓದುಗರ ಮುಂದೆ ಇಟ್ಟಿರುತ್ತದೆ. ಗೀತಾಶಾಸ್ತ್ರವೆಲ್ಲವೂ ಜನ್ಮಮರಣಗಳೆಂಬ ಸಂಸಾರದಿಂದ ಪಾರುಮಾಡತಕ್ಕದ್ದು ಎಂದು ಮೊದಲೇ ಹೇಳಿರುತ್ತದೆ. ನಮ್ಮೆಲ್ಲರ ಆತ್ಮನು ಒಬ್ಬನೇ, ಅವನಿಗೆ ಜನನಮರಣಾದಿಗಳು ಇಲ್ಲವೇ ಇಲ್ಲ ಎಂದು ಹಿಂದೆಯೇ "ನ ಜಾಯತೇ ಮ್ರಿಯತೇ ವಾ" (೨-೨೦) ಎಂದು ತಿಳಿಸಿದ್ದಾಗಿದೆ. ನಮ್ಮಗಳಿಗೆ ಅಜ್ಞಾನವು ಬಲವಾಗಿರುವದರಿಂದ ಈ ಪರಮಾರ್ಥವು ಮರೆತುಹೋಗುವ ಸಂಭವವೇ ಹೆಚ್ಚು. ಆದ್ದರಿಂದ ಇದೇ ವಿಷಯವನ್ನೇ ಇಲ್ಲಿ ಪ್ರಕಾರಾಂತರದಿಂದ ನೆನಪುಕೊಟ್ಟಿರುತ್ತದೆ.

ಶ್ರೀಕೃಷ್ಣನು ವಸುದೇವನ ಮನೆಯಲ್ಲಿ ಈಚೆಗೆ ದ್ವಾಪರಯುಗದಲ್ಲಿ ಹುಟ್ಟಿದವನೆಂದು ಎಲ್ಲರಿಗೂ ಗೊತ್ತಿದೆ. ಆದರೆ ವಿವಸ್ವಂತನು ಬಹುಕಾಲದ ಹಿಂದೆಯೇ ಹುಟ್ಟಿದವನು. ಹೀಗಿರುವಲ್ಲಿ ಶ್ರೀಕೃಷ್ಣನೇ ಈ ಯೋಗವನ್ನು ವಿವಸ್ವಂತನಿಗೆ ಉಪದೇಶಮಾಡಿದನೆಂದು ನಂಬುವದು ಹೇಗೆ? ಇದು ಸಹಜವಾದ ಪ್ರಶ್ನೆ. ಅರ್ಜುನನ ಈ ಪ್ರಶ್ನೆಯ ಮೂಲಕ ವ್ಯಾವಹಾರಿಕದೃಷ್ಟಿಯಿಂದ ನೋಡುವ ಜನರಿಗೆಲ್ಲ ಉಂಟಾಗಬಹುದಾದ ಶಂಕೆಯನ್ನು ಮುಂದಕ್ಕೆ ತಂದು ಭಗವಂತನ ಉತ್ತರದಿಂದ ಇದಕ್ಕೆ ಪರಿಹಾರವನ್ನು ಹೇಳಿರುತ್ತದೆ. ಭಗವಂತನ ಉತ್ತರವನ್ನು ಈಗ ಪರಿಶೀಲಿಸೋಣ:

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥** (೪-೫)

"ನನಗೂ ನಿನಗೂ ಬಹುಜನ್ಮಗಳು ಆಗಿಹೋಗಿರುತ್ತವೆ. ಅವುಗಳೆಲ್ಲವನ್ನೂ ನಾನು ಬಲ್ಲೆ, ಆದರೆ ನೀನು ಅರಿತಿಲ್ಲ" ಎಂಬುದು ಭಗವಂತನ ಉತ್ತರ. ಈ ವಾಕ್ಯದ ಅಕ್ಷರಾರ್ಥವನ್ನು ಹಿಡಿದರೆ ಅರ್ಜುನನು ಜನರಿಗೆ ಒಂದೇ ಜನ್ಮವು ಇದೆ ಎಂದು ನಂಬಿರುತ್ತಾನೆಂದೂ ಶ್ರೀಕೃಷ್ಣನು ಮಾತ್ರ ಬಹುಜನ್ಮಗಳಿವೆ ಎಂದು ಪ್ರತಿಪಾದಿಸುತ್ತಿದಾನೆಂದೂ ತೋರುತ್ತದೆ. ಆದರೆ ವಸ್ತುಸ್ಥಿತಿಯು ಹೀಗಿಲ್ಲ. ಹಾಗೆಂದು ತಿಳಿದರೆ ಗೀತೆಯಲ್ಲಿ ಹಿಂದೆ ಹೇಳಿರುವ ಉಪದೇಶಕ್ಕೂ ಮುಂದೆ ಹೇಳುವ ಉಪದೇಶಕ್ಕೂ ವಿರುದ್ಧವಾಗುವದು. ಆತ್ಮನು ಒಬ್ಬನು, ಅವನಿಗೆ ಹುಟ್ಟಿಲ್ಲ, ಬೆಳವಣಿಗೆಯಿಲ್ಲ, ಮಾರ್ಪಡುವಿಕೆಯಿಲ್ಲ, ಸವೆಯುವಿಕೆಯಿಲ್ಲ, ಸಾವಿಲ್ಲ-ಎಂದು ಹೇಳಿರುತ್ತದೆ. ನನ್ನ ಜನ್ಮಕರ್ಮಗಳನ್ನು ತಿಳಿದರೆ ಪುನರ್ಜನ್ಮವಿಲ್ಲದ ಮುಕ್ತಿಯನ್ನೇ ಪಡೆಯುತ್ತಾರೆ ಎಂದು ಮುಂದೆ ಹೇಳಿರುತ್ತದೆ. ಆದ್ದರಿಂದ ಶ್ರೀಕೃಷ್ಣನಿಗೆ ಅನೇಕ ಜನ್ಮಗಳು ಇವೆ ಎಂಬುದಾಗಲಿ ಅರ್ಜುನನಿಗೆ ಅನೇಕ ಜನ್ಮಗಳಿವೆ ಎಂಬುದಾಗಲಿ ಇಲ್ಲಿ ವಿವಕ್ಷಿತವಲ್ಲ. ಅಜ್ಞರ ದೃಷ್ಟಿಯಿಂದ ಕಾಣುವ ಜನ್ಮಗಳೆಂಬವು ಅವಿದ್ಯೆಯಿಂದ

ತೋರುವ ಮಾಯಾಮಾತ್ರವಾಗಿರುತ್ತವೆ. ಕನಸುಗಳಲ್ಲಿ ನಾವು ಎಷ್ಟೋ ಶರೀರಗಳನ್ನು ಪಡೆದಿರುತ್ತೇವೆ; ಅವು ಕನಸಿನ ಕಾಲಕ್ಕೆ ನಿಜವಾದ ಶರೀರಗಳೆಂದೇ ತೋರುತ್ತಿದ್ದವು. ಆದರೆ ಎಚ್ಚರದ ದೃಷ್ಟಿಯಿಂದ ನೋಡಿದರೆ ಅವು ಶರೀರಗಳೇ ಅಲ್ಲ, ಶರೀರಾಭಾಸಗಳು. ನಾವು ಕನಸಿನಲ್ಲಿ ಹುಟ್ಟಿದ್ದೆವೆಂಬುದೆಲ್ಲವೂ ಮಾಯಿಕವೆಂದು ಹೇಗೆ ನಾವು ಎಚ್ಚರದ ದೃಷ್ಟಿಯಿಂದ ನೋಡಿ ನಿಶ್ಚಯಿಸಿಕೊಂಡಿರುವೆವೋ ಹಾಗೆಯೇ ಸರ್ವಾತ್ಮನಾದ ಭಗವಂತನು ಪರಮಾರ್ಥದೃಷ್ಟಿಯಿಂದ ನೋಡಿ ತನ್ನ ಅವತಾರಗಳೆಂದೂ ಮಿಕ್ಕ ಜೀವರ ಜನ್ಮಗಳೆಂದೂ ತೋರುವ ಶರೀರಗ್ರಹಣಗಳೆಲ್ಲವೂ ಮಾಯಿಕವೆಂದು ನಿಶ್ಚಿತವಾಗಿ ತಿಳಿದಿರುತ್ತಾನೆ. ಅರ್ಜುನನಂಥ ಜೀವರುಗಳ ಜ್ಞಾನಶಕ್ತಿಗೆ ಧರ್ಮಾಧರ್ಮಗಳೇ ಮುಂತಾದ ಪ್ರತಿಬಂಧಕವಿರುವದರಿಂದ ಅವರಿಗೆ ಈ ತತ್ತ್ವವು ತಿಳಿಯುವದಿಲ್ಲ. ಅವರು ಜನನಮರಣಪ್ರವಾಹವು ಸತ್ಯವೆಂದೇ ನಂಬಿರುತ್ತಾರೆ. ಹೀಗೆಂಬುದು ಭಗವಂತನ ಅಭಿಪ್ರಾಯವು.

ಈ ಅಭಿಪ್ರಾಯವನ್ನೇ ಮುಂದಿನ ಶ್ಲೋಕದಲ್ಲಿ ಭಗವಂತನು ವಿಶದಗೊಳಿಸಿರುತ್ತಾನೆ:

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥** (೪-೬)

"ನಾನು ಅಜನು, ಧರ್ಮಾಧರ್ಮಗಳಿಂದ ಶರೀರವನ್ನು ಧರಿಸುವವನಲ್ಲ. ಅವ್ಯಯಾತ್ಮನು, ನನ್ನ ಶರೀರವು ಮಿಕ್ಕವರ ಭೌತಿಕಶರೀರದಂತೆ ಕ್ರಮಕ್ರಮವಾಗಿ ಸವೆದು ನಾಶವಾಗುವದೂ ಅಲ್ಲ. ಬ್ರಹ್ಮನು ಮೊದಲಾಗಿ ಸ್ತಂಬದವರೆಗಿನ ಪ್ರಾಣಿಗಳ ಜನ್ಮಕ್ಕೆ ಕಾರಣನಾಗಿರುವವನು ನಾನು. ಎಲ್ಲಾ ಭೂತಗಳೂ ನನ್ನಿಂದ ಹುಟ್ಟಿ, ನನ್ನಲ್ಲಿ ಬೆಳೆದುಕೊಂಡಿದ್ದು, ನನ್ನಲ್ಲಿಯೇ ಲಯವಾಗುವವು. ನನಗೆ ಜನ್ಮಸ್ಥಿತಿನಾಶಗಳೆಂಬ ಯಾವ ಅವಸ್ಥೆಗಳೂ ಇರುವದಿಲ್ಲ." ಹಾಗಾದರೆ ಈಗ ವಸುದೇವಗೃಹದಲ್ಲಿ ಕಾಣಿಸಿಕೊಂಡಿರುವ ಶರೀರವಾಗಲಿ ಹಿಂದೆ ವಿವಸ್ವಂತನಿಗೆ ಉಪದೇಶಿಸಿದಾಗ ತೋರಿಸಿಕೊಂಡ ಶರೀರವಾಗಲಿ ಎಲ್ಲಿಂದ ಬಂತು? ಎಂದರೆ ಅದಕ್ಕೆ ಉತ್ತರವಿದು. ಭಗವಂತನು ತನ್ನ ಪ್ರಕೃತಿಯನ್ನು, ವೈಷ್ಣವಮಾಯೆಯನ್ನು, ತನ್ನ ಅಧೀನದಲ್ಲಿಟ್ಟುಕೊಂಡು ಯಾವಾಗಲೆಂದರೆ ಆಗ, ಎಲ್ಲೆಂದರೆ ಅಲ್ಲಿ ಯಾವ ಶರೀರವೆಂದರೆ ಆ ಶರೀರವನ್ನು, ಮಾಯಾವಿಯು ಸೃಷ್ಟಿಸಿಕೊಳ್ಳುವ ಮಾಯಾಶರೀರದಂತೆ ಸೃಷ್ಟಿಸಿಕೊಳ್ಳಬಲ್ಲನು. ಈ ಬಗೆಯ ಜನ್ಮದಿಂದ ಅವನ ನಿತ್ಯಶುದ್ಧಬುದ್ಧಮುಕ್ತಸ್ವಭಾವದಲ್ಲಿ ಯಾವ ಹೆಚ್ಚು ಕಡಿಮೆಯೂ ಆಗುವದೇ ಇಲ್ಲ. ನಾಟಕದಲ್ಲಿ ಪಾತ್ರಗಳನ್ನು ವಹಿಸಿಕೊಳ್ಳುವವನು ತನ್ನ

ಸ್ವರೂಪದಲ್ಲಿ ಯಾವ ಮಾರ್ಪಾಡೂ ಇಲ್ಲದೆಯೇ ಆಯಾ ವೇಷವನ್ನು ಲೀಲೆಯಿಂದ ಧರಿಸುವಂತೆ ಭಗವಂತನೂ ಬೇರೆಬೇರೆಯ ಜನ್ಮಗಳನ್ನು ಪಡೆಯುತ್ತಾನೆ. ಮಿಕ್ಕವರು ಮಾತ್ರ ಪ್ರಕೃತಿಗೆ ವಶರಾಗಿ ಕರ್ಮಫಲವಾದ ಆಯಾ ಶರೀರವನ್ನು ಧರಿಸಿ ಮಾಯಾಮೋಹದಿಂದ ಆಯಾ ಶರೀರದಲ್ಲಿಯೇ ನಾನು ನನ್ನದು ಎಂಬ ಮಿಥ್ಯಾಭಿಮಾನವನ್ನು ಪಡೆಯುತ್ತಾರೆ.

ಭಗವಂತನು ಮಾಯೆಯಿಂದಲಾದರೂ ಏತಕ್ಕೆ ಹೀಗೆ ಜನ್ಮಗಳನ್ನು ಪಡೆಯುತ್ತಾನೆ? ಸ್ವತಂತ್ರನಾದರೂ ಕರ್ಮಗಳನ್ನೇಕೆ ಮಾಡುತ್ತಾನೆ? ಎಂದರೆ ಯಾವ ಯಾವಾಗ ಧರ್ಮವು ಕುಂದುವದೋ, ಅಧರ್ಮವು ತಲೆಎತ್ತಿಕೊಳ್ಳುವದೋ, ಆಗ ಧರ್ಮವನ್ನು ಸ್ಥಾಪಿಸಿ ಧರ್ಮಿಷ್ಠರನ್ನು ಕಾಪಾಡುವದಕ್ಕಾಗಿ ಮಾಯಾಶರೀರಗ್ರಹಣವನ್ನು ಮಾಡುತ್ತಾನೆ. ಯಾರು ಅಧರ್ಮಿಷ್ಠರೋ ಯಾರು ಭಗವಂತನ ಸಂಕಲ್ಪಕ್ಕೆ ವಿರುದ್ಧವಾಗಿ ನಡೆಯುವರೋ ಅವರು ತಮ್ಮ ದುಷ್ಕರ್ಮದ ಫಲದಿಂದ ತಾವೇ ನಷ್ಟರಾಗುತ್ತಾರೆ. ಆದರೆ ಯಾರು ಭಗವಂತನನ್ನು ನಂಬಿ ಧರ್ಮವನ್ನೇ ಆಚರಿಸುವರೋ ಅವರು ಹೇಗೂ ಬದುಕಿಕೊಳ್ಳುತ್ತಾರೆ. ಇಷ್ಟೇ ಅಲ್ಲ, ಭಗವಂತನ ಈ ಜನ್ಮಕರ್ಮಗಳ ನಿಜವನ್ನು ಅರಿತರೆ ಆಗುವ ಮಹಾಫಲವನ್ನು ಕೇಳಿರಿ:

**ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥** (೪-೯)

ಯಾವನು ನನ್ನ ದಿವ್ಯವಾದ ಜನ್ಮವನ್ನೂ ಕರ್ಮವನ್ನೂ ಹೀಗೆಂದು ಸರಿಯಾಗಿ ಅರಿತುಕೊಳ್ಳುವನೋ ಅವನು ಈ ದೇಹವನ್ನು ಬಿಟ್ಟ ಬಳಿಕ ಮತ್ತೆ ಜನ್ಮವನ್ನು ಹೊಂದುವದಿಲ್ಲ, ನನ್ನನ್ನೇ ಸೇರುವನು" ಎಂದು ಭಗವಂತನು ಹೇಳಿರುತ್ತಾನೆ. ಇದು ಹೇಗಾದೀತು? ಭಗವಂತನ ಜನ್ಮಕರ್ಮಗಳನ್ನು ತಿಳಿದುಕೊಂಡವನಿಗೆ ಮತ್ತೆ ಜನ್ಮವಾಗುವದಿಲ್ಲವೆಂಬುದು ಹೇಗೆ? ಎಂದು ಯಾರಾದರೂ ಶಂಕಿಸಬಹುದು. ಆದರೆ ಭಗವಂತನು ನಮ್ಮೆಲ್ಲರ ಆತ್ಮನೆಂಬ ಜ್ಞಾನಿಗಳ ದೃಷ್ಟಿಯನ್ನಳವಡಿಸಿಕೊಂಡವರಿಗೆ ಈ ಶಂಕೆಯ ಜೊಳ್ಳುತನವು ಎದ್ದುಕಾಣಿಸುತ್ತದೆ. ಯಾವನು ಭಗವತ್ಕರ್ಮವನ್ನು ಮಾಡಿ ಚಿತ್ತಶುದ್ಧಿಯನ್ನು ಪಡೆದುಕೊಳ್ಳುವನೋ ಅವನಿಗೆ ಜ್ಞಾನದೃಷ್ಟಿಯು ಬರುತ್ತದೆ. ಆಗ ಅವನಿಗೆ ಭಗವಂತನು ತನ್ನ ಜನ್ಮಕರ್ಮಗಳನ್ನೇ ಇವನಿಗೆ ಕೊಡುತ್ತಾನೆ. ಭಗವಂತನಿಗೆ ನಿಜವಾಗಿ ಯಾವ ಜನ್ಮವೂ ಇಲ್ಲ, ಯಾವ ಕರ್ಮವೂ ಇಲ್ಲ; ಆತನ ಜನ್ಮಕರ್ಮಗಳೆಲ್ಲ ಮಾಯಿಕವು ಎಂದು ತೋರುವದರಿಂದ "ಭಗವಂತನೇ ನನ್ನ ಆತ್ಮನು; ಆದ್ದರಿಂದ ನನಗೂ ಜನ್ಮಕರ್ಮಗಳಿಲ್ಲ" ಎಂಬ ನಿಶ್ಚಿತವಾದ ಅರಿವು ಇವನಿಗೆ

ಉಂಟಾಗುವಂತೆ ಅನುಗ್ರಹಿಸುತ್ತಾನೆ. ಈ ಅರಿವಿನ ಕಣ್ಣಿನಿಂದ ನೋಡಿದರೆ ಈಗ ತೋರುವ ಶರೀರವೇ ಮಾಯಿಕವೆಂದು ನಿಶ್ಚಯವಾಗುವದರಿಂದ ಮಾಯಿಕವಾದ ಈ ಶರೀರದಿಂದ ಮಾಯಿಕವಾದ ಕರ್ಮಗಳನ್ನು ಮಾಡಿದರೆ ಸತ್ಯವಾದ ಶರೀರಾಂತರ ವುಂಟಾಗುವದೆಂಬುದು ಹೇಗೆ ಸಂಭವಿಸೀತು? ಇಂಥ ಜ್ಞಾನಿಗೆ ಭಗವತ್ಸಾಯುಜ್ಯವೇ ಗತಿಯಲ್ಲದೆ ಮತ್ತೆ ಬೇರೆಯ ಯಾವ ಗತಿಯೂ ಆಗುವ ಸಂಭವವಿಲ್ಲ.

ಇಷ್ಟೇ ಅಲ್ಲ. ಹಿಂದೆ ಅನೇಕರು ಇಂಥ ಜ್ಞಾನವನ್ನು ಸಂಪಾದಿಸಿ ಭಗವದ್ಭಾವ ವನ್ನೇ ಪಡೆದಿರುತ್ತಾರೆ.

**ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥** (೪-೧೦)

ವಿಷಯಗಳನ್ನೇ ಚಿಂತಿಸುತ್ತಿರುವ ಅಜ್ಞ ಜೀವರುಗಳು ವಿಷಯಮಯ ರಾಗಿರುತ್ತಾರೆ. ಅವರಿಗೆ ವ್ಯವಹಾರಕ್ಕೆ ವಿಷಯಗಳೇ ಆಶ್ರಯ. ವಿಷಯಗಳನ್ನು ಚಿಂತಿಸಿ ಚಿಂತಿಸಿ ಅಂತಃಕರಣವನ್ನೆಲ್ಲ ಅಶುದ್ಧಿಗೊಳಿಸಿಕೊಂಡಿರುವದರಿಂದ ಅವರಿಗೆ ವಿಷಯವನ್ನು ಕಂಡೊಡನೆ ಅದರಲ್ಲಿ ರಾಗವೂ, ಅದು ದೊರಕದಿದ್ದರೆ ಮತ್ತೆ ಯಾರಿಗೆ ಅದು ದೊರಕುವದೋ ಎಂದೂ, ದೊರತರೆ ಅದನ್ನು ಅಪಹರಿಸುವರೋ ಎಂದೂ ಅಥವಾ ಅದೇ ಎಲ್ಲಿ ನಾಶವಾಗಿಬಿಡುವದೋ ಎಂದೂ-ಅಂಜಿಕೆಯೂ ಆಗುತ್ತಿರುವವು. ಅವರ ಆಸೆಗೆ ಯಾವದಾದರೂ ಅಡ್ಡಿಯುಂಟಾದರೆ ಅವರಿಗೆ ಸಿಟ್ಟು ಎದ್ದುಕೊಳ್ಳುವದು. ಆದರೆ ಹೀಗೆ ವಿಷಯತಾದಾತ್ಮ್ಯವನ್ನು ಹೊಂದುವ ಮೂರ್ಖ ರಂತಲ್ಲದೆ ಯಾರು ಭಗವಂತನನ್ನೇ ಆಶ್ರಯಿಸಿ ರಾಗಭಯಕ್ರೋಧಗಳನ್ನು ತೊಲಗಿಸಿ ಕೊಂಡಿರುವರೋ ಅವರು ಜ್ಞಾನತಪಸ್ಸಿನಿಂದ ಭಗವನ್ಮಯರಾಗಿರುತ್ತಾರೆ-ಎಂದು ಭಗವಂತನು ಹೇಳಿರುತ್ತಾನೆ. ಭಗವಂತನು ದಯಾಮೂರ್ತಿಯು. ಅರ್ಜುನನು "ನೀನು ಆ ಕಾಲದ ವಿವಸ್ವಂತನಿಗೆ ತತ್ತ್ವವನ್ನು ಹೇಗೆ ಹೇಳಿದೆ?" ಎಂದಷ್ಟೇ ಕೇಳಿದ್ದರೂ ತನ್ನ ಅವತಾರದ ಮತ್ತು ಲೀಲಾಕರ್ಮಗಳ ರಹಸ್ಯವನ್ನೆಲ್ಲ ಹೇಳಿಬಿಟ್ಟಿರು ತ್ತಾನೆ. ಯಾರು ಹೀಗೆಂದು ತಿಳಿದುಕೊಂಡು ಭಗವಂತನನ್ನೇ ಆಶ್ರಯಿಸಿ ಕರ್ಮಗಳನ್ನು ಮಾಡುವರೋ ಅವರಿಗೆ ವಿಷಯಗಳಿಂದಾಗುವ ಬಂಧವು ಸಡಿಲವಾಗುವದು; ಚಿತ್ತವು ಭಗವನ್ಮಯವಾಗುವದು; ಕೊನೆಗೆ ಭಗವಂತನ ಸಾಯುಜ್ಯವೇ ದೊರೆಯು ವದು.

# ೨೬. ಭಗವಂತನಿಂದಲೇ ಕರ್ಮಫಲಗಳು ೪-(೧೧-೧೭)
(೨೨.೧೨.೪೬)

ಮಿಕ್ಕ ಜೀವರುಗಳು ಹುಟ್ಟುವಂತೆಯೇ ಭಗವಂತನೂ ಹುಟ್ಟುವಂತೆ ತೋರಿದರೂ ಅವನು ಮಾಯೆಯಿಂದಲೇ ಹುಟ್ಟುತ್ತಾನೆ; ಜೀವರಂತೆ ಪ್ರಕೃತಿವಶನಾಗಿ ಧರ್ಮಾಧರ್ಮಗಳ ಫಲವಾದ ಶರೀರವನ್ನು ಧರಿಸುವದಿಲ್ಲ; ಜೀವರ ಶರೀರಗಳು ಅವರ ವಶದಲ್ಲಿರುವದಿಲ್ಲ; ಅವರು ಬೇಕೆಂದಾಗ ಅವನ್ನು ಹಿಗ್ಗಿಸುವದಕ್ಕಾಗಲಿ ಕುಗ್ಗಿಸುವದಕ್ಕಾಗಲಿ ಉಪಸಂಹಾರಮಾಡಿಕೊಳ್ಳುವದಕ್ಕಾಗಲಿ ಆಗಲಾರದು. ಆದರೆ ಭಗವಂತನು ಬೇಕುಬೇಕಾದಾಗ ಶರೀರವನ್ನು ಸಂಕಲ್ಪಮಾತ್ರದಿಂದ ಸೃಷ್ಟಿಸಿಕೊಂಡು ತನ್ನ ಲೀಲಾಕಾರ್ಯಗಳಿಗೆ ಉಪಯೋಗಿಸಿಕೊಂಡ ಬಳಿಕ ಇಚ್ಛಾಮಾತ್ರದಿಂದಲೇ ಅದನ್ನು ಉಪಸಂಹರಿಸಿಕೊಳ್ಳಬಲ್ಲನು. ಹಿರಣ್ಯಕಶಿಪುವಿನ ಚಿತ್ರಹಿಂಸೆಗೆ ಒಳಪಟ್ಟಿದ್ದ ಪ್ರಹ್ಲಾದನನ್ನು ಕಾಪಾಡುವದಕ್ಕೆಂದು ಕಂಬದಲ್ಲಿ ನೃಸಿಂಹರೂಪದಿಂದ ಅವತರಿಸಿ ಅಂತರ್ಧಾನವಾದ ರೀತಿಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಇಂದ್ರಾದಿಗಳಿಗೆ ಬಂದಿದ್ದ ದುರಭಿಮಾನವನ್ನು ಕಳೆದು ಅನುಗ್ರಹಿಸುವದಕ್ಕಾಗಿ ಅದ್ಭುತವಾದ ಯಕ್ಷನ ರೂಪದಿಂದ ತೋರಿಕೊಂಡ ಲೀಲಾವಿಗ್ರಹವನ್ನು ಮನದಂದರೆ ಈ ವಿಷಯದಲ್ಲಿ ಭಗವಂತನ ಸರ್ವಸ್ವಾತಂತ್ರ್ಯವು ಇನ್ನೂ ಸುಸ್ಪಷ್ಟವಾಗುತ್ತದೆ.

ಹೀಗೆ ಭಗವಂತನು ತನಗೆ ವಶವಾಗಿರುವ ಮಾಯೆಯಿಂದ ತನಗೆ ಬೇಕುಬೇಕಾದ ಶರೀರಗ್ರಹಣವನ್ನು ಮಾಡುವನು; ಆ ಶರೀರದಿಂದ ತನಗೆ "ಇಷ್ಟಬಂದಂತೆ ಧರ್ಮದ ಉದ್ಧಾರಕ್ಕಾಗಿ ಮಾಡಬೇಕಾದ ಕರ್ಮಗಳನ್ನು ಮಾಡುವನು. ಆತನು ಯಾವದೊಂದು ಶರೀರಕ್ಕಾಗಲಿ ಕರ್ಮಕ್ಕಾಗಲಿ ಎಂದಿಗೂ ಕಟ್ಟುಬಿದ್ದವನಲ್ಲ ಎಂಬ ಜ್ಞಾನವು ಒಂದು ಮಹಾತಪಸ್ಸು. ಕೃಚ್ಛ್ರ, ಚಾಂದ್ರಾಯಣ ಮುಂತಾದ ನಿರಶನ ವ್ರತರೂಪವಾದ ತಪಸ್ಸು ಜೀವರನ್ನು ಶುದ್ಧರನ್ನಾಗಿ ಮಾಡುವದೆಂದು ಧರ್ಮಶಾಸ್ತ್ರದಲ್ಲಿದೆ. ಆದರೆ ಭಗವಂತನನ್ನು ಆಶ್ರಯಿಸಿ ಪ್ರಯತ್ನಮಾಡುವ ಮಹನೀಯರಿಗೆ ಉಂಟಾಗುವ ಜ್ಞಾನವೆಂಬ ತಪಸ್ಸಿನಿಂದ ಸಿಗುವ ಮಹಾಶುದ್ಧಿಯು ಮತ್ತೆ ಯಾವ ತಪಸ್ಸಿನಿಂದಲೂ ಆಗಲಾರದು. ಪರಮಾತ್ಮನ ಯೋಗವೂ ಭಕ್ತಿಯೂ ತಪಸ್ಸುಗಳೇ; ಆದರೆ ಜ್ಞಾನವು ಪರಮ ತಪಸ್ಸು. ಆ ತಪಸ್ಸಿನಿಂದ ರಾಗದ್ವೇಷಭಯಗಳು ಆತ್ಯಂತಿಕವಾಗಿ ತೊಲಗುವವು. ಏಕೆಂದರೆ ನಿತ್ಯಶುದ್ಧನಾದ ಭಗವಂತನ ಸ್ವರೂಪವೇ ಜ್ಞಾನಿಗೆ ಬಂದು ಬಿಡುತ್ತದೆ. ಭಗವದ್ಭಾವಪ್ರಾಪ್ತಿ ಎಂಬ ಈ ಮಹಾಫಲವು ಮತ್ತೆ ಯಾವ ಸಾಧನದಿಂದಲೂ ದೊರಕಲಾರದು. ಜೀವರುಗಳು ಪ್ರಕೃತಿವಶರಾಗುವದು

ಸಹಜವಾಗಿದ್ದರೂ ಅದು ಅಜ್ಞಾನದೆಶೆಯಲ್ಲಿ ಮಾತ್ರ; ಜ್ಞಾನದಿಂದ ಅಜ್ಞಾನವು ತೊಲಗಿದರೆ ಆಗ ಜೀವಪರಮಾತ್ಮಭೇದವೇ ಇರುವದಿಲ್ಲ. ಹೀಗೆ ಪರಮೇಶ್ವರನ ಅನುಗ್ರಹವನ್ನು ಪಡೆದವರಿಗೆ ಪರಮೇಶ್ವರಭಾವವೇ ಉಂಟಾಗಿಬಿಡುತ್ತದೆ.

ಇಲ್ಲಿ ಒಂದು ಶಂಕೆ: ಇಂಥ ಉತ್ತಮವಾದ ಜ್ಞಾನವು ಎಲ್ಲರಿಗೂ ಏತಕ್ಕೆ ಲಭಿಸುವದಿಲ್ಲ? ಜೀವರ ದೃಷ್ಟಿಯಿಂದ ಈ ಶಂಕೆಗೆ ಒಂದು ಸಮಾಧಾನವನ್ನು ಹೇಳುವದಕ್ಕೆ ಬರುತ್ತದೆ. ಆಯಾ ಜೀವರು ಆಯಾ ಪ್ರಕೃತಿಯನ್ನು ಹೊಂದುತ್ತಾರೆ; ಅವರವರ ಸಂಸ್ಕಾರವು ಅವರವರಿಗೆ ಅಂಥಂಥ ಬುದ್ಧಿಯನ್ನು ಕೊಡುತ್ತದೆ ಎಂಬುದೇ ಸಮಾಧಾನ. ಆದರೆ ಸರ್ವಶಕ್ತನಾದ ಈಶ್ವರನು ಎಲ್ಲರಲ್ಲಿಯೂ ಸಮವಾಗಿರುವಾಗ ಎಲ್ಲರಿಗೂ ಏತಕ್ಕೆ ಆತ್ಮಭಾವವನ್ನು ಕೊಡುವದಿಲ್ಲ! ಆತನಿಗೂ ರಾಗದ್ವೇಷಗಳುಂಟೆ? ಈ ಶಂಕೆಗೆ ಸಮಾಧಾನವನ್ನು ಭಗವಂತನು ಹೇಳಿರುವದನ್ನು ಕೇಳಿ:

**ಯೇ ಯಥಾ ಮಾಂ ಪ್ರಪದ್ಯನ್ತೇ ತಾಂಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ ॥** (೪-೧೧)

ಭಗವಂತನು ಸರ್ವಶಕ್ತನೆಂಬುದು ಖಂಡಿತ. ಆತನ ನಿಯಮವನ್ನು ಬಿಟ್ಟು ಯಾರೊಬ್ಬರೂ ಕದಲಲಾರರು. ಆತನ ನಿಯಮವೇನೆಂದರೆ ಯಾರು ಏನನ್ನು ಕೋರುವರೋ ಅದು ಅವರಿಗೆ ಸಿದ್ಧಿಸಬೇಕು ಎಂಬುದು. ಭಗವಂತನು ಎಲ್ಲರನ್ನೂ ಜ್ಞಾನವನ್ನೇ ಕೋರುವಂತೆ ಮಾಡಬಾರದೇಕೆ? ಎಂಬ ಶಂಕೆ ಸರಿಯಲ್ಲ. "ಈ ಉಪಾಧ್ಯಾಯರು ಎಲ್ಲಾ ಹುಡುಗರನ್ನೂ ಪ್ಯಾಸ್ (ತೇರ್ಗಡೆ) ಮಾಡಿಸುತ್ತಾರೆ; ನಮ್ಮ ಹುಡುಗನನ್ನೇಕೆ ಮಾಡಿಸಬಾರದು?" ಎಂದು ಆಕ್ಷೇಪಿಸುವದು ಹೇಗೆ ಸರಿಯಲ್ಲವೋ ಹಾಗೆಯೇ ಈ ಆಕ್ಷೇಪವೂ ಸರಿಯಲ್ಲ. ಓದದೆ ಇರುವ ಹುಡುಗರನ್ನು ಪ್ಯಾಸು ಮಾಡಿಸುವದು ಯಾವ ಮೇಷ್ಟರಿಂದಲೂ ಆಗಲಾರದು. ಬೇಡವೆಂದವರಿಗೆ ಮುಕ್ತಿಯನ್ನು ಕೊಡಲು ಭಗವಂತನಿಂದಲೂ ಆಗಲಾರದು. ಒಬ್ಬ ಸಾಧುಗಳ ಬಳಿಯಲ್ಲಿ ಹಲವು ಜನ ಶಿಷ್ಯರಿದ್ದರು. ಆ ಸಾಧುಗಳು ಎಲ್ಲಾ ಶಿಷ್ಯರ ಯೋಗಕ್ಷೇಮಗಳನ್ನೂ ಸಮನಾಗಿಯೇ ವಿಚಾರಿಸಿಕೊಳ್ಳುತ್ತಿದ್ದರು. ಆ ಶಿಷ್ಯರಲ್ಲಿ ಒಬ್ಬ ದಡ್ಡನಿದ್ದನು. ಅವನು ಗೀತೆಯನ್ನು ಎಷ್ಟು ಓದಿದರೂ ಅರ್ಥವಾಗುತ್ತಿರಲಿಲ್ಲ. ಅವನನ್ನು ಮಿಕ್ಕ ಶಿಷ್ಯರು ಹಾಸ್ಯಮಾಡುತ್ತಿದ್ದರು. ಆದರೆ ಅವನು ಮಾತ್ರ ಯಾರಿಗೂ ಪ್ರತ್ಯುತ್ತರವನ್ನು ಕೊಡದೆ ಗುರುಗಳಲ್ಲಿ ಅಚಲಭಕ್ತಿಯನ್ನಿಟ್ಟುಕೊಂಡು ಗೀತೆಯನ್ನು ಪಠನಮಾಡುತ್ತಿದ್ದನು. "ಗುರುಮಹಾರಾಜರು ನನಗೆ ಎಂದಾದರೊಂದು ದಿನ ಅನುಗ್ರಹವನ್ನು ಮಾಡಿದರೆ ನನಗೂ ಗೀತಾರ್ಥವು ತಿಳಿದೀತು" ಎಂಬ ನಿಶ್ಚಲಶ್ರದ್ಧೆಯು ಅವನಿಗಿತ್ತು. ಹೀಗಿರುವಲ್ಲಿ ಶಿಷ್ಯರೆಲ್ಲರೂ ನೆರೆದಿರುವಾಗ ಸಾಧುಗಳು ಗೀತಾಪಾಠಿಯಾದ ಆ ಶಿಷ್ಯನನ್ನು

"ಅಯ್ಯಾ, ಗೀತೆಯಲ್ಲಿ ಯಾವ ಭಾಗವನ್ನು ಓದುತ್ತಿದ್ದೀಯೆ? ಸ್ವಲ್ಪ ಅರ್ಥವನ್ನು ಹೇಳು ನೋಡೋಣ" ಎಂದು ಕೇಳಿದರು. ಶಿಷ್ಯರೆಲ್ಲರೂ ಅವನು ಏನು ಹೇಳುವನೊ ಎಂದು ಕುತೂಹಲದಿಂದ ನೋಡುತ್ತಿದ್ದರು. ಅವನಿಗೆ ಏನೂ ತಿಳಿಯದೆಂಬುದು ನಿಶ್ಚಿತವಾಗಿದ್ದದ್ದರಿಂದ ಬಾಯಿಬಿಟ್ಟರೆ ಸಾಕು, ಅವನ ಬಂಡವಾಳವು ಗೊತ್ತಾಗಿ ಎಲ್ಲರಿಗೂ ವಿನೋದವಾಗುವದೆಂದು ಅವರ ನಿರೀಕ್ಷಣೆಯಿತ್ತು. ಆದರೆ ಇಷ್ಟು ಹೊತ್ತಿಗೆ ಶಿಷ್ಯನಿಗೆ ಸದ್ಗುರುನಾಥನ ಪೂರ್ಣಾನುಗ್ರಹವಾಗಿಬಿಟ್ಟಿತ್ತು. ಅವನು "ಗುರುಮಹಾರಾಜ, ತಮ್ಮ ದಯೆಯಿದ್ದರೆ ಹೇಳುತ್ತೇನೆ" ಎಂದು ಎರಡು ಮೂರು ಶ್ಲೋಕಗಳ ಅಭಿಪ್ರಾಯವನ್ನು ಬಿಡಿಸಿ ಬಿಡಿಸಿ ವಿವರಿಸಿಬಿಟ್ಟನು. ಎಲ್ಲರೂ ಅವಾಕ್ಕಾದರು! ಅಷ್ಟೇ ಅಲ್ಲ, ಆ ಶಿಷ್ಯನು ಹೀಗೆ ಗೀತಾರ್ಥಪಾರಂಗತನಾಗಿ ಪ್ರಖ್ಯಾತನಾದ ಮೇಲೂ ಮಿಕ್ಕ ಶಿಷ್ಯರುಗಳು ತಮ್ಮ ಹಿಂದಿನ ಭೂಮಿಕೆಯಲ್ಲಿಯೇ ಇರುತ್ತಿದ್ದರು. ಇಲ್ಲಿ ಗುರುಗಳಿಗೆ ಆ ಒಬ್ಬ ಶಿಷ್ಯನಲ್ಲಿ ಯಾವ ಪಕ್ಷಪಾತವೂ ಉಂಟಾಗಿರಲಿಲ್ಲ. ಆಯಾ ಶಿಷ್ಯರು ಕೋರಿದ್ದನ್ನು ಅವರವರಿಗೆ ಅವರು ಅನುಗ್ರಹಿಸುತ್ತಿದ್ದರು. ಭಗವಂತನೂ ಹಾಗೆಯೇ. ಆತನನ್ನು ಯಾರುಯಾರು ಯಾವಯಾವ ಫಲವನ್ನು ಕೋರಿ ಭಜಿಸುವರೋ ಆಯಾ ಫಲವನ್ನು ಅವರಿಗೆ ಕೊಡುತ್ತಿರುವನು. ಯಾರು ಯಾವ ಫಲವನ್ನು ಬಯಸಿ ಕರ್ಮವನ್ನು ಮಾಡುವರೋ ಅವರಿಗೆ ಆ ಫಲವನ್ನು ದೊರಕಿಸುವನು; ಯಾರು ಆರ್ತರಾಗಿ ಭಜಿಸುವರೋ ಅವರ ಆರ್ತಿಯನ್ನು ಪರಿಹರಿಸುವನು; ಯಾರು ಜ್ಞಾನವನ್ನು ಕೋರಿ ಭಜಿಸುವರೋ ಅವರಿಗೆ ಜ್ಞಾನವನ್ನು ಅನುಗ್ರಹಿಸುವನು; ಕರ್ಮವನ್ನೂ ಫಲವನ್ನೂ ಸಂನ್ಯಾಸಮಾಡಿ ಯಾರು ಮುಮುಕ್ಷುಗಳಾಗಿ ಭಗವಂತನನ್ನೇ ಭಜಿಸುವರೋ ಅವರಿಗೆ ಮೋಕ್ಷವನ್ನು ಕೊಡುವನು. ಇದರಿಂದ ಭಗವಂತನು ಪಕ್ಷಪಾತಿಯೆಂದಾಗಲಿ ಸರ್ವಜ್ಞನೂ ಸರ್ವಶಕ್ತನೂ ಅಲ್ಲವೆಂದಾಗಲಿ ಆಗುವದಿಲ್ಲ. ಎಲ್ಲರನ್ನೂ ಅನುಗ್ರಹಿಸುವದೇ ಭಗವಂತನ ಸಂಕಲ್ಪವು.

ಹಾಗಾದರೆ ಯಾವ ಫಲವೆಂದರೆ ಅದನ್ನು ಅನುಗ್ರಹಿಸಬಲ್ಲ ಸರ್ವಶಕ್ತನಾದ ಭಗವಂತನಿರುವಲ್ಲಿ ಎಲ್ಲಾ ಜೀವರೂ ಜ್ಞಾನದಿಂದ ಮೋಕ್ಷವನ್ನು ಪಡೆಯುವದಕ್ಕೆ ಬಯಸಿ ಭಗವಂತನನ್ನೇ ಏತಕ್ಕೆ ಭಜಿಸುವದಿಲ್ಲ? ಎಂದರೆ ಅದಕ್ಕೆ ಕಾರಣವಿಲ್ಲದೆ ಇಲ್ಲ. ಕರ್ಮಯೋಗಿಗಳಾಗಿ ಚಿತ್ತಶುದ್ಧಿಯನ್ನು ಹೊಂದಿ ಜ್ಞಾನವನ್ನು ಸಂಪಾದಿಸಿಕೊಳ್ಳುವದು ಬಹಳ ಕಷ್ಟ. ಆ ಫಲವು ಬಹಳ ಕಾಲವಾದ ಬಳಿಕ ಆಗತಕ್ಕದ್ದು; ಆದರೆ ಶಾಸ್ತ್ರದಲ್ಲಿ ಹೇಳಿರುವ ಕರ್ಮಗಳನ್ನು ಆಯಾ ದೇವತೆಗಳನ್ನುದ್ದೇಶಿಸಿ ಮಾಡುವದರಿಂದ ಬಹು ಬೇಗನೆ ಫಲವಾಗುತ್ತದೆ. ಬೇಗನೆ ಆಗುವ ಫಲವನ್ನು ಬಯಸುವದು ಜೀವರಿಗೆ ಸ್ವಾಭಾವಿಕವಾಗಿರುತ್ತದೆ. ಆದ್ದರಿಂದ ಆಯಾ ವರ್ಣಾಶ್ರಮಕರ್ಮವನ್ನು

ಮಾಡಿ ಆಯಾ ಕರ್ಮದ ಫಲವನ್ನು ಬೇಗನೆ ಪಡೆಯುವದಕ್ಕೇ ಬಲು ಮಂದಿ ಹವಣಿಸುತ್ತಾರೆ. ಇಷ್ಟೇಕೆ? ಶಾಸ್ತ್ರದಲ್ಲಿ ಶ್ರದ್ಧೆಯಿಲ್ಲದೆ ಕಾಲಾಂತರದಲ್ಲಿ ಲೋಕಾಂತರದಲ್ಲಿ ಆಗುವ ಸ್ವರ್ಗಾದಿಫಲವನ್ನು ಕಡೆಗಣಿಸಿ ವರ್ಣಾಶ್ರಮಧರ್ಮವನ್ನೂ ಕೈಬಿಟ್ಟು ಬೇಸಾಯ, ವ್ಯಾಪಾರ-ಮುಂತಾದ ಈ ಲೋಕದಲ್ಲಿಯೇ ಫಲವನ್ನು ಕೊಡುವ ಲೌಕಿಕ ಕರ್ಮಗಳಲ್ಲಿ ನಿರತರಾಗುವವರು ಅವರಿಗಿಂತಲೂ ಹೆಚ್ಚು ಮಂದಿಯಿಲ್ಲವೆ? ಅಥವಾ ನಿಷಿದ್ಧಕರ್ಮಗಳನ್ನು ಕೂಡ ಮಾಡಿ ತಮ್ಮ ಕಾಮವನ್ನು ಪೂರ್ತಿಮಾಡಿಕೊಳ್ಳುವವರು ಅವರಿಗಿಂತಲೂ ಹೇರಳವಾಗಿ ದೊರೆಯುವದಿಲ್ಲವೆ? ಇದಕ್ಕೆಲ್ಲ ಕಾರಣವೇನು? ಕ್ಷಿಪ್ರವಾಗಿ ಫಲವನ್ನು ಕೊಡುವ ಕರ್ಮದಲ್ಲಿಯೇ ಜೀವರಿಗೆ ಸ್ವಭಾವಪ್ರವೃತ್ತಿಯುಂಟಾಗುತ್ತದೆ. ಆದ್ದರಿಂದ ಮುಮುಕ್ಷುಗಳಿಗಿಂತಲೂ ಕರ್ಮಿಗಳು ಹೆಚ್ಚಿನ ಸಂಖ್ಯೆಯವರು ಇರುವರೆಂಬುದೇನೂ ಆಶ್ಚರ್ಯವಲ್ಲ. ಅದು ಜೀವರ ಮನಸ್ಸಿನ ನೈಸರ್ಗಿಕವಾದ ಪ್ರವೃತ್ತಿಯನ್ನೇ ಸೂಚಿಸುತ್ತದೆ ಅಷ್ಟೆ.

ಮುಮುಕ್ಷುಗಳಂತೆ ಕರ್ಮಿಗಳೂ ಭಗವಂತನ ನಿಯಮವನ್ನೇ ಪಾಲಿಸಿಕೊಂಡು ತಮ್ಮ ತಮ್ಮ ಕರ್ಮಗಳ ಫಲವನ್ನು ಪಡೆಯಬೇಕಾಗಿರುತ್ತದೆ-ಎಂಬುದನ್ನು ನಾವು ನೆನಪಿನಲ್ಲಿಡಬೇಕು. ಏಕೆಂದರೆ ಯಾರು ವಿಷಯಗಳಲ್ಲಿ ವಿರಕ್ತರಾಗಿ ಮುಮುಕ್ಷುಗಳಾಗಿ ಕರ್ಮಯೋಗದಿಂದ ಭಗವಂತನನ್ನು ಆರಾಧಿಸುವರೋ, ಯಾರು ಸಂನ್ಯಾಸಿಗಳಾಗಿ ನಿತ್ಯವೂ ಭಗವಂತನ ಚಿಂತನೆಯಿಂದಲೇ ಜೀವನವನ್ನು ಸಾಗಿಸುತ್ತಿರುವರೋ, ಅವರಿಗೆ ಮೋಕ್ಷವನ್ನು ಕೊಡುವನೆಂಬುದು ಭಗವಂತನ ಸಂಕಲ್ಪವಾಗಿರುವಂತೆಯೇ ಆಯಾ ವರ್ಣಾಶ್ರಮಕರ್ಮವನ್ನು ಮಾಡಿದರೆ ಆಯಾ ಕರ್ಮಫಲವನ್ನು ಕೊಡುವನೆಂಬುದೂ ಆತನ ಸಂಕಲ್ಪವಾಗಿರುತ್ತದೆ. ಅಭ್ಯುದಯವೂ ನಿಃಶ್ರೇಯಸವೂ ಆತನ ಅಪ್ಪಣೆಯಿಂದಲೇ ಅಧಿಕಾರಿಗಳಿಗೆ ದೊರೆಯಬೇಕಾಗಿರುತ್ತದೆ. ಚಾತುರ್ವರ್ಣ್ಯವನ್ನೂ ಭಗವಂತನೇ ಸೃಷ್ಟಿಮಾಡಿರುತ್ತಾನೆ. ಸತ್ತ್ವ, ರಜಸ್ಸು, ತಮಸ್ಸು-ಎಂಬ ಗುಣಗಳಲ್ಲಿ ಯಾವನಿಗೆ ಯಾವದು ಪ್ರಧಾನವಾಗಿರುವದೋ ಅವನಿಗೆ ತಕ್ಕ ಆಯಾ ಕರ್ಮಗಳನ್ನು ಶಾಸ್ತ್ರದಲ್ಲಿ ವಿಧಿಸಿರುತ್ತಾನೆ. ಉದಾಹರಣೆಗೆ ಸತ್ತ್ವ ಪ್ರಧಾನವಾದ ಜೀವನಿಗೆ ಶಾಂತಿ, ದಾಂತಿ-ಮುಂತಾದವುಗಳು ಕರ್ಮಗಳು; ಸತ್ತ್ವಮಿಶ್ರಿತರಜಃಪ್ರಧಾನನಾದವನಿಗೆ ಶೌರ್ಯ, ತೇಜಸ್ಸು ಮುಂತಾದವು ಕರ್ಮಗಳು; ತಮೋಮಿಶ್ರಿತರಜಃಪ್ರಧಾನನಾದವನಿಗೆ ಕೃಷ್ಯಾದಿಗಳು ಕರ್ಮಗಳು; ರಜೋಮಿಶ್ರಿತ ತಮಃಪ್ರಧಾನನಾದವನಿಗೆ ಶುಶ್ರೂಷೆಯು ಕರ್ಮ, ಹೀಗೆ ಮನುಷ್ಯರಿಗೆ ಬೇರೆಬೇರೆಯ ಕರ್ಮಗಳನ್ನು ವಿಧಾನಮಾಡಿ ಆಯಾ ಕರ್ಮಗಳಿಗೆ ಆಯಾ ಫಲಗಳನ್ನು ಗೊತ್ತುಮಾಡಿ ಕೊಡುತ್ತಿರುವವನೂ ನಿಜವಾಗಿ ಭಗವಂತನೇ.

ಆದರೆ ಭಗವಂತನ ಜನ್ಮವು ಹೇಗೆ ಮಾಯಾವ್ಯವಹಾರದಿಂದ ಆದದ್ದೋ ಆದರಂತೆ ಆತನ ಈ ಕರ್ಮಫಲವಿಭಾಗವೂ ಮಾಯಿಕವೇ ಹೊರತು ಪರಮಾರ್ಥ ವಲ್ಲವೆಂಬುದನ್ನು ಇಲ್ಲಿಯೂ ನೆನಪಿನಲ್ಲಿಡಬೇಕು. ಆದ್ದರಿಂದ ಬೇರೆ ಬೇರೆಯವರಿಗೆ ಬೇರೆಬೇರೆಯ ಕರ್ಮಗಳನ್ನು ಗೊತ್ತುಮಾಡಿದನೆಂಬ ಕಾರಣದಿಂದ ಭಗವಂತನಿಗೆ ಆ ವಿಧಾನದ ಫಲವಾಗಿ ಜೀವರುಗಳಂತೆ ಜನ್ಮಗ್ರಹಣವಾಗಲಾರದು. ಈ ಕರ್ಮವನ್ನು ಮಾಡಿರುವೆನಾದ್ದರಿಂದ ಇದರ ಫಲವು ನನಗಾಗಬೇಕು ಎಂಬ ಇಚ್ಛೆಯೇ ಆತನಿಗಿರು ವದಿಲ್ಲ. ಆದ್ದರಿಂದ ಭಗವಂತನು ಮಾಡುವ ಯಾವ ಕರ್ಮವೂ ಅವನಿಗೆ ಬಂಧಕವಾಗಲಾರದು.

ಪರಮಾತ್ಮನ ಕರ್ಮಗಳು ಅವನಿಗೆ ಬಂಧಕವಲ್ಲ ಎಂಬ ಜ್ಞಾನವು ಯಾವನಿಗೆ ಉಂಟಾಗುವದೋ ಅವನು ಕೂಡಲೆ ಕರ್ಮಬಂಧದಿಂದ ಮುಕ್ತನಾಗುವನು. ಏಕೆಂದರೆ ಕರ್ಮವು ಬಂಧಕವಾಗುವದಕ್ಕೆ ಕರ್ಮಸಂಗ, ಫಲದ ಆಸೆ-ಇವೆರಡೇ ಮುಖ್ಯಕಾರಣಗಳಾಗಿರುತ್ತವೆ. ಯಾವನು ನಿತ್ಯಮುಕ್ತನಾದ ಪರಮಾತ್ಮನೇ ನನ್ನ ಆತ್ಮನು ಎಂಬ ಜ್ಞಾನವನ್ನು ಸಂಪಾದಿಸಿಕೊಳ್ಳುವನೋ ಅವನಿಗೆ "ನನಗೆ ಪರಮಾರ್ಥ ವಾಗಿ ಯಾವ ಕರ್ಮವೂ ಇರುವದಿಲ್ಲ; ನನಗೆ ಯಾವ ಕರ್ಮಫಲದ ಆಸೆಯೂ ಇಲ್ಲ" ಎಂದೇ ನಿಶ್ಚಯವಾಗಿರುವದರಿಂದ ಕರ್ಮದಿಂದ ಬಂಧಕವಾಗುವದಕ್ಕೆ ಕಾರಣವಿರುವದಿಲ್ಲ. ಯಾರುಯಾರಿಗೆ ಜ್ಞಾನವಾಗುವದೋ ಅವರವರಿಗೆ ಪರಮಾತ್ಮ ಭಾವವುಂಟಾಗುವದು; ಯಾರುಯಾರಿಗೆ ಪರಮಾತ್ಮಭಾವವುಂಟಾಗುವದೋ ಅವರವರು ಕರ್ಮಬಂಧದಿಂದ ಬಿಡಗಡೆಯಾಗುವರು. ಭಗವಂತನು ಇಂಥ ನಿತ್ಯ ಮುಕ್ತನು! ಹೀಗಿರುವಲ್ಲಿ ಆತನಿಗೆ ಜೀವರಂತೆ ಜನ್ಮಕರ್ಮಗಳುಂಟೆಂದು ಭಾವಿಸುವದು ಎಂಥ ಮೂರ್ಖತನವು!

ಇಲ್ಲಿಗೆ ಅರ್ಜುನನ ಪ್ರಶ್ನೆಗೆ ಒಂದು ಉತ್ತರವನ್ನು ಪೂರ್ತಿಯಾಗಿ ಕೊಟ್ಟಂತೆ ಆಯಿತು. ಅರ್ಜುನನು ಭಗವಂತನನ್ನು "ನೀನು ಈಚೆಗೆ ಹುಟ್ಟಿದ್ದೀಯೆ, ವಿವಸ್ವಂತನು ಹಿಂದೆ ಹುಟ್ಟಿದ್ದನು. ಹೀಗಿರುವಲ್ಲಿ ಈ ಅಧ್ಯಾತ್ಮಯೋಗವನ್ನು ಆತನಿಗೆ ನೀನೇ ಉಪದೇಶಮಾಡಿದೆ ಎಂದು ಹೇಗೆ ಅರಿತುಕೊಳ್ಳಲಿ?" ಎಂದು ಕೇಳಿದ್ದನು. ಭಗವಂತನು "ನನಗೆ ವಾಸ್ತವವಾದ ಜನ್ಮವಾಗಲಿ ಕರ್ಮವಾಗಲಿ ಇಲ್ಲವೇ ಇಲ್ಲ; ಆದರೆ ಮಾಯಿಕವಾದ ಜನ್ಮಕರ್ಮಗಳು ನನಗೆ ಉಂಟು. ಆ ಮಾಯೆಯೂ ನನ್ನ ವಶವಾಗಿರುವದರಿಂದ ನಾನು ಮಾಡುವ ಶರೀರಗ್ರಹಣವಾಗಲಿ ಕರ್ಮಗಳಾಗಲಿ ಎಂದಿಗೂ ನನಗೆ ಬಂಧಕವಾಗುವದಿಲ್ಲ. ಇಷ್ಟೇ ಅಲ್ಲ. ನಾನೇ ಸರ್ವರಿಗೂ ಆತ್ಮನಾಗಿರುವದರಿಂದ ನನ್ನ ಜನ್ಮಕರ್ಮಗಳ ಪರಮಾರ್ಥವನ್ನು ಅರಿತುಕೊಂಡವನೂ

ಮುಕ್ತನಾಗುತ್ತಾನೆ. ಹೀಗೆ ಸರ್ವಸ್ವತಂತ್ರನೂ ಸರ್ವಜ್ಞನೂ ಆಗಿರುವದರಿಂದ ನನಗೆ ಹಿಂದೆ ನಾನು ಸೃಷ್ಟಿಸಿಕೊಂಡ ಶರೀರಗಳ ನೆನಪೂ ನಾನು ಆ ಶರೀರಗಳಿಂದ ಮಾಡಿದ ಕಾರ್ಯಗಳ ನೆನಪೂ ಇವೆ. ಆದರೆ ನನ್ನಂತೆ ನಿನಗೂ ಅನೇಕ ಜನ್ಮಗಳಾಗಿದ್ದರೂ ನಿನ್ನ ತಿಳಿವಳಿಕೆಯು ಧರ್ಮಾಧರ್ಮಗಳಿಂದ ಮರೆಯಾಗಿಬಿಟ್ಟಿರುವದರಿಂದ ಆ ಜನ್ಮಗಳ ನೆನಪಾಗಲಿ ಅವುಗಳಲ್ಲಿ ನೀನು ಮಾಡಿರುವ ಕರ್ಮಗಳ ನೆನಪಾಗಲಿ ನಿನಗೆ ಇಲ್ಲದೆ ಇದೆ" ಎಂದು ಉತ್ತರಕೊಟ್ಟಿರುತ್ತಾನೆ.

ಪರಮೇಶ್ವರನ ಕರ್ಮಗಳು ಆತನಿಗೆ ಬಂಧಕವಾಗುವದಿಲ್ಲ; ಆದರೆ ನಮ್ಮ ಕರ್ಮಗಳುಮಟ್ಟಿಗೆ ನಮಗೆ ಬಂಧಕವಾಗುವವಲ್ಲ! ಇದೇಕೆ? ಈ ಪ್ರಶ್ನೆಗೂ ಉತ್ತರವು ಮೇಲಿನ ಉತ್ತರದಲ್ಲಿ ಗರ್ಭೀಕೃತವಾಗಿದೆ. ಪರಮೇಶ್ವರನ ಜ್ಞಾನವು ವಿಶಾಲವಾಗಿದೆ, ಕಾಲದೇಶಗಳಿಂದ ಕಟ್ಟುವಡೆದಿಲ್ಲ. ಆ ಜ್ಞಾನದಿಂದ ಆತನಿಗೆ ಸ್ವಾಭಾವಿಕವಾಗಿರುವ ಸರ್ವಶಕ್ತಿತ್ವವೂ ಪ್ರಕಟೀಕೃತವಾಗುತ್ತದೆ. ಆತನ ಪ್ರೇಮಕ್ಕೆ ಹೊರಚ್ಚಾಗಿರುವವರು ಯಾರೊಬ್ಬರೂ ಇಲ್ಲ. ಎಲ್ಲರಿಗೂ ಸುಖವಾಗಲಿ, ಎಲ್ಲರಿಗೂ ಅವರವರ ಕರ್ಮಕ್ಕೆ ತಕ್ಕ ಫಲವಾಗಲಿ!- ಎಂಬ ಸತ್ಸಂಕಲ್ಪ ಆತನದು. ಆತನು ಯಾರನ್ನೂ ದ್ವೇಷಿಸುವಂತಿಲ್ಲ, ಯಾವದೊಂದನ್ನೂ ತನಗೊಬ್ಬನಿಗೇ ಆಗಬೇಕೆಂದು ಬಯಸುವ ಹಾಗಿಲ್ಲ. ಆದರೆ ನಮಗೆ ಹಾಗಿಲ್ಲ. ನಮ್ಮ ಜ್ಞಾನವು ಸಂಕುಚಿತವಾಗಿದೆ, ಕಾಲದೇಶಗಳ ಅಳತೆಗೆ ಸಿಕ್ಕಿರುತ್ತದೆ. ಈ ಜ್ಞಾನವು ನಿಜವಾಗಿ ಅಜ್ಞಾನವೇ; ಏಕೆಂದರೆ ನಮ್ಮ ಆತ್ಮನೇ ಆಗಿ ಸರ್ವಜ್ಞನೂ ಸರ್ವಶಕ್ತನೂ ನಿತ್ಯಶುದ್ಧಬುದ್ಧಮುಕ್ತನೂ ಆಗಿರುವ ಪರಮೇಶ್ವರನನ್ನು ಮರೆಸಿರುವದು ಈ ಜ್ಞಾನವೇ. ಈ ಅಜ್ಞಾನದಿಂದ ನಮಗೆ ನಮ್ಮ ನಮ್ಮ ಶರೀರದಳತೆಯ ಕ್ಷೇತ್ರದಲ್ಲಿ ಉತ್ಕಟವಾದ ಪ್ರೇಮವುಂಟಾಗಿದೆ. ಆ ಶರೀರಕ್ಕೆ ಸಂಬಂಧಪಟ್ಟವರು ನಮಗೆ ಪ್ರಿಯರು, ಅದಕ್ಕೆ ವಿರೋಧಿಗಳು ಅಪ್ರಿಯರು. ಈ ಪ್ರಿಯಾಪ್ರಿಯಭಾವನೆಯಿಂದ ನಮಗೆ ರಾಗದ್ವೇಷಭಯಗಳು ಸ್ವಭಾವವಾಗಿ ಉಂಟಾಗಿಬಿಟ್ಟಿರುತ್ತವೆ. ಆದ್ದರಿಂದ 'ನಮ್ಮ ಆತ್ಮನಾದ ಭಗವಂತನಿಗೆ ಕರ್ಮಫಲದಲ್ಲಿ ಆಸೆಯಿಲ್ಲ, ಕರ್ಮದ ಅಂಟಿಲ್ಲ' ಎಂಬ ನಿಶ್ಚಯಜ್ಞಾನವು ಉದಯಿಸಿದ ಹೊರತು ನಮ್ಮ ಅಜ್ಞಾನಾಂಧಕಾರವಾಗಲಿ ಅದರಲ್ಲಿ ತೋರುತ್ತಿರುವ ಅನರ್ಥಗಳಾಗಲಿ ನಮಗೆ ತಪ್ಪುವಹಾಗಿಲ್ಲ.

ಆದ್ದರಿಂದ ನಾವು ಈಗಿನ ನಮ್ಮ ಸ್ಥಿತಿಯಲ್ಲಿ-ನಾವು ಕರ್ತೃಗಳು, ಕರ್ಮಫಲವು ನಮಗೆ ಆಗುವದು ಎಂಬ ತಿಳಿವಳಿಕೆಯಿರುವ ಈ ಅವಸ್ಥೆಯಲ್ಲಿ-ಏನು ಮಾಡಬೇಕು? ಯಾವ ರೀತಿ ನಡೆಯುವದಕ್ಕೆ ಪ್ರಾರಂಭಿಸಿದರೆ ಮುಂದೆ ಒಂದಾನೊಂದು ಕಾಲಕ್ಕಾದರೂ ಮೇಲೆ ಹೇಳಿದ ಉತ್ತಮಜ್ಞಾನವನ್ನು ಸಂಪಾದಿಸಿ

ಕೊಳ್ಳಬಹುದು? ಹಿಂದೆ ಮುಮುಕ್ಷುಗಳಾದವರು 'ಆತ್ಮನು ಕರ್ತನಲ್ಲ, ನನಗೆ ಕರ್ಮಫಲದ ಬಯಕೆಯಿಲ್ಲ' ಎಂಬ ಭಾವನೆಯಿಂದಲೇ ಕರ್ಮವನ್ನು ಮಾಡಿರುತ್ತಾರೆ. ಕರ್ಮವನ್ನು ಬಿಟ್ಟರೆ ಅಷ್ಟುಮಾತ್ರದಿಂದ ಕರ್ಮದ ಅಂಟು ನಮಗೆ ಆಗದೆ ಇರುವದೂ ಇಲ್ಲ. ಕರ್ಮವೆಂದರೆ ಏನು? ಅಕರ್ಮ, ಕರ್ಮವನ್ನು ಮಾಡದೆ ಇರುವದು, ಎಂಬುದು ಯಾವದು? ವಿಕರ್ಮ, ಮಾಡಬಾರದಕರ್ಮ, ಎಂದರೆ ಯಾವದು? ಇದು ಯಾವದೂ ನಮಗೆ ಈಗ ತಿಳಿಯುವಂತೆ ಇಲ್ಲ. ಕರ್ಮಾಕರ್ಮ ಜ್ಞಾನವಿಲ್ಲದೆ ಸುಮ್ಮನೆ ಕರ್ಮವನ್ನು ಬಿಡುವದರಿಂದ ಯಾವ ಪ್ರಯೋಜನವೂ ಇಲ್ಲ. ನಾವು ಅದನ್ನು ಅರಿತುಕೊಳ್ಳುವವರೆಗೆ ಪರಮೇಶ್ವರ ಪ್ರೀತಿಯಾಗಲೆಂದು ಕರ್ಮವನ್ನು ಮಾಡುತ್ತಿರುವದೊಂದೇ ಸರಿಯಾದ ಮಾರ್ಗವು. ಯಾವನಿಗೆ 'ಈ ಕರ್ಮವು ನನ್ನದು, ಈ ಕರ್ಮದ ಫಲವು ನನಗೆ ಆಗಬೇಕು' ಎಂಬ ಉತ್ಕಟವಾದ ಇಚ್ಛೆ ಇರುವದೋ ಅವನು ಬದ್ಧನಾಗುವದು ನಿಶ್ಚಯ. ಆದರೆ "ಪರಮೇಶ್ವರನ ದಾಸನು ನಾನು; ಆತನ ಪ್ರೀತ್ಯರ್ಥವಾಗಿ ಮಾಡುವ ಕರ್ಮವಿದು. ಈ ಕರ್ಮದ ಒಳ್ಳೆಯ ಫಲವಾಗಲಿ ಕೆಟ್ಟ ಫಲವಾಗಲಿ ನನಗೆ ಬೇಕಿರುವದಿಲ್ಲ. ಈಶ್ವರನ ಅಪ್ಪಣೆಯಂತೆ ನಡೆಯುವವನು ನಾನು, ಆತನ ಇಷ್ಟವು ಶಾಸ್ತ್ರೀಯಕರ್ಮವನ್ನು ನಾನು ಮಾಡ ಬೇಕೆಂಬುದು. ಇಷ್ಟು ಕಾರಣದಿಂದಲೇ ಈ ಕರ್ಮವನ್ನು ಮಾಡುವೆನು; ಇದು ಆತನ ಪೂಜೆಯಾಗಲಿ" ಎಂಬ ಶುಭಸಂಕಲ್ಪವು ಯಾವನ ಚಿತ್ತದಲ್ಲಿ ಮೂಡುವದೋ ಆತನನ್ನು ಆ ಭಗವಂತನೇ ಸರಿಯಾದ ಮಾರ್ಗಕ್ಕೆ ಒಯ್ಯುವನು, ಜ್ಞಾನಿಗಳ ತತ್ತ್ವ ದೃಷ್ಟಿಯನ್ನು ಅನುಗ್ರಹಿಸುವನು, ಕೊನೆಗೆ ತನ್ನ ತಾದಾತ್ಮ್ಯವನ್ನೂ ಅನುಗ್ರಹಿಸುವನು.

## ೨೭. ಕರ್ಮದಲ್ಲಿ ಅಕರ್ಮದರ್ಶನ ೪-(೧೮-೧೯)

(೨೯.೧೨.೪೬)

ಅರ್ಜುನನಿಗೆ ತತ್ತ್ವಜ್ಞಾನವಿಲ್ಲದೆ ಇದ್ದದ್ದರಿಂದ ಅವನು "ಶೋಕಮೋಹಗಳಿಗೆ ತುತ್ತಾಗಿ ಭೀಷ್ಮದ್ರೋಣಾದಿಗಳನ್ನು ಕೊಲ್ಲುವೆನಲ್ಲ!" ಎಂದು ಪರಿತಪಿಸುತ್ತಿದ್ದನು. ಆಗ ಭಗವಂತನು "ನಿನಗೆ ಆಗಿರುವ ಶೋಕಕ್ಕೆ ಆತ್ಮತತ್ತ್ವವನ್ನು ಅರಿಯದೆ ಇರುವದೇ ಕಾರಣವು. ಎಲ್ಲರಿಗೂ ಒಬ್ಬನೇ ಆತ್ಮನು, ಅವನು ನಿರ್ವಿಕಾರಿಯು, ಆದ್ದರಿಂದ ಅವನು ಕೊಲ್ಲುವವನೆಂದಾಗಲಿ ಕೊಲ್ಲಲ್ಪಡುವವನೆಂದಾಗಲಿ ತಿಳಿಯದಿರು" ಎಂದು ಉಪದೇಶಿಸಿದನು. ಸಾಂಖ್ಯದೃಷ್ಟಿಯಿಂದ ಈ ಜ್ಞಾನವನ್ನುಪದೇಶಿಸಿದ ಬಳಿಕ

ಯೋಗದೃಷ್ಟಿಯಿಂದ ಕರ್ಮಯೋಗವನ್ನೂ ಅವನಿಗೆ ಉಪದೇಶಿಸಿದನು. ಆಗ ಅರ್ಜುನನಿಗೆ 'ಕರ್ಮಕ್ಕಿಂತ ಜ್ಞಾನವೇ ಹೆಚ್ಚಿನದಾಯಿತಲ್ಲ! ಹಾಗೆಂದು ಹೇಳಿಯೂ ನನ್ನನ್ನು ಈ ಘೋರವಾದ ಯುದ್ಧರೂಪವಾದ ಕರ್ಮದೊಳಕ್ಕೆ ಏತಕ್ಕೆ ಭಗವಂತನು ದೂಡುತ್ತಿದಾನೆ?" ಎಂಬ ಶಂಕೆಯು ಬಂದಿತು. ಆದ್ದರಿಂದ ಭಗವಂತನು ಜ್ಞಾನವೂ ಕರ್ಮವೂ ಬೇರೆಬೇರೆಯ-ಅಧಿಕಾರಿಗಳಿಗೆ ಎಂಬುದನ್ನು ಸ್ಪಷ್ಟಪಡಿಸಿದನು. ಯೂನಿವರ್ಸಿಟಿಯಲ್ಲಿ ಸ್ವತಃ ವಿದ್ಯಾವಂತರಿಗೆ ಗೌರವಸೂಚಕವಾಗಿ ಪಿಎಚ್.ಡಿ ಮುಂತಾದ ಬಿರುದುಗಳನ್ನು ಕೊಡುವುದುಂಟಾದರೂ ಸಾಧಾರಣವಾಗಿ ಪ್ರೌಢವಿದ್ಯಾಲಯಗಳಲ್ಲಿ ಕ್ರಮವಾಗಿ ಓದಿದವರಿಗೇ ಆ ಬಿರುದುಗಳನ್ನು ಹೇಗೆ ಕೊಡುವರೋ ಹಾಗೆಯೇ ಯಾರು ಸಾಕ್ಷಾತ್ತಾಗಿ ಜ್ಞಾನಕ್ಕೆ ಅರ್ಹರೋ ಅಂಥವರಿಗೆ ಇನ್ನು ಸಾಂಖ್ಯದೃಷ್ಟಿಯಿಂದ ಉಪದೇಶಮಾಡಿದರೇ ಸಾಕಾಗಿದೆಯಾದರೂ ಆ ಅಂತಸ್ತಿಗೆ ಏರದವರಿಗೆ ತಮ್ಮ ಕರ್ಮವನ್ನು ಈಶ್ವರಪ್ರೀತ್ಯರ್ಥವಾಗಿ ಮಾಡುವದೆಂಬ ಕರ್ಮಯೋಗವನ್ನು ಹೇಳುವದೇ ಯುಕ್ತವು. "ಕರ್ಮಯೋಗಿಗೆ ಜ್ಞಾನದ ಧ್ಯೇಯವು ಇರಬೇಕಾದ್ದರಿಂದ ನಿನಗೂ ಜ್ಞಾನವನ್ನು ಹೇಳಿರುತ್ತೇನೆ. ನೀನು ಯುದ್ಧವನ್ನು ಮಾಡಿದರೆ ಪಾಪವುಂಟಾಗುವದೆಂಬ ಅಂಜಿಕೆಯನ್ನು ಬಿಡು; ಆತ್ಮನು ಅವಧ್ಯನು ಎಂಬ ಜ್ಞಾನಿಗಳ ಉತ್ತಮದೃಷ್ಟಿಯನ್ನು ಸಂಪಾದಿಸುವದಕ್ಕೆ ಯತ್ನಿಸು, ಆ ದೃಷ್ಟಿಯು ಬರುವದಕ್ಕೆ ಮುಂಚಿತವಾಗಿ ಕರ್ಮಯೋಗವನ್ನು ಮಾಡು" ಎಂದು ಕರ್ಮಯೋಗದ ಉಪಯೋಗವನ್ನು ತಿಳಿಸಿಕೊಟ್ಟನು. ಇಲ್ಲಿಗೆ ಭಗವಂತನ ಉಪದೇಶವು ಮುಗಿದದ್ದರಿಂದ ಭಗವಂತನು ತಾನು ಹೇಳಿದ ಜ್ಞಾನಯೋಗವನ್ನು ಹೊಗಳಿ ಅದರ ಆಚಾರ್ಯಪರಂಪರೆಯನ್ನು ತಿಳಿಸಿದನು. "ಮೊದಲು ನಾನು ಇದನ್ನು ವಿವಸ್ವಂತನಿಗೆ ತಿಳಿಸಿದೆನು; ಅವನಿಂದ ಇಕ್ಷ್ವಾಕು-ಮುಂತಾದ ರಾಜರ್ಷಿಗಳು ತಿಳಿದುಕೊಂಡರು. ಹೀಗೆ ಪರಂಪರೆಯಿಂದ ಬರುತ್ತಿದ್ದ ಈ ಸಂಪ್ರದಾಯವು ಕಡಿದುಹೋದದ್ದರಿಂದ ಇದನ್ನು ನಿನಗೆ ಮತ್ತೆ ತಿಳಿಸಿರುತ್ತೇನೆ" ಎಂದು ಉಪಸಂಹಾರವನ್ನು ಮಾಡಿದನು.

ಆದರೆ ಇಲ್ಲಿ ಅರ್ಜುನನಿಗೆ ಪ್ರಶ್ನಬೀಜವು ದೊರೆಯಿತು. ಈಚೆಗೆ ಹುಟ್ಟಿದ ಶ್ರೀಕೃಷ್ಣನು ಹಿಂದೆ ಇದ್ದ ವಿವಸ್ವಂತನಿಗೆ ಉಪದೇಶಿಸಿದ್ದು ಹೇಗೆ? ಈ ಶಂಕೆಯನ್ನು ಪರಿಹರಿಸುವದಕ್ಕಾಗಿ ಭಗವಂತನು ಜನ್ಮಕರ್ಮಗಳ ತತ್ತ್ವವನ್ನೇ ವಿವರಿಸಬೇಕಾಗಿ ಬಂತು. ಜನ್ಮಕರ್ಮಗಳು ಎರಡು ಬಗೆ: ಭಗವಂತನು ಸ್ವತಂತ್ರನಾಗಿ ಸ್ವೀಕರಿಸುವ ಜನ್ಮಗಳು ಮತ್ತು ಲೀಲೆಯಿಂದ ಲೋಕೋದ್ಧಾರಕ್ಕಾಗಿ ಮಾಡುವ ಕರ್ಮಗಳು ಒಂದು ವರ್ಗದವು; ಧರ್ಮಾಧರ್ಮವಶರಾಗಿ ಶರೀರಗ್ರಹಣವನ್ನು ಮಾಡಿ ಹಿಂದೆ ಮಾಡಿದ್ದ ಕರ್ಮಗಳ ಫಲವನ್ನು ಅನುಭವಿಸುವದೂ ಮತ್ತೆ ಕರ್ಮಗಳನ್ನು ಮಾಡುವದೂ

ಮತ್ತೊಂದು ವರ್ಗದ ಜನ್ಮಕರ್ಮಗಳು. ಪರಮೇಶ್ವರನಿಗೆ ಮಾತ್ರ ಮೊದಲನೆಯ ಪ್ರಕಾರದ ಜನ್ಮಕರ್ಮಗಳಿರುವವು. ಈ ಶರೀರವು ನಾನು, ಇವರೆಲ್ಲ ನನ್ನವರು, ಮಿಕ್ಕವರು ಅನ್ಯರು ಎಂಬ ಮೋಹವೂ ಆದರಿಂದ ಶೋಕವೂ ಅಜ್ಞರಾದ ಜೀವರಿಗೆಲ್ಲ ಆಗುತ್ತಿರುವದು. ಆದರೆ ತತ್ತ್ವಜ್ಞಾನದಿಂದ ಈ ಶೋಕಮೋಹಗಳು ತೊಲಗುವವು, ಇಷ್ಟು ಇಲ್ಲಿಯವರೆಗೆ ಭಗವಂತನು ಮಾಡಿರುವ ಉಪದೇಶದ ಸಾರವು.

ಭಗವಂತನು ದಯಾಘನನಾದವನು. ಅವನು ಎಲ್ಲರಲ್ಲಿಯೂ ಸಮನಾಗಿರುತ್ತಾನೆ. ಅವನು ಕೆಲವರಿಗೆ ನಿತ್ಯಸ್ವರ್ಗವನ್ನೂ ಮತ್ತೆ ಕೆಲವರಿಗೆ ನಿತ್ಯನರಕವನ್ನೂ ಕೊಡುವ ನಿರ್ಘೃಣನಲ್ಲ. ಉಚ್ಚನೀಚರಾಗಿ ತೋರುವ ಎಲ್ಲಾ ಅಂತಸ್ತಿನ ಜೀವರಲ್ಲಿಯೂ ಅವರ ಆತ್ಮನಾಗಿ ಒಂದೇ ಪರಮಾರ್ಥತತ್ತ್ವವಿದೆ. ಅದು ನಿತ್ಯಮುಕ್ತವಾಗಿದೆ. ಅದೇ ಭಗವಂತನ ಸ್ವರೂಪವು. ಕನಸಿನಿಂದ ಎಚ್ಚತ್ತು ಕನಸಿನ ತೋರಿಕೆಯ ನಿಸ್ಸಾರತೆಯನ್ನೂ ಅದು ತನ್ನಲ್ಲಿ ಯಾವ ಮಾರ್ಪಾಡನ್ನೂ ಮಾಡಿಯೇ ಇರಲಿಲ್ಲವೆಂಬ ರಹಸ್ಯವನ್ನೂ ಅರಿತುಕೊಂಡುಬಿಡುವಂತೆ ಯಾವ ಯಾವನು ಈ ತನ್ನ ನಿರ್ವಿಕಾರವಾದ ಪರಮಾರ್ಥಸ್ವರೂಪವನ್ನು ಕಂಡುಕೊಳ್ಳುತ್ತಾನೋ ಅವನವನು ಜ್ಞಾನಮಾತ್ರದಿಂದಲೇ ಮುಕ್ತನಾಗುತ್ತಾನೆ. ಈ ಆನಂದಸಂದೇಶವನ್ನು ಎಲ್ಲರಿಗೂ ತಂದಿರುವ ಕೀರ್ತಿಯು ಭರತಖಂಡದ ಧಾರ್ಮಿಕವಾಙ್ಮಯಕ್ಕೆ ಮೀಸಲಾಗಿರುತ್ತದೆ. ಅದು ಗೀತೆಯಲ್ಲಿ ಅತ್ಯಂತ ಸ್ಪಷ್ಟವಾಗಿ ಉಕ್ತವಾಗಿರುತ್ತದೆ. ಭಗವಂತನು ತಾನು ಜನ್ಮಕರ್ಮಗಳ ಬಂಧವನ್ನು ದಾಟಿರುವೆನೆಂದು ಹೇಳಿ ಅಲ್ಲಿಗೇ ಸುಮ್ಮನಾಗಲಿಲ್ಲ. "ಅರ್ಜುನನೇ ಮುಂತಾದ ಜೀವರೂ ಜನ್ಮಕರ್ಮವಿನಿರ್ಮುಕ್ತರೇ. ಅವರಿಗೆ ಎಂದೆಂದಿಗೂ ತೆರೆದಿರುವ ಬಾಗಿಲನ್ನು ತೆಗೆದುಕೊಂಡು ಹೊರಕ್ಕೆ ಬರುವದೇ ಕಷ್ಟವಾಗಿಬಿಟ್ಟಿರುತ್ತದೆ. ಇದಕ್ಕೆ ಅಜ್ಞಾನವೇ ಕಾರಣವು" ಎಂದು ಸಾರಿರುತ್ತಾನೆ. ಒಬ್ಬ ಖೈದಿಯು ಕಾರಾಗಾರಗಳಿಂದ ತಪ್ಪಿಸಿಕೊಂಡು ಹೋಗುವದರಲ್ಲಿ ನಿಪುಣನೆಂದೆನಿಸಿಕೊಂಡಿದ್ದನು. ಆದರೆ ಒಂದು ಸೆರೆಮನೆಯಿಂದ ಮಾತ್ರ ತಪ್ಪಿಸಿಕೊಳ್ಳುವದು ಅವನಿಂದ ಆಗಲಿಲ್ಲ. ಅವನು ಬಾಗಿಲನ್ನು ಎಷ್ಟೆಷ್ಟು ಎಳೆದರೂ ಅದು ತೆರೆದುಕೊಳ್ಳಲಿಲ್ಲ. ಕೊನೆಗೆ ಬೇಸರದಿಂದ ಬಾಗಿಲಕಡೆಗೆ ಬೆನ್ನನ್ನು ಒರಗಿಸಿಕೊಂಡು ಕುಳಿತನು. ಅಷ್ಟು ಮಾತ್ರದಿಂದಲೇ ಕದವು ಗಿರಕ್ಕೆಂದು ತೆರೆದುಕೊಂಡಿತು. ಕದವನ್ನು ಆ ಕಡೆಗೆ ತಳ್ಳಬೇಕೆಂಬುದು ಈವರೆಗೆ ಅವನಿಗೆ ಹೊಳೆದಿರಲಿಲ್ಲ. ಆದ್ದರಿಂದ ತೆಗೆದುಕೊಂಡೇ ಇದ್ದ ಕದವನ್ನು ತೆರೆಯುವದು ಅವನಿಗೆ ತೀರ ಕಷ್ಟದ ಕೆಲಸವಾಯಿತು. ಇದರಂತೆ ಜೀವರುಗಳೂ ನಿತ್ಯಮುಕ್ತರೇ ಆಗಿರುತ್ತಾರೆ; ಅವರಿಗೆ ಕರ್ಮದ ಬಂಧವು ಇಲ್ಲವೇ ಇಲ್ಲ. ಆದರೆ ಅವರು

ಅಜ್ಞಾನದಿಂದ ಇದನ್ನು ತಿಳಿಯದೆ ಬದ್ಧರಾಗಿರುತ್ತಾರೆ. "ನಿತ್ಯಮುಕ್ತನಾದ ವಾಸುದೇವನೇ ನಮ್ಮ ಆತ್ಮನು" ಎಂದು ಯಾವಾಗ ಅವರು ಅರಿತುಕೊಳ್ಳುವರೋ ಆಗ ಅವರಿಗೆ ಬಂಧವು ಕನಸಿನಂತೆ ಹುಸಿಯಾಗಿ ಬಿಡುವದು. ಈ ಪರಮಾರ್ಥವನ್ನು ತಿಳಿಸಿಕೊಡುವದಕ್ಕಾಗಿ ಭಗವಂತನು ಈಗ ಕರ್ಮದ ತತ್ತ್ವವನ್ನು ಹೇಳುವದಕ್ಕೆ ಮೊದಲುಮಾಡಿರುತ್ತಾನೆ:

**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥** (೪-೧೮)

ಕರ್ಮದಲ್ಲಿ ಅಕರ್ಮವನ್ನೂ ಅಕರ್ಮದಲ್ಲಿ ಕರ್ಮವನ್ನೂ ಯಾವನು ಕಂಡುಕೊಳ್ಳುವನೋ ಆತನೇ ಮನುಷ್ಯರಲ್ಲೆಲ್ಲ ಬುದ್ಧಿವಂತನು; ಆತನೇ ಯೋಗಿ, ಮಾಡಬೇಕಾದ ಕರ್ಮವನ್ನೆಲ್ಲ ಮಾಡಿದವನು-ಎಂಬುದು ಶ್ಲೋಕದ ಅರ್ಥ. ಅಜ್ಞಾನದಿಂದಲೇ ನಾವು ಬದ್ಧರಾಗಿರುತ್ತೇವೆ, ಜ್ಞಾನದಿಂದ ಮುಕ್ತರಾಗುತ್ತೇವೆ ಎಂದು ವಾಕ್ಯದ ಒಟ್ಟರ್ಥವು. ಆದರೆ ಇದು ಹೇಗೆ ಸಾಧ್ಯ? ನಾವೆಲ್ಲರೂ ಕರ್ತೃಭೋಕ್ತೃಗಳು ಎಂದೇ ತಿಳಿದುಕೊಂಡಿರುತ್ತೇವೆ; ನಮ್ಮ ಸುತ್ತಮುತ್ತಲಿರುವವರೆಲ್ಲರೂ ಹಾಗೆಂದೇ ಹೇಳುತ್ತಾ ಹಾಡಿಹೊಗಳಿ ನಮ್ಮ ಕಿವಿಯಲ್ಲಿ ಗುಂಯ್ ಎನ್ನುವಂತೆ ಮಾಡಿರುತ್ತಾರೆ. ನಾವು ಕರ್ಮಮಾಡಿದಲ್ಲದೆ ವ್ಯವಹಾರವು ಸಾಗುವುದಿಲ್ಲ, ಮಾಡಿದ್ದನ್ನು ಅನುಭವಿಸಿದ್ದಲ್ಲದೆ ಬೇರೆಯ ಮಾರ್ಗವಿಲ್ಲ-ಎಂದು ಮಂಕುಬೂದಿಯನ್ನು ಬಳಿದುಕೊಂಡಿರುವದೂ ಒಬ್ಬರಿಗೊಬ್ಬರಿಗೆ ಬಳಿಯುತ್ತಿರುವದೂ ಜೀವರೆಲ್ಲರ ಸ್ವಭಾವವಾಗಿಬಿಟ್ಟಿದೆ. ಹೀಗಿರುವಲ್ಲಿ ಗೀತಾಶ್ಲೋಕವೊಂದರಲ್ಲಿ ಹಾಗಿಲ್ಲ ಎಂದು ಹೇಳಿದ ಮಾತ್ರಕ್ಕೆ ಅದು ಹೋಗುವದು ಹೇಗೆ? ಇದಕ್ಕೆ ಉತ್ತರವಾಗಿ ಭಗವಂತನು ಹೀಗೆಂದು ಉಪದೇಶ ಮಾಡಿರುತ್ತಾನೆ: ಕರ್ಮಾಕರ್ಮಗಳ ನಿಜವನ್ನು ಕಂಡುಕೊಳ್ಳಿರಿ. ನೀವು ಕರ್ಮವೆಂದು ಕೊಂಡಿರುವದರಲ್ಲಿ ಅಕರ್ಮವನ್ನು ಕಾಣಿರಿ, ಅಕರ್ಮವೆಂಬುದರಲ್ಲಿ ಕರ್ಮವನ್ನು ಕಾಣಿರಿ.

ಕರ್ಮದಲ್ಲಿ ಅಕರ್ಮವನ್ನು ಕಾಣುವದು ಎರಡು ಪ್ರಕಾರದಲ್ಲಿ ಆಗುತ್ತದೆ. ಕರ್ಮವು ನಮ್ಮಲ್ಲಿ ನಿಜವಾಗಿ ಇದ್ದು ಅದನ್ನು ನಾವು ಕೆಲವು ಕಾಲ ಮಾಡದೆ ಇರುವದು ಅಕರ್ಮ. ಕರ್ಮವನ್ನು ಮಾಡದೆ ಇರುವದು ಅಕರ್ಮವೆಂದೂ ಅಕರ್ಮವನ್ನು ಬಿಟ್ಟು ಕೆಲಸವನ್ನು ಮಾಡುವದು ಕರ್ಮವೆಂದೂ ತಿಳಿಯುವದನ್ನಲ್ಲ, ಇಲ್ಲಿ ಉಪದೇಶಿಸಿರುವದು. ಹಗ್ಗವನ್ನು ಹಾವೆಂದು ಕಂಡವನು ಅದರಿಂದ ಸ್ವಲ್ಪ ಮರೆಯಾದರೆ ಹಾವನ್ನು ಕಾಣದೆ ಇದ್ದಮಾತ್ರಕ್ಕೆ ನಿಜವಾಗಿ ಅಲ್ಲಿ ಹಾವಿಲ್ಲವೆಂಬ ಅರಿವು ಆದೀತೆ? ಹಾವು ನಿಜವಾಗಿ ಅಲ್ಲಿ ಇಲ್ಲವೇ ಇಲ್ಲ, ಹಾವು ಬರಿಯ ತೋರಿಕೆ;

ಅಲ್ಲಿರುವದು ಹಗ್ಗವೇ-ಎಂದು ಕಂಡುಕೊಳ್ಳುವದು ಇನ್ನೊಂದು ಬಗೆ. ಇದರಂತೆ ನನ್ನಲ್ಲಿ ಕರ್ಮವು ಹುಸಿತೋರಿಕೆ; ನಿಜವಾಗಿ ನನ್ನಲ್ಲಿ ಯಾವ ಕರ್ಮವೂ ಇಲ್ಲವೇ ಇಲ್ಲ ಎಂದು ಅರಿತುಕೊಳ್ಳುವದು ಸರಿಯಾದ ಅಕರ್ಮದರ್ಶನವು. ನಾವು ಈಗ ಕರ್ತೃ -ಎಂದು ತಿಳಿದುಕೊಂಡಿರುವದರಿಂದ ಹೇಗೆ ಫಲವುಂಟೋ ಹಾಗೆಯೇ ಈಗ ನಾನು ಅಕರ್ತೃ, ಏನೂ ಮಾಡಲಾಗುವದಿಲ್ಲ, ಎಂದು ತಿಳಿದುಕೊಂಡಿರುವದರಿಂದಲೂ ಫಲವುಂಟು. ಆದ್ದರಿಂದ ಈ ಅಕರ್ಮವೂ ಒಂದು ಬಗೆಯ ಕರ್ಮವೇ. ಕ್ರಿಯೆ, ಕಾರಕ, ಫಲ-ಎಂಬ ಪ್ರಪಂಚವೆಲ್ಲವೂ ನಮ್ಮ ಆತ್ಮನಲ್ಲಿ ಹುಸಿಯಾಗಿ ತೋರುತ್ತಿದೆ ಎಂಬ ನಿಶ್ಚಯವುಂಟಾದರೆ ಮಾತ್ರ ಕರ್ಮದಲ್ಲಿ ಅಕರ್ಮವನ್ನು ಕಂಡುಕೊಂಡಂತೆ ಆದೀತು. ಇಂಥ ತಾರೀಖಿನ ದಿನ ಕೋರ್ಟಿನಲ್ಲಿ ಹಿಯರಿಂಗ್ ಇದೆ ಎಂಬ ಅರಿವು ಹೇಗೆ ಯಾವಾಗಲೂ ಕೋರ್ಟಿನ ಧ್ಯಾನವನ್ನೇ ಕೊಡುವದೋ ಹಾಗೆ ನಾನು ಈಗ ಅಕರ್ಮಿಯು ಎಂಬ ಅರಿವು ಮುಂದೆ ಕರ್ಮಿಯಾಗುವವನು ಎಂದರೆ ಕರ್ತೃಸ್ವಭಾವ ದವನು-ಎಂಬ ಬುದ್ಧಿಯನ್ನೇ ಗಟ್ಟಿಗೊಳಿಸುತ್ತದೆ. ಓಡುವ ಕುದುರೆ 'ಈಗ ನಿಂತಿದೆ' ಎನ್ನುವದಕ್ಕೂ ಎಂದೆಂದಿಗೂ ಓಡಾಡುವ ಸ್ವಭಾವವಿಲ್ಲದ ಕಂಬ, ಬೆಟ್ಟ ಮುಂತಾದವು 'ನಿಂತಿವೆ' ಎನ್ನುವದಕ್ಕೂ ಎಷ್ಟು ತಾರತಮ್ಯವಿದೆ, ನೋಡಿರಿ! ಹಾಗೆಯೇ ಆತ್ಮನಲ್ಲಿ ಕರ್ಮವಿಲ್ಲ ಎಂದರೆ ಅವನು ಈಗ ಕರ್ಮವನ್ನು ಮಾಡುವದಿಲ್ಲ ಎಂದೇನೂ ಅರ್ಥವಲ್ಲ; ಅವನಲ್ಲಿ ಎಂದೆಂದಿಗೂ ಕರ್ಮವು ಇರುವದೇ ಇಲ್ಲ. ಕನಸಿನಲ್ಲಿ ನಾವು ಎಷ್ಟೋ ಕರ್ಮಗಳನ್ನು ಮಾಡಿದಂತೆ ಕಾಣುತ್ತದೆ. ಆದರೆ ನಿಜವೇನು? ಆ ತೋರಿಕೆಯ ಕರ್ಮಗಳು ಯಾವವೂ ನಮಗೆ ಸಂಬಂಧಪಟ್ಟಿರುವದೇ ಇಲ್ಲ. ಇದರಂತೆ ನಮ್ಮಲ್ಲಿರುವಂತೆ ಕಾಣುವ ಕ್ರಿಯೆಗಳು ಯಾವವೂ ಪರಮಾರ್ಥವಾಗಿ ನಮ್ಮ ಸ್ವಭಾವವಲ್ಲ. ದೃಶ್ಯವಾದ ಕರ್ಮಗಳು ದೃಗ್ರೂಪನಾದ ಆತ್ಮನಿಗೆ ಹೇಗೆ ಸಂಬಂಧಿಸಿಯಾವು? ತನಿನಿದ್ರೆಯಲ್ಲಿ ನಮ್ಮ ಆತ್ಮನಲ್ಲಿ ಯಾವ ಕರ್ಮವೂ ಎಂದಿಗೂ ತೋರುವ ನಿರೀಕ್ಷಣೆಯೇ ಇರುವದಿಲ್ಲ. ಇದೇಕೆ? ಅದು ನಮ್ಮ ಸ್ವಭಾವಕ್ಕೆ ಸೇರಿದ್ದಲ್ಲ. ಹೀಗೆ ಯಾವನು ಚೆನ್ನಾಗಿ ವಿಚಾರಮಾಡಿಕೊಂಡಿರುವನೋ, ತನ್ನ ಸ್ವರೂಪದಲ್ಲಿ ಯಾವ ಕರ್ಮವೂ ಇಲ್ಲವೆಂದೂ, ಆ ಪರಮಾರ್ಥವಾದ ಅಕರ್ಮದ ದೃಷ್ಟಿಯಿಂದ ನೋಡಿದರೆ ಕೆಲವು ಕಾಲ ವ್ಯವಹಾರದಲ್ಲಿ ತೋರುವ ಅಕರ್ಮವೆಂಬುದೂ ಒಂದು ಬಗೆಯ ಕರ್ಮವೇ ಎಂದೂ ಯಾವನು ನಿಶ್ಚಯಿಸಿಕೊಂಡಿರುವನೋ ಅವನೇ ಬುದ್ಧಿವಂತನು, ಅವನೇ ಜ್ಞಾನಿಯು, ಮಿಕ್ಕವರೆಲ್ಲ ಅಜ್ಞಾನಿಗಳು.

ಅಜ್ಞಾನಿಗಳೆಂದರೆ ಯಾರು? ಯಾರು ಆತ್ಮಜ್ಞಾನವಿಲ್ಲದವರೋ ಅವರು ಅಜ್ಞಾನಿಗಳು ಎಂದರೆ ಏನೂ ತಿಳಿಯದವರೆಂದರ್ಥವಲ್ಲ. ವ್ಯವಹಾರದಲ್ಲಿ ನಮಗೆ

ಎಷ್ಟೋ ವಿಷಯಗಳ ಜ್ಞಾನವಿರುತ್ತದೆ. ಆದರೆ ನಮ್ಮ ಆತ್ಮಸ್ವರೂಪವು ಅಕರ್ತೃ ವಾದದ್ದು, ಜ್ಞಾತೃಜ್ಞೇಯವಿಭಾಗವಿಲ್ಲದ್ದು-ಎಂಬ ತಿಳಿವಳಿಕೆಯು ಮಾತ್ರ ಇರುವದಿಲ್ಲ. ಕನಸಿನಲ್ಲಿ ಎಷ್ಟೋ ತಿಳಿವಳಿಕೆಯಿರುತ್ತದೆ; ಆದರೆ ಇದು ಕನಸು ಎಂಬ ತಿಳಿವಳಿಕೆ ಮಾತ್ರ ಇರುವದಿಲ್ಲ. ಆದ್ದರಿಂದ ಅದು ಮಿಥ್ಯಾಜ್ಞಾನವು, ತಪ್ಪು ತಿಳಿವಳಿಕೆ. ಇದರಂತೆ ನಮ್ಮ ವ್ಯವಹಾರದಲ್ಲಿರುವ ತಿಳಿವಳಿಕೆಯೂ ಕರ್ಮಾತೀತನಾದ ಆತ್ಮನ ಜ್ಞಾನವು ಇಲ್ಲದ್ದರಿಂದ ಮಿಥ್ಯಾಜ್ಞಾನವೇ. ಆದ್ದರಿಂದ ವ್ಯವಹಾರದ ದೃಷ್ಟಿಯಿಂದ ಜ್ಞಾನಿಗಳಾದವರೂ ಈ ವಿಷಯದಲ್ಲಿ ಅಜ್ಞಾನಿಗಳೇ. ಆತ್ಮಜ್ಞಾನಿಯೊಬ್ಬನೇ ನಿಜವಾದ ಜ್ಞಾನಿಯು; ಏಕೆಂದರೆ ಆತ್ಮನು ಅದ್ವಿತೀಯನು, ಅವನಲ್ಲಿ ಕರ್ತೃತ್ವಭೋಕ್ತೃತ್ವಗಳಿಲ್ಲ, ಕ್ರಿಯಾಕಾರಕಫಲರೂಪವಾದ ಪ್ರಪಂಚವೆಲ್ಲವೂ ಅವನಲ್ಲಿ ತೋರುವ ಹುಸಿತೋರಿಕೆ ಎಂಬುದನ್ನು ಅವನೊಬ್ಬನೇ ಬಲ್ಲನು. ಅವನು ಇನ್ನು ಅರಿತುಕೊಳ್ಳಬೇಕಾದ ತತ್ತ್ವವೇನೂ ಉಳಿದಿರುವದಿಲ್ಲ. ಅವನಿಗೆ ಶೋಕಮೋಹಗಳು ಇನ್ನು ಎಂದಿಗೂ ಉಂಟಾಗುವ ಹಾಗಿಲ್ಲ, ಅಜ್ಞರು ಆಗಾಗ್ಗೆ ಬರುವ ಶೋಕಮೋಹಗಳನ್ನು ಕಳೆದು ಕೊಳ್ಳುವದಕ್ಕೆ ಒಂದೊಂದು ಉಪಾಯವನ್ನು ಅರಿತಿರುತ್ತಾರೆ. ಆದರೆ ಒಂದು ಬಗೆಯ ಶೋಕಮೋಹವನ್ನು ನೀಗಿಕೊಳ್ಳುವ ಹೊತ್ತಿಗೆ ಅವರಿಗೆ ಮತ್ತೊಂದು ಬಗೆಯ ಶೋಕಮೋಹವು ಗಂಟುಬೀಳುತ್ತದೆ. ಆದ್ದರಿಂದ ಅವರು ಪೂರ್ಣಜ್ಞಾನಿಗಳಲ್ಲ, ಅಜ್ಞರೇ.

ಹೀಗೆ ಯಾವನು ಕರ್ಮಾತೀತವಾದ ಆತ್ಮತತ್ತ್ವವನ್ನು ಕಂಡುಕೊಂಡಿರುವನೋ ಅವನೇ ಯುಕ್ತನು. ಯುಕ್ತನೆಂದರೆ ಚಿತ್ತವೃತ್ತಿಗಳನ್ನು ತಡೆದುಕೊಂಡು ಮನಸ್ಸನ್ನು ಸಮಾಧಾನದಲ್ಲಿಟ್ಟುಕೊಂಡಿರುವವನು. ಸಾಮಾನ್ಯಜನರಿಗೆ ಸ್ವಲ್ಪಹೊತ್ತು ಸಮಾಧಾನವಿದ್ದರೆ ಮತ್ತೆ ಅಸಮಾಧಾನವು ಸಿದ್ಧವಾಗಿರುತ್ತದೆ. ಇದು ಪ್ರಯೋಜನವಿಲ್ಲ. ಯಾವನಿಗೆ ಜ್ಞಾನವುಂಟಾಗಿರುವದೋ ಅವನು ಪರಮಾತ್ಮನಲ್ಲಿಯೇ ನೆಲೆನಿಂತಿರುವನಾದ್ದರಿಂದ ಅವನು ಯಾವಾಗಲೂ ಸಮಾಧಾನದಿಂದ ಇರುತ್ತಾನೆ. ಪ್ರಲಯಕಾಲದಲ್ಲಿಯೂ ನಗುತ್ತಾ ತಾಂಡವವಾಡುತ್ತಿರುವ ರುದ್ರನಂತೆ ಅಂಥವನು ಎಂಥ ವಿಪತ್ತಿನಲ್ಲಿಯೂ ಮನಸ್ಸಮಾಧಾನವನ್ನು ಕಳೆದುಕೊಳ್ಳದೆ ಇರುತ್ತಾನೆ. ಈ ಆತ್ಯಂತಿಕ ಸಮಾಧಾನವು ಆತ್ಮಜ್ಞಾನವಿಲ್ಲದ ಯಾವ ಯೋಗಿಗೂ ದಕ್ಕಲಾರದು. "ಜನಕನು ಇಡಿಯ ಮಿಥಿಲಾನಗರಿಯೇ ಸುಟ್ಟು ಹೋದರೂ ನನ್ನದೇನೂ ಸುಟ್ಟುಹೋಗುವದಿಲ್ಲ" ಎಂದು ಹೇಳಿದ ಮಾತು ಇಂಥ ಜ್ಞಾನಿಯ ಸಮಾಧಾನಸ್ಥಿತಿಯನ್ನು ಚೆನ್ನಾಗಿ ತಿಳಿಸುತ್ತದೆ.

ಜ್ಞಾನಿಯು ಕರ್ಮವನ್ನೆಲ್ಲ ಮಾಡಿದ **ಕೃತಕೃತ್ಯನು**. ಅವನು ಮಾಡಬೇಕಾದದ್ದು ಇನ್ನೊಂದಿಲ್ಲ. ಈ ಜ್ಞಾನವನ್ನು ಸಂಪಾದಿಸಿಕೊಳ್ಳುವದಕ್ಕಾಗಿಯೇ ಮಿಕ್ಕ ಸಾಧನಗಳನ್ನು ಮಾಡಬೇಕಾಗಿರುತ್ತದೆ. ಪಡೆಯತಕ್ಕ ಫಲವು ದೊರಕಿದ ಬಳಿಕ ಮಾಡುವದೇನಿದ್ದೀತು? ಜ್ಞಾನವೇ ನಾವು ಪಡೆದುಕೊಳ್ಳಬೇಕಾದದ್ದರಲ್ಲಿ ಕೊನೆಯದು.

ಜ್ಞಾನವನ್ನು ತಪಸ್ಸು, ಯಜ್ಞ, ಯೋಗ, ಕರ್ಮಸಮಾಪ್ತಿ-ಎಂದು ಹೊಗಳಿರುವದನ್ನು ನಾವು ಲಕ್ಷ್ಯದಲ್ಲಿಟ್ಟರೆ ಭಗವಂತನಿಗೆ ಆತ್ಮಜ್ಞಾನದಲ್ಲಿರುವ ಮಹಾತಾತ್ಪರ್ಯವು ಸ್ಫುಟವಾಗುವದು. ಭಗವದ್ಗೀತೆಯಲ್ಲಿ ಮತ್ತೆ ಯಾವ ಸಾಧನವನ್ನೂ ಹೀಗೆ ಹೊಗಳಿರುವದಿಲ್ಲ. ಜ್ಞಾನವನ್ನು ಹೇಳುವದಕ್ಕೆ ಉಪಕ್ರಮಿಸಿ ಅದನ್ನು ಉಪಸಂಹಾರದಲ್ಲಿಯೂ ಹೇಳಿ ನಡುವೆ ಮತ್ತೆ ಮತ್ತೆ ಪ್ರಸ್ತಾಪಿಸಿ ಹೊಗಳಿರುವದರಿಂದ ಆತ್ಮಜ್ಞಾನವೇ ಗೀತೆಗೆ ಮುಖ್ಯವಾದ ಪ್ರತಿಪಾದ್ಯವಿಷಯ ಎಂಬುದು ನಿರ್ಣಯವಾಗುತ್ತದೆ. ಕರ್ಮದಲ್ಲಿ ಅಕರ್ಮವನ್ನು ಕಾಣುವ ಈ ಜ್ಞಾನವನ್ನು ಹೊಗಳಿರುವ ಮುಂದಿನ ಶ್ಲೋಕವನ್ನು ಕೇಳಿರಿ:

**ಯಸ್ಯ ಸರ್ವೇ ಸಮಾರಮ್ಭಾಃ ಕಾಮಸಙ್ಕಲ್ಪವರ್ಜಿತಾಃ ।**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಣ್ಡಿತಂ ಬುಧಾಃ ॥** (೪-೧೯)

ಯಾವನ ಕರ್ಮಗಳೆಲ್ಲವೂ ಕಾಮಸಂಕಲ್ಪರಹಿತವಾಗಿರುವವೋ ಆ ಮಹಾತ್ಮನೇ ಜ್ಞಾನಾಗ್ನಿಯಿಂದ ಕರ್ಮವನ್ನು ಸುಟ್ಟವನೆಂದು ಬಲ್ಲವರು ಹೇಳುವರು. ಜ್ಞಾನಿಗಳು ಕರ್ಮವನ್ನು ಸುಟ್ಟುಬೂದಿಮಾಡಿಕೊಂಡಿರುತ್ತಾರೆ; ಆದ್ದರಿಂದ ಅವರ ಕರ್ಮಗಳು ಮತ್ತೆ ಜನ್ಮವನ್ನು ಕೊಟ್ಟು ಮೊಳಕೆಯಾಗುವದಿಲ್ಲ. ನಮ್ಮ ಕರ್ಮಗಳೋ ನಮ್ಮನ್ನೇ ಸುಡುತ್ತಿರುವವು. ಕರ್ಮಬಂಧಕ್ಕೆ ನಮ್ಮ ತಾಪತ್ರಯಗಳೇ ಹೆಗ್ಗುರುತಾಗಿರುತ್ತವೆ. ಜ್ಞಾನಿಗೆ ಸಂಕಲ್ಪಗಳೆಲ್ಲವೂ ಆತ್ಮನಾಗಿ ಬಿಟ್ಟಿರುತ್ತವೆ; ಆದ್ದರಿಂದ ಆತನಿಗೆ ಸಂಕಲ್ಪಗಳಿಂದ ಯಾವ ಬಂಧವೂ ಆಗುವದಿಲ್ಲ.

ಲೋಕದಲ್ಲಿ ಕರ್ಮಪಿಶಾಚಿಯಿಂದ ಗೃಹೀತನಾಗಿ ಯಾವಾಗಲೂ ಕರ್ಮವನ್ನೇ ಮಾಡುತ್ತಿರುವವನೊಬ್ಬನು, ಎಂದೆಂದಿಗೂ ಕರ್ಮವನ್ನು ಮಾಡುವದಿಲ್ಲವೆಂದು ಕುಳಿತುಕೊಳ್ಳುವ ಸೋಮಾರಿಯೊಬ್ಬನು-ಹೀಗೆ ಎರಡು ಬಗೆಯ ಜನರು ಸಿಕ್ಕುತ್ತಾರೆ. ಆದರೆ ಯಾವ ಕರ್ಮವನ್ನು ಮಾಡುತ್ತಿದ್ದರೂ ಅದನ್ನು ಆತ್ಮತತ್ತ್ವವಾಗಿ ಕಾಣುತ್ತಾ ಇರುವ ಮಹಾತ್ಮರು ಈ ಎರಡು ಪಂಗಡಕ್ಕೂ ಸೇರಿದವರಲ್ಲ. ಒಂದು ಮಿಷನ್ನು ಸುಮ್ಮನೆ ತಿರುಗುತ್ತಿರುವದು, ಯಜಮಾನನು ಅದು ಸವೆಯುವದಲ್ಲ!- ಎಂದು

ಪರಿತಪಿಸುತ್ತಿರುವನು. ಹೀಗೆ ಕರ್ಮವನ್ನು ಮಾಡುವದರಲ್ಲಾಗಲಿ ಅದನ್ನು ಸಂಪೂರ್ಣವಾಗಿ ಬಿಡುವದರಲ್ಲಾಗಲಿ ಸ್ವಾತಂತ್ರ್ಯವೂ ಆನಂದವೂ ಇರುವದಿಲ್ಲ, ಯಾವ ಕರ್ಮವನ್ನು ಮಾಡಿದರೂ ಸಂಗವಾಗಲಿ ಫಲೇಚ್ಛೆಯಾಗಲಿ ಇಲ್ಲದೆ ಇರುವವರೇ ಸುಖಿಗಳು, ಸ್ವತಂತ್ರರು. ಜ್ಞಾನಿಗಳು ಕಾಮ, ಸಂಕಲ್ಪ, ಕರ್ಮ-ಎಲ್ಲವನ್ನೂ ಆತ್ಮತತ್ತ್ವವಾಗಿ ತಿಳಿದುಕೊಂಡು ಸುಖಿಗಳಾಗಿರುವರು. ಅಂಥ ಜ್ಞಾನಕ್ಕೆ ಏರಬೇಕೆಂಬ ಆಸೆಯುಳ್ಳ ಮುಮುಕ್ಷುಗಳಾದ ಕರ್ಮಯೋಗಿಗಳು ಸಂಗವನ್ನೂ ಫಲಾಶೆಯನ್ನೂ ಪ್ರಯತ್ನಪೂರ್ವಕವಾಗಿ ಬಿಟ್ಟು ಕಾಮಸಂಕಲ್ಪಗಳ ಕೋಟಲೆಗೆ ಒಳಗಾಗದೆ ಮಾಡ ಬೇಕಾದ ಕರ್ಮವನ್ನೆಲ್ಲ ಭಗವದರ್ಥವಾಗಿಯೇ ಮಾಡುತ್ತಿರಬೇಕು. ಜ್ಞಾನಿಗಳು ಜ್ಞಾನಬಲದಿಂದ ಪಡೆಯುವ ಫಲವನ್ನು ಕರ್ಮಯೋಗಿಗಳು ಭಗವಂತನ ಆಶ್ರಯದಿಂದ ಮಾಡುವ ಕರ್ಮದಿಂದಲೇ ಪಡೆಯಬಹುದು. ಒಂದು ಕಂಬಕ್ಕೆ ಹಗ್ಗವನ್ನು ಕಟ್ಟಿ ಕೊಂಡು ಅದನ್ನು ಆಶ್ರಯಿಸಿ ಹಗ್ಗದ ಬಲದಿಂದ ಅದರ ಸುತ್ತಲೂ ಗಿರ್ರನೆ ತಿರುಗುವ ಹುಡುಗನಂತೆ ಭಗವಂತನನ್ನು ಆಶ್ರಯಿಸಿಕೊಂಡು ಯಾವ ವ್ಯವಹಾರವನ್ನು ಮಾಡಿದರೂ ಭಕ್ತನಿಗೆ ಅಪಾಯವಿಲ್ಲ- ಎಂದು ಒಬ್ಬ ಸಾಧುವರ್ಯರು ಹೇಳಿರುತ್ತಾರೆ. ಪರಮೇಶ್ವರನ ಭಕ್ತರಾಗುವವರು ಯಾವದನ್ನು ನನ್ನದು ಎನ್ನುವರೋ ಅದೂ ಭಗವಂತನದೇ ಆಗಿ ಅವರದಾಗಿರುತ್ತದೆ. ಆದ್ದರಿಂದ ಅವರಿಗೆ ಯಾವದೊಂದೂ ಬಂಧಕವಾಗುವದಿಲ್ಲ. **ಬಾಲಗಂಗಾಧರತಿಲಕ**ರವರು ಕರ್ಮಯೋಗವೇ ಗೀತೆಯ ಪರಮೋಪದೇಶವೆಂದಿರು ತ್ತಾರೆ. ಇದು ನಿಜವಾದದ್ದು. ಗೀತೆಯಲ್ಲಿ ಕರ್ಮಯೋಗಕ್ಕೆ ಬಹಳ ಹೆಚ್ಚಿನ ಸ್ಥಾನವನ್ನು ಕೊಟ್ಟಿರುತ್ತದೆ. ಕರ್ಮಯೋಗಿಯು ತತ್ತ್ವಜ್ಞಾನವನ್ನು ಗುರಿಯಾಗಿಟ್ಟುಕೊಂಡು ಜ್ಞಾನಿಯನ್ನೇ ಮಾದರಿಯಾಗಿಟ್ಟು ವ್ಯವಹಾರವನ್ನು ಮಾಡುತ್ತಿರಬೇಕೆಂಬುದನ್ನು ಮಾತ್ರ ಇಲ್ಲಿ ಲಕ್ಷ್ಯದಲ್ಲಿಡಬೇಕು. ಹೊಸದಾಗಿ ಕುಸ್ತಿಯಾಡುವವರು ತಮ್ಮ ವಸ್ತಾದಿಯನ್ನು ಆದರ್ಶವಾಗಿಟ್ಟುಕೊಳ್ಳುವಂತೆ ಕರ್ಮಯೋಗಿಗಳು ಭಗವಂತನ ಪ್ರತಿನಿಧಿಯೆಂದು ಜ್ಞಾನಿಯನ್ನೇ ಮಾದರಿಯಾಗಿಟ್ಟುಕೊಳ್ಳಬೇಕು. ಜ್ಞಾನಿಗೆ ಜ್ಞಾನದ ಬಲದಿಂದ ಸಹಜವಾಗಿರುವ ಲಕ್ಷಣಗಳನ್ನು ಇವರು ಪ್ರಯತ್ನಪೂರ್ವಕವಾಗಿ ಪಡೆಯುವದಕ್ಕೆ ಹವಣಿಸುತ್ತಿರಬೇಕು. ಹೀಗೆ ಮಾಡುತ್ತಿರುವವರಿಗೆ ಇಹದಲ್ಲಿ ಸೌಖ್ಯವೂ ಪರದಲ್ಲಿ ಪರಮಾತ್ಮನ ಪ್ರಾಪ್ತಿಯೂ ಕಟ್ಟಿಟ್ಟ ಬುತ್ತಿಯಾಗುವವು. ಈ ತತ್ತ್ವವನ್ನು ತಿಳಿಸುವದಕ್ಕಾಗಿಯೇ ಭಗವಂತನು ಜ್ಞಾನವನ್ನು ಅರ್ಜುನನಿಗೆ ಉಪದೇಶಿಸಿರುತ್ತಾನೆ.

# ೨೮. ಗೃಹಸ್ಥಜ್ಞಾನಿಗಳೂ ಸಂನ್ಯಾಸಿಜ್ಞಾನಿಗಳೂ ೪-(೨೦-೨೨)

(೫.೧.೪೭)

ಕರ್ಮದ ತತ್ತ್ವವನ್ನು ಅರ್ಜುನನಿಗೆ ತಿಳಿಸುವದಕ್ಕೆ ಭಗವಂತನು ಹೊರಟಿರುತ್ತಾನೆ. ಸರಿಯಾಗಿ ನೋಡಿದರೆ ಆತ್ಮತತ್ತ್ವದಲ್ಲಿ ಯಾವ ಕರ್ಮವೂ ಇಲ್ಲ; ಆದರೂ ಆತ್ಮನಲ್ಲಿ ಕರ್ಮವಿದೆ ಎಂದು ತಿಳಿದುಕೊಂಡು ಜನರು ಬದ್ಧರಾಗುತ್ತಿರುವರು. ಜ್ಞಾನಿಗಳು ನಿಜವನ್ನು ಅರಿತುಕೊಂಡು ಮುಕ್ತರಾಗುವರು. ಇಲ್ಲಿ ಜ್ಞಾನಿಯನ್ನು ಹೊಗಳುವದು ಕರ್ಮಯೋಗಿಗೆ ಕರ್ಮಫಲದ ಆಸಕ್ತಿಯನ್ನು ಬಿಡಿಸುವದಕ್ಕಾಗಿ. ಫಲದ ಆಸಕ್ತಿಯನ್ನು ಬಿಟ್ಟವರಿಗೇ ಕರ್ಮದ ಕಾಟವು ತಪ್ಪುವದು. ಅರ್ಜುನನಿಗೆ ಮುಖ್ಯವಾಗಿ ಉಪದೇಶಿಸಿರುವದು ಕರ್ಮಯೋಗ; ಜ್ಞಾನದಲ್ಲಿ ಲಕ್ಷ್ಯವನ್ನಿಟ್ಟು ಕರ್ಮವನ್ನು ಮಾಡಬೇಕೆಂದು ತಿಳಿಸುವದಕ್ಕಾಗಿ ಜ್ಞಾನವನ್ನೂ ಹೇಳಿರುತ್ತದೆ.

ಯಾವನ ಕರ್ಮಗಳಲ್ಲಿ ಕಾಮಸಂಕಲ್ಪಗಳಿರುವದಿಲ್ಲವೋ ಅವನ ಕರ್ಮಗಳು ಜ್ಞಾನಾಗ್ನಿಯಿಂದ ಸುಟ್ಟುಹೋಗಿರುತ್ತವೆ. ಅವು ಫಲವನ್ನು ಕೊಡುವದಿಲ್ಲ. ಕರ್ಮವು ಆಗುವದಕ್ಕೆ ಮೊದಲು ಸಂಕಲ್ಪವೂ ಆಮೇಲೆ ಅದರಿಂದ ಹುಟ್ಟುವ ಕಾಮವೂ ಇರಬೇಕಾಗುತ್ತದೆ. ಫಲದ ಕಾಮನೆಯಿಲ್ಲದೆ ಕರ್ಮವು ಹೇಗೆ ಆದೀತು? ಪ್ರಯೋಜನವಿಲ್ಲದೆ ಎಂಥ ದಡ್ಡನೂ ಕೆಲಸದಲ್ಲಿ ತೊಡಗಲಾರನು. ಆದರೆ ಜ್ಞಾನಿಗೆ ಸಂಕಲ್ಪ, ಫಲ, ಕಾಮ-ಎಲ್ಲವೂ ಅಸತ್ತಾಗಿಬಿಟ್ಟಿರುತ್ತದೆ. ಹಾಗಾದಮೇಲೆ ಅವನಿಗೆ ಕರ್ಮವು ಹೇಗೆ ಸಂಭವಿಸುತ್ತದೆ? ಪರಮಾರ್ಥದೃಷ್ಟಿಯಿಂದ ನೋಡಿದರೆ ಜ್ಞಾನಿಗೆ ಯಾವ ಕರ್ಮವೂ ಇಲ್ಲ. ಆದರೂ ಮತ್ತೊಂದು ದೃಷ್ಟಿಯಿಂದ ನೋಡಿದರೆ ಜ್ಞಾನಿಗಳಿಗೆ ಕರ್ಮವನ್ನು ಮಾಡುತ್ತಿರುವದರಲ್ಲಿಯೇ ಆನಂದ. ಗಾಳಿಗೆ ಬೀಸುತ್ತಲೇ ಇರುವದು ಹೇಗೆ ಸ್ವಭಾವವೋ ಹಾಗೆ ಜ್ಞಾನಿಗಳಿಗೆ ಏನಾದರೊಂದು ಕರ್ಮವನ್ನು ಲೋಕೋಪಕಾರಕ್ಕಾಗಿ ಮಾಡುತ್ತಿರುವದೇ ಸಹಜವಾಗಿರುತ್ತದೆ. ಅವರಿಗೆ ಇಂಥ ಪ್ರಯೋಜನವಾಗಬೇಕೆಂಬ ಕಾಮಸಂಕಲ್ಪಗಳು ಮಾತ್ರ ಇರುವದಿಲ್ಲ. ಅಜ್ಞರು ಫಲದ ಆಸಕ್ತಿಯಿಲ್ಲದೆ ಕರ್ಮವನ್ನು ಮಾಡಲಾರರು. ಗಾಳಿ ಬಂದಾಗ ತೂರಿಕೊಳ್ಳುವ ದೃಷ್ಟಿ ಅವರದು; 'ಇದರಿಂದ ಏನು ಪ್ರಯೋಜನ?'- ಎಂದು ಅವರು ಕೇಳುತ್ತಲೇ ಇರುವರು. ನನಗೆ ಒಬ್ಬ ಪರಿಚಿತರಿದ್ದರು. ಅವರು ಹೆಂಡತಿಗೆ ಏನಾದರೂ ಸಣ್ಣಪುಟ್ಟ ಕೆಲಸವನ್ನು ಹೇಳಿದರೂ ಆಕೆ "ಏನು ಕೊಡ್ತೀರಿ?" ಎಂದು ಕೇಳುತ್ತಿದ್ದಳು. ಅವರು ನಗುತ್ತಾ ಏನಾದರೂ ಸ್ವಲ್ಪ ದುಡ್ಡನ್ನು ಕೊಡುತ್ತಿದ್ದರು. ಗಂಡನಿಗಾಗಿ ಪ್ರೇಮದಿಂದ ಕೆಲಸವನ್ನು

ಮಾಡುವ ಅಭ್ಯಾಸವೇ ಆಕೆಗೆ ತಪ್ಪಿಹೋಗಿತ್ತು! ಹೀಗೆಯೇ ಲೋಕದ ಜನರಿಗೆ ಪ್ರತಿಯೊಂದು ಕೆಲಸಕ್ಕೂ ಪ್ರಯೋಜನವು ಬೇಕು. ನಿಜವಾಗಿ ನೋಡಿದರೆ ಪರಮ ಪ್ರಯೋಜನವು ಆನಂದವು. ತಿಳಿದವರು ಈ ದೊಡ್ಡ ಪ್ರಯೋಜನವನ್ನು ಲಕ್ಷ್ಯದಲ್ಲಿಟ್ಟಿರುವದರಿಂದ ಅವರಿಗೆ ಸಣ್ಣ ಪುಟ್ಟ ಫಲಗಳಲ್ಲಿ ಆಸಕ್ತಿಯಿರುವದಿಲ್ಲ. ಈ ಆನಂದವು ಕೂಡ ಅವರಿಗೆ ಕರ್ಮದಿಂದ ಹೊಸದಾಗಿ ಬರುತ್ತದೆ ಎಂದು ತಿಳಿಯಬಾರದು. ಆನಂದವೂ ಕರ್ಮವೂ ಅವರಿಗೆ ಸಹಜವಾಗಿರುವವು. ಆದ್ದರಿಂದ ಅವರ ಕರ್ಮವು ಕ್ಷುದ್ರವಾದ ಜನ್ಮಾಂತರ, ಅಲ್ಲಿ ವಿಷಯಭೋಗ ಮುಂತಾದ ಫಲವನ್ನು ಕೊಡುವ ಹಾಗಿರುವದಿಲ್ಲ. ಸಾಮಾನ್ಯರಿಗೆ 'ಕೆಲಸವನ್ನು ಇಷ್ಟುಕಾಲ ಮಾಡಿದೆನು, ಇಷ್ಟು ಪರಿಮಾಣದ ಕೆಲಸವನ್ನು ಮಾಡಿದೆನು'- ಎಂಬ ಬುದ್ಧಿಯಿರುವದರಿಂದ ಕರ್ಮವು ಆಯಾಸಕರವಾಗಿರುತ್ತದೆ. ಜ್ಞಾನಿಗಳಿಗೆ ಹೀಗಿಲ್ಲ. ಕರ್ಮವು ಸ್ವಾಭಾವಿಕವಾಗಿ ಬಿಟ್ಟಿರುವದರಿಂದ ಯಾವ ಆಯಾಸವೂ ಅದರಿಂದ ಆಗುವದಿಲ್ಲ.

ಕರ್ಮಯೋಗಿಗಳು ಕರ್ಮವನ್ನು ಹೇಗೆ ಮಾಡಬೇಕು? ಅವರು ಜ್ಞಾನಿಗಳನ್ನು ತಮ್ಮ ಮಾದರಿಯಾಗಿಟ್ಟುಕೊಳ್ಳಬೇಕು. ಜ್ಞಾನಿಗಳು ಕಾಮಸಂಕಲ್ಪಗಳಿಲ್ಲದೆ ಕರ್ಮವನ್ನು ಮಾಡುತ್ತಿರುತ್ತಾರೆ. ಯಾವ ಫಲವೂ ಅವರಿಗೆ ಬೇಕಿರುವದಿಲ್ಲ. ಆದ್ದರಿಂದ ಅವರು ನಿತ್ಯತೃಪ್ತರಾಗಿರುತ್ತಾರೆ. ಅವರಿಗೆ ಈ ಲೋಕದಲ್ಲಾಗಲಿ ಪರಲೋಕದಲ್ಲಾಗಲಿ ಪಡೆಯಬೇಕಾದದ್ದು ಯಾವದೊಂದೂ ಇರುವದಿಲ್ಲ; ಆದ್ದರಿಂದ ಇಷ್ಟಪ್ರಾಪ್ತಿಗಾಗಿ ಅಥವಾ ಅನಿಷ್ಟನಿವೃತ್ತಿಗಾಗಿ ಆಶ್ರಯಿಸಬೇಕಾದ ಸಾಧನವು ಯಾವದೊಂದೂ ಇರುವದಿಲ್ಲ. ಆದ್ದರಿಂದ ಅವರು ಕರ್ಮವನ್ನು ಮಾಡುತ್ತಲೇ ಇದ್ದರೂ ಏನನ್ನೂ ಮಾಡಿದಂತೆ ಆಗುವದಿಲ್ಲ; ಅಂದರೆ ಅದರಿಂದ ಇಷ್ಟಪ್ರಾಪ್ತಿಯಾಗಲಿ ಅನಿಷ್ಟನಿವೃತ್ತಿಯಾಗಲಿ ಆಗುವಂತೆ ಇರುವದಿಲ್ಲ. ಕರ್ಮಯೋಗಿಯು ಇವರ ಮಾದರಿಯನ್ನು ಅನುಸರಿಸಬೇಕು, ಎಂದರೆ ಅವನು ತಾನು ಮಾಡುವ ಕರ್ಮಕ್ಕೆ ಕಾಮಸಂಕಲ್ಪಗಳು ಬುಡದಲ್ಲಿಲ್ಲದಂತೆ ನೋಡಿಕೊಳ್ಳಬೇಕು; ಯಾವಾಗಲೂ ತೃಪ್ತನಾಗಿರಬೇಕು, ಯಾವದಾದರೊಂದು ಫಲಕ್ಕಾಗಿ ಯಾವದೊಂದು ಸಾಧನವನ್ನೂ ಆಶ್ರಯಿಸಬಾರದು. ಹೀಗಿದ್ದು ಕರ್ಮವನ್ನು ಮಾಡುವದಕ್ಕೆ ಆತ್ಮಜ್ಞಾನವೇ ಜ್ಞಾನಿಗಳಿಗೆ ಬಲವಾಗಿರುತ್ತದೆ. ಕರ್ಮಯೋಗಿಯಾದವನಿಗೆ ಭಗವಂತನೇ ಬಲವು, ಅವನಿಗೆ ಕರ್ಮವು ತನ್ನದೆಂಬ ಆಸಕ್ತಿಯಿಲ್ಲ, ಏಕೆಂದರೆ ಕರ್ಮಕ್ಕೆಲ್ಲ ಭಗವಂತನೇ ಮೂಲವೆಂದು ಅವನ ನಂಬಿಕೆ. ಆದ್ದರಿಂದ ಕರ್ಮಫಲದಲ್ಲಿಯೂ ಅವನಿಗೆ ಆಸಕ್ತಿಯಿರುವದಿಲ್ಲ. ದೇವರಿಗೆಂದು ಒಯ್ಯುತ್ತಿರುವ ಹೂವನ್ನು ಮೂಸುವದಕ್ಕಾಗಲಿ ಮುಡಿಯುವದಕ್ಕಾಗಲಿ ಹೇಗೆ ಆರಾಧಕನಿಗೆ ಅಧಿಕಾರವಿಲ್ಲವೋ ಹಾಗೆ ಕರ್ಮವನ್ನಾಗಲಿ ಫಲವನ್ನಾಗಲಿ ತನ್ನದೆಂದು

ಕೊಳ್ಳುವದಕ್ಕೆ ಕರ್ಮಯೋಗಿಗೆ ಅಧಿಕಾರವಿರುವದಿಲ್ಲ. ಕರ್ಮಯೋಗಿಯು ನಿತ್ಯತೃಪ್ತನಾಗಿರುವನು, ಏಕೆಂದರೆ ಭಗವಂತನಿಗೆ ಪ್ರೀತಿಯಾಗಲೆಂದೇ ಅವನು ಕರ್ಮವನ್ನು ಮಾಡುತ್ತಿರುವದರಿಂದ ಅವನಿಗೆ ಇಂಥ ಕರ್ಮಫಲವು ಆಗಲಿಲ್ಲವಲ್ಲ! ಎಂದು ಹಲುಬುವದಕ್ಕೆ ಕಾರಣವೇ ಇರುವದಿಲ್ಲ. ಆದ್ದರಿಂದಲೇ ಅವನಿಗೆ ಯಾವದೊಂದು ಫಲವನ್ನು ಪಡೆಯುವದಕ್ಕಾಗಿ ಯಾವದಾದರೊಂದು ಸಾಧನವನ್ನು ಆಶ್ರಯಿಸಬೇಕಾದ ಗರಜೂ ಇರುವದಿಲ್ಲ. ಸಾಧನ, ಸಾಧ್ಯ-ಎಲ್ಲವೂ ಅವನಿಗೆ ಭಗವಂತನೇ. ಕರ್ಮವನ್ನು ಮಾಡುವದೇತಕ್ಕೆ? ಎಂದರೆ ಭಗವಂತನ ಪ್ರೀತ್ಯರ್ಥವಾಗಿ. ಇಷ್ಟೇ ಅವನ ನಂಬಿಕೆ.

ಜ್ಞಾನಿಗಳು ಲೋಕದಲ್ಲಿ ಹೇಗೆ ವ್ಯವಹರಿಸುವರು?- ಎಂಬುದು ಸಾಮಾನ್ಯರಿಗೆ ತಿಳಿಯದ ಒಗಟಾಗಿರುತ್ತದೆ. ಏಕೆಂದರೆ ಜ್ಞಾನಿಗಳೆನಿಸಿಕೊಂಡವರು ಯಾವ ವರ್ಣದಲ್ಲಿಯಾದರೂ ಯಾವ ಆಶ್ರಮದಲ್ಲಿಯಾದರೂ ಇರಬಹುದು; ಇಷ್ಟೇ ಅಲ್ಲ. ವರ್ಣಾಶ್ರಮಧರ್ಮವಿಲ್ಲದವರೂ ಜ್ಞಾನಿಗಳಾಗಿರಬಹುದು. ಹೀಗಿರುವದರಿಂದ ಜ್ಞಾನಿಗಳು ಹೇಗೆ ಕರ್ಮವನ್ನು ಮಾಡುತ್ತಾರೆ? ಅವರು ಕರ್ಮವನ್ನು ಮಾಡುವರೊ, ಇಲ್ಲವೊ?—ಎಂಬ ಪ್ರಶ್ನೆಗಳಿಗೆ ನೇರಾಗಿ ಒಂದೇ ಉತ್ತರವನ್ನು ಕೊಡುವದಕ್ಕೆ ಬರುವದಿಲ್ಲ. ಜ್ಞಾನಿಗಳಿಗೆ ಲಕ್ಷಣವು ಜ್ಞಾನವೇ. ಅವರು ಗೃಹಸ್ಥಾಶ್ರಮದಲ್ಲಿರಲಿ, ಸಂನ್ಯಾಸಾಶ್ರಮದಲ್ಲಿರಲಿ, ಅವಧೂತರಾಗಿರಲಿ, ಯಾವ ಆಶ್ರಮಕ್ಕೂ ಕಟ್ಟುಬಿದ್ದಿರುವದಿಲ್ಲ. ಗೃಹಸ್ಥಾಶ್ರಮದಲ್ಲಿರುವವನೊಬ್ಬನಿಗೆ ತತ್ತ್ವಜ್ಞಾನವಾಗಿ ಅವನು ಆಮೇಲೂ ಅದೇ ಆಶ್ರಮದಲ್ಲಿರುತ್ತಾನೆಂದು ಇಟ್ಟುಕೊಳ್ಳಿ. ಅಂಥವನು ಹೇಗೆ ಕರ್ಮವನ್ನು ಮಾಡುತ್ತಾನೆ?- ಎಂದರೆ ಉಳಿದ ಗೃಹಸ್ಥರು ಮಾಡುವಂತೆಯೇ ಕರ್ಮವನ್ನು ಮಾಡುತ್ತಾನೆ; ಅಥವಾ ಅವರಿಗಿಂತಲೂ ಇನ್ನೂ ಉತ್ತಮರೀತಿಯಲ್ಲೇ ಮಾಡುತ್ತಾನೆ, ಏಕೆಂದರೆ ಅವನಿಗೆ ಉಳಿದವರಿಗಿರುವಂತೆ ಕರ್ಮದ ತೊಡಕಿರುವದಿಲ್ಲ. ಹಣದ ನಿಜವಾದ ಬೆಲೆಯನ್ನು ಬಲ್ಲವನು ರೂಪಾಯಿಗಳ ವ್ಯವಹಾರದಲ್ಲಿ ತೋರುವಷ್ಟು ಆದರವನ್ನೇ ಕಾಸಿನಲ್ಲಿಯೂ ತೋರುವಂತೆ, ಅವನು ಸಣ್ಣಪುಟ್ಟಕರ್ಮಗಳನ್ನು ಕೂಡ ಆದರದಿಂದಲೇ ಮಾಡುತ್ತಿರುತ್ತಾನೆ. ಆದರೆ ಕಾಮಸಂಕಲ್ಪಗಳಿಲ್ಲದೆ ಅವನು ಕರ್ಮವನ್ನು ಮಾಡುತ್ತಿರುವದರಿಂದ ಅವನು ಯಾವ ಕರ್ಮವನ್ನೂ ಮಾಡಿದವನಾಗುವದಿಲ್ಲ. ಆದ್ದರಿಂದ ಅವನು ನಿಜವಾಗಿ ಅಕರ್ಮಿಯೇ ಆಗಿರುತ್ತಾನೆ. ಇನ್ನು ಜ್ಞಾನಿಯು ಸಂನ್ಯಾಸಾಶ್ರಮದಲ್ಲಿದ್ದರೊ? ಸಂನ್ಯಾಸಾಶ್ರಮದಲ್ಲಿರುವವನು ಜ್ಞಾನಿಯಾಗಿದ್ದರೆ ಹೇಗೆ ನಡೆಯುವನು?

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥** (೪-೨೧)

ಜ್ಞಾನಿಯಾದ ಸಂನ್ಯಾಸಿಯು ನಿರಾಶಿಯಾಗಿರುವನು; ಯತಚಿತ್ತಾತ್ಮನಾಗಿರುವನು. ಸಂನ್ಯಾಸಿಗಳೆಲ್ಲರೂ ಜ್ಞಾನಿಗಳೆಂದೂ ಗೃಹಸ್ಥರೆಲ್ಲ ಅಜ್ಞಾನಿಗಳೆಂದೂ ತಿಳಿಯುವ ಹುಚ್ಚನ್ನು ನಾವು ಮೊದಲು ಬಿಡಿಸಿಕೊಳ್ಳಬೇಕು. ಯಾವನಿಗೆ ತತ್ತ್ವಜ್ಞಾನವು ಬಂದಿರುವದೋ ಅವನು ಆಶೆಯಿಲ್ಲದವನಾಗಿರುವನು. ಬ್ರಹ್ಮಚಾರಿಯಾಗಿರುವಾಗಲೇ ತತ್ತ್ವಜ್ಞಾನವುಂಟಾಯಿತೆಂದು ಇಟ್ಟುಕೊಳ್ಳಿರಿ. ಅಂಥವನಿಗೆ ಗೃಹಸ್ಥಾಶ್ರಮದಲ್ಲಿ ಮಾಡಬೇಕಾದ ಕರ್ಮಗಳಲ್ಲಿ ಯಾವ ಆಸಕ್ತಿಯೂ ಇರುವ ಸಂಭವವಿಲ್ಲ. ಆದ್ದರಿಂದ ಅವನು ಯಾವ ಕರ್ಮವನ್ನೂ ಮಾಡುವದಕ್ಕೆ ಇಚ್ಛಿಸುವದಿಲ್ಲ, ಅವನು ಮಾನಸಿಕವಾಗಿ ಸಂನ್ಯಾಸಿಯೇ ಆಗುವನು. ಅಂಥವನಿಗೆ ಮನಸ್ಸು, ಕರಣಗಳು, ಶರೀರ ಇವುಗಳು ಅತ್ತಿತ್ತ ಹರಿದಾಡುವವೆಂಬ ಅಪಾಯವಿರುವದಿಲ್ಲ. ಹೀಗೆ ಯಾವನು ಯತಚಿತ್ತಾತ್ಮನಾಗಿರುವನೋ ಅವನಿಗೆ ಯಾವದರಲ್ಲಿಯೂ ನನ್ನದೆಂಬ ಬುದ್ಧಿಯಿರುವದಿಲ್ಲ. ಆದ್ದರಿಂದ ಅವನಿಗೆ ಇರುವ ಕರ್ಮವೆಂದರೆ ಶಾರೀರಕರ್ಮ, ಎಂದರೆ ಶರೀರದಲ್ಲಿ ಉಸಿರಾಡುತ್ತಿದ್ದು ಜೀವಿಸಿಕೊಂಡಿರುವದಕ್ಕೆ ತಕ್ಕಷ್ಟು ಆಹಾರವಿಹಾರಗಳು. ಅಷ್ಟರಿಂದಲೇ ಅವನು ತೃಪ್ತನಾಗಿ ಆತ್ಮಚಿಂತನೆಯಲ್ಲಿ ಯಾವಾಗಲೂ ಕಾಲವನ್ನು ಕಳೆಯುವನು.

ಇಂಥ ಸಂನ್ಯಾಸಿಗಳು ಎಲ್ಲಿರುವರೋ ಅಲ್ಲಿ ಮಳೆಬೆಳೆಗಳು ಕಾಲಕಾಲಕ್ಕೆ ಆಗುತ್ತಿರುವವು. ಆ ದೇಶವು ಸುಭಿಕ್ಷವಾಗಿ ಜನರ ಧರ್ಮಬುದ್ಧಿಯನ್ನು ಉತ್ತೇಜನಗೊಳಿಸುತ್ತಿರುವದು. ಹರಿಹರದಲ್ಲಿ ಕೆಲವು ವರ್ಷಗಳ ಹಿಂದೆ ಒಬ್ಬ ಸಂನ್ಯಾಸಿಗಳಿದ್ದರು. ಅವರು ನದಿಯ ದಂಡೆಯಮೇಲೆ ಒಂದು ಗುಂಡಿಯನ್ನು ತೋಡಿಕೊಂಡು ಅಲ್ಲಿಯೇ ವಾಸವಾಗಿರುತ್ತಿದ್ದರು. ಅವರನ್ನು "ಗುಂಡಿ ಸ್ವಾಮಿಗಳು" ಎಂದು ಜನರು ಕರೆಯುತ್ತಿದ್ದರು. ಎಷ್ಟೋ ಜನರು ಅವರಲ್ಲಿಗೆ ಬಂದು ಅವರ ಅನುಗ್ರಹವನ್ನು ಸಂಪಾದಿಸಿಕೊಳ್ಳುತ್ತಿದ್ದರು. ಜನರು ಅವರು ಇದ್ದಲ್ಲಿಗೆ ಬಂದು ಅಡಿಗೆಯನ್ನು ಮಾಡಿ ಅವರಿಗೆ ಬಡಿಸಿ ತಾವೂ ಪ್ರಸಾದವನ್ನು ಸ್ವೀಕರಿಸಿ ಹೋಗುತ್ತಿದ್ದರು. ಒಬ್ಬೊಬ್ಬರು ಮನೆಯಿಂದ ಅವಲಕ್ಕಿ ಮುಂತಾಗಿ ಏನಾದರೂ ತಿಂಡಿಯನ್ನು ತಂದುಕೊಡುವದುಂಟು. ಆದರೆ ಸ್ವಾಮಿಗಳು ಜನರ ಗುಂಪನ್ನು ಬಯಸುತ್ತಿರಲಿಲ್ಲ; ಸಿಟ್ಟು ಬಂದವರಂತೆ ನಟಿಸುತ್ತಾ ಜನರ ಕಡೆಗೆ ಕಲ್ಲನ್ನೆಸೆಯುವದು, ಬಯ್ಯುವದು ಹೀಗೆಲ್ಲ ಮಾಡಿ ಜನರನ್ನು ಚದರಿಸುತ್ತಿದ್ದರು. ಒಂದು ಸಲ ಮೂರು ದಿವಸಗಳವರೆಗೆ ಅವರಲ್ಲಿಗೆ ಯಾರೂ ಬರಲೇ ಇಲ್ಲ. ನಾಲ್ಕನೆಯ ದಿನ ಒಬ್ಬ ವೈದಿಕಬ್ರಾಹ್ಮಣನು ಸ್ವಲ್ಪ ಮೊಸರವಲಕ್ಕಿಯನ್ನು ತಂದು ಒಪ್ಪಿಸಿದನು. ಆಗ ಸ್ವಾಮಿಗಳು ಹೊಟ್ಟೆಗೆ ಕಟ್ಟಿಕೊಂಡಿದ್ದ ಒದ್ದೆಯ ಬಟ್ಟೆಯನ್ನು ಬಿಚ್ಚಿದರು! ಇದೇನೆಂದು ಬ್ರಾಹ್ಮಣನು ವಿಚಾರಿಸಿದ್ದಕ್ಕೆ "ಈ

ಹೊಟ್ಟೆ ಮೂರು ದಿವಸದಿಂದ ಗೋಳುಗುಟ್ಟಿಸುತ್ತಾ ಇದೆ. ಆದ್ದರಿಂದ ಅದನ್ನು ಹೀಗೆ ಬಿಗಿದಿದ್ದೆ" ಎಂದರಂತೆ! "ಶಾರೀರಂ ಕೇವಲಂ ಕರ್ಮ" ಎಂದರೆ ಇಂಥ ಕರ್ಮವು.

ಈ ಕರ್ಮವನ್ನು ಮಾಡುತ್ತಿರುವ ಸಂನ್ಯಾಸಿಗೆ ಯಾವ ಕಿಲ್ಬಿಷವೂ ಅಂಟುವದಿಲ್ಲ, ಕಿಲ್ಬಿಷವೆಂದರೆ ಪಾಪವು. ಕರ್ಮವನ್ನೇ ಮಾಡದೆ ಇರುವವನಿಗೆ ಪಾಪವೆಲ್ಲಿಯದು? ಆದ್ದರಿಂದ ಶಾರೀರಕರ್ಮವನ್ನು ಮಾಡಿಕೊಂಡಿರುವ ಸಂನ್ಯಾಸಿಗೆ ಕಿಲ್ಬಿಷವಾಗುವದಿಲ್ಲ ಎಂದರೆ ಪಾಪವಾಗಲಿ ಪುಣ್ಯವಾಗಲಿ ಗಂಟುಬಿದ್ದು ಜನ್ಮಾಂತರಕ್ಕೆ ಕಾರಣವಾಗುವದಿಲ್ಲ ಎಂದರ್ಥ. ಪಾಪವು ಹೇಗೆ ಬಂಧಕವೋ ಹಾಗೆಯೇ ಪುಣ್ಯವೂ ಬಂಧಕವೇ; ಚಿನ್ನದ ಬೇಡಿಯಾದ ಮಾತ್ರಕ್ಕೆ ಆಭರಣವೆನಿಸೀತೆ? ಜ್ಞಾನಿಗೆ ಯಾವ ಧರ್ಮಾಧರ್ಮಗಳ ಬಂಧವೂ ಇರುವದಿಲ್ಲ-ಎಂದು ಅರ್ಥ.

ಸಂನ್ಯಾಸಾಶ್ರಮದಲ್ಲಿರುವ ಜ್ಞಾನಿಯು ಯದೃಚ್ಛಾಲಾಭದಿಂದ ಸಂತುಷ್ಟ ನಾಗಿರುತ್ತಾನೆ. ಆಗಲೆ ಹೇಳಿರುವ ಗುಂಡಿಸ್ವಾಮಿಗಳಂತೆ ಅಪ್ರಾರ್ಥಿತವಾಗಿ ಬಂದಷ್ಟು ಆಹಾರಾದಿಗಳಿಂದ ತೃಪ್ತಿಯನ್ನು ಹೊಂದುತ್ತಾನೆ. ಶೀತ ಉಷ್ಣ, ಸುಖ ದುಃಖ-ಮುಂತಾದ ದ್ವಂದ್ವಗಳು ಸ್ವಾಭಾವಿಕವಾಗಿ ಆಗುತ್ತಿದ್ದರೂ ಚಿತ್ತದಲ್ಲಿ ಹರ್ಷವನ್ನಾಗಲಿ ವಿಷಾದವನ್ನಾಗಲಿ ಹೊಂದುವದಿಲ್ಲ. ಅವನಿಗೆ ಯಾರಲ್ಲಿಯೂ ಮಾತ್ಸರ್ಯವಿರುವದಿಲ್ಲ. ಇಂಥವನಿಗೆ ತೊಂದರೆಯಾಗಿಲ್ಲವಲ್ಲ! ಎಂದು ಮನಸ್ಸಿನಲ್ಲಿಯೇ ಕುದಿದುಕೊಳ್ಳುವದು ಮಾತ್ಸರ್ಯವು; ಅಂಥ ಹೊಟ್ಟೆಯ ಕಿಚ್ಚು ಅವನಿಗೆ ಎಂದಿಗೂ ಬರುವ ಸಂಭವವಿರುವದಿಲ್ಲ; ಮತ್ತೊಬ್ಬರಿಗೆ ಇಷ್ಟು ಆನುಕೂಲ್ಯವೂ ದೊರಕಿತಲ್ಲ! ಎಂಬ ಹೊಟ್ಟೆಯ ಕಿಚ್ಚೂ ಅವನಿಗೆ ಆಗುವಂತಿಲ್ಲ. ಶರೀರಸ್ಥಿತಿಗಾಗಿ ತಾನು ಮಾಡುವ ಭಿಕ್ಷಾಟನಾದಿಗಳಿಂದ ತನ್ನ ದೇಹಯಾತ್ರೆಗೆ ಆಗುವಷ್ಟು ದೊರೆಯಲಿ, ದೊರೆಯದಿರಲಿ, ಅವನ ಮನಸ್ಸು ಏರುಪೇರುಗಳಿಲ್ಲದೆ ಇರುತ್ತದೆ. ಅವನು ಶರೀರಸ್ಥಿತಿಗೆ ತಕ್ಕಷ್ಟು ಕರ್ಮವನ್ನು ಕೂಡ ಮಾಡುತ್ತಾನೆಂಬುದು ಉಳಿದ ಅಜ್ಞರ ದೃಷ್ಟಿಯಿಂದ. ಅವನು ತನ್ನ ದೃಷ್ಟಿಯಿಂದ ಏನನ್ನೂ ಮಾಡುವದೇ ಇಲ್ಲ; ಇನ್ನು ಕರ್ಮದಿಂದ ಅವನು ಬದ್ಧನಾಗುವ ಹಾಗಿಲ್ಲವೆಂಬುದನ್ನು ಹೇಳಬೇಕೆ?

ಸಂನ್ಯಾಸವೆಂಬುದು ನಮ್ಮ ದೇಶದಲ್ಲಿ ಒಂದು ದೊಡ್ಡ ಧ್ಯೇಯವಾಗಿರುತ್ತದೆ. ಶ್ರೀ ವಿವೇಕಾನಂದಸ್ವಾಮಿಗಳು ಅಮೆರಿಕದಲ್ಲಿ ಉಪನ್ಯಾಸಮಾಡುತ್ತಿರುವಾಗ ಈ ವಿಷಯದಲ್ಲಿ ಹೇಳಿರುವ ವಾಕ್ಯವು ನೆನಪಿಡುವಂಥದ್ದು. "ಪಶ್ಚಿಮದೇಶದಲ್ಲಿ ಮಾನವನು ಎಷ್ಟು ಹೆಚ್ಚಾಗಿ ಸಂಪಾದಿಸಬಹುದು ಎಂಬುದನ್ನು ತೋರಿಸುವದಕ್ಕೆ ಪ್ರಯತ್ನಿಸು ತ್ತಿರುವರು. ನಮ್ಮ ದೇಶದಲ್ಲಿರುವವರು ಸಂಪಾದನೆ ತೀರ ಎಷ್ಟು ಕಡಿಮೆಯಾದರೆ ಮಾನವನು ತೃಪ್ತನಾಗಿರಬಹುದು? ಎಂಬುದನ್ನು ಗೊತ್ತುಪಡಿಸುವದಕ್ಕೆ

ಹೊರಟಿರುತ್ತಾರೆ" ಎಂದು ಅವರು ಅಪ್ಪಣೆಕೊಡಿಸಿರುತ್ತಾರೆ. ಈ ಧ್ಯೇಯವನ್ನು ನಾವೆಲ್ಲರೂ ಲಕ್ಷ್ಯದಲ್ಲಿಟ್ಟಿರಬೇಕು. ನಾವು ಕರ್ಮವನ್ನು ಮಾಡುವಾಗಲೂ ಕರ್ಮಫಲವು ಸಿದ್ಧಿಸಲಿ ಸಿದ್ಧಿಸದಿರಲಿ, ಸ್ವಲ್ಪ ಸಹಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಕು. ನಾವು ಮಾಡುವದನ್ನೆಲ್ಲ ಪರಮೇಶ್ವರನ ಪ್ರೀತಿಗೆಂದು ಮಾಡುವದಕ್ಕೆ ಯತ್ನಿಸಬೇಕು. ನಾವು ದಿನಕ್ಕೆ ಎಷ್ಟು ಘಂಟೆ ಕೆಲಸಮಾಡುವೆವೋ ಅಷ್ಟು ಮಟ್ಟಿನ ಫಲವಾಗುವದೆಂದು ನಿರೀಕ್ಷಿಸುವದು ತಪ್ಪು. ಈಶ್ವರನ ದಯೆ ಬಂದರೆ ಒಂದು ಘಂಟೆಯಲ್ಲಿ ಮಾಡಿದ ಕೆಲಸಕ್ಕೆ ಅನಂತಫಲವಾಗಿಬಿಡಬಹುದು. 'ಹೇಗಾದರೂ ಆಗಲಿ, ಪರಮೇಶ್ವರನ ಪ್ರೀತಿಗಾಗಿ ಕೆಲಸಮಾಡುವೆನು' ಎಂದು ಸಂಕಲ್ಪಿಸಬೇಕು. ಸಿದ್ಧಿಯಾಗಲಿ ಆಗದಿರಲಿ, ಮನಸ್ಸನ್ನು ಸಮತೂಕವಾಗಿಟ್ಟುಕೊಂಡಿರಬೇಕು. ಇದೇ ನಮ್ಮ ಧ್ಯೇಯ. ಇಲ್ಲಿ ಜ್ಞಾನಕರ್ಮಗಳ ವಿಭಾಗವನ್ನು ನಾವು ಮನಸ್ಸಿನಲ್ಲಿಟ್ಟಿರುವದು ಅತ್ಯವಶ್ಯವು. ಜ್ಞಾನಿಗಳು ಆದರ್ಶಪುರುಷರಾಗಿರುತ್ತಾರೆ; ಅವರನ್ನು ಅನುಸರಿಸುವದಕ್ಕೆ ತಮ್ಮ ತಮ್ಮ ಸ್ಥಾನದಲ್ಲಿದ್ದು ಕೊಂಡು ಯತ್ನಿಸುವದೇ ಕರ್ಮಯೋಗಿಗಳ ಗುರಿಯಾಗಿರುತ್ತದೆ. ಜ್ಞಾನಿಗಳ ಅನುಕರಣೆ ಯಿಂದಲೇ ನಾವು ಕೃತಾರ್ಥರಾಗಬೇಕಾಗಿರುತ್ತದೆ.

## ೨೯. ಗೃಹಸ್ಥಜ್ಞಾನಿಗಳೂ ಸಂನ್ಯಾಸಿಜ್ಞಾನಿಗಳೂ ೪-(೨೩-೨೫)

(೧೨.೧.೪೭)

ಜ್ಞಾನಿಯ ಕರ್ಮತ್ಯಾಗಕ್ಕೂ ಲೌಕಿಕರ ಕರ್ಮತ್ಯಾಗಕ್ಕೂ ಬಹಳ ಹೆಚ್ಚುಕಡಿಮೆ ಯುಂಟು. ಜ್ಞಾನಿಯು ತಾನು ಅಕರ್ತೃವಾದ ಆತ್ಮನೆಂಬುದನ್ನು ಅರಿತುಕೊಂಡು ಕರ್ಮವನ್ನು ತ್ಯಾಗಮಾಡುತ್ತಾನೆ. "ಕರ್ಮಣ್ಯಕರ್ಮ ಯಃ ಪಶ್ಯೇತ್" ಎಂಬ ಶ್ಲೋಕದಲ್ಲಿ ಹೇಳಿರುವಂತೆ ಆತ್ಮನಲ್ಲಿ ಕಾಣುತ್ತಿರುವ ಯಾವ ಕರ್ಮವೂ ನಿಜವಾಗಿ ಕರ್ಮವಲ್ಲ; ಅದು ದೇಹಾದಿಗಳ ಕರ್ಮವು, ಆತ್ಮನ ಕರ್ಮವಲ್ಲ. ದೇಹಾದಿಗಳು ಅಸತ್ತಾಗಿವೆ. ವಸ್ತುವಿನ ನೆರಳು ತೋರಿದರೂ ನಿಜವಾಗಿರುವ ವಸ್ತುವಲ್ಲದಿರುವಂತೆ ದೇಹಾದಿಗಳು ತೋರಿದರೂ ಅವು ನಿಜವಾದ ತತ್ತ್ವವಲ್ಲ. ಆತ್ಮನೊಬ್ಬನೇ ಸದ್ರೂಪ ನಾಗಿರುವವನು. ಅವನಲ್ಲಿ ಅಸತ್ತಾಗಿರುವ ದೇಹದ, ಪ್ರಾಣದ, ಮನಸ್ಸಿನ ಅಥವಾ ಬುದ್ಧಿಯ ಕರ್ಮವು ಒಂದಿಷ್ಟೂ ಇರುವದಿಲ್ಲ. ತನ್ನಲ್ಲಿರುವಂತೆ ತೋರುವ ಕರ್ಮವನ್ನು ಜ್ಞಾನಿಯು ಅತ್ಯಂತವಾಗಿ ಇಲ್ಲವೇ ಇಲ್ಲವೆಂದು ಅರಿತುಕೊಂಡಿರುತ್ತಾನೆ. ಇದೇ ಅವನು ಮಾಡುವ ಕರ್ಮತ್ಯಾಗವು.

ಆದರೆ ನಾನು ಕರ್ತೃ ಎಂದು ತಿಳಿದುಕೊಂಡಿರುವ ಲೌಕಿಕರಿಗೆ ಈ ಬಗೆಯ ಕರ್ಮತ್ಯಾಗವು ಶಕ್ಯವಿಲ್ಲ. ಆದರೂ ಅವರೂ ಇನ್ನೊಂದು ರೀತಿಯಿಂದ ಕರ್ಮತ್ಯಾಗವನ್ನು ಮಾಡಬಹುದು. ಕರ್ಮವನ್ನು ಮಾಡುತ್ತಿದ್ದರೂ ಸಂಗವಿಲ್ಲದೆ, ಫಲದ ಆಸೆಯಿಲ್ಲದೆ ಮಾಡುತ್ತಿದ್ದರೆ, ಕರ್ಮವು ಕರ್ಮವಲ್ಲದೆ ಹೋಗುವದು. ಅದು ಹೇಗೆಂದರೆ ಕರ್ಮವೆಂದರೆ ಒಳ್ಳೆಯ ಅಥವಾ ಕೆಟ್ಟ ಫಲವನ್ನು ಕೊಡುವ ಕ್ರಿಯೆಯಷ್ಟೆ; ಸಂಗವಿಲ್ಲದೆ ಫಲಾಶೆಯಿಲ್ಲದೆ ಕರ್ಮವನ್ನು ಮಾಡುವವರಿಗೆ ಯಾವ ಫಲವೂ ಆಗದೆ ಇರುವದರಿಂದ ಅದು ಕರ್ಮವೆಂಬ ಹೆಸರಿಗೆ ತಕ್ಕದ್ದಲ್ಲದೆ ಹೋಗುವದು. ಕರ್ಮವನ್ನು ಮಾಡುವ ಕರ್ತೃತ್ವಬುದ್ಧಿಯುಳ್ಳ ಲೌಕಿಕರ ಕರ್ಮತ್ಯಾಗವಿದು.

ಜ್ಞಾನಿಯು ಕರ್ಮತ್ಯಾಗವನ್ನು ಮಾಡಿದ ಮಾತ್ರದಿಂದ ಅವನು ಸಂನ್ಯಾಸಿಯೇ ಆಗಬೇಕೆಂದು ತಿಳಿಯಬಾರದು. ಕರ್ಮದಿಂದ ಆಗಬೇಕಾದ ಪ್ರಯೋಜನವು ಯಾವದೂ ಅವನಿಗೆ ಆಗಬೇಕಾದದ್ದಿಲ್ಲವಾದ್ದರಿಂದ ಅವನು ಸಹಜವಾಗಿ ಸಂನ್ಯಾಸವನ್ನೇ ಅವಲಂಬಿಸುವನೆಂಬುದು ನಿಜ. ಆದರೆ ಯಾವದಾದರೊಂದು ನಿಮಿತ್ತದಿಂದ ಅವನು ಗೃಹಸ್ಥನಾಗಿಯೇ ಉಳಿದರೂ ಅವನು ಗತಸಂಗನಾಗಿರುತ್ತಾನೆ, ತತ್ತ್ವಜ್ಞಾನ ದಲ್ಲಿಯೇ ನೆಲೆನಿಂತಿರುತ್ತಾನೆ. ಆದ್ದರಿಂದ ಅವನ ಕರ್ಮವೆಲ್ಲವೂ ಸಮಗ್ರವಾಗಿ ಲಯವಾಗಿಬಿಡುತ್ತದೆ. ಅಜ್ಞರಾದವರಿಗೆ ಎಂದರೆ "ನಾನು ಅಕರ್ತೃವಾದ ಅದ್ವಿತೀಯ ನಾದ ಆತ್ಮನು" ಎಂಬ ತಿಳಿವಳಿಕೆಯಿಲ್ಲದಿರುವವರಿಗೆ ದೇಹಾದಿಗಳ ಸಂಬಂಧವು ತಪ್ಪುತಿಳಿವಳಿಕೆಯಿಂದ ಬಲಿತುಕೊಂಡಿರುವದರಿಂದ ಕರ್ಮಗಳೂ ಉಂಟು; ಅವರಿಗೆ ಫಲಾಶೆಯಿಂದ ಕೂಡಿದ ಕರ್ಮಸಂಗವಿರುವದರಿಂದ ಅವರಿಗೆ ಕರ್ಮಫಲವೂ ಉಂಟು. ಕರ್ಮವನ್ನು ಮಾಡಿದರೆ ಧರ್ಮಾಧರ್ಮಗಳುಂಟಾಗುವವು, ಅವುಗಳಿಂದ ಕರ್ಮಿಗಳಿಗೆ ಬಂಧಗಳು ಇರುವವು. ಆದರೆ ಕರ್ಮವು ಆತ್ಮನಲ್ಲಿಲ್ಲವೇ ಇಲ್ಲ ಎಂಬ ತತ್ತ್ವಜ್ಞಾನದಲ್ಲಿಯೇ ಚಿತ್ತವು ನೆಲೆನಿಂತಿರುವ ಜ್ಞಾನಿಗೆ ಕರ್ಮಸಂಗವೆಲ್ಲಿ? ಅದರಿಂದಾ ಗುವ ಪುಣ್ಯಪಾಪಗಳ ಬಂಧವೆಲ್ಲಿ?

ಹಾಗಾದರೆ ಅವನು ಕರ್ಮವನ್ನು ಮಾಡುವದೇ ಇಲ್ಲವೆ? ಗೃಹಸ್ಥಾಶ್ರಮದಲ್ಲಿರುವ ಜ್ಞಾನಿಯು ಮಾಡುವ ಅಗ್ನಿಹೋತ್ರಾದಿಕರ್ಮಗಳಿಂದ ಅವನಿಗೆ ಪುಣ್ಯವಿಲ್ಲವೆ? ಜೀವಿಸಿರುವವರೆಗೂ ಮಾಡಬೇಕೆಂದು ವಿಧಿಸಿರುವ ಕರ್ಮಗಳನ್ನು ಬಿಟ್ಟು ಸಂನ್ಯಾಸಾ ಶ್ರಮದಲ್ಲಿದ್ದುಕೊಂಡಿರುವದರಿಂದ ಅವನಿಗೆ ಶಾಸ್ತ್ರವನ್ನು ಮೀರಿದ ದೋಷವುಂಟಾಗು ವದಿಲ್ಲವೆ? ಎಂದು ನೀವು ಕೇಳಬಹುದು. ಇದಕ್ಕೆ ಉತ್ತರವೇನೆಂದರೆ ಅವನು **ಯಜ್ಞಕ್ಕಾಗಿ ಕರ್ಮವನ್ನು ಮಾಡುತ್ತಾನೆ; ಆದ್ದರಿಂದ ಅವನ ಕರ್ಮವು ಸಮಗ್ರವಾಗಿ ಲಯವಾಗಿಬಿಡುತ್ತದೆ.**

ಜ್ಞಾನಿಯು ಯಜ್ಞಕ್ಕಾಗಿ ಕರ್ಮವನ್ನು ಮಾಡುವನೆಂಬ ಮಾತು ಕೆಲವರಿಗೆ ಸೋಜಿಗವಾಗಿ ತೋರಬಹುದು. ಏಕೆಂದರೆ ಯಜ್ಞವೆಂಬುದು ಕರ್ಮಗಳಲ್ಲೆಲ್ಲ ಹೆಚ್ಚಿನದು. ಜ್ಞಾನಿಯು ಅಕರ್ಮಿಯು ಎಂದೂ ಅವನು ಯಜ್ಞವನ್ನು ಮಾಡುತ್ತಾನೆಂದೂ ಒಂದೇ ಉಸಿರಿನಲ್ಲಿ ಆಡುವ ಮಾತು ಎಂಥ ವ್ಯಾಹತವಾದದ್ದು! ಕರ್ಮವನ್ನು ಮಾಡಿದರೂ ಕರ್ಮವು ಲಯವಾಗಿಬಿಡುತ್ತದೆ, ಅದರಿಂದ ಯಾವ ಫಲವೂ ಆಗುವದಿಲ್ಲ ಎಂಬುದು ವಿಶ್ವಾಸಕ್ಕೆ ಅರ್ಹವಾದ ಮಾತಾದೀತೆ? ಇದೂ ಇರಲಿ. ಸಂನ್ಯಾಸಿ ಎಂದರೆ ಕರ್ಮಗಳೆಲ್ಲವನ್ನೂ ಬಿಟ್ಟವನು. ಅವನು ಯಜ್ಞವನ್ನು ಮಾಡುತ್ತಾ ನೆಂಬುದು 'ಕವಡೆಯ ಕಾಸೂ ಕೈಯಲಿಲ್ಲದೆ ತುಲಾಪುರುಷದಾನವನ್ನು ಮಾಡುತ್ತಾನೆ' ಎಂಬ ಮಾತಿಗೆ ಸಮವಾದದ್ದಲ್ಲವೆ?- ಎಂದು ನಮ್ಮಲ್ಲಿ ಕೆಲವರು ಶಂಕಿಸುವ ಸಂಭವವಿದೆ.

ಆದರೆ ಜ್ಞಾನಿಯು ಮಾಡುವ ಯಜ್ಞವು ಕರ್ಮಿಗಳು ಮಾಡುವ ಯಜ್ಞದಂತೆ ಅಲ್ಲ. ಗತಸಂಗನಾಗಿ ಫಲವನ್ನು ಕೋರದೆ ಕರ್ಮವನ್ನು ಮಾಡುವ ಕರ್ಮಯೋಗಿಗೇ ಕರ್ಮಫಲವು ಆಗುವಹಾಗಿಲ್ಲ. ಅದರಿಂದ ಈಶ್ವರಪ್ರೀತಿ ಎಂಬುದೊಂದೇ ಫಲವಾಗು ತ್ತದೆಯೇ ಹೊರತು ಜನ್ಮಾಂತರವನ್ನು ಕೊಡುವ ಧರ್ಮಾಧರ್ಮಗಳುಂಟಾಗಿ ಬಂಧಕವಾಗುವದಿಲ್ಲ. ಹೀಗಿರುವಲ್ಲಿ ಎಲ್ಲವೂ ಬ್ರಹ್ಮವೇ ಎಂಬ ತಿಳಿವಳಿಕೆಯನ್ನು ಸಂಪಾದಿಸಿರುವ ಜ್ಞಾನಿಯು ಮಾಡುವ ಯಜ್ಞವು ಬಂಧಕವಾದೀತೆ? ಎಂದಿಗೂ ಇಲ್ಲ. ಜ್ಞಾನಿಯು ನಮ್ಮಗಳ ದೃಷ್ಟಿಯಿಂದ ಯಜ್ಞವನ್ನು ಮಾಡಿದರೂ ಅವನು ನಿಜವಾಗಿ ಕರ್ಮವನ್ನು ಮಾಡುವದಿಲ್ಲ. ಆ ಕರ್ಮವು ಅಕರ್ಮವೇ, ಅದೆಲ್ಲವೂ ಅವನ ದೃಷ್ಟಿಯಿಂದ ಬ್ರಹ್ಮವೇ ಆಗಿರುತ್ತದೆ. ಅವನು ಹವಿಸ್ಸನ್ನು ಅರ್ಪಿಸುವದಕ್ಕೆ ಉಪಯೋಗಿಸುವ ಸ್ರುಕ್ಕು, ಸ್ರುವ ಮುಂತಾದವುಗಳೂ ಅವನ ದೃಷ್ಟಿಯಿಂದ ಬ್ರಹ್ಮವೇ. ಹವಿಸ್ಸೂ ಬ್ರಹ್ಮವೇ, ಅಗ್ನಿಯೂ ಬ್ರಹ್ಮವೇ, ಹೋಮಮಾಡುವ ತಾನೂ ಬ್ರಹ್ಮವೇ, ಪಡೆಯುವ ಗತಿಯೂ ಬ್ರಹ್ಮವೇ. ಹೀಗೆ ಅವನು ಮಾಡುವ ಕರ್ಮವೆಲ್ಲ ಬ್ರಹ್ಮವೇ ಹೊರತು ನಿಜವಾಗಿ ಕರ್ಮವಲ್ಲ. ಅಜ್ಞರಿಗೆ ಭ್ರಾಂತಿಯಿಂದ ಬೆಳ್ಳಿಯೆಂದು ತೋರುವದೆಲ್ಲ ನಿಜವಾಗಿ ಅರಿತಿರುವವರಿಗೆ ಕಪ್ಪೆಯಚಿಪ್ಪಾಗಿರುವಂತೆ, ಭ್ರಾಂತಿಯ ಹಾವು ನಿಜವಾಗಿ ಹಗ್ಗವೇ ಆಗಿರುವಂತೆ, ಜ್ಞಾನಿಯು ಮಾಡುವ ಕರ್ಮವೆಂದೂ ಅವನು ಉಪಯೋಗಿಸುವ ಕಾರಕಗಳೆಂದೂ ಅವನು ಪಡೆಯುವ ಫಲವೆಂದೂ ನಾವುಗಳು ವ್ಯವಹರಿಸುತ್ತಿರುವದು ಎಲ್ಲವೂ ನಿಜವಾಗಿ ಅವನ ದೃಷ್ಟಿಯಿಂದ ಅದ್ವಿತೀಯವಾದ ಬ್ರಹ್ಮಮಾತ್ರವಾಗಿರುತ್ತದೆ. ಆದ್ದರಿಂದ ಅದು ಜ್ಞಾನಯಜ್ಞವೇ ಹೊರತು ಕರ್ಮಯಜ್ಞವಲ್ಲ. ಈ ದೃಷ್ಟಿಯಿಂದ ಅವನ ಕರ್ಮವು ಸಮಗ್ರವಾಗಿ

ಲಯವಾಗಿ ಬ್ರಹ್ಮವಾಗಿರುತ್ತದೆ ಎಂದು ಹೇಳಿದ್ದರಲ್ಲಿ ಯಾವ ದೋಷವೂ ಇರುವದಿಲ್ಲ. ಚಿತ್ರದಲ್ಲಿ ಒಂದು ಬೆಕ್ಕು ಹಾಲನ್ನು ಕುಡಿಯುವಂತೆ ಬರೆದಿದ್ದರೆ "ಬೆಕ್ಕು ಹಾಲು ಕುಡಿಯುತ್ತಿದೆ" ಎಂದು ವ್ಯವಹರಿಸುವದುಂಟು. ಆದರೆ ಆಗ ನಿಜವಾಗಿ ಒಂದು ಬೆಕ್ಕು ಹಾಲನ್ನು ಕುಡಿಯುತ್ತಿದೆ ಎಂದೂ ಯಾರೂ ಭಾವಿಸುವದಿಲ್ಲ. ಇದರಂತೆ ಜ್ಞಾನಿಯ ಯಜ್ಞವೂ ಯಜ್ಞಸಾಮಗ್ರಿಗಳೂ ಆ ಮಾತುಗಳಿಂದ ವ್ಯವಹರಿಸಲ್ಪಟ್ಟರೂ ಪರಮಾರ್ಥದೃಷ್ಟಿಯಿಂದ ನಿಜವಾದ ಕರ್ಮರೂಪವಾದ ಯಜ್ಞವಲ್ಲ, ಯಜ್ಞಸಾಮಗ್ರಿಗಳೂ ಅಲ್ಲ. ಕನಸನ್ನು ಕುರಿತು ಎಚ್ಚರದಲ್ಲಿ ಮಾತನಾಡುವಾಗ ಉಂಟಾಗುವ ಕನಸಿನ ಅರಿವು ಹೇಗೆ ಎಚ್ಚರದ ಅರಿವಿನಿಂದ ಬಾಧಿತವಾಗಿಯೇ ಉಂಟಾಗುತ್ತಿರುವದೋ ಹಾಗೆಯೇ ಜ್ಞಾನಿಯ ಕರ್ಮವ್ಯವಹಾರವು ಯಾವಾಗಲೂ ಅಕರ್ತೃಜ್ಞಾನದಿಂದ ಬಾಧಿತವಾಗಿಯೇ ಇರುತ್ತದೆ.

ಇದುವರೆಗೆ ಗೃಹಸ್ಥಾಶ್ರಮದಲ್ಲಿರುವ ಜ್ಞಾನಿಯ ಯಜ್ಞವನ್ನು ಕುರಿತು ಮಾತನ್ನಾಡಿದ್ದಾಯಿತು. ಈಗ ಸಂನ್ಯಾಸಾಶ್ರಮದಲ್ಲಿರುವ ಜ್ಞಾನಿಯ ಯಜ್ಞದ ಸ್ವರೂಪವನ್ನು ಆಲೋಚಿಸೋಣ. ಗೃಹಸ್ಥನಾದವನಿಗೆ ಯಜ್ಞದ ತೋರಿಕೆಯಾದರೂ ಇದೆ. ನಮ್ಮಗಳ ದೃಷ್ಟಿಯಿಂದ ಅವನು ಮಾಡುವ ಯಜ್ಞವೂ ಅದರ ಸಾಮಗ್ರಿಯೂ ಇದೆ. ಆದರೆ ಸಂನ್ಯಾಸಿಯ ಯಜ್ಞವು ಯಾವದು? ಎಂದರೆ ಜ್ಞಾನವೇ ಯಜ್ಞವು. ಗೃಹಸ್ಥನಾದ ಜ್ಞಾನಿಯು ಲೋಕಸಂಗ್ರಹಕ್ಕಾಗಿ ಮಾಡುವ ಕರ್ಮವು ಬ್ರಹ್ಮಬುದ್ಧಿಯಿಂದ ಬಾಧಿತವಾಗಿರುತ್ತದೆಯಾದ್ದರಿಂದ ಅಕರ್ಮವಾಗಿರುತ್ತದೆ. ಇನ್ನು ಯಾವ ಕರ್ಮವೂ ಇಲ್ಲದ ಸಂನ್ಯಾಸಿಜ್ಞಾನಿಯು ಅಕರ್ಮಿ ಎಂದು ಹೇಳುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ. ಆದರೆ ಅವನ ಜ್ಞಾನವು ತಾನೇ ಒಂದು ಮಹಾಯಜ್ಞವಾಗಿರುವದು. ಆ ಯಜ್ಞದಲ್ಲಿ ಬ್ರಹ್ಮವೇ ಅರ್ಪಣವು, ಬ್ರಹ್ಮವೇ ಹವಿಯು, ಬ್ರಹ್ಮವೇ ಅಗ್ನಿಯು, ಬ್ರಹ್ಮವೇ ಕರ್ತೃ, ಬ್ರಹ್ಮವೇ ಫಲ. ಬ್ರಹ್ಮವೇ ಎಲ್ಲಾ ಕರ್ಮವೂ ಆಗಿರುತ್ತದೆ. ಜ್ಞಾನಿಗಳು ಅಕರ್ಮಿಗಳು ಎಂದು ಹೇಳಿದ್ದರಿಂದ "ಅಯ್ಯೋ, ಅವರಿಗೆ ಕರ್ಮಫಲವಿಲ್ಲವಾಯಿತಲ್ಲ! ಅವರು ಕರ್ಮಭ್ರಷ್ಟರಾದರಲ್ಲ!" ಎಂದು ವಿಷಾದಪಡುವದಕ್ಕೆ ಕಾರಣವಿಲ್ಲ. ಏಕೆಂದರೆ ಬ್ರಹ್ಮವೇ ಅವರಿಗೆ ಎಲ್ಲಾ ಕರ್ಮವೂ ಆಗಿರುತ್ತದೆ. ಪರಶುಮಣಿಯಿರುವವನು ಕಾಡುಕಲ್ಲುಗಳಿಲ್ಲವಲ್ಲ ಎಂದು ಚಿಂತಿಸುವದಕ್ಕೆ ಕಾರಣವಿಲ್ಲ; ಕಾಮಧೇನುವಿರುವವನು ಬರಡೆಮ್ಮೆಯಿಲ್ಲವಲ್ಲ-ಎಂದು ಚಿಂತಿಸುವದಕ್ಕೂ ಕಾರಣವಿಲ್ಲ. ಸರ್ವಕರ್ಮಗಳ ಫಲವನ್ನೂ ತನ್ನೊಳಗೇ ಅಡಕಮಾಡಿಕೊಂಡಿರುವ ಜ್ಞಾನವನ್ನು ಯಜ್ಞವೆಂದು ಹೊಗಳುವದು ಕೂಡ ಅದಕ್ಕೆ ಒಂದು ಬಗೆಯ ಅಪಮಾನವೇ ಎಂದು ಹೇಳಬಹುದು. ಏಕೆಂದರೆ ಸಕಲಕರ್ಮಗಳ ಫಲವನ್ನೂ ಮೀರಿರುವ ಮೋಕ್ಷವನ್ನೇ ಕೊಡುವಂಥ ಮಹಾಯಜ್ಞವದು!

ಜ್ಞಾನಿಯು ಗೃಹಸ್ಥರಂತೆ ಕರ್ಮವನ್ನು ಮಾಡುತ್ತಿದ್ದರೂ ಮಾಡುತ್ತಿರುವದಿಲ್ಲ. ಸಂನ್ಯಾಸಿಗಳಂತೆ ಕರ್ಮಗಳನ್ನೆಲ್ಲ ಬಿಟ್ಟಿದ್ದರೂ ನಿಜವಾಗಿ ಬಿಟ್ಟಿರುವದಿಲ್ಲ; ಅವನು ಒಂದು ದೃಷ್ಟಿಯಿಂದ ಯಾವ ಕರ್ಮವನ್ನೂ ಎಂದಿಗೂ ಮಾಡಲೇ ಇಲ್ಲ. ಇನ್ನೊಂದು ದೃಷ್ಟಿಯಿಂದ ಅವನು ಎಲ್ಲಾ ಕರ್ಮವನ್ನೂ ಮಾಡುತ್ತಿರುವನು. ಎಲ್ಲರೂ ಮಾಡುತ್ತಿರುವ ಕರ್ಮಗಳೂ ಅವನ ಕರ್ಮಗಳೇ ಆಗಿರುತ್ತವೆ. ಮಿಕ್ಕವರಿಗೆ ಕರ್ಮವು ಬಂಧಕವಾಗಿರಬಹುದು. ಅವನಿಗೆ ಮಾತ್ರ ಯಾವ ಕರ್ಮವೂ ಬಂಧಕವಲ್ಲ. ಭಗವಂತನು "ನಾನು ಜಗತ್ತಿನ ಸೃಷ್ಟಿಸ್ಥಿತಿಲಯಗಳಲ್ಲಿ ತೊಡಗಿದ್ದರೂ ನಿಜವಾಗಿ ಯಾವ ಕರ್ಮವನ್ನೂ ಮಾಡುವವನಲ್ಲ. ನಾನು ಅಕರ್ತೃವೆಂದೂ ಅವ್ಯಯನೆಂದೂ ತಿಳಿದುಕೊ" ಎಂದು ಹೇಳಿರುವದನ್ನು ನಾವು ನೆನಪಿಡಬೇಕು. ಜ್ಞಾನಿಯು ಯಾವ ಆಶ್ರಮದಲ್ಲಿರುವಂತೆ ಕಂಡರೂ ಯಾವ ವರ್ಣದಲ್ಲಿರುವಂತೆ ಕಂಡರೂ ನಿಜವಾಗಿ ಅವನಿಗೆ ವರ್ಣಗಳಿಲ್ಲ, ವರ್ಣಾಶ್ರಮಾಚಾರಧರ್ಮಗಳೂ ಇರುವದಿಲ್ಲ. ಅವನು ಎಂದೆಂದಿಗೂ ಅಕರ್ತೃವಾಗಿ ಅಭೋಕ್ತೃವಾಗಿರುತ್ತಾನೆ. ವಾಸಿಷ್ಠರಾಮಾಯಣದಲ್ಲಿ ವಾಲ್ಮೀಕರು ಭಾರದ್ವಾಜನಿಗೆ ತತ್ತ್ವೋಪದೇಶವನ್ನು ಮಾಡುವಾಗ "ಅಪ್ಪ, ರಾಮ ಲಕ್ಷ್ಮಣಾದಿಗಳೂ ಕೌಸಲ್ಯಾದಿಸ್ತ್ರೀಯರೂ ವಸಿಷ್ಠಾದಿಋಷಿಗಳೂ ವಿಭೀಷಣ, ಹನುಮಂತ-ಮುಂತಾದವರೂ ತತ್ಕಾಲದಲ್ಲಿ ಒದಗಿದ ಕರ್ಮಗಳನ್ನು ಮಾಡುತ್ತಲೇ ಇದ್ದರೂ ಜೀವನ್ಮುಕ್ತರಾಗಿದ್ದಂತೆ ನೀನೂ ಅವರನ್ನನುಸರಿಸಿ ಯಥಾಪ್ರಾಪ್ತವಾದ ಕರ್ಮಗಳನ್ನು ಮಾಡುತ್ತಿದ್ದರೂ ಜ್ಞಾನಮಾತ್ರದಿಂದ ಮುಕ್ತನಾಗಿರು" ಎಂದು ಬೋಧಿಸಿರುವದನ್ನು ನಾವು ನೆನಪಿಗೆ ತಂದುಕೊಳ್ಳಬಹುದು.

ಜ್ಞಾನಿಗಳು ಜ್ಞಾನಯಜ್ಞವಾಗಿ ಕರ್ಮವನ್ನು ಮಾಡುವಂತೆ ಕರ್ತೃಬುದ್ಧಿಯುಳ್ಳವರು ಯಜ್ಞರೂಪನಾದ ಪರಮೇಶ್ವರನ ಪ್ರೀತ್ಯರ್ಥವಾಗಿ ಕರ್ಮವನ್ನು ಮಾಡಿ ಕರ್ಮಯೋಗಿಗಳಾಗಬೇಕು. ನಾವು ಯಾವ ಕರ್ಮವನ್ನು ಮಾಡಿದರೂ ಗತಸಂಗರಾಗಿರಬೇಕು. ರಾಗದ್ವೇಷಾದಿಗಳಿಂದ ಮುಕ್ತರಾಗಬೇಕು, ಭಗವಂತನೇ ಎಲ್ಲಾ ಕರ್ಮಕ್ಕೂ ಆದಿಯು, ಫಲವೆಲ್ಲವೂ ಆತನದೇ ಎಂಬ ಜ್ಞಾನದಲ್ಲಿ ನೆಲೆನಿಂತಿರಬೇಕು. ಹೀಗಾದರೆ ಕರ್ಮವು ಬಂಧಕವಾಗುವದಿಲ್ಲ. ಮುಖ್ಯವಾಗಿ ಅಹಂಕಾರ ಮಮಕಾರಗಳೆಂಬಿವೇ ಕರ್ಮಕ್ಕೆ ಬಂಧಕತ್ವವನ್ನುಂಟುಮಾಡುತ್ತವೆ; ಇವುಗಳೇ ಮನುಷ್ಯನು ಲೋಕದಲ್ಲಿ ಸುಖಿಯಾಗಿರುವದಕ್ಕೆ ಅಡ್ಡಿಯಾಗಿರುತ್ತವೆ. ಒಬ್ಬ ಹುಡುಗನು ಒಂದು ಗಡಿಗೆಯೊಳಕ್ಕೆ ಕೈ ಹಾಕಿ ಒಂದು ಹಿಡಿ ತುಂಬ ಬಾದಾಮಿಕಾಯಿಗಳನ್ನು ತೆಗೆದುಕೊಂಡನು. ಆದರೆ ಅವನು ಕೈಯನ್ನು ಈಚೆಗೆ ಎಳೆಯುವದಕ್ಕೆ ಎಷ್ಟು ಪ್ರಯತ್ನಮಾಡಿದರೂ ಆಗದೆ ಅಳುವುದಕ್ಕೆ ಮೊದಲುಮಾಡಿದನು. ಹತ್ತಿರದಲ್ಲಿದ್ದ

ಒಬ್ಬ ಮುದುಕನು "ಮಗೂ ಎರಡು ಬಾದಾಮಿಕಾಯಿಗಳನ್ನು ಬಿಟ್ಟುಬಿಡು; ಆಗ ಕೈಹಿಡಿಯು ಗಾತ್ರದಲ್ಲಿ ಸಣ್ಣದಾಗುವದರಿಂದ ಸುಲಭವಾಗಿ ಅದನ್ನು ಈಚೆಗೆ ಎಳೆದುಕೊಳ್ಳಬಹುದಾಗುವದು" ಎಂದು ತಿಳಿವಳಿಕೆಯನ್ನು ಹೇಳಿದನು. ಆದರೆ ಹುಡುಗನಿಗೆ ಅದು ಮನಸ್ಸಿಗೆ ಬರಲಿಲ್ಲ. ಅವನು ಹಿಡಿದಷ್ಟು ಬಾದಾಮಿಯನ್ನೂ ಒಂದೇ ಸಲಕ್ಕೆ ತೆಗೆದುಕೊಳ್ಳಬೇಕೆಂದು ಪ್ರಯತ್ನಿಸುತ್ತಲೇ ಕಷ್ಟಪಡುತ್ತಿದ್ದನು. ಈ ಲೋಕದಲ್ಲಿ ಸಂಸಾರಿಗಳೂ ಹೀಗೆಯೇ ಕಷ್ಟಪಡುತ್ತಿರುವರು. ಅವರಿಗೆ ವಿಷಯ ಭೋಗವು ಬೇಕಾಗಿದೆ. ಆದರೆ ನಾನು ನನ್ನದು-ಎಂಬ ಎರಡು ಭಾವನೆಗಳನ್ನು ಬಿಟ್ಟು ರಾಗದ್ವೇಷಗಳಿಲ್ಲದೆ ವಿಷಯಗಳನ್ನು ಭೋಗಿಸಿದರೆ ಮನಸ್ಸು ಪ್ರಸನ್ನವಾಗುತ್ತದೆ ಎಂಬ ರಹಸ್ಯವು ಅವರಿಗೆ ತಿಳಿಯದೆ ಇದೆ. ಸಂಗವನ್ನು ಬಿಟ್ಟು, ಫಲಾಪೇಕ್ಷೆಯಿಲ್ಲದೆ, ಕರ್ಮವನ್ನು ಮಾಡಿದರೆ ಸುಖವಾಗಿರಬಹುದು ಎಂದು ಬಲ್ಲವರು ಹೇಳಿದರೂ ಅವರು ಕೇಳಲೊಲ್ಲದೆ ಕಷ್ಟವನ್ನು ಅನುಭವಿಸುತ್ತಿರುವರು. ಆದ್ದರಿಂದ ಭಗವದ್ಗೀತೆಯು ಜೀವನ್ಮುಕ್ತರಾದ ಜ್ಞಾನಿಗಳ ದೃಷ್ಟಾಂತವನ್ನೂ ಭಗವದ್ಭಕ್ತರಾದ ಕರ್ಮಯೋಗಿಗಳ ದೃಷ್ಟಾಂತವನ್ನೂ ಕೊಟ್ಟು ನಮಗೆ ಕರ್ಮಬಂಧವನ್ನು ತಪ್ಪಿಸಿಕೊಳ್ಳುವ ಮಾರ್ಗವನ್ನು ಮತ್ತೆ ಮತ್ತೆ ಬೋಧಿಸುತ್ತದೆ.

## ೩೦. ಆಧ್ಯಾತ್ಮಿಕಯಜ್ಞಗಳು, ಮತ್ತು ಆಧಿಭೌತಿಕಯಜ್ಞಗಳು ೪-(೨೬-೩೧)

(೧೯.೧.೪೭)

ಅಜ್ಞರು ಕರ್ಮವನ್ನು ಬಿಡುವದಕ್ಕೂ ಜ್ಞಾನಿಗಳು ಕರ್ಮವನ್ನು ಬಿಡುವದಕ್ಕೂ ಬಹಳ ತಾರತಮ್ಯವಿದೆ. ಅಜ್ಞರಾದವರು ತಾವು ಕರ್ತೃಗಳು, ತಮಗೆ ಕರ್ಮಗಳುಂಟು ಎಂದು ತಿಳಿದುಕೊಂಡಿರುವಾಗಲೇ ಕರ್ಮವನ್ನು ಬಿಡುವದಕ್ಕೆ ಪ್ರಯತ್ನಿಸುತ್ತಾರೆ. ಆದ್ದರಿಂದ ಅವರ ಕರ್ಮಸಂನ್ಯಾಸವು ಕೂಡ ಒಂದು ಬಗೆಯ ಕರ್ಮವೇ ಆಗಿರುತ್ತದೆ, ಆದರೆ ಜ್ಞಾನಿಯು ಕರ್ಮಗಳು ಇವೆ ಎಂಬ ಬುದ್ಧಿಯನ್ನೇ ಬಿಡುತ್ತಾನೆ. ಇದೇ ನಿಜವಾದ ಸರ್ವಕರ್ಮಸಂನ್ಯಾಸವು.

ಜ್ಞಾನಿಯು ಕರ್ಮವನ್ನು ಸಂನ್ಯಾಸಮಾಡುತ್ತಾನೆ ಎಂದದ್ದರಿಂದ ಅವನಿಗೆ ಕರ್ಮಸಂಸ್ಕಾರವಿಲ್ಲದೆ ಹೋಗಿ ವ್ರಾತ್ಯನಾಗುತ್ತಾನೆಂದು ಭಾವಿಸಬಾರದು. 'ವ್ರಾತ್ಯ'

ಎಂಬ ಶಬ್ದಕ್ಕೆ ಈಗ ಕೆಟ್ಟ ಅರ್ಥವು ಬಂದಿರುತ್ತದೆ. ಯಾವನು ಶಾಸ್ತ್ರೋಕ್ತಕರ್ಮಗಳನ್ನು ಮಾಡದೆ ಚಿತ್ತಸಂಸ್ಕಾರವನ್ನು ಹೊಂದಿರುವದಿಲ್ಲವೋ ಅವನನ್ನು ದುರಾಚಾರಿಯು, ಕೀಳಕನು ಎಂದು ಸೂಚಿಸುವದಕ್ಕಾಗಿ ವೈದಿಕರು 'ವ್ರಾತ್ಯ' ಎಂಬ ಹೆಸರಿನಿಂದ ಅನಾದರದಿಂದ ಕರೆಯುವದುಂಟು. ಆದರೆ ಮೂಲದಲ್ಲಿ ಈ ಶಬ್ದಕ್ಕೆ ಇಂಥ ಕೆಟ್ಟ ಅರ್ಥವೇನೂ ಇರುವದಿಲ್ಲ. ಯಾವನು ಕರ್ಮದ ಸಂಸ್ಕಾರದ ಅವಶ್ಯಕತೆಯಿಲ್ಲದಷ್ಟು ಶುದ್ಧನಾಗಿರುವನೋ ಅವನಿಗೆ ವ್ರಾತ್ಯನೆಂದು ಹೆಸರು. ವೇದದಲ್ಲಿ ವ್ರಾತ್ಯಶಬ್ದವನ್ನು ಈ ಅರ್ಥದಲ್ಲಿಯೇ ಉಪಯೋಗಿಸಿರುತ್ತದೆ. ಉದಾಹರಣೆಗೆ ಪ್ರಶ್ನೋಪನಿಷತ್ತಿನಲ್ಲಿ ಮುಖ್ಯಪ್ರಾಣವನ್ನು ಸ್ತೋತ್ರಮಾಡುವ ಒಂದು ಮಂತ್ರದಲ್ಲಿ "ವ್ರಾತ್ಯಸ್ತ್ವಂ ಪ್ರಾಣೈಕ ಋಷಿರತ್ತಾ ವಿಶ್ವಸ್ಯ ಸತ್ಪತಿಃ"- ಎಲೈ ಪ್ರಾಣನೆ, ನೀನು ವ್ರಾತ್ಯನು, ಏಕಋಷಿಯು. ಅತ್ತೃವು, ವಿಶ್ವಕ್ಕೆಲ್ಲ ಸತ್ಪತಿಯು-ಎಂದು ಹೊಗಳಿರುತ್ತದೆ. ಈ ಅರ್ಥದಲ್ಲಿ ಕರ್ಮಸಂನ್ಯಾಸ ವನ್ನು ಮಾಡಿರುವ ಜ್ಞಾನಿಯು ವ್ರಾತ್ಯನೆಂದೂ ಹೇಳಬಹುದು; ಏಕೆಂದರೆ ಅವನು ಕರ್ಮವಾಗಲಿ, ಕರ್ಮಫಲವಾಗಲಿ ಸೋಂಕದ ನಿತ್ಯಶುದ್ಧಸ್ವರೂಪನಾಗಿರುತ್ತಾನೆ. ಜ್ಞಾನಿಯು ಕರ್ಮಸಂನ್ಯಾಸವನ್ನು ಮಾಡಿರುತ್ತಾನೆ ಎಂದರೆ ಅವನು ಮಾಡಬೇಕಾಗಿದ್ದ ಕರ್ಮಗಳನ್ನು ಬಿಟ್ಟಿರುತ್ತಾನೆಂದು ಅಭಿಪ್ರಾಯವಲ್ಲ; 'ಕರ್ಮಣ್ಯಕರ್ಮ ಯಃ ಪಶ್ಯೇತ್' ಎಂಬ ನ್ಯಾಯದಿಂದ ತನ್ನ ಆತ್ಮನು ಯಾವ ಕರ್ಮದ ಕಲಂಕವೂ ಇಲ್ಲದವನೆಂದು ಮನಗಂಡಿರುತ್ತಾನೆಂದು ಅಭಿಪ್ರಾಯ.

ಕರ್ಮಿಗಳಿಗೆ ಯಜ್ಞ ಎಂಬುದಕ್ಕಿಂತ ಹೆಚ್ಚಿನ ಸಾಧನವಿಲ್ಲ. ಅವರ ದೃಷ್ಟಿಯಿಂದ ಜ್ಞಾನದ ಹೆಚ್ಚುಗಾರಿಕೆಯನ್ನು ತಿಳಿಸಿಕೊಡುವದಕ್ಕಾಗಿ ಅದನ್ನು ಯಜ್ಞ ಎಂದು ಹೊಗಳಿರುತ್ತದೆ. ಗೃಹಸ್ಥಾಶ್ರಮದಲ್ಲಿರುವ ಜ್ಞಾನಿಯ ಕರ್ಮವನ್ನು ಯಜ್ಞವೆಂದು ಹೊಗಳಿರುವದೂ ಜ್ಞಾನದ ಸ್ತುತಿಯೇ. ಜ್ಞಾನವು ಎಲ್ಲಾ ಯಜ್ಞಗಳಿಗಿಂತಲೂ ಮಿಗಿಲಾದದ್ದು ಎಂದು ಹೊಗಳುವದಕ್ಕೇ ಈ ಪ್ರಕರಣವು ಬಂದಿರುವದರಿಂದ ಬೇರೆಬೇರೆ ಯಜ್ಞಗಳನ್ನು ಭಗವಂತನು ಇಲ್ಲಿ ವಿವರಿಸಿರುತ್ತಾನೆ.

ಇವುಗಳಲ್ಲಿ ನಾವು ಯಜ್ಞವೆಂದು ರೂಢಿಯಾಗಿ ಕರೆಯದ ಕೆಲವು ಯಜ್ಞಗಳು ಸೇರಿಕೊಂಡಿರುತ್ತವೆ ಎಂಬುದನ್ನು ಲಕ್ಷ್ಯದಲ್ಲಿಡಬೇಕು. ಅಂಥವುಗಳಲ್ಲಿ ಪ್ರಕೃತವಾಗಿರುವ ಬ್ರಹ್ಮಜ್ಞಾನವೂ ಒಂದು, ಅದೇ ಮುಖ್ಯವು-ಎಂದು ತಿಳಿಸಿಕೊಡುವದಕ್ಕಾಗಿ "ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ" ಎಂಬ ಶ್ಲೋಕಾರ್ಥವು ಬಂದಿರುತ್ತದೆ. ಸೋಪಾಧಿಕನಾದ-ಉಪಾಧಿಯಿಂದ ಕೂಡಿದ-ಆತ್ಮನನ್ನು ಯಾವ ಉಪಾಧಿಯೂ ಇಲ್ಲದ ಬ್ರಹ್ಮದರೂಪದಿಂದ ಕಾಣುವದು ಈ ಯಜ್ಞದ ಸ್ವರೂಪವು.

ಮಿಕ್ಕ ಯಜ್ಞಗಳು ಯಾವವೆಂದರೆ ದೇವತೆಗಳಿಗಾಗಿ ಮಾಡುವ ದೇವಯಜ್ಞ; ಶ್ರೋತ್ರವೇ ಮುಂತಾದ ಇಂದ್ರಿಯಗಳನ್ನು ಸಂಯಮಮಾಡುವ ಇಂದ್ರಿಯ ಸಂಯಮಯಜ್ಞ; ಶಬ್ದವೇ ಮುಂತಾದ ಯುಕ್ತವಿಷಯಗಳನ್ನು ಇಂದ್ರಿಯಗಳಲ್ಲಿ ಹೋಮಮಾಡುವ ವಿಷಯಯಜ್ಞ. ಇಂದ್ರಿಯಕರ್ಮಗಳನ್ನೂ ಪ್ರಾಣಕರ್ಮಗಳನ್ನೂ ಆತ್ಮನಲ್ಲಿ ಹಿಡಿದಿಟ್ಟುಕೊಳ್ಳುವ ಆತ್ಮಸಂಯಮಯಜ್ಞ; ಈ ಯಜ್ಞವು ಆತ್ಮಸ್ವರೂಪವನ್ನೂ ಇಂದ್ರಿಯಗಳನ್ನೂ ವಿವೇಕಮಾಡಿಕೊಳ್ಳುವದರಿಂದ ಮಾಡತಕ್ಕದ್ದು. ಕೆಲವರು ತಕ್ಕ ಸ್ಥಲಗಳಲ್ಲಿ ಪಾತ್ರರಾದವರಿಗೆ ದ್ರವ್ಯವನ್ನು ಕೊಡುವದೆಂಬ ದ್ರವ್ಯಯಜ್ಞವನ್ನು ಮಾಡುವರು; ಕೆಲವರು ಕೃಚ್ಛ್ರಾದಿತಪಸ್ಸುಗಳನ್ನು ಮಾಡುವ ತಪೋಯಜ್ಞವನ್ನು ಮಾಡುವರು; ಇನ್ನೂ ಕೆಲವರು ಪ್ರಾಣಾಯಾಮಾದಿಗಳನ್ನು ಮಾಡುವ ಯೋಗಯಜ್ಞವನ್ನು ಅನುಷ್ಠಾನಮಾಡುವರು. ಪ್ರಾಣಾಯಾಮದಲ್ಲಿ ಅಪಾನವೆಂಬ ಒಳಕ್ಕೆ ನಡೆಯುವ ವೃತ್ತಿಯಲ್ಲಿ ಪ್ರಾಣವೃತ್ತಿಯನ್ನು ಹೋಮಮಾಡುವ ಪೂರಕಪ್ರಾಣಾಯಾಮವನ್ನು ಮಾಡುವವರು; ಪ್ರಾಣವೃತ್ತಿಯಲ್ಲಿ ಅಪಾನವನ್ನು ಹೋಮಮಾಡುವ ರೇಚಕ ಪ್ರಾಣಾಯಾಮವನ್ನು ಮಾಡುವವರು; ಈ ಎರಡು ವೃತ್ತಿಗಳನ್ನೂ ತಡೆದು ಕುಂಭಕಪ್ರಾಣಾಯಾಮವನ್ನು ಮಾಡುವವರು; ಒಂದೊಂದು ಪ್ರಾಣವೃತ್ತಿಯಲ್ಲಿ ಮಿಕ್ಕ ಪ್ರಾಣಗಳನ್ನು ಹೋಮಮಾಡುವವರು ಎಂದು ಪ್ರಾಣಯಜ್ಞದಲ್ಲಿ ಹಲವು ಪಂಗಡದವರಿರುತ್ತಾರೆ.

ಇವರೆಲ್ಲರೂ ಯಜ್ಞದ ಬೆಲೆಯನ್ನು ತಿಳಿದವರೇ. ಹೊರಗಿನ ದೇವಯಜ್ಞ, ದ್ರವ್ಯಯಜ್ಞ, ತಪೋಯಜ್ಞಗಳನ್ನು ಮಾಡಲಿ, ಒಳಗಿನ ಪ್ರಾಣಾಯಾಮ ಅಥವಾ ಸಂಯಮರೂಪವಾದ ಯಜ್ಞವನ್ನು ಮಾಡಲಿ, ಇಬ್ಬರೂ ಯಜ್ಞದ ಮರ್ಮವನ್ನು ತಿಳಿದವರೇ ಆಗಿರುತ್ತಾರೆ. ಈ ಯಜ್ಞಗಳಿಂದ ಪಾಪಗಳು ಕ್ಷಯವಾಗುತ್ತವೆ. ಏಕೆಂದರೆ ಪಾಪವೆಂಬುದು ಸ್ವಾರ್ಥಕರ್ಮಗಳಿಂದ ಉಂಟಾಗುತ್ತದೆ; ಯಜ್ಞಗಳೆಲ್ಲವೂ ಸ್ವಾರ್ಥವನ್ನು ಮಟ್ಟುಮಾಡುತ್ತವೆ. ಯಜ್ಞದಲ್ಲಿ ಸ್ವಾರ್ಥವನ್ನು ಹೋಮಮಾಡಿದ ಬಳಿಕ ಉಳಿದ ಕಾಲದಲ್ಲಿ ಶಾಸ್ತ್ರದಲ್ಲಿ ಹೇಳಿದಂತೆ ಆಹಾರಾದಿಗಳನ್ನು ಸ್ವೀಕರಿಸಿದರೆ ಅದು ಅಮೃತ ಭೋಜನವಾಗುತ್ತದೆ. ಯಜ್ಞವಿಲ್ಲದವರು ತಿನ್ನುವ ಆಹಾರಾದಿಗಳಂತೆ ಅದು ವಿಷ ವಾಗುವದಿಲ್ಲವಾದ್ದರಿಂದ ಇಂಥ ಯಜ್ಞಕರ್ತೃಗಳು ಮಿಕ್ಕವರಂತೆ ಮರ್ತ್ಯರಲ್ಲ, ಅಮೃತರೇ ಆಗುತ್ತಾರೆ.

## ೩೧. ಜ್ಞಾನವನ್ನು ಸಂಪಾದಿಸುವದು ಹೇಗೆ? ೪-(೩೧-೩೪)

(೨೬.೧.೪೭)

ಯಾರು ಯಜ್ಞಶಿಷ್ಟವಾದ ಅಮೃತವನ್ನು ಭೋಜನಮಾಡುವರೋ ಅವರು ಮರ್ತ್ಯತ್ವದಿಂದ ಪಾರಾಗುವರು. ಸಾಮಾನ್ಯಜನರು ತಾವು ಸ್ವಾರ್ಥದಿಂದ ತಿನ್ನುವ ಅನ್ನವು ಮೆಲ್ಲಮೆಲ್ಲಗೆ ವಿಷವಾಗುತ್ತಿರುವದೆಂಬುದನ್ನು ಅರಿಯರು. ಮತ್ತೊಬ್ಬರಿಗೆ ದಾನಮಾಡದೆ ಸ್ವಾರ್ಥದಿಂದ ತಿನ್ನುವ ಅನ್ನವು ವಿಷವೇ ಆಗುವದು; ಈ ದೇಹವೇ ನಾನೆಂಬ ಬುದ್ಧಿಯು ಅದರಿಂದ ಬೆಳೆದುಕೊಳ್ಳುವದು. ಈ ದೇಹವು ಮರ್ತ್ಯವೇ ಆಗಿರುತ್ತದೆ; ಇದು ಏನನ್ನು ತಿಂದು ಬೆಳೆದುಕೊಂಡರೂ ಕಡೆಕಡೆಗೆ ಸವೆಯುತ್ತಾ ಹೋಗಿ ಒಂದು ದಿನ ಬಿದ್ದುಹೋಗುವದು. ಇದನ್ನು ನಾಯಿನರಿಗಳು ಅಗಿದಗಿದು ಸವಿಯುತ್ತವೆ ಎಂಬುದನ್ನು ನಾವು ಅರಿಯದೆ ದೇವತೆಗಳಿಗೆ ಕೂಡ ಯಜ್ಞವನ್ನು ಮಾಡದೆ ಸ್ವಾರ್ಥಕ್ಕಾಗಿಯೇ ವಿಷಯಗಳನ್ನು ಕೂಡಿಹಾಕಿಕೊಳ್ಳುತ್ತಿರುವೆವು. ಈಶ್ವರನಿಗೆ ಅರ್ಪಣೆಮಾಡಿದರೆ ಅನ್ನವು ಅಮೃತವಾಗುತ್ತದೆ. ಈಶ್ವರನ ನೈವೇದ್ಯಕ್ಕೆಂದು ಏರ್ಪಡಿಸುವ ಅನ್ನವು ಸಹಜವಾಗಿ ಪವಿತ್ರವಾಗುತ್ತದೆ; ಸಂಸ್ಕಾರದಿಂದಲೂ ಅದಕ್ಕೆ ಹೆಚ್ಚು ಪಾವಿತ್ರ್ಯ ವುಂಟಾಗುತ್ತದೆ. ಶರೀರಕ್ಕೆ ಕೊಟ್ಟ ಆಹಾರವು ಕೆಟ್ಟದ್ದಾದರೆ ಅದರ ಪರಿಣಾಮವಾಗಿ ಶರೀರವು ಕಾಲಕ್ರಮದಲ್ಲಿ ಸತ್ತುಹೋಗುವಂತೆ ಮನಸ್ಸಿಗೆ ಕೊಡುವ ಆಹಾರವು ಕೆಟ್ಟದ್ದಾದರೆ ಮನಸ್ಸೂ ಸತ್ತುಹೋಗುತ್ತದೆ; ಎಂದರೆ ಜೀವನದಲ್ಲಿ ಆನಂದವನ್ನು ಕಂಡುಕೊಳ್ಳುವ ಯೋಗ್ಯತೆಯನ್ನು ಕಳೆದುಕೊಂಡುಬಿಡುತ್ತದೆ. ಇದಕ್ಕೆ ಬದಲಾಗಿ ಯಜ್ಞಾರ್ಥವಾಗಿ ಮಾಡಿದ ಆಹಾರದ ಸೇವನೆಯಿಂದ ಸನಾತನವಾದ ಬ್ರಹ್ಮವೆಂಬ ಅಮೃತತತ್ತ್ವವನ್ನೇ ಸೇರಿಕೊಳ್ಳುವೆವು.

ಯಜ್ಞಕರ್ತೃಗಳು ಪರೋಪಕಾರದಲ್ಲಿ ನಿರತರಾಗಿರುವವರು; ಅಯಜ್ಞರಾದವರು ಜನರಿಗೆ ಮೋಸವನ್ನು ಮಾಡಿಯಾದರೂ ಧನಸಂಪಾದನೆಯನ್ನು ಮಾಡುವ ಕುಕೃತ್ಯಕ್ಕೆ ಮನವೊಲಿಯುವವರು. ಹಾಗೆ ಸಂಪಾದನೆಮಾಡಿದವನಿಗೆ ಸಂಪಾದಿಸಿದ್ದನ್ನು ಅನುಭವಿಸುವ ಯೋಗ್ಯತೆಯು ಕೂಡ ಇಲ್ಲವಾಗಿಬಿಡುತ್ತದೆ. ಕೆಲವು ವರ್ಷಗಳ ಹಿಂದೆ ಪ್ಯಾರಿಸ್ ನಗರದಲ್ಲಿ ಒಬ್ಬ ಭಾರಿಯ ಸಾಹುಕಾರನು ಮರಣಹೊಂದಿದ ಬಗೆಯನ್ನು ವೃತ್ತಪತ್ರಿಕೆಗಳಲ್ಲಿ ಪ್ರಕಟಿಸಿದ್ದರು. ಅವನ ಮನೆಯಲ್ಲಿ ಒಂದು ನಾಯಿ ಹೊರತು ಮತ್ತೆ ಯಾರೂ ಪರಿವಾರದವರಿರಲಿಲ್ಲವಂತೆ. ಬಹುಶಃ ಯಾರ ಹೊಟ್ಟೆ ಗಾದರೂ ಹಾಕುವದು ಯುಕ್ತವಲ್ಲವೆಂದು ಆ ಸಾಹುಕಾರನು ಭಾವಿಸಿರಬಹುದು. ನಾಯಿಯೂ ಯಜಮಾನನ ಜೊತೆಯಲ್ಲಿಯೇ ಸತ್ತುಬಿದ್ದಿತ್ತಂತೆ. ಅದು ಬಿಣ್ಣಾಟಕ್ಕಾಗಿ

ಮನೆಯೊಳಗೆಲ್ಲ ನೋಟುಗಳನ್ನು ಚೆಲ್ಲಾಪಿಲ್ಲಿಯಾಗಿ ಹರಡಿತ್ತಂತೆ. ಆದರೆ ಆ ಮನೆಯಲ್ಲಿ ಎಲ್ಲಿಯೂ ಆಹಾರಸಾಮಗ್ರಿಯು ಕಾಣಬರಲಿಲ್ಲವಂತೆ! ಎಂಥ ನಿಸ್ಪೃಹನು ಸಾಹುಕಾರನು! ತಾನು ದುಡಿದಿದ್ದದ್ದನ್ನು ಒಂದಿಷ್ಟೂ ಉಪಯೋಗಿಸದೆ ಯಾರಿಗೂ ಇಕ್ಕದೆ ದಾನವನ್ನೂ ಮಾಡದೆ ಎಲ್ಲವನ್ನೂ ಮನೆಯಲ್ಲಿಯೇ ಬಿಟ್ಟು ಪ್ರಾಣವನ್ನು ಬಿಟ್ಟಿದ್ದನು! "ಅಯಜ್ಞನಾದವನಿಗೆ ಈ ಲೋಕವೇ ಇಲ್ಲ, ಪರಲೋಕವಿನ್ನೆಲ್ಲಿಯದು?" ಎಂಬ ಗೀತೋಕ್ತಿಯು ಇಂಥ ಲೋಭಿಗಳನ್ನು ಕುರಿತೇ ಹೇಳಿದ್ದು.

ಇಂಥ ಯಜ್ಞಗಳು ವೇದದ ಮೂಲಕವಾಗಿ ಬೇಕಾದಷ್ಟು ಪ್ರಕಾಶವಾಗಿರುತ್ತವೆ. ಅವುಗಳೆಲ್ಲವೂ ಕರ್ಮಜಗಳು ಎಂಬಿದನ್ನು ಮರೆಯಬಾರದು. ಅನಾತ್ಮವಾದ ದೇಹವೇ ಮುಂತಾದವುಗಳನ್ನು ನಾನು ಎಂಬ ಅಭಿಮಾನದಿಂದ ಹೊಂದಿಕೊಂಡಿರುವ ದರಿಂದಲೇ ಕರ್ಮಗಳು ನಮ್ಮವಾಗುವವು. ಯಜ್ಞಗಳನ್ನು ವೇದದಲ್ಲಿ ಹೇಳಿರುವದು ನಿಜ; ಆದರೆ ಯಜ್ಞಗಳನ್ನು ಕೇವಲ ಯಜ್ಞಗಳಿಗಾಗಿ ಹೇಳಿಲ್ಲ; ಅವೆಲ್ಲವೂ ಜ್ಞಾನಕ್ಕೆ ಉಪಕಾರಕವಾಗಲೆಂದೇ ಹೇಳಿರುತ್ತದೆ. ಗಾಳಿಯ ಪಟಕ್ಕೆ ಕಟ್ಟಿರುವ ಬಾಲಂಗಸವೆಲ್ಲ ಹೇಗೆ ಅದು ಮೇಲೆ ಹೋಗುವದಕ್ಕಾಗಿಯೇ ಕಟ್ಟಿದ್ದೋ ಹಾಗೆ ಮೇಲುಮಟ್ಟದ ಸಾಧನವಾದ ಜ್ಞಾನಕ್ಕಾಗಿಯೇ ಇವುಗಳನ್ನು ಹೇಳಿದೆ. "ದ್ರವ್ಯದಿಂದ ಸಾಧಿಸತಕ್ಕದ್ದಾಗಿರುವ ಯಜ್ಞಕ್ಕಿಂತ ಜ್ಞಾನಯಜ್ಞವು ಹೆಚ್ಚಿನದು" ಎಂದು ಹೇಳಿರುವದೂ ಇದನ್ನು ಸೂಚಿಸುತ್ತದೆ.

ಈ ಜ್ಞಾನಯಜ್ಞವು ಹೇಗೆ ದೊರೆಯುತ್ತದೆ? ಎಂದರೆ

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**

**ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥** (೪-೩೪)

ಈ ಶ್ಲೋಕವನ್ನು ಬಹಳ ಜನರು ಬೇಗನೆ ಹಾರಿಸಿಕೊಂಡು ಹೋಗುತ್ತಾರೆ. ಆದರೆ ಇದರಲ್ಲಿ ಮಹತ್ತ್ವದ ಸಂಗತಿಗಳಿವೆ. ಜ್ಞಾನವನ್ನು ಜ್ಞಾನಿಗಳಿಂದ ತಿಳಿಯಬಹುದೇ ಹೊರತು ಬೇರೆಯವರಿಂದ ಅದನ್ನು ಸಂಪಾದಿಸಿಕೊಳ್ಳುವದು ಆಗಲಾರದು ಎಂಬುದನ್ನು ಇಲ್ಲಿ ಒತ್ತಿ ಹೇಳಿದೆ. ಬರಿಯ ಪುಸ್ತಕದಿಂದಲೇ ಗೀತೆಯ ಜ್ಞಾನವನ್ನು ಸಂಪಾದಿಸಿ ಕೊಳ್ಳಬಹುದು ಎಂದು ಭಾವಿಸುವದು ತಪ್ಪು. ನಿಘಂಟುಗಳ ಅಥವಾ ವ್ಯಾಕರಣದ ಬಲದಿಂದಲೇ ಅಧ್ಯಾತ್ಮಗ್ರಂಥಗಳ ತಾತ್ಪರ್ಯವನ್ನು ನಿರ್ಣಯಿಸಿಕೊಳ್ಳುವೆವೆಂದು ಹವಣಿಸಿದರೆ ಅದು ಬರಿಯ ಭ್ರಾಂತಿಯಾಗುವದು. ಲೌಕಿಕವಾದ ಯಂತ್ರಗಳನ್ನು ಕೂಡ ಬಿಚ್ಚುವದಕ್ಕಾಗಲಿ, ಜೋಡಿಸುವದಕ್ಕಾಗಲಿ, ನಡೆಯಿಸುವದಕ್ಕಾಗಲಿ, ಯಂತ್ರಜ್ಞರ ಸಹಾಯವಿಲ್ಲದೆ ಆಗುವದಿಲ್ಲ. ಹೀಗಿರುವಲ್ಲಿ ಅತೀಂದ್ರಿಯವಾದ ಅಧ್ಯಾತ್ಮವಿಷಯಗಳನ್ನು ಗುರುಗಳ ಸಹಾಯವಿಲ್ಲದೆ ತಿಳಿದುಕೊಳ್ಳುವೆವೆಂದು ನಂಬುವದು ಎಂಥ ಹುಚ್ಚುತನ! ಛಾಂದೋಗ್ಯದಲ್ಲಿ ಇದನ್ನು ಒಂದು ದೃಷ್ಟಾಂತದಿಂದ ವಿವರಿಸಿದೆ. ಶ್ವೇತಕೇತುವಿಗೆ

ತಂದೆಯಾದ ಉದ್ದಾಲಕನು ತತ್ತ್ವವನ್ನು ಬೋಧಿಸುವದಕ್ಕೆ ಹೊರಟು "ಮಗೂ, ನಿನ್ನೆಯ ದಿನ ಉಪ್ಪಿನ ಹರಳನ್ನು ನೀರಿನಲ್ಲಿ ಹಾಕಿದ್ದೆಯಲ್ಲ, ಎಲ್ಲಿ, ಅದನ್ನು ತೆಗೆ, ನೋಡೋಣ" ಎನ್ನಲು ಶ್ವೇತಕೇತುವು ಅದನ್ನು ಎಲ್ಲಿ ಹುಡುಕಿದರೂ ಸಿಕ್ಕಲಿಲ್ಲ. ಆದರೆ ಬೇರೆಬೇರೆಯ ಕಡೆಯಿಂದ ಸ್ವಲ್ಪ ನೀರನ್ನು ಕುಡಿದು ನೋಡು' ಎನ್ನಲು, ನೀರಿನ ಎಲ್ಲಾ ಕಡೆಯಲ್ಲಿಯೂ ಉಪ್ಪು ಸೇರಿಕೊಂಡಿರುವದೆಂಬುದು ಸ್ಪಷ್ಟವಾಯಿತು. ನಾಲಗೆಯಿಂದ ನೋಡಿ ಅರಿಯುವ ವಸ್ತುವನ್ನು ಕಣ್ಣಿಂದಲಾಗಲಿ ಕೈಯಿಂದಲಾಗಲಿ ನೋಡುವದು ಹೇಗೆ ಆಗಲಾರದೋ, ಹಾಗೆಯೇ ಆಗಮಮಾತ್ರದಿಂದ ಅರಿಯತಕ್ಕ ಆತ್ಮತತ್ತ್ವವನ್ನು ಇಂದ್ರಿಯಗಳಿಂದ ಅರಿಯುವದೂ ಆಗಲಾರದು; ಆದ್ದರಿಂದ ಆಚಾರ್ಯರಿಂದಲೇ ಇದನ್ನು ಕೇಳಿ ತಿಳಿದುಕೊಳ್ಳಬೇಕು-ಎಂದು ಉದ್ದಾಲಕನು ಈ ದೃಷ್ಟಾಂತದಿಂದ ತಿಳಿಸಿಕೊಟ್ಟನು. ಆತ್ಮತತ್ತ್ವವು ನಮ್ಮ ಸ್ವರೂಪವೇ ಆದರೂ ಅದನ್ನು ನಾವೇ ಅರಿತುಕೊಳ್ಳಲಾರದೆ ಇರುವೆವು. ಇದಕ್ಕೆ ಅಜ್ಞಾನವೇ ಕಾರಣ. ಈ ಅಜ್ಞಾನವನ್ನು ಕಳೆಯುವಂಥ ಗುರುಗಳು ನಮಗೆ ಬೇಕಾಗಿದೆ.

ತತ್ತ್ವವನ್ನು ಇದ್ದದ್ದು ಇದ್ದಂತೆ ಯಾರು ಅರಿತುಕೊಂಡಿರುವರೋ ಅಂಥ ಮಹನೀಯರನ್ನು ಕಂಡು ನಾವು ದಂಡವತ್ಪ್ರಣಾಮವನ್ನು ಮಾಡಬೇಕು. ದುರಭಿಮಾನವನ್ನು ಬಿಟ್ಟಲ್ಲದೆ ಜ್ಞಾನವು ಎಂದಿಗೂ ಬರಲಾರದು. ಆಮೇಲೆ ಪರಿಪ್ರಶ್ನೆ ಮಾಡಬೇಕು, ಎಂದರೆ ಸಮಯವರಿತು ಅವರು ಪ್ರಸನ್ನರಾಗಿ ತತ್ತ್ವವನ್ನು ತಿಳಿಸಬೇಕೆಂದು ಮನಸ್ಸು ಮಾಡಿರುವಂಥ ಸಮಯವನ್ನು ನೋಡಿಕೊಂಡು ವಿನಯದಿಂದ ಕೇಳಬೇಕು. ಧರ್ಮವನ್ನಾಗಲಿ ತತ್ತ್ವವನ್ನಾಗಲಿ ಇದು ಹೇಗೆಂದು ಕೇಳದೆ ಇರುವವರಿಗೆ ಹೇಳಬಾರದು; ಅನ್ಯಾಯವಾದ ರೀತಿಯಿಂದ, ಎಂದರೆ ಪರೀಕ್ಷೆಗಾಗಿಯೋ ಹುಳುಕನ್ನು ತೋರಿಸುವ ಉದ್ದೇಶದಿಂದಲೋ ಕೇಳುವವನಿಗೂ ಹೇಳಬಾರದು. ಆದ್ದರಿಂದ ಉಚಿತಕಾಲದಲ್ಲಿ ವಿನಯದಿಂದಲೇ ಮಹನೀಯರನ್ನು ಕೇಳಬೇಕು. ಮೂರನೆಯದಾಗಿ ಅವರನ್ನು ಸೇವೆಮಾಡುತ್ತಿರಬೇಕು; ಹಾಗಾದರೆ ಗುರುಶಿಷ್ಯರಿಗೆ ನಿಕಟಸಂಬಂಧವುಂಟಾಗಿ ಗುರುಗಳ ಮನಸ್ಸಿನಲ್ಲಿ ಹೇಳಬೇಕೆಂಬ ಕುತೂಹಲವು ಬಂದಾಗ ಅವರು ತತ್ತ್ವವನ್ನು ಹೇಳಿಯೇ ಬಿಡುವರು.

ಒಮ್ಮೆ ಒಬ್ಬ ಸಾಧುಗಳ ದರ್ಶನವಾಗುವ ಪುಣ್ಯವು ನನಗೆ ದೊರೆತಿತ್ತು. ಅವರು ಸಂಚಾರಮಾಡುವಾಗ ನಾವು ಮೂರುನಾಲ್ಕು ಜನ ಜೊತೆಯಲ್ಲಿರುತ್ತಿದ್ದೆವು. ಒಮ್ಮೆ ಅವರು ಒಂದು ಸೇತುವೆಯನ್ನು ದಾಟುತ್ತಿರುವಾಗ ಯಾವದೋ ಪ್ರಸಂಗದಿಂದ ಗಿರಕ್ಕನೆ ತಿರುಗಿ "ಕರ್ಮಬಂಧದಿಂದ ತಪ್ಪಿಸಿಕೊಳ್ಳುವದಕ್ಕೆ ನನಗೆ ತೋರುವದು ಎರಡೇ ಮಾರ್ಗ, ಒಂದೋ ಕರ್ತೃತ್ವಬುದ್ಧಿಯನ್ನು ಬಿಡಬೇಕು; ಇಲ್ಲವೆ, ಕರ್ಮವೆಲ್ಲವೂ

ಪರಮೇಶ್ವರನದೇ, ನಮ್ಮದೇನೂ ಇಲ್ಲ ಎಂದು ಭಾವಿಸುವದು" ಎಂದರು. ಸಹಜವಾಗಿ ಅವರು ಆಡಿದ ಮಾತು ನನ್ನ ಮನಸ್ಸಿನಲ್ಲಿ ಅಂದಿನಿಂದ ಬಲವಾಗಿ ಬೇರೂರಿಕೊಂಡು ಬಿಟ್ಟಿದೆ. ಅದನ್ನು ಹೊರಳಿಹೊರಳಿಸಿ ನೋಡಿದಂತೆಲ್ಲ ಗೀತಾರ್ಥಸಾರಸರ್ವಸ್ವವೇ ಅದು ಎಂದು ನನಗೆ ತೋರುತ್ತಿದೆ. ಮತ್ತೊಂದು ಸಲ ನಾವುಗಳು ಒಂದು ಬಂಡಿಯ ಮೇಲೆ ಕುಳಿತು ಪ್ರಯಾಣಮಾಡುತ್ತಿದ್ದೆವು. ಮಾತಿನ ಪ್ರಸಂಗದಿಂದ ಶಾಂಡಿಲ್ಯಸೂತ್ರದ ವಿಚಾರವು ಬಂದಿತು. 'ಭಕ್ತಿಮಾರ್ಗದವರು ಅದ್ವೈತಿಗಳ ಜ್ಞಾನಮಾರ್ಗವನ್ನು ಖಂಡಿಸುತ್ತಾರೆ' ಎಂದು ನಾನೆನ್ನಲು ಅವರು ಅದನ್ನು ಕೇಳದವರಂತೆಯೇ "ಅಹಂ ಬ್ರಹ್ಮಾಸ್ಮಿ-ಎಂಬ ಜ್ಞಾನಿಗಳ ಅಭಿಪ್ರಾಯವೂ ಆತ್ಮನಿವೇದನವನ್ನು ಮಾಡಬೇಕೆಂಬ ಭಕ್ತರ ಅಭಿಪ್ರಾಯವೂ ಒಂದೇ ಎಂದು ನನಗೆ ತೋರುತ್ತದೆ. ಹೇಗೆಂದರೆ ಅಹಂ ಬ್ರಹ್ಮಾಸ್ಮಿ ಎಂದರೆ ಅಹಂ (ನಾನು) ಎಂಬುದು ಬರಿಯ ತೋರಿಕೆ, ಅದರ ನಿಜವು ಬ್ರಹ್ಮವೇ ಎಂದರ್ಥ. ಭಕ್ತರ ಆತ್ಮನಿವೇದನದಲ್ಲಿ ನಾನು ಎಂಬುದನ್ನು ಪೂರ್ಣವಾಗಿ ಪರಮೇಶ್ವರನಿಗೆ ಅರ್ಪಿಸಿದರೆ ಆ ಭಗವಂತನೊಬ್ಬನೇ ಉಳಿದುಕೊಳ್ಳುತ್ತಾನೆ. ಇವೆರಡರಲ್ಲಿ ನಿಮಗೇನಾದರೂ ಹೆಚ್ಚು ಕಡಿಮೆ ತೋರುತ್ತದೆಯೆ?" ಎಂದರು. ಆಗ ನನಗೆ ಥಟ್ಟನೆ ಕಣ್ಣು ತೆರೆದಂತೆ ಆಯಿತು. "ಸತ್ಯಪಿ ಭೇದಾಪಗಮೇ ನಾಥ ತವಾಹಂ ನ ಮಾಮಕೀನಸ್ತ್ವಮ್ । ಸಾಮುದ್ರೋ ಹಿ ತರಙ್ಗಃ ಕ್ವಚನ ಸಮುದ್ರೋ ನ ತಾರಙ್ಗಃ॥" ಎಂಬ ಶ್ಲೋಕದಲ್ಲಿರುವ ಅಭಿಪ್ರಾಯವನ್ನು ಎಷ್ಟು ಸುಲಭವಾಗಿ ಅವರು ತಿಳಿಸಿಕೊಟ್ಟರಲ್ಲ! ಎನಿಸಿತು. ಪರಮಾತ್ಮತತ್ತ್ವದಲ್ಲಿ ಎಲ್ಲವೂ ಕರಗಿಹೋಗಬೇಕು; ಅದೇ ಜ್ಞಾನವು, ಅದೇ ಭಕ್ತಿಯು-ಎಂದು ನನಗೆ ತೋರಿತು.

ದೊಡ್ಡವರು, ತತ್ತ್ವದರ್ಶಿಗಳಾದವರು, ಹೀಗೆ ಪ್ರಸನ್ನರಾಗಿ ಉಪದೇಶಿಸಿದ ಕೂಡಲೆ ಅಹಂಕಾರವನ್ನು ಕಳೆಯುವದೊಂದೇ ಅಧ್ಯಾತ್ಮಸಾಧನಕ್ಕೆಲ್ಲ ಹೆಗ್ಗುರಿ ಎಂಬ ತತ್ತ್ವವು ನಮಗೆ ಮನದಟ್ಟಾಗುತ್ತದೆ. ಇಂಥ ಮಹಿಮೆಯುಳ್ಳದ್ದು ಜ್ಞಾನಿಗಳ ಉಪದೇಶವು! ತಾಯಿಯ ಹೊಟ್ಟೆಯಲ್ಲಿರುವ ಗರ್ಭಕ್ಕೆ ಬೇರೆಯವರು ಪೋಷಣೆ ಮಾಡಲಾರರು. ಅದರ ಯೋಗಕ್ಷೇಮವೆಲ್ಲ ತಾಯಿಗೇ ಸೇರಿದ್ದು. ಇದರಂತೆ ಯಾವನು ಸದ್ಗುರುವಿಗೆ ಶರಣುಬಂದಿರುವನೋ, ಯಾವನು ಅವರ ಕೈಯಿನ ಕೋಲಿನಂತೆ ಎಲ್ಲೆಂದರೆ ಅಲ್ಲಿ ಇಡಲೆಂದು ದಂಡಪ್ರಣಾಮವನ್ನು ಮಾಡಿ ಅವರಿಗೆ ತನ್ನನ್ನು ಒಪ್ಪಿಸಿಕೊಂಡುಬಿಟ್ಟಿರುವನೋ, ಯಾವನು ಅವರನ್ನು ಎಡಬಿಡದೆ ಸೇವೆಗೈಯುತ್ತಾ ಪ್ರರಿಪ್ರಶ್ನೆಮಾಡುವದನ್ನು ಕಲಿತಿರುವನೋ, ಅವನು ಧನ್ಯನು. ಅವರ ಹೊಟ್ಟೆಯೊಳಗೆ ಸೇರಿಕೊಂಡುಬಿಟ್ಟಿರುವದರಿಂದ ಇನ್ನು ಅವರ ಉಪದೇಶಬಲದಿಂದ

ಅವನು ಗುರುಪುತ್ರನಾಗುವದು ಖಂಡಿತ. ನಮ್ಮ ಹೃದಯಕ್ಕೂ ಗುರುಗಳ ಹೃದಯಕ್ಕೂ ಸಂಬಂಧವಾದರೆ ನಮಗೆ ಹೊಸದೊಂದು ಜನ್ಮವೇ ಬಂದಂತೆ ಆಗುತ್ತದೆ. ಜ್ಞಾನವು ಬರುವದು ಹೀಗೆಯೇ ಹೊರತು ಮತ್ತೊಂದು ಪ್ರಕಾರದಿಂದಲ್ಲ. ಈ ರೀತಿಯಲ್ಲಿ ಸದ್ಗುರುವನ್ನು ಕಂಡು ತತ್ತ್ವಜ್ಞಾನವನ್ನು ಪಡೆದುಕೊಂಡು ಸಕಲಯಜ್ಞಗಳನ್ನೂ ಮೀರಿರುವ ಜ್ಞಾನಯಜ್ಞದ ಫಲವನ್ನು ಸಂಪಾದಿಸಿಕೊಳ್ಳಬೇಕು, ಕರ್ಮಬಂಧವನ್ನು ಕಿತ್ತೊಗೆದು ಕೃತಾರ್ಥರಾಗಬೇಕು.

## ೩೨. ತತ್ತ್ವಜ್ಞಾನದ ಫಲ ೪-(೩೫-೩೬)

### (೨.೨.೪೭)

ತತ್ತ್ವದರ್ಶಿಗಳಾದ ಜ್ಞಾನಿಗಳನ್ನು ಸೇವೆಮಾಡಿ ಅವರ ಮನಸ್ಸನ್ನು ಒಲಿಸಿಕೊಂಡು ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು-ಎಂದು ಭಗವಂತನು ಉಪದೇಶಿಸಿರುವದನ್ನು ನಾವು ಮನಸ್ಸಿಗೆ ಹತ್ತಿಸಿಕೊಳ್ಳುವದು ಅವಶ್ಯ. ಏಕೆಂದರೆ ಇಪ್ಪತ್ತೈದು ಪೈಗಿಂತ ಕಡಿಮೆಯ ಬೆಲೆಗೂ ಗೀತಾಪುಸ್ತಕಗಳು ಸಿಕ್ಕುತ್ತಿರುವ ಈ ಕಾಲದಲ್ಲಿ ನಮಗೆ ಗೀತೋಕ್ತತತ್ತ್ವದ ಜ್ಞಾನವನ್ನು ಹೇಗೆ ಸಂಪಾದಿಸಿಕೊಳ್ಳಬೇಕೆಂಬುದು ಮರೆತುಹೋಗುವ ಸಂಭವವಿದೆ. ಜ್ಞಾನವು ಅನುಭವಿಗಳಾದ ಮಹಾತ್ಮರ ಉಪದೇಶದ ದೆಸೆಯಿಂದಲೇ ನಮಗೆ ದೊರೆಯಬೇಕಾಗಿದೆ. ಅನುಭವಿಗಳ ಉಪದೇಶದಿಂದ ಉಂಟಾದ ಜ್ಞಾನವೇ ಕಾರ್ಯಕಾರಿಯಾಗುತ್ತದೆ. ಇದನ್ನು ತಿಳಿಸುವದಕ್ಕಾಗಿಯೇ ಭಗವಂತನು "**ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಣ್ಡವ**" ಅಂಥವರು ಉಪದೇಶಿಸಿದ್ದನ್ನು ತಿಳಿದುಕೊಂಡರೆ ಮತ್ತೆ ನಿನಗೆ ಹೀಗೆ ಮೋಹವು ಉಂಟಾಗುವದಿಲ್ಲ-ಎಂದಿರುತ್ತಾನೆ. ಭಗವದ್ಗೀತೆಯು ಉಪನಿಷತ್ತುಗಳ ಸಾರವು; ಈ ಸಾರವನ್ನು ಭಗವಂತನು ತಾನು ತತ್ತ್ವದಲ್ಲಿ ನಿಂತು ಅರ್ಜುನನಿಗೆ ಉಪದೇಶಿಸಿರುತ್ತಾನೆ. ಆದ್ದರಿಂದಲೇ ಅರ್ಜುನನ ಮೇಲೆ ಆ ಉಪದೇಶದ ಪರಿಣಾಮವು ಆಯಿತು. ಇದರಂತೆ ತತ್ತ್ವದಲ್ಲಿ ನೆಲೆನಿಂತಿರುವ ಮಹಾತ್ಮರು ಉಪದೇಶಿಸಿದ್ದು ಮಾತ್ರ ನಮ್ಮಲ್ಲಿ ಪರಿಣಾಮವನ್ನು ಉಂಟುಮಾಡೀತು. ಅವರಿಂದ ತಿಳಿದುಕೊಂಡದ್ದು ಮಾತ್ರ ನಿಜವಾದ ಗೀತಾರ್ಥವಾದೀತು.

ಭಗವದ್ಗೀತೆ ಎಂಬುದು ಎಲ್ಲಾ ಪುಸ್ತಕಗಳಂತೆ ಒಂದು ಪುಸ್ತಕ ಎಂದು ಭಾವಿಸಬಾರದು. ಅದು ಭಗವಂತನ ವಾಣಿಯ ಕೋಶಾಗಾರವು. ಭಗವಂತನ ಸಾರವನ್ನು ಬಲ್ಲ ದೊಡ್ಡವರು ನಮಗೆ ಉಪದೇಶಿಸಿರುವ ತತ್ತ್ವವು ಕೂಡಲೆ ನಮ್ಮ

ಮೋಹವನ್ನು ಕಳೆದುಬಿಡುತ್ತದೆ. ಭಗವಂತನ ವಾಣಿಯು ನದಿಯಿಂದ ಬಂದ ಕಾಲುವೆಯಂತೆ ಇರುತ್ತದೆ. ಭಗವದ್ಭಕ್ತರಾದ ಜ್ಞಾನಿಗಳ ವಾಣಿಯೊ, ಎಂದರೆ- ಉಪಕಾಲುವೆಯಂತೆ ನಮ್ಮ ಹೃದಯವನ್ನೇ ತಲುಪುತ್ತದೆ. ಅವರ ಬಳಿಗೆ ಹಣ್ಣು, ಕಾಯಿ, ಮುಂತಾದವುಗಳನ್ನು ತೆಗೆದುಕೊಂಡು ಹೋಗಿ ನಮಸ್ಕರಿಸಿ ಕಾಣಿಕೆ ಒಪ್ಪಿಸಿದಂತೆ ಅರ್ಪಣೆಮಾಡಬಹುದು, ಅವರನ್ನು ಸೇವೆಮಾಡಲೂಬಹುದು, ಆದರೆ ಅವರ ಮಾತು ಹೃದಯದಲ್ಲಿಯೇ ನಿಲ್ಲುವಂತೆ ಮಾಡಿಕೊಂಡು ಅದರ ಅರ್ಥವನ್ನು ನಮ್ಮ ಜೀವನದ ಸೂತ್ರವಾಗಿ ಮಾಡಿಕೊಳ್ಳುವದು ಕಷ್ಟ. ಅರ್ಜುನನಿಗೆ ಶ್ರೀಕೃಷ್ಣಭಗವಂತನ ಉಪದೇಶದಿಂದ ಮೋಹವು ಸಂಪೂರ್ಣವಾಗಿ ಹೋಗಿಬಿಟ್ಟಿತಲ್ಲವೆ? ಇದರಂತೆ ನಮಗೆ ದೊಡ್ಡವರ ಉಪದೇಶವಾಯಿತೆಂಬುದಕ್ಕೆ ನಮ್ಮ ಮೋಹವು ಹೋದದ್ದೇ ಗುರುತು. ಭಗವಂತನ ವಾಣಿಯ ಪ್ರವಾಹವು ಸದ್ಗುರುಗಳ ಉಪದೇಶವೆಂಬ ಕಾಲುವೆಯ ಮೂಲಕ ನಮ್ಮ ಹೃದಯದೊಳಕ್ಕೆ ಹರಿಯಲಿ; ಆಗ ನಮ್ಮ ಹೃದಯಕ್ಷೇತ್ರವು ಹುಲುಸಾದ ಉತ್ತಮವಾದ ಬೆಳೆಯನ್ನು ಕೊಡುವದು. ಅಜ್ಞಾನಕ್ಕೆ ಜ್ಞಾನವೇ ಚಿಕಿತ್ಸೆ. ಕತ್ತಲಿಗೆ ಬೆಳಕೇ ಪರಿಹಾರಸಾಧನವು. ಕತ್ತಲೆಯಲ್ಲಿ ಎಡಹುತ್ತಾ ಮುಗ್ಗರಿಸುತ್ತಾ ಓಡಾಡುತ್ತಿರುವವರು ಮನೆಯಲ್ಲಿ ಸಾಮಾನುಗಳ ಸ್ಥಾನವನ್ನು ಬದಲಾಯಿಸಿದ ಮಾತ್ರಕ್ಕೆ ಎಡಹುವ ಮುಗ್ಗರಿಸುವ ಅಪಾಯವು ಇಲ್ಲವಾದೀತೆ? ಎಂದಿಗೂ ಇಲ್ಲ. ಕತ್ತಲೆಯನ್ನು ಮೊದಲು ಕಳೆಯಬೇಕು. ಬೆಂಕಿಕಡ್ಡಿಯನ್ನು ಗೀಚಿ ಬೆಳಕನ್ನುಂಟುಮಾಡಿಕೊಳ್ಳುವದೇ ಕತ್ತಲೆಯು ತೊಲಗುವದಕ್ಕೆ ಉಪಾಯ. ಇದರಂತೆ ಅಜ್ಞಾನದಿಂದ ನಮಗೆ ಆಗುತ್ತಿರುವ ಸಂಸಾರದ ಅನರ್ಥಗಳು ತೊಲಗುವದಕ್ಕೆ ದೊಡ್ಡವರ ಉಪದೇಶದಿಂದುಂಟಾಗುವ ಜ್ಞಾನವೇ ಸಾಧನವು. "ಯಜ್ಜ್ಞಾತ್ವಾ" (ಯಾವ ಆ ಉಪದೇಶದ ಸಾರವನ್ನು ಅರಿತುಕೊಂಡರೇ) ಎಂಬ ಮಾತಿನಲ್ಲಿ ಜ್ಞಾನಿಗಳಿಗೂ ನಮಗೂ ನಿಕಟಸಂಬಂಧವಾದರೇ ಅಜ್ಞಾನಾಂಧಕಾರವು ತೊಲಗುವದು ಎಂಬ ಅಭಿಪ್ರಾಯವು ಅಡಗಿರುತ್ತದೆ.

ಅಜ್ಞಾನವು ತೊಲಗಿದರೆ ನಮಗೆ ಆಗುವ ಪ್ರಯೋಜನವೇನು?- ಎಂದರೆ, ಈಗ ಅದರಿಂದಾಗಿರುವ ಅನರ್ಥಗಳೆಲ್ಲ ಸಂಪೂರ್ಣವಾಗಿ ಹೋಗಿಬಿಡುತ್ತವೆ. ಅಜ್ಞಾನದಿಂದ ಕಾಮ, ಕರ್ಮ- ಎಂಬ ಅನರ್ಥಗಳು ಆಗುತ್ತವೆ; ಅವುಗಳಿಂದ ಮತ್ತೆ ಮತ್ತೆ ಅನರ್ಥಗಳು ಸಾಲುಸಾಲಾಗಿ ಆಗುತ್ತಿರುತ್ತವೆ. ಕೆಲವು ರೋಗಗಳಿಗೆ ಚಿಕಿತ್ಸೆ ಮಾಡಿದರೆ ಅವು ಹೋಗುವದರೊಳಗೆ ಮತ್ತೆ ಹಲವು ಉಪರೋಗಗಳು ಹುಟ್ಟಿಕೊಳ್ಳುವದುಂಟು. ಅದರಂತೆ ಅಜ್ಞಾನದಿಂದ ಆಗುವ ತೊಂದರೆಗಳನ್ನು ನಿವಾರಣೆಮಾಡಿಕೊಳ್ಳುವದಕ್ಕೆ ಪ್ರಯತ್ನಪಟ್ಟರೆ ಅವು ಹೋಗುವ ಹೊತ್ತಿಗೆ ಮತ್ತೆ ಎಷ್ಟೋ ಬೇರೆಯ

ತೊಂದರೆಗಳು ಕಾಣಿಸಿಕೊಳ್ಳುವವು. ಆದ್ದರಿಂದ ಹೊರಗಿನ ತೊಂದರೆಗಳನ್ನು ನಿವಾರಣೆಮಾಡುವ ಪ್ರಯತ್ನಗಳು ಅಷ್ಟು ಫಲಕಾರಿಯಾಗುವದಿಲ್ಲ; ಅವುಗಳಿಗೆ ಮೂಲಕಾರಣವಾಗಿರುವ ಅಜ್ಞಾನವನ್ನು ಕಿತ್ತುಹಾಕಬೇಕು. ಹಸಿದವನಿಗೆ ಒಪ್ಪೊತ್ತು ಅನ್ನವನ್ನು ಹಾಕಿದರೆ ಆ ಕಾಲಕ್ಕೆ ಹಸಿವು ಅಡಗಬಹುದು; ಆದರೆ ಮತ್ತೆ ಎಂದೆಂದಿಗೂ ಅವನಿಗೆ ಹಸಿವು ಬರದಂತೆ ಮಾಡುವದು ನಮ್ಮಿಂದ ಆದೀತೆ? ಅಥವಾ ಅವನಿಗೆ ಹಸಿವು ಬಂದಾಗಲೆಲ್ಲ ಅನ್ನವನ್ನು ಹಾಕುವದಕ್ಕಾದರೂ ಆದೀತೆ? ಇಲ್ಲ. ಅವನಿಗೆ ಬೇಕಾಗುವಷ್ಟು ಅನ್ನವನ್ನು ಸಂಪಾದಿಸಿಕೊಳ್ಳುವ ತಿಳಿವಳಿಕೆಯನ್ನು ಕೊಟ್ಟರೆ ಮಾತ್ರ ಅವನ ಹಸಿವಿಗೆ ಸರಿಯಾದ ನಿವಾರಣೋಪಾಯವನ್ನು ನಾವು ಕಲ್ಪಿಸಿಕೊಟ್ಟಂತೆ ಆದೀತು. ಇದರಂತೆ ಜನರಿಗೆ ಅಜ್ಞಾನದಿಂದ ಉಂಟಾಗುವ ಅನರ್ಥಪರಂಪರೆಯಲ್ಲಿ ಕೆಲವು ಅನರ್ಥಗಳನ್ನು ನೀಗಿಕೊಳ್ಳುವ ಉಪಾಯವನ್ನು ತಿಳಿಸಿಕೊಡುವದರಿಂದ ಆತ್ಯಂತಿಕಪ್ರಯೋಜನವು ಆಗಲಾರದು. ಅಜ್ಞಾನವನ್ನೇ ನಾಶಗೊಳಿಸುವ ಜ್ಞಾನವನ್ನು ಉಪದೇಶಿಸಬೇಕು. ಜ್ಞಾನದಿಂದ ಅಜ್ಞಾನವು ತೊಲಗಿದರೆ ಮೋಹವೂ ಅದರಿಂದಾಗುವ ಶೋಕವೂ ಸಂಪೂರ್ಣವಾಗಿ ಹೋಗಿಬಿಡುತ್ತವೆ.

ಲೋಕದ ಜ್ಞಾನಗಳು ತಮ್ಮ ತಮ್ಮ ವಿಷಯದ ಅಜ್ಞಾನವನ್ನು ಮಾತ್ರ ಕಳೆಯುತ್ತವೆ. ಆದರೆ ಆತ್ಮತತ್ತ್ವಜ್ಞಾನದಲ್ಲಿ ಒಂದು ವಿಶೇಷವಿದೆ. ಅದೇನೆಂದರೆ ಬ್ರಹ್ಮಾದಿಯಾಗಿ ಸ್ತಂಬಪರ್ಯಂತವಾದ ಪ್ರಾಣಿಗಳಿಗೂ ನಮಗೂ ಇರುವ ನಿಕಟ ಸಂಬಂಧವು ಆಗ ಕಣ್ಣಿಗೆ ಕಟ್ಟಿದಂತೆ ಆಗುತ್ತದೆ. ಅಜ್ಞಾನದ ಮಬ್ಬಿನಿಂದ ಅರ್ಜುನನಿಗೆ ಇವರು ನಮ್ಮವರು, ಇವರು ಅನ್ಯರು-ಎಂಬ ಭೇದಭಾವನೆಯು ತೋರಿಕೊಂಡಿತ್ತು; ಆದ್ದರಿಂದ ಶತ್ರುಗಳನ್ನೆಲ್ಲ ಕೊಂದು ರಾಜ್ಯವನ್ನು ಸಂಪಾದಿಸಿಕೊಳ್ಳೋಣವೆಂದು ಯುದ್ಧಕ್ಕೆ ಸನ್ನದ್ಧನಾದನು. ಇಷ್ಟರಲ್ಲಿ "ಭೀಷ್ಮದ್ರೋಣಾದಿಗಳು ಪೂಜ್ಯರು, ನಮ್ಮವರು; ಇವರನ್ನು ಯುದ್ಧದಲ್ಲಿ ಹೇಗೆ ಕೊಲ್ಲಲಿ?" ಎಂಬ ಭಾವನೆಯು ಹುಟ್ಟಿಕೊಂಡಿತು. "ಅಯ್ಯೋ, ಇವರೆಲ್ಲ ಯುದ್ಧದಲ್ಲಿ ಮಡಿಯುವರಲ್ಲ" ಎಂದು ಶೋಕಿಸುವದಕ್ಕೆ ಮೊದಲುಮಾಡಿದನು. "ಇವರನ್ನೆಲ್ಲ ಕೊಂದರೆ ನಮಗೆ ಪಾಪವೇ ಬರುವದು" ಎಂಬ ದಿಗಿಲು ಬೇರೆ ಕಾಣಿಸಿಕೊಂಡಿತು. ಹೀಗೆ ಅಜ್ಞಾನದಿಂದ ಉಂಟಾಗಿದ್ದ ಆತ್ಮಭೇದಭಾವನೆಯಿಂದ ಅವನಲ್ಲಿ ದುಃಖಬೀಜವಾಗಿದ್ದ ಹಲವು ಭಾವನೆಗಳು ಮೊಳಕೆಯಾಗಲು ಅವಕಾಶವಾಯಿತು. ಆದ್ದರಿಂದ ಭಗವಂತನು ಈ ವಾಕ್ಯವನ್ನು ಆಡಿರುತ್ತಾನೆ:

"ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ" ಈ ಉಪದೇಶ ದಿಂದುಂಟಾದ ಜ್ಞಾನದಿಂದಲೇ, ಎಲೈ ಅರ್ಜುನನೆ, ನಿನಗೆ ಎಲ್ಲಾ ಪ್ರಾಣಿಗಳೂ ನಿನ್ನ

ಆತ್ಮನಲ್ಲಿಯೇ ಇರುವವೆಂದೂ ನನ್ನಲ್ಲಿಯೂ ಇರುವವೆಂದೂ ನೀನು ಕಂಡುಕೊಳ್ಳುವೆ-ಎಂಬುದು ವಾಕ್ಯದ ಅರ್ಥ. ಆತ್ಮಜ್ಞಾನವು ಉಂಟಾದರೆ "ಎಲ್ಲಾ ಭೂತಗಳಲ್ಲಿಯೂ ಇರುವ ಆತ್ಮನು ಒಬ್ಬನೇ, ಬೇರೆ ಬೇರೆಯಲ್ಲ; ನನ್ನ ಆತ್ಮನೇ ಅವರೆಲ್ಲರ ಆತ್ಮನು" ಎಂಬುದು ಮನವರಿಕೆಯಾಗಿಬಿಡುತ್ತದೆ. ಶರೀರಿಯಾದವನು ಶರೀರದ ಅಂಗಗಳೆಲ್ಲವೂ ತನ್ನದೇ ಎಂದು ಎಣಿಸುವದನ್ನು ನಾವು ಇಲ್ಲಿ ನೆನಪಿಸಿಕೊಳ್ಳಬಹುದು. ಕೈ, ಕಾಲು, ಮುಖ, ಹೊಟ್ಟೆ-ಮುಂತಾದವು ಒಂದಕ್ಕಿಂತ ಒಂದು ಬೇರೆಯಾಗಿರುವಂತೆ ತೋರುತ್ತಿದ್ದರೂ ಅವುಗಳಿಗೆಲ್ಲ ಒಬ್ಬನೇ ಆತ್ಮನಿರುತ್ತಾನೆ. "ನನಗೆ ಒಂದು ಅವಯವದಲ್ಲಿ ಸುಖವು ತೋರಿದರೆ ಸಾಕು, ಮಿಕ್ಕ ಅವಯವಗಳು ಹೇಗಾದರೂ ಇರಲಿ" ಎಂದು ಯಾವನೂ ಬಯಸುವದಿಲ್ಲ. ಶರೀರದಲ್ಲಿ ಎಲ್ಲಾ ಭಾಗದಲ್ಲಿಯೂ ಅವನಿಗೆ ಸುಖವು ಬೇಕು; ಅದೆಲ್ಲದರಲ್ಲಿಯೂ ಅವನಿಗೆ ಆತ್ಮಭಾವವಿರುತ್ತದೆ. ಇದರಂತೆ ಒಬ್ಬ ಕುಟುಂಬಿಗೆ ತನ್ನ ಕುಟುಂಬಕ್ಕೆ ಸೇರಿರುವವರೆಲ್ಲರೂ-ಆಳುಕಾಳು, ಹಸು ಕುರಿ ಮುಂತಾದವು ಕೂಡ—ತನಗೇ ಸೇರಿರುತ್ತಾರಾದ್ದರಿಂದ ಕುಟುಂಬವೆಲ್ಲವೂ ಸುಖವಾಗಿದ್ದರೆ ತಾನೂ ಸುಖವಾಗಿದ್ದಂತೆ ಎಂಬ ಭಾವನೆಯಿರುತ್ತದೆ. ಹೀಗೆಯೇ ಜ್ಞಾನಿಯಾದವನಿಗೆ ಎಲ್ಲಾ ಭೂತಗಳೂ ಅತ್ಯಂತ ಉತ್ಕೃಷ್ಟವಾದ ಶರೀರಾದಿಗಳುಳ್ಳ ಬ್ರಹ್ಮನಿಂದ ಹಿಡಿದು ಅತ್ಯಂತ ಕೀಳಾದ ಉಪಾಧಿಯ ಸ್ಥಾವರಪ್ರಾಣಿಯವರೆಗೂ ತನಗೇ ಸಂಬಂಧಪಟ್ಟವರು, ಎಲ್ಲರ ಆತ್ಮನೂ ತನ್ನ ಆತ್ಮನೇ ಎಂಬ ಹೊಸ ಅರಿವು ಉಂಟಾಗಿರುತ್ತದೆ.

ಇಷ್ಟೇ ಅಲ್ಲ, ನನ್ನ ಆತ್ಮನಾಗಿರುವವನು ಭಗವಂತನೇ. ಭಗವಂತನೇ ಸಕಲಪ್ರಾಣಿಗಳಿಗೂ ನಿಜವಾಗಿ ಆತ್ಮನಾಗಿರುವವನು ಎಂಬ ಅರಿವೂ ಈ ತತ್ತ್ವಜ್ಞಾನದಿಂದ ಉಂಟಾಗುತ್ತದೆ. ತತ್ತ್ವಜ್ಞಾನದಿಂದ ಆಗುವ ಈ ಮಹಾಲಾಭವನ್ನು ಉಪನಿಷತ್ತುಗಳಲ್ಲಿ ಮತ್ತೆ ಮತ್ತೆ ಸಾರಿರುತ್ತದೆ. ಇದನ್ನು ಸ್ವಲ್ಪದರಲ್ಲಿ ಭಗವಂತನು ಉಪದೇಶಿಸಿದ್ದನ್ನು ವ್ಯಾಸರು ಮೇಲಿನ ಅರ್ಧಶ್ಲೋಕದಲ್ಲಿ ಸಂಗ್ರಹಿಸಿರುತ್ತಾರೆ. ಕ್ರೈಸ್ತನು ತನ್ನ ಶಿಷ್ಯರಿಗೆ ಉಪದೇಶಿಸಿದ ದ್ರಾಕ್ಷಿಯ ಬಳ್ಳಿಯ ದೃಷ್ಟಾಂತವನ್ನು ಇಲ್ಲಿ ಉದಾಹರಿಸಬಹುದು. ಮೂಲವಾದ ಬಳ್ಳಿಯ ಶಾಖೆಗಳಲ್ಲೆಲ್ಲ ಒಂದೇ ರಸವು ಆವರಿಸಿಕೊಂಡಿರುವಂತೆ, ಆವೊಂದು ರಸವೇ ಹಣ್ಣುಗಳಲ್ಲಿ ಸವಿಯಾದ ರಸವಾಗಿ ತೋರಿಕೊಳ್ಳುವಂತೆ, ರಸಸ್ವರೂಪನಾದ ಪರಮಾತ್ಮನ ಆನಂದರಸವೊಂದೇ ಎಲ್ಲಾ ಪ್ರಾಣಿಗಳಿಗೂ ಆತ್ಮನಾಗಿದ್ದುಕೊಂಡಿರುವದು. ಇದರ ಅರಿವು ಭಗವದ್ಭಕ್ತರಾದ ಜ್ಞಾನಿಗಳಿಗೂ ಅವರ ಉಪದೇಶದಿಂದ ಕೃತಾರ್ಥರಾದ ಭಾಗ್ಯವಂತರಿಗೂ ಸ್ಫುಟವಾಗಿ ಆಗಿರುತ್ತದೆ. ಮಹಾತ್ಮರ ಉಪದೇಶದಿಂದ ಬರುವ ಜ್ಞಾನನೇತ್ರಕ್ಕೆ ಮಾತ್ರ ಇದು ಗೋಚರವಾಗುತ್ತದೆ.

ಅಜ್ಞಾನದಿಂದ ನಾವು ಹಿಂದೆ ಮಾಡಿರುವ ಪಾಪಗಳು ಲೆಕ್ಕವಿಲ್ಲದಷ್ಟು ಇರುತ್ತವೆ. ಪಾಪಕ್ಕೆಲ್ಲ ಪರಿಚ್ಛಿನ್ನಭಾವವೇ ಕಾರಣ. ನಾನು ಈ ದೇಹವು, ಅಥವಾ ಈ ದೇಹೇಂದ್ರಿಯಗಳ ಮೂಲಕ ಸುಖದುಃಖವನ್ನು ಅನುಭವಿಸುವ ಸಂಸಾರಿಯು-ಎಂಬ ಅರಿವೇ ಸ್ವಾರ್ಥದಿಂದ ಮಾಡುವ ಕರ್ಮಗಳಿಗೆಲ್ಲ ಮೂಲವು. ತನಗೆ ಇಷ್ಟವಾದದ್ದನ್ನು ಸಂಪಾದಿಸಿಕೊಳ್ಳುವದಕ್ಕೂ ಅನಿಷ್ಟವಾದದ್ದನ್ನು ತೊಲಗಿಸಿಕೊಳ್ಳುವದಕ್ಕೂ ಏನುಬೇಕಾದರೂ ಮಾಡಬಹುದು-ಎಂಬ ತಪ್ಪುತಿಳಿವಳಿಕೆಗೆ ಈ ಪರಿಚ್ಛಿನ್ನಬುದ್ಧಿಭಾವವೇ ಮೂಲಕಾರಣವಾಗಿರುತ್ತದೆ. ಆದರೆ ನನ್ನ ನಿಜವಾದ ಆತ್ಮನು ನಿತ್ಯಶುದ್ಧ ಮುಕ್ತಸ್ವಭಾವನಾದ ಸರ್ವರ ಆತ್ಮನಾದ ಪರಮಾತ್ಮನೇ ಎಂಬ ತಿಳಿವಳಿಕೆಯು ಉದಯವಾದಾಗ ಯಾವದನ್ನು ಪ್ರೀತಿಸಬೇಕು, ಯಾವದನ್ನು ಹಗೆಮಾಡಬೇಕು? ರಾಗದ್ವೇಷಗಳು ಇಲ್ಲದವನು ಸ್ವಾರ್ಥಕ್ಕಾಗಿ ಪಾಪವನ್ನು ಮಾಡುವದು ಹೇಗೆ? ಇನ್ನು ಮುಂದೆ ಪಾಪವನ್ನು ಮಾಡುವದಿಲ್ಲವೆಂಬುದು ಹಾಗಿರಲಿ, "ನಾನು ಹಿಂದೆಯೂ ಸಂಸಾರಿಯಾಗಿರಲಿಲ್ಲ; ನಿತ್ಯಮುಕ್ತನಾದ ನಿತ್ಯಶುದ್ಧನಾದ ಭಗವಂತನೇ ನನ್ನ ಆತ್ಮನಾಗಿದ್ದಾನೆ" ಎಂಬ ತಿಳಿವಳಿಕೆಯ ಕಣ್ಣಿನಿಂದ ನೋಡಿದಕೂಡಲೆ ಅಜ್ಞಾನದಿಂದ ತಾನು ಮಾಡಿದ್ದೆನೆಂದು ತಿಳಿದುಕೊಂಡಿದ್ದ ಪಾಪವೆಲ್ಲವೂ ಕನಸಿನಲ್ಲಿ ಮಾಡಿದ ಪಾಪವು ಎಚ್ಚರದಲ್ಲಿ ತನಗೆ ಸಂಬಂಧಿಸದೆ ಇರುವಂತೆ ತನಗೆ ಸರ್ವಥಾ ಸಂಬದ್ಧವಲ್ಲವೆಂಬ ಅರಿವು ಉಂಟಾಗಿಬಿಡುತ್ತದೆ.

"ಜ್ಞಾನವೆಂಬ ತೆಪ್ಪದಿಂದ ಪಾಪವನ್ನು ದಾಟುವೆ" ಎಂದು ಭಗವಂತನು ಜ್ಞಾನವನ್ನು ತೆಪ್ಪಕ್ಕೆ ಹೋಲಿಸಿರುವದರಿಂದ ಪಾಪವೆಂಬುದು ನಿಜವಾಗಿ ಹರಿಯುತ್ತಿರುವ ಹೊಳೆಯೆಂದು ಭಾವಿಸಬಾರದು. ಹಾಗೆಯೇ ಮುಂದಿನ ಶ್ಲೋಕದಲ್ಲಿ ಕಟ್ಟಿಗೆಯ ತುಂಡುಗಳನ್ನು ಉರಿಯುವ ಬೆಂಕಿಯು ಬೂದಿಗೈಯುವಂತೆ ಜ್ಞಾನವು ಕರ್ಮಗಳೆಲ್ಲವನ್ನೂ ಬೂದಿಗೈಯುವದು" ಎಂದಿರುವದರಿಂದ ಕರ್ಮಗಳನ್ನು ಜ್ಞಾನವು ನೇರಾಗಿ ಸುಟ್ಟುಹಾಕುವದೆಂದೂ ಭಾವಿಸಬಾರದು. ಜ್ಞಾನಕ್ಕೆ ಭ್ರಾಂತಿರೂಪವಾದ ಅಜ್ಞಾನವನ್ನು ಕಳೆಯುವ ಶಕ್ತಿಯಿರುವದೇ ಹೊರತು ಯಾವ ವಸ್ತುವನ್ನೂ ಹೊಸದಾಗಿ ಸೃಷ್ಟಿಸುವ ಅಥವಾ ನಾಶಗೊಳಿಸುವ ಶಕ್ತಿಯಿರುವದಿಲ್ಲವೆಂಬುದು ನಮಗೆಲ್ಲರಿಗೂ ಅನುಭವದಲ್ಲಿ ಕಂಡುಬಂದಿದೆ. ಇದರಂತೆಯೇ ಆತ್ಮಜ್ಞಾನವು ಆತ್ಮನಲ್ಲಿ ಭ್ರಾಂತಿಯಿಂದ ಕಲ್ಪಿತವಾಗಿರುವ ಪಾಪಪುಣ್ಯಗಳನ್ನು—ಹಗ್ಗದಲ್ಲಿ ಕಲ್ಪಿತವಾಗಿದ್ದ ಹುಸಿಹಾವನ್ನು ಹಗ್ಗದ ಜ್ಞಾನವು ಹೋಗಲಾಡಿಸುವಂತೆ—ಅವು ಎಂದೆಂದಿಗೂ ಇರಲೇ ಇಲ್ಲ ಎಂಬ ತಿಳಿವಳಿಕೆಯನ್ನು ತಂದುಕೊಟ್ಟು ಕಳೆದುಹಾಕಿಬಿಡುತ್ತದೆ. ಕರ್ಮವನ್ನು ಜ್ಞಾನವು ಸುಟ್ಟುಹಾಕುತ್ತದೆ ಎಂದರೆ ಮತ್ತೆ ದೇಹವನ್ನು ಪಡೆದು ಅದರ ಅಭಿಮಾನದಿಂದ ಕರ್ಮಗಳನ್ನು ಮಾಡಿ

ಸುಖದುಃಖಗಳನ್ನು ಹೊಂದುವದಕ್ಕೆ ಅವಕಾಶವನ್ನು ಕೊಡುವದಿಲ್ಲ ಎಂದೇ ಅರ್ಥ.

ಹೀಗೆ ತತ್ತ್ವದರ್ಶಿಗಳಾದ ಗುರುಗಳಿಂದ ಪಡೆದುಕೊಂಡ ಆತ್ಮಜ್ಞಾನದಿಂದ ಮೋಹವು ಹೋಗುತ್ತದೆ, ಶೋಕವು ತೊಲಗುತ್ತದೆ. ಸಕಲಪುಣ್ಯಪಾಪಗಳಿಂದಲೂ ಬಿಡುಗಡೆಯಾಗಿ ಎಂದೆಂದಿಗೂ ಶುದ್ಧನಾಗಿ ಮುಕ್ತನಾಗಿರುವ ಪರಮಾತ್ಮನ ಸ್ವರೂಪದಲ್ಲಿಯೇ ಸೇರಿಹೋಗುವ ಪರಮಮುಕ್ತಿಯು ದೊರಕುತ್ತದೆ. ಆದ್ದರಿಂದ ಇಂಥ ಕಾರ್ಯಕಾರಿಯಾದ ತತ್ತ್ವಜ್ಞಾನವನ್ನು ಸಂಪಾದಿಸಿಕೊ—ಎಂದು ಭಗವಂತನು ಅರ್ಜುನನಿಗೆ ಉಪದೇಶಿಸಿರುತ್ತಾನೆ.

## ೩೩. ಜ್ಞಾನಕ್ಕೆ ಬೇಕಾದ ಶ್ರದ್ಧಾದಿಸಾಧನಗಳು ೪-(೩೭-೪೨)
## (೯.೨.೪೭)

ಜ್ಞಾನದಿಂದ ಮೋಹವು ಅಥವಾ ತಪ್ಪುತಿಳಿವಳಿಕೆಯು ಸಂಪೂರ್ಣವಾಗಿ ತೊಲಗಿಬಿಡುತ್ತದೆ ಎಂದು ಭಗವಂತನು ಹೇಳಿರುವದನ್ನು ನಾವು ಲಕ್ಷಿಸಬೇಕು. ಈಗಿನ ವೇದಾಂತಿಗಳು ಕೆಲವರು ಜ್ಞಾನದಿಂದ ಅವಿದ್ಯೆಯು ನಾಶವಾಗುವದಾದರೂ ಪ್ರಾರಬ್ಧಕರ್ಮದ ಶೇಷವಿರುವವರೆಗೂ ಅದರ ಫಲವನ್ನು ಅನುಭವಿಸುವದಕ್ಕೆ ತಕ್ಕಷ್ಟು ದ್ವೈತದರ್ಶನವೂ ಅದಕ್ಕೆ ಕಾರಣವಾಗಿರುವ ಅವಿದ್ಯೆಯೂ ಉಳಿದುಕೊಂಡಿರುವದೆಂದು ಹೇಳುತ್ತಾರೆ. ಆದರೆ ಜ್ಞಾನಿಗೂ ಒಂದಿಷ್ಟು ಅಜ್ಞಾನವು ಉಳಿದುಕೊಳ್ಳುವದೆಂಬುದು ಲೋಕಾನುಭವಕ್ಕೆ ವಿರುದ್ಧವಾಗಿರುತ್ತದೆ. ಜ್ಞಾನವು ಅಜ್ಞಾನವನ್ನು ಇಷ್ಟಿಷ್ಟಾಗಿ ನಾಶಗೊಳಿಸುವದೆಂಬುದರಲ್ಲಿ ಅರ್ಥವಿಲ್ಲ. ಅಜ್ಞಾನವೆಂಬುದು ಭ್ರಾಂತಿಯ ತಿಳಿವಳಿಕೆ; ಜ್ಞಾನವೆಂಬುದು ಸರಿಯಾದ ತಿಳಿವಳಿಕೆ. ಆದ್ದರಿಂದ ಜ್ಞಾನವು ಹುಟ್ಟುವಾಗ ಅಜ್ಞಾನವು ಒಂದಿಷ್ಟೂ ಉಳಿಯುವದಕ್ಕೆ ಅವಕಾಶವಿಲ್ಲ. ಅಜ್ಞಾನದಿಂದ ತೋರುವ ದ್ವೈತವು ಬಾಧಿತವಾಗದೆ ಇದ್ದರೆ, ಆತ್ಮನಾನಾತ್ವವೇ ತೋರುತ್ತಿದ್ದರೆ, ಜ್ಞಾನವು ಹುಟ್ಟಲಿಲ್ಲವೆಂಬುದು ಖಂಡಿತ. ಇದನ್ನು ನಾವು ಮರೆಯದಿರಬೇಕು.

ಹಾಗಾದರೆ ಜ್ಞಾನಿಗಳು ಜ್ಞಾನವುಂಟಾದ ಮೇಲೆ ವ್ಯವಹಾರವನ್ನು ಮಾಡುವದು ಹೇಗೆ? ದ್ವೈತವ್ಯವಹಾರಕ್ಕೆ ಅಜ್ಞಾನವು ಅವಶ್ಯವಲ್ಲವೆ?—ಎಂದು ಕೆಲವರು ಕೇಳುತ್ತಾರೆ. ಇದು ಸರಿಯಲ್ಲ. ದ್ವೈತವು ಸತ್ಯವೆಂಬ ಬುದ್ಧಿಯು ಅಜ್ಞಾನದ ಫಲವು, ಅದನ್ನು ನೋಡುವದೇನೂ ಅಜ್ಞಾನದ ಫಲವಲ್ಲ. ಕಪ್ಪೆಯಚಿಪ್ಪನ್ನು ನೋಡಿ ಅದು ನಿಜವಾಗಿ ಬೆಳ್ಳಿಯೆಂದು ಅರಿಯುವಾತನಿಗೆ ಭ್ರಾಂತಿಯುಂಟಾಗಿರುತ್ತದೆ. ಅದು

ಕಪ್ಪೆಯ ಚಿಪ್ಪೇ ಎಂಬ ತಿಳಿವಳಿಕೆ ಉಂಟಾದಮೇಲೂ ಅದು ಬೆಳ್ಳಿಯಂತೆ ತೋರಿದರೆ "ಛೆ! ಅದು ಬೆಳ್ಳಿಯಲ್ಲ, ಬರಿಯ ಕಪ್ಪೆಯ ಚಿಪ್ಪು" ಎಂದು ಜನರು ಅದರ ವಿಷಯಕ್ಕೆ ಉದಾಸೀನರಾಗುತ್ತಾರೆ. ಅಲ್ಲವೆ? ಇದರಂತೆ, ಲೋಕದಲ್ಲಿ ಬೇರೆ ಬೇರೆಯ ದೇಹಗಳಿಗೆ ಬೇರೆ ಬೇರೆಯ ಆತ್ಮರು ಇರುವಂತೆ ತೋರಿದ್ದು ಯಥಾರ್ಥ ವೆಂದು ನಂಬುವವರು ಅಜ್ಞರು. ಅವರಿಗೆ ಅಜ್ಞಾನವಿರುತ್ತದೆ. ಆದರೆ ನಮ್ಮೆಲ್ಲರಿಗೂ ವಾಸುದೇವಭಗವಂತನೇ ಆತ್ಮನು ಎಂಬ ನಿಶ್ಚಯವು ಉಂಟಾದ ಬಳಿಕವೂ ಆ ಆತ್ಮಭೇದವು ತೋರುತ್ತಿದ್ದರೆ ಅದು ಸತ್ಯವೆಂದೇನೂ ತಿಳಿದವರು ಎಣಿಸುವದಿಲ್ಲ. ಅಜ್ಞಾನವಿರುವವರೆಗೆ ಕಾಮಕ್ರೋಧಾದಿಗಳೂ ಅವುಗಳಿಂದ ಬೇರೆಬೇರೆಯ ಕರ್ಮಗಳೂ ಉಂಟಾಗುತ್ತಿರುವವು. ಆ ಕರ್ಮದಿಂದ ಫಲಗಳು ತಮಗೆ ಸತ್ಯವಾಗಿ ಆಗುವವೆಂದು ನಂಬಿ ಜನರು ಭ್ರಾಂತರಾಗುತ್ತಿರುವರು. ಅದೇ ಸಂಸಾರವು. ಆದರೆ ಜ್ಞಾನಿಗಳಿಗೂ ನಾನು, ನೀನು-ಮುಂತಾದ ಭೇದವು ಕಾಣುತ್ತಿದ್ದರೂ ಅದರಿಂದ ಅವರಿಗೆ ಯಾವ ಕಾಮಕ್ರೋಧಾದಿಗಳೂ ಕರ್ಮಗಳೂ ಉಂಟಾಗುವದಿಲ್ಲ. ಅವರು ಮಾಡುವ ಕರ್ಮಗಳು ಕರ್ಮಗಳಲ್ಲ, ಕರ್ಮಾಭಾಸಗಳು.

ಆದ್ದರಿಂದ ಜ್ಞಾನಿಗಳಲ್ಲಿ ಪರಮಾರ್ಥವಾಗಿ ಅಜ್ಞಾನವಾಗಲಿ ಅದರಿಂದಾದ ಕರ್ತೃತ್ವವಾಗಲಿ ಇರುವದಕ್ಕೆ ಅವಕಾಶವಿರುವದಿಲ್ಲ. ನೀರಿನ ಮೇಲೆ ಎಳೆದ ಗೆರೆಯಂತಿರುವ ಅಹಂತೆಯು ಜ್ಞಾನಿಗಳಲ್ಲಿರಬಹುದು ಎಂದು **ಶ್ರೀರಾಮಕೃಷ್ಣ ಪರಮಹಂಸರು** ಹೇಳಿರುತ್ತಾರೆ. ನಿಜವಾಗಿ ಅದು ಅಹಂತೆಯೇ ಅಲ್ಲವೆಂದು ಅದಕ್ಕೆ ಅರ್ಥ. ಜ್ಞಾನವುಂಟಾಯಿತು, ಜ್ಞಾನವು ಹೋಯಿತು-ಎಂಬ ವ್ಯವಹಾರವು ಕೂಡ ಅವರ ದೃಷ್ಟಿಯಿಂದ ಮಿಥ್ಯಾವ್ಯವಹಾರವೇ ಆಗಿರುತ್ತದೆ. ಹೀಗಿರುವಲ್ಲಿ ಅವರಲ್ಲಿ ರಾಗದ್ವೇಷಾದಿಗಳಾಗಲಿ ಅವುಗಳಿಂದಾಗುವ ಕರ್ಮಗಳಾಗಲಿ ಹೇಗೆ ಉಂಟಾದಾವು? ಅವರಲ್ಲಿ ತೋರುವ ಕಾಮವು ಕಾಮವಲ್ಲ, ಎಂದರೆ ಅಜ್ಞರನ್ನು ಗೋಳುಗುಟ್ಟಿಸುವಂತೆ ಅದು ಅವರನ್ನು ಗೋಳುಗುಟ್ಟಿಸುವದಿಲ್ಲ. ಪರಮಾತ್ಮನು ಸೃಷ್ಟಿಮಾಡಬೇಕೆಂದು ಕಾಮಿಸಿದರೂ ಅವನಿಗೆ ಆ ಕಾಮವು ಬಂಧಕವಾಗುವದಿಲ್ಲ; ಸೃಷ್ಟ್ಯಾದಿಕರ್ಮಗಳನ್ನು ಮಾಡಿದರೂ ಆ ಕರ್ಮಗಳೂ ಬಂಧಕವಾಗುವದಿಲ್ಲ. ಏಕೆಂದರೆ ಆತನು ಸ್ವತಂತ್ರ ನಾಗಿರುತ್ತಾನೆ, ತಾನೊಬ್ಬ ವ್ಯಕ್ತಿಯಾಗಿ ನಿಂತು ಯಾರ ಕರ್ಮವನ್ನೂ ತನಗಾಗಿ ಅವನು ಮಾಡಿಕೊಳ್ಳುವದಿಲ್ಲ. ಇದರಂತೆ ಜ್ಞಾನಿಗಳು ಲೋಕಸಂಗ್ರಹಕ್ಕಾಗಿ ಮಾಡುವ ವ್ಯವಹಾರವೂ ಅವರಿಗೆ ಬಂಧಕವಾಗುವದಿಲ್ಲ. ಆದ್ದರಿಂದ ಜ್ಞಾನಿಗಳಿಗೆ ಅವಿದ್ಯಾ ಕಾಮಕರ್ಮಗಳು ಒಂದಿಷ್ಟೂ ನಿಜವಾಗಿರುವದಿಲ್ಲವೆಂದು ತಿಳಿಯಬೇಕು. ಶ್ರೀರಾಮ ಚಂದ್ರನು ರಕ್ಕಸರನ್ನು ಕೊಲ್ಲುವದಕ್ಕೆ ಹೊರಟಾಗ ಅವರ ಮೇಲೆ ಎಷ್ಟೋ

ಕೋಪವನ್ನು ತೋರಿದನೆಂದು ರಾಮಾಯಣದಲ್ಲಿ ಕಾಣುತ್ತದೆ; ಆದರೆ ಧರ್ಮವನ್ನು ರಕ್ಷಿಸುವದಕ್ಕಾಗಿ ಉಪಯೋಗಿಸಿದ ಆ ಕೋಪವು ವಿನಾಕಾರಣವಾಗಿ ಯಾವಾಗ ಲಾದರೂ ತೋರಿಕೊಂಡದ್ದೇ ಇಲ್ಲ. ಮಿತ್ರರಲ್ಲಿಯೂ ಶತ್ರುಗಳಲ್ಲಿಯೂ ರಾಗದ್ವೇಷ ಗಳುಂಟಾಗುವಾಗ ಅಜ್ಞರನ್ನು ಆ ಭಾವಗಳು ಎಷ್ಟು ಗೋಳುಗುಟ್ಟಿಸುತ್ತವೆ! ಭಗವಂತನನ್ನಾಗಲಿ ಜ್ಞಾನಿಗಳನ್ನಾಗಲಿ ಅಂತಃಕರಣದಲ್ಲುಂಟಾಗುವ ವಿಧವಿಧವಾದ ಭಾವಗಳು ಹಾಗೆ ಎಂದಿಗೂ ಗೋಳುಗುಟ್ಟಿಸುವದಿಲ್ಲ. ಜ್ಞಾನವು ಅವರ ಅಜ್ಞಾನವನ್ನೂ ಕರ್ಮಗಳನ್ನೂ ಸುಟ್ಟುಹಾಕಿಬಿಟ್ಟಿರುವದೇ ಇದಕ್ಕೆ ಕಾರಣ. ಬೆಂಕಿಯು ಸ್ವಲ್ಪಸ್ವಲ್ಪವಾಗಿ ಕಟ್ಟಿಗೆಯನ್ನು ಸುಡುವಂತೆ ಜ್ಞಾನವು ಅಜ್ಞಾನಾದಿಗಳನ್ನು ಸುಡುವದಿಲ್ಲ; ಅವುಗಳು ಅಪರಮಾರ್ಥವೆಂಬುದನ್ನು ತಿಳಿಸಿಕೊಟ್ಟು ಅವುಗಳು ನಿರ್ಬೀಜವಾಗುವಂತೆ ಮಾಡಿ ಬಿಡುತ್ತದೆ.

ಜ್ಞಾನವು ಒಂದು ಬಗೆಯ ಉತ್ತಮಪ್ರಾಯಶ್ಚಿತ್ತವು. ಪ್ರಾಯಶ್ಚಿತ್ತ ಕರ್ಮಗಳಿಂದ ಹಿಂದೆ ಮಾಡಿದ ಪಾಪವು ಮಾತ್ರ ಹೋಗುತ್ತದೆ. ಮುಂದೆ ಪಾಪವನ್ನು ಮಾಡುವ ಸಂಭವವನ್ನು ಅವು ಕಳೆಯಲಾರವು. ಆನೆಯು ನೀರಿನಲ್ಲಿ ಮುಳುಗಿದ ಮೇಲೂ ಮೈಮೇಲೆ ಕೆಸರನ್ನು ಎರಚಿಕೊಳ್ಳುವಂತೆ ಅಜ್ಞಾನಿಗಳು ಎಷ್ಟೋ ಪಾಪವನ್ನು ಮಾಡಿ ಪ್ರಾಯಶ್ಚಿತ್ತದಿಂದ ಶುದ್ಧಿಯನ್ನು ಪಡೆದುಕೊಂಡ ಬಳಿಕವೂ ಮತ್ತೆ ಪಾಪವನ್ನು ಮಾಡುತ್ತಲೇ ಇರುವರು. ಆದರೆ ಜ್ಞಾನದಿಂದ ಅಜ್ಞಾನವನ್ನು ಕಳೆದುಕೊಂಡವರ ಪರಿ ಹೀಗಲ್ಲ. ಅವರಿಗೆ ಪಾಪಪುಣ್ಯಗಳೆರಡರಿಂದ ಆಗುವ ಅಂಟೂ ಇಲ್ಲವಾಗುತ್ತದೆ; ಜನನಮರಣಗಳ ಕಲ್ಮಷವೆಲ್ಲ ತೊಳೆದುಹೋಗುತ್ತದೆ. ಇದಕ್ಕಿಂತ ಪವಿತ್ರತರವಾದ ಪ್ರಾಯಶ್ಚಿತ್ತವು ಎಂದಿಗೂ ಸಿಕ್ಕುವದಿಲ್ಲ; ಏಕೆಂದರೆ ಒಂದು ಸಲ ಜ್ಞಾನದಿಂದ ಕರ್ಮದ ಸಂಪರ್ಕವನ್ನು ತೊಳೆದುಕೊಂಡರೆ ಮತ್ತೆ ಅವರಿಗೆ ಎಂದಿಗೂ ಕರ್ಮದ ಸಂಬಂಧವು ಇರುವದೇ ಇಲ್ಲ. ಇಂಥ ಜ್ಞಾನವು ಕರ್ಮಯೋಗದಿಂದ ಚಿತ್ತಶುದ್ಧಿಯ ಮೂಲಕವಾಗಿ ದೊರಕುವದೆಂದು ಹೇಳುವದಕ್ಕಾಗಿ ಭಗವಂತನು ಕರ್ಮಯೋಗವನ್ನು ಅರ್ಜುನನಿಗೆ ಬೋಧಿಸಿರುತ್ತಾನೆ. ಕರ್ಮಯೋಗದಿಂದ ಆಗುವ ಪರಮಫಲವು ಏನೆಂಬುದು ಜ್ಞಾನದ ದೃಷ್ಟಿಯಿಂದ ನೋಡಿದಾಗ ಮಾತ್ರವೇ ಸ್ಪಷ್ಟವಾಗುವದು. ಜ್ಞಾನದಿಂದಲೇ ಪರಮಶಾಂತಿಗೆಕಾರಣವಾದ ಮೋಕ್ಷವು ದೊರಕತಕ್ಕದ್ದು; ಆ ಜ್ಞಾನಕ್ಕಾಗಿಯೇ ನಾವು ಕರ್ಮಯೋಗವನ್ನು ಮಾಡತಕ್ಕದ್ದು.

ಜ್ಞಾನವು ದೊರಕುವದಕ್ಕೆ ದೊಡ್ಡವರನ್ನು ನಮಸ್ಕರಿಸುವದು, ಸೇವಿಸುವದು, ಸಮಯವರಿತು ಪ್ರಶ್ನೆಮಾಡುವದು-ಮುಂತಾದವು ಉಪಾಯಗಳೆಂದು ಮೇಲೆ ಹೇಳಿರುತ್ತದೆಯಷ್ಟೆ. ಆದ' ಈ ಪ್ರಣಿಪಾತಾದಿಗಳು ಹೊರಗಿನ ಸಾಧನಗಳಾದ್ದರಿಂದ

ನಿಯತವಾಗಿ ಫಲವು ಆಗಿಯೇ ತೀರುವದೆಂದು ಹೇಳುವದಕ್ಕೆ ಬರುವದಿಲ್ಲ. ಮಾಯಾವಿಯಾದವನು ನಟನೆಗಾಗಿಯೂ ನಮಸ್ಕಾರಾದಿಗಳನ್ನು ಮಾಡಬಹುದು. ಆದರೆ ಅಂತರಂಗವಾಗಿರುವ ಸಾಧನಗಳು ಬೇರೆ ಇವೆ; ಅವು ಇದ್ದರೆ ಅವಶ್ಯವಾಗಿ ಜ್ಞಾನವು ದೊರಕಿಯೇ ತೀರುತ್ತದೆ. ಮೊದಲನೆಯದಾಗಿ ಶ್ರದ್ಧೆಯಿರಬೇಕು. ಇದು ಶಾಸ್ತ್ರಸಮ್ಮತವಾದದ್ದು, ಭಗವಂತನ ವಾಣಿ-ಎಂಬ ಶ್ರದ್ಧೆಯು ಗೀತಾರ್ಥವನ್ನು ನಿಶ್ಚಯಿಸುವದಕ್ಕೆ ಉತ್ತಮಸಾಧನವು. ಶ್ರದ್ಧೆಯಿಂದ ಕೂಡಿ ಗುರುಗಳನ್ನು ಸೇರಿ ತತ್ತ್ವವನ್ನು ತಿಳಿದುಕೊಳ್ಳುವದಕ್ಕೆ ಹಾತುವರಿಯುತ್ತಿರುವದು ಎರಡನೆಯ ಉಪಾಯವು. ಶ್ರದ್ಧಾವಂತನಾಗಿಯೂ ಇರಬಹುದು, ಜ್ಞಾನಪ್ರಾಪ್ತಿಗೆ ಬೇಕಾದ ಸಾಧನವನ್ನು ಅನುಷ್ಠಾನಮಾಡುವದರಲ್ಲಿ ತತ್ಪರನೂ ಆಗಿರಬಹುದು; ಆದರೆ ಇಂದ್ರಿಯಗಳನ್ನು ವಶದಲ್ಲಿಟ್ಟುಕೊಳ್ಳದೆ ಇದ್ದರೆ ಎಂದಿಗೂ ಜ್ಞಾನವು ದಕ್ಕಲಾರದು. ಆದ್ದರಿಂದ ಶ್ರದ್ಧೆಯೇ ಮುಂತಾದ ಈ ಮೂರು ಸಾಧನಗಳನ್ನು ಮೊದಲು ಸಂಪಾದಿಸಿಕೊಳ್ಳಬೇಕು.

ಇವು ಮೂರರಲ್ಲಿ ಶ್ರದ್ಧೆಯೇ ಮೂಲಸಾಧನವು. ಯಾವನು ಅಜ್ಞನಾಗಿದ್ದು ಕೊಂಡು ಗುರುವಾಕ್ಯದಲ್ಲಿಯೂ ಶಾಸ್ತ್ರವಾಕ್ಯದಲ್ಲಿಯೂ ಶ್ರದ್ಧೆಯಿಲ್ಲದೆ ಸಂಶಯ ಚಿತ್ತನಾಗಿರುವನೋ ಅವನಿಗೆ ಜ್ಞಾನವು ದೊರಕಲಾರದು. ಇವು ಮೂರರಲ್ಲಿ ಸಂಶಯವು ತೀರ ಕೆಟ್ಟದ್ದು. ಸಂಶಯಾತ್ಮನಾದವನಿಗೆ ಈ ಲೋಕದ ಸುಖವೇ ಇರುವಹಾಗಿಲ್ಲ; ಇನ್ನು ಪರಲೋಕದ ಸುಖವು ಹೇಗೆ ಸಿಕ್ಕಬೇಕು? ಯಾವನಿಗೆ ಜ್ಞಾನದಿಂದ ಸಕಲಸಂಶಯಗಳೂ ಹೋಗಿರುವವೋ ಅವನು ಆ ಜ್ಞಾನಯೋಗದಿಂದ ಎಲ್ಲಾ ಕರ್ಮಗಳನ್ನೂ ಸಂನ್ಯಾಸಮಾಡಿ ಎಚ್ಚರಿಕೆಯಿಂದಿರುವನು. ಅಂಥವನನ್ನು ಎಂದಿಗೂ ಕರ್ಮಗಳು ಬಂಧಿಸುವಹಾಗಿಲ್ಲ. ಆದ್ದರಿಂದ ಭಗವಂತನು ಅರ್ಜುನನಿಗೆ ಉಪದೇಶಮಾಡಿದ್ದರ ಫಲಿತಾಂಶವು ಏನಾಯಿತೆಂದರೆ ಕರ್ಮಯೋಗದಿಂದ ಚಿತ್ತಶುದ್ಧಿ ಯಾಗುತ್ತದೆ, ಅದರಿಂದ ಉಂಟಾಗುವ ಜ್ಞಾನದಿಂದ ಎಲ್ಲಾ ಸಂಶಯಗಳೂ ಕತ್ತರಿಸಿ ಹೋಗುತ್ತವೆ, ಎಲ್ಲಾ ಕರ್ಮಗಳೂ ಸುಟ್ಟು ಬೂದಿಯಾಗುತ್ತವೆ! ಆದರೆ ಇಂಥ ಜ್ಞಾನಕ್ಕೆ ಸಾಧನವಾದ ಈ ಕರ್ಮಯೋಗವನ್ನು ಮಾಡುವದರಲ್ಲಿ ಶ್ರದ್ಧೆಯಿಲ್ಲದೆ ಸಂಶಯಚಿತ್ತನಾಗಿರುವವನು ಇಹಪರಸುಖಗಳನ್ನು ಕಳೆದುಕೊಂಡು ಹಾಳಾಗುವನು. ಆದ್ದರಿಂದ ವಿವೇಕಿಯಾದವನೂ ಜ್ಞಾನವನ್ನು ಪಡೆದು ಪುರುಷಾರ್ಥವನ್ನು ದೊರಕಿಸಿ ಕೊಳ್ಳಬೇಕೆಂದು ಹವಣಿಸುವವನೂ ಶ್ರದ್ಧೆಯಿಂದ ಕರ್ಮಯೋಗಕ್ಕೆ ಕೈಹಾಕಬೇಕು.

# ೩೪. ಅಜ್ಞಾನಿಗೆ ಕರ್ಮವು ಉತ್ತಮವೊ, ಸಂನ್ಯಾಸವು ಉತ್ತಮವೊ? ೫-(೧-೩)

(೧೬.೨.೪೭)

"ಜ್ಞಾನದಿಂದ ಎಲ್ಲಾ ಕರ್ಮಗಳೂ ಸುಟ್ಟುಹೋಗುತ್ತವೆ, ಎಲ್ಲಾ ಸಂಶಯಗಳೂ ಸಂಪೂರ್ಣವಾಗಿ ನಾಶವಾಗುತ್ತವೆ. ಆದ್ದರಿಂದ ಜ್ಞಾನಸಾಧನೆಯಲ್ಲಿಯೂ ಗುರುಶಾಸ್ತ್ರಗಳ ಉಪದೇಶದಲ್ಲಿಯೂ ಸಂಶಯವಿರಬಾರದು. ಆದ್ದರಿಂದ ಎಲೈ ಧನಂಜಯನೆ, ಈ ಜ್ಞಾನಕ್ಕಾಗಿ ನೀನು ಕರ್ಮಯೋಗವನ್ನು ಅನುಷ್ಠಾನಮಾಡು" ಎಂದು ಭಗವಂತನು ತನ್ನ ಉಪದೇಶದ ಕೊನೆಯಲ್ಲಿ ಹೇಳಿರುತ್ತಾನೆ. ಮೊಟ್ಟಮೊದಲು 'ಜ್ಞಾನಿಯು ಯಾವ ಕರ್ಮವನ್ನೂ ಮಾಡುವದಿಲ್ಲ, ಅವನು ಸರ್ವಕರ್ಮಸಂನ್ಯಾಸವನ್ನು ಮಾಡಿರುತ್ತಾನೆ' ಎಂದು ಹೇಳಿರುತ್ತಾನೆ. ಇದನ್ನು ಕೇಳಿ ಅರ್ಜುನನಿಗೆ ಸಂಶಯವುಂಟಾಗಿ ಈ ಪ್ರಶ್ನೆಯನ್ನು ಮಾಡಿದನು. "ಶ್ರೀ ಕೃಷ್ಣನೆ, ಕರ್ಮಗಳನ್ನು ಬಿಡುವದನ್ನೂ ಹೊಗಳುತ್ತೀಯೆ, ಅವುಗಳನ್ನು ಮಾಡುವದನ್ನೂ ಹೊಗಳುತ್ತೀಯೆ. ಆದರೆ ಇವೆರಡರಲ್ಲಿ ಯಾವದು ಉತ್ತಮ? ಇದನ್ನು ಇಂಥದ್ದೇ ಸರಿ ಎಂದು ನಿಶ್ಚಯಿಸಿ ಹೇಳಿಬಿಡು!"

ಕರ್ಮವನ್ನು ಮಾಡುವದು, ಬಿಡುವದು-ಎಂದರೆ ಗುದ್ದಲಿಯಿಂದ ಅಗೆಯುವದು, ಇಲ್ಲದಿದ್ದರೆ ಅಗೆಯದೆ ಇರುವದು-ಎಂದೇನೂ ಗೀತಾಶಾಸ್ತ್ರದ ಅಭಿಪ್ರಾಯವಲ್ಲ. ಎಷ್ಟೋ ಜನರು ಕೆಲಸವನ್ನು ಮಾಡುತ್ತಾರೆ; ಆದರೆ ಯಾವ ಫಲವೂ ಅದರಿಂದ ಆಗಿರುವದಿಲ್ಲ. ಉದಾಹರಣೆಗೆ ಒಂದು ಹಗ್ಗವನ್ನು ಈ ಕಡೆಗೆ ಎಷ್ಟು ಬಲವಾಗಿ ಒಬ್ಬನು ಎಳೆಯುತ್ತಾನೋ ಅಷ್ಟೇ ಬಲವಾಗಿ ಮತ್ತೊಬ್ಬನು ಇದಕ್ಕೆ ವಿರುದ್ಧವಾದ ದಿಕ್ಕಿಗೆ ಎಳೆಯುತ್ತಿದ್ದರೆ, ಎರಡೂ ಶ್ರಮಮಾತ್ರದಲ್ಲಿ ಪರ್ಯವಸಾನವಾಗುವದೇ ಹೊರತು ಮತ್ತೆ ಯಾವ ಫಲವೂ ಆಗುವದಿಲ್ಲ. ಆ ಹಗ್ಗವು ಒಂದು ಅಂಗುಲದಷ್ಟು ಕೂಡ ಇತ್ತಲಾಗಿ ಅಥವಾ ಅತ್ತಲಾಗಿ ಕದಲುವದಿಲ್ಲ. ಇನ್ನು ಕೆಲವರು ಸುಮ್ಮನಿದ್ದರೂ ಕೆಲಸವನ್ನು ಮಾಡಿದಂತೆ ಆಗುತ್ತದೆ. ಕೆರೆಯು ಒಡೆದುಕೊಂಡಾಗ ಕಾವಲುಗಾರನು ಅದನ್ನು ಕಂಡೂ ಕಂಡೂ ಸುಮ್ಮನೆ ಇದ್ದರೆ ಅಪರಾಧವಾಗುವದಿಲ್ಲವೆ? ಆದ್ದರಿಂದ ಕರ್ಮವನ್ನು ಮಾಡಿದರೂ ಫಲವಿಲ್ಲದೆ ಇರುವದರಿಂದ ನಿಜವಾದ ಕರ್ಮವಲ್ಲದೆ ಹೋಗಬಹುದು; ಕರ್ಮವನ್ನು ಬಿಟ್ಟರೂ ಒಂದಾನೊಂದು ಫಲವಾದ್ದರಿಂದ ಅದೂ ಕರ್ಮವೆನಿಸಬಹುದು. ಭಗವಂತನು ಹೇಳಿದ ಕರ್ಮಸಂನ್ಯಾಸವೆಂದರೆ ಸುಮ್ಮನೆ ಕರ್ಮಗಳನ್ನು ಬಿಡುವದಲ್ಲ, ಜ್ಞಾನದಿಂದ ತಾನು ಅಕರ್ತೃವೆಂದು ತಿಳಿದುಕೊಳ್ಳುವದು.

ಇದರಂತೆ ಕರ್ಮವನ್ನು ಮಾಡುವದೆಂದರೆ ಯಾವದಾದರೊಂದು ಕರ್ಮವನ್ನು ಹೇಗಾದರೂ ಒಂದು ರೀತಿಯಲ್ಲಿ ಮಾಡಿಬಿಡುವದಲ್ಲ, ಶಾಸ್ತ್ರೋಕ್ತಕರ್ಮವನ್ನು ಸಂಗವಿಲ್ಲದೆ ಫಲೇಚ್ಛೆಯಿಲ್ಲದೆ ಮಾಡುವದು. ಆದರೆ ಈ ಮರ್ಮವನ್ನು ತಿಳಿಯದೆ ಅರ್ಜುನನು ಕರ್ತೃತ್ವಬುದ್ಧಿಯಿರುವ ಅಜ್ಞರು "ಕರ್ಮವನ್ನು ಮಾಡುವದು ಲೇಸೊ, ಕರ್ಮವನ್ನು ಬಿಡುವದು ಲೇಸೊ?" ಎಂದು ಪ್ರಶ್ನೆಮಾಡಿರುತ್ತಾನೆ.

ಈಗ ಇದಕ್ಕೆ ಭಗವಂತನು ಹೇಳಿರುವ ಉತ್ತರವನ್ನು ಪರಿಶೀಲಿಸೋಣ:

**ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।**

**ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ॥** (೫-೨)

"ಸಂನ್ಯಾಸ, ಕರ್ಮಯೋಗ-ಈ ಎರಡೂ ಮೋಕ್ಷಕ್ಕೆ ಕಾರಣವಾಗಿರುತ್ತವೆ; ಆದರೆ ಅವೆರಡರಲ್ಲಿ ಕರ್ಮಸಂನ್ಯಾಸಕ್ಕಿಂತ ಕರ್ಮವನ್ನು ಮಾಡುವದೇ ಮೇಲೆನಿಸುತ್ತದೆ". ಈ ಉತ್ತರದಲ್ಲಿ ಸಂನ್ಯಾಸವೆಂದರೆ ಅಕರ್ತೃಜ್ಞಾನದ ಸಂನ್ಯಾಸವಲ್ಲ; ಕರ್ತೃತ್ವ ಬುದ್ಧಿಯಿರುವಾಗ ಮುಮುಕ್ಷುವಾದವನು ಗೃಹಸ್ಥಾಶ್ರಮದ ಕರ್ಮಗಳನ್ನು ಬಿಟ್ಟು ನಾಲ್ಕನೆಯ ಆಶ್ರಮವಾದ ಸಂನ್ಯಾಸವನ್ನು ತೆಗೆದುಕೊಳ್ಳುವದು. ಅರ್ಜುನನು ತಿಳಿದುಕೊಂಡಿರುವ ಸಂನ್ಯಾಸವು ಇದೇ ಆಗಿರುತ್ತದೆ. "ಗೃಹಸ್ಥನಾಗಿ ಆ ಆಶ್ರಮದ ಕರ್ಮಗಳನ್ನು ಮಾಡುತ್ತಿರುವದು ಮೋಕ್ಷಕ್ಕೆ ಕಾರಣವೊ, ಅಥವಾ ಆ ಕರ್ಮಗಳನ್ನೆಲ್ಲ ತ್ಯಜಿಸಿ ಸಂನ್ಯಾಸವನ್ನು ಸ್ವೀಕರಿಸಿ ಪರಮಾತ್ಮಚಿಂತನೆಯನ್ನು ಮಾಡುತ್ತಿರುವದು ಹೆಚ್ಚಿನ ಸಾಧನವೊ?" ಎಂಬುದು ಅವನ ಪ್ರಶ್ನೆ. ಭಗವಂತನು ಇದಕ್ಕೆ ಹೇಳಿರುವ ಉತ್ತರವೇನೆಂದರೆ, ಕರ್ಮವನ್ನು ಮಾಡುತ್ತಿರುವದು, ಕರ್ಮವನ್ನು ಸಂನ್ಯಾಸ ಮಾಡುವದು-ಈ ಎರಡೂ ಮೋಕ್ಷಕ್ಕೆ ಕಾರಣವೇ; ಆದರೆ ಈ ಎರಡರೊಳಗೆ ಕರ್ಮಯೋಗದಲ್ಲಿ ಒಂದು ವಿಶೇಷವಿದೆ. ಶ್ರೀ ವಿವೇಕಾನಂದಸ್ವಾಮಿಗಳವರು ತಮ್ಮ ಕರ್ಮಯೋಗದಲ್ಲಿ ಹೇಳಿರುವ ಒಂದು ಕಥೆಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಒಬ್ಬ ರಾಜನು ತನ್ನ ಆಸ್ಥಾನಕ್ಕೆ ಬಂದವರನ್ನೆಲ್ಲ ಈ ಪ್ರಶ್ನೆಯನ್ನು ಕೇಳುತ್ತಿದ್ದನಂತೆ. "ಗೃಹಸ್ಥನಾಗಿರುವದು ಮೇಲೊ, ಸಂನ್ಯಾಸಿಯಾಗಿರುವದು ಮೇಲೊ?" ಯಾರೂ ಅವನಿಗೆ ಚಿತ್ತಸಮರ್ಪಕವಾದ ಉತ್ತರವನ್ನು ಕೊಡಲಾರದೆ ಇದ್ದರು. ಕೊನೆಗೆ ಒಬ್ಬ ಸಂನ್ಯಾಸಿಯು "ಇದಕ್ಕೆ ಉತ್ತರವನ್ನು ಕೊಡಬೇಕಾದರೆ ನೀನು ನನ್ನೊಡನೆ ಕೆಲವು ದಿನಗಳಿರಬೇಕಾಗುವದು" ಎಂದನು. ಅರಸನು ಅದಕ್ಕೊಪ್ಪಿ ಆ ಯತಿಯೊಡನೆ ಒಂದು ದೇಶಕ್ಕೆ ಹೋದನು. ಆಗ ಅಲ್ಲಿ ಒಂದು ಸ್ವಯಂವರವು ನಡೆಯುತ್ತಿತ್ತು. ಆ ದೇಶದ ಅರಸನ ಮಗಳು ಕೈಯಲ್ಲಿ ಮಾಲಿಕೆಯನ್ನು ಹಿಡಿದು ಅತ್ತಿತ್ತ ನೋಡುತ್ತಾ ಬಂದು ಸಭೆಯಲ್ಲಿ ಕುತೂಹಲದಿಂದ ನೋಡುತ್ತಿದ್ದ ಒಬ್ಬ ತರುಣಸಂನ್ಯಾಸಿಯ

ಕೊರಳಲ್ಲಿ ಹಾರವನ್ನು ಹಾಕಿದಳು. ಆ ಸಂನ್ಯಾಸಿಯು "ಛೆ! ಸಂನ್ಯಾಸಿಯಾದ ನನಗೆ ಮದುವೆಯೆಂದರೇನು?" ಎಂದು ಮಾಲಿಕೆಯನ್ನು ಕಿತ್ತೆಸೆದು ಕೂಡಲೆ ಅಲ್ಲಿಂದ ಹೊರಟು ಓಡಿಬಿಟ್ಟನು! ರಾಜನೂ ಅವನ ಸಹಚಾರಿಯಾದ ಸಂನ್ಯಾಸಿಯೂ ಈ ನೋಟವನ್ನು ನೋಡಿದ ಬಳಿಕ ಒಂದು ಕಾಡನ್ನು ಹೊಕ್ಕರು. ಅಲ್ಲಿ ಅವರು ಛಳಿಯಿಂದ ನಡುಗುತ್ತಾ ಹಸಿವಿನಿಂದ ಬಳಲಿ ಪರಿಹಾರೋಪಾಯವನ್ನು ಕಾಣದೆ ಒಂದು ಮರದಕೆಳಗೆ ಸುಮ್ಮನೆ ಕುಳಿತುಕೊಂಡಿದ್ದರು. ಇಷ್ಟರಲ್ಲಿ ಆ ಮರದ ಮೇಲಿದ್ದ ಸಣ್ಣ ಹಕ್ಕಿಯೊಂದು ಅತಿಥಿಸತ್ಕಾರವನ್ನು ಮಾಡುವದು ತನ್ನ ಕರ್ತವ್ಯವೆಂದು ಭಾವಿಸಿಕೊಂಡು ಎಲ್ಲಿಗೋ ಹಾರಿಹೋಗಿ ತನ್ನ ಕೊಕ್ಕಿನಿಂದ ಒಂದು ಕೊಳ್ಳಿಯನ್ನು ತಂದು ಅವರ ಮುಂದೆ ಕೆಡವಿತು; ಅವರು ಅದಕ್ಕೆ ಕಟ್ಟಿಗೆಹಾಕಿ ಉರಿಮಾಡಿ ಕಾಯಿಸಿ ಕೊಳ್ಳುವಷ್ಟರಲ್ಲಿ ಅವರಿಗೆ ತಾನು ಆಹಾರವಾಗಬೇಕೆಂದು ಆ ಹಕ್ಕಿಯು ಉರಿಯೊಳಕ್ಕೆ ಬಿದ್ದುಬಿಟ್ಟಿತು. ಬಂದ ಅತಿಥಿಗಳಿಗೆ ಒಂದು ಹಕ್ಕಿಯು ಸಾಕಾಗಲಾರದೆಂದು ಆ ಹಕ್ಕಿಯ ಹೆಂಡತಿಯೂ ಮರಿಗಳೂ ಒಂದೊಂದಾಗಿ ಬೆಂಕಿಯಲ್ಲಿ ಬಿದ್ದುಬಿಟ್ಟವು! ಆಗ ಸಂನ್ಯಾಸಿಯು "ರಾಜನೆ, ಕಂಡೆಯ, ಯಾವ ಆಶ್ರಮವು ದೊಡ್ಡದೆಂಬುದನ್ನು? ಅವನವನ ಆಶ್ರಮವು ಅವನವನಿಗೆ ದೊಡ್ಡದು. ನೀನು ಗೃಹಸ್ಥನಾಗಿರಬೇಕೆಂದಿದ್ದರೆ ಈ ಹಕ್ಕಿಗಳಂತೆ ಇರು; ಸಂನ್ಯಾಸಿಯಾಗಬೇಕೆಂದಿದ್ದರೆ ಆ ತರುಣಸಂನ್ಯಾಸಿಯಂತೆ ಇರು" ಎಂದು ಹೇಳಿದನು.

ಈ ಕಥೆಯಿಂದ ತಿಳಿದುಬರುವದೇನು? ಗೃಹಸ್ಥನಾಗಿರುವದೂ ಮುಕ್ತಿಗೆ ಕಾರಣವಾಗಿರುತ್ತದೆ, ಸಂನ್ಯಾಸಿಯಾಗಿರುವದೂ ಮುಕ್ತಿಗೆ ಕಾರಣವಾಗಿರುತ್ತದೆ. ಗೃಹಸ್ಥನಾದವನು ತನ್ನ ಶರೀರವನ್ನು ಸರಿಯಾಗಿ ಕಾಪಾಡಿಕೊಂಡು, ಧರ್ಮದಿಂದ ಧನವನ್ನು ಸಂಪಾದಿಸಿ, ಉಳಿದ ಆಶ್ರಮದವರಿಗೂ ಆಶ್ರಯನಾಗಿರಬೇಕು. ಕೇವಲ ಸ್ವಾರ್ಥಕ್ಕಾಗಿ ಜೀವಿಸಬಾರದು. ಸಂನ್ಯಾಸಿಯಾದವನು ಎಲ್ಲಾ ಆಶೆಯನ್ನೂ ತೊರೆದು ಭಗವಚ್ಚಿಂತನೆಗೂ ಪರೋಪಕಾರಕ್ಕೂ ತನ್ನ ಶರೀರಾದಿಗಳನ್ನು ಮುಡುಪಾಗಿಟ್ಟು ಸವೆಯಿಸುತ್ತಿರಬೇಕು. ಸುಮ್ಮನೆ ಒಂದು ಆಶ್ರಮವನ್ನು ಬಿಟ್ಟು ಮತ್ತೊಂದು ಆಶ್ರಮಕ್ಕೆ ಹಾರಿದ ಮಾತ್ರದಿಂದ ಸಂನ್ಯಾಸವಾಗಲಾರದು. ಯಾವನು ವಿರಕ್ತನಾಗಿರುವನೋ, ಯಾವನಿಗೆ ಗೃಹಸ್ಥಾಶ್ರಮದ ಕರ್ಮಗಳ ಫಲದಲ್ಲಿ ಇಚ್ಛೆಯಿಲ್ಲವೋ, ಯಾವನಿಗೆ ಮೋಕ್ಷವೇ ತನಗೆ ಬೇಕೆಂಬ ಆಶೆಯು ಬಲವಾಗಿರುವದೋ ಅವನು ಮಾತ್ರ ಸಂನ್ಯಾಸವನ್ನು ತೆಗೆದುಕೊಳ್ಳಬೇಕು.

ಹಾಗಾದರೆ, ಮುಮುಕ್ಷುವಾದವನು ಸಂನ್ಯಾಸವನ್ನೇ ತೆಗೆದುಕೊಳ್ಳುವದೇ ಮೇಲೆಂದಾಯಿತಷ್ಟೆ?- ಎಂದು ಯಾರಾದರೂ ಕೇಳಬಹುದು. ಅದಕ್ಕೆ ಉತ್ತರವನ್ನು

ಒಂದೇ ಉಸಿರಿನಲ್ಲಿ ಹೇಳುವದಕ್ಕೆ ಆಗುವದಿಲ್ಲ. ಏಕೆಂದರೆ ಮುಮುಕ್ಷುವೂ ಆಗಿದ್ದು ಸಂನ್ಯಾಸಾಶ್ರಮದಲ್ಲಿ ಮಾಡಬೇಕಾದ ಧ್ಯಾನಯೋಗದ ಸಾಧನಗಳನ್ನೂ ಅನುಷ್ಠಾನ ಮಾಡಬಲ್ಲವನಾಗಿದ್ದರೆ ಅವಶ್ಯವಾಗಿ ಕರ್ಮಸಂನ್ಯಾಸವನ್ನು ಮಾಡಬೇಕು. ಅಂಥವನನ್ನು ಗೃಹಸ್ಥನಾಗಿರಬೇಕೆಂದು ಬಲಾತ್ಕರಿಸುವದು ಯಾರಿಂದಲೂ ಆಗಲಾರದು. ಆದರೆ ಯಾವನಿಗೆ ಸಂನ್ಯಾಸಾಶ್ರಮದ ಧರ್ಮಗಳನ್ನು ಕಾಪಾಡಿಕೊಂಡು ಬರುವ ಕೆಚ್ಚಿದೆ ಯಿಲ್ಲವೋ ಅಂಥ ಮುಮುಕ್ಷುವು ಗೃಹಸ್ಥನಾಗಿದ್ದುಕೊಂಡು ಕರ್ಮಯೋಗವನ್ನು ಮಾಡುತ್ತಿರುವದೇ ಮೇಲು. ಈ ದೃಷ್ಟಿಯಿಂದಲೇ ಭಗವಂತನು ಕರ್ಮಯೋಗಿಯನ್ನು ಇಲ್ಲಿ ಹೊಗಳುವದಕ್ಕೆ ಪ್ರಾರಂಭಿಸಿರುತ್ತಾನೆ; "ಈ ಎರಡರಲ್ಲಿ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವೇ ಮೇಲು" ಎಂದು ಹೇಳಿರುತ್ತಾನೆ.

ಸಂನ್ಯಾಸಾಶ್ರಮದ ಯೋಗಸಾಧನವೇ ಮುಂತಾದ ಧರ್ಮಗಳನ್ನು ಆಚರಣೆ ಮಾಡಲಾರದೆ ಇರುವ ಸಂನ್ಯಾಸಿಗಿಂತ ಕರ್ಮಯೋಗವನ್ನು ಮಾಡುತ್ತಿರುವ ಗೃಹಸ್ಥನೇ ಮೇಲೆಂಬುದು ಹೇಗೆ? ಎಂದರೆ, ಅದಕ್ಕೆ ಭಗವಂತನ ಉತ್ತರವಿದು:

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಙ್ಕ್ಷತಿ ।**
**ನಿರ್ದ್ವನ್ದ್ವೋ ಹಿ ಮಹಾಬಾಹೋ ಸುಖಂ ಬನ್ಧಾತ್ ಪ್ರಮುಚ್ಯತೇ ॥**(೫.೩)

ಯಾವನು ಯಾವದನ್ನೂ ಹಗೆಮಾಡುವದಿಲ್ಲವೋ ಯಾವದನ್ನೂ ಬಯಸು ವದಿಲ್ಲವೋ ಅವನು ನಿತ್ಯಸಂನ್ಯಾಸಿಯೆನಿಸುವನು. ಗೃಹಸ್ಥನಾಗಿದ್ದರೂ ಚಿಂತೆಯಿಲ್ಲ; ಯಾವದನ್ನೂ ಬೇಡವೆನ್ನದೆ ಯಾವದೊಂದನ್ನೂ ಬೇಕೆನ್ನದೆ ಕರ್ಮಸಂಗವನ್ನೂ ಫಲವನ್ನೂ ಬಿಟ್ಟು ಕರ್ಮವನ್ನು ಮಾಡುತ್ತಿರುವ ಕರ್ಮಯೋಗಿಯೂ ಈ ಕಾರಣದಿಂದ ಸಂನ್ಯಾಸಿಯೇ ಆಗಿರುತ್ತಾನೆ. ಅವನು ಮುಖ್ಯ ಸಂನ್ಯಾಸವನ್ನು ಮಾಡದೆ ಇರಬಹುದು; ಆದರೆ ಕರ್ಮದಲ್ಲಿ ಆಸಕ್ತಿಯನ್ನು ಬಿಟ್ಟು, 'ಇದು ನನ್ನ ಕರ್ಮ' ಎಂಬ ಭಾವನೆಯಿಲ್ಲ ದವನಾಗಿರುವದರಿಂದ, ಅದರಿಂದಾಗುವ ಫಲವು ಅವನಿಗೆ ಅಂಟುವಹಾಗಿರುವದಿಲ್ಲ. ಅವನ ಮನಸ್ಸು ಬೇಕುಬೇಡಗಳೆಂಬ ದ್ವಂದ್ವಗಳಿಂದ, ಏರುಪೇರನ್ನು ಪಡೆಯದೆ ಇರುವದರಿಂದ ಅವನು ಸಾಮಾನ್ಯಸಂನ್ಯಾಸಿಗಿಂತಲೂ ಸುಲಭವಾಗಿಯೇ ಮುಕ್ತಿಯನ್ನು ಪಡೆಯುತ್ತಾನೆ-ಎಂಬುದು ಭಗವಂತನ ಅಭಿಪ್ರಾಯವು.

ಕರ್ಮಯೋಗಿಯು ತನ್ನ ಕರ್ಮಗಳಿಗೆಲ್ಲ ಭಗವಂತನ ಸಂಬಂಧವನ್ನು ಕಲ್ಪಿಸಿಕೊಳ್ಳುವದರಿಂದ ಅವನಿಗೆ ಸಂನ್ಯಾಸದಿಂದಾಗುವ ಪ್ರಯೋಜನವು ನಿರಾಯಾಸ ವಾಗಿ ದಕ್ಕಿಬಿಡುತ್ತದೆ. ಬರಿಯ ಕರ್ಮದಿಂದ ಬಂಧವಾಗುವದಿಲ್ಲ, ರಾಗದ್ವೇಷಗಳೇ ನಮ್ಮನ್ನು ಸಂಸಾರಬಂಧಕ್ಕೆ ಗುರಿಪಡಿಸುವವು ಎಂಬುದನ್ನು—ಇಲ್ಲಿ ಲಕ್ಷಿಸಬೇಕು.

## ೩೫. ಸಾಂಖ್ಯಯೋಗಗಳೆರಡಕ್ಕೂ ಗುರಿ ಒಂದೇ ೫-(೪-೯)
(೨೩.೨.೪೭)

ಭಗವಂತನು ಕರ್ಮಯೋಗವೆಂಬ ಸಾಧನದಿಂದ ಸರ್ವಕರ್ಮಸಂನ್ಯಾಸ ರೂಪವಾದ ಜ್ಞಾನನಿಷ್ಠೆಯು ಬರುವದೆಂದು ಹೇಳಿರುತ್ತಾನೆ. ಈ ಗುಟ್ಟನ್ನು ತಿಳಿಯದೆ ಕರ್ಮವನ್ನು ಬಿಡುವದೇ ಕರ್ಮಸಂನ್ಯಾಸವು ಎಂದು ಭಾವಿಸಿಕೊಂಡು ಅರ್ಜುನನು "ಕರ್ಮವನ್ನು ಮಾಡುವದು, ಕರ್ಮಸಂನ್ಯಾಸ-ಈ ಎರಡರಲ್ಲಿ ಯಾವದು ನನಗೆ ಒಳ್ಳೆಯದು?" ಎಂದು ಪ್ರಶ್ನೆಮಾಡಿದ್ದಾನೆ. ಭಗವಂತನ ಅಭಿಪ್ರಾಯದಲ್ಲಿ ಆತ್ಮಜ್ಞಾನಿ ಗಳಲ್ಲದವರು ಅವರ ಮನಸ್ಸಿನ ಅಂತಸ್ತಿಗೆ ಅನುಗುಣವಾಗಿ ಕರ್ಮಯೋಗವನ್ನಾದರೂ ಕರ್ಮಸಂನ್ಯಾಸವನ್ನಾದರೂ ಮಾಡಬಹುದು. ಆದರೆ ಯಾರಿಗೆ ಸಂನ್ಯಾಸಾಶ್ರಮ ದಲ್ಲಿದ್ದುಕೊಂಡು ಯೋಗಾಭ್ಯಾಸವೇ ಮುಂತಾದದ್ದನ್ನು ಮಾಡುವ ಯೋಗ್ಯತೆಯಿಲ್ಲವೋ ಅವರು ಕರ್ಮಯೋಗವನ್ನು ಮಾಡುವದೇ ಶ್ರೇಯಸ್ಕರವಾದದ್ದು. ಇವಿಷ್ಟೂ ಕರ್ತೃತ್ವಬುದ್ಧಿಯುಳ್ಳವರ ದೃಷ್ಟಿಯಿಂದ ಆಡಿದ ಮಾತು. ಆದರೆ ಜ್ಞಾನಿಗಳ ದೃಷ್ಟಿಯಿಂದ ನೋಡಿದರೆ? ಉಳಿದವರ ದೃಷ್ಟಿಯಿಂದ ಕರ್ಮವಾಗಿ ತೋರುವದು ಅವರ ದೃಷ್ಟಿಯಿಂದ ಅಕರ್ಮವೇ ಆಗಿರುತ್ತದೆ. ಕನಸಿನ ದೃಷ್ಟಿಯಿಂದ ರಾಜನೆನಿಸಿಕೊಂಡವನು ಎಚ್ಚರದ ದೃಷ್ಟಿಯಿಂದ ಹೇಗೆ ರಾಜನಲ್ಲವೋ ಹಾಗೆಯೇ ಇದು. ಈ ದೃಷ್ಟಿಯಲ್ಲಿ ನೋಡಿದರೆ ಸರ್ವಕರ್ಮಸಂನ್ಯಾಸವೆಂಬುದು ಜ್ಞಾನಿಗೆ ಮಾತ್ರವೇ ದಕ್ಕತಕ್ಕದ್ದು. ಉಳಿದವರು ಯಾರೇ ಆಗಲಿ, ಯಾವದಾದರೊಂದು ಕರ್ಮವನ್ನು ಮಾಡುತ್ತಲೇ ಇರುತ್ತಾರೆ.

ಆದರೂ ಪ್ರಕೃತದಲ್ಲಿ ಅರ್ಜುನನಿಗೆ ಕರ್ಮಯೋಗವು ಮೇಲು ಎಂಬುದನ್ನು ತಿಳಿಸುವದಕ್ಕಾಗಿ ಭಗವಂತನು ಯಾವನು ಕರ್ಮದಲ್ಲಿಯೂ ಫಲದಲ್ಲಿಯೂ ರಾಗದ್ವೇಷಗಳಿಲ್ಲದವನೋ ಅವನು ನಿತ್ಯಸಂನ್ಯಾಸಿಯು; ಏಕೆಂದರೆ ಅವನು ಸುಲಭವಾಗಿ ಮುಕ್ತಿಯನ್ನು ಪಡೆಯುತ್ತಾನೆ-ಎಂದು ಕರ್ಮಯೋಗವನ್ನು ಹೊಗಳಿರುತ್ತಾನೆ. ಯಾವ ಯಾವದು ಮಾಡತಕ್ಕದ್ದೆಂದು ಶಾಸ್ತ್ರದಲ್ಲಿ ವಿಹಿತವಾಗಿರುವದೋ ಅದನ್ನು ಹೊಗಳುವದು ಪದ್ಧತಿ. ಇದರಂತೆ ಇಲ್ಲಿ ಮಾಡತಕ್ಕದ್ದೆಂದು ಪ್ರಕೃತವಾಗಿರುವ ಕರ್ಮಯೋಗವನ್ನು ಭಗವಂತನು ಹೊಗಳುತ್ತಿದ್ದಾನೆ, ಇದನ್ನರಿಯದೆ "ಕರ್ಮಯೋಗೋ ವಿಶಿಷ್ಯತೇ" ಎಂದಿರುವದರಿಂದ ಕರ್ಮಯೋಗವೇ ಸಂನ್ಯಾಸಕ್ಕಿಂತ ಮೇಲೆಂದು ಹೇಳಿದಂತೆ ಆಯಿತು-ಎಂದು ಕೆಲವರು ಈ ಗೀತಾವಾಕ್ಯಕ್ಕೆ ಅಪಾರ್ಥವನ್ನು ಮಾಡಿರುತ್ತಾರೆ. ಜ್ಞಾನಾಂಗವಾಗಿ ಸಕಲಶ್ರುತಿಸ್ಮೃತಿಗಳಲ್ಲಿಯೂ ವಿಧಿಸಿರುವ ಸಂನ್ಯಾಸವನ್ನು ಕಡಿಮೆ

ಯೆಂದು ಹೇಳುವುದು ಎಂದಿಗೂ ಭಗವಂತನ ಉದ್ದೇಶವಾಗಿರಲಾರದೆಂದು ನಿಷ್ಪಕ್ಷಪಾತವಾಗಿ ವಿಚಾರಮಾಡುವ ಯಾರಿಗಾದರೂ ಹೊಳೆದೇ ತೀರಬೇಕು. ಆದರೆ ನಾವು ಇಲ್ಲಿ ಬರಿಯ ಸಂಭಾವನಾಯುಕ್ತಿಯಿಂದ ತೃಪ್ತರಾಗಿರಬೇಕಾದದ್ದಿಲ್ಲ. ಏಕೆಂದರೆ ಕರ್ಮಯೋಗದಲ್ಲಿರುವ ವಿಶೇಷವೇನೆಂದು ಹೇಳುವ ಪ್ರಕೃತಸಂದರ್ಭ ದಲ್ಲಿಯೇ ಕರ್ಮಯೋಗ ಕರ್ಮಸಂನ್ಯಾಸಗಳ ಸಂಬಂಧವೇನೆಂಬುದನ್ನೂಭಗವಂತನು ತಾನೇ ಬಾಯಿಬಿಟ್ಟು ಸ್ಪಷ್ಟಪಡಿಸಿರುತ್ತಾನೆ.

ಹೇಗೆಂದರೆ:

**ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದನ್ತಿ ನ ಪಣ್ಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿನ್ದತೇ ಫಲಮ್ ॥** (೫-೪)

ತಿಳಿಯದ ಜನರು ಸಾಂಖ್ಯಯೋಗಗಳೆರಡೂ ಬೇರೆಬೇರೆ ಎಂದು ಹೇಳುತ್ತಿರು ವರು. ಆದರೆ ನಿಜವೇನೆಂದರೆ ಇವುಗಳಲ್ಲಿ ಯಾವದೊಂದನ್ನು ಚೆನ್ನಾಗಿ ಅನುಷ್ಠಾನ ಮಾಡಿದರೂ ಈ ಎರಡರ ಫಲವಾದ ಮುಕ್ತಿಯನ್ನೇ ಪಡೆಯುತ್ತಾನೆ-ಎಂಬ ವಾಕ್ಯದಲ್ಲಿ ಭಗವಂತನು ಚೆನ್ನಾಗಿ ಅನುಷ್ಠಾನಮಾಡಿದ ಸಂನ್ಯಾಸದಿಂದ ಮುಕ್ತಿಯು ಅವಶ್ಯವಾಗಿ ದೊರೆಯುತ್ತದೆ; ಅದಾಗದಿದ್ದರೆ ಚೆನ್ನಾಗಿ ಅನುಷ್ಠಾನಮಾಡಿದ ಕರ್ಮ ಯೋಗದಿಂದಲೂ ಅದೇ ಫಲವನ್ನು ಪಡೆಯಬಹುದು ಎಂದು ಹೇಳಿರುತ್ತಾನೆ. ಇಷ್ಟೇ ಅಲ್ಲ. "ಸಾಂಖ್ಯರಿಗೆ ದೊರಕುವ ಸ್ಥಾನವು ಯಾವದೋ ಅದು ಯೋಗಿಗಳಿಗೂ ದೊರಕುತ್ತದೆ; ಆದ್ದರಿಂದ ಸಾಂಖ್ಯವೂ ಯೋಗವೂ ಒಂದೇ ಎಂದು ತಿಳಿದವನು ಸರಿಯಾಗಿ ತಿಳಿದವನು" ಎಂಬ ವಾಕ್ಯದಲ್ಲಿ ಸರ್ವಕರ್ಮಸಂನ್ಯಾಸವೇ ಹೆಚ್ಚೆಂದು ಸ್ಪಷ್ಟವಾಗಿ ಹೇಳಿದಂತೆ ಆಗಿದೆ. ಸಾಂಖ್ಯರಿಗೆ ದೊರಕುವ ಫಲವು ಯೋಗಿಗಳಿಗೂ ದೊರಕುತ್ತದೆ ಎಂಬಲ್ಲಿ ಯೋಗಿಗಳು ಕಡಿಮೆ ಎಂದು ಯಾರಾದರೂ ಶಂಕಿಸಬಹುದೆಂಬ ನಿರೀಕ್ಷಣೆ ತೋರುವದಿಲ್ಲವೆ? ಇದೆಲ್ಲದರ ಜೊತೆಗೆ ಮುಂದಿನ ಶ್ಲೋಕದಲ್ಲಿ ಹೇಳಿರು ವದನ್ನು ನೋಡಿರಿ:

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥** (೫-೬)

"ಆದರೆ ಸಂನ್ಯಾಸವನ್ನು ಯೋಗವಿಲ್ಲದೆ ಸಂಪಾದಿಸಿಕೊಳ್ಳುವದು ಕಷ್ಟ; ಯೋಗವಿದ್ದರೆ ಬೇಗನೆ ಬ್ರಹ್ಮವನ್ನು ಪಡೆಯುತ್ತಾನೆ." ಸಂನ್ಯಾಸವು ಸಾಧ್ಯವು, ಕರ್ಮಯೋಗವು ಅದಕ್ಕೆ ಸಾಧನವು-ಎಂದು ಇಲ್ಲಿ ಸ್ಪಷ್ಟವಾಗಿ ಹೇಳಿರುತ್ತದೆ. ಈ ಎಲ್ಲಾ ಕಾರಣಗಳಿಂದ ಕರ್ಮಯೋಗವು ಕರ್ಮಸಂನ್ಯಾಸಕ್ಕಿಂತ ಮೇಲೆಂದು ಹೇಳಿರು ವದು ನಿಜವಾದ ಸಂನ್ಯಾಸಕ್ಕೆ ಅನರ್ಹರಾಗಿರುವವರ ವಿಷಯವೆಂತಲೂ ಕರ್ಮ

ಯೋಗವು ಪರಂಪರೆಯಿಂದ ಮುಕ್ತಿಗೆ ಕಾರಣವಾದ್ದರಿಂದ ಕ್ರಮಕ್ರಮವಾಗಿ ಮೇಲಕ್ಕೆ ಹೋಗುವದಕ್ಕೆ ಅದೇ ಅಜ್ಞರಿಗೆ ಉತ್ತಮಸಾಧನವೆಂತಲೂ ತಿಳಿಸುವದಕ್ಕೆ-ಎಂದು ಸಿದ್ಧವಾಗುತ್ತದೆ. ಪಾಠಶಾಲೆಗಳಲ್ಲಿ ಹುಡುಗರಿಗೆ ಸಂಕ್ಷಿಪ್ತಗುಣಾಕಾರವನ್ನು ಹೇಳಿ ಕೊಡುತ್ತಾರೆ. ೩೨೧೬೮ನ್ನು ೩೨೧೬೮ ರಿಂದ ಮೂರು ಸಾಲಿನಲ್ಲಿ ಗುಣಿಸಿರಿ-ಎಂಬ ಪ್ರಶ್ನೆಯನ್ನು ಜಾಣರಾದ ಹುಡುಗರು ಬಹುಸುಲಭವಾಗಿ ಬಿಡಸಬಲ್ಲರು. ಮೊದಲು ೮ ರಿಂದ ಗುಣಿಸಿ ಆ ಉತ್ತರವನ್ನು ೨ ರಿಂದ ಗುಣಿಸಿ ದಶಕಸ್ಥಾನದಿಂದ ಮೊದಲುಮಾಡಿ ಬರೆದುಕೊಳ್ಳುವದು, ಆ ಉತ್ತರವನ್ನು ಮತ್ತೆ ೨ ರಿಂದ ಗುಣಿಸಿ ಸಹಸ್ರಸ್ಥಾನದಿಂದ ಮೊದಲುಮಾಡಿ ಬರೆದುಕೊಳ್ಳುವದು-ಹೀಗೆ ಮಾಡಿ ಒಟ್ಟು ಗೂಡಿಸಿದರೆ ಬೇಕಾದ ಉತ್ತರವು ಆಯಾಸವಿಲ್ಲದೆ ಬಂದುಬಿಡುತ್ತದೆ. ಆದರೆ ಈ ಜಾಣತನವಿಲ್ಲದವರು ಎಂದಿನಂತೆ ಐದು ಸಾಲಿನಲ್ಲಿ ಗುಣಿಸಿದರೂ ಉತ್ತರವು ಬಂದೇ ಬರುತ್ತದೆ. ಅಲ್ಲವೆ? ನೇರಾಗಿ ಕುಸ್ತಿಮಾಡಲು ಸಿದ್ಧರಾಗಿರದವರು ಗರಡಿಯ ಮನೆಯಲ್ಲಿ ಪಟ್ಟುಗಳನ್ನು ಕಲಿತು ಕ್ರಮಕ್ರಮವಾಗಿ ಕುಸ್ತಿ ಆಡುವದನ್ನು ಕಲಿತುಕೊಳ್ಳ ಬೇಕಾಗುತ್ತದೆ. ಇದರಂತೆಯೇ ಕರ್ಮಯೋಗವು ಕ್ರಮಕ್ರಮವಾಗಿ ಜ್ಞಾನವನ್ನು ಪಡೆದು ಸರ್ವಕರ್ಮಸಂನ್ಯಾಸವನ್ನು ಮಾಡುವ ಯೋಗ್ಯತೆಯನ್ನು ತಂದುಕೊಡು ವದು—ಎಂಬುದೇ ಭಗವಂತನ ಆಶಯವು.

ಅರ್ಜುನನು ಸಂನ್ಯಾಸ, ಕರ್ಮ-ಇವುಗಳನ್ನು ಮಾತ್ರ ಕೇಳಿದ್ದನು; ಆದರೆ ಭಗವಂತನು ಜ್ಞಾನಸಹಿತಸಂನ್ಯಾಸವಾದ ಸಾಂಖ್ಯವನ್ನೂ ಸಮತ್ವಬುದ್ಧಿ, ಈಶ್ವರಾರ್ಪಣ-ಮುಂತಾದವುಗಳಿಂದೊಡಗೂಡಿದ ಕರ್ಮಯೋಗವನ್ನೂ ಹೇಳಿರುತ್ತಾನೆ. ಸಾಂಖ್ಯ ಯೋಗಗಳನ್ನು ಕುರಿತೇ ಭಗವಂತನು ಹೇಳುತ್ತಿರುವದರಿಂದ ಈ ಮಾರ್ಪಾಡು ಸ್ವಾಭಾವಿಕವೇ ಆಗಿರುತ್ತದೆ. ಬರಿಯ ಸಂನ್ಯಾಸಕ್ಕಿಂತ ಕರ್ಮಾಚರಣೆಯೇ ಮೇಲು; ಆದರೆ ಕರ್ಮಯೋಗಕ್ಕಿಂತ ಜ್ಞಾನಯುಕ್ತಸಂನ್ಯಾಸವೇ ಮೇಲು-ಎಂಬುದು ಭಗವಂತನ ಒಟ್ಟು ಅಭಿಪ್ರಾಯವೆಂಬುದನ್ನು ನಾವು ನೆನಪಿನಲ್ಲಿಡಬೇಕು.

ಸಾಧಕನು ಕರ್ಮಯೋಗವನ್ನು ಅಭ್ಯಾಸಮಾಡುತ್ತಾ ಇದ್ದು ಸರ್ವಕರ್ಮ ಸಂನ್ಯಾಸದ ಮೆಟ್ಟಿಲನ್ನು ಹೇಗೆ ಪಡೆದುಕೊಳ್ಳುವನೆಂಬುದನ್ನು ನಾವು ಈಗಲೆ ಲಕ್ಷ್ಯದಲ್ಲಿಟ್ಟಿರುವದು ಒಳ್ಳೆಯದು. ಕರ್ಮಯೋಗದಿಂದ ಮೊದಲು ಚಿತ್ತಶುದ್ಧಿಯಾಗು ವದು, ಆಗ ದೇಹವೂ ಇಂದ್ರಿಯಗಳೂ ವಶವಾಗುವವು; ಬಳಿಕ ಸಾಧಕನು ಎಲ್ಲಾ ಪ್ರಾಣಿಗಳಿಗೂ ಆತ್ಮನಾಗಿರುವವನೇ ತನ್ನೊಳಗಿರುವ ಆತ್ಮನು ಎಂಬ ಅರಿವನ್ನು ಪಡೆದುಕೊಳ್ಳುವನು. ಇನ್ನು ಮುಂದೆ ಅವನು ಯಾವ ಕರ್ಮವನ್ನು ಮಾಡಿದರೂ ಲೋಕಸಂಗ್ರಹಕ್ಕಾಗಿಯೇ ಮಾಡುತ್ತಿರುವನು. ಅವನು ಲೋಕಸಂಗ್ರಹಕ್ಕಾಗಿ ಕರ್ಮವನ್ನು

ಮಾಡುತ್ತಿರುವನೆಂಬುದೂ ವ್ಯವಹಾರದೃಷ್ಟಿಯಿಂದ, ಅವನ ದೃಷ್ಟಿಯಿಂದಲಾದರೆ ಅವನು ಯಾವ ಕರ್ಮವನ್ನೂ ಮಾಡುತ್ತಿರುವದಿಲ್ಲ.

ಜ್ಞಾನಿಯು ಯಾವ ಕರ್ಮವನ್ನೂ ಮಾಡುತ್ತಿರುವದಿಲ್ಲವೆಂದರೆ ಹೇಗೆ? ಎಂದರೆ ಅದನ್ನು ತಿಳಿಯುವದಕ್ಕೆ ಸಾಧಾರಣವಾಗಿ ಜನರು ಹೇಗೆ ಕರ್ಮವನ್ನು ಮಾಡುತ್ತಿರುವರೆಂಬುದನ್ನು ಯೋಚಿಸಿರಿ. ಒಬ್ಬನಿಗೆ ಚಿತ್ರವಿದ್ಯೆಯ ಕೌಶಲವಿರುತ್ತದೆ ಎಂದು ಇಟ್ಟುಕೊಳ್ಳಿ. ಅವನಿಗೆ ಸೌಂದರ್ಯವನ್ನು ನೋಡುವ ಇಂದ್ರಿಯದ ಜಾಣ್ಮೆಯೂ ಚಿತ್ರವನ್ನು ಬರೆಯುವ ಹಸ್ತಕೌಶಲವೂ ಇರಬೇಕು. ಇದರಂತೆ ಸಂಗೀತ ಗಾರನಾದವನಿಗೆ ಶಬ್ದವನ್ನು ಕೇಳಿ, ಶಬ್ದಭೇದಗಳನ್ನು ವಿಂಗಡಿಸಿ ಅರಿತುಕೊಂಡು ನಾಲಗೆಯಿಂದ ಆಯಾ ಶಬ್ದವನ್ನು ಕಿವಿಗೆ ಇಂಪಾಗುವಂತೆ ಹಾಡುವ ಜಾಣ್ಮೆಯಿರ ಬೇಕಾಗುತ್ತದೆ. ಹೀಗೆ ಯಾವಯಾವನು ಯಾವಯಾವ ಇಂದ್ರಿಯದಿಂದ ಯಾವಯಾವ ಕೆಲಸವನ್ನು ಮಾಡುತ್ತಿರುವನೋ ಆ ಇಂದ್ರಿಯದ ಜಾಣ್ಮೆಯೂ ಆಯಾ ಕರ್ಮವು ತನ್ನದೆಂಬ ಅಭಿಮಾನವೂ ಅವನವನಿಗೆ ಇರಬೇಕಾಗುವದು. ಹೀಗೆಯೇ ಬಡಗಿ, ಕುಂಬಾರ, ಯಂತ್ರವನ್ನು ನಡೆಸುವವನು, ಜೂಜಿನಲ್ಲಿ ಗೆಲ್ಲುವವನು, ತೋಟಗಾರ- ಮುಂತಾದ ಕೆಲಸಗಳಲ್ಲಿಯೂ ತಿಳಿಯಬೇಕು. ನೋಡುವದು, ಕೇಳುವದು, ಮುಟ್ಟುವದು, ಮೂಸುವದು, ತಿನ್ನುವದು, ನಡೆಯುವದು, ಉಸಿರಾಡುವದು, ಮಾತಾಡುವದು, ಮಲಮೂತ್ರಾದಿಗಳನ್ನು ಬಿಡುವದು, ಆಯಾ ವಸ್ತುಗಳನ್ನು ತೆಗೆದುಕೊಳ್ಳುವದು, ಕಣ್ಣುಬಿಡುವದು, ಕಣ್ಣುಮಚ್ಚುವದು-ಮುಂತಾದ ಎಲ್ಲಾ ಕೆಲಸಗಳಲ್ಲಿಯೂ ಆಯಾ ಇಂದ್ರಿಯವು ತಾನು, ಅದರ ವ್ಯಾಪಾರವು ತನ್ನದು, ಅದರಿಂದಾಗುವ ಫಲವು ತನ್ನದು ಎಂಬ ಭ್ರಾಂತಿಯು ಇದ್ದ ಹೊರತು ಯಾವ ಕರ್ಮವನ್ನೂ ಯಾವನೂ ಮಾಡಲಾರನು. ದೇಹವಾಗಲಿ ಇಂದ್ರಿಯಗಳಾಗಲಿ ತಾನೆಂದು ತಿಳಿಯುವ ತಪ್ಪುತಿಳಿವಳಿಕೆಗೆ **ಅಧ್ಯಾಸ**ವೆಂದು ಹೆಸರು. "ನಾನು ಇಂಥ ಕರ್ಮವನ್ನು ಮಾಡುತ್ತೇನೆ, ಇಂಥ ಫಲವನ್ನು ಅನುಭವಿಸುತ್ತೇನೆ"ಎಂಬ ಕರ್ತೃತ್ವ ಭೋಕ್ತೃತ್ವಬುದ್ಧಿಗೆ ಈ ಅಧ್ಯಾಸವೇ ಮೂಲವು. ಜ್ಞಾನಿಯು ನಮ್ಮಂತೆ ಇಂದ್ರಿಯಾದಿ ಗಳಿಗೆ ತನ್ನನ್ನು ಸೇರಿಸಿಕೊಳ್ಳುವ ಅಧ್ಯಾಸವನ್ನು ಮಾಡಿಕೊಳ್ಳದೆ ಇರುತ್ತಾನೆ. ಅವನು "ಇಂದ್ರಿಯಗಳು ಇಂದ್ರಿಯಾರ್ಥಗಳಲ್ಲಿ ವರ್ತಿಸುತ್ತವೆ; ನನಗೆ ಇಂದ್ರಿಯಗಳಾಗಲಿ, ಇಂದ್ರಿಯಗಳ ವಿಷಯಗಳಾಗಲಿ ಸಂಬಂಧಿಸಿಲ್ಲ" ಎಂದು ನಿಶ್ಚಯವಾಗಿ ತಿಳಿದಿರುತ್ತಾನೆ. ಆದ್ದರಿಂದ ಅವನಿಗೆ ನಿಜವಾಗಿ ಯಾವ ಕರ್ಮಗಳೂ ಇರುವದಿಲ್ಲ.

ಯಾವನು ಇಂದ್ರಿಯಗಳೂ ದೇಹವೂ ತಾನೆಂಬ ಭ್ರಾಂತಿಯನ್ನು ಗೆದ್ದುಕೊಂಡಿರು ವನೋ ಅವನು ತನ್ನೆದುರಿಗೆ ಕಾಣುವ ವಿಷಯಗಳಲ್ಲಿ, ದೇಹಗಳಲ್ಲಿ ಅಥವಾ ಮತ್ತೆ

ಯಾವದಾದರೂ ತೋರಿಕೆಗಳಲ್ಲಿ ಇಲ್ಲದ ಸಲ್ಲದ ಧರ್ಮಗಳನ್ನು ಎಂದಿಗೂ ಕಲ್ಪಿಸುವದಿಲ್ಲ. ಒಬ್ಬ ಸಂನ್ಯಾಸಿಯು ದಾರಿಯಲ್ಲಿ ಹೋಗುತ್ತಿರುವಾಗ ಎದುರಿಗೆ ಬಂದ ಒಬ್ಬ ಪುರುಷನು, "ಸ್ವಾಮಿ, ಯಾವಳಾದರೂ ಒಬ್ಬ ಸುಂದರಿಯು ಇತ್ತ ಹೋದದ್ದನ್ನು ಕಂಡಿರಾ?" ಎಂದು ಕೇಳಲು "ನಾನು ಅಂಥ ಯಾರನ್ನೂ ಕಾಣಲಿಲ್ಲ; ಒಂದು ಎಲುಬಿನ ಪಂಜರವು ಇತ್ತಲಾಗಿ ಹೋದಂತೆ ಕಂಡಿತಪ್ಪ" ಎಂದನಂತೆ! ಒಂದೇ ವ್ಯಕ್ತಿಯಲ್ಲಿ ಬೇರೆಬೇರೆಯವರು ಅಭಿಮಾನದಿಂದ ಹೇಗೆ ಬೇರೆ ಬೇರೆಯ ಧರ್ಮವನ್ನು ಕಾಣುವರು, ನೋಡಿ! ಒಂದು ಹೆಣವನ್ನು ಕಾಮುಕನು ಕಂಡರೆ "ಎಂಥ ಸುಂದರಿ!" ಎನ್ನುತ್ತಾನೆ; ಒಂದು ನಾಯಿ ಕಂಡರೆ "ಇಲ್ಲಿರುವ ದೇಹದ ಮಾಂಸವು ಬಹಳ ಸವಿಯಾಗಿರಬೇಕು!" ಎನ್ನುವುದು; ಒಬ್ಬ ವಿರಕ್ತನು ಕಂಡರೆ "ಛೀ! ಇದು ಅಶುಚಿಯಾದದ್ದು!" ಎಂದು ಅತ್ತ ಸರಿಯುವನು. ಹೀಗೆ ಇಂದ್ರಿಯಾದಿಗಳಲ್ಲಿ ಆತ್ಮಬುದ್ಧಿಯಿರುವವರೆಗೆ ಅಭ್ಯಾಸಬಲದಿಂದ ವಸ್ತುಗಳು ಪ್ರಿಯವಾಗಿಯೂ ಅಪ್ರಿಯವಾಗಿಯೂ ತೋರುತ್ತಿರುವವು. ಆದರೆ ಯಾವನು ಇಂದ್ರಿಯಗಳಾಗಲಿ ವಿಷಯಗಳಾಗಲಿ ಪ್ರಕೃತಿಯ ಪರಿಣಾಮವಿಶೇಷಗಳೇ ಹೊರತು ಶುದ್ಧಾತ್ಮನಾದ ನನಗೆ ಸಂಬಂಧಪಟ್ಟಿರುವದಿಲ್ಲ ಎಂಬ ನಿಜವಾದ ತತ್ತ್ವವನ್ನು ಕಂಡುಕೊಂಡಿರುವನೋ ಅವನಿಗೆ ಇಂಥ ಬಯಲುಭ್ರಾಂತಿಗಳು ಎಂದಿಗೂ ಆಗುವದಿಲ್ಲ.

ಈ ರೀತಿಯಲ್ಲಿ ಕರ್ಮಯೋಗದಿಂದ ಉತ್ತಮಫಲವಾದ ಜ್ಞಾನವು ಉಂಟಾಗುವದರಿಂದ "ನೀನು ಕರ್ಮಯೋಗವನ್ನೇ ಮಾಡು" ಎಂದು ಭಗವಂತನು ಅರ್ಜುನನಿಗೆ ಉಪದೇಶಿಸಿರುತ್ತಾನೆ. ಕರ್ಮಯೋಗಿಯು ಈಶ್ವರನಿಗೆ ಎಲ್ಲಾ ಕರ್ಮಗಳನ್ನೂ ಸಮರ್ಪಿಸಿ, "ಈಶ್ವರನ ಸೇವಕನು ನಾನು, ಆತನ ಪ್ರೀತಿಗಾಗಿ ಈ ಕರ್ಮವನ್ನು ಮಾಡುತ್ತಿರುವೆನು" ಎಂದು ಯಾವ ಫಲದ ನಿರೀಕ್ಷಣೆಯೂ ಇಲ್ಲದೆ ಕರ್ಮವನ್ನು ಮಾಡುತ್ತಿರುವನು. ಅವನಿಗೆ ಯಾವ ಕಲಂಕವೂ ಹತ್ತುವದಿಲ್ಲ. ಒಂದು ಮನೆಯನ್ನು ನೋಡಿದಾಗ 'ಮನೆ' ಎಂಬ ಬುದ್ಧಿಯುಂಟಾಗಿ ಇನ್ನೊಂದನ್ನು ಕಂಡಾಗ 'ಇದು ನನ್ನ ಮನೆ' ಎಂಬ ಅಭಿಮಾನವಾಗುವದಲ್ಲ, ಅದೇ ಸಂಗವು. ಇಂಥ ಸಂಗದಿಂದಲೇ ಕರ್ಮವು ಜನ್ಮಕ್ಕೂ ಸಂಸಾರಬಂಧಕ್ಕೂ ಕಾರಣವಾಗಿರುವದು. ಕರ್ಮಯೋಗಿಗಳು ಮಾತ್ರ ಸಂಗವನ್ನು ಬಿಟ್ಟಿರುವದರಿಂದ, ನೀರಿನಲ್ಲಿ ಅದ್ದಿದ್ದರೂ ಒದ್ದೆಯಾಗದ ತಾವರೆಯೆಲೆಯಂತೆ, ಕರ್ಮವನ್ನು ಮಾಡಿದರೂ ಫಲದ ಲೇಪವಿಲ್ಲದೆ ಸುಖವಾಗಿರುವರು. ಇದೇ ಕರ್ಮಯೋಗದ ಹೆಚ್ಚುಗಾರಿಕೆಯು. ಆ ಯೋಗಕ್ಕೆ ಚಿತ್ತಶುದ್ಧಿ ಎಂಬ ಫಲವೊಂದಲ್ಲದೆ ಮತ್ತೆ ಯಾವ ಬಂಧಕವಾದ ಫಲವೂ ಉಂಟಾಗುವದೇ ಇಲ್ಲ.

## ೩೬. ಸರ್ವಕರ್ಮಸಂನ್ಯಾಸವೂ ಸಮದರ್ಶನವೂ ೫-(೧೦-೧೪)
(೨.೩.೪೭)

ಭಗವಂತನು ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವು ಹೆಚ್ಚಿನದು ಎಂದಿದ್ದಾನೆ. ಇದರ ಅಭಿಪ್ರಾಯವೇನೆಂಬುದನ್ನು ನಾವು ಸ್ಪಷ್ಟವಾಗಿ ತಿಳಿದುಕೊಂಡಿರಬೇಕು. ಅರ್ಜುನನು "ಇವೆರಡರಲ್ಲಿ ಯಾವದು ಉತ್ತಮವು?" ಎಂದು ಕೇಳಿರುತ್ತಾನೆ. ಸಾಧಕರು ಎರಡು ಅಂತಸ್ತಿನವರು ಇರುವದರಿಂದ ಅವರವರ ಅಂತಸ್ತಿಗೆ ತಕ್ಕಂತೆ ಕರ್ಮಸಂನ್ಯಾಸ, ಎಂದರೆ ಕರ್ಮಗಳನ್ನು ಬಿಟ್ಟು ಬಿಡುವುದು, ಮತ್ತು ಕರ್ಮಯೋಗ, ಕರ್ಮವನ್ನು ಫಲಾಶೆಯಿಲ್ಲದೆ ಮಾಡುವದು ಇವೆರಡೂ ಯುಕ್ತವಾದ ಸಾಧನಗಳಾಗಿರುತ್ತವೆ. ಆದರೆ ಯಾವನ ಮನಸ್ಸು ಅಶುದ್ಧವಾಗಿರುವದರಿಂದ ಪರಮಾರ್ಥ ತತ್ತ್ವವನ್ನು ತಿಳಿದುಕೊಳ್ಳಲು ಶಕ್ತವಾಗಿರುವದಿಲ್ಲವೋ ಅಂಥವನಿಗೆ ಕರ್ಮಯೋಗವೇ ಅನುಕೂಲವಾಗಿರುತ್ತದೆ.

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಙ್ಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಮ್ಭಸಾ ॥** (೫-೧೦)

ಯಾವನು ಸಕಲಕರ್ಮಗಳನ್ನೂ ಈಶ್ವರನಿಗೆ ಅರ್ಪಿಸಿ ಸಂಗವನ್ನು ಬಿಟ್ಟು ಮಾಡುತ್ತಿರುವನೋ ಅವನಿಗೆ, ತಾವರೆಯ ಎಲೆಗೆ ನೀರು ಅಂಟದಿರುವಂತೆ, ಪಾಪವು ಅಂಟುವದಿಲ್ಲ. ಯಾವನ ಅಂತಃಕರಣಕ್ಕೆ ತತ್ತ್ವವನ್ನು ತಿಳಿಯಲು ಶಕ್ತಿಯು ಸಾಲದಿರುವದೋ ಅದು ರಾಗದ್ವೇಷಾದಿಗಳಿಂದ ಕಲುಷಿತವಾಗಿರುತ್ತದೆ. ಆದ್ದರಿಂದ ತತ್ತ್ವದರ್ಶನಕ್ಕೆ ಬೇಕಾಗಿರುವದು ಅಂತಃಕರಣದಶುದ್ಧಿ. ಅದು ಶುದ್ಧವಾದರೆ ಕನ್ನಡಿಯಲ್ಲಿ ತನ್ನ ಮುಖವನ್ನು ತಾನೇ ನೋಡಿಕೊಳ್ಳುವಂತೆ ಸುಲಭವಾಗಿ ಆತ್ಮನನ್ನು ಕಂಡುಕೊಳ್ಳಬಹುದು. ಅಂತಃಕರಣಶುದ್ಧಿಗೆ ಕರ್ಮಯೋಗವೇ ಉಪಾಯ. ನೀರಿನಲ್ಲಿ ಬಿದ್ದು ಕೊಳೆಯುತ್ತಿರುವ ಗಂಧದ ಕೊರಡನ್ನು ತೇದರೆ ಮೇಲಿನ ಕೊಳೆಯು ಹೋಗಿ ಒಳಗೆ ಸಹಜವಾಗಿರುವ ಸುವಾಸನೆಯು ಹೊರಸೂಸುವಂತೆ ಕರ್ಮಯೋಗದಿಂದ ಶರೀರ, ಮನಸ್ಸು, ಬುದ್ಧಿ, ಇಂದ್ರಿಯ-ಇವುಗಳೆಲ್ಲವನ್ನೂ ಸಂಗರಹಿತವಾದ ಈಶ್ವರಾರ್ಪಣರೂಪವಾದ ಕರ್ಮದಿಂದ ತೇದರೆ ಆತ್ಮಶುದ್ಧಿ ಯಾಗುವದು; ಅದರಲ್ಲಿನ ಏಕಾಗ್ರತೆಯ ಪರಿಮಳವು ತೋರಿಕೊಳ್ಳುವದು; ಮುಂದೆ ತತ್ತ್ವದರ್ಶನವೂ ಸುಲಭವಾಗಿ ವಶವಾಗುವದು. ಕರ್ಮಯೋಗದಲ್ಲಿರುವ ಮುಖ್ಯವಾದ ಭಾಗವು ಯಾವದೆಂದರೆ ಈಶ್ವರನಲ್ಲಿಯೇ ಚಿತ್ತವಿಟ್ಟಿರುವದು. ಯಾವನು ತನ್ನ ಚಿತ್ತವನ್ನು ಈಶ್ವರನಲ್ಲಿಯೇ

ಇಟ್ಟು, "ಈಶ್ವರಪ್ರೀತ್ಯರ್ಥವಾಗಿ ಈ ಕರ್ಮವನ್ನು ಮಾಡುವೆನೇ ಹೊರತು ನನಗೆ ಇದರಿಂದ ಯಾವ ಫಲವೂ ಆಗಬೇಕಾದದ್ದಿರುವದಿಲ್ಲ" ಎಂದು ಮನಸ್ಸನ್ನು ಸಮಾಧಾನಸ್ಥಿತಿಯಲ್ಲಿಟ್ಟುಕೊಂಡಿರುವನೋ ಅವನು ಫಲವನ್ನು ಬಿಟ್ಟದ್ದರಿಂದ ಚಿತ್ತಶುದ್ಧಿ, ಜ್ಞಾನಪ್ರಾಪ್ತಿ, ಸರ್ವಕರ್ಮಸಂನ್ಯಾಸ, ಜ್ಞಾನನಿಷ್ಠೆ ಇವುಗಳನ್ನು ಕ್ರಮಕ್ರಮವಾಗಿ ಹೊಂದಿ ಮುಕ್ತನಾಗುತ್ತಾನೆ; ಆದರೆ ಯಾವನು ಫಲಾಸಕ್ತನಾಗಿಯೇ ಇರುವನೋ ಅವನು ಕಾಮದ ಪ್ರೇರಣೆಗೆ ಒಳಪಟ್ಟು ತನ್ನ ಇಚ್ಛೆಯಂತೆ ಕರ್ಮಗಳನ್ನು ಮಾಡಿ ಬದ್ಧನಾಗುತ್ತಾನೆ. ಆದ್ದರಿಂದ "ಅರ್ಜುನನೆ, ನೀನು ಈಶ್ವರನಲ್ಲಿ ಚಿತ್ತವನ್ನಿಟ್ಟ ಕರ್ಮಯೋಗಿಯಾಗು" ಎಂದು ಭಗವಂತನು ಉಪದೇಶಿಸಿರುತ್ತಾನೆ.

ಆದರೆ ಯಾವನು ಪರಮಾರ್ಥದರ್ಶಿಯೋ ಅವನು ಸರ್ವಕರ್ಮಸಂನ್ಯಾಸಕ್ಕೇ ತಕ್ಕವನು. ಅಂಥವನು ಸಕಲಕರ್ಮಗಳನ್ನೂ ಮನಸ್ಸಿನಿಂದ ಸಂನ್ಯಾಸಮಾಡಿರುತ್ತಾನೆ. 'ಮನಸ್ಸಿನಿಂದ ಸಂನ್ಯಾಸಮಾಡಿರುತ್ತಾನೆ' ಎಂದದ್ದರಿಂದ ಕಾಯಿಕವಾಚಿಕಕರ್ಮಗಳು ಅವನಿಗೆ ನಿಜವಾಗಿ ಉಂಟೆಂಬ ಅಭಿಪ್ರಾಯವನ್ನು ಕಲ್ಪಿಸಬಾರದು. ಶರೀರದಿಂದಾಗಲಿ ವಾಕ್ಕಿನಿಂದಲಾಗಲಿ ಮಾಡುವ ಕರ್ಮಗಳಿಗೆ ಮನಸ್ಸಿನ ಸಹಾಯವು ಅವಶ್ಯವಾಗಿ ಬೇಕಾಗುವದರಿಂದ ಸರ್ವಕರ್ಮಗಳನ್ನೂ ಅವನು ಸಂನ್ಯಾಸಮಾಡಿರುತ್ತಾನೆ ಎಂದೇ ಅರ್ಥ. ಹಿಂದೆಯೇ ಹೇಳಿರುವಂತೆ ಇಂಥ ತತ್ತ್ವಜ್ಞಾನಿಯು ಗೃಹಸ್ಥಾಶ್ರಮದಲ್ಲಿದ್ದರೂ ಮಿಕ್ಕವರಂತೆಯೇ ಕರ್ಮಗಳನ್ನು ಮಾಡುವಂತೆ ತೋರಿದರೂ ನಿಜವಾಗಿ ಅವನು ಯಾವ ಕರ್ಮವನ್ನೂ ಮಾಡುತ್ತಿರುವದಿಲ್ಲ; ಅವನಿಗೆ ಕ್ರಿಯೆ, ಕಾರಕ, ಫಲ-ಎಲ್ಲವೂ ಬ್ರಹ್ಮವೇ ಆಗಿರುತ್ತದೆ. ಮೂಢರಾದ ಜನರ ದೃಷ್ಟಿಯಿಂದ ಮನುಷ್ಯನು ಬದುಕಿರುವವರೆಗೂ ಕರ್ಮವನ್ನು ಮಾಡುತ್ತಲೇ ಇರಬೇಕಾಗಿದೆ. ಕಣ್ಣಿನಿಂದ ನೋಡುವದು, ಕಿವಿಯಿಂದ ಕೇಳುವದು, ಮೂಗಿನಿಂದ ಉಸಿರಾಡುವದು, ಬಾಯಿಯಿಂದ ಮಾತನಾಡುವದು- ಆಹಾರವನ್ನು ತೆಗೆದುಕೊಳ್ಳುವದು, ಇದರಂತೆ ಅಧೋದ್ವಾರಗಳಿಂದ ಮಲಮೂತ್ರಗಳನ್ನು ಬಿಡುವದು. ಈ ಶಾರೀರಕ್ರಿಯೆಗಳನ್ನಂತೂ ಯಾರಿಂದಲೂ ಬಿಡುವದಕ್ಕೆ ಆಗುವಹಾಗಿಲ್ಲ. ಆದರೆ ಜ್ಞಾನಿಗಳ ದೃಷ್ಟಿಯಿಂದ ನೋಡಿದರೆ ಶರೀರವಾಗಲಿ ಇಂದ್ರಿಯಗಳಾಗಲಿ ಆತ್ಮನಂತೆ ಸತ್ಯವಾದವುಗಳಲ್ಲ; ಆದ್ದರಿಂದ ಆ ದೃಷ್ಟಿಯಿಂದ ಜ್ಞಾನಿಯು ಬದುಕಿರುವಾಗಲೂ ಪರಮಾರ್ಥವಾಗಿ ಏನನ್ನೂ ಮಾಡುತ್ತಿರುವದಿಲ್ಲ, ಶರೀರೇಂದ್ರಿಯಗಳ ಮೂಲಕವಾಗಿ ಏನನ್ನೂ ಮಾಡುವದಿಲ್ಲವೆಂಬುದು ಹಾಗಿರಲಿ, ತನ್ನ ಸ್ವರೂಪದಿಂದಲೂ ಏನನ್ನೂ ಮಾಡುವದಿಲ್ಲ. ಏಕೆಂದರೆ ಎರಡನೆಯ ಅಧ್ಯಾಯದಲ್ಲಿ ಮೊದಲೇ ತಿಳಿಸಿರುವಂತೆ, ನಾಲ್ಕನೆಯ ಅಧ್ಯಾಯದಲ್ಲಿ ವಿಸ್ತರಿಸಿರುವಂತೆ, ಆತ್ಮನಲ್ಲಿ ಯಾವ ವಿಕಾರಗಳೂ ಇರುವದಿಲ್ಲವಾದ್ದರಿಂದ ಆತ್ಮನು ಸ್ವತಃ

ಯಾವದೊಂದು ಕ್ರಿಯೆಯನ್ನೂ ಮಾಡುವಂತಿಲ್ಲ. ಆದ್ದರಿಂದ ಆ ಆತ್ಮನೇ ತಾನೆಂದು ತಿಳಿದುಕೊಂಡಿರುವ ಜ್ಞಾನಿಯು ತನ್ನ ದೃಷ್ಟಿಯಿಂದ ಏನನ್ನೂ ಮಾಡುವದಿಲ್ಲ, ಮತ್ತೊಬ್ಬರಿಂದಲೂ ಏನನ್ನೂ ಮಾಡಿಸುವದೂ ಇಲ್ಲ. ಇದೇ ಪರಮಾರ್ಥವಾದ ಸಂನ್ಯಾಸವು; ಕಾಷಾಯವಸ್ತ್ರವನ್ನು ಧರಿಸಿ ಒಂದಾನೊಂದು ಬಗೆಯ ಯೋಗಾನು ಷ್ಠಾನವನ್ನು ಮಾಡುವ ಆಶ್ರಮಸಂನ್ಯಾಸವು ಕೂಡ ಇದಕ್ಕೆ ಹೋಲಿಸಿದರೆ ಗೌಣಸಂನ್ಯಾಸವಾಗುತ್ತದೆ; ಇನ್ನು ಕರ್ಮಯೋಗದಲ್ಲಿರುವ ಫಲತ್ಯಾಗರೂಪವಾದ ಸಂನ್ಯಾಸವನ್ನು ಇದಕ್ಕೆ ಹೋಲಿಸಿದರೆ ಗೌಣಸಂನ್ಯಾಸವಾಗುವದೆಂದು ಹೇಳುವದೇ ಅವಶ್ಯವಿಲ್ಲ. ಪರಮಾರ್ಥಸಂನ್ಯಾಸಿಯನ್ನು ವರ್ಣಿಸಿರುವ ಶ್ಲೋಕವನ್ನು ಇನ್ನೊಮ್ಮೆ ಪೂರ್ಣವಾಗಿ ವಿಮರ್ಶೆಮಾಡೋಣ:

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನಕಾರಯನ್ ॥** (೫-೧೩)

ಇಲ್ಲಿ ಜ್ಞಾನಿಯನ್ನು 'ವಶೀ' ಇಂದ್ರಿಯಗಳನ್ನು ವಶದಲ್ಲಿಟ್ಟುಕೊಂಡಿರುವವನು ಎಂದು ಕರೆದಿರುವದನ್ನು ಲಕ್ಷಿಸಬೇಕು. ಸಾಧಕನಾದ ಸಂನ್ಯಾಸಿಯು ಎಷ್ಟೇ ಪ್ರಯತ್ನ ಮಾಡಲಿ, ಇಂದ್ರಿಯಗಳು ಅವನಿಗೆ ಸಂಪೂರ್ಣವಾಗಿ ವಶಕ್ಕೆ ಬಂದಿರುವದಿಲ್ಲ. ಅವನ್ನು ಸ್ವಾಧೀನಕ್ಕೆ ತಂದುಕೊಳ್ಳುವ ಪ್ರಯತ್ನವನ್ನು ಮಾಡುತ್ತಿರುವದರಿಂದ ಆ ಸಾಧಕನಿಗೆ 'ಯತಿ' (ಯತ್ನವನ್ನು ಮಾಡುವವನು) ಎಂಬ ಹೆಸರು ಸಲ್ಲುತ್ತದೆ. ಆದರೆ ಜ್ಞಾನಿಯು ಇದಕ್ಕಾಗಿ ಯಾವ ಯತ್ನವನ್ನೂ ಮಾಡಬೇಕಾಗಿಲ್ಲ; ಅವನು ಕಾಮ ಕಾಮಿಯಲ್ಲ; ಅದರಿಂದ ಅವನಿಗೆ ಇಂದ್ರಿಯಗಳು ಪೂರ್ಣವಾಗಿ ವಶದಲ್ಲಿರುತ್ತವೆ. ಅದರಿಂದಲೇ ಅವನು ಎಲ್ಲಾ ಕರ್ಮಗಳನ್ನೂ ಮನಸ್ಸಿನಿಂದ ಸಂಪೂರ್ಣವಾಗಿ ಸಂನ್ಯಾಸಮಾಡಬಲ್ಲವನಾಗಿರುತ್ತಾನೆ.

ಆದ್ದರಿಂದಲೇ ಅವನು "ನವದ್ವಾರದ ಪುರವಾದ ದೇಹದಲ್ಲಿ ಏನನ್ನೂ ಮಾಡದೆ ಮಾಡಿಸದೆ ಸುಖವಾಗಿ ಕುಳಿತುಕೊಂಡಿರುತ್ತಾನೆ." ಹಿಂದಕ್ಕೆ ಪಾಳೆಯಗಾರರು ಒಂದೊಂದು 'ಪುರ'ವನ್ನು ಮಾಡಿಕೊಂಡು ಅದರಲ್ಲಿ ತಮಗೆ ಬೇಕಾದ ಸಂಭಾರವನ್ನೆಲ್ಲ ಕೂಡಿಹಾಕಿಕೊಂಡು ಶತ್ರುಗಳು ಬಂದಾಗ ಕೋಟೆಯ ಬಾಗಿಲುಗಳನ್ನೆಲ್ಲ ಮುಚ್ಚಿಸಿ ಕೊಂಡು ಒಳಗೆ ತಾವು ಯಾರ ಅಂಜಿಕೆಯೂ ಇಲ್ಲದೆ ಸ್ವಸ್ಥವಾಗಿ ಕುಳಿತುಕೊಂಡಿರು ತ್ತಿದ್ದರಂತೆ. ಇದರಂತೆ ಜ್ಞಾನಿಗೆ ಯಾವ ವಿಷಯರೂಪಶತ್ರುಗಳ ಅಂಜಿಕೆಯೂ ಇರುವದಿಲ್ಲ; ಅವನು ಒಂಬತ್ತು ಬಾಗಿಲುಗಳ ಪುರವಾದ ತನ್ನ ದೇಹದಲ್ಲಿ ಸ್ವಸ್ಥವಾಗಿ ಕುಳಿತಿರುತ್ತಾನೆ. ಸಾಮಾನ್ಯರಂತೆ ಅವನ ಮನಸ್ಸು ಹೆಂಡಿರು ಮಕ್ಕಳು, ಹೊಲಮನೆ,

ಹಣಕಾಸು-ಮುಂತಾದವುಗಳಲ್ಲಿ ಕುಳಿತಿರುವದಿಲ್ಲ. ಅದು ಆತ್ಮಸಂಸ್ಥವಾಗಿರುತ್ತದೆ. ಆದ್ದರಿಂದ ಅವನು ಯಾವ ಕ್ಷೋಭೆಯೂ ಇಲ್ಲದೆ 'ಸುಖಿ'ವಾಗಿರುತ್ತಾನೆ. ಯಾವ ವಿಷಯಗಳನ್ನೂ ದೊರಕಿಸಿಕೊಳ್ಳದ ಹೇಡಿಯಂತೆ ನಿರಾಶನಾಗಿ ಮನಸ್ಸಿನಲ್ಲಿ ತಳಮಳ ಗೊಳ್ಳುತ್ತಾ ಕೂತಿರುವದಿಲ್ಲ. "ತನ್ನೊಳಗೆ ಇರುವ ಪರಮಾತ್ಮತತ್ತ್ವವನ್ನು ಅರಿತವನು ಸರ್ವಕಾಮಗಳನ್ನೂ ಒಮ್ಮೆಗೇ ಅನುಭವಿಸುತ್ತಾನೆ-" ಎಂದು ಶ್ರುತಿಯು ಸಾರುತ್ತಿದೆ. ಆದ್ದರಿಂದ ನಿರತಿಶಯವಾದ ಆನಂದವನ್ನು ಅನುಭವಿಸುತ್ತಾ ಸುಖವಾಗಿರುತ್ತಾನೆ.

ಈ ಸುಖಕ್ಕಾಗಿ ಅವನು ಮಿಕ್ಕವರಂತೆ ಯಾವ ಕರ್ಮವನ್ನೂ ಮಾಡ ಬೇಕಾದದ್ದಿರುವದಿಲ್ಲ; ಯಾರೊಬ್ಬರಿಂದಲೂ ಯಾವ ಕರ್ಮವನ್ನೂ ಮಾಡಿಸ ಬೇಕಾದದ್ದೂ ಇರುವದಿಲ್ಲ. ಹೀಗೆಂದ ಮಾತ್ರದಿಂದ ಅವನು ಇಂದ್ರಿಯಗಳನ್ನೆಲ್ಲ ಕಟ್ಟಿಹಾಕಿ ತನ್ನೊಳಗೆ ಏನನ್ನೋ ಧ್ಯಾನಿಸುತ್ತಾ ಒಂದು ಮೂಲೆಯಲ್ಲಿ ಕುಳಿತಿರುವನೆಂದು ತಿಳಿಯಬಾರದು. ಅವನು ಸಕಲಕರ್ಮಗಳನ್ನೂ ಮಾಡುತ್ತಿದ್ದರೂ ಯಾವ ಕರ್ಮವನ್ನೂ ಮಾಡುತ್ತಿಲ್ಲ ಎಂಬ ಅಕರ್ಮದರ್ಶನವನ್ನು ಸಂಪಾದಿಸಿಕೊಂಡು ಸುಖವಾಗಿರುತ್ತಾನೆ. ಅವನ ದೃಷ್ಟಿಯಲ್ಲಿ ಕರ್ಮವೆಂಬುದು ತನಗೆ ಇಲ್ಲವೆಂಬುದಿಷ್ಟೇ ಅಲ್ಲ, ಯಾರೊಬ್ಬರಿಗೂ ನಿಜವಾಗಿ ಕರ್ಮವೆಂಬುದೇ ಇಲ್ಲ. ಅವನ ದೃಷ್ಟಿಯು ಹೇಗಿರುವದೆಂದರೆ:

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥** (೫-೧೪)

ಯಾರೊಬ್ಬರಿಗೂ ಕರ್ತೃತ್ವವಿಲ್ಲ. ಯಾರೊಬ್ಬರಿಗೂ ಮಾಡಬೇಕಾದ ಕರ್ಮವಿಲ್ಲ, ಯಾರೊಬ್ಬರಿಗೂ ಕರ್ಮದಿಂದ ಪಡೆಯಬೇಕಾದ ವಸ್ತುವಿರುವದಿಲ್ಲ. ಇಂಥ ಕರ್ಮ ವನ್ನು ಮಾಡಿದರೆ ಇಂಥ ಫಲವನ್ನು ಈಶ್ವರನು ಕೊಡುತ್ತಾನೆಂಬುದೇ ಸುಳ್ಳು. ಪುಣ್ಯಪಾಪಗಳನ್ನು ಮಾಡಿ ಒಳ್ಳೆಯ ಅಥವಾ ಕೆಟ್ಟ ಫಲವನ್ನು ಹೊಂದುತ್ತಾರೆಂದು ವ್ಯವಹಾರದಲ್ಲಿ ನಾವು ಭಾವಿಸುವದು ಕೂಡ ಅಜ್ಞಾನದಿಂದಾದ ಮೋಹದಿಂದಲೇ ಕ್ರಿಯಾಕಾರಕಫಲವ್ಯವಹಾರವು ಸತ್ಯವಾಗಿ ತೋರುತ್ತಿರುವದು. ಒಂದು ಹಳ್ಳಿಯಲ್ಲಿ ಮೊಟ್ಟ ಮೊದಲನೆಯ ಸಲಕ್ಕೆ ನಾಟಕಪ್ರದರ್ಶನವಾಯಿತು. ಅದರಲ್ಲಿ ಕೀಚಕನ ವೇಷವನ್ನು ಧರಿಸಿದವನು, ದ್ರೌಪದಿಯನ್ನು ಕೀಚಕನು ಕಾಮಮೋಹಿತನಾಗಿ ಅಡ್ಡ ಗಟ್ಟುತ್ತಿದ್ದದ್ದನ್ನು ಚೆನ್ನಾಗಿ ಅಭಿನಯಿಸಿ ತೋರಿಸುತ್ತಿದ್ದನು. ಆ ಕಾಲಕ್ಕೆ ನೋಟಕರೊಳಗೆ ಒಬ್ಬ ಸಾಧ್ವಿಯು "ಅಯ್ಯೋ! ಹೀಗಾದರೇನು ಗತಿ! ಆ ಬಡಪ್ರಾಣಿಯು ಇತ್ತಲೂ ಹೋಗುವದಕ್ಕೆ ಬಿಡುವದಿಲ್ಲ. ಅತ್ತಲೂ ಬಿಡುವದಿಲ್ಲವಲ್ಲ! ಈಗ ಆಕೆ ಏನು ಮಾಡಬೇಕು?" ಎಂದು ಗಟ್ಟಿಯಾಗಿ ಕೂಗಿ ತನ್ನ ಅಸಮಾಧಾನವನ್ನು ವ್ಯಕ್ತಪಡಿಸಿದಳು.

ಇದು ನಾಟಕ ಎಂಬುದನ್ನು ಮರೆತು ನಿಜವಾಗಿಯೂ ಒಬ್ಬ ಸಾಧ್ವೀಮಣಿಯನ್ನು ಈ ತುಂಟನು ಗೋಳುಗುಟ್ಟಿಸುತ್ತಿದ್ದಾನೆ ಎಂಬ ಭಾವನೆಯು ಆಕೆಗೆ ಬಂದುಬಿಟ್ಟಿತು. ಇದರಂತೆಯೇ ಅಜ್ಞರಾದವರು ತೋರಿಕೆಯ ದೃಶ್ಯಗಳನ್ನೇ ಪರಮಾರ್ಥವೆಂದು ನಂಬಿ ಭ್ರಾಂತಿಯಿಂದ ಇಷ್ಟಪ್ರಾಪ್ತಿಗೂ ಅನಿಷ್ಟನಿವೃತ್ತಿಗೂ ಕರ್ಮವನ್ನು ಮಾಡುವದು ಅವಶ್ಯವೆಂದು ಬಗೆಯುತ್ತಾರೆ. ಮೇಲೆ ಹೇಳಿರುವ ನಾಟಕದಲ್ಲಿ ಮಿಕ್ಕ ನೋಟಕರಿಗೆ ನಾಟಕದ ಕೀಚಕನ ಅಭಿನಯವು ಕಂಡಿತಾದರೂ "ಇದು ಬರಿಯ ಅಭಿನಯವೇ; ಇವನು ನಿಜವಾದ ಕೀಚಕನಲ್ಲ, ಈಕೆಯು ದ್ರೌಪದಿಯೂ ಅಲ್ಲ" ಎಂಬ ಅರಿವು ಇತ್ತು. ಆದ್ದರಿಂದಲೇ ಅವರು ಆ ಮಹಿಳೆಯಂತೆ ಭ್ರಾಂತರಾಗಲಿಲ್ಲ. ಕೀಚಕನ ಮತ್ತು ದ್ರೌಪದಿಯ ವೇಷವನ್ನು ಧರಿಸಿದ್ದವರಿಗಂತೂ ಈ ಭ್ರಾಂತಿಗೆ ಎಳ್ಳಷ್ಟೂ ಕಾರಣವಿರಲಿಲ್ಲ. ಕೀಚಕನ ವೇಷದವನಿಗೆ "ನನ್ನ ಅಭಿನಯವು ಸಭೆಯವರ ಮೇಲೆ ಇಂಥ ಪರಿಣಾಮವನ್ನುಂಟುಮಾಡಿತಲ್ಲ!" ಎಂದು ಸಂತೋಷವೇ ಆಗಿರಬೇಕು. ಅಲ್ಲವೆ? ಇದರಂತೆ ಜ್ಞಾನಿಗಳ ಮನಃಸ್ವಬಾವವನ್ನೂ ಅರಿಯಬೇಕು. ಕಣ್ಣು ಮಂಜಾಗಿರುವವರಿಗೆ ಹಗಲೇ ದಾರಿಯಲ್ಲಿರುವ ವಸ್ತುಗಳು ಕಾಣಿಸುವದಿಲ್ಲ; ಅಥವಾ ಹೇಗೆ ಹೇಗೋ ತೋರುತ್ತಿರುವವು. ಆದರೆ ಸರಿಯಾದ ದೃಷ್ಟಿಪಾಟವವಿರುವವರಿಗೆ ಸೂರ್ಯನ ಬೆಳಕು ವಸ್ತುಗಳನ್ನು ಇದ್ದಂತೆ ತಿಳಿಸುವದಕ್ಕೆ ಒಂದು ಅಮೂಲ್ಯವಾದ ಸಾಧನ ವಾಗಿರುತ್ತದೆ. ಹೀಗೆಯೇ ಜ್ಞಾನಿಗಳಿಗೆ ಅಜ್ಞಾನದ ಮೋಹವು ಇರುವದೇ ಇಲ್ಲ. ಅವರಿಗೆ ಕ್ರಿಯಾಕಾರಕಫಲಗಳ ಸಂಬಂಧವಿಲ್ಲದ ಆತ್ಮನ ಜ್ಞಾನವು ಅತ್ಯಂತ ಸ್ಫುಟವಾಗಿ ಉಂಟಾಗಿಬಿಟ್ಟಿರುತ್ತದೆ.

ಇಂಥ ಜ್ಞಾನಿಗಳ ವ್ಯವಹಾರವು ಹೇಗಿರುವದು?

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥** (೫-೧೭)

ಅವರು ಈ ಪರಮಾತ್ಮನಲ್ಲಿಯೇ ತಮ್ಮ ಅಂತಃಕರಣವನ್ನಿಟ್ಟುಕೊಂಡಿರುವರು; ಅವರಿಗೆ ಮತ್ತೊಂದರ ಅರಿವು ಆಗುವದೇ ಇಲ್ಲ. ಆ ಪರಮಾತ್ಮನೇ ತಮ್ಮ ಆತ್ಮನೆಂದು ಅವರು ಯಾವ ಸಂದೇಹವೂ ಇಲ್ಲದೆ ನಿಶ್ಚಯವಾಗಿ ತಿಳಿದುಕೊಂಡಿರುತ್ತಾರೆ. ಆದ್ದರಿಂದ ಅವರು ಮತ್ತೆ ಯಾವ ಕರ್ಮವನ್ನೂ ಮಾಡದೆ ಆ ಪರಮಾತ್ಮನಲ್ಲಿಯೇ ನೆಲೆನಿಂತಿರುತ್ತಾರೆ. ಆತನಿಗಿಂತ ಹೆಚ್ಚಿನ ಗತಿಯೇ ಇಲ್ಲವೆಂದು ನಿಶ್ಚಯಿಸಿ ಆತ್ಮರತಿ ಯಿಂದಲೇ ಅವರು ಜೀವಿಸುತ್ತಿರುತ್ತಾರೆ. ಇಂಥ ಜ್ಞಾನಿಗಳಿಗೆ ಜ್ಞಾನದ ಮಹಿಮೆಯಿಂದ ಪಾಪಪುಣ್ಯದ ಸುಳಿವೇ ಇರುವದಿಲ್ಲ; ಸಂಸಾರಕ್ಕೆ ಕಾರಣವಾದ ಪಾಪಪುಣ್ಯಗಳ

ಬಂಧವು ಒಂದಿಷ್ಟೂ ಅವರಿಗೆ ಇಲ್ಲದ್ದರಿಂದ ಅವರು 'ಅಪುನರಾವೃತ್ತಿ'ಯನ್ನೇ ಹೊಂದುತ್ತಾರೆ. ಅಜ್ಞಾನಿಗಳು ಪಾಪಪುಣ್ಯಗಳ ಫಲವಾಗಿ ಮತ್ತೆ ಜನ್ಮವನ್ನು ತಾಳುವದಕ್ಕೆ ಸಂಸಾರಕ್ಕೆ ಇಳಿಯಬೇಕಾಗಿರುವದರಿಂದ ಅವರಿಗೆ ಪುನರಾವೃತ್ತಿ (ಸದ್ಗತಿಯನ್ನು ಪಡೆದಮೇಲೂ ಜನ್ಮವನ್ನು ತಾಳುವದಕ್ಕೆ ಮರಳಿ ಬರುವದು) ಉಂಟು. ಆದರೆ ಜ್ಞಾನಿಗಳಿಗೆ ಪರಬ್ರಹ್ಮಪ್ರಾಪ್ತಿಯಾದ ಬಳಿಕ ಮತ್ತೆ ಅವರು ಸಂಸಾರಕ್ಕೆ ಬರುವರೆಂಬ ಶಂಕೆಯೇ ಇರುವದಿಲ್ಲ.

ಜ್ಞಾನಿಗಳು ತತ್ತ್ವವನ್ನು ಹೇಗೆ ಕಾಣುವರು? ಅದೇ ತತ್ತ್ವವು ಅಜ್ಞರಿಗೆ ಹೇಗೆ ಕಾಣುತ್ತಿರುವದು?- ಎಂದರೆ

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಣ್ಡಿತಾಃ ಸಮದರ್ಶಿನಃ॥** (೫-೧೮)

ವಿದ್ಯೆಯಿಂದಲೂ ವಿನಯದಿಂದಲೂ ಕೂಡಿರುವ ಸಾತ್ತ್ವಿಕನಾದ ಬ್ರಾಹ್ಮಣನು, ಯಾವ ಸಂಸ್ಕಾರವೂ ಇಲ್ಲದ ರಾಜಸಪ್ರಾಣಿಯಾದ ಒಂದು ಎತ್ತು, ತಾಮಸವಾದ ಆನೆ, ನಾಯಿ ಮುಂತಾದ ಪ್ರಾಣಿಗಳು-ಎಲ್ಲದರಲ್ಲಿಯೂ ಆತನಿಗೆ ಸಮಬುದ್ಧಿಯೇ ಇರುತ್ತದೆ. ಎಲ್ಲೆಲ್ಲಿಯೂ ವ್ಯಾಪ್ತವಾಗಿರುವ ಒಂದೇ ರೂಪದಲ್ಲಿರುವ ಬ್ರಹ್ಮವಸ್ತುವಿಗೆ **ಸಮ** ಎಂದು ಹೆಸರು. ಜ್ಞಾನಿಗಳಾದವರು ಆ 'ಸಮ' ವಸ್ತುವನ್ನೇ ಎಲ್ಲೆಲ್ಲಿಯೂ ಕಾಣುತ್ತಿರುವರು. ಬ್ರಾಹ್ಮಣ, ಗೋವು, ಆನೆ, ನಾಯಿ, ಚಂಡಾಲನು-ಎಲ್ಲರನ್ನೂ ಸಮವಾಗಿ ಕಾಣುವದೆಂದರೇನೆಂಬುದು ಅಜ್ಞರಿಗೆ ತಿಳಿಯುವ ಹಾಗಿಲ್ಲ. ವಿವೇಕಿಯಾದ ಬ್ರಾಹ್ಮಣನಿಗೆ ತೋರಿರುವ ಗೌರವವನ್ನು ಆನೆಯೇ ಮುಂತಾದ ಪ್ರಾಣಿಗಳಿಗೆ ತೋರಿಸಿದರೆ ಅವಕ್ಕೆ ಅದರ ಅರಿವೇ ಆಗುವಂತಿಲ್ಲವಾದ್ದರಿಂದ ವ್ಯರ್ಥಪ್ರಯಾಸ ವಾಗುತ್ತದೆ. ಬ್ರಾಹ್ಮಣನನ್ನು ಚಂಡಾಲನನ್ನು ಕಂಡಂತೆ ಕಾಣುವದಾದರೆ ಅವನಿಗೆ ಅಪಮಾನವನ್ನೇ ಮಾಡಿದಂತೆ ಆಗುತ್ತದೆ. ಹೀಗಿರುವದರಿಂದ ಇಲ್ಲಿ ಎಲ್ಲರಲ್ಲಿಯೂ ಸಮದರ್ಶಿಯಾಗಿರುವದೆಂದರೆ ಹೇಗೆ? ಕೆಲವರು ಎಲ್ಲವನ್ನೂ ಸಮನಾಗಿ ಕಾಣಬೇಕು ಎಂಬ ವಾದವನ್ನು ಅಕ್ಷರಶಃ ಪಾಲಿಸುವದಕ್ಕೆ ಹೊರಡುತ್ತಾರೆ. ಯೋಗ್ಯತೆಗೆ ಅನುಸಾರವಾಗಿ ತಾರತಮ್ಯವನ್ನರಿತು ಸನ್ಮಾನವನ್ನು ಮಾಡುವದು ತಪ್ಪೆಂದು ಅವರ ಅಭಿಪ್ರಾಯವಿರಬಹುದೆ?- ಎಂಬ ಸಂಶಯವು ನಮಗೆ ಉತ್ಪನ್ನವಾಗುತ್ತದೆ. ಜಾತಿ ಕುಲ ಮುಂತಾದವುಗಳ ವಿಷಯಕ್ಕೆ ಅವರ ಅಭಿಪ್ರಾಯವು ಹಾಗೆಯೇ ಇದ್ದರೂ ರಾಜಕೀಯದ ತಾರತಮ್ಯಗಳನ್ನು ಮಾತ್ರ ಪಾಲಿಸಬೇಕೆಂದು ಅವರು ಹೇಳುತ್ತಿರುವರು. ಅಧಿಕಾರಿವರ್ಗದವರಿಗೆ ಹೆಚ್ಚಿನ ಮರ್ಯಾದೆಯನ್ನು ಪ್ರಜೆಗಳು ತೋರಿಸಬೇಕೆ,

ಬೇಡವೆ?- ಎಂಬ ವಿಷಯದಲ್ಲಿ ಯಾರಿಗೂ ಮತಭೇದವಿರುವದಿಲ್ಲ. ಇದರಂತೆಯೇ ವಿದ್ಯಾವಿನಯಾದಿಗಳಿಂದ ಉತ್ಕೃಷ್ಟರಾಗಿರುವವರಿಗೆ ಹೆಚ್ಚಿನ ಮನ್ನಣೆಯು ದೊರೆಯ ತಕ್ಕದ್ದು ಯುಕ್ತವೆಂಬುದು ವಿಚಾರಶೀಲರಿಗೆ ಸರಿಯಾಗಿಯೇ ತೋರುತ್ತದೆ. ಇದು ಹೇಗಾದರೂ ಇರಲಿ. ಮನುಷ್ಯನನ್ನೂ ಎತ್ತನ್ನೂ ನಾಯಿಯನ್ನೂ ಎಲ್ಲಾ ಬಗೆಯಿಂದಲೂ ಸಮವಾಗಿ ಕಾಣುವುದಕ್ಕೆ ಆದೀತೆ? ಈ ಶ್ಲೋಕದಲ್ಲಿ ಹೇಳಿರುವ ಸಮದೃಷ್ಟಿಯು ಯಾವದು? ಎಂಬ ಪ್ರಶ್ನೆಯುಸಹಜವಾಗಿ ಉತ್ಪನ್ನವಾಗುತ್ತದೆ. ಇದಕ್ಕೆ ಉತ್ತರವನ್ನು ಆಗಲೆ ಹೇಳಿದ್ದಾಗಿದೆ. ಬ್ರಾಹ್ಮಣಾದಿಗಳಲ್ಲಿ ಕಾಣುವ ಉಪಾಧಿಧರ್ಮಗಳನ್ನೇ ಪ್ರಧಾನವಾಗಿ ಕಾಣುತ್ತಾ ರಾಗದ್ವೇಷವನ್ನು ಮಾಡುತ್ತಿರುವವರು ವಿಷಮದರ್ಶಿಗಳು. ಉಪಾಧಿಯನ್ನು ಅಸಡ್ಡೆ ಮಾಡಿ ಎಲ್ಲಕ್ಕೂ ಆಧಾರನಾಗಿರುವ ಪರಮಾತ್ಮನನ್ನೇ ಕಾಣುವವರು ಸಮದರ್ಶಿಗಳು. ಇಲ್ಲಿ ಮೇಲುಮಟ್ಟದವರನ್ನು ಕೀಳುಮಟ್ಟದ ವರೆಂದಾಗಲಿ, ಕೀಳುಮಟ್ಟದವರನ್ನು ಮೇಲುಮಟ್ಟದವರೆಂದಾಗಲಿ ತಿಳಿಯುವ ಸಂದರ್ಭವೇನೂ ಇರುವದಿಲ್ಲ. ಜ್ಞಾನಿಗಳ ದೃಷ್ಟಿಯಲ್ಲಿ ಮೇಲುಕೀಳುಗಳೆಂಬುದೇ ಇಲ್ಲ. ಸರ್ವಸಮವಾಗಿರುವ ಬ್ರಹ್ಮವೊಂದೇ ಅವರ ಪರಮಾರ್ಥದೃಷ್ಟಿಗೆ ಕಾಣುತ್ತಿರುತ್ತದೆ.

## ೩೭. ಸಮದರ್ಶನದ ಫಲ ೫-(೧೯-೨೬)
## (೧೬.೩.೪೭)

ಹಿಂದಿನ ಉಪನ್ಯಾಸವಾಗಿ ಎರಡು ವಾರವಾಯಿತು. ಈಗ ನಡೆಯುತ್ತಿರುವ ಸಂವಾದದ ಸಂದರ್ಭವನ್ನು ಸ್ವಲ್ಪ ಅನುವಾದಮಾಡಿಕೊಳ್ಳುವದರಿಂದ ಪ್ರಯೋಜನ ವುಂಟು. ಅನಾತ್ಮಜ್ಞನಾದವನಿಗೆ ಕರ್ಮವನ್ನು ಮಾಡುವದು ಶ್ರೇಯಸ್ಕರವೊ, ಬಿಡು ವದು ಶ್ರೇಯಸ್ಕರವೊ?- ಎಂಬ ಪ್ರಶ್ನೆಗೆ ಭಗವಂತನು ಅಧಿಕಾರಿತಾರತಮ್ಯದಿಂದ ಎರಡೂ ಮುಕ್ತಿಗೆ ಕಾರಣವಾಗಿರುತ್ತವೆಯಾದರೂ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗ ದಲ್ಲಿ ಹೆಚ್ಚಿನ ಸೌಲಭ್ಯದ ವಿಶೇಷವಿದೆ ಎಂದು ಉತ್ತರಕೊಟ್ಟಿರುತ್ತಾನೆ. ಜ್ಞಾನಿಯಾಗಿರು ವವನಿಗೆ ಮಾತ್ರ ಯಾವ ಕರ್ಮವೂ ಅವಶ್ಯವಿಲ್ಲ; ಅವನು ಯಾವ ಕರ್ಮವನ್ನು ಮಾಡುತ್ತಿದ್ದರೂ ತನ್ನ ದೃಷ್ಟಿಯಿಂದ ಕರ್ಮಾತೀತನಾಗಿರುತ್ತಾನೆ ಎಂದು ಹೇಳಿ ಕರ್ಮಯೋಗಿಯಾದವನಿಗೆ ಫಲತ್ಯಾಗದಿಂದಲೂ ಜ್ಞಾನಿಯಾದವನಿಗೆ ಸರ್ವಕರ್ಮ ಸಂನ್ಯಾಸದಿಂದಲೂ ಕರ್ಮಬಂಧದಿಂದ ಬಿಡುಗಡೆಯಾಗುವ ಪರಿಯನ್ನು ತಿಳಿಸಿರುತ್ತಾನೆ. ಕರ್ಮಯೋಗಿಯು ಈಶ್ವರನಲ್ಲಿ ಚಿತ್ತಸಮಾಧಾನವನ್ನು ಮಾಡಿಕೊಂಡಿರುವಂತೆ

ಜ್ಞಾನಿಯು ತಾರತಮ್ಯವಾದ ಯೋಗ್ಯತೆಯುಳ್ಳ ಪ್ರಾಣಿಗಳಲ್ಲಿ ಕೂಡ ಒಂದೇ ರೂಪದಿಂದ ಎಲ್ಲರ ಆತ್ಮನಾಗಿರುವ ಬ್ರಹ್ಮವೊಂದನ್ನೇ ಕಾಣುತ್ತಿರುತ್ತಾನೆ ಎಂದೂ ಜ್ಞಾನಿಗಳು ಬ್ರಹ್ಮದಲ್ಲಿಯೇ ತಾತ್ಪರ್ಯವುಳ್ಳವರಾದ್ದರಿಂದ ಅವರಿಗೆ ಅಪುನರಾವೃತ್ತಿ ರೂಪವಾದ ಪರಮಪುರುಷಾರ್ಥವು ದೊರೆಯುವದೆಂದೂ ಹೇಳಿರುತ್ತಾನೆ. ಜ್ಞಾನವು ಪರಮಪುರುಷಾರ್ಥಕ್ಕೆ ಕಾರಣವಾಗಿರುವದೆಂಬ ಕಾರಣದಿಂದ ಅದನ್ನು ಈಗ ಹೊಗಳುತ್ತಿದ್ದಾನೆ.

ಜ್ಞಾನಿಯು ಎಲ್ಲರಲ್ಲಿಯೂ ಸಮವಾದ ಬ್ರಹ್ಮವನ್ನೇ ಕಾಣುತ್ತಾನೆ. ಎಂಬಲ್ಲಿ ಒಂದು ಶಂಕೆಯುಂಟು. ಎಲ್ಲಾ ಜನರನ್ನೂ ಸಮವಾಗಿ ಕಾಣುವದು ಶಾಸ್ತ್ರದ ರೀತಿ ಯಿಂದ ತಪ್ಪು. ಒಂದೇ ಸಮನಾದ ಯೋಗ್ಯತೆಯುಳ್ಳವರಲ್ಲಿ ತಾರತಮ್ಯವನ್ನು ಕಲ್ಪಿಸುವದು ಹೇಗೆ ಅಪರಾಧವೋ ಹಾಗೆಯೇ ತಾರತಮ್ಯವುಳ್ಳ ಯೋಗ್ಯತೆಯವರಲ್ಲಿ ಏಕರೂಪವಾದ ಗೌರವವನ್ನು ತೋರಿಸುವದೂ ಶಾಸ್ತ್ರದೃಷ್ಟಿಯಿಂದ ಅಪರಾಧವೇ ಆಗಿರುತ್ತದೆ. ಹಾಗೆ ಯೋಗ್ಯತಾ ತಾರತಮ್ಯವನ್ನು ಮನ್ನಿಸದೆ ಇರುವವರ ಮನೆಯ ಅನ್ನವನ್ನು ಭುಂಜಿಸಬಾರದು ಎಂದು ಸ್ಮೃತಿವಾಕ್ಯವಿದೆ. ಹೀಗಿರುವಲ್ಲಿ ಜ್ಞಾನಿಯು ಎಲ್ಲರನ್ನೂ ಸಮನಾಗಿ ಕಂಡದ್ದರಿಂದ ಅಭೋಜ್ಯಾನ್ನನಾಗುವದಿಲ್ಲವೆ?

ಈ ಶಂಕೆಗೆ ಪರಿಹಾರವೇನೆಂದರೆ ಜ್ಞಾನಿಯಲ್ಲಿ ಯಾವ ದೋಷವನ್ನೂ ಕಲ್ಪಿಸುವದಕ್ಕೆ ಬರುವದಿಲ್ಲ. ಏಕೆಂದರೆ ಬ್ರಹ್ಮವು ನಿರ್ದೋಷವಾಗಿರುತ್ತದೆ. ಅದು ಯಾರ ಯಾರ ಆತ್ಮನಾಗಿ ಕಾಣುವದೋ ಅವರವರ ಶರೀರವಾಙ್ಮನಸ್ಸುಗಳ ಸಂಬಂಧದಿಂದ ಅದರಲ್ಲಿಯೂ ಮೂಢರು ದೋಷವನ್ನು ಕಲ್ಪಿಸುವದುಂಟು. ಆದರೆ ಬ್ರಹ್ಮದಲ್ಲಿ ಉಪಾಧಿಯ ಸಂಬಂಧದಿಂದ ಯಾವ ದೋಷವೂ ಉಂಟಾಗುವದಿಲ್ಲ; ಹತ್ತಿರವಿರುವ ಹೂವಿನ ಬಣ್ಣವು ಸ್ಫಟಿಕಕ್ಕೂ ಬಂದಿರುವಂತೆ ತೋರಿದರೂ ಹೇಗೆ ಅದು ನಿರ್ಮಲವಾಗಿಯೇ ಇರುವದೋ ಹಾಗೆ ಬ್ರಹ್ಮವು ಯಾವ ಉಪಾಧಿಯ ಸೋಂಕೂ ಇಲ್ಲದೆ ಸ್ವಚ್ಛವಾಗಿಯೇ ಇರುತ್ತದೆ. ತನ್ನ ಸ್ವರೂಪದಲ್ಲಂತೂ ಬ್ರಹ್ಮಕ್ಕೆ ಯಾವ ದೋಷವೂ ಹತ್ತಿಕೊಂಡಿರುವದಿಲ್ಲ. ಇಂಥ ನಿರ್ದುಷ್ಟವಾದ ಬ್ರಹ್ಮವೇ ತಮ್ಮ ಆತ್ಮನೆಂದು ತಿಳಿದುಕೊಂಡಿರುವ ಜ್ಞಾನಿಗಳಿಗೆ ಯಾವ ದೋಷವುತಾನೆ ಅಂಟಿ ಕೊಂಡೀತು? ಅವರು ಹೀಗೆ ನಿತ್ಯಶುದ್ಧರಾಗಿರುವದರಿಂದ ತಾವು ಇನ್ನೂ ಬದುಕಿರು ವಾಗಲೇ ಜನ್ಮಮರಣಪ್ರವಾಹವನ್ನು ಗೆದ್ದು ಮುಕ್ತರಾಗಿಬಿಟ್ಟಿರುತ್ತಾರೆ. ಶ್ರೀರಾಮನು ಕೂಡ ತಾರತಮ್ಯವನ್ನನುಸರಿಸಿ ಗುರುಗಳು, ಹಿರಿಯರು,ಕಿರಿಯರು-ಮುಂತಾದವರಲ್ಲಿ ಅವರವರಿಗೆ ತಕ್ಕಂತೆ ನಡೆದುಕೊಂಡನಲ್ಲ! ಶಾಸ್ತ್ರದಲ್ಲಿ ಹೇಳಿರುವ ಯೋಗ್ಯತಾ ತಾರತಮ್ಯವನ್ನು ಮೀರಿದರೆ ಜ್ಞಾನಿ ಹೇಗಾದಾನು? ಎಂದು ಶಂಕಿಸಬಾರದು.

ದೇಹೇಂದ್ರಿಯಸಂಘಾತದಲ್ಲಿ ನಾನು ಎಂಬ ಅಭಿಮಾನವು ಯಾರಿಗೆ ಇರುವದೋ ಅವರಿಗಾಗಿ ಪೂಜ್ಯರಾದವರ ಯೋಗ್ಯತಾತಾರತಮ್ಯವನ್ನು ಶಾಸ್ತ್ರದಲ್ಲಿ ಹೇಳಿರುತ್ತದೆ. ಅಂಥವರಿಗಾಗಿಯೇ ಧರ್ಮರಹಸ್ಯವನ್ನು ತಿಳಿಸಿಕೊಡುವದಕ್ಕಾಗಿ ಶ್ರೀರಾಮಚಂದ್ರನು ಸತ್ಯಧರ್ಮಗಳನ್ನು ಅನುಸರಿಸಿ ಮಾದರಿಯ ವರ್ತನೆಯನ್ನು ಪ್ರಕಟಿಸಿ ತೋರಿಸಿರುತ್ತಾನೆ. ಆದರೆ ಯಾರು ಪರಮಾತ್ಮತತ್ತ್ವದಲ್ಲಿ ನಿಷ್ಠರಾಗಿರುವರೋ ಅವರಿಗೆ ಈ ತಾರತಮ್ಯವು ಗೋಚರವೇ ಆಗುವದಿಲ್ಲ. ಹಿರಣ್ಯಕಶಿಪುವು ಭಕ್ತವರನಾದ ಪ್ರಹ್ಲಾದನನ್ನು ಕುರಿತು "ಪುತ್ರನೆ, ರಾಜರಾದ ನಾವು ಶತ್ರುಗಳಲ್ಲಿ ಹೇಗೆ ವರ್ತಿಸಬೇಕು? ಮಿತ್ರರಲ್ಲಿ ಹೇಗೆ ನಡೆಯಬೇಕು? ಉದಾಸೀನರಲ್ಲಿ ಹೇಗೆ ನಡೆಯಬೇಕು?" ಎಂದು ಮುಂತಾಗಿ ರಾಜನೀತಿಯನ್ನು ಪ್ರಶ್ನೆಮಾಡಿದಾಗ ಅವನು "ತಂದೆಯೆ, ನನ್ನ ದೃಷ್ಟಿಯಲ್ಲಿ ಶತ್ರುಮಿತ್ರರೇ ಇರುವದಿಲ್ಲ; ಭಗವಂತನೊಬ್ಬನೇ ನಮ್ಮೆಲ್ಲರ ಆತ್ಮನಾಗಿರುವಲ್ಲಿ ಶತ್ರುಮಿತ್ರ ವಿಭಾಗವೆಲ್ಲಿ ಬಂತು?" ಎಂದಿರುವದು ಈ ಜ್ಞಾನಿಗಳ ದೃಷ್ಟಿಯಿಂದ.

ಜ್ಞಾನಿಗಳಿಗೆ ಇಂಥ ಸಾಮ್ಯದೃಷ್ಟಿಯು ಸಹಜವಾಗಿರುತ್ತದೆ. ಗೋಂದಾವಳಿಯಲ್ಲಿ ಒಬ್ಬ ಸಾಧುಗಳಿದ್ದರು. ಅವರು ವೃದ್ಧರಾದಾಗ ಭಕ್ತರು ಅವರ ಕೈಯನ್ನು ತಮ್ಮ ಹೆಗಲ ಮೇಲೆ ಇಟ್ಟುಕೊಂಡು ನಡೆಯಿಸುತ್ತಿದ್ದರು. ಆ ಪೂಜ್ಯರು ಒಂದು ಸಲ ಒಬ್ಬ ಶ್ರೋತ್ರಿಯಬ್ರಾಹ್ಮಣನ ಹೆಗಲಮೇಲೆ ಒಂದು ತೋಳನ್ನೂ ಮತ್ತೊಬ್ಬ ಕೂಲಿಯವನ ಹೆಗಲಮೇಲೆ ಮತ್ತೊಂದು ತೋಳನ್ನೂ ಇಟ್ಟುಕೊಂಡು ನಿರ್ವಿಕಾರವಾದ ಚಿತ್ತದಿಂದ ನಡೆಯುತ್ತಿದ್ದದ್ದು ಈಗಲೂ ನನಗೆ ನೆನಪಿಗೆ ಬರುತ್ತಿದೆ. ಜಾತ್ಯಾದಿಗಳನ್ನು ತಿರಸ್ಕರಿಸುವ ಭಂಡರೂ ಹೀಗೆ ಮಾಡುವದುಂಟು; ಆದರೆ ಸಮದೃಷ್ಟಿಯುಳ್ಳ ಜ್ಞಾನಿಗಳಿಗೂ ಅಂಥವರಿಗೂ ಇರುವ ತಾರತಮ್ಯವು ಸ್ಫುಟವಾಗಿ ಎಲ್ಲರಿಗೂ ತಿಳಿಯುವದರಿಂದ ನಾವು ಅಷ್ಟುಮಾತ್ರದಿಂದ ಸಮದೃಷ್ಟಿಯ ಮಹಿಮೆಯನ್ನು ಮರೆಯಬಾರದು. ನಿರ್ದುಷ್ಟವಾದ ಬ್ರಹ್ಮದಲ್ಲಿರುವ ಸಮದೃಷ್ಟಿಯ ಜ್ಞಾನಿಗಳು ಬದುಕಿರುವಾಗಲೆ ಇನ್ನು ಮುಂದೆ ಸಂಸಾರದ ಅಂಕುರವುಂಟಾಗದಂತೆ ಮಾಡಿಕೊಂಡಿರುತ್ತಾರೆ. ರಾಗದ್ವೇಷಗಳ ಬೀಜವನ್ನು ಬಿತ್ತುವವರಿಗೆ ಜನ್ಮದ ಅಂಕುರವಾಗುತ್ತದೆ; ಬ್ರಹ್ಮದಲ್ಲಿಯೇ ನೆಲೆನಿಂತಿರುವ ಮಹಾತ್ಮರಿಗೆ ಮತ್ತೆ ಜನ್ಮದ ಮೊಳಕೆಯು ಹೇಗೆ ತಲೆದೋರೀತು? ನಾವೂ ಅವರಂತೆಯೇ ಬ್ರಹ್ಮದಲ್ಲಿಯೇ ಇರುತ್ತೇವೆ; ಆದರೆ ಅದನ್ನು ನಾವು ಅರಿಯೆವು. ಒಬ್ಬ ಅರಸುಗುವರನು ಚಿಕ್ಕವನಾಗಿದ್ದಾಗಲೆ ಕಳ್ಳರಿಂದ ಅಪಹೃತನಾಗಿದ್ದನಂತೆ. ಅವನಿಗೆ ಕಣ್ಣನ್ನು ಬಿಗಿಯಾಗಿ ಕಟ್ಟಿ ಅವರು ಒಂದೊಂದು ಸಲ ಅರಮನೆಯ ಅಂಗಳದಲ್ಲಿಯೇ ಓಡಾಡಿಸುತ್ತಿದ್ದರಂತೆ. ಆಗ ಅವನಿಗೆ ತಾನು ಅರಸಿನ ಮಗನೆಂಬುದಾಗಲಿ, ಇಂಥ ಸಮಯದಲ್ಲಿ ತನ್ನನ್ನು ಅರಮನೆಯ ಮುಂದೆ ಅಡ್ಡಾಡಿಸುತ್ತಾರೆಂಬುದಾಗಲಿ ಹೇಗೆ

ತಿಳಿಯಬೇಕು? ಹೀಗೆ ಸರ್ವಭೂತಗಳೂ ಬ್ರಹ್ಮದಲ್ಲಿಯೇ ಇರುವವಾದರೂ ಅಜ್ಞಾನವಶರಾದ ಆ ಜೀವರುಗಳಿಗೆ ಅದು ಹೇಗೆ ತಿಳಿದೀತು? ಜ್ಞಾನಿಗಳಿಗೆ ಮಾತ್ರ ತಾವು ಬ್ರಹ್ಮದಲ್ಲಿಯೇ ಇರುವೆವೆಂಬ ಅರಿವು ಸುನಿಶ್ಚಿತವಾಗಿ ಗೊತ್ತಾಗಿರುತ್ತದೆ.

ಹೀಗೆ ಬ್ರಹ್ಮದಲ್ಲಿ ನೆಲೆನಿಂತಿರುವದರಿಂದ ಪ್ರಿಯವಾದದ್ದನ್ನು ಪಡೆದೆನೆಂದು ಉಬ್ಬುವದಾಗಲಿ ಅಪ್ರಿಯವಾದದ್ದು ಬಂದೊದಗಿತೆಂದು ತಳಮಳಿಸುವದಾಗಲಿ ಜ್ಞಾನಿಗಳಿಗೆ ಆಗುವ ಹಾಗಿರುವದಿಲ್ಲ. ಅವರ ದೃಷ್ಟಿಯಿಂದ ಪ್ರಿಯಾಪ್ರಿಯಗಳೆಂಬಿವೇ ಇರುವದಿಲ್ಲ; ಇನ್ನು ಅವುಗಳಿಂದ ಅವರ ಮನಸ್ಸು ಏರುಪೇರಾಗುವದೆಲ್ಲಿ ಬಂತು? ಮನಸ್ಸು ಪ್ರಿಯಾಪ್ರಿಯಗಳಿಂದ ಸ್ಥೈರ್ಯವನ್ನು ಕಳೆದುಕೊಳ್ಳುವದೂ ಏನೂ ತೋಚದೆ ಮಂಕಾಗುವದೂ ವಿಷಯಾಸಕ್ತರಾದ ಅನಾತ್ಮಜ್ಞರ ಪಾಲಿಗೆ ಸೇರಿದ್ದು. ಜ್ಞಾನಿಯಾದವನ ಮನಸ್ಸು ಹೊರಗಿನ ವಿಷಯಗಳಲ್ಲಿ ಯಾವ ಆಸಕ್ತಿಯನ್ನೂ ಇಟ್ಟುಕೊಂಡಿರುವದಿಲ್ಲ; ಅವನಿಗೆ ಆಗುವ ಸುಖವು ಕೇವಲ ಆತ್ಮನಿಂದ ಬಂದದ್ದು. ತನ್ನ ಆತ್ಮನು ಎಲ್ಲರ ಆತ್ಮನಾದ ಬ್ರಹ್ಮವೇ ಎಂಬ ಅರಿವಿನ ಬ್ರಹ್ಮಯೋಗವು ಆತನ ಅಂತಃಕರಣದಲ್ಲಿರುವದರಿಂದ ಅದು ಅತ್ಯಂತವಾಗಿ ಸಮಾಧಾನವನ್ನು ಹೊಂದಿ ಅಕ್ಷಯವಾದ ಸುಖವನ್ನು ಕೊಡುತ್ತದೆ. ಇಂದ್ರಿಯಗಳಿಂದ ವಿಷಯಗಳನ್ನು ಮುಟ್ಟಿ ಪಡೆದುಕೊಳ್ಳುವ ಭೋಗವು ಆ ಕಾಲಕ್ಕೆ ಸುಖವಾಗಿ ಕಾಣಬಹುದು; ಆದರೆ ಅದು ನಿಜವಾದ ಸುಖವಲ್ಲ, ಮುಂದೆ ದುಃಖವಾಗಿ ಪರಿಣಮಿಸುವದು ಖಂಡಿತ. ವಿಷದ ಸಂಬಂಧದಿಂದ ಆಗುತ್ತಿರುವ ಅಡಿಗೆಯು ಮುಂದೆ ಮರಣಹೇತುವಾದ ಭೋಜನವನ್ನು ಸಿದ್ಧಪಡಿಸುವದು ಹೇಗೆ ನಿಸ್ಸಂಶಯವೋ ಹಾಗೆ ಈಗ ಹುಟ್ಟಿ ಇನ್ನೊಂದು ಕ್ಷಣದಲ್ಲಿ ಮೈಗರೆಯುವ ವಿಷಯಭೋಗಗಳು ಸುಖದಾಯಕವೆಂದು ಮೂಢರು ಎಣಿಸುವರೇ ಹೊರತು ವಿವೇಕಿಗಳು ಅವುಗಳಲ್ಲಿ ಎಂದಿಗೂ ರತರಾಗುವದಿಲ್ಲ. ಇಂದ್ರಿಯಗಳು ಸ್ಥಿರವಲ್ಲ; ಅವು ಕ್ಷಣಕ್ಷಣಕ್ಕೂ ಮಾರ್ಪಡುತ್ತಾ ಇರುವವು. ಹೀಗೆಯೇ ವಿಷಯಗಳೂ ಸ್ಥಿರವಲ್ಲ; ಅವು ಒಂದುಕ್ಷಣವೂ ಇದ್ದಂತೆ ಇರುವಹಾಗಿಲ್ಲ; ಹೀಗೆ ಮಾರ್ಪಡುತ್ತಲೇ ಇರುವ ವಿಷಯೇಂದ್ರಿಯಗಳ ಸಂಬಂಧದಿಂದ ಹುಟ್ಟುವ ಭೋಗವು ತನಗೆ ಸುಖವನ್ನು ಕೊಡುವದೆಂದು ಯಾವ ವಿವೇಕಿಯು ತಾನೆ ನೆಚ್ಚಿಕೊಂಡಿದ್ದಾನು? ಅವುಗಳನ್ನು ನೆಚ್ಚಿರುವವನು ಕೆಡುವದು ಖಂಡಿತ. ಒಬ್ಬ ಪಂಡಿತನು ಜನರಿಗೆ ಪುರಾಣವನ್ನು ಹೇಳುತ್ತಿದ್ದನು. ಆಗ ಆತನು ಓದುವಾಗ ಚೆನ್ನಾಗಿ ಕಾಣಿಸುವದಕ್ಕೆಂದು ಎರಡು ಕಡೆಗಳಲ್ಲಿಯೂ ಸುಪ್ರಕಾಶವಾದ ಎರಡು ವಿದ್ಯುದ್ದೀಪಗಳನ್ನು ಆತನ ಹತ್ತಿರವೇ ಇಟ್ಟಿದ್ದರು. ಆತನ ಮುಖವು ತಮಗೆಲ್ಲ ಚೆನ್ನಾಗಿ ಕಾಣುವದೆಂದೂ ಆತನಿಗೆ ಹಾರವನ್ನು ಹಾಕಿದರೆ ಬಲು ಸೊಗಸಾಗಿ ಕಾಣುವದೆಂದೂ ಜನರು

ಎಂದುಕೊಳ್ಳುತ್ತಿದ್ದರು. ಆದರೆ ಕೆಲವು ತಿಂಗಳುಗಳು ಹೀಗೆಯೇ ನಡೆದ ಬಳಿಕ ದೀಪದ ಪ್ರಕಾಶವು ಜೋರಾಗಿ ಕಣ್ಣಿನಮೇಲೆ ಪರಿಣಾಮವನ್ನು ಮಾಡಿದ್ದರಿಂದ ಅದರ ಫಲವಾಗಿ ಪುರಾಣಿಕನ ಕಣ್ಣುಗಳೆರಡೂ ಹೋಗಿಬಿಟ್ಟವು. ಆಸ್ಪತ್ರೆಯಲ್ಲಿ ತೋರಿಸಲು, "ದೃಷ್ಟಿಗೆ ಬಹಳ ಅಪಾಯವಾಗಿರುತ್ತದೆ, ಇನ್ನು ಅದು ಹಿಂದಿನಂತೆ ಆಗುವದು ಸಾಧ್ಯವೇ ಇಲ್ಲ" ಎಂದು ಹೇಳಿಬಿಟ್ಟರಂತೆ! ಇಂದ್ರಿಯಗಳು ಶಾಶ್ವತವೆಂದು ನಂಬಿದ್ದರ ದುಷ್ಪರಿಣಾಮವೇ ಇದು.

ಆದ್ದರಿಂದ ಕಾಮಕ್ರೋಧಾದಿಗಳ ವೇಗಕ್ಕೆ ವಶನಾಗಿ ತನಗೆ ತಿಳಿದಂತೆ ವಿಷಯಗಳ ಭೋಗದಿಂದ ಸುಖವನ್ನು ಸಂಪಾದಿಸಿಕೊಳ್ಳುವೆನೆಂದು ಹವಣಿಸುವದು ಮೂಢತನ. ಕಾಮವನ್ನು ಪೂರ್ತಿಗೊಳಿಸುವದರಲ್ಲಿಲ್ಲ, ಸುಖವೆಂಬುದು; ಕಾಮಕ್ರೋಧಾದಿಗಳ ವೇಗವನ್ನು ತಡೆದುಕೊಳ್ಳುವದರಲ್ಲಿಯೇ ನಿಜವಾದ ಸುಖವಿದೆ. ಕಾಮಕ್ರೋಧಗಳ ವೇಗವು ಬಲವಾದಮೇಲೆ ಅವುಗಳಿಂದಾಗುವ ಅನರ್ಥವು ಅಷ್ಟಿಷ್ಟಲ್ಲ; ಆದ್ದರಿಂದ ಮೊದಲೇ ಅವನ್ನು ತಡೆದುಕೊಂಡುಬಿಡಬೇಕು. ಯಾವದಾದರೊಂದು ಇಷ್ಟವಾದ ವಿಷಯವು ನೆನಪಿಗೆ ಬಂದರೆ ಅಥವಾ ಅದರ ಮಾತು ನಮ್ಮ ಕಿವಿಗೆ ಬಿದ್ದರೆ ಅದು ಸುಖಕ್ಕೆ ಕಾರಣವೆಂಬ ಭಾವನೆಯು ಹಿಂದಿನ ಅನುಭವದ ನೆನಪಿನಿಂದ ಎದ್ದುಕೊಳ್ಳುವದಷ್ಟೆ; ಆಗ ಅದು ಬೇಕು ಎಂದು ಬಲವಾಗಿ ಕಾಮವುಂಟಾಗಿ ಅಂತಃಕರಣವನ್ನು ಕದಡಿಬಿಡುತ್ತದೆ. ಆಗ ಅದರ ವೇಗದಿಂದ ನಮ್ಮ ಮೈಕೂದಲು ನಿಮಿರುವದು, ಕಣ್ಣುಗಳು ಅರಳಿಕೊಳ್ಳುವವು, ಮುಖವು ಹಿಗ್ಗುವದು. ಇದರಂತೆ ತನಗೆ ಆಗದ ವಸ್ತುವಿನ ವಿಚಾರವು ಕಿವಿಗೆ ಬಿದ್ದಾಗ ಅಥವಾ ನೆನಪಿಗೆ ಬಂದಾಗ ಎಂದಿಗೂ ಬರಬಾರದೆಂಬ ಹಗೆತನವು ಅಂತಃಕರಣವನ್ನು ಕದಡುವದು. ಆ ಕ್ರೋಧದ ವೇಗದಿಂದ ಮೈ ನಡುಗುವದು, ಬೆವರುವದು, ಹಲ್ಲುಕಡಿಯುವದು, ತುಟಿ ಕಚ್ಚುವದು, ಕಣ್ಣುಗಳನ್ನು ಕೆಂಪಗೆ ಮಾಡಿಕೊಳ್ಳುವದು-ಮುಂತಾದ ವಿಕಾರಗಳು ತೋರಿಕೊಳ್ಳುವವು. ಇಂಥ ವೇಗವನ್ನು ಮೊದಲೇ ತಡೆದುಕೊಳ್ಳುವವನೇ ವಿವೇಕಿಯು. ಅಂತಃಕರಣವು ಯಾವಾಗ ಕಾಮಕ್ರೋಧಾದಿಗಳ ವೇಗಕ್ಕೆ ಒಳಗಾಗುವದೆಂದು ಹೇಳುವದಕ್ಕೆ ಬರುವದಿಲ್ಲ. ಅವುಗಳನ್ನು ಈಗಲೇ ತಡೆದುಕೊಳ್ಳುವ ನಿಶ್ಚಯವನ್ನು ಮಾಡಿಕೊಳ್ಳಬೇಕು; ಸಾಯುವವರೆಗೂ ಇವುಗಳನ್ನು ನೆಚ್ಚದೆ ಎಚ್ಚರಿಕೆಯಿಂದಲೇ ಇರಬೇಕು. ಅವುಗಳ ವೇಗವು ಬಲವಾದರೆ ಎಂಥ ಅನರ್ಥಗಳಾಗುವವೆಂಬುದನ್ನು ಹೇಳುವದಕ್ಕಿಲ್ಲ. ಒಂದು ಹಳ್ಳಿಯಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಅವನು ಒಂದು ದಿನ ತೋಟದಿಂದ ಕೆಲಸವನ್ನು ಮಾಡಿಕೊಂಡು ಮನೆಗೆ ಬಂದನು. ಬಾಗಿಲಿಗೆ ಬೀಗವನ್ನು ಹಾಕಿತ್ತು. ಹೆಂಡತಿಯು ಎಲ್ಲಿಗೆ ಹೋಗಿರಬಹುದು ಎಂದು ಅಸಮಾಧಾನದಿಂದ

ಯೋಚಿಸುತ್ತಿರುವಲ್ಲಿ ಅವನಿಗೆ ಕ್ರೋಧದ ವೇಗವು ಹುಟ್ಟಿಕೊಂಡಿತು. ತಾನು ಆಯಾಸದಿಂದ ಬಳಲಿ ಬಂದಿರುವಾಗ ಬಾಗಿಲ ಬಳಿ ಕಾದಿರುವಂತೆ ಮಾಡಿದಳಲ್ಲ!-ಎಂಬ ಅಳಲಿನಿಂದ ಅವನ ಸಿಟ್ಟಿನ ಕಿಚ್ಚಿಗೆ ತುಪ್ಪವನ್ನು ಹಾಕಿದಂತೆ ಆಯಿತು. ಇಷ್ಟರಲ್ಲಿ ಭಾವಿಗೆ ನೀರನ್ನು ತರುವದಕ್ಕೆ ಹೋಗಿದ್ದ ಅವನ ಹೆಂಡತಿ ಬಂದಳು. ಬ್ರಾಹ್ಮಣನ ಕೈಯಲ್ಲಿ ಒಂದು ಮಚ್ಚು ಇತ್ತು. ಕ್ರೋಧದ ಭರದಲ್ಲಿ ತಾನು ಏನು ಮಾಡುತ್ತಿದ್ದೇನೆಂಬುದರ ವಿವೇಕವೇ ಇಲ್ಲದೆ ಒಂದು ಪೆಟ್ಟನ್ನು ಕೊಟ್ಟುಬಿಟ್ಟನು! ಈ ಕಥೆಯು ನಿಜವಾಗಿ ನಡೆದ ಒಂದು ಘಟನೆ ಎಂದು ನನ್ನ ಮಿತ್ರರೊಬ್ಬರು ಹೇಳಿದರು. ಆ ಬ್ರಾಹ್ಮಣನಿಗೆ ಆಮೇಲೆ ಪಶ್ಚಾತ್ತಾಪವು ಬಂತು. ಆದರೆ ಏನು ಪ್ರಯೋಜನ? ಸಿಟ್ಟಿನ ಭರದಲ್ಲಿ ಮಾಡಿದ ಅಕೃತ್ಯವನ್ನು ಶಾಂತವಾದಮೇಲೆ ಅಳಿಸಿಹಾಕುವದಕ್ಕಾದೀತೆ? ಆದ್ದರಿಂದ ಇಂದಿನಿಂದಲೇ ಸಾಯುವವರೆಗೂ ಕಾಮಾದಿಗಳ ವೇಗವನ್ನು ತಡೆದು ಕೊಳ್ಳುವೆನು—ಎಂದು ಯಾವ ವಿವೇಕಿಯು ನಿಶ್ಚಯಿಸಿಕೊಳ್ಳುವನೋ ಅಂಥವನೇ ನಿಜವಾಗಿ ಯೋಗಿಯು, ನಿಜವಾಗಿ ಸುಖಿಯು. ಜ್ಞಾನಿಯು ಕಾಮಕ್ರೋಧಗಳ ವೇಗವನ್ನು ಸಂಪೂರ್ಣವಾಗಿ ಜಯಿಸಿಕೊಂಡಿರುವನು. ಅವನೇ ಎಲ್ಲರಿಗಿಂತಲೂ ಹೆಚ್ಚಿನ ಯೋಗಿಯು, ಎಲ್ಲರಿಗಿಂತಲೂ ಸುಖಿಯು.

ಜ್ಞಾನಿಗೆ ಕಾಮಕ್ರೋಧಗಳು ವಶವಾಗಿರುವವು, ಅವನು ಅವುಗಳ ಅಡಿಯಾಳಾಗಿರುವದಿಲ್ಲ. ಅವನಿಗೆ ವಿಷಯಗಳಲ್ಲಿ ಸುಖವಿರುವದೆಂದಾಗಲಿ, ಅವು ಗಳಿಂದ ತನ್ನ ಮನಸ್ಸಿಗೆ ವಿನೋದವುಂಟಾದೀತೆಂದಾಗಲಿ ತೋರುವದಿಲ್ಲ. ಸುಖವು ತನ್ನೊಳಗೇ ಇರುವ ಆತ್ಮನಲ್ಲಿರುವದೆಂದು ಅವನಿಗೆ ಮನವರಿಕೆಯಾಗಿಬಿಟ್ಟಿದೆ. ಆದ್ದರಿಂದ ಅವನು ಆತ್ಮರತಿಯಾಗಿ ಆತ್ಮಕ್ರೀಡನಾಗಿ ಸುಖವನ್ನು ಅನುಭವಿಸುತ್ತಾನೆ. ಅವನು ವಿಷಯಿಗಳಂತೆ ಅಜ್ಞಾನದ ಕಗ್ಗತ್ತಲೆಯಲ್ಲಿ ಸಂಸಾರದ ಕಾಡಿನಲ್ಲಿ ಅಲೆಯು ತ್ತಿರುವದಿಲ್ಲ. ತನ್ನೊಳಗಿನ ಆತ್ಮನ ಬೆಳಕಿನಿಂದಲೇ ಅವನು ವ್ಯವಹರಿಸುತ್ತಿರುವದರಿಂದ ಅವನು ಎಂದೂ ಎಲ್ಲಿಯೂ ಎಡವಬೇಕಾದದ್ದಿಲ್ಲ, ಮುಗ್ಗರಿಸಬೇಕಾದದ್ದಿಲ್ಲ. ಅವನು ಪರಮಯೋಗಿಯು. ಅವನಿಗೆ ಬ್ರಹ್ಮನಿರ್ವಾಣವು ದೊರೆತಿರುವದು, ಏಕೆಂದರೆ ಅವನು ಬ್ರಹ್ಮವೇ ಆಗಿರುತ್ತಾನೆ.

ಕರ್ಮಯೋಗವೆಂಬ ಉಪಾಯದಿಂದ ಕ್ರಮಕ್ರಮವಾಗಿ ಜ್ಞಾನವನ್ನು ಪಡೆದು ಕೊಂಡರೆ ಸಿಕ್ಕುವ ಫಲವನ್ನು ವರ್ಣಿಸಿ ಭಗವಂತನು ಜ್ಞಾನಿಯನ್ನು ಹೊಗಳುತ್ತಿದಾನೆ. ಇನ್ನು ಮುಂದೆ ಕರ್ಮಯೋಗಕ್ಕಿಂತಲೂ ಅಂತರಂಗಸಾಧನವಾದ ಧ್ಯಾನಯೋಗವನ್ನು ಹೇಳಬೇಕೆಂದಿರುವದರಿಂದ ಈಗ ಜ್ಞಾನಿಯ ಸ್ತುತಿಯನ್ನೇ ಧ್ಯಾನಯೋಗಕ್ಕೆ ಅವತರಣಿಕೆಯಾಗಿ ಮಾಡುತ್ತಿದಾನೆ. ಕರ್ಮಯೋಗದಲ್ಲಿಯೂ ವಿಷಯಭೋಗದ

ಆಶೆಯಿರುವದಿಲ್ಲ; ಫಲತ್ಯಾಗವನ್ನೂ, ಸಂಗತ್ಯಾಗವನ್ನೂ ಮಾಡಿದಲ್ಲದೆ ಯಾವನೂ ಕರ್ಮಯೋಗಿಯಾಗುವ ಹಾಗಿಲ್ಲ. ಹಾಗಾದರೆ ಧ್ಯಾನಯೋಗದಲ್ಲಿರುವ ವಿಶೇಷವೇನು? ಎಂದರೆ ಕರ್ಮಯೋಗದಲ್ಲಿ ಯಾವ ಈಶ್ವರನನ್ನು ಗುರಿಯಾಗಿಟ್ಟುಕೊಂಡು ಕರ್ಮವನ್ನು ಮಾಡಬೇಕಾಗಿರುವದೋ ಆ ಈಶ್ವರನನ್ನು ನೇರಾಗಿ ಚಿಂತಿಸುವದು ಧ್ಯಾನಯೋಗವು. ಈಶ್ವರನೆಂಬುವನು ನಮ್ಮ ಹೊರಗೆ ಎಲ್ಲಿಯೋ ದೂರದಲ್ಲಿರುವದಿಲ್ಲ; ನಮ್ಮ ಆತ್ಮನೇ ಆಗಿ ನಮ್ಮೊಳಗೇ ಇದ್ದುಕೊಂಡಿರುತ್ತಾನೆ. ಆ ಅಂತರಾತ್ಮನಾದ ಬ್ರಹ್ಮವನ್ನು ಧ್ಯಾನಿಸುವದೇ ಮನುಷ್ಯನಿಗೆ ನಿಜವಾದ ಸುಖಕ್ಕೆ ಉಪಾಯವು, ವಿಷಯಧ್ಯಾನವಲ್ಲ-ಎಂಬುದನ್ನು ಈಗ ಸ್ಪಷ್ಟಪಡಿಸಿರುತ್ತದೆ. ಧ್ಯಾನಯೋಗವು ಬಲಿತರೆ ಅದರ ಫಲವು ಸಮ್ಯಗ್ಜ್ಞಾನವಾಗಿ ಕಾಣಿಸಿಕೊಳ್ಳುವದು. ಆದ್ದರಿಂದಲೇ ಭಗವಂತನು ಇಲ್ಲಿ ಆತ್ಮಜ್ಞಾನಿಯನ್ನು ಅಂತಃಸುಖನು, ಅಂತರಾರಾಮನು, ಅಂತರ್ಜ್ಯೋತಿ-ಎಂದು ಹೊಗಳಿರುತ್ತಾನೆ. ಜ್ಞಾನಯೋಗಿಗೆ ಆತ್ಮವಸ್ತುವೊಂದೇ ಪರಮಾರ್ಥವು; ಅದು ಒಳಗೂ ಇಲ್ಲ, ಹೊರಗೂ ಇಲ್ಲ. ಒಳಗುಹೊರಗುಗಳನ್ನು ಅಳಿಸಿಹಾಕಿ ತಾನೇ ತಾನಾಗಿರುವ ಅದ್ವಿತೀಯವಸ್ತುವನ್ನು ಒಳಗಿದೆ ಎಂದು ಹೇಳುವದು ಶರೀರಾಭಿಮಾನಿಗಳಾದ ನಮ್ಮಗಳ ವ್ಯವಹಾರ ದೃಷ್ಟಿಯಿಂದ. ಪ್ರತಿಯೊಬ್ಬನೂ ತನ್ನ ತನ್ನ ಒಳಗೇ ಆತ್ಮನನ್ನು ಧ್ಯಾನಿಸಿ ವಿಷಯಸುಖಕ್ಕಿಂತಲೂ ಮಿಗಿಲಾಗಿರುವ ನಿರತಿಶಯವಾದ ಬ್ರಹ್ಮಾನಂದವನ್ನು ಪಡೆದುಕೊಳ್ಳಬೇಕಾಗಿದೆ ಎಂಬ ತಿಳಿವಳಿಕೆಯನ್ನು ಸಾಧಕರಿಗೆ ಕೊಡುವದೇ ಇದರ ಪ್ರಯೋಜನವು.

ಬ್ರಹ್ಮನಿರ್ವಾಣಕ್ಕೆ ಅಂತರ್ದೃಷ್ಟಿಯು ಬೇಕು, ಬ್ರಹ್ಮಧ್ಯಾನವು ಬೇಕು, ಬ್ರಹ್ಮಭೂತನಾಗಿರಬೇಕು. ಯಾವನು ಯಾವದರಲ್ಲಿ ಸೇರಿಹೋಗುತ್ತಾನೋ ಅವನು ಅದೇ ಆಗಿಬಿಟ್ಟಿರುತ್ತಾನೆ. ಉದಾಹರಣೆಗೆ ಸಿಟ್ಟಿನ ವಿಷಯದಲ್ಲಿ ನಾವು ಮಾತನಾಡುತ್ತಿದ್ದರೆ ನಮಗೆ ಸಿಟ್ಟಿನ ಪ್ರತ್ಯಯವೊಂದು ಮನಸ್ಸಿನಲ್ಲಿ ಎದ್ದುಕೊಂಡಿರುತ್ತದೆ; ನಾವೂ ಸಿಟ್ಟೂ ಬೇರೆಯಾಗಿರುತ್ತೇವೆ. ಆದರೆ ನಮಗೆ ಸಿಟ್ಟು ಬಂದುಬಿಟ್ಟಿರುವಾಗ ಹೀಗಲ್ಲ, ನಾವೇ ಸಿಟ್ಟಾಗಿರುತ್ತೇವೆ. ಸಿಟ್ಟಿಗೂ ನಮಗೂ ಆಗ ಅಂತರವಿರುವದಿಲ್ಲ, ಸಿಟ್ಟಿನಲ್ಲಿ ಮುಳುಗಿ ತಾದಾತ್ಮ್ಯವನ್ನು ಹೊಂದಿಬಿಟ್ಟಿರುತ್ತೇವೆ. ಇದರಂತೆ ಬ್ರಹ್ಮಧ್ಯಾನದಿಂದ ಬ್ರಹ್ಮವೇ ಆಗಿಬಿಟ್ಟವನು ಬ್ರಹ್ಮಾನಂದವನ್ನು ಹೊಂದುತ್ತಾನೆ. ಪ್ರಹ್ಲಾದನನ್ನು ನಾಗಪಾಶದಿಂದ ಬಿಗಿದು ಸಮುದ್ರದೊಳಕ್ಕೆ ಹಾಕಿ ಮೇಲೆ ಬೆಟ್ಟಗಳನ್ನೇ ಮುಚ್ಚಿದರಂತೆ. ಆದರೆ ಅವನು ತನ್ನ ಆಹ್ನಿಕಧ್ಯಾನದ ಹೊತ್ತು ಬರುತ್ತಲೂ ಎಂದಿನಂತೆ "ನಾನು ಬ್ರಹ್ಮವು, ಬ್ರಹ್ಮವೇ ನಾನು, ಬ್ರಹ್ಮಕ್ಕಿಂತ ಬೇರೆಯಾಗಿ ಯಾವದೊಂದೂ ಇರುವದಿಲ್ಲ" ಎಂದು ಉತ್ಕಟವಾದ ಧ್ಯಾನದಲ್ಲಿ ಲೀನವಾಗಿಬಿಟ್ಟನು. ಆಗ ಅವನನ್ನು ನಾಗಪಾಶವು ಕಟ್ಟಿಹಾಕಲು ಶಕ್ತವಾಗಲಿಲ್ಲ. ಪುಟನೆಗೆದ ಚಂಡಿನಂತೆ ಅವನ ಶರೀರವು ಮೇಲಕ್ಕೇರಿತು.

ಬೆಟ್ಟಗಳು ಒಂದಕ್ಕೊಂದು ತಾಟಾಡುತ್ತಾ ಆ ಶರೀರವು ಈಚೆಗೆ ಬರುವದಕ್ಕೆ ಇಂಬುಗೊಟ್ಟು ಚದರಿಹೋದವು-ಎಂದು ಪುರಾಣದಲ್ಲಿ ವರ್ಣಿತವಾಗಿದೆ. ಹೀಗೆಯೇ ಯಾವನು ವಿಷಯಚಿಂತನೆಯನ್ನು ಬಿಟ್ಟು ಆತ್ಮನಲ್ಲಿಯೇ ಏಕಾಗ್ರತೆಯಿಂದ ಧ್ಯಾನ ಬಲದಿಂದ ನಿಂತುಬಿಡುವನೋ ಅವನು ಉಪಾಧಿಯ ಕಟ್ಟನ್ನೆಲ್ಲ ಕಳಚಿಕೊಂಡು ಬ್ರಹ್ಮದಲ್ಲಿಯೇ ಸೇರಿಹೋಗಿಬಿಡುತ್ತಾನೆ. ಆಗ ಅವನಿಗೆ ಬ್ರಹ್ಮನಿರ್ವಾಣವು ದೊರುಕುತ್ತದೆ.

ಬ್ರಹ್ಮನಿರ್ವಾಣವನ್ನು, ಬ್ರಹ್ಮಸ್ವರೂಪದಲ್ಲಿ ನಿಲ್ಲುವ ಮಿಗಿಲಿಲ್ಲದ ಆನಂದವನ್ನು, ಪಡೆಯುವದಕ್ಕೆ ಇನ್ನೂ ಏನೇನು ಬೇಕು?- ಎಂಬುದನ್ನು ತಿಳಿಸುವದಕ್ಕಾಗಿ ಆ ನಿರ್ವಾಣವನ್ನು ಪಡೆದಿರುವ ಜ್ಞಾನಿಗಳ ಲಕ್ಷಣವನ್ನು ಇಲ್ಲಿ ವರ್ಣಿಸಿರುತ್ತದೆ.

**ಲಭನ್ತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥** (೫-೨೫)
**ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥** (೫-೨೬)

ಯಾರಲ್ಲಿ ಪುಣ್ಯಪಾಪಗಳ ಸಂಬಂಧವಿಲ್ಲವೋ ಅವರಿಗೆ ಆ ಬ್ರಹ್ಮನಿರ್ವಾಣವು ದೊರಕುತ್ತದೆ. ಕರ್ಮಗಳು ಸವೆದಲ್ಲದೆ ಬ್ರಹ್ಮಾನಂದದ ಸುಳಿವೂ ಕಾಣುವದಿಲ್ಲ. ಯಾರಿಗೆ ಪರಮಾರ್ಥದ ವಿಷಯದ ಸಂಶಯಗಳು ಕತ್ತರಿಸಿಹೋಗಿರುವವೋ ಯಾರಿಗೆ ಆತ್ಮವಿಷಯದಲ್ಲಿ ನಿಜವಾದ ಜ್ಞಾನವುಂಟಾಗಿರುವದೋ, ಅವರಿಗೆ ಆ ನಿರ್ವಾಣವು ದೊರಕುತ್ತದೆ. ಯಾರು ಇಂದ್ರಿಯಗಳನ್ನು ಜಯಿಸಿರುವರೋ ಯಾರು ಎಲ್ಲಾ ಪ್ರಾಣಿಗಳಿಗೂ ಹಿತವನ್ನೇ ಮಾಡುವದರಲ್ಲಿ ನಿರತರಾಗಿರುವರೋ ಅವರಿಗೆ ನಿರ್ವಾಣವು ದೊರಕುತ್ತದೆ. ಆತ್ಮಜ್ಞಾನಿಗಳಿಗೆ ಯಾವ ಸಂಶಯವೂ ಇರುವದಿಲ್ಲ; ಅತ್ಯಂತ ಮೂಢರಿಗಂತೂ ಯಾವ ಸಂಶಯವೂ ಅಂಕುರಿಸಿರುವದಿಲ್ಲ. ತತ್ತ್ವಾರ್ಥದ ವಿಷಯಕ್ಕೆ ಯಾರಿಗೆ ಬಗೆಬಗೆಯ ಸಂಶಯಗಳಿರುವವೋ ಅವರು ಬ್ರಹ್ಮನಿರ್ವಾಣಕ್ಕಾಗಿ ಯತ್ನವನ್ನು ಮಾಡಬೇಕು. ಯಾರಿಗೆ ಇಂದ್ರಿಯಗಳು ಅತ್ಯಂತ ವಶವಾಗಿರುವವೋ ಅವರು ಆತ್ಮಜ್ಞಾನಿಗಳೇ; ಯಾರು ಇಂದ್ರಿಯಪರವಶರಾಗಿರುವರೋ ಅವರು ಕಾಮಿಗಳು. ಉಳಿದವರು ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡು ಮನಸ್ಸನ್ನು ಜಯಿಸಿಕೊಂಡು ಬ್ರಹ್ಮನಿರ್ವಾಣಕ್ಕೆ ಯತ್ನಿಸಬೇಕು. ಜ್ಞಾನಿಗಳು ಸಹಜವಾಗಿಯೇ ಸಕಲಭೂತಗಳಿಗೂ ಹಿತವನ್ನು ಮಾಡುತ್ತಿರುವರು; ಕ್ರೂರಾತ್ಮರಾದ ಪ್ರಾಕೃತರು ಸಹಜವಾಗಿಯೇ ಎಲ್ಲಾ ಪ್ರಾಣಿಗಳನ್ನೂ ಹಿಂಸಿಸುತ್ತಿರುವರು. ಆದರೆ ಸಾಧಕರಾದವರು ಶಾಸ್ತ್ರದಲ್ಲಿ ನಿಷಿದ್ಧವಾಗಿರುವ ಯಾವ ಹಿಂಸೆಯನ್ನೂ ಮಾಡದೆ ಎಲ್ಲರಿಗೂ ಹಿತವನ್ನೇ

ಕೋರುತ್ತಿರಬೇಕು. ಹಾಗಾದರೆ ಅವರಿಗೆ ಎಲ್ಲೆಲ್ಲಿಯೂ ಒಬ್ಬ ಆತ್ಮನನ್ನೇ ಕಂಡು ಬ್ರಹ್ಮನಿರ್ವಾಣವನ್ನು ಪಡೆದುಕೊಳ್ಳುವದು ಸಾಧ್ಯವಾಗುತ್ತದೆ.

ಯಾರು ಕಾಮಕ್ರೋಧಗಳಿಲ್ಲದೆ, ಯತಚಿತ್ತರಾಗಿ ಆತ್ಮತತ್ತ್ವವನ್ನು ಅರಿತು ಕೊಂಡಿರುವರೋ ಅಂಥ ಮಹಾತ್ಮರಿಗೆ ಎಲ್ಲೆಲ್ಲಿಯೂ ಬ್ರಹ್ಮವೇ ಕಾಣಸುತ್ತಿರುವದು. ಸಾಮಾನ್ಯಜನರು ಎಲ್ಲಾ ಕ್ಷೇತ್ರಗಳಿಗೂ ಯಾತ್ರೆಮಾಡಿದರೂ ಅವರಿಗೆ ಎಲ್ಲಿಯೂ ಈಶ್ವರನ ದರ್ಶನವಾಗುವದಿಲ್ಲ. ಅವರಿಗೆ ಯಾತ್ರಾಸ್ಥಳಗಳು ಕೂಡ ಯಾತನಾ ಸ್ಥಳಗಳಾಗಿರುತ್ತವೆ. ಏಕೆಂದರೆ "ಈ ಸ್ಥಳದಲ್ಲಿ ಎಷ್ಟು ಹಣವನ್ನು ವೆಚ್ಚಮಾಡುವದು ಯುಕ್ತ? ಯಾರಾದರೂ ನಮ್ಮನ್ನು ಇಲ್ಲಿ ಮೋಸಪಡಿಸಿದರೇನು ಗತಿ?" ಎಂದು ಮುಂತಾಗಿ ಅವರು ಹೋದಕಡೆಯಲ್ಲೆಲ್ಲ ವ್ಯವಹಾರದ ಚಿಂತೆಯನ್ನೇ ಬೆಳೆಯಿಸಿ ಕೊಳ್ಳುತ್ತಿರುವರು. ಆದರೆ ಜ್ಞಾನಿಗಳಾದವರು ಯಾವ ಯಾತ್ರೆಯನ್ನೂ ಮಾಡದಿದ್ದರೂ ತಾವು ಇದ್ದಲ್ಲಿಯೇ ಬ್ರಹ್ಮವನ್ನು ಕಂಡು ಆನಂದಪಡುತ್ತಿರುವರು. ಅವರು ಬದುಕಿದ್ದರೂ ಶರೀರವನ್ನು ಬಿಟ್ಟರೂ ಅವರಿಗೆ ಬ್ರಹ್ಮಾನಂದವೇ ಇರುತ್ತದೆ.

---

## ೩೮. ಧ್ಯಾನಯೋಗಕ್ಕೆ ಅವತರಣಿಕೆ ೫-(೨೭-೨೯)

(೨೩.೨.೪೭)

ಗೀತೆಯಲ್ಲೆಲ್ಲ ಜ್ಞಾನವನ್ನು ಗುರಿಯಾಗಿಟ್ಟುಕೊಂಡು ಅದಕ್ಕೆ ಸಾಧನವಾಗಿ ಕರ್ಮಯೋಗವನ್ನು ಹೇಳಿರುತ್ತದೆ. ಉಪನಿಷತ್ತುಗಳು ಸಿದ್ಧಾಂತಪ್ರಧಾನವಾಗಿದ್ದರೆ ಗೀತೆಯು ಸಾಧನಪ್ರಧಾನವಾಗಿರುತ್ತದೆ. ಗೀತೆಯಲ್ಲಿ ಕರ್ಮಯೋಗವೇ ಮುಖ್ಯ ಸಾಧನವಾಗಿರುತ್ತದೆ. ಕರ್ಮಯೋಗವು ಮೂರು ಬಗೆಯಾಗಿರುತ್ತದೆ. ಈ ಯೋಗವು ಕರ್ಮಪ್ರಧಾನವಾದರೆ ಕರ್ಮಯೋಗವೆನಿಸುವದು, ಧ್ಯಾನಪ್ರಧಾನವಾದರೆ ಧ್ಯಾನಯೋಗವೆನಿಸುವದು, ಪ್ರೇಮಪ್ರಧಾನವಾದರೆ ಭಕ್ತಿಯೋಗವೆನಿಸುವದು. "ಜ್ಞಾನಯೋಗದಿಂದ ಸಾಂಖ್ಯರಿಗೂ, ಕರ್ಮಯೋಗದಿಂದ ಯೋಗಿಗಳಿಗೂ ಸಾಧನವನ್ನು ಹೇಳಿರುತ್ತೇನೆ" ಎಂದು ಭಗವಂತನು ಹೇಳಿದ ಯೋಗದಲ್ಲಿ ಈ ಮೂರು ಮೆಟ್ಟಲುಗಳೂ ಇರುತ್ತವೆ. ಈವರೆಗೆ ಕರ್ಮಯೋಗವೆಂಬ ಮೊದಲನೆಯ ಮೆಟ್ಟಲನ್ನು ಹೇಳಿದ್ದಾಯಿತು. ಈಗ ಧ್ಯಾನಯೋಗವೆಂಬ ಎರಡನೆಯ ಮೆಟ್ಟಲನ್ನು ಹೇಳುತ್ತಿದಾನೆ.

ಕರ್ಮಯೋಗವು ಬಹಿರಂಗವಾಗಿರುತ್ತದೆ. ಇದನ್ನು ಸಾಧಕರು ಸುಲಭವಾಗಿ ಮಾಡಬಹುದು. ಶಾಸ್ತ್ರೋಕ್ತಕರ್ಮಗಳನ್ನು ಸಂಗವನ್ನು ತೊರೆದು ಫಲಾಶೆಯಿಲ್ಲದೆ

ಈಶ್ವರಾರ್ಥವಾಗಿ ಮಾಡುವದು ಕರ್ಮಯೋಗವು. ಸಾಮಾನ್ಯರಾದವರ ದೃಷ್ಟಿಯಿಂದ ಈ ಯೋಗವೇ ಕಷ್ಟಸಾಧ್ಯವಾಗಿರುತ್ತದೆ. ಆದರೆ ಧ್ಯಾನಯೋಗವೆಂಬ ಅಂತರಂಗದ ಸಾಧನವು ಇನ್ನೂ ಕಷ್ಟವಾಗಿರುತ್ತದೆ. ಹಾಲನ್ನು ಕಾಯಿಸಬೇಕಾದರೆ ಹಾಲಿಟ್ಟ ಪಾತ್ರೆಯನ್ನು ಕಾಯಿಸುವೆವು. ಅಲ್ಲಿ ಪಾತ್ರೆಯು ಕಾದಬಳಿಕ ಹಾಲು ಹೇಗೆ ಕಾಯುವದೋ ಹಾಗೆಯೇ ಇಲ್ಲಿ ನಿಷ್ಕಾಮಕರ್ಮವನ್ನು ಮಾಡುವ ಕರ್ಮಯೋಗವು ದಕ್ಕಿದ ಬಳಿಕವೇ ಮನೋಮಾತ್ರದಿಂದ ಮಾಡುವ ಧ್ಯಾನಯೋಗವು ವಶವಾಗುತ್ತದೆ. ಈ ಧ್ಯಾನಯೋಗದ ಸ್ವರೂಪವನ್ನು ಸಂಗ್ರಹವಾಗಿ ಮೊದಲು ತಿಳಿಸಿ ಭಗವಂತನು ಮುಂದೆ ಅದನ್ನು ವಿಸ್ತರಿಸುತ್ತಾನೆ. ಧ್ಯಾನಯೋಗಕ್ಕೆ ಸೂತ್ರಭೂತವಾಗಿರುವ ಶ್ಲೋಕಗಳು ಯಾವವೆಂದರೆ:

**ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾನ್ತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥** (೫-೨೭)
**ಯತೇನ್ದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥** (೫-೨೮)

ಸ್ಪರ್ಶಗಳನ್ನು ಎಂದರೆ ಶಬ್ದಾದಿವಿಷಯಗಳನ್ನು ಹೊರಚ್ಚುಮಾಡಬೇಕು. ಶಬ್ದಾದಿಗಳು ಹೊರಗೇ ಇರುತ್ತವೆ; ಆದರೆ ಅವು ಶ್ರೋತ್ರೇಂದ್ರಿಯವೇ ಮುಂತಾದ ದ್ವಾರಗಳಿಂದ ಒಳಹೊಕ್ಕಾಗ ಮನಸ್ಸು ಅವುಗಳ ವಾಸನೆಯನ್ನು ತನ್ನೊಳಗೇ ನಿಲ್ಲಿಸಿಕೊಂಡುಬಿಡುತ್ತದೆ. ಆಗ ವಿಷಯಗಳನ್ನು ಒಳಕ್ಕೆ ಸೇರಿಸಿಕೊಂಡಂತಾಯಿತು. ಆದರೆ ವಿಷಯಗಳು ಮನಸ್ಸಿಗೆ ತಾಕಿದರೂ ಅವುಗಳನ್ನು ಚಿಂತಿಸದೆ ಇರುವದಾದರೆ ಅವುಗಳನ್ನು ಹೊರಗೇ ಬಿಟ್ಟಂತೆ ಆಗುವದು. ಕರ್ಮಯೋಗದಲ್ಲಿ ವಿಷಯಗಳನ್ನು ರಾಗದ್ವೇಷವಿಲ್ಲದೆ ಅನುಭವಿಸುತ್ತಾ ಇರಬೇಕೆಂದು ಹೇಳಿದೆ; ಇಲ್ಲಾದರೊ, ವಿಷಯ ಗಳನ್ನು ಚಿಂತಿಸಲೇಬಾರದೆಂದು ಹೇಳಿದೆ. ಇದು ಅಧಿಕಾರಿತಾರತಮ್ಯದಿಂದ ಹೇಳಿದ್ದೆಂದು ತಿಳಿಯಬೇಕು. ಒಂದು ಪರೀಕ್ಷೆಯಲ್ಲಿ ಕೊಟ್ಟ ಗಣಿತಪ್ರಶ್ನೆಗಳಿಗೆ ಉತ್ತರವನ್ನು ಬರೆಯುವಾಗ ಹೆಚ್ಚು ಜಟಿಲವಾದ ಪ್ರಶ್ನೆಗಳನ್ನು ಕೈಬಿಟ್ಟು ಸುಮ್ಮನೆ ಗುಣಿಸುವದು, ಲಘುತಮ ಸಾಮಾನ್ಯ ಅಪವರ್ತನ, ಸುಲಭರೂಪಕ್ಕೆ ತರುವದು, ರೂಢಿಗಣಿತ-ಮುಂತಾದ ರೂಪದ ಸಾಮಾನ್ಯಪ್ರಕ್ರಿಯೆಯ ಲೆಕ್ಕಗಳನ್ನು ಮೊದಲು ಮಾಡಿಬಿಡ ಬೇಕೆಂದು ಬುದ್ಧಿಯು ಅಷ್ಟು ಚುರುಕಾಗಿಲ್ಲದ ವಿದ್ಯಾರ್ಥಿಗೆ ಹೇಳಿಕೊಡುವ ಉಪಾಧ್ಯಾಯನು ಜಾಣರಾದ ಹುಡುಗರಿಗೆ ಮಿಶ್ರೋದಾಹರಣೆಯ ಲೆಕ್ಕಗಳನ್ನು ಮೊದಲು ಮಾಡಿರೆಂದು ತಿಳಿವಳಿಕೆ ಹೇಳುವದುಂಟಲ್ಲವೆ? ಇಬ್ಬರು ಹುಡುಗರೂ ತಕ್ಕಷ್ಟು ಗುಣಸಂಖ್ಯೆಯನ್ನು ಪಡೆದು ಪರೀಕ್ಷೆಯಲ್ಲಿ ತೇರ್ಗಡೆಹೊಂದಭೇಕೆಂಬುದೇ

ಉಪಾಧ್ಯಾಯನ ಉದ್ದೇಶವಾಗಿರುವದರಿಂದ ಹಾಗೆ ಅವರವರ ಯೋಗ್ಯತೆಗೆ ಅನುಗುಣವಾಗಿ ತಿಳಿವಳಿಕೆಯನ್ನು ಹೇಳಿರುತ್ತಾನೆ; ಅಲ್ಲವೆ? ಇದರಂತೆಯೇ ವಿಷಯಗಳ ಸೇವನೆಯನ್ನು ರಾಗದ್ವೇಷಗಳಿಲ್ಲದೆ ಮಾಡಬೇಕೆಂದು ಹಿಂದೆ ಹೇಳಿ ಈಗ ವಿಷಯಗಳನ್ನು ಹೊರಚ್ಚುಮಾಡಿ ಧ್ಯಾನಯೋಗವನ್ನು ಅನುಷ್ಠಾನಮಾಡಬೇಕೆಂದು ಹೇಳಿರುವದು ಅಧಿಕಾರಿಗಳ ಯೋಗ್ಯತಾತಾರತಮ್ಯದಿಂದಲೇ.

"ಕಣ್ಣನ್ನು ಹುಬ್ಬುಗಳ ನಡುವೆ ಮಾಡಿಕೊಳ್ಳಬೇಕು" ಎಂಬುದು ಧ್ಯಾನಯೋಗಕ್ಕಾಗಿ ಮಾಡಿರುವ ಎರಡನೆಯ ಉಪದೇಶವು. ದೃಷ್ಟಿಯನ್ನು ಅತ್ತಿತ್ತ ಹರಿಯದಂತೆ ಮಾಡಿಕೊಳ್ಳಬೇಕೆನ್ನುವದೇ ಇದರ ಅರ್ಥ. ಹಠಯೋಗವೆಂಬ ಒಂದಾನೊಂದು ಸಾಧನವಿರುತ್ತದೆ. ಅದರಲ್ಲಿ ಹುಬ್ಬುಗಳ ನಡುವೆ ದೃಷ್ಟಿಯನ್ನು ಒಕ್ಕೂಡಿಸುವ ಒಂದು ಸಾಧನವನ್ನೂ ಹೇಳುವದುಂಟು. ಆದರೆ ಇಲ್ಲಿ ಅದರ ಪರಾಮರ್ಶವೇನೂ ಇರುವದಿಲ್ಲ. ಗೀತೆಯಲ್ಲಿ ಹಠಯೋಗವನ್ನು ಎಲ್ಲಿಯೂ ಉಪದೇಶಿಸಿರುವದಿಲ್ಲ.

"ಪ್ರಾಣಾಪಾನಗಳನ್ನು ಸಮವಾಗಿ ಮಾಡಿಕೊಳ್ಳಬೇಕು" ಎಂಬುದು ಮೂರನೆಯ ಉಪದೇಶವು. ಪ್ರಾಣಾಪಾನಗಳು ವಾಯುವಿಶೇಷಗಳು. ಮನಸ್ಸು ಹೊರಕ್ಕೂ ಒಳಕ್ಕೂ ಹರಿದಾಡುತ್ತಿರುವದರಿಂದ ಅದನ್ನು ಚೆನ್ನಾಗಿ ನಿಲ್ಲಿಸಿಕೊಂಡು ಆತ್ಮಧ್ಯಾನವನ್ನು ಮಾಡುವದು ಅವಶ್ಯವು. ಆದರೆ ಕೆಲವರಿಗೆ ನೇರಾಗಿ ಮನಸ್ಸನ್ನೇ ಬಿಗಿಹಿಡಿಯುವದಕ್ಕೆ ಆಗುವದಿಲ್ಲ. ಆದ್ದರಿಂದ ಸ್ಥೂಲವಾಗಿರುವ ಪ್ರಾಣವಾಯುವನ್ನು ನಿರೋಧಮಾಡುವ ಮೂಲಕ ಚಿತ್ತವನ್ನು ಬಿಗಿಹಿಡಿಯಬೇಕೆಂದು ಇಲ್ಲಿ ಹೇಳುತ್ತದೆ. ಇದು ಪಾತಂಜಲ ಯೋಗದಲ್ಲಿ ಪ್ರಾಣಾಯಾಮವೆಂಬ ಯೋಗಾಂಗವೆನಿಸುತ್ತದೆ. ಇದರ ವಿಷಯವನ್ನು ಮುಂದೆ ಪ್ರಸ್ತಾಪಿಸಲಾಗುವದು.

"ಇಂದ್ರಿಯಗಳನ್ನೂ ಮನಸ್ಸನ್ನೂ ಬುದ್ಧಿಯನ್ನೂ ಬಿಗಿಹಿಡಿಯಬೇಕು" ಎಂಬುದು ನಾಲ್ಕನೆಯ ತಿಳಿವಳಿಕೆ. ಇದು ಧ್ಯಾನಯೋಗಕ್ಕೆ ಅತ್ಯವಶ್ಯವೆಂಬುದನ್ನು ಹೇಳಬೇಕಾದದ್ದೇ ಇಲ್ಲ. ಇಂದ್ರಿಯಜಯವನ್ನು ಕುರಿತು ಗೀತೆಯಲ್ಲಿ ಮತ್ತೆ ಮತ್ತೆ ಹೇಳಿರುತ್ತದೆ. ವಿಷಯಾಸಕ್ತಿಯನ್ನು ತಪ್ಪಿಸುವದಕ್ಕೆ ಇಂದ್ರಿಯನಿಗ್ರಹವು ಅತ್ಯವಶ್ಯವಾಗಿರುತ್ತದೆ ಎಂಬುದು ಸ್ಪಷ್ಟವೇ ಆಗಿದೆ. ಮನೋಬುದ್ಧಿಗಳನ್ನು ಬಿಗಿಹಿಡಿಯುವದು ಆತ್ಮಧ್ಯಾನಕ್ಕಾಗಿ. ಇಂದ್ರಿಯ, ಮನಸ್ಸು, ಬುದ್ಧಿ, ಇವುಗಳನ್ನು ನಾವು ಬಿಗಿಹಿಡಿದರೆ ನಮಗೆ ಯಾವ ಅಂಜಿಕೆಯೂ ಇಲ್ಲ. ಇವುಗಳು ನಮ್ಮನ್ನು ಹಿಡಿದವೆಂದರೆ ಬಂಧಕವಾಗುತ್ತವೆ. ಕುದುರೆಯು ಸವಾರನ ಹಿಡಿತದಲ್ಲಿರುವ ಬದಲಿಗೆ ಕುದುರೆಯು ಹೋದ ಕಡೆಗೆ ಸವಾರನು ಹೋಗಬೇಕಾಗಿಬಂದರೆ ಹೇಗೆ ತೊಂದರೆಗೀಡಾಗುವನೋ ಹಾಗೆಯೇ ಇಲ್ಲಿಯೂ ತಿಳಿಯಬೇಕು.

"ಇಚ್ಛೆ, ಭಯ, ಕ್ರೋಧ-ಇವುಗಳು ಹೋಗಿರಬೇಕು" ಎಂಬುದು ಧ್ಯಾನಯೋಗಕ್ಕಾಗಿ ಮಾಡಿರುವ ಐದನೆಯ ಉಪದೇಶವು. ಜನರ ಮನಸ್ಸು ಯಾವಾಗಲೂ ಏನಾದರೂ ಬೇಕು ಎನ್ನುತ್ತಲೇ ಇರುತ್ತದೆ. ಅದಕ್ಕೆ ಯಾವದಾದರೊಂದು ಅನಿಷ್ಟಪ್ರಾಪ್ತಿಯ ಅಂಜಿಕೆ ಇದ್ದೇ ಇರುತ್ತದೆ; ತನ್ನ ಇಚ್ಛೆಗೆ ಯಾವದಾದರೂ ಅಡ್ಡಿ ಬಂದರೆ ಅದಕ್ಕೆ ಸಿಟ್ಟು ಬರುತ್ತಲೇ ಇರುತ್ತದೆ. ಧ್ಯಾನಯೋಗವು ದಕ್ಕಬೇಕಾದರೆ ಇಚ್ಛಾಭಯಕ್ರೋಧಗಳು ಸಂಪೂರ್ಣವಾಗಿ ಹೋಗಿಬಿಡಬೇಕು. ಏಕೆಂದರೆ ಇಚ್ಛಾದಿ ಗಳಿದ್ದರೆ ಹೊರಕ್ಕೆ ಮನಸ್ಸು ಹರಿಯಬೇಕಾಗುತ್ತದೆ, ತನ್ನೊಳಗಿರುವ ಆತ್ಮನನ್ನು ಚಿಂತಿಸುವದು ಆಗದೆ ಹೋಗುತ್ತದೆ.

ಯಾವನು ವಿಷಯಚಿಂತನೆಯನ್ನು ಬಿಟ್ಟು ದೃಷ್ಟಿಯನ್ನು ಹರಿದಾಡಗೊಡದೆ ಪ್ರಾಣಸಂಯಮವನ್ನು ಮಾಡಿಕೊಂಡು ಇಂದ್ರಿಯಮನೋಬುದ್ಧಿಗಳನ್ನು ಹತೋಟಿಗೆ ತಂದುಕೊಂಡಿರುವನೋ ಯಾವನು ಇಚ್ಛಾದಿಗಳಿಂದ ಮನಸ್ಸು ಹೊರಕ್ಕೆ ತಲೆಹಾಕದಂತೆ ನೋಡಿಕೊಳ್ಳಬಲ್ಲನೋ ಅವನು ಯಾವಾಗಲೂ ಮುಕ್ತನೇ; ಅವನು ಧ್ಯಾನಯೋಗದಿಂದ ಜ್ಞಾನವನ್ನು ಹೊಂದಿ ತನ್ನ ನಿತ್ಯಮುಕ್ತಸ್ವರೂಪವನ್ನು ಹೊಂದುವನು-ಎಂಬುದು ಮೇಲೆ ಉದಾಹರಿಸಿರುವ ಎರಡು ಶ್ಲೋಕಗಳ ಒಟ್ಟರ್ಥವು.

ಇದಿಷ್ಟು ಧ್ಯಾನಯೋಗದ ಅವತರಣಿಕೆಯಾಯಿತು. ಧ್ಯಾನಯೋಗಕ್ಕೆ ವಿಷಯ ವಾಗಿರುವ ಪರಮಾತ್ಮನನ್ನು ತಿಳಿಸಿ ಅದರಿಂದ ಫಲಿಸುವ ಭಕ್ತಿಯೋಗಕ್ಕೂ ಸೂಚಿಕೆ ಯಾಗಿ ಮುಂದಿನ ಶ್ಲೋಕವು ಬಂದಿರುತ್ತದೆ:

**ಭೋಕ್ತಾರಂ ಯಜ್ಞ ತಪಸಾಂ ಸರ್ವಲೋಕಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾನ್ತಿಮೃಚ್ಛತಿ ॥** (೫-೨೯)

ಯಜ್ಞದಾನತಪಸ್ಸುಗಳು ಯಾರಿಗೆ ಅರ್ಪಿತವಾಗುವವು? ಇಂದ್ರ, ಅಗ್ನಿ, ಮುಂತಾದ ದೇವತೆಗಳೇ ಯಜ್ಞದಾನತಪಸ್ಸುಗಳನ್ನು ಒಪ್ಪಿಕೊಳ್ಳುವವರು ಎಂದು ಯಾಜ್ಞಿಕರು ಭಾವಿಸಿರಬಹುದು. ಆದರೆ ಪರಮಾರ್ಥವು ಹೀಗಿಲ್ಲ; ಸರ್ವದೇವ ತಾತ್ಮನಾಗಿರುವ ಪರಮಾತ್ಮನೇ ಅವುಗಳನ್ನು ತೆಗೆದುಕೊಳ್ಳುವವನು. ಇಂದ್ರಾದಿಗಳು ತಮ್ಮ ತಮ್ಮ ಲೋಕಕ್ಕೆ ಒಡೆಯರೆಂಬುದು ನಿಜ; ಆದರೆ ಸರ್ವಲೋಕಗಳಿಗೂ ಒಡೆಯನಾದ ಮಹಾದೇವನು ಯಾರು? ಪರಮೇಶ್ವರನೇ. ಆ ಪರಮೇಶ್ವರನ ಅನುಗ್ರಹದಿಂದಲೇ ಮಿಕ್ಕವರು ಈಶ್ವರರೆನಿಸುತ್ತಾರೆ. ಸಮಸ್ತ ಭೂತಗಳೂ ಯಾವ ಯಾವ ಕರ್ಮವನ್ನು ಮಾಡಿದರೂ ಅದಕ್ಕೆಲ್ಲ ಫಲವನ್ನು ಕೊಡುವವನು ಅವನೇ; ಎಲ್ಲರ ಹೃದಯದಲ್ಲಿಯೂ ನಿರಂತರವಾಗಿ ನೆಲೆಸಿರುವವನು ಅವನೇ; ಎಲ್ಲರ

ಅಂತಃಕರಣಪ್ರತ್ಯಯಗಳ ಉತ್ಪತ್ತಿಸ್ಥಿತಿಲಯಗಳಿಗೆ ಕಾರಣನಾಗಿರುವವನು ಆತನೇ. ಭಗವಂತನು ಹೀಗೆ ನಮ್ಮ ಬುದ್ಧಿವೃತ್ತಿಗಳಿಗೂ ನಮ್ಮ ಕರ್ಮಗಳಿಗೂ ಸಾಕ್ಷಿಯಾಗಿದ್ದು ಕೊಂಡು ಕರ್ಮಗಳಿಗೆ ಅನುಗುಣವಾದ ಫಲವನ್ನು ಕೊಡುತ್ತಿರುವನಾದ್ದರಿಂದ ಆತನಲ್ಲಿಯೇ ನಮ್ಮ ಸುಖದುಃಖಗಳನ್ನು ನಿವೇದಿಸಿಕೊಂಡು ಮನಸ್ಸಮಾಧಾನವನ್ನು ಹೊಂದಬಹುದು. ಆತನ ಅನುಗ್ರಹದಿಂದ ಆತನ ಪರಮತತ್ತ್ವವನ್ನೂ ಅರಿತುಕೊಂಡು ಪರಮಶಾಂತಿರೂಪವಾದ ಮೋಕ್ಷವನ್ನೇ ಪಡೆಯಬಹುದು.

ಇಲ್ಲಿಯವರೆಗೆ ಯೋಗದ ಮೂರು ಅಂತಸ್ತುಗಳಾದ ಕರ್ಮಧ್ಯಾನಭಕ್ತಿಗಳನ್ನು ಹೇಳಿದ್ದಾಯಿತು. ಇವುಗಳಲ್ಲಿ ಕರ್ಮಯೋಗವನ್ನು ತಕ್ಕಮಟ್ಟಿಗೆ ವಿಸ್ತರಿಸಿ ಹೇಳಿದ್ದಾಗಿದೆ; ಆದ್ದರಿಂದ ಇನ್ನು ಧ್ಯಾನಭಕ್ತಿಗಳನ್ನು ತಿಳಿಸಬೇಕೆಂದು ಭಗವಂತನು ಅವಕ್ಕೆ ಇಲ್ಲಿ ಪೀಠಿಕೆಯನ್ನು ಹಾಕಿರುತ್ತಾನೆ.

## ೩೯. ಧ್ಯಾನಯೋಗಕ್ಕೆ ಸಿದ್ಧತೆ ೬- (೧-೬)

### (೧೩.೪.೪೭)

ಅಧ್ಯಾತ್ಮಶಾಸ್ತ್ರದಲ್ಲಿ, ಅದರಲ್ಲಿಯೂ ಭಗವದ್ಗೀತೆಯಲ್ಲಿ, ಕೆಳಗಿನ ಸಾಧನವನ್ನೇ ಮೇಲುಮಟ್ಟದ ಸಾಧನವೆಂಬಂತೆ ನಿರೂಪಿಸುವ ಒಂದು ಪದ್ಧತಿಯಿದೆ. ಇದಕ್ಕನು ಗುಣವಾಗಿ ಪರಮಾರ್ಥವಾಗಿ ಯೋಗವೆನಿಸುವ ಜ್ಞಾನದ ಗುಣವನ್ನು ಕೊಟ್ಟು ಕರ್ಮಯೋಗವನ್ನೇ ಇದುವರೆಗೆ ಯೋಗವೆಂದು ಕರೆದು ನಿರೂಪಿಸಲಾಗಿದೆ. ದಕ್ಷಿಣ ದೇಶದಲ್ಲಿರುವ ಒಂದಾನೊಂದು ಸಣ್ಣಕ್ಷೇತ್ರವನ್ನು ಕಾಶಿಯ ಗುಣಸಾಮ್ಯದಿಂದ "ಇದೇ ನಮ್ಮ ಕಾಶಿ" ಎನ್ನುವದಿಲ್ಲವೆ? ಹಾಗೆಯೇ ಇದು. ಕಡಿಮೆಯದರಲ್ಲಿ ಹೆಚ್ಚಿನ ವಸ್ತುವಿನ ದೃಷ್ಟಿಯನ್ನು ಮಾಡುವದು, ಶಾಲಗ್ರಾಮದಲ್ಲಿ ವಿಷ್ಣುಭಾವನೆಯಂತೆ ಒಳ್ಳೆಯ ಫಲವನ್ನು ಕೊಡುತ್ತದೆ.

ಕರ್ಮಯೋಗದಲ್ಲಿ ಕೂಡ ನಮ್ಮಲ್ಲಿ ಅನೇಕರಿಗೆ ಅಧಿಕಾರವಿರುವದಿಲ್ಲ. ಏಕೆಂದರೆ ಕರ್ಮಯೋಗವೆಂದರೇನು? ಶಾಸ್ತ್ರೋಕ್ತಕರ್ಮಗಳನ್ನು ಫಲಾಸಕ್ತಿಯಿಲ್ಲದೆ ಸಂಗವಿಲ್ಲದೆ ಪರಮೇಶ್ವರನಿಗೆಂದು ಮಾಡುವದು. ನಮ್ಮಲ್ಲಿ ಎಷ್ಟು ಜನರು ವೇದಾ ಧ್ಯಯನವನ್ನು ಮಾಡಿರುತ್ತೇವೆ? ಎಷ್ಟು ಜನರು ವೇದೋಕ್ತವಾದ ಅಗ್ನಿಹೋತ್ರಾದಿಗಳನ್ನು ಮಾಡುತ್ತಿದ್ದೇವೆ? ಶಾಸ್ತ್ರೋಕ್ತಕರ್ಮವನ್ನು ಮಾಡುವದೇ ದುಸ್ತರವಾಗುತ್ತಿರುವ ಈ ಕಾಲದಲ್ಲಿ ಅದನ್ನು ಈಶ್ವರಾರ್ಪಣಬುದ್ಧಿಯಿಂದ ಮಾಡುವ ಕರ್ಮಯೋಗವು ಎಷ್ಟು ಜನಕ್ಕೆ ತಾನೆ ದಕ್ಕೀತು? ಹೀಗಿದ್ದರೂ ನಾವು ಮಾಡುತ್ತಿರುವ ಕರ್ಮಗಳನ್ನೇ

ಲೌಕಿಕಕರ್ಮಗಳನ್ನು ಕೂಡ, ಪರಮೇಶ್ವರನ ಆರಾಧನೆ ಎಂದು ಮಾಡುವದಕ್ಕೆ ಮೊದಲುಮಾಡಿದರೆ ಅದರಲ್ಲಿಯೇ ಕರ್ಮಯೋಗದ ಗುಣವು ಕಂಡುಬರುತ್ತದೆ. ಆದ್ದರಿಂದ ಅದೂ ಗೌಣದೃಷ್ಟಿಯಿಂದ ಕರ್ಮಯೋಗವಾಗುವದು.

ಇದಿಷ್ಟನ್ನು ನೆನಪಿಟ್ಟರೆ ಆರನೆಯ ಅಧ್ಯಾಯದ ಮೊದಲನೆಯ ಶ್ಲೋಕದ ಸರಿಯಾದ ಅರ್ಥವು ಯಾವದೆಂಬುದು ನಮಗೆ ಸ್ಫುಟವಾಗುವದು.

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನಚಾಕ್ರಿಯಃ ॥** (೬-೧)

"ಕರ್ಮಫಲವನ್ನು ಆಶ್ರಯಿಸದೆ ಯಾವಾತನು ಮಾಡಬೇಕಾದ ಕರ್ಮವನ್ನು ಮಾಡುತ್ತಿರುವನೋ ಅವನೇ ಸಂನ್ಯಾಸಿಯು, ಅವನೇ ಯೋಗಿಯು, ನಿರಗ್ನಿಯಾದವನಲ್ಲ, ಅಕ್ರಿಯನಾದವನೂ ಅಲ್ಲ" ಎಂಬುದು ಶ್ಲೋಕದ ಅರ್ಥ. ಇಲ್ಲಿ ಮುಂದೆ ಧ್ಯಾನಯೋಗವನ್ನು ಹೇಳಬೇಕಾಗಿದೆ. ಅದಕ್ಕೆ ಮೊದಲು ಈವರೆಗೆ ಹೇಳಿರುವ ಕರ್ಮಯೋಗವನ್ನು ಹೊಗಳಿ ಅದಕ್ಕೂ ಧ್ಯಾನಯೋಗಕ್ಕೂ ಇರುವ ಸಂಬಂಧವನ್ನು ತಿಳಿಸುವದಕ್ಕೆಂದು ಭಗವಂತನು ಈ ಮಾತನ್ನಾಡಿರುತ್ತಾನೆ.

ಕರ್ಮಯೋಗಿಯನ್ನು 'ಸಂನ್ಯಾಸಿ', 'ಯೋಗಿ' ಎಂದು ಇಲ್ಲಿ ಹೊಗಳಿರುವದನ್ನು ಲಕ್ಷಿಸಬೇಕು. ಸಂನ್ಯಾಸಿ ಎಂದರೆ ಕರ್ಮಗಳನ್ನು ಬಿಟ್ಟವನು, ಯೋಗಿ ಎಂದರೆ ಚಿತ್ತಸಮಾಧಾನವನ್ನು ಧ್ಯಾನದಿಂದ ಪಡೆದುಕೊಂಡವನು. ಈ ಎರಡು ಗುಣಗಳೂ ಇಲ್ಲದ ಕರ್ಮಯೋಗಿಯನ್ನು 'ಸಂನ್ಯಾಸಿ', 'ಯೋಗಿ' ಎಂದು ಕರೆದದ್ದು ಹೇಗೆ? ಎಂಬ ಶಂಕೆ ಸಹಜವಾಗಿ ತಲೆ ಎತ್ತುತ್ತದೆ. ಇದಕ್ಕೆ ಪರಿಹಾರವನ್ನು ಈ ಮೊದಲೆ ನಾವು ಸೂಚಿಸಿರುತ್ತೇವೆ. ನಾವು ಯಾವ ಕೆಲಸವನ್ನು ಮಾಡುತ್ತೇವೆ ಎಂಬುದು ನಮ್ಮ ಯೋಗ್ಯತಾನಿರ್ಣಯಕ್ಕೆ ಕಾರಣವಲ್ಲ; ಅದನ್ನು ನಾವು ಹೇಗೆ ಮಾಡುತ್ತೇವೆಂಬುದೇ ಕಾರಣವು. ಒಬ್ಬ ನ್ಯಾಯಾಧಿಪತಿಯೂ ಒಬ್ಬ ವಕೀಲನೂ ಒಂದು ದಿನ ವಿರಾಮವಾಗಿ ಮಾತನಾಡುತ್ತಿದ್ದರಂತೆ. ಆಗ ವಕೀಲನು "ಸ್ವಾಮಿ, ತಮ್ಮಂಥವರೊಬ್ಬರನ್ನು ಕೆಲವು ವರ್ಷಗಳ ಹಿಂದೆ ನೋಡಿದ್ದೆ; ಅವರು ಆಗ ದೋಣಿಬಾರಿಸುತ್ತಿದ್ದರು" ಎಂದನು. ತನಗೆ ನ್ಯಾಯಸ್ಥಾನದಲ್ಲಿ ಆಗಾಗ್ಗೆ ಆಗುತ್ತಿದ್ದ ಅಪಮಾನಕ್ಕೆ ಪ್ರತಿಯಾಗಿ ಸೇಡು ತೀರಿಸಿಕೊಳ್ಳುವೆನೆಂದು ವಕೀಲನ ಮನೋಭಾವ. ನ್ಯಾಯಾಧಿಪತಿಯು ಹಿಂದೆ ಬಹಳ ಬಡವನಾಗಿದ್ದನು; ಆಗ ಅವನು ದೋಣಿಬಾರಿಸಿ ಜೀವನವನ್ನು ಮಾಡುತ್ತಿದ್ದನು. ಇದನ್ನು ಪರಾಮರ್ಶಿಸಿ ಮಾತನಾಡಿದರೆ ನ್ಯಾಯಾಧಿಪತಿಗೆ ಸ್ವಲ್ಪ ಮರ್ಮವನ್ನು ಚುಚ್ಚಿದಂತೆ ಆಗಬಹುದೆಂದು ವಕೀಲನ ಊಹೆ. ಆದರೆ ನ್ಯಾಯಾಧಿಪತಿಯ

ಮನಸ್ಸು ಬೇರೆಯ ಜಾತಿಯದು. ಆತನು "ಹೌದು, ನಾನೇ ಆತನು. ಆಗ ನಾನು ದೋಣಿಯನ್ನು ಎಷ್ಟು ಚೆನ್ನಾಗಿ ಬಾರಿಸುತ್ತಿದ್ದೆನು! ತಮಗೆ ತಿಳಿಯದೆ? ಜನರು ನಾನು ಬಾರಿಸುವದನ್ನು ನೋಡುವದಕ್ಕೆ ಗುಂಪುಗುಂಪಾಗಿ ಸೇರುತ್ತಿದ್ದರು" ಎಂದನು. ಪ್ರಕೃತದಲ್ಲಿ ಸಂನ್ಯಾಸವನ್ನು ಅವಲಂಬಿಸಿದಮಾತ್ರದಿಂದ ಹೆಚ್ಚಿನವನಾಗುವದಿಲ್ಲ; ಯೋಗವನ್ನು ಅಭ್ಯಾಸಮಾಡುವವನೆಂದಮಾತ್ರದಿಂದಲೂ ಅವನಿಗೆ ಉತ್ಕರ್ಷವು ಬರುವದಿಲ್ಲ. ಅಧಿಕಾರವಿಲ್ಲದವನು ಸಂನ್ಯಾಸಿಯೋ ಯೋಗಿಯೋ ಆಗುವದಕ್ಕಿಂತ ಉತ್ತಮತರದ ಕರ್ಮಯೋಗಿಯಾಗುವದೇ ಮೇಲು-ಎಂಬ ಅಭಿಪ್ರಾಯವು ಮೇಲಿನ ಶ್ಲೋಕದಲ್ಲಿ ಅಡಗಿರುತ್ತದೆ.

"ಯಾವದನ್ನು ಸಂನ್ಯಾಸವೆನ್ನುವರೋ ಅದು ಕರ್ಮಯೋಗವೆಂದೇ ತಿಳಿದಿರು. ಅದೇಕೆಂದರೆ ಸಂಕಲ್ಪವನ್ನು ಸಂನ್ಯಾಸಮಾಡದವನು ಯಾವನೂ ಯೋಗಿಯಾಗ ಲಾರನು." ಕರ್ಮಯೋಗವನ್ನು ಯೋಗವೆಂದಿರುವದು ಹೇಗೆ? ಎಂದರೆ ಸಂಕಲ್ಪ ತ್ಯಾಗದಿಂದ. ಯಾವನು ಸಂಕಲ್ಪವನ್ನು ಮಾಡುತ್ತಾನೋ ಅವನಿಗೆ ಕಾಮವುಂಟಾಗುತ್ತದೆ; ಕಾಮದಿಂದ ಕರ್ಮವನ್ನು ಮಾಡಲೇ ಬೇಕಾಗುತ್ತದೆ. ಆದ್ದರಿಂದ ಸಂಕಲ್ಪತ್ಯಾಗವಿಲ್ಲದೆ ಯಾವನೂ ಸಂನ್ಯಾಸಿಯಾಗಲಾರನು. ಕರ್ಮಯೋಗಿಯು ಎಲ್ಲಾ ಸಂಕಲ್ಪಗಳನ್ನೂ ಬಿಡುವದಿಲ್ಲವಾದರೂ ಕರ್ಮದ ಫಲತ್ಯಾಗವನ್ನು ಮಾಡುತ್ತಾನಾದ್ದರಿಂದ ಫಲೋದ್ದೇಶ ದಿಂದ ಸಂಕಲ್ಪವನ್ನು ಮಾಡುವದನ್ನು ಬಿಟ್ಟು ಬಿಟ್ಟಿರುತ್ತಾನೆ. ಈಶ್ವರನು ತುಷ್ಟನಾಗಬೇಕು ಎಂಬ ಇಚ್ಛೆಯು ಅವನಿಗೆ ಇರುವದು ನಿಜ. ಆದರೆ ಈ ಇಚ್ಛೆಯೇ ಅವನಿಗೆ ಉಳಿದ ಸಂಕಲ್ಪಗಳ ತ್ಯಾಗಕ್ಕೆ ಕಾರಣವಾಗಿರುತ್ತದೆ. ಆದ್ದರಿಂದ ಫಲತ್ಯಾಗಿಯಾದ ಕರ್ಮಯೋಗಿ ಯನ್ನೂ ಸಂನ್ಯಾಸಿ ಎಂದು ಗೌಣವೃತ್ತಿಯಿಂದ ಕರೆಯಬಹುದಾಯಿತು.

ಇದರಂತೆ ಅವನು ಯೋಗಿಯೂ ಆಗಿರುತ್ತಾನೆ. ಧ್ಯಾನಯೋಗಕ್ಕೆ ಅಸಾಧಾರಣ ಧರ್ಮವು ಯಾವದು? ಚಿತ್ತವು ಅಲುಗಾಡದೆ ಇರುವದು. ಅಲ್ಲವೆ? ಕರ್ಮಯೋಗಿಯ ಚಿತ್ತವು ಅಲುಗಾಡುವದೇ ಇಲ್ಲ. ಏಕೆಂದರೆ ಸಂಗವನ್ನೂ ಫಲಾಭಿಸಂಧಿಯನ್ನೂ ತೊರೆದಿರುವದರಿಂದ ಅವನಿಗೆ ಚಿತ್ತವಿಕ್ಷೇಪಕ್ಕೆ ಯಾವ ಕಾರಣವೂ ಇರುವದಿಲ್ಲ.

ಆದ್ದರಿಂದ ಕರ್ಮಯೋಗಿಯು ಸಂನ್ಯಾಸಿಯೂ ಯೋಗಿಯೂ ಆಗಿರುತ್ತಾನೆ ಎಂದು ಕರ್ಮಯೋಗವನ್ನು ಹೊಗಳಿದಂತೆ ಆಯಿತು. ಆದರೆ "ನಿರಗ್ನಿಯಾದವನು ಸಂನ್ಯಾಸಿಯಲ್ಲ, ನಿಷ್ಕ್ರಿಯನಾದವನು ಯೋಗಿಯಲ್ಲ" ಎಂದಿದೆಯಲ್ಲ, ಇದು ಹೇಗೆ ಸರಿಯಾಯಿತು? ಸರ್ವಕರ್ಮಸಂನ್ಯಾಸವನ್ನು ಮಾಡಿರುವ ಯತಿಗೆ ಅಗ್ನಿಯನ್ನು ಇಟ್ಟುಕೊಳ್ಳುವದಕ್ಕಾಗುವದಿಲ್ಲವೆಂಬುದು ಸ್ಪಷ್ಟವಾಗಿದೆ. ಅಂಥವನಿಗೆ ಮಾಡುವದಕ್ಕೆ ಮತ್ತೆ ಯಾವ ಕರ್ಮವೂ ಇರುವದಿಲ್ಲವಾದ್ದರಿಂದ ಅವನು ಆತ್ಮಚಿಂತನೆಯಲ್ಲಿಯೇ

ಕಾಲವನ್ನು ಹಾಕುವನೆಂಬುದೂ ಯುಕ್ತವಾಗಿರುತ್ತದೆ. ಅಗ್ನಿಯನ್ನು ತ್ಯಜಿಸುವ ಸಂನ್ಯಾಸಾಶ್ರಮವನ್ನೂ ಶ್ರುತಿಸ್ಮೃತಿಪುರಾಣಗಳಲ್ಲಿ ವಿಧಿಸಿರುವದು ಪ್ರತ್ಯಕ್ಷವಾಗಿರುತ್ತದೆ; ಆ ಆಶ್ರಮದಲ್ಲಿ ಯೋಗಾಭ್ಯಾಸವನ್ನು ಮಾತ್ರ ಮಾಡುತ್ತಿರಬೇಕೆಂದು ಶಾಸ್ತ್ರದಲ್ಲಿ ಹೇಳಿರುವದೂ ಸುಪ್ರಸಿದ್ಧವಾಗಿರುತ್ತದೆ. ಹೀಗಿರುವಲ್ಲಿ 'ನಿರಗ್ನಿಯಾದವನೂ ನಿಷ್ಕ್ರಿಯನಾದವನೂ ಸಂನ್ಯಾಸಿಯಲ್ಲ, ಯೋಗಿಯಲ್ಲ'- ಎಂದು ಹೇಳಿರುವದು ಇದಕ್ಕೆ ವಿರುದ್ಧವಲ್ಲವೆ?

ಈ ಆಕ್ಷೇಪಕ್ಕೆ ಪರಿಹಾರವೇನೆಂದರೆ ಇಲ್ಲಿ ನಾಲ್ಕನೆಯ ಆಶ್ರಮವನ್ನಾಗಲಿ ಯೋಗವನ್ನಾಗಲಿ ತಿರಸ್ಕರಿಸಿರುವದಿಲ್ಲ. ಅವಕ್ಕೆ ಪುರಸ್ಕಾರವೇ ಇಲ್ಲಿ ದೊರೆತಂತೆ ಆಗಿರುತ್ತದೆ. ಸಂನ್ಯಾಸಾಶ್ರಮವು ಬಹಳ ಉತ್ತಮವಾದ ಆಶ್ರಮವು, ಅದನ್ನು ಕಂಡಕಂಡವರು ಸ್ವೀಕರಿಸುವದಕ್ಕೆ ಆಗುವದಿಲ್ಲ. ವೇದೋಕ್ತಕರ್ಮಗಳ ಫಲಗಳ ಆಶೆಯನ್ನೆಲ್ಲ ತೊರೆದಿರಬೇಕು; ಅಷ್ಟಾಂಗಯೋಗದಿಂದ ಚಿತ್ತವನ್ನು ಸ್ವಾಧೀನದಲ್ಲಿಟ್ಟುಕೊಂಡು ಪರಮಾತ್ಮಚಿಂತನೆಯಲ್ಲಿಯೇ ಕಾಲವನ್ನು ಕಳೆಯುವದಕ್ಕೆ ಸಿದ್ಧನಾಗಿರಬೇಕು. ಇಂಥ ಯೋಗ್ಯತೆಯಿಲ್ಲದೆ ಸುಮ್ಮನೆ ಅಗ್ನಿಯನ್ನು ಬಿಟ್ಟು ಕರ್ಮಗಳ ಅನುಷ್ಠಾನವನ್ನು ಕೈಬಿಟ್ಟ ಮಾತ್ರದಿಂದ ಸಂನ್ಯಾಸಿಯಾಗುವದಿಲ್ಲ, ಯೋಗಿಯೂ ಆಗುವದಿಲ್ಲ-ಎಂಬುದು ಶ್ಲೋಕಪಾದದ ಭಾವಾರ್ಥ. ಇದು ನಿಜವಾದದ್ದು. ಎಷ್ಟೋ ಜನರು ಸಂನ್ಯಾಸವೆಂದರೇನೆಂಬ ಅರಿವುಕೂಡ ಇಲ್ಲದೆ ಕಾಷಾಯವಸ್ತ್ರವನ್ನು ಹಾಕಿಕೊಂಡು ಭಿಕ್ಷೆ, ಪಾದಪೂಜೆ- ಎಂದು ಮೆರೆಯುವರು. ಕಾಷಾಯದಂಡವನ್ನು ಕಂಡಮಾತ್ರದಿಂದ ಯತಿಯನ್ನು ಪೂಜಿಸಬೇಕೆಂದು ಸ್ಮೃತಿವಾಕ್ಯವಿರುವದು ನಿಜ. ಆದರೆ ಅದು ಗೃಹಸ್ಥರಿಗೆ ಹೇಳಿದ ಬುದ್ಧಿವಾದವೇ ಹೊರತು ಸಿಕ್ಕಸಿಕ್ಕಹಾಗೆ ಯಾರಾದರೂ ಸಂನ್ಯಾಸವನ್ನು ಸ್ವೀಕರಿಸಬಹುದೆಂಬ ಅನುಜ್ಞೆಯಲ್ಲ. ಒಮ್ಮೆ ನನ್ನ ಸ್ನೇಹಿತರೊಬ್ಬರು ಹೊಸದಾಗಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದ ಒಬ್ಬ ಪೂಜಾರಿ ಬ್ರಾಹ್ಮಣನನ್ನು ಕಂಡು ವಂದಿಸಿ "ತಾವು ಸ್ವಲ್ಪ ಅವಸರಪಟ್ಟಿರಿ. ಇಷ್ಟು ಬೇಗನೆ ಆಶ್ರಮಸ್ವೀಕಾರಮಾಡಬೇಕಾದದ್ದೇನೂ ಇರಲಿಲ್ಲ" ಎಂದರಂತೆ. ಆಗ ಆ ಮಹಾತ್ಮನು "ನಮ್ಮಂಥವರಿಗೆ ಯಾರು ಕೊಡುತ್ತಾರೆ, ಸ್ವಾಮಿ?" ಎಂದನಂತೆ! ಆ ಪೂಜಾರಿಯು ವಿಧುರನಾಗಿದ್ದನು; ಅವನಿಗೆ ಯಾರಾದರೂ ಹೆಣ್ಣು ಕೊಡುವದಾಗಿದ್ದರೆ ಸಂನ್ಯಾಸಕ್ಕೆ ಎಂದಿಗೂ ಕೈಹಾಕುತ್ತಿರಲಿಲ್ಲ! ಇಂಥವರೆಲ್ಲ ಸಂನ್ಯಾಸಿಗಳಾದಾರೆ? ಎಂದಿಗೂ ಇಲ್ಲ. ಅಯೋಗ್ಯರಾದವರು ಮಾಡುವ ಕರ್ಮಸಂನ್ಯಾಸಕ್ಕಿಂತ ಯುಕ್ತರೀತಿಯಿಂದ ಮಾಡುವ ಕರ್ಮಯೋಗವು ಸಂನ್ಯಾಸದ ಫಲವನ್ನೂ ಯೋಗದ ಫಲವನ್ನೂ ಕೊಡುವ ಯೋಗ್ಯತೆಯನ್ನು ತಂದುಕೊಡುತ್ತದೆ.

ಆದ್ದರಿಂದ ಸಂಕಲ್ಪತ್ಯಾಗಿಯಾದ ಕರ್ಮಯೋಗಿಯು ಕರ್ಮವನ್ನು ಮಾಡುತ್ತಿದ್ದರೂ ಸಂನ್ಯಾಸಿಯೇ ಆಗಿರುತ್ತಾನೆ; ಹೀಗಿರುವಲ್ಲಿ ನಿಷ್ಕಾಮನಾಗಿ ಕರ್ಮಸಂನ್ಯಾಸವನ್ನೇ ಮಾಡಿರುವವನು ಸಂನ್ಯಾಸಿಯೆಂಬುದಕ್ಕೆ ಸಂಶಯವುಂಟೆ? ಅಂಥವರನ್ನಲ್ಲ, ಇಲ್ಲಿ ಸಂನ್ಯಾಸಿಯಲ್ಲವೆನ್ನುವದು; ಅನಧಿಕಾರಿಗಳಾಗಿ ಕರ್ಮಸಂನ್ಯಾಸಮಾಡಿದವರನ್ನು ಹಾಗೆಂದಿರುತ್ತದೆ. ಕರ್ಮಯೋಗವನ್ನು ಮಾಡಿ ಧ್ಯಾನಯೋಗಕ್ಕೆ ಅರ್ಹರಾಗಬೇಕು- ಎಂಬ ಅಭಿಪ್ರಾಯವು ಇದರಿಂದ ಹೊರಬೀಳುತ್ತದೆ.

ಇಲ್ಲಿ ಕರ್ಮಯೋಗವನ್ನು ಹೊಗಳಿರುವದೂ ಕೇವಲ ನಿರಗ್ನಿನಿಷ್ಕ್ರಿಯರನ್ನು ನಿಂದಿಸಿರುವದೂ ಈ ಅಭಿಪ್ರಾಯದಿಂದಲೇ ಎಂಬುದು ಮುಂದಿನ ಶ್ಲೋಕದಲ್ಲಿ ಸ್ಪಷ್ಟವಾಗುತ್ತದೆ. ಹೇಗೆಂದರೆ ಆ ಶ್ಲೋಕವನ್ನು ನೋಡಿ:

**ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥** (೬-೩)

"ಯೋಗವನ್ನು ಏರಲಿಚ್ಛಿಸುವವನಿಗೆ ಕರ್ಮವು ಕಾರಣವಾಗಿರುತ್ತದೆ. ಯೋಗವನ್ನು ಏರಿದ ಬಳಿಕ ಅವನಿಗೇ ಶಮವು ಕಾರಣವಾಗುತ್ತದೆ. ಯೋಗದ ವಿಷಯವನ್ನು ಕೇಳಿ ತಿಳಿದುಕೊಂಡಿರುವವನಿಗೆ ಕರ್ಮದ ಮಹತ್ತ್ವವು ಇನ್ನಷ್ಟು ಎದ್ದು ಕಾಣುತ್ತದೆ. ಆದ್ದರಿಂದ ಇಲ್ಲಿ ಕರ್ಮಯೋಗವು ಬರಿಯ ಕರ್ಮಕ್ಕಾಗಿ ಮಾಡುವ ಕರ್ಮವಲ್ಲ ಎಂಬುದನ್ನು ಒತ್ತಿ ಹೇಳಿರುತ್ತದೆ. ಕರ್ಮಯೋಗವು ಧ್ಯಾನಯೋಗಕ್ಕೆ ಹೋಗುವೆನೆಂದಿಚ್ಛಿಸುವವನಿಗೆ ಉತ್ತಮಸಾಧನವಾಗಿರುತ್ತದೆ. ಏಕೆಂದರೆ ದುಡಿದವನಿಗೇ ಚೆನ್ನಾಗಿ ನಿದ್ರೆ ಹತ್ತುವಂತೆ ಯಾವನು ಕರ್ಮಯೋಗವನ್ನು ಅಭ್ಯಾಸಮಾಡಿರುವನೋ ಅವನಿಗೇ ಧ್ಯಾನಯೋಗವು ದಕ್ಕುತ್ತದೆ. ಕರ್ಮಯೋಗದಿಂದ ಚಿತ್ತದ ಕಾಲುಷ್ಯವು ಕಳೆದುಹೋಗುವದು; ಚಿತ್ತಕ್ಕೆ ಸ್ಥೈರ್ಯವೂ ಬರುವದು. ಮಗ್ಗಿ ಗಟ್ಟಿಮಾಡಿದವನಿಗೆ ಗುಣಾಕಾರದಲ್ಲಿ ಅದರ ಪ್ರಯೋಜನವು ತಿಳಿಯಬರುವಂತೆ ಧ್ಯಾನಯೋಗದಲ್ಲಿಯೇ ಕರ್ಮಯೋಗದ ಪೂರ್ಣವಾದ ಉಪಯೋಗವು ಗೊತ್ತಾಗುವದು. ಯಾವದನ್ನು ಮತ್ತೆಮತ್ತೆ ಅಭ್ಯಾಸಮಾಡುವೆವೋ ಅದು ಕೊನೆಯಲ್ಲಿ ಸ್ವಭಾವವಾಗಿ ಬಿಡುತ್ತದೆ. ಜಪಸರದಿಂದ ಜಪಮಾಡುವ ಅಭ್ಯಾಸವಿರುವವನು ಸರವಿಲ್ಲದಿದ್ದರೂ ಬರಿಯ ಬೆರಳುಗಳಲ್ಲಿ ಅಭ್ಯಾಸಮಾಡುವಂತೆಯೇ ಕರ್ಮವನ್ನು ನಿಷ್ಕಾಮವಾಗಿ ಮಾಡಿಮಾಡಿ ಈಶ್ವರಚಿಂತೆಯಲ್ಲಿ ಚಿತ್ತವನ್ನು ನಿಲ್ಲಿಸಿಕೊಂಡವನಿಗೆ ಕೊನೆಯಲ್ಲಿ ಅದು ತಾನೇ ಏಕಾಗ್ರವಾಗುತ್ತದೆ. ಈ ರೀತಿಯಲ್ಲಿ ಕರ್ಮವು ಧ್ಯಾನಕ್ಕೆ ಸಾಧನವಾಗಿರುತ್ತದೆ.

ಆದರೆ ಕರ್ಮವು ಚಿತ್ತದ ಒಂದಾನೊಂದು ಭೂಮಿಕೆಯನ್ನು ಏರುವವರೆಗೆ

ಮಾತ್ರ ಬೇಕಾಗುತ್ತದೆ. ಆ ಬಳಿಕ ಕರ್ಮವೇ ಧ್ಯಾನಕ್ಕೆ ಪ್ರತಿಬಂಧಕವಾಗುತ್ತದೆ. ಏಕೆಂದರೆ ಉತ್ತಮಧ್ಯಾನಕ್ಕೆ ಒಂದಿಷ್ಟೂ ವಿಕ್ಷೇಪವು ಆಗಕೂಡದು; ಆದರೆ ಕರ್ಮಕ್ಕೆ ಅದು ನಿಷ್ಕಾಮಕರ್ಮವಾಗಿದ್ದರೂ ಸರಿಯೆ, ಸ್ವಲ್ಪವಾದರೂ ವಿಕ್ಷೇಪವಿರುವದು. ಆದ್ದರಿಂದ ಯಾವನು ಕೇವಲ ಧ್ಯಾನವನ್ನು ಮಾಡುವ ಮಟ್ಟಕ್ಕೆ ಏರಿರುವನೋ ಅಂಥವನಿಗೆ ಕರ್ಮವು ಉಪಯೋಗವಿಲ್ಲವೆಂಬುದಿಷ್ಟೇ ಅಲ್ಲ, ಅದು ಅಡ್ಡಿಯೂ ಆಗುತ್ತದೆ. ಆದ್ದರಿಂದ ಆಗ 'ಶಮವೇ' ಸಾಧನವಾಗುತ್ತದೆ. ಶಮವೆಂದರೆ ಸರ್ವಕರ್ಮಸಂನ್ಯಾಸವು. ಈ ಸಾಧಕನು ಎಷ್ಟೆಷ್ಟು ಕರ್ಮಗಳನ್ನು ಬಿಡುವನೋ ಅಷ್ಟಷ್ಟು ಯಾವ ಆಯಾಸವೂ ಇಲ್ಲದೆ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡು ಚಿತ್ತವನ್ನು ಸಮಾಧಾನದಲ್ಲಿಟ್ಟುಕೊಳ್ಳುವನು. ಆಗಲೇ ಯೋಗಾರೂಢನೆನಿಸುವನು. ಈ ವಿಷಯವನ್ನು ಮಹಾಭಾರತದಲ್ಲಿ ಹೀಗೆಂದು ವಿವರಿಸಿದೆ:

**ನೈತಾದೃಶಂ ಬ್ರಾಹ್ಮಣಸ್ಯಾಸ್ತಿ ವಿತ್ತಂ**
**ಯಥೈಕತಾ ಸಮತಾ ಸತ್ಯತಾ ಚ ।**
**ಶೀಲಂ ಸ್ಥಿತಿರ್ದಣ್ಡನಿಧಾನಮಾರ್ಜವಂ**
**ತತಸ್ತತಶ್ಚೋಪರಮಃ ಕ್ರಿಯಾಭ್ಯಃ ।**

"ಬ್ರಾಹ್ಮಣನ ವಿತ್ತವು ಇದಕ್ಕೆ ಸಮಾನವಾದದ್ದು ಮತ್ತೊಂದಿಲ್ಲ; ಅವನು ಒಂಟಿಯಾಗಿರಬೇಕು. ಮನಸ್ಸನ್ನು ಸಮತೆಯಲ್ಲಿಟ್ಟುಕೊಂಡಿರಬೇಕು; ಸತ್ಯವನ್ನೇ ನುಡಿಯುತ್ತಿರಬೇಕು, ಸದಾಚಾರರತನಾಗಿರಬೇಕು, ಸ್ಥಿರಚಿತ್ತನಾಗಿರಬೇಕು, ಯಾರೊಬ್ಬರಿಗೂ ಹಿಂಸೆಯನ್ನು ಮಾಡದೆ ಇರಬೇಕು; ಕರ್ಮಗಳನ್ನು ಆಗಿಂದಾಗ್ಗೆ ಬಿಡುತ್ತಲೇ ಇರಬೇಕು.' ಸಾಮಾನ್ಯರಿಗೆ ಕರ್ಮವನ್ನು ಬಿಡುವದು ಎಂದಿಗೂ ಸಾಧ್ಯವಿಲ್ಲ. ಧ್ಯಾನಯೋಗವನ್ನು ಅನುಷ್ಠಾನಮಾಡುವ ಅರ್ಹತೆಯನ್ನು ಪಡೆದುಕೊಂಡವರು ಮಾತ್ರ ಈ ಶಮವನ್ನು ಅನುಸರಿಸುವದಕ್ಕೆ ಅರ್ಹರು.

ಯಾವಾಗ ಯೋಗಾರೂಢನಾಗುತ್ತಾನೆ? ಎಂದರೆ ಯಾವಾಗ ಇಂದ್ರಿಯಾರ್ಥಗಳಲ್ಲಾಗಲಿ ಅವುಗಳಿಗಾಗಿ ಮಾಡುವ ಕರ್ಮಗಳಲ್ಲಾಗಲಿ ಆಸಕ್ತಿಯು ಪೂರ ತಪ್ಪಿಹೋಗುವದೋ, ಯಾವಾಗ ಎಲ್ಲಾ ಸಂಕಲ್ಪಗಳನ್ನೂ ಸಂಪೂರ್ಣವಾಗಿ ಸಂನ್ಯಾಸ ಮಾಡುವನೋ, ಆಗ **ಯೋಗಾರೂಢ**ನೆನಿಸುತ್ತಾನೆ. ಆದ್ದರಿಂದ ವಿಷಯಾರ್ಥವಾಗಿ ಮಾಡುವ ಕಾಮ್ಯಕರ್ಮಗಳನ್ನು ಬಿಟ್ಟವನು, ನಿತ್ಯಕರ್ಮಗಳನ್ನು ಮಾಡುವದಕ್ಕೆ ಅರ್ಹನು; ನಿತ್ಯಕರ್ಮದಿಂದಾಗಬೇಕಾದ ಫಲವನ್ನು ಕೂಡ ಮೀರುವಂತೆ ಕರ್ಮಯೋಗವನ್ನು ಅನುಷ್ಠಾನಮಾಡಿ ಕೃತಾರ್ಥನಾದವನು ಧ್ಯಾನಯೋಗಕ್ಕೆ ಅರ್ಹನು.

ಯಾವ ಸಾಧಕನು ಹೀಗೆ ಕ್ರಮಕ್ರಮವಾಗಿ ಯೋಗಾರೂಢನಾಗುವನೋ ಅವನು ತನ್ನನ್ನು ತಾನು ಉದ್ಧಾರಮಾಡಿಕೊಂಡಂತೆ ಆಗುತ್ತದೆ. ಉದ್ಧಾರವೆಂದರೆ ಹಿಡಿದೆತ್ತುವದು, **ಅವಸಾದನವೆಂದರೆ** ಕೆಳಕ್ಕೆ ತಳ್ಳುವದು. ಪ್ರತಿಯೊಬ್ಬ ಸಾಧಕನೂ ತನ್ನನ್ನು ತಾನೇ ಉದ್ಧರಿಸಿಕೊಳ್ಳಬೇಕು. ತನ್ನನ್ನು ತಾನೇ ಕೆಡಹಬಾರದು. ಯಾವನು ತನ್ನನ್ನು ತಾನು ಉದ್ಧಾರಮಾಡಿಕೊಳ್ಳುವನೋ ಅವನು ತನಗೆ ತಾನೇ ಬಂಧುವೆನಿಸುತ್ತಾನೆ; ಯಾವನು ತನ್ನನ್ನು ತಾನೇ ಈ ಅಧ್ಯಾತ್ಮನಿಃಶ್ರೇಣಿಯಲ್ಲಿ ಕೆಳಗೆ ತಳ್ಳಿಹಾಕಿಕೊಳ್ಳುವನೋ ಅವನು ತನಗೆತಾನೇ ಶತ್ರುವೆನಿಸುತ್ತಾನೆ. ಮತ್ತೊಬ್ಬರು ನಮಗೆ ಉದ್ಧಾರಕರು ಇರುತ್ತಾರೆಂದು ನಿರೀಕ್ಷಿಸುತ್ತಾ ಕುಳಿತುಕೊಳ್ಳುವದು ತಪ್ಪು. ಈಸೋಪನ ಕಥೆಯನ್ನು ನೀವು ಕೇಳಿರುತ್ತೀರಿ. ಗಾಡಿಯವನೊಬ್ಬನು ಕೆಸರಿನಲ್ಲಿ ಚಕ್ರವು ಹೂತುಕೊಳ್ಳಲು "ಸ್ವಾಮೀ, ನನ್ನೊಡೆಯ, ಈ ಗಾಡಿಯ ಚಕ್ರವನ್ನು ಮೇಲಕ್ಕೇಳುವಂತೆ ಮಾಡಪ್ಪ!" ಎಂದು ಕೂಗಿಕೊಂಡನಂತೆ. ಕೂಡಲೆ ದೇವರು ಒಬ್ಬ ದಾರಿಹೋಕನ ವೇಷದಲ್ಲಿ ಬಂದು "ಛೀ! ಮುಟ್ಠಾಳ! ಸುಮ್ಮನೆ ಕೂತುಕೊಂಡು ಬೇಡಿಕೊಂಡರೆ ದೇವರು ಅನುಗ್ರಹಿಸುವನೆ? ಹೆಗಲನ್ನು ಕೊಟ್ಟು ಗಾಡಿಯನ್ನು ಎತ್ತು, ಕೂಡಲೆ ಆತನ ದಯೆಯಿಂದ ಅದು ಮೇಲಕ್ಕೇಳುವದು. ಏಳು!" ಎಂದು ಬುದ್ಧಿ ಹೇಳಿದನಂತೆ.

ಹೀಗಿರುವದರಿಂದ ನಮಗೆ ನಾವೇ ಬಂಧುವಾಗಬೇಕು, ನಮ್ಮನ್ನು ನಾವೇ ಉದ್ಧಾರಮಾಡಿಕೊಳ್ಳಬೇಕು. ನಮ್ಮ ಶರೀರೇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ಧೈರ್ಯದಿಂದ ಕೂಡಿದ ಮನಸ್ಸಿನಿಂದ ಇದನ್ನು ಅಧ್ಯಾತ್ಮಚಿಂತನೆಗೆ ಸಜ್ಜುಗೊಳಿಸಿ ಕೊಳ್ಳಬೇಕು. ಧ್ಯಾನಕ್ಕೆ ಕುಳಿತರೆ ಈ ಮನಸ್ಸು ವಿಷಯವಾಸನೆಯಿಂದ ಹೊರಕ್ಕೆ ಎಳೆಯದಂತೆ ಮಾಡಿಕೊಳ್ಳಬೇಕು. ಇಂದ್ರಿಯಗಳು ಯಾವವೂ ನಮ್ಮನ್ನು ವಿಷಯಗಳ ಕಡೆಗೆ ಜಗ್ಗದಂತೆ ಅವನ್ನು ಲಗಾಮು ಹಿಡಿದು ಹಿಂತಿರುಗಿಸಿದ ಕುದುರೆಗಳ ಹಾಗೆ ಹಿಂಜಗ್ಗಬೇಕು. ಈ ಕ್ರಮವನ್ನು ಪಾತಂಜಲಯೋಗದಲ್ಲಿ **ಪ್ರತ್ಯಾಹಾರವೆಂದು** ಕರೆದಿರುತ್ತದೆ. ಯಾವನು ಇಂದ್ರಿಯಗಳನ್ನು ಹರಿಯಬಿಟ್ಟಿರುವನೋ ಯಾವನ ಮನಸ್ಸು ಇಂದ್ರಿಯಗಳು ತೋರಿದ ಕಡೆಯಲ್ಲಿ ಜೋಲುಬೀಳುತ್ತಿರುವದೋ ಅವನ ಗತಿಯನ್ನು ಏನೆಂದು ಹೇಳಬೇಕು? ಅವನು ತನಗೆ ತಾನೇ ಶತ್ರುವಾಗುವನು. ಅಧ್ಯಾತ್ಮಸಾಧನವು ಅವನಿಗೆ ಅಳವಡುವದಿಲ್ಲವೆಂಬುದು ಹಾಗಿರಲಿ, ಸಾಮಾನ್ಯವಾದ ವ್ಯವಹಾರದಲ್ಲಿ ಕೂಡ ಅವನಿಗೆ ಅಡಚಣೆಗಳು ಹೆಚ್ಚುತ್ತಾ ಹೋಗುವವು. ಆದ್ದರಿಂದ ಯೋಗಿಯಾಗುವ ಹಂಬಲುಳ್ಳವನು, ಪರಮಪುರುಷಾರ್ಥವನ್ನು ಪಡೆಯಬೇಕೆಂಬವನು, ಇಂದ್ರಿಯಗಳನ್ನು ಹರಿಯಗೊಡಬಾರದು, ಮನಸ್ಸನ್ನು ಇಂದ್ರಿಯಗಳ ಜೊತೆಯಲ್ಲಿಯೇ ವಿಷಯಗಳ ಕಡೆಗೆ ಧಾವಿಸುವದಕ್ಕೆ ಬಿಡಬಾರದು.

ಇದೆಲ್ಲ ಧ್ಯಾನಯೋಗಕ್ಕೆ ಬೇಕಾದ ಸಾಧನವನ್ನು ಹೇಳುವದಕ್ಕೆ ಬಂದದ್ದು. ಇದನ್ನು ಕೇಳಿದ ನಾವು ಸದ್ಯಕ್ಕೆ ಏನು ಮಾಡಬೇಕು? ಇಲ್ಲದ ವಿಷಯಗಳು ನಮಗೆ ಇನ್ನೂ ದೊರಕಿಲ್ಲವಲ್ಲ? ಎಂದು ಚಡಪಡಿಸುವದನ್ನು ಸ್ವಲ್ಪಮಟ್ಟಿಗಾದರೂ ಕಡಿಮೆಮಾಡಿಕೊಳ್ಳಬೇಕು. ಇರುವ ವಿಷಯಗಳನ್ನು ಅವಶ್ಯವಾದಾಗ ವ್ಯಥೆಪಡದೆ ಬಿಡುವದಕ್ಕೆ ಸಿದ್ಧರಾಗಬೇಕು. ಇಂದ್ರಿಯಾರ್ಥಗಳ ಭೋಗವೇ ನಮ್ಮ ಸರ್ವಸ್ವವೆಂಬ ಬುದ್ಧಿಯನ್ನು ಒಂದಿಷ್ಟಾದರೂ ಕಡಿಮೆಮಾಡಬೇಕು. ನಮಗೆ ಹೀಗೇ ಆಗಬೇಕು, ಇಂಥ ತಿಂಡಿಯೇ ಇಂಥ ಪಾನವೇ ಬೇಕು-ಎಂಬ ಹಠವನ್ನು ಬಿಡುವದಕ್ಕಾದರೂ ಯತ್ನಿಸಬೇಕು. ಧ್ಯಾನಯೋಗಕ್ಕೂ ನಮಗೂ ಈಗ ಬಹಳ ದೂರವಿದೆ; ಆದರೆ ನಮ್ಮ ಇಂದ್ರಿಯಗಳು ನಮ್ಮನ್ನು ತಮ್ಮ ಅಧೀನದಲ್ಲಿಟ್ಟುಕೊಂಡು ಇಂಥಿಂಥ ಸೌಕರ್ಯಗಳು ಬೇಕೆಂದು ಹಠಹಿಡಿದಿರುವದನ್ನು ಸ್ವಲ್ಪ ಮಟ್ಟಿಗಾದರೂ ತಗ್ಗಿಸಿಕೊಂಡರೆ ನಾವು ಧನ್ಯರು. ಒಂದು ಸಲ ನಾನು ಒಬ್ಬ ಸಾಧುಗಳ ದರ್ಶನಕ್ಕೆ ಹೋಗಿದ್ದೆನು; ನನ್ನ ಶರೀರಸೌಖ್ಯದ ಅವಶ್ಯಕತೆಗಳೆಂದು ನಾನು ಕೂಡಿಹಾಕಿಕೊಂಡಿದ್ದ ಸಾಮಾನುಗಳೂ ಬಟ್ಟೆಬರೆಗಳೂ ಒಂದು ಭಾರಿಯ ಗಂಟಾಗಿತ್ತು. ಆದರೆ ಅಲ್ಲಿಗೆ ಬಂದಿದ್ದ ಎಷ್ಟೋ ಜನರು ಇಂಥ ಹೊರೆಯನ್ನೇನೂ ತಂದಿರಲಿಲ್ಲ. ಅವರಿಗೆ ಬೇಕಾಗದೆ ಇರುವ ಇಷ್ಟೊಂದು ಸೌಕರ್ಯಗಳು ನನಗೆ ಬೇಕಾಗಿರುವವಲ್ಲ!- ಎಂಬ ನಾಚಿಕೆಯ ಭಾವವು ನನ್ನನ್ನು ತಲೆ ತಗ್ಗಿಸುವಂತೆ ಮಾಡಿತು. ಅಲ್ಲಿದ್ದ ದೇವಸ್ಥಾನದಲ್ಲಿ ಜನರು ನಿಂತು ಭಜನೆ, ಆರತಿ-ಮುಂತಾದವುಗಳನ್ನು ಮಾಡುತ್ತಿರುವಾಗ ನನಗೆ ಅದು ಬಹಳ ದೀರ್ಘಕಾಲವೆಂತ ತೋರಿತು. ನನ್ನ ಕಾಲುಗಳು ಅಷ್ಟು ಹೊತ್ತು ನಿಲ್ಲಲಾರದೆ ಕುಸಿಯುತ್ತಿದ್ದವು! ಅಲ್ಲಿಯ ಶಿಷ್ಯಮಂಡಲಿಯವರು ಏಕಾದಶಿಯ ದಿನ ತೀರ್ಥಪ್ರಾಶನ ಮಾಡಿ ಎರಡೆರಡು ಉತ್ತುತ್ತೆಕಾಯಿಗಳು, ಒಂದೆರಡು ಚಮಚದಷ್ಟು ಹಾಲು ಇಷ್ಟರಿಂದಲೇ ತಮ್ಮ ಫಲಾಹಾರವನ್ನು ಮುಗಿಸುತ್ತಿದ್ದರು; ಆದರೆ ನನಗೆ ಮಾತ್ರ ಅಷ್ಟು ಅಲ್ಪಾಹಾರದಿಂದ ಮಾರನೆಯ ದಿನ ಪಾರಣೆಯವರೆಗೂ ಹಸಿವನ್ನು ತಡೆದುಕೊಂಡಿರುವದು ಸಾಹಸವೆಂದು ತೋರುತ್ತಿತ್ತು. ಅಲ್ಲಿನವರು ದೂರದಿಂದ ನೀರನ್ನು ದೊಡ್ಡದೊಡ್ಡ ಕೊಡಗಳಿಂದ ತಂದುಹಾಕುತ್ತಿದ್ದರು. ಆದರೆ ನನಗೆ ಅದನ್ನು ಅರ್ಧದಾರಿಯಿಂದ ತರುವದು ಕೂಡ ಕಷ್ಟವಾಗಿ ತೋರುತ್ತಿತ್ತು. ಇದೆಲ್ಲ ಮೊದಮೊದಲು ಇಷ್ಟೊಂದು ಕಷ್ಟಸಾಧ್ಯವೆಂದು ತೋರಿದರೂ ಕೊನೆಗೆ ನಾನೂ ನಮ್ಮ ಕಡೆಯವರೂ ಇದನ್ನು ನಮ್ಮ ಊರಿನಲ್ಲಿಯೇ ಮಾಡಿದೆವು! ಆದ್ದರಿಂದ ಇಂದ್ರಿಯಗಳನ್ನು ಗೆಲ್ಲುವ ದೆಂಬುದು ಮೊದಲು ಕಷ್ಟವಾಗಿ ತೋರಬಹುದಾದರೂ ಅಭ್ಯಾಸಬಲದಿಂದ ಅದೇ ಸಾಧ್ಯವಾಗಿ ಒಂದು ಒಳ್ಳೆಯ ಅಧ್ಯಾತ್ಮಸಾಧನವಾಗುವದು.

# ೪೦. ಧ್ಯಾನಯೋಗದ ಒಳಭಾಗ ೬- (೭-೧೦)

(೨೦.೪.೪೭)

ಧ್ಯಾನಯೋಗವೆಂಬುದು ಎಲ್ಲರಿಗೂ ದಕ್ಕುವಷ್ಟು ಸುಲಭವಾದ ಸಾಧನವಲ್ಲ. ಮನಸ್ಸು ಯಾರಿಗೆ ಅಂತರ್ಮುಖವಾಗಿರುವದೋ ಅವರು ಮಾತ್ರ ಇದನ್ನು ಅನುಷ್ಠಾನಮಾಡುವದಕ್ಕೆ ಆಗುತ್ತದೆ. ಮನಸ್ಸು ಒಳಗಡೆಗೆ ತಿರುಗದೆ ಇರುವವರಿಗೆ ಕರ್ಮಯೋಗವೇ ಉತ್ತಮಸಾಧನವು. ಮನಸ್ಸಿನ ಸ್ವಭಾವವನ್ನರಿತು ನಾವು ಸಾಧನವನ್ನು ಕೈಕೊಳ್ಳಬೇಕು. ಮನಸ್ಸಿನ ಸ್ವಭಾವವು ಹೇಗಿರುವದೆಂದರೆ ಸೂಕ್ಷ್ಮವಿಚಾರವನ್ನು ಮಾಡುವ ಯೋಗ್ಯತೆಯಿರುವಾಗ ಅದು ಬಹಳ ಚಟುವಟಿಕೆಯಿಂದ ಕೂಡಿರುತ್ತದೆ; ಆದರೆ ಆ ಯೋಗ್ಯತೆಯಿಲ್ಲದೆ ಇದ್ದರೂ ಅಂಥ ವಿಚಾರಕ್ಕೆ ಇದನ್ನು ಬಿಟ್ಟರೆ ಅದು ಹಾಗೆಯೇ ಕುಸಿದುಬಿಡುವದು, ಮೆಲ್ಲಗೆ ಅದು ಲಯವಾಗಿ ನಿದ್ರೆಯಲ್ಲಿ ಪರ್ಯವಸಾನವಾಗುವದು. ಯಾವ ಸಾಧಕನ ಮನಸ್ಸಿನಲ್ಲಿ ಸತ್ತ್ವಗುಣವು ಪ್ರಬಲವಾಗಿರುವದೋ ಅವನ ಮನಸ್ಸು ಆತ್ಮಾದಿವಸ್ತುಗಳ ಧ್ಯಾನವನ್ನು ಮಾಡಿ ಸಮಾಹಿತವಾಗುತ್ತದೆ. ಆದರೆ ಯಾವನ ಮನಸ್ಸು ತಮಃಪ್ರಧಾನವಾಗಿರುತ್ತದೆಯೋ, ಅವನು ಧ್ಯಾನಕ್ಕೆ ಕುಳಿತರೆ ಅವನಿಗೆ ನಿದ್ರೆಯೇ ಸಿದ್ಧ. ಸತ್ತ್ವಗುಣಪ್ರಧಾನವಾದ ಸಮಾಧಿಗೂ ತಮಃಪ್ರಧಾನವಾದ ನಿದ್ರೆಗೂ ಇರುವ ತಾರತಮ್ಯವನ್ನು ವಿವೇಕಾನಂದಸ್ವಾಮಿಗಳು ಹೀಗೆಂದು ತಿಳಿಸಿರುತ್ತಾರೆ: ಅವಿವೇಕಿಯಾದವನು ನಿದ್ರೆಯಲ್ಲಿ ಎಷ್ಟು ಕಾಲವಿದ್ದರೂ ಎಚ್ಚೆತ್ತರೆ ಅವಿವೇಕಿಯಾಗಿಯೇ ಎಚ್ಚರುತ್ತಾನೆ; ಆದರೆ ಅಜ್ಞಾನಿಯಾದವನು ಸಮಾಧಿಯನ್ನು ಪಡೆದರೆ ಅವನು ಮಹಾವಿವೇಕಿಯಾಗಿ ಎಚ್ಚರುತ್ತಾನೆ. ನಮ್ಮ ಬುದ್ಧಿಯು ಇನ್ನೂ ಸಮಾಧಿಯನ್ನು ಪಡೆಯುವ ಧ್ಯಾನಯೋಗಕ್ಕೆ ತಕ್ಕ ಯೋಗ್ಯತೆಯನ್ನು ಪಡೆಯದೆ ಇದ್ದರೆ ನಾವು ಕರ್ಮಯೋಗವನ್ನು ಮಾಡಿ ಆ ಯೋಗ್ಯತೆಯನ್ನು ಪ್ರಯತ್ನಪೂರ್ವಕವಾಗಿ ಸಂಪಾದಿಸಿಕೊಳ್ಳಬೇಕು. ಏಕೆಂದರೆ ಆತ್ಮಜ್ಞಾನವು, ಸೂಕ್ಷ್ಮಬುದ್ಧಿಯುಳ್ಳವರ ಚೂಪಾದ ಬುದ್ಧಿಗೆ ಮಾತ್ರ ಉಂಟಾಗುತ್ತದೆ ಎಂದು ಶ್ರುತಿಯಲ್ಲಿ ಸಾರಿರುತ್ತದೆ.

ಯಾವನು ಧ್ಯಾನಯೋಗವನ್ನು ಮಾಡಿ ತನ್ನ ಕಾರ್ಯಕರಣಸಂಘಾತವನ್ನು ವಶಕ್ಕೆ ತಂದುಕೊಂಡಿರುವನೋ ಅವನಿಗೆ ಧ್ಯಾನಯೋಗದಿಂದ ಆಗುವ ಫಲವೇನೆಂದರೆ:

**ಜಿತಾತ್ಮನಃ ಪ್ರಶಾನ್ತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥** (೬-೭)

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥** (೬-೮)

"ಯಾವನು ತನ್ನ ಶರೀರೇಂದ್ರಿಯಗಳನ್ನು ವಶಗೊಳಿಸಿಕೊಂಡಿರುವನೋ ಯಾವನು ಮನಸ್ಸನ್ನು ಅತ್ಯಂತ ಶಾಂತಸ್ಥಿತಿಯಲ್ಲಿಟ್ಟುಕೊಂಡಿರುವನೋ ಅವನೇ ನಿಜವಾದ ಯೋಗಿಯು, ಅವನಿಗೇ ಪರಮಾತ್ಮನು ನಿಜವಾದ ಆತ್ಮನಾಗಿರುತ್ತಾನೆ. ಅವನಿಗೆ ಶಾಸ್ತ್ರಾರ್ಥಜ್ಞಾನವು ಮಾತ್ರವೇ ಅಲ್ಲ, ಆತ್ಮನ ಸ್ವರೂಪದ ಅನುಭವವೇ ಬಂದುಬಿಟ್ಟಿರುತ್ತದೆ. ಅವನು ಶೀತೋಷ್ಣಗಳೇ ಮುಂತಾದ ವೇದನೆಗಳುಂಟಾದರೂ ತನ್ನನ್ನು ಮತ್ತೊಬ್ಬರು ಗೌರವಿಸಲಿ, ಅಪಮಾನಗೊಳಿಸಲಿ, ಮನಸ್ಸಿನಲ್ಲಿ ಏರುಪೇರಿಲ್ಲದೆ ಸಮನಾಗಿರುತ್ತಾನೆ. ಮಣ್ಣುಹೆಂಟೆ, ಕಲ್ಲು, ಚಿನ್ನ-ಎಲ್ಲವೂ ಅವನಿಗೆ ಒಂದೇ ಆಗಿರುತ್ತದೆ. ಅಂಥವನೇ ಯುಕ್ತನೆನಿಸುವನು." ಇಲ್ಲಿ ಧ್ಯಾನಯೋಗವನ್ನು ಅಳವಡಿಸಿಕೊಂಡದ್ದಕ್ಕೆ ಗುರುತನ್ನು ವಿವರಿಸಿರುತ್ತದೆ. ಇಲ್ಲಿ ಕೊಟ್ಟಿರುವ ವಿಶೇಷಣಗಳ ಅರ್ಥವನ್ನು ಸ್ವಲ್ಪ ಬಿಡಿಸಿ ತಿಳಿದುಕೊಳ್ಳೋಣ.

ಧ್ಯಾನಯೋಗಿಯಾದವನು ಶರೀರೇಂದ್ರಿಯಗಳನ್ನು ಸಂಪೂರ್ಣವಾಗಿ ಅಳವಡಿಸಿಕೊಂಡಿರುತ್ತಾನೆ. ಮಿಕ್ಕವರಿಗೆ ಶರೀರವು ಸ್ವಾಧೀನದಲ್ಲಿರುವದಿಲ್ಲ; ಅವರಿಗೆ ಒಂದು ಕಡೆಯಲ್ಲಿ ಬಹಳ ಹೊತ್ತು ಕೂತುಕೊಳ್ಳುವದು ಕೂಡ ಆಗುವದಿಲ್ಲ; ಶರೀರದಲ್ಲಿ ಏನಾದರೊಂದು ಆಲಸಿಕೆಯು, ಸೋಮಾರಿತನವು, ಕಾಣಿಸಿಕೊಳ್ಳುತ್ತಿರುವದು ಕರ್ಮಯೋಗಿಯೂ ವ್ಯವಹಾರದಲ್ಲಿ ಚತುರನಾದವರೂ ಶರೀರವನ್ನು ಸ್ವಾಧೀನದಲ್ಲಿಟ್ಟುಕೊಂಡಿರಬಹುದು. ಆದರೆ ಸಾಮಾನ್ಯರಾದ ಜನರಿಗೆ ಇಂದ್ರಿಯಗಳು ಅತ್ತಿತ್ತ ವಿಷಯಗಳ ಕಡೆಗೆ ಹರಿದಾಡುತ್ತಲೇ ಇರುವವು. ಕರ್ಮಯೋಗಿಯು ಶಾಸ್ತ್ರೋಕ್ತ ಕರ್ಮಗಳನ್ನು ಮಾಡುವದರಲ್ಲಿ ಶರೀರೇಂದ್ರಿಯಗಳನ್ನು ತೊಡಗಿಸಿರುವದರಿಂದ ಮಾತ್ರವೇ ಇಂದ್ರಿಯಗಳನ್ನು ಹರಿದಾಡದಂತೆ ತಡೆದುಕೊಂಡಿರುತ್ತಾನೆ, ಧ್ಯಾನಯೋಗಿಯ ವಿಷಯವು ಹೀಗಲ್ಲ. ಅವನಿಗೆ ಶರೀರೇಂದ್ರಿಯಗಳು ಅಡಿಯಾಳಾಗಿ ಬಿಟ್ಟಿರುತ್ತವೆ. ಅವನು ಇಚ್ಛಾಮಾತ್ರದಿಂದ ಶರೀರವನ್ನು ತನಗೆ ಇಷ್ಟಬಂದಷ್ಟು ಕಾಲದವರೆಗೆ ಏಕಾಸನದಲ್ಲಿ ಕೂರಿಸಬಲ್ಲನು; ಇಂದ್ರಿಯಗಳನ್ನು ಸಂಪೂರ್ಣವಾಗಿ ಬರಸೆಳೆದುಕೊಂಡು ತನ್ನಲ್ಲಿಯೇ ಉಪಸಂಹಾರಮಾಡಿಕೊಳ್ಳಬಲ್ಲನು.

ಈ ಯೋಗಿಯ ಮನಸ್ಸು ಪ್ರಶಾಂತವಾಗಿರುವದು. ಏಕೆಂದರೆ ವಿಷಯಗಳ ಕಡೆಗೆ ಯಾವನ ಇಂದ್ರಿಯಗಳು ಹರಿಯುತ್ತಿರುವವೋ ಅಂಥವನಿಗೆ ಮಾತ್ರ ಚಿತ್ತವಿಕ್ಷೇಪವುಂಟಾಗುತ್ತದೆ. ಯೋಗಿಯು ಶರೀರೇಂದ್ರಿಯಗಳನ್ನು ಗೆದ್ದುಕೊಂಡಿರುವದರಿಂದ ಅವನ ಮನಸ್ಸೂ ಶಾಂತವಾಗಿರುತ್ತದೆ.

ಈ ಯೋಗಿಗೆ ಶೀತೋಷ್ಣಗಳು, ಮಾನಾಪಮಾನಗಳು ಇಂಥ ಬಾಹ್ಯವಾದ ಅಥವಾ ಆಂತರಿಕವಾದ ದ್ವಂದ್ವಗಳ ಕಾಟವು ಒಂದಿಷ್ಟೂ ಇರುವದಿಲ್ಲವೆಂಬುದು ಸ್ವಾಭಾವಿಕವಾಗಿದೆ. ಹಿಂದೆ "ತಾಂಸ್ತಿತಿಕ್ಷಸ್ವ ಭಾರತ" (೨-೧೪) ಎಂಬಲ್ಲಿ 'ಶೀತೋಷ್ಣ ಸುಖದುಃಖಗಳನ್ನು ತಡೆದುಕೊ'- ಎಂದು ಭಗವಂತನು ಉಪದೇಶಮಾಡಿಯೇ ಇರುತ್ತಾನೆ. ಆದರೆ ಅಲ್ಲಿ ಹೇಳಿರುವದು ಜ್ಞಾನದೃಷ್ಟಿಯ ತಿತಿಕ್ಷೆ. ಜ್ಞಾನದೃಷ್ಟಿಯಿಂದ ನೋಡಿದರೆ ಈ ದ್ವಂದ್ವಗಳು ಆಗಮಾಪಾಯಿಗಳಾಗಿರುತ್ತವೆ, ಬಂದೂಹೋಗೀ ಮಾಡುವ ಸ್ವಭಾವದವವಾಗಿರುತ್ತವೆ; ವಿಕಾರರೂಪವಾಗಿರುವದರಿಂದ ಅಸತ್ಯ ವಾಗಿರುತ್ತವೆ. ಆದ್ದರಿಂದ ಪರಮಾರ್ಥಸತ್ಯರೂಪನಾದ ಆತ್ಮನನ್ನು ತಿಳಿದುಕೊಂಡು ಆ ಜ್ಞಾನದ ಬಲದಿಂದ ಶೀತೋಷ್ಣಾದಿಗಳ ಹೆದರಿಕೆಯನ್ನು ಕಳೆದುಕೊ-ಎಂದು ಅಲ್ಲಿ ಉಪದೇಶಿಸಿತ್ತು. ಇಲ್ಲಿ ಹೇಳಿರುವದು ಯೋಗದೃಷ್ಟಿಯ ತಿತಿಕ್ಷೆ. ಯಾವನ ಮನಸ್ಸು ಹೊರಮುಖವಾಗಿರುವದೋ ಅವನಿಗೆ ವಿಷಯಗಳಿಂದ ಶೀತೋಷ್ಣಾದಿವೇದನೆಗಳು ಆಗುತ್ತಿರುವವು; ಅವುಗಳಿಂದ ಸುಖದುಃಖಗಳೆಂಬ ಫಲರೂಪವಾದ ಅನುಭವ ಗಳುಂಟಾಗುತ್ತಿರುವವು. ಇದರಂತೆ ಅವನಿಗೆ ಮಾನಸವಾದ ಮಾನಾಪಮಾನವೇ ಮುಂತಾದ ಒಳಗಿನ ಭಾವಗಳೂ ಬಾಹ್ಯನಿಮಿತ್ತದಿಂದ ಉಂಟಾಗಿರುತ್ತಿರುವವು; ಅವುಗಳಿಂದಲೂ ಅವನು ಸುಖದುಃಖಗಳನ್ನು ಪಡೆಯುತ್ತಾ ಉಬ್ಬುತ್ತಲೂ ಕುಸಿಯುತ್ತಲೂ ಇರುವನು. ಆದರೆ ಧ್ಯಾನಯೋಗಿಯಾದವನಿಗೆ ಹೀಗಿರುವದಿಲ್ಲ. ಅವನ ಚಿತ್ತವು ಅಂತರ್ಮುಖವಾಗಿರುವದರಿಂದ ಆಧಿಭೌತಿಕವಾದ ಅಥವಾ ಆಧ್ಯಾತ್ಮಿಕವಾದ ಯಾವ ದ್ವಂದ್ವಗಳೂ ಅವನ ಚಿತ್ತದಲ್ಲಿ ಪ್ರತಿಕ್ರಿಯೆಯನ್ನುಂಟು ಮಾಡುವ ಹಾಗಿರುವದಿಲ್ಲ. ಅತ್ಯಂತ ತಾಮಸಸ್ವಭಾವದವನಿಗೂ ಹೀಗೆಯೇ ಚಿತ್ತದಲ್ಲಿ ಯಾವ ಪ್ರತಿಕ್ರಿಯೆಯೂ ಆಗುವಂತಿರುವದಿಲ್ಲ; ಮನಸ್ಸು ಬಹಳ ಸೂಕ್ಷ್ಮವಾಗಿ ಧ್ಯಾನಯೋಗದಲ್ಲಿ ಮುಳುಗಿರುವವನೂ ತೀರ ತಾಮಸಸ್ವಭಾವದಿಂದ ಸುಮ್ಮನೆ ಕುಳಿತವನೂ ಒಂದೇ ಸ್ವಭಾವದವರಾಗಿ ಕಂಡರೂ ಅವರಿಬ್ಬರಿಗೂ ಬಹಳ ಹೆಚ್ಚಿನ ತಾರತಮ್ಯವಿರುತ್ತದೆ. ಹಿಂದೆ ನಾವು ಒಬ್ಬ ಮಠದ ಸ್ವಾಮಿಗಳನ್ನು ನೋಡುವದಕ್ಕೆ ಹೋಗಿದ್ದೆವು; ನಮ್ಮೊಡನೆ ಒಬ್ಬ ಸಾಧುಗಳೂ ಅಲ್ಲಿಗೆ ಬಂದಿದ್ದರು. ಮಠದ ವ್ಯವಹಾರವನ್ನೂ ಸುತ್ತಮುತ್ತಲೂ ಇದ್ದ ಲೌಕಿಕಪರಿವಾರವನ್ನೂ ನೋಡಿ ಆ ಸಾಧುಗಳು "ಮಠದ ಸ್ವಾಮಿಗಳಾಗಿರುವದು ಇಬ್ಬರಿಗೆ ಮಾತ್ರ ಸಾಧ್ಯ; ಒಂದೋ ಭಂಡರಾಗಬೇಕು, ಇಲ್ಲವೆ ಜೀವನ್ಮುಕ್ತರಾಗಬೇಕು" ಎಂದರು! ಹೊರಗಿನ ಮಾರ್ಪಾಡು ಗಳಿಂದ ಚಿತ್ತದಲ್ಲಿ ಯಾವ ಪ್ರತಿಕ್ರಿಯೆಯೂ ಆಗದೆ ಇರಬೇಕಾದರೆ ತೀರ ತಾಮಸನಿಗೆ ಸಾಧ್ಯ, ಅಥವಾ ಆತ್ಮಚಿಂತಕನಾದ ಯೋಗಿಗೆ ಸಾಧ್ಯ-ಎಂಬುದೂ ಹೀಗೆಯೇ.

ಯೋಗಿಯು ಜ್ಞಾನವಿಜ್ಞಾನಗಳಿಂದ ತೃಪ್ತನಾಗಿರುತ್ತಾನೆ. ಹೊಟ್ಟೆಶೂಲೆಯು ಮತ್ತೊಬ್ಬರಿಗೆ ಆಗಿರುವಾಗ ನಮಗೆ ಆಗುವ ಶೂಲೆಯ ತಿಳಿವಳಿಕೆಗೂ ಹೊಟ್ಟೆಶೂಲೆಯು ನಮಗೇ ಆಗಿರುವಾಗ ನಮಗೆ ಆಗುವ ಶೂಲೆಯ ತಿಳಿವಳಿಕೆಗೂ ಎಷ್ಟು ಹೆಚ್ಚುಕಡಿಮೆಯಿರುವದೋ ಅಷ್ಟೇ ಹೆಚ್ಚುಕಡಿಮೆಯು ಜ್ಞಾನಕ್ಕೂ ವಿಜ್ಞಾನಕ್ಕೂ ಇರುತ್ತದೆ. **ಧ್ಯಾನಯೋಗವೆಂಬುದೇನು? ವೇದಾಂತವಿಚಾರವನ್ನು ತನ್ನ ಅನುಭವಕ್ಕೆ ತಂದುಕೊಳ್ಳುವ ಯತ್ನ.** ಗುರುಗಳಾಗಲಿ ಶಾಸ್ತ್ರಗಳಾಗಲಿ ಮಾಡುವ ಉಪದೇಶದಿಂದ ಆಗುವ ಜ್ಞಾನವು ಮತ್ತೊಬ್ಬರ ಅಧೀನವಾಗಿರುತ್ತದೆ; ಅದು ಮತ್ತೊಬ್ಬರಿಗೆ ಆಗುವ ಹೊಟ್ಟೆಶೂಲೆಯ ತಿಳಿವಳಿಕೆಯಂತೆ ಪರೋಕ್ಷವಾಗಿರುತ್ತದೆ. ಯೋಗಿಯಾದವನು ಹೊರಗಿನ ವಿಷಯಗಳಿಂದ ತೃಪ್ತನಾಗುವ ಹಾಗಿಲ್ಲ. ತಾನೇ ಅರಿತು ತಾನೇ ಅನುಭವಿಸುವ ಆತ್ಮತತ್ತ್ವವು ಮಾತ್ರ ಅವನಿಗೆ ತೃಪ್ತಿಯನ್ನುಂಟುಮಾಡುತ್ತದೆ.

ಯಾವನಿಗೆ ಅರಿಯಬೇಕಾದ ತತ್ತ್ವವನ್ನು ಮನಗಂಡೆನೆಂಬ ತಿಳಿವಳಿಕೆಯಿಂದ ಪೂರ್ಣತೃಪ್ತಿಯಾಗಿರುವದೋ ಅವನೇ ಯುಕ್ತನು, ಧ್ಯಾನಯೋಗದ ಪೂರ್ಣಫಲವನ್ನು ಪಡೆದುಕೊಂಡವನು. ಮಿಕ್ಕವರು ಸುಮ್ಮನೆ ಬಾಯಿಬಗುಳೆಯಿಂದ ತೃಪ್ತರಾಗಿರುತ್ತಾರೆ; ಅವರಿಗೆ ಮನಸ್ಸಿನ ತಳಮಳವು ತಪ್ಪಿರುವದಿಲ್ಲ. ಅವರಿಗೆ ಒಂದು ವಿಷಯದಲ್ಲಿ ರಾಗ, ಮತ್ತೊಂದರಲ್ಲಿ ದ್ವೇಷ, ಇನ್ನೊಂದರಲ್ಲಿ ಔದಾಸೀನ್ಯ-ಇವು ತಪ್ಪಿದ್ದಲ್ಲ. ಆದರೆ ಧ್ಯಾನಯೋಗಿಯ ಚಿತ್ತವು ಹೇಗಿರುವದು? ಮಣ್ಣುಹೆಂಟೆ, ಕಲ್ಲು, ಚಿನ್ನ-ಇವೆಲ್ಲವೂ ಅವನಿಗೆ ಒಂದೇ. ಅವನಿಗೆ ಯಾವದೊಂದರ ಹೆಚ್ಚುಗಾರಿಕೆಯೂ ಇರುವದಿಲ್ಲ; ಯಾವದೊಂದರ ವಿಷಯಕ್ಕೆ ಕೀಳೆಂಬ ಬುದ್ಧಿಯೂ ಇರುವದಿಲ್ಲ. ನಮ್ಮಂಥವರಿಗೆ ಮತ್ತೊಂದರ್ಥದಲ್ಲಿ ಮಣ್ಣುಹೆಂಟೆ, ಕಲ್ಲು, ಚಿನ್ನ-ಎಲ್ಲವೂ ಒಂದೇ ಆಗಿರುತ್ತವೆ; ತೀರ ಕುತ್ಸಿತಪದಾರ್ಥವನ್ನು ಕಂಡರೂ ಉತ್ಕೃಷ್ಟಪದಾರ್ಥದಿಂದ ಮನಸ್ಸು ಹೇಗೆ ಹೊಯ್ದಾಡಬೇಕೋ ಅಷ್ಟೇ ಹೊಯ್ದಾಡುತ್ತಿರುತ್ತದೆ. ಆದರೆ ಧ್ಯಾನಯೋಗಿಯ ಮನಸ್ಸು ಹೀಗಿರುವದಿಲ್ಲ; ಇಡಕುಮುಡುಕಿಲ್ಲದ ರಸ್ತೆಯ ಮೇಲೆ ಹೋಗುತ್ತಿರುವ ಬಂಡಿಯು ಎಡಕ್ಕಾಗಲಿ ಬಲಕ್ಕಾಗಲಿ ಒಲಿಯದೆ, ಲಟಕಮುಟಕೆಂದು ಮೇಲಕ್ಕೂ ಕೆಳಕ್ಕೂ ಏರುತ್ತಲೂ ಕುಕ್ಕರಿಸುತ್ತಲೂ ಇರದೆ, ಹಿಂಭಾರಮುಂಭಾರಗಳ ಕಾಟವೂ ಇಲ್ಲದೆ, ಹೇಗೆ ಸಲೀಸಾಗಿ ಸಾಗುತ್ತಿರುವದೋ ಹಾಗೆ ಯೋಗಿಯ ಮನಸ್ಸು ಆತ್ಮಚಿಂತನೆಯ ಸಂತತಿಯಿಂದ ಹಾಯಾಗಿರುವದು. ಧ್ಯಾನಯೋಗಿಯ ಸಮತ್ವವನ್ನು ಅವನ ಹೊರಗಿನ ವ್ಯವಹಾರದಿಂದಲೂ ಗೊತ್ತುಪಡಿಸಬಹುದು. ಏಕೆಂದರೆ,

**ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬನ್ಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ (೬-೯)**

ಉಪಕಾರಿಯಾದವನು, ಗೆಳೆಯನು, ಹಗೆ, ಯಾವ ಪಕ್ಷಕ್ಕೂ ಸೇರದೆ ಸುಮ್ಮನಿರುವವನು, ಒಬ್ಬರಿಗೊಬ್ಬರಾಗದೆ ಇರುವವರಿಬ್ಬರಿಗೂ ಹಿತವನ್ನು ಕೋರುವವನು, ತನಗೆ ಬೇಡದವನು, ನೆಂಟನು-ಇವರೆಲ್ಲರಲ್ಲಿಯೂ ಒಳ್ಳೆಯವರಲ್ಲಿ ಹೇಗೋ ಹಾಗೆ ಕೆಟ್ಟವರಲ್ಲಿಯೂ ಸಮಬುದ್ಧಿಯುಳ್ಳವನೇ ಉತ್ತಮನಾದ ಧ್ಯಾನಯೋಗಿ ಎನಿಸುವನು. ಹಿಂದೆ "ಪಂಡಿತಾಃ ಸಮದರ್ಶಿನಃ" (೫-೧೮) ಎಂಬ ಶ್ಲೋಕದಲ್ಲಿ ಹೇಳಿದ ಸಮದರ್ಶನಕ್ಕೂ ಇಲ್ಲಿ ಹೇಳಿರುವ ಸಮದರ್ಶನಕ್ಕೂ ಇರುವ ಭೇದವನ್ನು ಲಕ್ಷಿಸಬೇಕು. ಆ ಶ್ಲೋಕದಲ್ಲಿ ಹೇಳಿರುವದು ಜ್ಞಾನಿಗಳ ಸಮದರ್ಶನ; ಜ್ಞಾನಿಗಳಾದವರು ಅತ್ಯಂತ ವಿಷಮವಾಗಿ ಕಾಣುವ ಬ್ರಾಹ್ಮಣ, ಗೋವು, ಆನೆ, ನಾಯಿ ಮುಂತಾದ ಜೀವರಲ್ಲೆಲ್ಲ ಮೇಲೆ ತೋರುವ ಭೇದವನ್ನು ಅವಿದ್ಯಕವೆಂದು ಅರಿತು ಪರಮಾರ್ಥವಾದ ಬ್ರಹ್ಮವನ್ನೇ ಎಲ್ಲರಲ್ಲಿಯೂ ಕಾಣುತ್ತಿರುವರು-ಎಂದು ಅಲ್ಲಿ ಹೇಳಿರುತ್ತದೆ. ಇಲ್ಲಿ ಹೇಳಿರುವದು ಹೊರಗಿನ ವಸ್ತುಗಳ ವೈಷಮ್ಯದಿಂದ ಏರುಪೇರನ್ನು ಪಡೆಯದೆ ಮನಸ್ಸನ್ನು ಸಮ ತೂಕದಲ್ಲಿಟ್ಟುಕೊಂಡಿರುವ ಯೋಗಿಯ ಸಮದೃಷ್ಟಿ. ಯೋಗಿಯಾದವನು ಹೊರಗೆ ಯಾರನ್ನು ನೋಡಿದರೂ "ಇವನು ಇಂಥವನು, ಇಂಥ ಕೆಲಸವನ್ನು ಮಾಡುವವನು, ಆದ್ದರಿಂದ ಮೇಲು ಅಥವಾ ಕೀಳು, ನನಗೆ ಬೇಕಾದವನು ಅಥವಾ ಬೇಡದವನು, ನಾನು ಪ್ರೀತಿಸಬೇಕಾದವನು ಅಥವಾ ಹಗೆಮಾಡತಕ್ಕವನು ಎಂದು ಮನಸ್ಸಿನಲ್ಲಿ ಪ್ರತಿಕ್ರಿಯೆಯನ್ನು ಹೊಂದದೆ, ಎಲ್ಲರಲ್ಲಿಯೂ ತನ್ನ ಮನಸ್ಸಿನ ಭಾವವನ್ನು ಒಂದೇ ಸಮವಾದ ಸ್ಥಿತಿಯಲ್ಲಿಟ್ಟುಕೊಂಡು ಇರುತ್ತಾನೆ" ಎಂದು ಇಲ್ಲಿ ವರ್ಣಿಸಿದೆ.

ಇಲ್ಲಿಯವರೆಗೆ ಧ್ಯಾನಯೋಗಿಯ ಚಿತ್ತದ ಸ್ವಭಾವವನ್ನು ಸ್ವಲ್ಪಮಟ್ಟಿಗೆ ವರ್ಣಿಸಿದ್ದಾಯಿತು. ಈಗ ಧ್ಯಾನಯೋಗವನ್ನು ಹೇಗೆ ಮಾಡಬೇಕೆಂಬುದನ್ನು ತಿಳಿಸುವದಕ್ಕೆ ಪ್ರಾರಂಭಿಸಿರುತ್ತದೆ.

**ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥** (೬-೧೦)

"ಯೋಗಿಯಾದವನು ಏಕಾಂತಸ್ಥಳದಲ್ಲಿದ್ದುಕೊಂಡು, ತನ್ನ ಜೊತೆಗೆ ಯಾರೊಬ್ಬರನ್ನೂ ಬಯಸದೆ, ಯಾವಾಗಲೂ ದೇಹೇಂದ್ರಿಯಗಳನ್ನು ಬಿಗಿಹಿಡಿದುಕೊಂಡು ಮನಸ್ಸನ್ನು ಸಮಾಧಾನದಲ್ಲಿಟ್ಟುಕೊಳ್ಳುವದಕ್ಕೆ ಯತ್ನಿಸುತ್ತಿರಬೇಕು."

ಈ ಸಾಧನಭಾಗವನ್ನು ವಿವರಿಸುವ ಮುಂಚೆ ಇಲ್ಲಿ ಯೋಗಿಗೆ ಹೇಳಿರುವ ವಿಶೇಷಣಗಳನ್ನು ಸ್ವಲ್ಪ ಚಿತ್ತವಿಟ್ಟು ನೋಡೋಣ. ಯೋಗಿಯು 'ಏಕಾಕಿ'ಯಾಗಿ ಜೊತೆಗೆ ಮತ್ತೊಬ್ಬರಿಲ್ಲದೆ ಇರಬೇಕು ಎಂದಿರುವದನ್ನು ನೋಡಿದರೆ ಯಜ್ಞಾದಿಗಳಂತೆ

ಪತ್ನೀಸಮೇತನಾಗಿ ಮಾಡುವ ಕರ್ಮವಿದಲ್ಲವೆಂದು ತೋರುತ್ತದೆ. "ಯತಚಿತ್ತಾತ್ಮ" ನಾಗಿರಬೇಕು, ಚಿತ್ತವನ್ನೂ ದೇಹೇಂದ್ರಿಯಗಳನ್ನೂ ಹಿಡಿತದಲ್ಲಿಟ್ಟುಕೊಂಡಿರಬೇಕು ಎಂದಿರುವದನ್ನು ನೋಡಿದರೆ ಚಿತ್ತಸಂಯಮವನ್ನು ಮಾಡುವದಕ್ಕಾಗಿ ಏರ್ಪಟ್ಟಿರುವ ಆಶ್ರಮದಲ್ಲಿ ಮಾಡತಕ್ಕ ಸಾಧನವಿದು ಎಂದು ತೋರುತ್ತದೆ. 'ನಿರಾಶೀಃ' 'ಅಪರಿಗ್ರಹಃ' ಯಾವ ಬಯಕೆಯೂ ಇಲ್ಲದೆ ತನ್ನದೆಂಬುದು ಯಾವದೂ ಇಲ್ಲದೆ ಇರಬೇಕು ಎಂಬುದನ್ನು ನೋಡಿದರೆ ಸರ್ವಸಂಗಪರಿತ್ಯಾಗವನ್ನು ಮಾಡಿರುವ, ಏಷಣಾತ್ರಯವನ್ನು ದೂರಮಾಡಿರುವ, ಸಂನ್ಯಾಸಿಯ ವಿಷಯವೇ ಇದೆಂದು ತೋರುತ್ತದೆ. ಇವೇ ಮುಂತಾದ ಕಾರಣಗಳಿಂದ ಈ ಅಧ್ಯಾಯದಲ್ಲಿ ಹೇಳಿರುವ ಧ್ಯಾನಯೋಗವು ಸಂನ್ಯಾಸಿಗೆ ಹೇಳಿದ್ದು ಎಂದು ಶ್ರೀಶಂಕರಾಚಾರ್ಯರು ಅಭಿಪ್ರಾಯಪಟ್ಟಿರುತ್ತಾರೆ. ಇಲ್ಲಿ ಕೆಲವರು ಈ ಅಭಿಪ್ರಾಯವನ್ನು ಒಪ್ಪದೆ ಆಚಾರ್ಯರು ತಾವು ಸಂನ್ಯಾಸಿ ಗಳಾದ್ದರಿಂದ ಈ ಸಾಧನವನ್ನು ಸಂನ್ಯಾಸಿಗಳ ಸ್ವತ್ತೆಂದು ಹೇಳಿರುತ್ತಾರೆ ಎಂದು ಭಾವಿಸಿರುತ್ತಾರೆ. ಇದು ಸರಿಯಲ್ಲ. ಗೀತಾಶ್ಲೋಕಕ್ಕೆ ಯಥಾಶ್ರುತವಾಗಿ ಅರ್ಥವನ್ನು ಮಾಡುವದಕ್ಕೆ ಹೊರಟಿರುವ ನಾವು ಹೀಗೆ ಮೊದಲೇ ದುರಭಿಮಾನವನ್ನು ತಾಳಬಾರದು. ಇಲ್ಲಿರುವ ವಿಶೇಷಣಗಳು ಸಂನ್ಯಾಸಿಗಳಿಗೆ ಮಾತ್ರ ಸಾಧ್ಯ ಎಂಬುದನ್ನು ನಾವೆಲ್ಲರೂ ಅವಶ್ಯವಾಗಿ ಒಪ್ಪಬೇಕು. ಇದುವರೆಗೆ ವರ್ಣಿಸಿರುವ ಧ್ಯಾನ ಯೋಗವು-ಶೀತೋಷ್ಣಗಳಲ್ಲಿಯೂ ಮಾನಾಪಮಾನಗಳಲ್ಲಿಯೂ ಸಮನಾಗಿರುವದು, ಶತ್ರುಮಿತ್ರೋದಾಸೀನರೇ ಮುಂತಾದವರ ವಿಷಯದಲ್ಲಿ ಸಮಾಧಾನವುಳ್ಳ ಚಿತ್ತವುಳ್ಳವನಾಗಿರುವದು, ಒಂಟಿಯಾಗಿ, ಏನನ್ನೂ ಬಯಸದೆ, ತನ್ನದೆಂಬ ಆಸ್ತಿಯ ಅಭಿಮಾನವಿಲ್ಲದಿರುವದು, ಏಕಾಂತವಾಸದಲ್ಲಿಯೇ ಯಾವಾಗಲೂ ಇದ್ದುಕೊಂಡಿರು ವದು, ಇದೆಲ್ಲ—ಸಂನ್ಯಾಸಿಗಲ್ಲದೆ ಮತ್ತೆ ಯಾರಿಗೆ ತಾನೆ ಮುಖ್ಯಾರ್ಥದಲ್ಲಿ ಹೊಂದುತ್ತದೆ? "ಗೃಹಸ್ಥರಾದ ನಮಗೆ" ಎಂದು ಯಾರು ತಾನೆ ಎದೆತಟ್ಟಿಕೊಂಡು ಹೇಳಲಾಪರು?

ಇದು ಹೇಗಾದರೂ ಇರಲಿ, ಈ ಧ್ಯಾನಯೋಗವು ಗೃಹಸ್ಥರಿಗೆ ಯಾವ ಕೆಲಸಕ್ಕೂ ಬಾರದು ಎಂದು ಮಾತ್ರ ಹೇಳುವಹಾಗಿಲ್ಲ. ನಾವು ಧ್ಯಾನಯೋಗಿಯ ವಿಶೇಷಣಗಳನ್ನು ಪರಿಪೂರ್ಣವಾಗಿ ಅಳವಡಿಸಿಕೊಂಡು ಜೀವನದಲ್ಲಿ ತೋರಿಸಿ ಕೊಳ್ಳಬಹುದೆಂಬ ಭರವಸೆಯಿಲ್ಲದಿದ್ದರೂ ಅವನ್ನು ಅದಮಟ್ಟಿಗಾದರೂ ಸಂಪಾದಿಸಿ ಕೊಳ್ಳುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ. ಧ್ಯಾನಯೋಗದಲ್ಲಿರುವ ಗುಣಗಳೆಲ್ಲವೂ ಕರ್ಮಯೋಗದಲ್ಲಿ ಒಂದಿಷ್ಟಾದರೂ ಇದ್ದೇ ಇರುತ್ತವೆ. ಆದ್ದರಿಂದಲೇ ಕರ್ಮಯೋಗವು ಆರುರುಕ್ಷುವಿಗೆ ಸಾಧನವೆಂದು ಈವರೆಗೆ ವರ್ಣಿಸುತ್ತಾ ಬಂದಿರುವದು. ವ್ಯವಹಾರ

ದಲ್ಲಿದ್ದುಕೊಂಡಿರುವ, ಶಾಸ್ತ್ರೀಯಕರ್ಮಗಳನ್ನು ಕೂಡ ಮಾಡಲಿಲ್ಲವಲ್ಲ ಎಂದು ಪರಿತಪಿಸುತ್ತಿರುವ, ನಮ್ಮಂಥವರುಕೂಡ, ಇಲ್ಲಿ ಹೇಳಿರುವ ಸಾಧನಗಳನ್ನು ಗುರಿಯಾಗಿಟ್ಟುಕೊಂಡು ಜೀವನವನ್ನು ಸಾಗಿಸುವದಕ್ಕೆ ಪ್ರಯತ್ನಮಾಡುತ್ತಿರಬೇಕು.

ಯೋಗಿಯಾದವನು ಎಲ್ಲರಲ್ಲಿಯೂ ಸಮಚಿತ್ತನಾಗಿರುವನೆಂದು ಕೇಳಿದವರು, ತಾವೂ ವ್ಯವಹಾರದಲ್ಲಿ ಕೂಡಿದಷ್ಟು ಮಟ್ಟಿಗೆ ಮನಸ್ಸಿನ ಸಮತೆಯನ್ನು ಕಳೆದುಕೊಳ್ಳದೆ ಇರುವದಕ್ಕೆ ಯತ್ನಿಸಬೇಕು. ಯೋಗಿಯು ಏಕಾಂತವಾಸದಲ್ಲಿರುವನೆಂದು ಕೇಳಿದವರು ಅವನಿಂದ ಜನಜೀವನಕ್ಕೆ ಯಾವ ಉಪಯೋಗವೂ ಆಗಲಿಲ್ಲವೆಂದು ತಿರಸ್ಕಾರ ಮಾಡುವದನ್ನು ಬಿಡಬೇಕು. ಧ್ಯಾನಯೋಗಿಯಾದವನು ಎಷ್ಟು ದಟ್ಟವಾದ ಕಾಡಿನಲ್ಲಿ, ಯಾವ ಬೆಟ್ಟದ ಗವಿಯಲ್ಲಿ, ಧ್ಯಾನಮಾಡುತ್ತಿದ್ದರೂ ಅವನ ಧ್ಯಾನಧಾರೆಯು ಬೆಟ್ಟಗಳನ್ನು ಏರಿ, ಸಮುದ್ರಗಳನ್ನು ದಾಟಿ, ವ್ಯವಹಾರಪ್ರಪಂಚದೊಳಕ್ಕೆ ನುಗ್ಗಿ ಜನರ ಚಿತ್ತವೃತ್ತಿಗಳನ್ನೆಲ್ಲ ಮಾರ್ಪಡಿಸಿಬಿಡುತ್ತದೆ ಎಂಬ ದೊಡ್ಡವರ ಸೂಕ್ತಿಯನ್ನು ಮನ್ನಿಸಬೇಕು. **ಶ್ರೀ ರಾಮಕೃಷ್ಣಪರಮಹಂಸರು** ಹೇಳಿರುವಂತೆ ಗೃಹಸ್ಥರು ಕೂಡ ಒಂದು ವರ್ಷ, ಆರು ತಿಂಗಳು, ಮೂರು ತಿಂಗಳು, ಒಂದು ತಿಂಗಳು ಅಥವಾ ಒಂದು ವಾರವಾದರೂ ಏಕಾಂತವಾಸವನ್ನು ಮಾಡಲೇಬೇಕು. ಪ್ರತಿದಿನವೂ ಪರಮೇಶ್ವರನನ್ನು ಪೂಜಿಸುವದು, ಸ್ವಲ್ಪಹೊತ್ತಾದರೂ ಆತನನ್ನು ಚಿಂತಿಸುವದು, ಅವಶ್ಯ. ಅದರಿಂದ ಸುಖವುಂಟು. ಶರೀರದಂತೆ ಮನಸ್ಸಿಗೂ ಆಹಾರವು ಬೇಕು. ಅದನ್ನು ಪರಮೇಶ್ವರನ ಧ್ಯಾನದಿಂದ ಸಂಪಾದಿಸಿಕೊಳ್ಳಬೇಕು. ಪರಮಾತ್ಮನ ಚಿಂತನೆಯಿಂದ ಮನಸ್ಸನ್ನು ಸಮಾಧಾನಸ್ಥಿತಿಗೆ ತಂದುಕೊಂಡು ನಾವು ಮಾಡುವ ಕಾರ್ಯಗಳನ್ನು ಆ ಪರಮೇಶ್ವರನ ಸಂಕಲ್ಪಕ್ಕೆ ಜೋಡಿಸುವ ಪ್ರಯತ್ನವನ್ನು ಮಾಡುತ್ತಿರಬೇಕು. ಎಲ್ಲೆಲ್ಲಿಯೂ ಪರಮೇಶ್ವರನ ಸಂಕಲ್ಪವೇ ನಡೆದಿದೆ ಎಂಬುದನ್ನು ಮನದಂದು ಆ ಸಂಕಲ್ಪಕ್ಕೆ ಅಡ್ಡಬರದಂತೆ ನಡೆಯಬೇಕು. ಆ ಸಂಕಲ್ಪಪ್ರವಾಹಕ್ಕೆ ನಮ್ಮ ಮನಃಪ್ರವಾಹವನ್ನು ಸೇರಿಸಿಕೊಂಡುಬಿಡಬೇಕು.

ಸರಕಾರದವರೂ ಮುನಿಸಿಪಾಲಿಟಿಯವರೂ ಜನರಿಗೆ ಇಂಥಿಂಥ ಜೀವನದ ಸೌಕರ್ಯಗಳನ್ನು ಒದಗಿಸಿಕೊಟ್ಟಿರುತ್ತೇವೆಂದು ಹೇಳಿಕೊಳ್ಳುತ್ತಿರುವದುಂಟು. ಅಂಥ ಕಾಲದಲ್ಲಿ "ನಾವು ಜನರ ಮನಃಸ್ವಾಸ್ಥ್ಯಕ್ಕೆ ಏನು ಏರ್ಪಾಡುಮಾಡಿದ್ದೇವೆ?" ಎಂದು ಅವರು ತಮಗೆ ತಾವೇ ಪ್ರಶ್ನೆಯನ್ನು ಹಾಕಿಕೊಳ್ಳಬೇಕು. ಮನಸ್ಸನ್ನು ದೂರಮಾಡಿ ಬರಿಯ ಶರೀರಕ್ಕೆ ಬೇಕಾದ ಸುಖವಸ್ತುಗಳ ವಿಚಾರಮಾಡುತ್ತಿರುವದು ಶವಕ್ಕೆ ಅಲಂಕಾರಮಾಡಿದಂತೆ ನಿಷ್ಫಲ. ಮಗನಿಗೆ ಬೇಕಾದಷ್ಟು ಆಸ್ತಿಯನ್ನೂ ಹಣವನ್ನೂ ಸಂಪಾದಿಸಿಟ್ಟಿದೇನೆಂದು ಕೊಚ್ಚಿಕೊಳ್ಳುವ ತಂದೆಯು "ಮಗನ ಮನಃಸ್ವಾಸ್ಥ್ಯಕ್ಕೆ ಏನು

ಏರ್ಪಾಡುಮಾಡಿದೇನೆ?" ಎಂದು ತನ್ನನ್ನು ತಾನೇ ಕೇಳಿಕೊಳ್ಳಬೇಕು. ಮಕ್ಕಳ ವಿದ್ಯಾಭ್ಯಾಸಕ್ಕೆ ಸಾವಿರಾರು ರೂಪಾಯಿಗಳನ್ನು ಖರ್ಚುಮಾಡುವ ಮಹಾಶಯರು 'ವಿದ್ಯಾಭ್ಯಾಸ'ವೆಂದರೇನು? ಎಂಬುದನ್ನು ಸ್ವಲ್ಪ ಯೋಚಿಸುವದು ಒಳ್ಳೆಯದು. ವಿದ್ಯೆ **ಎಂದರೆ ಮನಸ್ಸಿಗೆ ಬೇಕಾದ ಸರಿಯಾದ ತಿಳಿವಳಿಕೆ.** ಮನುಷ್ಯನು ಸ್ವಾರ್ಥಬುದ್ಧಿಯಿಂದ ಇಹಪರಸುಖಗಳನ್ನು ಹಾಳುಮಾಡಿಕೊಂಡು ಕೆಲವು ನಾಣ್ಯಗಳನ್ನೋ ನೋಟುಗಳನ್ನೋ ರಾಶಿಹಾಕಿಕೊಳ್ಳುವ ವಿದ್ಯೆಯನ್ನು ಕಲಿತೆನೆಂದು ಹೆಮ್ಮೆಪಡುವದು ನಾಚಿಕೆಗೇಡು. ಧರ್ಮಮಾರ್ಗದಲ್ಲಿ ನಡೆದು ತಾನೂ ತನ್ನ ಕುಟುಂಬದವರೂ ನೆರೆಯವರೂ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವಾಗಿರುವದಕ್ಕೆ ತಕ್ಕ ನಡತೆಯವ ರಾಗುವಂತೆ ಪ್ರೇರಿಸುವ ಬುದ್ಧಿಯೇ ನಿಜವಾದ ವಿದ್ಯೆ. ಆದ್ದರಿಂದ "ಪರಮೇಶ್ವರ, ಒಳ್ಳೆಯ ಬುದ್ಧಿಯನ್ನು ಕೊಡು!" ಎಂದು ದಿನದಿನವೂ ಪ್ರಾರ್ಥಿಸಿಕೊಳ್ಳುವ ಅಭ್ಯಾಸವನ್ನು ಇಟ್ಟುಕೊಳ್ಳಬೇಕು. ಚಿಕ್ಕಂದಿನಲ್ಲಿಯೇ ಮಕ್ಕಳಿಗೆ ಗಾಯತ್ರಿಯನ್ನುಪದೇಶಿಸಿ 'ಉಪನಯನ'ಮಾಡಿಸಬೇಕು. ಉಪನಯನವೆಂದರೆ ಪರಮೇಶ್ವರನ ಸಮೀಪಕ್ಕೆ ಕರೆದುಕೊಂಡು ಹೋಗುವ ಸಂಸ್ಕಾರವು. ಮಕ್ಕಳಿಗೆ ಅಧ್ಯಾತ್ಮವಿದ್ಯೆಯ ಸವಿಯನ್ನು ಹತ್ತಿಸುವ ಅಭ್ಯಾಸವನ್ನು ಮಾಡಿಸಬೇಕು. ಪ್ರತಿಯೊಬ್ಬರೂ ಸಾಧ್ಯವಾದರೆ ಮನೆಯಲ್ಲಿ ಧ್ಯಾನಕ್ಕೆಂದು ಒಂದು ದೇವರ ಕೋಣೆಯನ್ನು ಏರ್ಪಡಿಸಿಕೊಳ್ಳಬೇಕು. ಅಲ್ಲಿ ಧೂಪ, ಅರ್ಚನೆ, ಮುಂತಾದ ಏರ್ಪಾಡುಗಳಿಂದ ಧ್ಯಾನಕ್ಕೆ ಬಂದವರ ಮನಸ್ಸು ಏರುಮಟ್ಟಕ್ಕೆ ಬರುವದಕ್ಕೆ ತಕ್ಕಂತೆ ಸಜ್ಜುಗೊಳಿಸಬೇಕು.

ಹೀಗೆಲ್ಲ ಕೈಲಾದಮಟ್ಟಿಗೂ ಧ್ಯಾನಯೋಗಿಗಳ ಮೇಲುಪಙ್ಕ್ತಿಯನ್ನು ಅನುಸರಿ ಸುತ್ತಾ ಬಂದರೆ ಪೈಪೋಟಿಯ ಪ್ರಪಂಚವು ಮಾಯವಾಗಿ ಅದೇ ಪರಮೇಶ್ವರನ ಪ್ರಪಂಚವಾಗಿರುವದು. ಕಾಮರಾಜ್ಯವು ಹೋಗಿ ರಾಮರಾಜ್ಯವಾಗುವದು, ದುಃಖ ಪ್ರಪಂಚವು ಹೋಗಿ ಆನಂದಪ್ರಪಂಚವಾಗುವದು. ಹಿಂದಕ್ಕೆ ಯಾಜ್ಞವಲ್ಕ್ಯನೆಂಬ ಋಷಿಯೊಬ್ಬನಿದ್ದನು. ಆತನಿಗೆ ಇಬ್ಬರು ಹೆಂಡಿರು. ತಾನು ತಿಳಿದಿದ್ದ ಆತ್ಮವಿದ್ಯೆಯ ಅನುಸಂಧಾನದಲ್ಲಿಯೇ ಕಾಲವನ್ನು ಕಳೆಯುವದಕ್ಕೆಂದು ಆ ಋಷಿಯು ಹೆಂಡಂದಿ ರಿಬ್ಬರಿಗೂ ತನ್ನ ಆಸ್ತಿಯನ್ನು ಸರಿಪಾಲು ಮಾಡಿಕೊಡುವದಕ್ಕೆ ಪ್ರಾರಂಭಿಸಿದನು. ಆದರೆ ವಿವೇಕಶಾಲಿನಿಯಾದ ಮೈತ್ರೇಯಿ ಎಂಬ ಹೆಂಡತಿಯು "ತಾವು ಸಂನ್ಯಾಸವನ್ನು ಸ್ವೀಕರಿಸಿದ ಬಳಿಕ ಮಾಡುವ ಅನುಷ್ಠಾನದಿಂದ ಸಿಕ್ಕುವ ಅಮೃತತ್ವವು ಈ ವಿತ್ತದಿಂದ ಸಿಕ್ಕೀತೊ?" ಎಂದು ಕೇಳಿದಳು. ಯಾಜ್ಞವಲ್ಕ್ಯನು "ವಿತ್ತದಿಂದ ನೀನು ಎಲ್ಲರಂತೆ ಭೋಗಗಳನ್ನು ಸಂಪಾದಿಸಿಕೊಳ್ಳಬಹುದೇ ಹೊರತು ಅದರಿಂದ ಅಮೃತತ್ವವು ಸಿಕ್ಕುವ ಆಶೆಯು ಒಂದಿಷ್ಟೂ ಇಲ್ಲ" ಎಂದು ಹೇಳುತ್ತಲೂ "ಹಾಗಾದರೆ ನನಗೆ

ಈ ಧನವು ಬೇಡ, ಇದನ್ನು ನಮ್ಮ ಅಕ್ಕ ಕಾತ್ಯಾಯನಿಗೇ ಬೇಕಾದರೆ ಕೊಟ್ಟುಬಿಡಿ. ತಮಗೆ ತಿಳಿದಿರುವ ಬ್ರಹ್ಮವಿದ್ಯೆಯನ್ನೇ ನನಗೆ ಹೇಳಿಕೊಡಿ" ಎಂದು ಕೇಳಿದಳು. ಆಗ ಆ ಋಷಿಯು "ಎಲೆ, ಆತ್ಮನನ್ನೇ ಕಾಣಬೇಕು, ಅದಕ್ಕಾಗಿ ಆತ್ಮನನ್ನೇ ಶ್ರವಣ ಮಾಡಬೇಕು, ಮನನಮಾಡಬೇಕು, ಧ್ಯಾನಮಾಡಬೇಕು. ಹೀಗೆ ಮಾಡಿದರೆ ಇದೆಲ್ಲವನ್ನೂ ಅರಿತಂತೆಯೇ" ಎಂದು ಉತ್ತರಕೊಟ್ಟನು. ಆ ಋಷಿಯು ಆತ್ಮದರ್ಶನಕ್ಕೆ ಹೇಳಿಕೊಟ್ಟ ಉಪಾಯಗಳು ಬೃಹದಾರಣ್ಯಕವೆಂಬ ಉಪನಿಷತ್ತಿನಲ್ಲಿರುತ್ತವೆ. ತಮ್ಮ ಪ್ರಿಯಪತ್ನಿಯನ್ನು ನಿಮಿತ್ತಮಾಡಿಕೊಂಡು ಇಡಿಯ ಪ್ರಪಂಚಕ್ಕೇ ಕಲ್ಯಾಣವಾಗುವಂತೆ ಯಾಜ್ಞವಲ್ಕ್ಯರು ಮಾಡಿರುವ ಈ ಉತ್ತಮವಾದ ಉಪದೇಶಕ್ಕೆ ನಾವುಗಳೂ ಕಿವಿಗೊಡಬೇಕು. ಪರಮಾತ್ಮನ ವಿಚಾರವನ್ನು ಮಾಡುತ್ತಾ ಆತನ ಚಿಂತನೆಯನ್ನೇ ನಾವು ಮಾಡಬೇಕು. ಅದು ನಮ್ಮ ಕೈಯಲ್ಲಾಗದಿದ್ದರೆ ಅದನ್ನು ಲಕ್ಷ್ಯದಲ್ಲಿಟ್ಟುಕೊಂಡು ದಿನದಿನವೂ ಸ್ವಲ್ಪ ಹೊತ್ತಾದರೂ ಪರಮಾತ್ಮನಸ್ಮರಣೆಯನ್ನು ಮಾಡುತ್ತಿರಬೇಕು. ಈ ಲೋಕದಲ್ಲಿ ಜೀವನವೆಂಬುದೊಂದು ಒಂದು ದೊಡ್ಡ ನದಿಯ ಪ್ರವಾಹವು. ಈ ಪ್ರವಾಹದಲ್ಲಿ ಬಿದ್ದವರು ಕೊಚ್ಚಿಕೊಂಡು ಯಾವ ಸಮುದ್ರಕ್ಕೆ ಬೀಳುವರೋ ಹೇಳುವದಕ್ಕಿಲ್ಲ. ಆದರೆ ಇದೇ ನದಿಯ ಮೇಲೆ ಪರಮಾತ್ಮನ ಚಿಂತನೆ ಎಂಬುದೊಂದು ಹಲಗೆ ಇದೆ. ಅದನ್ನು ನಾವು ಹಿಡಿದುಕೊಂಡು ಈ ನದಿಯ ಆಚೆಯ ದಂಡೆಯನ್ನು ಸೇರಬೇಕು.

---

## ೪೧. ಯೋಗಾಭ್ಯಾಸಕ್ರಮ ೬-(೧೧-೧೫)

(೪.೫.೪೭)

ಧ್ಯಾನಯೋಗಕ್ಕೆ ಆಸನ, ಆಹಾರಾದಿಗಳು-ಇವುಗಳಲ್ಲಿ ಕೆಲವು ನಿಮಯಗಳನ್ನು ಅನುಸರಿಸಬೇಕಾಗುತ್ತದೆ. ಅದನ್ನು ಈಗ ಹೇಳಲಾಗುತ್ತದೆ. ಯೋಗವನ್ನು ನಿಯಮದಿಂದ ಅಭ್ಯಾಸಮಾಡುವವರಿಗೆ ಮಾತ್ರ ಅದರ ಫಲವು ದೊರಕುತ್ತದೆ.

ಮೊಟ್ಟಮೊದಲು **ಆಸನದ** ವಿಚಾರ. ಈಚಿನ ಯೋಗಗ್ರಂಥಗಳಲ್ಲಿ ಸ್ವಸ್ತಿಕ, ಗೋಮುಖ, ಪದ್ಮ, ಸಿದ್ಧ-ಮುಂತಾದ ಹಲವು ಆಸನಗಳನ್ನು ತಿಳಿಸಿರುತ್ತದೆ. ಈ ಕಾಲದಲ್ಲಿ ಅನೇಕರು ಈ ಆಸನಗಳನ್ನು ಅಲ್ಲಲ್ಲಿ ಪ್ರದರ್ಶನಮಾಡುತ್ತಿರುತ್ತಾರೆ; ಇಂಥಿಂಥ ಆಸನಗಳಿಂದ ಇಂಥಿಂಥ ವಿಶಿಷ್ಟಪ್ರಯೋಜನವುಂಟಾಗುವದೆಂದು ಹೇಳುತ್ತಲೂ ಇದ್ದಾರೆ. ಅವೆಲ್ಲ ಹಠಯೋಗದ ಆಸನಗಳು. **ಪಾತಂಜಲಯೋಗದಲ್ಲಿ** ಈ ಆಸನಗಳ ವಿವರವು ಕಾಣುವದಿಲ್ಲ; ಅದರಲ್ಲಿ "ಸ್ಥಿರಸುಖಮಾಸನಮ್" ಯಾವ

ಆಸನದಲ್ಲಿ ನಾವು ಸುಖದಿಂದ ಬಹುಕಾಲ ಕುಳಿತುಕೊಳ್ಳಬಹುದೋ ಅದನ್ನೇ ಯೋಗದ ಅಭ್ಯಾಸಕ್ಕೆ ಬೇಕಾದ ಆಸನವೆಂದು ತಿಳಿಯಬೇಕೆಂದು ಹೇಳಿರುತ್ತದೆ. ಈ ಅಭಿಪ್ರಾಯವೇ ಗೀತೆಯಲ್ಲಿಯೂ ಕಂಡುಬರುತ್ತದೆ.

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ॥** (೬-೧೧)

ಆಸನವು ಶುಚಿಯಾದ ಪ್ರದೇಶದಲ್ಲಿರಬೇಕು; ಅದು ಸ್ವಭಾವವಾಗಿ ಗಾಳಿಯಿಲ್ಲದ ನದೀತೀರವೇ ಮುಂತಾದ ಶುದ್ಧವಾದ ಪ್ರದೇಶದಲ್ಲಿದ್ದರೂ ಆಯಿತು, ತಾನೇ ಸಾರಿಸಿ ಗುಡಿಸಿ ಚೊಕ್ಕಟವಾಗಿಸಿಕೊಂಡ ಪ್ರದೇಶವಾದರೂ ಆಯಿತು. ಅಂಥ ಪ್ರದೇಶದಲ್ಲಿ ಹೆಚ್ಚು ಎತ್ತರವೂ ಅಲ್ಲದ, ಹೆಚ್ಚು ತಗ್ಗೂ ಅಲ್ಲದ ಆಸನವನ್ನು ಹಾಕಿಕೊಳ್ಳಬೇಕು. ಹೆಚ್ಚು ಎತ್ತರವಾದರೆ ಅಲುಗಾಡುವದು, ಬೀಳುವದು-ಮುಂತಾದ ತೊಂದರೆಗಳಿರಬಹುದು; ತೀರ ತಗ್ಗಾದರೆ ಶೀತವೇ ಮುಂತಾದವುಗಳ ಬಾಧೆಯಿರಬಹುದು. ಆದ್ದರಿಂದ ಎರಡು ವಿಧವಾದ ತಂಟೆಯೂ ಇಲ್ಲದಂತೆ ನೆಲದ ಮೇಲೆ ದರ್ಭೆ, ಅದರ ಮೇಲೆ ಹುಲ್ಲೆಯ ಅಥವಾ ಹುಲಿಯ ಚರ್ಮ, ಅದರ ಮೇಲೆ ಬಟ್ಟೆ-ಹೀಗೆ ಸುಖವಾಗಿ ಬಹಳ ಕಾಲ ಕುಳಿತುಕೊಳ್ಳುವದಕ್ಕೆ ತಕ್ಕಂತೆ ಆಸನಪೀಠವನ್ನು ಮಾಡಿಕೊಳ್ಳಬೇಕು. ಬಟ್ಟೆಯ ಆಸನವನ್ನು ಹಾಕಿಕೊಳ್ಳಬಾರದು; ಅದು ಬಡತನಕ್ಕೆ ಗುರುತು ಎಂದು ಸ್ಮೃತಿಯಲ್ಲಿ ಹೇಳಿರುತ್ತದೆಯಾದರೂ ಆ ನಿಷೇಧವು ಗೃಹಸ್ಥರ ವಿಷಯವು. ಹಿಂದೆಯೇ ಹೇಳಿರುವಂತೆ ಇಲ್ಲಿ ಸಂನ್ಯಾಸಿಗಳನ್ನೇ ಮುಖ್ಯವಾಗಿ ಧ್ಯಾನ ಯೋಗಕ್ಕೆ ಅಧಿಕಾರಿಗಳೆಂದು ಹಿಡಿದಿದೆಯಾದ್ದರಿಂದ ಯಾವ ವಿರೋಧವೂ ಇಲ್ಲ.

ಹಾಗೆ ಆಸನವನ್ನು ಹಾಕಿಕೊಂಡು ಮನಸ್ಸನ್ನು ಏಕಾಗ್ರವಾಗಿ ಮಾಡಿಕೊಳ್ಳಬೇಕು; ಅದಕ್ಕೆ ತಕ್ಕಂತೆ ಮೊದಲೇ ಚಿತ್ತದ ಮತ್ತು ಇಂದ್ರಿಯಗಳ ಕ್ರಿಯೆಗಳನ್ನೂ ಬಿಗಿಹಿಡಿದುಕೊಂಡಿರಬೇಕು. ಹಿಂದಿನ ಶ್ಲೋಕದಲ್ಲಿ ಹೇಳಿರುವದು ಹೊರಗಿನ ಆಸನ; ಮುಂದಿನ ಶ್ಲೋಕದಲ್ಲಿ ಶರೀರವನ್ನು ಹೇಗೆ ಇಟ್ಟುಕೊಳ್ಳಬೇಕೆಂಬುದನ್ನು ಹೇಳಿರುತ್ತದೆ. ಅವೆರಡನ್ನೂ ಮೊದಲೇ ಸರಿಪಡಿಸಿಕೊಂಡವನು ಮಾತ್ರ ಯೋಗವನ್ನು ಅಭ್ಯಾಸ ಮಾಡುವದಕ್ಕೆ ಅಧಿಕಾರಿಯಾಗುತ್ತಾನೆ. ಆದ್ದರಿಂದ ಶರೀರಧಾರಣೆಯ ವಿಷಯವನ್ನೇ ಮೊದಲು ಯೋಚಿಸೋಣ. ಕತ್ತು, ತಲೆ, ಶರೀರದ ಮಿಕ್ಕ ಭಾಗ-ಎಲ್ಲವೂ ಒಂದೇ ಗೀಟಿನಲ್ಲಿರುವಂತೆ ನೆಟ್ಟಗೆ ಕುಳಿತಿರಬೇಕು. ಯೋಗವೆಂಬುದು ಒಂದು ವಿದ್ಯೆ. ಮನಸ್ಸನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವದಕ್ಕೆ ಆಸನ, ಶರೀರಧಾರಣ-ಮುಂತಾದ ಇಂಥಿಂಥ ಅಂಗಗಳೇ ಬೇಕೆಂದು ಶಾಸ್ತ್ರೀಯವಾಗಿ ನಮ್ಮ ಋಷಿಗಳು ಕ್ರಮಪಡಿಸಿರುತ್ತಾರೆ.

ಭೂಲೋಕದ ಜನರಲ್ಲಿ ಒಗ್ಗಟ್ಟು ಹೇಗೆ ಆಗಬೇಕು? ಎಂಬ ವಿಷಯಕ್ಕೆ ಒಂದು ಪ್ರಬಂಧವನ್ನು ಬರೆಯಬೇಕೆಂದು ಅಮೆರಿಕದಲ್ಲಿ ಒಂದು ಸಂಘದವರು ಈಚೆಗೆ ಏರ್ಪಡಿಸಿದ್ದರು. ಇದಕ್ಕೆ ಉತ್ತರವಾಗಿ ಒಂದು ಲೇಖನದಲ್ಲಿ ಒಬ್ಬ ಪಾಶ್ಚಾತ್ಯದೇಶದ ಮಹಿಳೆಯು ಬರೆದಿರುವದರಲ್ಲಿ ಆಟಂಬಾಂಬಿನ ಹಾಗೆ ಸರ್ವ ವಿನಾಶಕವಾದ ಪದಾರ್ಥವನ್ನು ಕಂಡುಹಿಡಿದಿರುವ ವಿಜ್ಞಾನಶಾಸ್ತ್ರವು ಅಂಜಿಕೆಯಿಂದ ಎಲ್ಲರನ್ನೂ ಒಗ್ಗೂಡಿಸುವ ಸಂಭವವಿದೆ; ಏಕೆಂದರೆ ಒಬ್ಬರನ್ನೊಬ್ಬರು ಹಗೆಮಾಡುತ್ತಿದ್ದರೆ ನಾವು ಎಂದಿಗೂ ಬದುಕಲಾರೆವು-ಎಂದು ಮನುಷ್ಯರು ಈಗ ತಿಳಿದುಕೊಳ್ಳಲೇ ಬೇಕಾಗಿದೆ-ಎಂಬ ಅಭಿಪ್ರಾಯವನ್ನು ಸೂಚಿಸಿರುತ್ತಾರೆ. ಅದು ನಿಜವಾಗುವದೋ ಸುಳ್ಳಾಗುವದೋ ಭವಿಷ್ಯಕಾಲದಲ್ಲಿ ನೋಡತಕ್ಕದ್ದಾಗಿದೆ. ಅದು ಹೇಗೇ ಆಗಲಿ, ಮನಸ್ಸನ್ನು ಸ್ವಾಧೀನಕ್ಕೆ ತಂದುಕೊಳ್ಳುವ, ರಾಗದ್ವೇಷಾದಿಗಳು ಸ್ವಲ್ಪವೂ ಇಲ್ಲದಂತೆ ಮಾಡಿಕೊಳ್ಳಬಹುದಾದ, ಯೋಗವಿದ್ಯೆಯನ್ನು ನಮ್ಮ ಋಷಿಗಳೇನೋ ಕಂಡು ಹಿಡಿದೇ ಇರುತ್ತಾರೆ. ಇದರಲ್ಲಿ ಆಟಂಬಾಂಬಿನಂಥ ರಹಸ್ಯವೇನೂ ಇರುವದಿಲ್ಲ. ಇದನ್ನು ಎಲ್ಲರೂ ಪರೀಕ್ಷೆಮಾಡಿ ನೋಡಬಹುದು. ಏಕಾಂತದಲ್ಲಿ ಕುಳಿತುಕೊಳ್ಳಬೇಕು, ಹೊರಗಿನ ಆಸನವು ಸುಖವಾಗಿರುವಂತೆ ಮಾಡಿಕೊಳ್ಳಬೇಕು, ಶರೀರವನ್ನು ನೆಟ್ಟಗೆ ಇಟ್ಟುಕೊಳ್ಳಬೇಕು. ಆ ದಿಕ್ಕೂ ಈ ದಿಕ್ಕೂ ನೋಡಬಾರದು, ದೃಷ್ಟಿಯನ್ನು ಮೂಗಿನ ತುದಿಯನ್ನು ನೋಡುವವನಂತೆ ಒಕ್ಕೂಡಿಸಿ ಕೆಳಕ್ಕಿಳಿಸಬೇಕು. ಹೀಗಾದರೆ ಮನಸ್ಸು ಏಕಾಗ್ರತೆಯನ್ನು ಹೊಂದುವದು-ಎಂದು ಬಲ್ಲವರು ಹೇಳುತ್ತಾರೆ.

ಶರೀರದ ಸ್ಥಿತಿಗೂ ಮನಸ್ಸಿನ ಏಕಾಗ್ರತೆಗೂ ಸಂಬಂಧವೇನು?-ಎಂದು ಕೇಳ ಬಹುದು. ಬಹಳ ಹೊತ್ತು ಒಂದೇ ಆಸನದಲ್ಲಿ ಕುಳಿತುಕೊಂಡಾಗ ಇರುವ ನಮ್ಮ ಮನಃಸ್ಥಿತಿಗೂ ಓಡಾಡುವದು, ಕೆಲಸಮಾಡುವದು, ಅಥವಾ ಕೂತಿದ್ದರೂ ಕೈಕಾಲು ಮುಂತಾದ ಅವಯವಗಳನ್ನು ಅತ್ತಿತ್ತ ಹರಿದಾಡಿಸುತ್ತಿರುವದು-ಹೀಗಿರುವಾಗ ಇರುವ ನಮ್ಮ ಮನಃಸ್ಥಿತಿಗೂ ಹೆಚ್ಚುಕಡಿಮೆಯನ್ನು ಅನುಭವದಿಂದಲೇ ಅರಿತುಕೊಳ್ಳಬೇಕು. ನಮ್ಮ ಶರೀರವು ಅತ್ತಿತ್ತ ಒಲಿದಾಡುವಾಗ ಮನಸ್ಸೂ ಅಲೆದಾಡುತ್ತಿರುತ್ತದೆ. ಹೀಗೆಯೇ ನಮ್ಮ ಕಣ್ಣಿನ ದೃಷ್ಟಿಯನ್ನು ಜಿಂಕೆಮರಿಯಂತೆ ಚಾಪಲ್ಯದಿಂದ ಅತ್ತಿತ್ತ ಹರಿದಾಡಿಸುತ್ತಿರುವಾಗ ಮನಸ್ಸೂ ಚಂಚಲವಾಗುತ್ತದೆ. ದೃಷ್ಟಿಯನ್ನು ಒಂದು ಕಡೆಗೆ ಇಳಿಸುತ್ತಲೂ ಮಿಕ್ಕ ಇಂದ್ರಿಯಗಳ ಚಾಪಲ್ಯವೂ ಕಡಿಮೆಯಾಗಿ ಮನಸ್ಸಿನ ಚಾಂಚಲ್ಯವೂ ಕಡಿಮೆಯಾಗುತ್ತದೆ. ಮನಸ್ಸು ಸತ್ತ್ವಗುಣ, ರಜೋಗುಣ, ತಮೋಗುಣ-ಇವುಗಳಲ್ಲಿ ಯಾವದಾದರೊಂದು ಪ್ರಬಲವಾದಂತೆ ಬೇರೆಬೇರೆಯ ಸ್ಥಿತಿಯನ್ನು ಹೊಂದುತ್ತದೆ. ನಮಗೆ ಯಾವ ಗುಣವು ಬೇಕು ಎಂಬುದನ್ನು ಆರಿಸಿಕೊಂಡು ಅದಕ್ಕೆ ತಕ್ಕಂತೆ

ಹೊರಗಿನ ಸಂನಿವೇಶವನ್ನೂ ಬದಲಾಯಿಸಿಕೊಳ್ಳಬೇಕಾಗುತ್ತದೆ. ಶರೀರವು ಮುಂದಕ್ಕೆ ಚಾಚಿಕೊಂಡು ಇದ್ದರೆ, ಅಥವಾ ಅಲುಗಾಡುತ್ತಿದ್ದರೆ, ನಮ್ಮ ಹೊರಗೆ ಹೆಚ್ಚಿನ ಬೆಳಕು ಇದ್ದರೆ, ಆಗ ಸ್ವಭಾವದಿಂದಲೇ ರಜೋಗುಣವು ಹೆಚ್ಚಿಕೊಳ್ಳುತ್ತದೆ; ಹೀಗೆಯೇ ಹೊರಗೆ ಕತ್ತಲೆಯಿದ್ದು, ನಾವೂ ಕಣ್ಣುಗಳನ್ನು ಮುಚ್ಚಿಕೊಂಡು ಒಂದು ಗೋಡೆಯನ್ನು ಒರಗಿಕೊಂಡರೆ, ಅಥವಾ ಮಲಗಿಕೊಂಡರೆ, ಸಹಜವಾಗಿಯೇ ತಮೋಗುಣವು ಹೆಚ್ಚಿಕೊಂಡು ನಿದ್ರಾದಿಗಳು ಬಂದುಬಿಡುತ್ತವೆ. ಚಟುವಟಿಕೆಯು ಬೇಕಾದವರು ಅನುಸರಿಸುವ ಕ್ರಮವನ್ನು ವಿಶ್ರಾಂತಿಯು ಬೇಕಾದವರು ಅನುಸರಿಸುವದಕ್ಕೆ ಆಗುವದಿಲ್ಲ. ಮನಸ್ಸಿಗೆ ಜ್ಞಾನದ ಪ್ರಕಾಶವು ಬೇಕಾಗಿರುವವರು ರಜಸ್ತಮೋಗುಣಗಳೆರಡನ್ನೂ ತಪ್ಪಿಸಿಕೊಂಡು ಮನಸ್ಸನ್ನು ಇಷ್ಟವಸ್ತುವಿನಲ್ಲಿ ಏಕಾಗ್ರತೆಯಿಂದ ಇರಿಸಿಕೊಳ್ಳಬೇಕಾಗುತ್ತದೆ. ಪ್ರಕೃತದಲ್ಲಿ ಧ್ಯಾನಯೋಗಿಗೆ ಆತ್ಮಜ್ಞಾನವು ಬೇಕಾಗಿರುವದರಿಂದ ಅವನು ಶರೀರ, ಇಂದ್ರಿಯಗಳು, ಮನಸ್ಸು-ಇವನ್ನು ರಜಸ್ತಮೋಗುಣಗಳಿಂದ ಬಿಡಿಸಿಕೊಂಡು ಸತ್ತ್ವಗುಣ ವನ್ನಲಂಬಿಸಿ ಆತ್ಮನಲ್ಲಿಯೇ ಏಕಾಗ್ರವಾಗಿ ಮಾಡಿಕೊಳ್ಳಬೇಕಾಗಿರುತ್ತದೆ.

ಇಷ್ಟೊಂದು ಶ್ರಮಪಟ್ಟು ಮನಸ್ಸನ್ನು ಒಳಕ್ಕೆ ತಿರುಗಿಸಿಕೊಂಡು ಏಕಾಗ್ರತೆ ಗೊಳಿಸುವದರಿಂದ ಆಗಬೇಕಾದ ಪ್ರಯೋಜನವಾದರೂ ಏನು?- ಎಂದು ಕೇಳಬಹುದು. ಅದಕ್ಕೆ ಉತ್ತರವನ್ನು ಆಗಲೆ ಸಂಗ್ರಹವಾಗಿ ಹೇಳಿದ್ದೇ ಆಗಿದೆ. ಮನಸ್ಸಿನ ಶುದ್ಧಿಯುಂಟಾಗಿ, ಸಾತ್ತ್ವಿಕತನದ ಮೆಟ್ಟಲಿಗೆ ಏರಿ, ಆತ್ಮಸ್ವರೂಪವನ್ನು ಅರಿತುಕೊಳ್ಳುವದೇ ಪ್ರಯೋಜವು. ಈಗಿನ ನಾಗರೀಕರೆಂದು ಹೆಸರಾದ ಕೆಲವು ಜನಾಂಗಗಳಿಗೆ ಯುದ್ಧವೇ ಮುಖ್ಯ ಉದ್ದೇಶವಾಗಿರುತ್ತದೆ. ನಿಜವಾಗಿ ಯುದ್ಧವನ್ನು ಮಾಡಲಿ, ಬಿಡಲಿ, ಯುದ್ಧಕ್ಕೆ ಸಜ್ಜಾದ ಬಲವಾದ ದೊಡ್ಡ ಸೈನ್ಯವನ್ನು ಸಜ್ಜು ಗೊಳಿಸಿಕೊಂಡ ಜನಾಂಗಕ್ಕಲ್ಲದೆ ಮತ್ತೆ ಯಾರಿಗೂ ಈ ಕಾಲಕ್ಕೆ ಉಳಿಬಾಳಿಲ್ಲ, ನೆಮ್ಮದಿಯಿಲ್ಲ, ಸುಖವಿಲ್ಲ ಎಂದು ಅವರ ಭಾವನೆಯಾಗಿಬಿಟ್ಟಿರುತ್ತದೆ. ಅವರ ದೃಷ್ಟಿಯಿಂದ ನೋಡಿದರೆ ಮನುಷ್ಯನಿಗೆ ರಜೋಗುಣವೇ ಬೇಕಾಗಿರುತ್ತದೆ. ಆದ್ದರಿಂದ ಆಲಸ್ಯದ ಮೂಲವಾದ ತಮೋಗುಣವನ್ನೂ ಎಲ್ಲರನ್ನೂ ಪ್ರೀತಿಸುವದಕ್ಕೆ ಹೊರಡುವ ಹೆಂಗರುಳಿನ ಸತ್ತ್ವಗುಣವನ್ನೂ ಹಿಮ್ಮೆಟ್ಟಿಸಿ ರಜೋಗುಣವನ್ನು ಬೆಳೆಯಿಸಿಕೊಳ್ಳುವದೇ ಅವರಿಗೆ ಶ್ರೇಯಸ್ಕರವಾಗಿ ತೋರುತ್ತದೆ. ಈಗಿನ ನಾಗರೀಕತೆಯಲ್ಲಿ ಸತ್ತ್ವಗುಣವು ಕೂಡ ಹೇಡಿತನವೆಂದೇ ಕಾಣಬರುತ್ತದೆ ಎಂಬುದೊಂದು ನಾವು ಲಕ್ಷ್ಯವಿಡಬೇಕಾದ ವಿಷಯವು. ಇದು ಹೇಗಾದರೂ ಇರಲಿ. ಭರತಖಂಡದವರಾದ ನಾವು ಸತ್ತ್ವಗುಣಕ್ಕೇ ಸರ್ವೋತ್ತಮಸ್ಥಾನವನ್ನು ಕೊಡುವ ಸಂಸ್ಕೃತಿಯನ್ನು ಅವಲಂಬಿಸಿರುತ್ತೇವೆ. ರಜೋ ಗುಣಕ್ಕೆ ನಮ್ಮಲ್ಲಿ ಯಾವ ಬೆಲೆಯೂ ಇಲ್ಲವೆಂದು ಅಭಿಪ್ರಾಯವಲ್ಲ; ಸತ್ತ್ವಗುಣಕ್ಕೆ

ಅಡಿಯಾಳಾಗಿ ಅದರ ಅವತಾರಕ್ಕೂ ಅದರ ರಕ್ಷಣೆಗೂ ಕಾರಣವಾಗಿರುವಷ್ಟು ಮಟ್ಟಿಗೆ ರಜೋಗುಣಕ್ಕೂ ನಮ್ಮಲ್ಲಿ ಪೂಜ್ಯತೆ ಇದ್ದೇ ಇದೆ. ಇದೇ ಕ್ಷಾತ್ರತೇಜಸ್ಸು ಎಂಬ ಹೆಸರಿನಿಂದ ನಮ್ಮ ಇತಿಹಾಸದಲ್ಲಿ ಪ್ರಸಿದ್ಧವಾಗಿರತಕ್ಕದ್ದು. ಕರ್ಮಯೋಗ ಪ್ರಕರಣದಲ್ಲಿ ನಾವು ಹೇಳಿರುವ ಕರ್ಮವುಕೂಡ ರಜೋಗುಣವನ್ನೇ ಪ್ರಧಾನ ವಾಗಿಟ್ಟುಕೊಂಡಿದೆ. ಆದರೆ ಸತ್ತ್ವಗುಣಕ್ಕೆ ಅಲ್ಲಿಯೂ ಹೆಚ್ಚಿನ ಸ್ಥಾನವಿದೆ. ಯೋಗಕ್ಕೆ ಚಿತ್ತಶುದ್ಧಿಯೇ ಮುಖ್ಯ ಗುರಿ ಎಂದು ಆಗಲೆ ನಾವು ಹೇಳಿರುತ್ತೇವಷ್ಟೆ. ಚಿತ್ತದಲ್ಲಿ 'ಮಂಕು' ಎಂಬ ದೋಷವನ್ನು ಕಳೆದು ಶುದ್ಧಿಯನ್ನುಂಟುಮಾಡುವದಕ್ಕೆ ರಜೋಗುಣವು ಬೇಕು. ಆದರೆ ಮನಸ್ಸಿನ ಹರಿದಾಟವೆಂಬ ದೋಷವನ್ನು ತೆಗೆದುಹಾಕುವದಕ್ಕೆ ರಜೋಗುಣವು ಬೇಕಾಗುವದಿಲ್ಲ; ಅದಕ್ಕೆ ಸತ್ತ್ವಗುಣವೇ ಬೇಕು. ಕರ್ಮಯೋಗಿಗೆ 'ಕರ್ಮ'ವನ್ನೂ ಧ್ಯಾನಯೋಗಿಗೆ 'ಶಮ'ವನ್ನೂ ಸಾಧನವೆಂದು ಹೇಳಿದ್ದಕ್ಕೆ ಇದೇ ಕಾರಣ.

ಇರಲಿ, ಈಗ ಧ್ಯಾನಯೋಗದ ಕ್ರಮವನ್ನು ಮುಂದಿನ ಶ್ಲೋಕದಲ್ಲಿ ಹೇಗೆ ಹೇಳಿದೆ ಎಂಬುದನ್ನು ನೋಡೋಣ:

**ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥** (೬-೧೪)

ಮನಸ್ಸಿನಲ್ಲಿ ಹೆಚ್ಚಿನ ಶಾಂತಿಯನ್ನು ತಂದುಕೊಳ್ಳಬೇಕು, ಯಾವ ಅಂಜಿಕೆಯನ್ನೂ ಇಟ್ಟುಕೊಳ್ಳಬಾರದು. ಬ್ರಹ್ಮಚಾರಿವ್ರತದಲ್ಲಿರಬೇಕು ಮನಸ್ಸನ್ನು ಬಿಗಿಹಿಡಿದುಕೊಂಡು ಭಗವಚ್ಚಿತ್ತನಾಗಿ ಭಗವತ್ಪರನಾಗಿರಬೇಕು. ಹೀಗೆ ಇರುವದೇ ಯೋಗಾನುಷ್ಠಾನವು. ಮನಸ್ಸನ್ನು ಶಾಂತವಾಗಿಟ್ಟುಕೊಳ್ಳುವದರಿಂದಲೇ ಒಂದು ಬಗೆಯ ಆನಂದವಾಗುತ್ತದೆ; ಅದೇ ಒಂದು ಬಗೆಯಿಂದ ಮನಸ್ಸನ್ನು ಜಯಿಸಿದಂತೆ. ತನ್ನ ಮನಸ್ಸನ್ನು ಗೆದ್ದವನು ಎಲ್ಲವನ್ನೂ ಗೆದ್ದಂತೆ. ಮನಸ್ಸಿನಲ್ಲಿ ಯಾರಿಗೆ ಶಾಂತಿಯು ಬಂದಿರುವದೋ ಅವರ ಹೊರಗೆಲ್ಲ ಶಾಂತಿಯಿರುತ್ತದೆ. ಯಾರಿಗೆ ಹೊರಗೆ ಏತರಿಂದಲೂ ಅಂಜಿಕೆಯಿರು ವದಿಲ್ಲವೋ ಅವರಿಂದ ಹೊರಗಿನವರಿಗೂ ಅಂಜಿಕೆಯಿರುವದಿಲ್ಲ. ನಮ್ಮ ಹೊರಗೆ ಹೇಗೆ ಇರಬೇಕೆಂದು ನಾವು ಬಯಸುವೆವೋ ನಮ್ಮ ಒಳಗೂ ಹಾಗೇ ಆಗಬೇಕು. ಋಷಿಗಳ ಆಶ್ರಮದಲ್ಲಿ ಎಲ್ಲೆಲ್ಲಿಯೂ ಪ್ರಶಾಂತವಾದ ವಾತಾವರಣವಿರುತ್ತಿತ್ತೆಂದೂ ಹುಲಿ, ಜಿಂಕೆ ಮುಂತಾದ ಪ್ರಾಣಿಗಳು ಕೂಡ ಪರಸ್ಪರಮೈತ್ರಿಯಿಂದ ವರ್ತಿಸುತ್ತಿದ್ದ ವೆಂದೂ ಪುರಾಣಾದಿಗಳಲ್ಲಿ ವರ್ಣಿಸಿರುವದಕ್ಕೆ ಈ ತತ್ತ್ವವೇ ಆಧಾರ. ಯೋಗಿಯು ಶಾಂತನಾಗಿ ನಿರ್ಭಯನಾಗಿ ಇರಬೇಕಲ್ಲದೆ ಬ್ರಹ್ಮಚಾರಿವ್ರತದಲ್ಲಿರಬೇಕು.

ಬ್ರಹ್ಮಚರ್ಯವೆಂದು ಇಲ್ಲಿ ಹೇಳಿರುವದು ಸ್ಥೂಲವಾದ ಸ್ತ್ರೀಸಮಾಚಾರವಿಲ್ಲದಿರುವಿಕೆಯಲ್ಲ; ಏಕೆಂದರೆ ಸಂನ್ಯಾಸಿಗೆ ಅದು ಸಿದ್ಧವಾಗಿಯೇ ಇರುತ್ತದೆ. ಗುರುಶುಶ್ರೂಷೆ, ಭಿಕ್ಷಾಚರ್ಯ-ಮುಂತಾದ ಬಾಹ್ಯಧರ್ಮಗಳೇ ಅಲ್ಲದೆ ಅವನಿಗೆ ವಿಷಯಸಂಸರ್ಗವು ದೂರವಾಗಿರಬೇಕು. ಮನಸ್ಸಿನಲ್ಲಿ ಕೂಡ ವಿಷಯಗಳನ್ನು ರಾಗದ್ವೇಷಗಳಿಂದ ನೋಡಬಾರದು. ಅದೇ ಯೋಗಿಯ ಬ್ರಹ್ಮಚರ್ಯವು. ಕಾಮಯುತವಾಗಿರುವದೇ ಮನಸ್ಸಿಗೆ ಅನಾರೋಗ್ಯವು; ಕಾಮರಹಿತವಾಗಿರುವದೇ ಆರೋಗ್ಯವು.

ಇಷ್ಟು ವಿಶೇಷಣಗಳ ಜೊತೆಗೆ 'ಮಚ್ಚಿತ್ತ', 'ಮತ್ಪರ'- ಎಂಬ ಎರಡು ವಿಶೇಷಣಗಳನ್ನು ಹಾಕಿದೆ. ಧ್ಯಾನಯೋಗಿಗೆ ಅವು ಬಹುಮುಖ್ಯವಾಗಿರುತ್ತವೆ. ಚಿತ್ತವೆಂದರೆ ಏನು? ಅಂತಃಕರಣಕ್ಕೆ ಗಾಢನಿದ್ರೆಯಲ್ಲಿ ಒಳಗುಹೊರಗುಗಳ ಅರಿವಿರುವದಿಲ್ಲ; ನಾನು-ಮತ್ತೊಬ್ಬರು- ಎಂಬ ಅರಿವೂ ಇರುವದಿಲ್ಲ. ಆದರೆ ಎಚ್ಚರಕನಸುಗಳಲ್ಲಿ ಈ ಎರಡು ವಿಧವಾದ ಅರಿವೂ ಇರುತ್ತದೆ. ಈ ಸಾಮಾನ್ಯವಾದ ಬೇರೆಬೇರೆಯ ಅರಿವಿಗೆ ಚಿತ್ತವೆಂದು ಹೆಸರು. ಚಿತ್ತಕ್ಕೆ ಸಾಮಾನ್ಯವಾದ ಅರಿವಲ್ಲದೆ, ವಿಶೇಷವಾದ ಅರಿವು ಎಂದರೆ 'ಇಂಥಿಂಥದ್ದು ಇದು' ಎಂಬ ಅರಿವುಗಳೂ ಇರುತ್ತವೆ. ಇವೇ ಚಿತ್ತವೃತ್ತಿಗಳು. ನಮ್ಮೊಳಗೆ ನಾವು ಚಿತ್ತವನ್ನು ನೋಡುತ್ತಾ ಸುಮ್ಮನೆ ಕುಳಿತುಕೊಂಡರೆ ಚಿತ್ತವೃತ್ತಿಗಳು ಎಷ್ಟು ಬಗೆಯಾಗಿರುತ್ತವೆ, ಎಷ್ಟು ವೇಗದಿಂದ ಎಷ್ಟು ಬೇರೆಬೇರೆಯ ಕಡೆಗೆ ಹರಿಯುತ್ತಿರುತ್ತವೆ-ಎಂಬುದು ಗೊತ್ತಾಗುತ್ತದೆ. ನಿಮ್ಮ ಚಿತ್ತವು ಎತರಲ್ಲಿದೆ ಎಂಬುದನ್ನು ತಿಳಿಯಬೇಕಾದರೆ ವಿಷಯವನ್ನು ಬಿಟ್ಟು ಚಿತ್ತವೃತ್ತಿಗಳನ್ನೇ ನೋಡುತ್ತಿರಬೇಕು. ಧ್ಯಾನಯೋಗಿಯಾದವನು ವಿಷಯದ ವೃತ್ತಿಗಳೆಲ್ಲವನ್ನೂ ಸೆಳೆದುಕೊಂಡು ಭಗವಂತನಲ್ಲಿಯೇ ಚಿತ್ತವಿಟ್ಟಿರಬೇಕು. ಇದನ್ನೇ 'ಮಚ್ಚಿತ್ತ' ಎಂಬ ವಿಶೇಷಣವು ತಿಳಿಸುತ್ತದೆ. ನಮ್ಮ ಚಿತ್ತವು ಯಾವ ವಿಷಯದಲ್ಲಿ ನೆಟ್ಟಿರುವದೋ ಅದೇ ನಮಗೆ ಹೆಚ್ಚಿನ ವಸ್ತುವೆಂದು ಹೇಳುವದಕ್ಕೆ ಬರುವದಿಲ್ಲ. ಉದಾಹರಣೆಗೆ ಒಬ್ಬನು ಹಿರಣ್ಯಚಿತ್ತನಾಗಿರುತ್ತಾನೆ, ಅವನ ಚಿತ್ತದಲ್ಲಿ ಆಗಾಗ್ಗೆ ಚಿನ್ನದ ವೃತ್ತಿಯೇ ಏಳುತ್ತಿರುತ್ತದೆ. ಆದರೆ ಅವನು ಚಿನ್ನವೇ ಎಲ್ಲಕ್ಕಿಂತಲೂ ಹೆಚ್ಚಿನ ಪದಾರ್ಥವೆಂದು ತಿಳಿದಿರಬೇಕಾದದ್ದಿಲ್ಲ. ಏಕೆಂದರೆ ಒಬ್ಬ ದೊರೆಯನ್ನೋ ದೇವರನ್ನೋ ಸರ್ವೋತ್ತಮನೆಂದು ಭಾವಿಸಿ ಅವನನ್ನು ಸೇವಿಸುತ್ತಿರಬಹುದು. ಆದರೆ ಧ್ಯಾನಯೋಗಿಯಾದವನು ಭಗವಂತನೇ ಎಲ್ಲಕ್ಕೂ ಹೆಚ್ಚಿನವನು ಎಂದು ತಾತ್ಪರ್ಯದಿಂದ ಭಜಿಸುತ್ತಿರಬೇಕು. ಇದನ್ನು 'ಮತ್ಪರ' ಎಂಬ ವಿಶೇಷಣದಿಂದ ತಿಳಿಸಿರುತ್ತದೆ.

**ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ ।**

**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥** (೬--೧೫)

"ಯಾವನು ಹೀಗೆ ಮನಸ್ಸನ್ನು ಬಿಗಿಹಿಡಿದುಕೊಂಡು ಯಾವಾಗಲೂ ಯೋಗವನ್ನು ಮಾಡುತ್ತಿರುವನೋ ಅವನಿಗೆ ಮತ್ಸಂಸ್ಥವಾದ ನಿರ್ವಾಣದಲ್ಲಿ ಕೊನೆಗಾಣುವ ಶಾಂತಿಯು ದೊರಕುವದು." ಯೋಗಿಯು ಮನಸ್ಸನ್ನು ಬಿಗಿಹಿಡಿದುಕೊಂಡೇ ಇರುತ್ತಾನೆ; ಯಾವಾಗಲೂ ಭಗವಂತನನ್ನೇ ಧ್ಯಾನಿಸುತ್ತಿರುತ್ತಾನೆ. ಅಂಥವನಿಗೆ ಶಾಂತಿಯೂ ನಿತ್ಯಾನಂದರೂಪವಾದ ಮೋಕ್ಷವೂ ಸಿಕ್ಕುವವು. ಇವೆರಡೂ ಭಗವಂತನ ಅಧೀನವಾಗಿರುತ್ತವೆ; ಆದ್ದರಿಂದಲೇ ಯೋಗಿಯು ಭಗವಚ್ಚಿತ್ತನಾಗಿ ಭಗವತ್ಪರನಾಗಿ ಧ್ಯಾನಮಾಡುತ್ತಿರುತ್ತಾನೆ.

ಇಂಥ ಧ್ಯಾನಯೋಗವು ಎಲ್ಲರಿಗೂ ದಕ್ಕಲಾರದು. ಎಲ್ಲಾ ವಿಷಯಚಿಂತೆಗಳನ್ನೂ ಬಿಟ್ಟು ಯಾವಾಗಲೂ ಭಗವದ್ಧ್ಯಾನದಲ್ಲಿಯೇ ನಿರತರಾಗಿರುವದು ನಮ್ಮಂಥವರಿಗೆ ಹೇಗೆ ಸಾಧ್ಯವಾದೀತು? ಸದಾಶಿವಬ್ರಹ್ಮೇಂದ್ರರು ಗುರುಸೇವಾನಿರತರಾಗಿದ್ದಾಗ ಗುರುಗಳ ಸಮೀಪಕ್ಕೆ ವಾದಕ್ಕೆ ಬಂದವರನ್ನೆಲ್ಲ ಜಯಿಸುತ್ತಿದ್ದರಂತೆ. ಇದನ್ನು ಕಂಡು "ಅಪ್ಪ, ಸದಾಶಿವ, ನೀನು ಮೌನದಿಂದ ಇರುವದನ್ನು ಎಂದಿಗೆ ಕಲಿಯುತ್ತೀಯೆ?" ಎಂದು ಗುರುಗಳು ಕೇಳಿದ್ದಕ್ಕೆ "ಇಂದಿನಿಂದ ಮೌನದಿಂದಲೇ ಕಾಲಯಾಪನೆಯನ್ನು ಮಾಡುವೆನು" ಎಂದು ಅವರು ಬದುಕಿರುವವರೆಗೂ ಪರಮೇಶ್ವರಧ್ಯಾನದಲ್ಲಿಯೇ ನಿರತರಾಗಿದ್ದುಬಿಟ್ಟರಂತೆ! ಅಂಥ ನಿಶ್ಚಲಧ್ಯಾನವು ನಿತ್ಯವಾಗಿ ಲಭಿಸುವದು ಸಾಮಾನ್ಯಪುಣ್ಯದ ಫಲವೆ? ನಮ್ಮಂಥವರು ಧ್ಯಾನಯೋಗವನ್ನು ಕುರಿತು ಮಾಡುವ ವಿಚಾರದಿಂದ ತಿಳಿದುಕೊಳ್ಳಬೇಕಾದದ್ದೇನು?- ಎಂದರೆ ಮನಸ್ಸನ್ನು ಬಿಗಿಹಿಡಿಯುವದು ಸುಖಶಾಂತಿಗಳಿಗಾಗಿ; ಆ ಸುಖಶಾಂತಿಗಳು ಭಗವಂತನ ಅಧೀನವು; ಆದ್ದರಿಂದ ಭಗವಂತನನ್ನು ಆದಷ್ಟು ಮಟ್ಟಿಗೂ ನಾವು ಚಿಂತಿಸುತ್ತಿರಬೇಕು. ದೊಡ್ಡ ದೊಡ್ಡ ಯೋಗಿಗಳು ನಿತ್ಯವೂ ಧ್ಯಾನಮಾಡಿದರೆ ನಾವುಗಳು ಒಂದು ದಿನದಲ್ಲಿ ಒಂದು ಘಂಟೆ, ಅರ್ಧಘಂಟೆಯ ಹೊತ್ತಾದರೂ ಭಗವಂತನ ಚಿಂತನೆಗೆ ಮನಸ್ಸು ಕೊಡಬೇಕು. ಕರ್ಮಯೋಗದಿಂದಲಾದರೂ ಭಗವಂತನನ್ನು ಮನಸ್ಸಿಗೆ ತಂದುಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಫಲಾಪೇಕ್ಷೆಯಿಂದ ಚಿಂತಿಸಿದರೂ ಸರಿ, ಭಗವಂತನ ಚಿಂತೆಯನ್ನು ಮನಸ್ಸಿಗೆ ತಂದುಕೊಳ್ಳಬೇಕು. ಕೊನೆಗೆ ಭಗವನ್ನಾಮವನ್ನಾದರೂ ಶ್ರದ್ಧಾಭಕ್ತಿಗಳಿಂದ ಜಪಿಸಬೇಕು, ಕೀರ್ತನಮಾಡಬೇಕು. ಧ್ಯಾನಯೋಗವನ್ನು ದೊಡ್ಡದೊಂದು ಧ್ಯೇಯವೆಂದಾದರೂ ಭಾವಿಸಿ ನಾವಿರುವ ಸ್ಥಿತಿಯಲ್ಲಿಯೇ ಸಾಧ್ಯವಾದಷ್ಟು ಮಟ್ಟಿಗೆ ಭಗವಂತನ ಚಿಂತೆಯನ್ನು ಮನಸ್ಸಿಗೆ ಹತ್ತಿಸಿಕೊಳ್ಳಬೇಕು. ಹಾಗಾದರೆ ಕಾಲಕ್ರಮದಲ್ಲಿ ಸುಖಶಾಂತಿಗಳು ನಮಗೆ ದೊರಕುವದಕ್ಕೆ ದಾರಿಯಾಗುವದು.

# ೪೨. ಯೋಗಮಾಡುವವನ ಆಚರಣೆ ಹೇಗಿರಬೇಕು? ೬-(೧೬-೧೮)

(೧೧.೫.೪೭)

ಯೋಗವಿಚಾರದ ಪ್ರಕರಣವನ್ನು ಇದುವರೆಗೆ ಆದಷ್ಟು ಮಟ್ಟಿಗೆ ಸಂಗ್ರಹವಾಗಿ ಮತ್ತೆ ಮನದಂದುಕೊಳ್ಳುವದರಿಂದ ಲಾಭವುಂಟು. ಐದನೆಯ ಅಧ್ಯಾಯದ ಕೊನೆಯಲ್ಲಿ ಕಾಮಕ್ರೋಧಗಳನ್ನು ಬಿಟ್ಟು ಯತಚಿತ್ತರಾಗಿರುವ ಯತಿಗಳಿಗೆ ಬ್ರಹ್ಮನಿರ್ವಾಣವು ಎಲ್ಲೆಲ್ಲಿಯೂ ಇರುತ್ತದೆ ಎಂದು ಹೇಳಿತ್ತು. ಆ ಅಧ್ಯಾಯದಲ್ಲಿ ಜ್ಞಾನಯೋಗಕ್ಕೆ ಅಂತರಂಗಸಾಧನವಾದ ಧ್ಯಾನಯೋಗಕ್ಕೆ ಬೀಜವಾಗಿ ಒಂದೆರಡು ಶ್ಲೋಕಗಳನ್ನು ಹೇಳಿದಬಳಿಕ ಆರನೆಯ ಅಧ್ಯಾಯದಲ್ಲಿ ಧ್ಯಾನಯೋಗವನ್ನು ಪ್ರಾರಂಭಿಸಿರುತ್ತದೆ.

ಯೋಗದರ್ಶನದಲ್ಲಿ ಹೇಳಿರುವ ಚಿತ್ತವೃತ್ತಿನಿರೋಧರೂಪವಾದ ಯೋಗಕ್ಕೂ ಇಲ್ಲಿ ಹೇಳಿರುವ ಯೋಗಕ್ಕೂ ಬಹಳ ಹೆಚ್ಚುಕಡಿಮೆ ಇದೆ. ಪಾತಂಜಲಯೋಗದಲ್ಲಿ ಆಸನಪ್ರಾಣಾಯಾಮಾದಿಯಾಗಿ ಅಷ್ಟಾಂಗಗಳಿಂದ ಕೂಡಿದ ಯೋಗವನ್ನು ಹೇಳಿರುತ್ತದೆ. ಯೋಗದಿಂದ ಬಗೆಬಗೆಯ ಸಿದ್ಧಿಗಳು ಉಂಟಾಗುವವೆಂದು ಅಲ್ಲಿ ಹೇಳಿರುತ್ತದೆ; ಪ್ರಕೃತಿಪುರುಷರ ವಿವೇಕವನ್ನು ಮಾಡಿಕೊಂಡು ಆತ್ಮಸ್ವರೂಪದಲ್ಲಿ ನಿಲ್ಲುವದೇ ಮುಖ್ಯವಾದ ಉದ್ದೇಶವೆಂದು ಅಲ್ಲಿ ವರ್ಣಿತವಾಗಿರುತ್ತದೆ. ಆದರೆ ಗೀತೆಯಲ್ಲಿ ಹೇಳಿರುವ ಯೋಗವೇ ಬೇರೆ. ಇಲ್ಲಿ ನಮ್ಮೆಲ್ಲರಿಗೂ ಆತ್ಮನಾಗಿರುವ ಪರಮಾತ್ಮನ ಚಿಂತನೆಯನ್ನು ಹೇಳಿರುತ್ತದೆ. ಚಿತ್ತವೃತ್ತಿಗಳನ್ನು ನಿರೋಧಮಾಡುವದೇನೂ ಇಲ್ಲಿ ಮುಖ್ಯೋದ್ದೇಶವಲ್ಲ; ಪರಮಾತ್ಮದರ್ಶನವೇ ಮುಖ್ಯೋದ್ದೇಶ. ಆ ದರ್ಶನದಿಂದ ಚಿತ್ತವೃತ್ತಿಗಳ ನಿರೋಧವೂ ಆಗುತ್ತದೆ ಎಂಬುದು ಬೇರೆಯ ವಿಷಯ. ವಿಷಯಗಳ ಚಿಂತನೆಯನ್ನು ಬಿಟ್ಟು, ತನ್ನ ನಿಜವಾದ ಆತ್ಮಸ್ವರೂಪವು ಯಾವದೆಂಬುದನ್ನು ಒಳಹೊಕ್ಕು ಪರೀಕ್ಷಿಸುವ ಏಕಾಗ್ರತೆಯ ಚಿಂತೆಯೇ ಇಲ್ಲಿ ಧ್ಯಾನಯೋಗವೆಂಬುದು.

ಈ ಧ್ಯಾನಯೋಗದಲ್ಲಿ ಪಾರಂಗತನಾದವನಿಗೆ ಮುಕ್ತನೆಂದು ಹೆಸರು. ಯೋಗಿಯು ತನ್ನ ಗುರಿಯನ್ನು ಮುಟ್ಟಿದಮೇಲೆ ಅವನಿಗೆ ಉಂಟಾಗುವ ವಿಜ್ಞಾನ, ಇಂದ್ರಿಯಜಯ, ಸರ್ವರಲ್ಲಿಯೂ ಸಮದೃಷ್ಟಿ-ಇವುಗಳನ್ನು ತಿಳಿಸಿದ ಬಳಿಕ ಯೋಗವನ್ನು ಹೇಗೆ ಅಭ್ಯಾಸಮಾಡಬೇಕು ಎಂಬುದನ್ನು ಈ ಆರನೆಯ ಅಧ್ಯಾಯದಲ್ಲಿ ತಿಳಿಸಲಾಗಿದೆ. ಈ ಅಭ್ಯಾಸಕ್ರಮವನ್ನೂ ಅದರಿಂದ ದೊರೆಯುವ ಸುಖಶಾಂತಿಗಳ ವಿಚಾರವನ್ನೂ ಹಿಂದಿನ ಉಪನ್ಯಾಸದಲ್ಲಿ ತಿಳಿಸಿದ್ದಾಗಿದೆ. ಈಗ ಯೋಗಸಾಧನೆಯಲ್ಲಿರುವವನು ಅನುಸರಿಸಬೇಕಾದ ಆಹಾರಾದಿನಿಯಮಗಳನ್ನು ಇಲ್ಲಿ ತಿಳಿಸಲಾಗುತ್ತದೆ.

ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾನ್ತಮನಶ್ನತಃ ।
ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ (೬-೧೬)
ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।
ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ (೬-೧೭)

ವೈದ್ಯನು ರೋಗಿಯ ವಿಷಯದಲ್ಲಿ ಹೊಣೆಗಾರನಾಗಿರುವದರಿಂದ ಇಂಥಿಂಥ ಪಥ್ಯವನ್ನು ಅಂಗೀಕರಿಸಬೇಕು ಎಂದು ಹೇಳುತ್ತಾನೆ. ನಿಷಿದ್ಧವಾದ ಆಹಾರಗಳನ್ನೂ ಆಚಾರಗಳನ್ನೂ ಬಿಡಿಸಿ ಇಂಥಿಂಥ ನಿಯಮಗಳನ್ನು ಅನುಸರಿಸಿ ನಡೆದುಕೊಳ್ಳಬೇಕೆಂದು ಕಟ್ಟುಮಾಡಿಯೇ ಔಷಧಿಯನ್ನು ಕೊಡುತ್ತಾನೆ. ಔಷಧಸೇವನವು ಮುಗಿದ ಬಳಿಕ ಪುಷ್ಟಿಯ ಲೇಹಾದಿಗಳನ್ನು ಕೊಟ್ಟು ಆರೈಕೆಮಾಡಿಸುತ್ತಾನೆ. ಈ ದೃಷ್ಟಾಂತದಲ್ಲಿ ಔಷಧಿಯಿಂದ ರೋಗವು ವಾಸಿಯಾದ ಮೇಲೆ ಸೇವಿಸಬಹುದಾದದ್ದನ್ನು ಮೊದಲೇ ತೆಗೆದುಕೊಂಡರೂ ರೋಗವು ಉಲ್ಬಣವಾಗಿ ಬಿಡುತ್ತದೆ. ಅಲ್ಲವೆ? ಯೋಗವೆಂಬ ದಾರ್ಷ್ಟಾಂತಿಕಕ್ಕೂ ಹೀಗೆಯೇ ಕೆಲವು ನಿಯಮಗಳು ಬೇಕಾಗುತ್ತವೆ. ವಿಷಯಗಳನ್ನು ಮಮತಾದೃಷ್ಟಿಯಿಂದ ನೋಡುವದು-ನಾನು ಒಬ್ಬನಿದ್ದೇನೆ, ಈ ವಿಷಯಗಳೇ ನನಗೆ ಬೇಕು, ಇವು ನನಗೇ ಬೇಕು, ನನಗೆ ಬೇಕೇಬೇಕು, ಎಂದು ಹಠಹಿಡಿಯುವದು-ಅಧ್ಯಾತ್ಮಸಾಧನದೃಷ್ಟಿಯಿಂದ ಮನಸ್ಸಿಗೆ ಅಪಥ್ಯಸೇವನೆ ಎನಿಸುವದು. ಮನಸ್ಸು ಈ ಅಪಥ್ಯಸೇವನೆ ಮಾಡಿಮಾಡಿ ಅದಕ್ಕೆ ಅರೋಚಕವಾಗಿಬಿಟ್ಟಿರುತ್ತದೆ. ಆದರೆ ಅದು ನಮಗೆ ಗೊತ್ತಾಗಿರುವದಿಲ್ಲ. ಯೋಗಿಯಾದವನು ಮೊಟ್ಟಮೊದಲು ಮನಸ್ಸಿನಲ್ಲಿ ಉಂಟಾಗಿರುವ ಅತೃಪ್ತಿರೂಪವಾದ ಅರೋಚಕವನ್ನು ಕಳೆದುಕೊಳ್ಳಬೇಕು. ಅದಕ್ಕಾಗಿ ಪಥ್ಯಸೇವನೆಯನ್ನು ಅಂಗೀಕರಿಸಬೇಕು. ಪಥ್ಯವನ್ನು ಸೇವಿಸುವೆನೆಂದು ಆಹಾರವನ್ನೆಲ್ಲ ಬಿಟ್ಟುಬಿಡುವ ಅವಿವೇಕಿಯಂತೆ ಆವಶ್ಯಕವಿಷಯಗಳನ್ನೂ ಬಿಡುವ ಹುಚ್ಚು ಯೋಚನೆಯನ್ನೂ ಮಾಡಬಾರದು.

ಸ್ಥೂಲವಾದ ಅನ್ನವಿಚಾರವನ್ನೇ ಮೊದಲು ತೆಗೆದುಕೊಂಡರೆ ಯೋಗಿಯಾದವನು ಇಷ್ಟೇ ಪರಿಮಾಣದ ಅನ್ನವನ್ನು ತಿನ್ನಬೇಕೆಂಬ ನಿಯಮವು ಸ್ಮೃತಿಯಲ್ಲಿರುತ್ತದೆ. ಸಂನ್ಯಾಸಿಯಾದವನು ಭಿಕ್ಷಾನ್ನದಿಂದಲೇ ಜೀವಿಸಿರಬೇಕು; ಒಪ್ಪತ್ತೇ ಊಟಮಾಡಬೇಕು. ಭಿಕ್ಷಾನ್ನವನ್ನು ಕೂಡ ಏಳು ಮನೆಗಳಿಗಿಂತ ಹೆಚ್ಚು ಕಡೆಯಲ್ಲಿ ಸ್ವೀಕರಿಸಬಾರದು. ಹಸಿವಡಗುವದಕ್ಕೆ ತನಗೆ ಬೇಕಾಗುವಷ್ಟನ್ನು ಮಾತ್ರ ತಿಂದು ಮಿಕ್ಕದ್ದನ್ನು ಜಲಚರಗಳೇ ಮುಂತಾದ ಪ್ರಾಣಿಗಳಿಗೆ ಕೊಟ್ಟುಬಿಡಬೇಕು-ಎಂಬ ನಿಯಮವಿದೆ. ಹೀಗೆ ಮಾಡಿದರೆ ಪ್ರಾಣಾಯಾಮ, ಧ್ಯಾನ-ಮುಂತಾದವುಗಳಿಗೆ ಎಂಥ ಸೌಕರ್ಯವು ಉಂಟಾಗುವದೆಂಬುದು ಸಾಧಕನಾದವನಿಗೇ ಅನುಭವದಿಂದ ಗೊತ್ತಾಗುತ್ತದೆ. ಇಲ್ಲಿ ಹೇಳಿರುವ

ಆಹಾರವಿಷಯವನ್ನು ಸ್ಥೂಲವಾದ ಅನ್ನಕ್ಕೇ ಅಲ್ಲದೆ ವಸ್ತ್ರವೇ ಮುಂತಾದ ಆವಶ್ಯಕತೆಗಳಿಗೂ ಹೊಂದಿಸಿಕೊಳ್ಳಬೇಕು.

ಸಾಧಕನಾದವನು ತೆಗೆದುಕೊಳ್ಳುವ ಆಹಾರವು ಸಾತ್ತ್ವಿಕವಾಗಿರಬೇಕು. ಸಾತ್ತ್ವಿಕಾಹಾರದ ಲಕ್ಷಣವನ್ನು ಮುಂದೆ ಗೀತೆಯಲ್ಲಿಯೇ ತಿಳಿಸಲಾಗುವದು. ಆಹಾರವು ಹಿತಮಿತವಾಗಿರಬೇಕು, ತುಷ್ಟಿಯನ್ನೂ ಪುಷ್ಟಿಯನ್ನೂ ಕೊಡಬೇಕು-ಎಂಬ ಸಾಮಾನ್ಯನಿಯಮವನ್ನು ಮನಸ್ಸಿನಲ್ಲಿಟ್ಟಿರಬೇಕು. ಕೆಲವು ಆಹಾರಗಳಲ್ಲಿ ಇಂಥ ಗುಣವಿದ್ದರೂ ಅವುಗಳಿಂದ ನಮ್ಮ ಸ್ಥೂಲಶರೀರದ ಮೇಲೆಯೇ ಅಲ್ಲದೆ ಮನಸ್ಸಿನ ಮೇಲೆ ಎಂಥ ಪರಿಣಾಮವಾದೀತೆಂಬುದನ್ನೂ ನಾವು ಮನಸ್ಸಿಗೆ ತಂದುಕೊಳ್ಳ ಬೇಕಾಗುತ್ತದೆ. ಶಾಸ್ತ್ರದಲ್ಲಿ ಭಕ್ಷ್ಯಾಭಕ್ಷ್ಯವಿಚಾರವನ್ನು ವಿಸ್ತಾರವಾಗಿ ಮಾಡಿರುತ್ತದೆ. ಕೆಲಕೆಲವು ಪದಾರ್ಥಗಳು ರಕ್ತವೃದ್ಧಿಗೂ ಬುದ್ಧಿಯು ಚುರುಕಾಗುವದಕ್ಕೂ ಕಾರಣ ವಾಗುತ್ತವೆ-ಎಂದು ಭೌತಿಕವಿಜ್ಞಾನದೃಷ್ಟಿಯಿಂದ ಗೊತ್ತಾಗಿರುವ ಆಹಾರಗಳನ್ನು ಕೂಡ ಶಾಸ್ತ್ರದಲ್ಲಿ 'ಅಭಕ್ಷ್ಯ' ಎಂಬ ಗುಂಪಿಗೆ ಸೇರಿಸಿರುತ್ತದೆ. "ಇಂಥ ಒಂದು ಆಹಾರವನ್ನು ತಿಂದರೆ ಬಲ ಬರುತ್ತದೆ ಎಂಬುದು ಪ್ರಯೋಗದಿಂದ ಸಿದ್ಧವಾಗಿದೆ; ಹೀಗಿರುವಲ್ಲಿ ಅದನ್ನು ಅಭಕ್ಷ್ಯವೆನ್ನಬಹುದೆ? ಎಂಬ ಶಂಕೆಯು ನಮಗೆ ತೋರಿ ಕೊಳ್ಳುವದು ಸ್ವಾಭಾವಿಕವಾಗಿರುತ್ತದೆ. ಆದರೆ ಬಲವು ಬಂದರೆ ಸಾಕೆ? ಬಲವನ್ನು ಹೇಗೆ ಉಪಯೋಗಿಸುವ ಬುದ್ಧಿಯುಂಟಾದೀತೊ, ಎಂಬುದನ್ನು ನಾವು ಯೋಚಿಸ ಬೇಡವೆ? ರಾಮನಿಗೂ ರಾವಣನಿಗೂ ಶೌರ್ಯವೂ ಬಲವೂ ಸಮಾನವಾಗಿದ್ದವು; ಆದರೆ ಆ ಬಲಶೌರ್ಯಗಳನ್ನು ರಾವಣನು ಉಪಯೋಗಿಸಿಕೊಂಡದ್ದು ಹೇಗೆ, ರಾಮನು ಉಪಯೋಗಿಸಿಕೊಂಡದ್ದು ಹೇಗೆ? ಅದರಿಂದ ಅವರಮೇಲೂ ಲೋಕದ ಮೇಲೂ ಎಂಥ ಪರಿಣಾಮವಾಯಿತು? ಅದನ್ನು ಯೋಚಿಸಿನೋಡಿರಿ. ಆಗ ಗೀತೆಯಲ್ಲಿ 'ಕಾಮರಾಗವಿವರ್ಜಿತಂ ಬಲಮ್' ಎಂದು ಹೇಳಿರುವ ವಿಶೇಷಣದ ಸ್ವಾರಸ್ಯವು ಗೊತ್ತಾಗುತ್ತದೆ. ಆದ್ದರಿಂದ ದುಷ್ಪರಿಣಾಮವನ್ನುಂಟುಮಾಡುವ ಆಹಾರವು ಬಲವನ್ನುಂಟುಮಾಡಿದರೂ ನಿಷಿದ್ಧವಾಗಿರಬಹುದು. ಮೆದುಳನ್ನು ವೃದ್ಧಿಮಾಡುವ, ಅಥವಾ ಅದಕ್ಕೆ ಬಲವನ್ನು ಕೊಡುವ ಆಹಾರವಸ್ತು ಇಂಥದ್ದರಲ್ಲಿದೆಯೆಂಬ ಮಾತ್ರದಿಂದ ಅದನ್ನು ಭಕ್ಷ್ಯವೆಂದು ಗಣಿಸಬಾರದು. ಬುದ್ಧಿಯು ವೃದ್ಧಿಯಾದರೂ ತಪ್ಪುಹಾದಿಯಲ್ಲಿ ಉಪಯುಕ್ತವಾಗುವದಕ್ಕೆ ಅವಕಾಶವಿರಬಾರದು; ಅಂಥ ಆಹಾರವನ್ನೇ ಶಾಸ್ತ್ರದಲ್ಲಿ ಒಪ್ಪಿರುತ್ತದೆ. ಆದ್ದರಿಂದ ಶಾಸ್ತ್ರ ನಿಷಿದ್ಧವಲ್ಲದ ಆಹಾರವನ್ನು ಹಿತಮಿತವಾಗಿ ಉಪಯೋಗಿಸುವದು ವ್ಯವಹಾರದಲ್ಲಿಯೂ ಉತ್ತಮವಾದದ್ದು. ಧ್ಯಾನಯೋಗಿಗಂತೂ ಅದು ಅತ್ಯವಶ್ಯವಾಗಿರುತ್ತದೆ.

ಇದರಂತೆ ವಿಹಾರದ ಮತ್ತು ಎಚ್ಚರನಿದ್ರೆಗಳ ವಿಷಯವನ್ನೂ ಅರಿಯಬೇಕು. ಶಾಸ್ತ್ರದಲ್ಲಿ ಹೇಳಿರುವ ಕಾಲ, ಪರಿಮಿತಿ-ಮುಂತಾದವುಗಳನ್ನು ಅನುಸರಿಸಿಯೇ ವ್ಯವಹಾರವನ್ನು ನಾವು ಮಾಡುತ್ತಿರಬೇಕು. ಯಾವಾಗಲೂ ಓಡಾಡುತ್ತಲೇ ಇರುವದು, ಯಾವಾಗಲೂ ಕೆಲಸಮಾಡುತ್ತಲೇ ಇರುವದು, ಯಾವಾಗಲೂ ಪಯಣಮಾಡುತ್ತಲೇ ಇರುವದು-ಇವು ಹೇಗೆ ಯೋಗಕ್ಕೆ ವಿಘ್ನಕಾರಿಗಳೋ ಹಾಗೆಯೇ ಎಂದೆಂದಿಗೂ ಯಾವ ಕೆಲಸವನ್ನೂ ಮಾಡದೆ ಸೋಮಾರಿಯಾಗಿ ಕುಳಿತಿರುವದೂ ಯೋಗಕ್ಕೆ ವಿಘ್ನಕಾರಿಯೇ. ಇದರಂತೆ ಶಾಸ್ತ್ರದಲ್ಲಿ ಹೇಳಿರುವ ಕಾಲದಲ್ಲಿ, ಹೇಳಿರುವಷ್ಟು ಮಿತಿಯಲ್ಲಿ, ಎಚ್ಚರವನ್ನೂ ನಿದ್ರೆಯನ್ನೂ ಅನುಭವಿಸುತ್ತಾ ಇರುವವರಿಗೆ ಮಾತ್ರವೇ ಯೋಗವು ದಕ್ಕೀತೇ ಹೊರತು ಅತಿಯಾಗಿ ಎಚ್ಚತ್ತಿರುವವರಿಗಾಗಲಿ ಅತಿಯಾಗಿ ನಿದ್ರಿಸುತ್ತಿರುವವರಿಗಾಗಲಿ ವಶವಾಗದು.

ಯೋಗದ ಕೊನೆಯ ಹಂತವನ್ನು ಸೇರಿದವನು **ಯುಕ್ತ**ನೆನಿಸಿಕೊಳ್ಳುತ್ತಾನೆ. ಯುಕ್ತನೆಂದರೆ ಸಿದ್ಧನಾದವನು, ಯುಂಜಾನನೆಂದರೆ ಸಾಧಕನಾದ ಯೋಗಿಯು. ಯುಂಜಾನಯೋಗಿಯು ಯೋಗದ ಕೊನೆಯ ಸ್ಥಿತಿಯನ್ನು ಮುಟ್ಟಿ ಯುಕ್ತನಾಗುವದು ಯಾವಾಗ?- ಎಂದರೆ ಚಿತ್ತವು ಸಂಪೂರ್ಣವಾಗಿ ವಶವಾಗಬೇಕು, ವಿಷಯಗಳ ಕಾಮದಿಂದ ಹರಿದಾಡುವದನ್ನು ಬಿಟ್ಟು ಅದು ಸಂಪೂರ್ಣವಾಗಿ ಹಿಂತಿರುಗಿ ಆತ್ಮನಲ್ಲಿಯೇ ನಿಲ್ಲಬೇಕು.

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।**
**ನಿಃಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥** (೬.೧೮)

ಹೀಗೆ ಯಾವಾಗ ಚಿತ್ತವು ಹಿಡಿತಕ್ಕೆ ಬರುವದೋ ಯಾವಾಗ ಆತ್ಮನಲ್ಲಿಯೇ ನಿಲ್ಲುವದೋ ಆಗ ಯುಕ್ತನಾಗುವನು. ಆತ್ಮನಲ್ಲಿಯೇ ನಿಲ್ಲುವದೆಂದರೆ ನೆಲದ ಮೇಲೆ ಕಾಲುಗಳು ನಿಲ್ಲುವಂತೆ ಅಲ್ಲ; ಆತ್ಮಸ್ವರೂಪವನ್ನೇ ಪಡೆದು ನಿಲ್ಲುವದು. ಕಾಮಗಳೆಂದರೆ ವಿಷಯಗಳು; ಕಾಮಗಳಲ್ಲಿ ಯಾವ ಬಯಕೆಯೂ ಇಲ್ಲದೆ ಚಿತ್ತವು ಹಿಂತಿರುಗಬೇಕಾದರೆ ಅವುಗಳಿಗಿಂತ ಹೆಚ್ಚಿನ ಮಧುರವಸ್ತುವೊಂದು ಅದಕ್ಕೆ ಸಿಕ್ಕಬೇಕು. ಚಿತ್ತವು ತನಗೆ ಒಳ್ಳೆಯದೆಂದು ತೋರಿದ ವಸ್ತುವನ್ನೇ ಹಿಡಿಯುವ ಸ್ವಭಾವವುಳ್ಳದ್ದಾಗಿರುತ್ತದೆ. ಆದ್ದರಿಂದ ಸಾಧಕನು ಚಿತ್ತವನ್ನು ಬಿಗಿಹಿಡಿದು ಆತ್ಮನಲ್ಲಿ ನಿಲ್ಲಿಸಿ ಆತ್ಮಸುಖದ ಸವಿಯನ್ನು ಅದಕ್ಕೆ ತೋರಿಸಿಕೊಡಬೇಕು. ಆಗ ಅದು ಆತ್ಮನನ್ನು ಕಚ್ಚಿಹಿಡಿದುಕೊಂಡುಬಿಡುವದು. ಅಷ್ಟೇ ಅಲ್ಲ, ಗ್ರಾಹ್ಯವಾದ ವಿಷಯಗಳ ಸಂಬಂಧವಿಲ್ಲದ್ದರಿಂದ ಅದಕ್ಕೆ ಚಿತ್ತವೆಂಬ ಹೆಸರೇ ಅಳಿಸಿಹೋಗುವದು. ಆಗ ಚಿತ್ತವು 'ಚಿತ್ತು'

(ಚೈತನ್ಯರೂಪನಾದ ಆತ್ಮ) ಎನಿಸಿಕೊಳ್ಳುವದು. ಆಗ ಸಾಧಕನು ತನ್ನ ಗುರಿಯನ್ನು ಮುಟ್ಟಿದಂತಾಗುವದು; ಅವನು ಯುಕ್ತ ಎನಿಸಿಕೊಳ್ಳುವನು. ಪರಮಾತ್ಮನ ಧ್ಯಾನವನ್ನು ಹೀಗೆ ಒಂದೇ ಸಮನೆ ನಡೆಯಿಸುವದೂ ವಿಷಯಗಳಿಂದ ಚಿತ್ತವನ್ನು ಸಂಪೂರ್ಣವಾಗಿ ಹಿಂದಕ್ಕೆಳೆದುಕೊಳ್ಳುವದೂ ಬಿಟ್ಟಿಯ ಮಾತಲ್ಲ. ಅದಕ್ಕೆ ಭಗವಂತನ ಅನುಗ್ರಹವೇ ಬೇಕಾಗುವದು. ಭಗವಂತನಲ್ಲಿ ನೇರವಾಗಿ ಚಿತ್ತವನ್ನು ಇಡಲಾರದ ನಮ್ಮಂಥವರು ಭಗವಂತನ ಚಿಂತನೆಯಲ್ಲಿರುವ ಭಕ್ತರ ಚಿಂತನೆಯನ್ನು ಮಾಡಬೇಕು. ಅವರಿಗೂ ಭಗವಂತನಿಗೂ ಯಾವ ಭೇದವೂ ಇರುವದಿಲ್ಲ. ಭಗವದ್ಭಕ್ತರನ್ನು ಮೊರೆಹೊಕ್ಕವರಿಗೆ ಕ್ರಮಕ್ರಮವಾಗಿ ಭಗವಂತನ ಚಿಂತನೆಯೂ ವಶವಾಗುವದು.

## ೪೩. ಯೋಗಿಯ ಚಿತ್ತಕ್ಕೆ ಉಪಮಾನ ೭-(೧೯)

### (೧೮.೫.೪೭)

ಹಿಂದಿನ ವಿಚಾರವನ್ನು ಸ್ವಲ್ಪ ಅನುವಾದಮಾಡಿಕೊಂಡು ಮುಂದಕ್ಕೆ ಸಾಗುವದು ಒಳ್ಳೆಯದು. ಯುಕ್ತಾಹಾರವಿಹಾರನಾಗಿ ಕರ್ಮಗಳಲ್ಲಿ ಯುಕ್ತಚೇಷ್ಟನಾಗಿ ಎಚ್ಚರ ನಿದ್ರೆಗಳನ್ನು ಯುಕ್ತವಾದ ರೀತಿಯಲ್ಲಿ ಅನುಭವಿಸುತ್ತಾ ಇರುವವನಿಗೆ ಯೋಗವು ದುಃಖಪರಿಹಾರವನ್ನು ಮಾಡುತ್ತದೆ-ಎಂದು ಹೇಳಿದ್ದಾಗಿದೆ. ಆಹಾರವೆಂದರೆ ಭಕ್ಷ್ಯ ಭಕ್ಷ್ಯಗಳ ವಿಚಾರವೆಂದೂ ವಿಹಾರವೆಂದರೆ ಶರೀರದ ವ್ಯಾಯಾಮಕ್ಕಾಗಿ ಮಾಡುವ ಓಡಾಟವೇ ಮುಂತಾದ ವ್ಯಾಪಾರವೆಂದೂ ಹಿಂದೆ ವಿವರಿಸಿರುತ್ತೇವೆ. ಆದರೆ ಯೋಗಿಯಾದವನು ಈ ಸ್ಥೂಲವಾದ ಅರ್ಥದಿಂದಲೇ ತೃಪ್ತನಾಗಿರಬಾರದು. ಯೋಗಿಗಳ ವಿಷಯದಲ್ಲಿ ಆಹಾರವೆಂದರೆ (ಆಹ್ರಿಯತೇ ಇತಿ ಆಹಾರಃ) ಇಂದ್ರಿಯ ಗಳಿಂದ ಯಾವ ಯಾವ ವಿಷಯಗಳನ್ನು ಒಳಕ್ಕೆ ತೆಗೆದುಕೊಂಡು ಅನುಭವಿಸುತ್ತೇವೋ ಅದೆಲ್ಲವೂ ಆಗಿರುತ್ತದೆ. ವಿಹಾರವೆಂದರೆ ವಿಷಯಗಳಲ್ಲಿ ಇಂದ್ರಿಯಗಳು ಓಡಾಡು ವದೆಲ್ಲವೂ ಆಗಿರುತ್ತದೆ.

ಆಹಾರದಿಂದ ಶರೀರವು ಬೆಳೆಯುತ್ತದೆ ಎಂದರೆ ಏನು? ಶಾರೀರಿಕಶಾಸ್ತ್ರದಲ್ಲಿ ಹೇಳುವಂತೆ ಜೀವದಾನ (cell) ಎಂದು ಕರೆಯುವ-ಭಾಗಗಳು ಹೊಸಹೊಸದಾಗಿ ರಚನೆಯಾಗುತ್ತಿರುತ್ತವೆ. ಆ ಶರೀರಾಂಶಗಳು ಬರಿಯ ಆಹಾರದಿಂದಲೇ ಸೃಷ್ಟಿಯಾಗು ವದಿಲ್ಲ; ಶರೀರದಲ್ಲಿರುವ ಪ್ರಾಣವಾಯುವು ಅಂತಃಕರಣದ ಪ್ರಭಾವದಿಂದ ಮಾಡುವ ವ್ಯಾಪಾರದಿಂದಲೇ ಸೃಷ್ಟಿಯಾಗುತ್ತಿರುವವು. ನಮ್ಮ ಶರೀರವು ಕ್ಷಣಕ್ಷಣವೂ ಬದಲಾಯಿಸುತ್ತಿರುತ್ತದೆ; ಒಂದು ವರ್ಷದಲ್ಲಿ ಶರೀರದ ಜೀವಕಲೆಗಳೆಲ್ಲ ಬೇರ್ಪಟ್ಟು

ಹೋಗುತ್ತವೆ ಎಂದು ಶರೀರಸ್ವಭಾವವನ್ನು ಬಲ್ಲವರು ಹೇಳುತ್ತಿರುತ್ತಾರೆ. ಇದೆಲ್ಲ ಪ್ರಾಣಶಕ್ತಿಯ ಮೇಲೆ ಮನಸ್ಸು ಬೀರುವ ಪ್ರಭಾವವೆಂದು ತಿಳಿಯಬೇಕು. ನಮ್ಮ ಆಹಾರವು, ಎಂದರೆ ಇಂದ್ರಿಯಗಳಿಂದ ನಾವು ಸೇವಿಸುವ ವಿಷಯವು, ಯಾವ ಜಾತಿಯದೋ, ನಾವು ಆ ಆಹಾರವನ್ನು ಎಂಥ ಭಾವನೆಯಿಂದ ಸೇವಿಸುವೆವೋ ಅದಕ್ಕನುಗುಣವಾಗಿ ನಮ್ಮ ಶರೀರ, ಇಂದ್ರಿಯಗಳು, ಮನಸ್ಸು-ಇವುಗಳೂ ಮಾರ್ಪಡು ತ್ತಿರುವವು. ನಾವು ಮಾಡುವ ಪ್ರತಿಯೊಂದು ಆಹಾರಸೇವನೆಯೂ ನಮ್ಮ ಶರೀರ ಮನಸ್ಸುಗಳಲ್ಲಿ ರಿಜಿಸ್ಟರಾಗುತ್ತಿರುತ್ತದೆ. ಹೀಗೆ ಆಗುವ ರಿಜಿಸ್ಟರಿಗೆ 'ಸಂಸ್ಕಾರ' ಎಂದು ಹೆಸರು. ಈ ಸಂಸ್ಕಾರದಿಂದ ಮನಸ್ಸಿಗೆ ಒಂದು ಬಗೆಯ ಒಲವು ಬಂದುಬಿಡುತ್ತದೆ. ಆದ್ದರಿಂದ ನಮ್ಮ ವಿಹಾರವು, ವಿಷಯಗಳಲ್ಲಿ ವಿಹರಿಸುವಿಕೆಯು, ಒಂದು ರೂಪವನ್ನು ತೆಗೆದುಕೊಂಡುಬಿಡುತ್ತದೆ. ಒಬ್ಬ ಮನುಷ್ಯನು ಒಬ್ಬರ ಅಂಗಳದಲ್ಲಿದ್ದ ಸುವಾಸನೆಯ ಹೂವೊಂದನ್ನು ಮೆಚ್ಚುತ್ತಾ, ಹೋಗುವಾಗ ಬರುವಾಗ ಅದನ್ನೇ ನೋಡುತ್ತಿದ್ದನು. ಅವನ ಮನಸ್ಸಿನಲ್ಲಿ ಅದರಿಂದಾದ ಸಂಸ್ಕಾರವು ಅವನಿಗೆ ತಿಳಿಯಲಿಲ್ಲ. ಬರುಬರುತ್ತ ಆ ಹೂವು ತನಗೆ ಬೇಕೆಂಬ ಭಾವನೆಯು ಅವನಲ್ಲಿ ಮೂಡಿಕೊಂಡಿರಬೇಕು; ಆದ್ದರಿಂದಲೇ ಒಂದು ದಿನ ಅವನು ಆ ಹೂವನ್ನು ಮನೆಯ ಯಜಮಾನನನ್ನು ಕೇಳದೆಯೇ ಕಿತ್ತುಕೊಂಡುಬಿಟ್ಟನು! ಹೀಗೆ ಅಮಿತವಾದ ಅಯುಕ್ತವಾದ ವಿಷಯಗಳ ಸೇವನೆಯಿಂದ ಅಯುಕ್ತವಾದ ಸಂಸ್ಕಾರಗಳು ಉಂಟಾಗಿ ಅಯುಕ್ತವಾದ ವಿಹಾರಗಳು ಏರ್ಪಡುವವು. ಹೀಗೆ ಯಾರು ವಿಷಯಗಳಲ್ಲಿಯೇ ನೆಟ್ಟ ಮನಸ್ಸುಳ್ಳವರಾಗಿರುವರೋ ಅವರು **'ವಿಷಯಿಗಳು'** ಎನಿಸುವರು.

ಆದರೆ ಯಾರು ಈ ಆಹಾರವಿಷಯದಲ್ಲಿ ಎಚ್ಚರಿಕೆಯಿಂದಿರುವರೋ, ಯಾರು ವಿಷಯಗಳ ತೊಡಕಿಗೆ ಸಿಕ್ಕಿಕೊಂಡು ಅವುಗಳ ಆಸೆಯಿಂದ ಅನರ್ಥ ಪರಂಪರೆಯನ್ನು ಅನುಭವಿಸುವ ಬಲೆಗೆ ಬೀಳದೆ ಅದರಿಂದ ಬಿಡುಗಡೆಯನ್ನು ಹೊಂದಬೇಕೆಂದು ಹವಣಿಸುತ್ತಿರುವರೋ, ಅವರು ಮುಮುಕ್ಷುಗಳು. ವಿಷಯಗಳ ಆಳಾಗದೆ ಅವುಗಳ ಯಜಮಾನನಾಗಿ ಬಾಳಬೇಕೆಂದು ಯತ್ನಿಸುತ್ತಿರುವವನೇ ಯತಿಯು. ಸಂನ್ಯಾಸಿಗಳಾದವರಿಗೆ ಪರಮಾತ್ಮನ ಚಿಂತೆಯೊಂದಲ್ಲದೆ ಮತ್ತೆ ಯಾವದೊಂದು ವಿಷಯದಲ್ಲಿಯೂ ಸಂಗವಿರಬಾರದು-ಎಂದು ಶಾಸ್ತ್ರಗಳಲ್ಲಿ ಉಪದೇಶಿ ಸಿರುವದಕ್ಕೆ ಇದೇ ಕಾರಣ. ತಾವು ಧರಿಸುವ ಕೌಪೀನಾದಿಗಳಲ್ಲಿ ಕೂಡ ಇಂಥ ಸಂನ್ಯಾಸಿಗಳಿಗೆ ಅಭಿಮಾನವು ಇರಬಾರದು. ವಿಷಯಗಳ ಅಭಿಮಾನವು ಹೋದದ್ದಕ್ಕೆ ಅದೇ ಪರಮಾವಧಿ. ಶ್ರೀ ವಿವೇಕಾನಂದಸ್ವಾಮಿಗಳು ಪರಿವ್ರಾಜಕರಾಗಿ ಒಂಟಿಯಾಗಿ ಓಡಾಡುತ್ತಿದ್ದಾಗ ರಾಧಾಕುಂಡದ ಬಳಿಯಲ್ಲಿ ಅವರು ಕೌಪೀನವನ್ನು ಕಳೆದುಕೊಂಡ

ಕಥೆಯನ್ನು ನೀವು ಕೇಳಿರಬಹುದು. ಅವರಿಗೆ ಆಗ ಇದ್ದದ್ದು ಒಂದೇ ಕೌಪೀನ; ಅದು ಹೇಗೋ ಮಾಯವಾಗಿತ್ತು! ಹುಡುಕಿನೋಡುವಲ್ಲಿ ಅದನ್ನು ಒಂದು ಕಪಿಯು ಹಾರಿಸಿಕೊಂಡು ಹೋಗಿ ಮರದ ಮೇಲೆ ಕುಳಿತಿತ್ತು. ಏನು ಮಾಡಿದರೂ ಅದು ಕೌಪೀನವನ್ನು ಕೆಳಗೆ ಹಾಕಲಿಲ್ಲ. ಸ್ವಾಮಿಗಳು ರಾಧೆಯನ್ನೇ ಸ್ಮರಿಸುತ್ತಾ ಕಾಡಿನೊಳಕ್ಕೆ ನುಗ್ಗಿ ಅಲ್ಲಿಯೇ ಪ್ರಾಯೋಪದೇಶವನ್ನು ಮಾಡುವೆನೆಂದು ಸಂಕಲ್ಪಿಸಿಕೊಂಡರು. ಆದರೆ ಈಶ್ವರನ ಲೀಲೆಯನ್ನು ಹೇಳುವದೇನು? ಅಂಥ ನಿರ್ಜನಪ್ರದೇಶದಲ್ಲಿ ಯಾವನೋ ಒಬ್ಬನು ಅಲ್ಲಿಗೆ ಆಹಾರವನ್ನೂ ಒಂದು ಹೊಸ ಕಾಷಾಯವಸ್ತ್ರವನ್ನೂ ತಂದು ದಯವಿಟ್ಟು ಸ್ವೀಕರಿಸಬೇಕೆಂದು ಬೇಡಿಕೊಂಡನು. ಈ ಅದ್ಭುತ ಘಟನೆಯನ್ನು ಕಂಡು ಸ್ವಾಮಿಯವರಿಗೆ ಏನೂ ತೋಚದಂತಾಯಿತು. ಅವರು ರಾಧೆಯನ್ನೇ ಸ್ಮರಿಸುತ್ತಾ ಹಿಂತಿರುಗಿದರು. ಅವರ ಹಳೆಯ ಕೌಪೀನವು, ಅವರು ಒಣಗುವದಕ್ಕೆ ಹಾಕಿದ್ದ ಸ್ಥಳದಲ್ಲಿಯೇ ಇದ್ದದ್ದನ್ನು ಕಂಡು ಪರಮಾಶ್ಚರ್ಯಭರಿತರಾದರು! ಹೀಗೆ ನಾವು ಪ್ರಯತ್ನಪೂರ್ವಕವಾಗಿ ಮಾಡುವ ಕರ್ಮವು ನಿಷ್ಫಲವಾಗುವದೂ, ಅನಿರೀಕ್ಷಿತವಾಗಿ ನಮಗೆ ಬೇಕಾದದ್ದು ಒದಗುವದೂ ನಮ್ಮಗಳ ಅನುಭವದಲ್ಲಿಯೂ ಇರುತ್ತದೆ. ಇದರ ತತ್ತ್ವವೇನೆಂದರೆ ನಾವು ಸ್ವಪ್ರಯತ್ನದಿಂದ ವಿಷಯಗಳನ್ನು ಸಂಪಾದನೆಮಾಡಿಕೊಂಡು ನಮ್ಮನ್ನು ನಾವು ಕಾಪಾಡಿಕೊಳ್ಳುತ್ತೇವೆಂಬುದು ಸುಳ್ಳು. ಈಶ್ವರನ ಅನುಗ್ರಹದಿಂದಲೇ ನಮಗೆ ಬೇಕಾದದ್ದೆಲ್ಲವೂ ಸಿಕ್ಕುತ್ತಿರುವದು; ಆದರೂ ನಾವು ನಾನು, ನನ್ನದು-ಎಂಬ ಅಭಿಮಾನವನ್ನು ಬಿಡುವದಿಲ್ಲ!

ವಿಷಯಗಳು ನಮ್ಮನ್ನು ಕಾಪಾಡುತ್ತವೆಯೆಂದೂ ನಮ್ಮ ಪ್ರಯತ್ನವೇ ಜೀವನದಲ್ಲಿ ಜಯಪ್ರದವಾಗುವದೆಂದೂ ನಾವು ಎಣಿಸಿರುತ್ತೇವೆ. ಪ್ರಯತ್ನಗಳು ವಿಫಲವಾಗುತ್ತಲೇ ಇರುತ್ತವೆ; ಆದರೂ ನಾವು ನಿಜವನ್ನು ಅರಿತುಕೊಳ್ಳುವದಿಲ್ಲ. ನಾವು ಅಜ್ಞಾನನಿದ್ರೆಯಲ್ಲಿಯೇ ಕನಸುಗಳನ್ನು ಕಾಣುತ್ತಾ ಇರುವೆವು; ತತ್ತ್ವವನ್ನು ಅರಿತುಕೊಳ್ಳುವದೆಂಬ ಅರಿವು ನಮಗೆ ಆಗುವದೇ ಇಲ್ಲ. ಸಕಲ ಇಷ್ಟಾರ್ಥಗಳನ್ನೂ ನೆರವೇರಿಸುವ ಪರಮೇಶ್ವರನು ನಮ್ಮ ಹೃದಯದಲ್ಲಿಯೇ ಇರುತ್ತಾನೆ. ಆದರೂ ನಾವು ಹೊರಮುಖವಾಗಿ ಕಾಮಕಾಮಿಗಳಾಗಿ ಆತನ ಕಡೆಗೆ ಬೆನ್ನುತಿರುಗಿಸಿಕೊಂಡಿರುತ್ತೇವೆ! ಯೋಗಿಗಳ ವರ್ತನೆಯು ಇದಕ್ಕೆ ತೀರ ವಿರುದ್ಧವಾಗಿರುತ್ತದೆ. ಅವರು ತಮ್ಮ ಚಿತ್ತವನ್ನು ಸಂಪೂರ್ಣವಾಗಿ ಹಿಡಿತದಲ್ಲಿಟ್ಟುಕೊಂಡಿರುತ್ತಾರೆ. ಯಾವ ವಿಷಯಗಳನ್ನೂ ಅವರು ಕಾಮಿಸುವದಿಲ್ಲ, ಮನಸ್ಸೆಂಬುದು ಯಾವ ವಿಷಯದಲ್ಲಿ ಅದನ್ನು ಇಟ್ಟಿರುವೆವೋ ಅದರಲ್ಲಿಯೇ ಕೂತುಕೊಂಡುಬಿಡುತ್ತದೆ. ಆದ್ದರಿಂದ ವಿಷಯಗಳನ್ನು ನೋಡುವಾಗ ನಮ್ಮ ಇಂದ್ರಿಯಗಳೂ ಮನಸ್ಸೂ ಹಿಡಿತದಲ್ಲಿರಬೇಕು. ಯೋಗಿಗಳ ಮನಸ್ಸು ಹೀಗೆ

ವಿನಿಯತವಾಗಿರುತ್ತದೆ. ಯಾವ ವಿಷಯಗಳಲ್ಲಿಯೂ ಸ್ಪೃಹೆಯಿಲ್ಲದೆ ಅದು ಹಿಂತಿರುಗುತ್ತದೆ. "ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯಃ" ಎಂಬ ಶ್ರುತಿಯು ಹೀಗೆ ಆತ್ಮನ ಕಡೆಗೇ ತಿರುಗಬೇಕೆಂಬುದನ್ನೇ ಉಪದೇಶಿಸುತ್ತಿರುವದು. ಯೋಗಿಗಳ ಚಿತ್ತವು ಆತ್ಮನ ಕಡೆಗೇ ತಿರುಗಿ, ಆತ್ಮಪ್ರವಣವಾಗಿ, ಆತ್ಮನ ಚಿಂತನೆಯಿಂದ ಆತ್ಮನಲ್ಲಿಯೇ ನಿಂತುಬಿಡುತ್ತದೆ. ಚಿತ್ತವು ಹಾಗಾದವನಿಗೆ 'ಯುಕ್ತ' ಎಂದು ಹೆಸರು.

ಆತ್ಮನನ್ನೇ ಚಿಂತಿಸುತ್ತಿರುವ ಯೋಗಿಯ ಚಿತ್ತವು ಹೇಗಿರುವದು? ಅದಕ್ಕೊಂದು ಉಪಮಾನವನ್ನು ಭಗವಂತನು ಕೊಟ್ಟಿರುತ್ತಾನೆ-

**ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥** (೬.೧೯)

ಮನಸ್ಸು ಗಾಳಿಯಿಲ್ಲದೆಡೆಯಲ್ಲಿರುವ ದೀಪದಂತೆ ಅಲುಗಾಡದಿರಬೇಕು, ಅದೇ ಯೋಗವು ವಶವಾಗಿದೆ ಎಂಬುದಕ್ಕೆ ಗುರುತು. ಸ್ವಲ್ಪವೂ ಅಲುಗಾಡದೆ ಇರುವ ಈ ಚಿತ್ತಭೂಮಿಕೆಗೆ 'ಏಕಾಗ್ರತೆ' ಎಂದು ಹೆಸರು. ಶ್ರುತಿಯು ಧ್ಯಾನಕ್ಕೆ ಬಕನ ಹೋಲಿಕೆಯನ್ನು ಕೊಟ್ಟಿರುತ್ತದೆ; ಬಕಪಕ್ಷಿಯು ಮೀನುಹಿಡಿಯುವದಕ್ಕೆಂದು ಹೇಗೆ ಏಕಾಗ್ರವಾಗಿ ಚಲಿಸದೆ ಕುಳಿತಿರುವದೋ ಹಾಗೆ ಸಾಧಕನು ಆತ್ಮಚಿಂತನೆಯಲ್ಲಿ ನಿಂತಿರಬೇಕು. ಮುಂಡಕಶ್ರುತಿಯಲ್ಲಿ ಹೇಳಿರುವ ಬಿಲ್ಲುಬಾಣದ ರೂಪಕವನ್ನೂ ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಪ್ರಣವವೇ ಬಿಲ್ಲು, ಆತ್ಮನೇ ಬಾಣ, ಬ್ರಹ್ಮವೇ ಗುರಿ; ಹೀಗೆ ಬ್ರಹ್ಮವನ್ನು ಗುರಿಮಾಡಿಕೊಂಡು ಉಪಾಸನೆಯಿಂದ ಚಿತ್ತವನ್ನು ಚೂಪಾಗಿ ಮಾಡಿಕೊಂಡು ಬಾಣವು ಗುರಿಯಲ್ಲಿ ಒಂದಾಗುವಂತೆ ಉಪಾಸಕನು ಬ್ರಹ್ಮಮಯನಾಗಿಬಿಡಬೇಕು-ಎಂದು ಅಲ್ಲಿ ಹೇಳಿರುತ್ತದೆ.

ಚಿತ್ತದ ಚಾಂಚಲ್ಯಕ್ಕೆ ಯೋಗಿಗಳು 'ವಿಕ್ಷೇಪ' ಎಂದು ಹೆಸರನ್ನು ಇಟ್ಟುಕೊಂಡಿರುತ್ತಾರೆ. ಆತ್ಮಚಿಂತನೆಯಲ್ಲಿ ಮಗ್ನನಾಗಿದ್ದವನಿಗೆ ವಿಷಯಚಿಂತನೆಯೇ ವಿಕ್ಷೇಪಕ್ಕೆ ಹೇತು. ಧ್ಯಾನಯೋಗಿಯು ವಿಷಯವೆಂದರೆ ವಿಷವೆಂದೇ ಭಾವಿಸಬೇಕು. ಮಹಾತ್ಮರಾದ ತಪಸ್ವಿಗಳು ಕೂಡ ವಿಷಯಚಿಂತನೆಯಿಂದ ತಪಃಶಕ್ತಿಯನ್ನು ಕಳೆದುಕೊಂಡು ಕಷ್ಟಪಟ್ಟರೆಂದು ಪುರಾಣಾದಿಗಳಲ್ಲಿ ವರ್ಣಿಸಿರುವದನ್ನು ಧ್ಯಾನಯೋಗಿಯು ಮನಸ್ಸಿಗೆ ತಂದುಕೊಳ್ಳುತ್ತಿರಬೇಕು. ದಶಕುಮಾರಚರಿತೆ ಎಂಬ ಗದ್ಯಕಾವ್ಯದಲ್ಲಿರುವ ಅಪಹಾರವರ್ಮಚರಿತ್ರೆಯಲ್ಲಿ-ಮರೀಚಿ ಎಂಬ ಋಷಿಯು ತಪಃಪ್ರಭಾವದಿಂದ ತ್ರಿಕಾಲಜ್ಞಾನವನ್ನೂ ಪಡೆದಿದ್ದನೆಂದೂ ಅಂಗಪುರಿಯ ಕಾಮಮಂಜರಿ ಎಂಬ ವಾರನಾರಿಯ ಕಾಪಟ್ಯವನ್ನರಿಯದೆ ತನ್ನ ಸೇವೆಗೆಂದು ಆಶ್ರಮದಲ್ಲಿಟ್ಟುಕೊಂಡಿದ್ದರ ಫಲವಾಗಿ ಆಕೆಯ ಗುಲಾಮನಾಗಿ ಕರೆದರೆ ಹಿಂದೆಬರುವ ಕುನ್ನಿಯಂತೆ ಅವಳೊಡನೆ

ರಾಜಸಭೆಗೆ ಕೂಡ ಹೋಗಿ ಅಪಮಾನಿತನಾದನೆಂದೂ-ಬರೆದಿರುವ ಕಥೆಯನ್ನು ತಮ್ಮಲ್ಲಿ ಕೆಲವರು ಕೇಳಿರಬಹುದು. ವಿಷಯಸಂಗದಲ್ಲಿರುವ ಈ ದೋಷವನ್ನು ಧ್ಯಾನಯೋಗಿಯು ಚೆನ್ನಾಗಿ ಬಲ್ಲವನಾದ್ದರಿಂದ ಅವನ ಮನಸ್ಸು ಎಂದಿಗೂ ಚಂಚಲವಾಗುವದಿಲ್ಲ. ಅವನು ಯಾವಾಗಲೂ ಗಾಳಿಯಿಲ್ಲದ ಕಡೆಯಲ್ಲಿರುವ ದೀಪದಂತೆ ಚಿತ್ತವನ್ನು ಅಲುಗಾಡಿಸದೆ ಏಕಾಗ್ರತೆಯಿಂದ ಪರಮಾತ್ಮನ ಚಿಂತೆಗೇ ಹತ್ತಿಸಿಕೊಂಡುಬಿಟ್ಟಿರುತ್ತಾನೆ.

ಇಂಥ ಧ್ಯಾನಯೋಗವು ಎಲ್ಲರಿಗೂ ಸುಲಭಸಾಧ್ಯವಲ್ಲವಾದರೂ ವಿಷಯಗಳ ಸೇವನೆಯಲ್ಲಿ ಎಚ್ಚರದಿಂದಿರಬೇಕೆಂಬುದು ಎಲ್ಲರಿಗೂ ಬೇಕಾದ ಉಪದೇಶವೇ ಆಗಿರುತ್ತದೆ. ವಿಷಯಗಳ ಸೇವನೆಯನ್ನು ಸರ್ವಥಾ ಬಿಡುವದು ನಮ್ಮಂಥವರಿಂದ ಆಗುವಹಾಗಿಲ್ಲ. ಅವರ್ಜನೀಯವಾಗಿ ಅವಶ್ಯವಾಗಿರುವ ವಿಷಯಗಳನ್ನು ಪರಮೇಶ್ವರ ನಿಗೆ ಸಂಬಂಧಿಸಿಕೊಂಡು, 'ಇದೆಲ್ಲ ಪರಮೇಶ್ವರನ ಪ್ರಸಾದ' ಎಂಬ ಭಾವನೆಯಿಂದ ಮಿತವಾಗಿ ರಾಗದ್ವೇಷಗಳಿಲ್ಲದೆ ಸೇವಿಸುತ್ತಿರಬೇಕು. ಹೀಗಾದರೆ ವಿಷಯಗಳಿಂದ ನಮ್ಮ ಮನಸ್ಸು ಕದಡದೆ ಇರುತ್ತದೆ. ಧ್ಯಾನಯೋಗವು ಕರ್ಮಸಂನ್ಯಾಸವನ್ನು ಮಾಡಬಲ್ಲ ವಿರಕ್ತರ ವಿಷಯ; ಸಾಮಾನ್ಯರಿಗೆ ಕರ್ಮಸಂನ್ಯಾಸಕ್ಕಿಂತ ಕರ್ಮ ಯೋಗವೇ ಮೇಲು ಎಂದು ಭಗವಂತನು ಹೇಳಿರುವದನ್ನು ನಾವು ಮರೆಯದೆ ನಮ್ಮ ಕೈಯಲ್ಲಾದ ಮಟ್ಟಿಗೆ ಶಾಸ್ತ್ರೀಯಕರ್ಮಗಳನ್ನು ಭಗವಂತನ ಆರಾಧನೆ ಗೋಸ್ಕರವಾಗಿ ಮಾಡುವ ಪ್ರಯತ್ನದಲ್ಲಿರಬೇಕು.

## ೪೪. ಧ್ಯಾನಯೋಗದ ಸ್ವರೂಪ ೬- (೨೦-೨೩)
### (೨೫.೫.೪೭)

ಧ್ಯಾನಯೋಗದ ವಿಚಾರವು ನಡೆದಿರುತ್ತದೆ. ಧ್ಯಾನಯೋಗಿಯು ವಿಷಯಗಳಿಂದ ಚಿತ್ತವನ್ನು ಎಳೆದುಕೊಂಡು ಏಕಾಗ್ರಚಿತ್ತದಿಂದ ಆತ್ಮನನ್ನೇ ಚಿಂತಿಸುತ್ತಿರುವನೆಂದೂ ಅವನ ಚಿತ್ತವು ಆಗ ಗಾಳಿಯ ಹೊಡೆತವಿಲ್ಲದ ಸೊಡರಿನಂತೆ ಯಾವ ವಿಕ್ಷೇಪವೂ ಇಲ್ಲದೆ ಇರುವದೆಂದೂ ಹೇಳಿದ್ದಾಯಿತು. ಯೋಗಿಗೆ ಆತ್ಮನೇ ಗುರಿ; ಅವನ ಚಿತ್ತವು ಆತ್ಮನನ್ನೇ ಹುಡುಕಿ, ಆತ್ಮನನ್ನೇ ಚಿಂತಿಸುತ್ತಾ, ಆತ್ಮನಲ್ಲಿಯೇ ನಿಂತುಬಿಟ್ಟಿರುತ್ತದೆ ಎಂದೂ ತಿಳಿಸಿದ್ದಾಯಿತು. ಈಗ ಧ್ಯಾನಯೋಗವು ಅಳವಟ್ಟಾಗ ಹೇಗೆ ಅನುಭವಕ್ಕೆ ಬರುತ್ತದೆ?- ಎಂಬುದನ್ನು ಕುರಿತು ಕೆಲವು ಮಾತುಗಳನ್ನು ಹೇಳುವೆನು:

ಎಲ್ಲಾ ಧರ್ಮಗಳಲ್ಲಿಯೂ ಧ್ಯಾನಯೋಗಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿರುತ್ತದೆ. ಸರಿಯಾಗಿ ನೋಡಿದರೆ ಧರ್ಮವೆಂದರೇನು? ಅದು ಸಾಧಕನ ಮನಃಸ್ಥಿತಿಯನ್ನು ತಿಳಿಸುವದು. ಒಬ್ಬ ಮನುಷ್ಯನು ದೇಹವೇ ತಾನು ಎಂಬ ಅಭಿಮಾನಕ್ಕೆ ಕಟ್ಟುಬಿದ್ದಿರುತ್ತಾನೆಂದು ಇಟ್ಟುಕೊಳ್ಳಿ. ಅವನು ಚಾರ್ವಾಕನೆನಿಸುವನು. ಚಾರ್ವಾಕರಿಗೆ ಯಾವದೊಂದು ಧರ್ಮದ ಬಾಹ್ಯಚಿಹ್ನೆಯೂ ಇರುವದಿಲ್ಲ. ಅವರು "ನಾನೇ ದೇಹ, ದೇಹವೇ ನಾನು' ದೇಹಕ್ಕಿಂತ ಬೇರೆ ಆತ್ಮನೆಂಬ ತತ್ತ್ವವು ಇರುವದಿಲ್ಲ" ಎಂಬ ದೃಢವಿಶ್ವಾಸದಿಂದ ವರ್ತಿಸುವರು, ಅಷ್ಟೆ. ಇದರಂತೆ "ದೇಹಕ್ಕಿಂತ ವ್ಯತಿರಿಕ್ತವಾದ ಬುದ್ಧಿ ಎಂಬುದೊಂದಿದೆ; ಅದೇ ಮನುಷ್ಯನ ನಿಜವಾದ ಸ್ವರೂಪವು" ಎಂದು ನಂಬಿ ಯಾವನು ವ್ಯವಹರಿಸುವನೋ ಅವನು ಬೌದ್ಧನು. ಹೀಗೆ ನಮ್ಮ ಮನಸ್ಸಿನ ಮಟ್ಟದಿಂದಲೇ ನಮ್ಮ ಧರ್ಮದ ಸ್ವರೂಪವನ್ನು ನಿರ್ಣಯಿಸಬೇಕಾಗಿರುತ್ತದೆ.

ಪ್ರಕೃತದಲ್ಲಿ ಅಧ್ಯಾತ್ಮಸಾಧಕರನ್ನು ಅವರ ಮನಃಸ್ವಭಾವದ ದೃಷ್ಟಿಯಿಂದ ಎರಡು ತರಗತಿಗಳಾಗಿ ವಿಂಗಡಿಸಬಹುದು. ಅವರಲ್ಲಿ ಬಹಿರ್ಮುಖರಾಗಿರುವವರು ಕರ್ಮಯೋಗಿಗಳು, ಅಂತರ್ಮುಖರಾಗಿರುವವರು ಧ್ಯಾನಯೋಗಿಗಳು. ಕರ್ಮಯೋಗವೆಂದರೇನು? ಈಶ್ವರನ ಆರಾಧನೆಗೆಂದು ತಮ್ಮ ಕರ್ಮಗಳನ್ನು ಮಾಡುತ್ತಿರುವದು. ಪಾಶ್ಚಾತ್ಯದೇಶಗಳಲ್ಲಿ ಧಾರ್ಮಿಕನಾದವನು ಜನರ ಸೇವೆಯನ್ನು ಮಾಡಬೇಕು ಎಂಬ ಕ್ರಿಸ್ತಿಯನ್ನರ ಉಪದೇಶವಿದೆಯಷ್ಟೆ; ಅದರಲ್ಲಿ ಈ ಕರ್ಮಯೋಗದ ಅಂಶವಿದೆಯೆನ್ನಬಹುದು. ಆದರೆ ಈಶ್ವರನ ಸಂಬಂಧವಿಲ್ಲದೆ ಮಾಡುವ ಸೇವೆಯೆಂಬುದು ಸಮಾಜಸುಧಾರಣೆಯಾಗಬಹುದು, ಕರ್ಮಯೋಗವೆನಿಸಲಾರದು. ಈಶ್ವರನ ಸಂಬಂಧವಿಲ್ಲದೆ ಸಮಾಜಸುಧಾರಣೆಯನ್ನೇ ಆಧ್ಯಾತ್ಮಿಕಸಾಧನವೆಂದು ಭಾವಿಸುವದು ಅಳಿಯನನ್ನು ಬಿಟ್ಟು ದಿಬ್ಬಣ ತೆರಳಿದಂತೆ. ಶ್ರೀರಾಮಕೃಷ್ಣಮಿಷನ್‌ನವರೂ ಈ 'ಸೇವಾ' ಪದ್ಧತಿಯನ್ನು ಆಚರಣೆಯಲ್ಲಿ ತಂದಿರುತ್ತಾರೆ. 'ಶಿವ', 'ಸೇವಾ'- ಎಂಬ ಶಬ್ದಗಳನ್ನು ತಮ್ಮ ಧ್ಯೇಯದ ಸಾಂಕೇತಿಕಶಬ್ದಗಳನ್ನಾಗಿ ಆ ಪಂಥದವರು ಉಪಯೋಗಿಸುತ್ತಿರುವದನ್ನು ನೀವು ಕೇಳಿರಬಹುದು. ವಿದ್ಯಾಭ್ಯಾಸಕ್ಕೆ ಏರ್ಪಡಿಸುವದು, ಆಸ್ಪತ್ರೆಗಳನ್ನಿಟ್ಟು ರೋಗಿಗಳಿಗೆ ಚಿಕಿತ್ಸೆಮಾಡಿಸುವದು, ಕೈಗಾರಿಕೆಯ ವಿದ್ಯೆಯನ್ನು ಜನರಿಗೆ ಹೇಳಿಕೊಡುವದು, ದೀನಾಂಧಬಧಿರಾದಿಗಳಿಗೆ ಅನ್ನವಸ್ತ್ರಗಳಿಗೆ ಏರ್ಪಡಿಸುವದು, ಕ್ಷಾಮಕಾಲದಲ್ಲಿ ಅನ್ನದಾನಕ್ಕೆ ಏರ್ಪಡಿಸುವದು-ಮುಂತಾದ ಉತ್ತಮ ಸಮಾಜಸೇವೆಯನ್ನು ಆ ಪಂಥದವರು ಆಚರಣೆಯಲ್ಲಿಟ್ಟುಕೊಂಡು ನಮ್ಮ ದೇಶದವರಿಗೆ ಹಲವು ಬಗೆಗಳಲ್ಲಿ ಮಾದರಿಯ ವರ್ತನೆಯನ್ನು ತೋರಿಸಿರುತ್ತಾರೆ. ಪೂರ್ವದಲ್ಲಿ ನಮ್ಮಲ್ಲಿ "ಇಷ್ಟಾಪೂರ್ತದತ್ತ" ಎಂಬ ಹೆಸರಿನಿಂದ ಮಾಡುತ್ತಿದ್ದ ಧಾರ್ಮಿಕ

ಕಾರ್ಯಗಳು ಈ ಜಾತಿಯವು; ಅನ್ನಸತ್ರಗಳನ್ನೇರ್ಪಡಿಸುವದು, ಕೆರೆಕಟ್ಟೆಗಳನ್ನೂ ತೋಪುಗಳನ್ನೂ ಕಟ್ಟಿಸುವದು, ಯೋಗ್ಯರಿಗೆ ಹಿರಣ್ಯಾದಿದಾನವನ್ನು ಮಾಡುವದು-ಇವೆಲ್ಲ ಆ ಧರ್ಮಕಾರ್ಯಗಳಲ್ಲಿ ಅಡಕವಾಗಿದ್ದವು. ಆದರೆ ಈ ಕಾರ್ಯಗಳು ಎಷ್ಟೇ ಶ್ಲಾಘ್ಯವಾಗಿದ್ದರೂ ಭಗವಂತನ ಸೇವೆ ಎಂಬ ಭಾವನೆಯಿಂದ ನಡೆದಲ್ಲದೆ, ತಾನು ಮಾಡುವ ಇಂಥ ಪುಣ್ಯಕರ್ಮಗಳಿಂದ ಖ್ಯಾತಿ, ಲಾಭ, ಪೂಜೆ ಮುಂತಾದವುಗಳು ಲಭಿಸಬೇಕೆಂಬ ಹವಣಿಕೆಯು ತಪ್ಪಿದಲ್ಲದೆ, ತಾನು ಮಾಡುವ ಕರ್ಮಗಳಲ್ಲಿ ಸಂಗವು ತಪ್ಪಿದಲ್ಲದೆ, ಇವು ಯಾವವೂ ಕರ್ಮಯೋಗವೆನಿಸುವದಿಲ್ಲ.

ಇದಿಷ್ಟೂ ಕರ್ಮಯೋಗದ ಮಾತಾಯಿತು. ಆದರೆ ಧ್ಯಾನಯೋಗಿಯು ಅಂತರ್ಮುಖನಾಗಿರುವದರಿಂದ ಅವನಿಗೆ ಇದೊಂದೂ ಹೊಂದುವದಿಲ್ಲ. ಅವನು ಕರ್ಮಯೋಗದ ಉಪಕರಣವಾದ ಕರ್ಮವನ್ನು ಮೀರಿ ಅಂತರ್ಮುಖನಾಗಿರುತ್ತಾನೆ. ಕರ್ಮಯೋಗಿಗೆ ಕರ್ಮಸಂಗವಿಲ್ಲದಿದ್ದರೂ ಫಲಾಶೆಯಿಲ್ಲದಿದ್ದರೂ ಕರ್ತೃತ್ವಾಭಿಮಾನವು ಇರುತ್ತದೆ. ಆದರೆ ಧ್ಯಾನಯೋಗಿಯು ಈ ಅಭಿಮಾನವನ್ನೂ ಕಳಚಿಕೊಳ್ಳುವದಕ್ಕೆ ಪ್ರಯತ್ನವನ್ನು ಮಾಡುತ್ತಿರುತ್ತಾನೆ. ಹೊರಗೆ ಮಾಡುವ ಪರೋಪಕಾರದ ಕಾರ್ಯಗಳನ್ನೆಲ್ಲ ಬಿಟ್ಟು ಕೈಕಾಲುಮುದುರಿಕೊಂಡು ಕುಳಿತುಕೊಂಡರೆ ಏನು ಗತಿ? ಎಂದರೆ ಇಲ್ಲಿ ಒಂದು ರಹಸ್ಯವಿದೆ. ಧ್ಯಾನಯೋಗಿಯು ನೋಡುವದಕ್ಕೆ ಯಾವ ಕರ್ಮವನ್ನೂ ಮಾಡದೆ, ಯಾವ ಜನತಾಸೇವೆಯನ್ನೂ ಮಾಡದೆ ಇರುವಂತೆ ಕಾಣುತ್ತಾನೆ, ನಿಜ. ಆದರೆ ಪರೋಪಕಾರದ ಕಾರ್ಯದಲ್ಲಿ ಎರಡು ಬಗೆಗಳಿವೆ. ಹೇಗೆಂದರೆ, ಹಸಿದವರಿಗೆ ಹೊಟ್ಟೆತುಂಬ ಅನ್ನವನ್ನು ಹಾಕುವದು ಹೆಚ್ಚಿನ ಉಪಕಾರವೋ, ಜನರಿಗೆ ಹಸಿವನ್ನು ಅಡಗಿಸಿಕೊಳ್ಳುವದಕ್ಕೆ ಅನುಕೂಲಿಸುವಂತೆ ಭೂದಾನವನ್ನು ಮಾಡುವದು ಹೆಚ್ಚಿನ ಉಪಕಾರವೊ? ಬಡವರಿಗೆ ಆಗಾಗ್ಗೆ ಸ್ವಲ್ಪ ಹಣವನ್ನು ಕೊಡುವದು ಹೆಚ್ಚಿನ ಉಪಕಾರವೊ, ಧನಸಂಪಾದನೆಯ ಕ್ರಮವನ್ನು, ಕಲಿಸಿಕೊಡುವದು ಹೆಚ್ಚಿನ ಉಪಕಾರವೊ? ಅಜ್ಞರಿಗೆ ಆಗಾಗ್ಗೆ ಒದಗುವ ಕಷ್ಟದ ಪರಿಹಾರವನ್ನು ತಿಳಿಸಿಕೊಡುವದು ಹೆಚ್ಚಿನ ಉಪಕಾರವೊ, ಅಜ್ಞಾನವನ್ನೇ ಕಳೆಯುವದು ಹೆಚ್ಚಿನ ಉಪಕಾರವೊ? ಈ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವದಕ್ಕೆ ಬಹಳ ಹೆಚ್ಚಾಗಿ ಯೋಚಿಸಬೇಕಾದದ್ದೇನೂ ಅವಶ್ಯವಿಲ್ಲ. ಅನ್ನವನ್ನು ಹಾಕುವದು ಉಪಕಾರವೇ ಸರಿಯಾದರೂ ಹಸಿವಿನ ಕಾಟವನ್ನೇ ತಪ್ಪಿಸಿಕೊಡುವದು ಇನ್ನೂ ಹೆಚ್ಚಿನ ಉಪಕಾರವೇ ಎಂಬುದಕ್ಕೆ ಸಂಶಯವಿಲ್ಲ. ಕುಂದುಕೊರತೆಗಳನ್ನು ನಿವಾರಣೆಮಾಡುವದು ಒಳ್ಳೆಯದೇ ಸರಿ; ಆದರೆ ಕುಂದು ಕೊರತೆಗಳುಂಟಾಗುವ ಕಾರಣವನ್ನೇ ಕಳೆದುಹಾಕುವದು ಇನ್ನೂ ಒಳ್ಳೆಯದು. ಕರ್ಮವನ್ನು ಮಾಡುವ ಸಮಾಜಸೇವೆಯು ಹೆಚ್ಚಿನದೇ ಸರಿ; ಆದರೆ ಧ್ಯಾನಯೋಗಿಯು

ಮಾಡುವ ಸಮಾಜಸೇವೆಯು ಇನ್ನೂ ಹೆಚ್ಚಿನದು. ಒಬ್ಬ ಧ್ಯಾನಯೋಗಿಯ ಪ್ರಭಾವದಿಂದ ನೂರು ಜನ ಕರ್ಮಯೋಗಿಗಳು ತಯಾರಾಗಬಹುದು! ಧ್ಯಾನ ಯೋಗಿಯ ಮನಸ್ಸಿನ ಸಮಭಾವದಿಂದ ಎಲ್ಲರಲ್ಲಿಯೂ ಸಮಾನವಾದ ಪ್ರೀತಿಯುಂಟಾ ಗುತ್ತದೆ. ಅವನ ಮನಸ್ಸು ಪ್ರಸನ್ನವಾಗಿಬಿಟ್ಟರೆ ಸುತ್ತುಮುತ್ತಲಿನ ಲೋಕಕ್ಕೆಲ್ಲ ಕಲ್ಯಾಣವಾಗಿಬಿಡುತ್ತದೆ! ಕರ್ಮಿಯಿಂದ ಕೆಲಸವನ್ನು ಮಾಡಿಸಿಕೊಂಡು ಜಗತ್ತು ಉಪಕಾರವನ್ನು ಹೊಂದಬೇಕು; ಆದರೆ ಧ್ಯಾನಯೋಗಿಯ ಮನಸ್ಸು ಪ್ರಸನ್ನವಾದರೆ ಸಾಕು, ಇನ್ನೂ ಹೆಚ್ಚಿನ ಉಪಕಾರವಾಗಿಬಿಡುತ್ತದೆ. ಹಸುವಿನ ಹಾಲನ್ನು ಕರೆದು ಕೊಳ್ಳುವದಕ್ಕೂ ಕರುವು ಬಂದಾಗ ಹಸುವೇ ಪ್ರೇಮದಿಂದ ಹಾಲಿನ ಸೊರು ಇಳಿಸುವದಕ್ಕೂ ಇರುವಷ್ಟು ತಾರತಮ್ಯವು ಕರ್ಮಕ್ಕೂ ಧ್ಯಾನಕ್ಕೂ ಇರುತ್ತದೆ.

ಸಾಮಾನ್ಯರಿಗೆ ವಿಷಯಗಳಲ್ಲಿ ಚಿತ್ತವು ಹೇಗೆ ಏಕಾಗ್ರವಾಗಿ ನಿಲ್ಲುತ್ತಿರುವದೋ ಹಾಗೆ ಯೋಗಿಯಾದವನಿಗೆ ಪರಮಾತ್ಮನಲ್ಲಿ ಏಕಾಗ್ರವಾಗಿ ನಿಲ್ಲುವದು. ಹುಣ್ಣಿಮೆಯ ದಿನದ ಚಂದ್ರೋದಯದಿಂದ ಸಮುದ್ರವು ಉಕ್ಕುವಂತೆ, ಧ್ಯಾನಿಯ ಮನಸ್ಸು ಪರಮಾತ್ಮ ಎಂದ ಮಾತ್ರದಿಂದ ಆನಂದದಿಂದ ಉಕ್ಕುತ್ತದೆ. ವಿಷಯಗಳನ್ನು ಬಿಟ್ಟು ಪರಮಾತ್ಮನ ಕಡೆಗೆ ಮನಸ್ಸು ಸರಿಯುವದೆಂಬುದು ಮದುವೆಯ ಗಂಡು ನಡೆಮಡಿಯ ಮೇಲೆ ಸಂತೋಷದಿಂದ ಬರುತ್ತಿರುವಂತೆ. ಧ್ಯಾನಯೋಗಿಗಳು ಹೊರಗೆ ನೋಡುವದಕ್ಕೆ ಏನೂ ಮಾಡುತ್ತಿರುವದಿಲ್ಲವಾದರೂ ತಮ್ಮ ಸುತ್ತಲೂ ಶಾಂತಿಸುಖದ ವಾತಾವರಣ ವನ್ನು ಬೀರುತ್ತಿರುವರು. ಧ್ಯಾನಯೋಗಿಯು ಇರುವ ಸ್ಥಳದಲ್ಲಿ, ವಿದ್ಯುಚ್ಛಕ್ತಿಯ ಉಗಮಸ್ಥಾನದಂತೆ, ಶಾಂತಿಯ ಶಕ್ತಿಯು ತಯಾರಾಗುತ್ತಿರುವದು. ಹೊರಗೆ ನೋಡುವದಕ್ಕೆ ಯಾವ ವ್ಯಾಪಾರವೂ ಕಾಣದಿದ್ದರೂ ಧ್ಯಾನಿಯ ಒಳಗಿನ ವ್ಯಾಪಾರದ ಜೋರು ಬಲವಾಗಿರುವದು. ಆದ್ದರಿಂದ ಧ್ಯಾನಯೋಗಿಯನ್ನು ಜಡನೆಂದು ಭಾವಿಸ ಬಾರದು.

ಈಗ ಭಗವಂತನು ಯೋಗದ ವರ್ಣನೆಯನ್ನು ಮಾಡಿ, ಇಂಥ ಉತ್ತಮ ಸ್ಥಿತಿಯು ನಮಗೆಂದು ದಕ್ಕೀತು? ಎಂದು-ಸಾಧಕರು ಬಾಯಿನೀರುಕರೆಯುವ ಹಾಗೆ ಅದರ ಸ್ವರೂಪವನ್ನು ತಿಳಿಸಿಕೊಡುತ್ತಾನೆ.

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥** (೬-೨೦)

ಯೋಗಾಭ್ಯಾಸದ ಫಲವಾಗಿ ಚಿತ್ತವು, ಮಡಕೆಯು ಮಣ್ಣಲ್ಲಿ ನಿಂತಂತೆ

ಆತ್ಮನಲ್ಲಿಯೇ ನಿಂತುಬಿಡುತ್ತದೆ. ಆಗ ಬಲಾತ್ಕಾರದಿಂದಾಗಲಿ ಭೀತಿಯಿಂದಲಾಗಲಿ ಮನಸ್ಸು ಸುಮ್ಮನಾಗುವದೆಂದು ತಿಳಿಯಬಾರದು; ಪ್ರೇಮದಿಂದ ಕರಗಿ ಆತ್ಮನಲ್ಲಿ ನಿಂತುಬಿಡುತ್ತದೆ. ಸಾಮಾನ್ಯವಾಗಿ ನಾವು ಮೈಮರೆತಾಗ ಮನಸ್ಸಿನಲ್ಲಿ ನಿಲ್ಲುವೆವು; ವಾಸನಾಯುಕ್ತವಾದ ಮನಸ್ಸಿನಲ್ಲಿ ಲಯವಾಗುವದರಿಂದ ತತ್ಕಾಲದಲ್ಲಿ ಹೊರಗಿನ ದುಃಖವನ್ನು ಮರೆಯಬಹುದಾದರೂ ವ್ಯವಹಾರದ ಸುಖವೂ ಹೋಗಿಬಿಡುತ್ತದೆ. ಇಷ್ಟೇ ಅಲ್ಲ; ಎಚ್ಚತ್ತಕೂಡಲೆ ನಮ್ಮ ಮನಸ್ಸು ಎಂದಿನಂತೆ ತನ್ನ ಹಳೆಯ ಜಾಡಿನಲ್ಲಿಯೇ ಹರಿಯುತ್ತಾ ವಿಷಯಗಳ ಕಡೆಗೆ ನುಗ್ಗುವದು. ಆದರೆ ಮನಸ್ಸು ತಾನೇ ಮೈಗರೆದರೆ ಆತ್ಮನಲ್ಲಿಯೇ ಸೇರಿಹೋಗುತ್ತದೆ. ಆಗ ಮನಸ್ಸು ಅಮನಸ್ಕವಾಗುತ್ತದೆ; ಆಗ ಆನಂದದಿಂದ ಮುಂದುವರಿಯುತ್ತಾ ಕೂಡಲೆ ಆತ್ಮನನ್ನು ಹಿಡಿದುಬಿಡುತ್ತದೆ. ಆ ಸ್ಥಿತಿಯಲ್ಲಿ ಯೋಗಿಯು ತನ್ನನ್ನು ತಾನೇ ಕಂಡು ತನ್ನಲ್ಲಿ ತಾನು ತೃಪ್ತನಾಗಿರುತ್ತಾನೆ. ನೋಡುವದಕ್ಕೆ ಕರಣವೊಂದು ಬೇಕಿಲ್ಲವೆ? ಎಂದರೆ ಬೇಕಿಲ್ಲ; ಆಗ ನೋಡುವವನೂ ತಾನೇ, ನೋಡಲ್ಪಡುವವನೂ ತಾನೇ, ಸಂತೋಷಪಡುವವನೂ ತಾನೇ. ತನ್ನೊಳಗೆ ತಾನು ಆನಂದಿಸುತ್ತಿರುತ್ತಾನೆ. ಇಂಥ ಸ್ಥಿತಿಯು ನಮ್ಮ ಅನುಭವದಲ್ಲಿಲ್ಲವಲ್ಲ!- ಎಂದು ಕೆಲವರಿಗೆ ಶಂಕೆಯುಂಟಾಗಬಹುದು. ಆದರೆ ಇಂಥ ಸ್ಥಿತಿಯು ನಮ್ಮ ಭಾಗಕ್ಕೆ ಇಲ್ಲವಾದರೂ ಯೋಗಿಗಳ ಅನುಭವದಲ್ಲಿರುತ್ತದೆ. ನಾವು ಇದನ್ನು ಮನಸ್ಸಿಗೆ ತಂದುಕೊಳ್ಳುವದಕ್ಕೆ ಸ್ವಪ್ನವನ್ನೂ ಸುಷುಪ್ತಿಯನ್ನೂ ಉದಾಹರಣೆಗೆ ತೆಗೆದುಕೊಳ್ಳ ಬಹುದು. ಕನಸಿನಲ್ಲಿ ಹೊರಗಿನ ವಿಷಯವು ಯಾವದೂ ಇಲ್ಲದಿದ್ದರೂ ನಮಗೆ ವಿಷಯಾನುಭವವಾಗುವದಿಲ್ಲವೆ? ತನಿನಿದ್ರೆಯಲ್ಲಿ ನಾನು, ಇದು-ಎಂಬ ಭೇದವೇ ಇಲ್ಲದಿದ್ದರೂ ನಾವು ನಮ್ಮ ಸ್ವರೂಪದಿಂದಲೇ ಇದ್ದುಕೊಂಡು ಮಾತಿನಿಂದ ಹೇಳಲಾಗದ ಮನಸ್ಸಿನಿಂದ ಚಿಂತಿಸಲಾಗದ ಸುಖವನ್ನೇ ಅನುಭವಿಸುತ್ತಾ ಇರುವದಿಲ್ಲವೆ? ಇದು ತನ್ನೊಳಗೆ ತಾನು ಆನಂದವನ್ನು ಅನುಭವಿಸುವ ಸ್ಥಿತಿಯಲ್ಲದೆ ಮತ್ತೇನು? ಸುಷುಪ್ತಿಯಲ್ಲಿ ಮತ್ತೊಬ್ಬನು ಮತ್ತೊಂದು ವಸ್ತುವನ್ನು ಒಂದಾನೊಂದು ಕರಣದಿಂದ ನೋಡುವದಿಲ್ಲ, ಕೇಳುವದಿಲ್ಲ, ಮೂಸುವದಿಲ್ಲ, ಮುಟ್ಟುವದಿಲ್ಲ; ಅಂಥ ನಿರ್ವಿಕಲ್ಪಾನುಭವವದು! ನಿರ್ವಿಕಲ್ಪಾನುಭವದ ಮಾದರಿಯನ್ನು ತಿಳಿಸುವ ದಕ್ಕೆಂದೇ ಈಶ್ವರನು ನಮ್ಮಗಳಿಗೆ ಗಾಢನಿದ್ರೆಯ ಅನುಭವವನ್ನು ಅನುಗ್ರಹಿಸಿರುತ್ತಾನೆಂದು ತೋರುವದು. ಪಾತಂಜಲಯೋಗದಲ್ಲಿ ಮನಸ್ಸನ್ನು ಸ್ಥಿರಗೊಳಿಸಿಕೊಳ್ಳುವದಕ್ಕೆ ಉಪಾಯ ಗಳನ್ನು ಹೇಳುವ ಸಂದರ್ಭದಲ್ಲಿ ವೀತರಾಗರ ಹೃದಯವನ್ನು ಚಿಂತಿಸಬೇಕೆಂದು ವಿಧಿಸಿದ ಬಳಿಕ ಸ್ವಪ್ನನಿದ್ರೆಗಳನ್ನು ಧ್ಯಾನಿಸಬೇಕೆಂದು ಉಪದೇಶಿಸಿರುವದರ ರಹಸ್ಯವೂ ಇದೇ ಇರಬಹುದೆಂದು ತೋರುತ್ತದೆ.

ಧ್ಯಾನಯೋಗಿಯು ಎಚ್ಚರದಲ್ಲಿಯೇ ವಿಷಯಗಳನ್ನೆಲ್ಲ ದೂಡಿ ತನ್ನ ಅಹಂತೆಯನ್ನು ಕಳಚಿ ಪರಮಾತ್ಮನೆಂಬ ಅಮೃತಸಮುದ್ರದಲ್ಲಿ ಮುಳುಗಿಬಿಡುತ್ತಾನೆ. ಅಮೃತ ಸಮುದ್ರದಲ್ಲಿ ಹೇಗೆ ಬಿದ್ದರೂ ಭಯವಿಲ್ಲ, ಯಾವಾಗಲೂ ಆನಂದವೇ. ಸಾಮಾನ್ಯ ಪ್ರಾಣಿಗಳು ಪ್ರಕೃತಿಗೆ ಪರವಶರಾಗಿ ನಿದ್ರೆಯ ದ್ವಾರದಿಂದ ಪರಮಾತ್ಮಸಮುದ್ರದಲ್ಲಿ ಬೀಳುವರು. ಯೋಗಿಯನ್ನು ಯಾರೂ ಹೊರಗಿನಿಂದ ಆ ಕಡಲಿಗೆ ತಳ್ಳುವದಿಲ್ಲ. ಈಜುವ ವಿದ್ಯೆಯಲ್ಲಿ ಕುಶಲನಾದವನು ದಢಿಲ್ಲೆಂದು ಸಮುದ್ರದೊಳಕ್ಕೆ ಹಾರಿ ಬೀಳುವಂತೆ, ಯೋಗಿಯೂ ತಾನೇ ಈ ಆನಂದಸಮುದ್ರದೊಳಕ್ಕೆ ಬೀಳುತ್ತಾನೆ. ಯಾರು ಹೀಗೆ ಆತ್ಮನೊಡನೆ ಒಂದಾಗಿ ನಿರ್ವಿಕಲ್ಪವಾದ ಸಮಾಧಿಯನ್ನು ಅನುಭವಿಸಿ ಹೊರಕ್ಕೆ ಬರುವರೋ ಅವರು ಪರಮೇಶ್ವರನ ಸಂದೇಶಹಾರಿಗಳು. ಅಂಥವರ ದರ್ಶನ, ಪಾದಸ್ಪರ್ಶನ, ಪೂಜನ, ಸಂಭಾಷಣೆ ಮುಂತಾದವುಗಳನ್ನು ಮಾಡುವವರು ಧನ್ಯರು.

**ಸುಖಮಾತ್ಯಂತಿಕಂ ಯತ್ ತದ್ಬುದ್ಧಿಗ್ರಾಹ್ಯಮತೀನ್ದ್ರಿಯಮ್ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥** (೬-೨೧)

ಧ್ಯಾನಯೋಗಿಯು ಪಡೆಯುವ ಸುಖವು ಆತ್ಯಂತಿಕವಾದದ್ದು. ಇಂದ್ರಿಯಗಳಿಂದ ವಿಷಯಸೇವನೆಯನ್ನು ಮಾಡುವದರಿಂದಾಗುವ ಸುಖವು ಅತ್ಯಲ್ಪಕಾಲವಿರತಕ್ಕದ್ದು. ಆ ಸುಖವು ಬರಬರುತ್ತಾ ವಿಷವಾಗಿ ಪರಿಣಮಿಸುವುದು. ಆದರೆ ಈ ಧ್ಯಾನ ಯೋಗಿಗೆ ಸಿಕ್ಕುವ ಅತೀಂದ್ರಿಯವಾದ ಸುಖವು ಕೊನೆಯನ್ನು ಕಾಣದ್ದು, ಎಂದೆಂದಿಗೂ ಸುಖವಾಗಿಯೇ ಇರುವದು. ಇದು ಬುದ್ಧಿಗ್ರಾಹ್ಯವಾಗಿರುತ್ತದೆ. ಸಾಮಾನ್ಯವಾಗಿ ಹೊರಗಿನ ಸ್ಥೂಲವಿಷಯಗಳ ಸೇವನೆಯಿಂದ ಆಗುವ ಸುಖವನ್ನು ಅರಿಯುವವರಿಗೆ ಬುದ್ಧಿಯಿಂದ ಮಾತ್ರವೇ ಗ್ರಹಿಸಬಲ್ಲ, ಗಣಿತವಿಚಾರ, ತರ್ಕ, ಅಲಂಕಾರಶಾಸ್ತ್ರ-ಮುಂತಾದವುಗಳಿಂದ ಬರುವ, ಸುಖದ ಸವಿಯನ್ನು ಸಂಪಾದಿಸಿಕೊಳ್ಳುವದೇ ಕಡುಕಷ್ಟವಾಗಿರುತ್ತದೆ; ಇನ್ನು ಮನಸ್ಸಿಗೂ ವಿಷಯವಲ್ಲದ ಈ ನಿರ್ವಿಕಲ್ಪಾವಸ್ಥೆಯ ಆನಂದವನ್ನು ಸವಿಯುವ ಕಲ್ಪನೆಯೂ ಅವರಿಗೆ ಇರುವದಿಲ್ಲವೆಂಬುದನ್ನು ಹೇಳಬೇಕೆ? ತತ್ತ್ವವಿಚಾರದಿಂದ, ಒಬ್ಬರ ಪ್ರೋತ್ಸಾಹದಿಂದ, ಅಥವಾ ಪ್ರಕೃತಿಯ ಘಟನೆಗಳ ಬಲಾತ್ಕಾರದಿಂದ ಆತ್ಮತತ್ತ್ವದಲ್ಲಿ ನಿಂತರೆ ಎಷ್ಟು ಕಾಲ ಹಾಗೆಯೇ ಇರುವದಕ್ಕಾದೀತು? ನಮಗೆ ಏನಾದರೊಂದು ಭಯ, ಆಶ್ಚರ್ಯ-ಮುಂತಾದ ಬಲವಾದ ಭಾವನೆಯು ಉಂಟಾದಾಗ ಬೆರಗಾಗಿ ನಮ್ಮ ಆತ್ಮನ ಕಡೆಗೆ ತಳ್ಳಲ್ಪಟ್ಟವರಂತೆ ನಮ್ಮಲ್ಲಿ ನಾವು ನಿಂತುಬಿಡುವೆವು ಅಥವಾ ಸುಷುಪ್ತಿ, ಮದ, ಮೂರ್ಛೆ-ಮುಂತಾದವುಗಳಲ್ಲಿ ನಾವು

ಇರುವಾಗಲೂ ನಮಗೆ ಹೊರಗಿನ ಅರಿವೇ ಇಲ್ಲದೆ ನಮಗೂ ಅರಿವಿಲ್ಲದೆಯೇ ಆತ್ಮನಲ್ಲಿ ಅವಸ್ಥಾನವಾಗುವದು. ಆದರೆ ಈ ಬಗೆಯ ಕಾರಣದಿಂದ ಎಷ್ಟು ಹೊತ್ತು ತಾನೆ ಆತ್ಮಸ್ಥಿತಿಯು ದೊರಕೀತು? ನಾವು ಆ ಸ್ಥಿತಿಯಿಂದ ಹೊರಕ್ಕೆ ಬಂದಾಗಲೂ ಗಾಬರಿಯಾಗಿ ಎಲ್ಲಿಯೋ ವಿದೇಶಕ್ಕೆ ನಮ್ಮ ಇಷ್ಟವಿಲ್ಲದೆ ಹೋಗಿ ಬಂದವರಂತೆ ಮನಃಸ್ಥಿತಿಯೇ ಬದಲಾಗಿಬಿಡುವ ಸಂಭವವಿದೆ. ಆದರೆ ಧ್ಯಾನಯೋಗಿಯು ತಾನೇ ಪ್ರಯತ್ನಪೂರ್ವಕವಾಗಿ ಹೋಗಿ ಆತ್ಮನಲ್ಲಿ ನೆಲೆನಿಂತರೆ ಹಾಗಲ್ಲ. ಅಲ್ಲಿಂದ ಅವನು ಚ್ಯುತನಾಗುವ ಸಂಭವವೇ ಇಲ್ಲ. ಒಂದು ಸಲ ಆ ಆನಂದವನ್ನು ಅನುಭವಿಸಿದವನಿಗೆ ಅದಕ್ಕಿಂತ ಹೆಚ್ಚಿನದೊಂದು ಇದೆ ಎಂಬ ಭಾವನೆಯೇ ಹೋಗಿಬಿಡುತ್ತದೆ.

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥** (೬-೨೨)
**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್॥**(೬-೨೩)

ಯೋಗಿಯು ತತ್ತ್ವವನ್ನು ಸಾಕ್ಷಾತ್ತಾಗಿ ಕಂಡವನು. ಅದರಿಂದ ಅವನು ಎಂದಿಗೂ ಜಾರುವ ಸಂಭವವಿರುವದಿಲ್ಲ. ಒಂದು ಬ್ಯಾಂಕುಚೆಕ್ಕನ್ನು ಕೊಟ್ಟು ನಗದಾಗಿ ಹಣವನ್ನು ಪಡೆದುಕೊಂಡವನಂತೆ ಆತ್ಮಾನಂದವೆಂದರೇನೆಂಬುದನ್ನು ತಾನೇ ಕಂಡುಕೊಂಡಿರುತ್ತಾನೆ. ಈ ಲೋಕದಲ್ಲಿ ಯಾವದೊಂದನ್ನು ಪಡೆದು ಕೊಂಡರೂ ಅದಕ್ಕಿಂತ ಇನ್ನೂ ಹೆಚ್ಚಿನ ಲಾಭವೊಂದು ಇದೆ ಎಂಬ ಭಾವನೆಯು ಹೋಗುವದಿಲ್ಲ. ಆತ್ಮಲಾಭವು ಇಂಥದ್ದಲ್ಲ; ಅದನ್ನು ಪಡೆದುಕೊಂಡರೆ ಎಲ್ಲವನ್ನೂ ಪಡೆದುಕೊಂಡಂತೆ ಆಗಿಬಿಡುವದು, ಅತೃಪ್ತಿಯ ಸುಳಿವೇ ಇರುವದಿಲ್ಲ. ಆತ್ಮಾನಂದ ದಲ್ಲಿರುವವನಿಗೆ ಹೊರಗಿನ ದುಃಖಗಳು ಎಷ್ಟೇ ಹೆಚ್ಚಿನವಾಗಲಿ ಅವುಗಳಿಂದ ಎಳ್ಳಷ್ಟೂ ಚಿತ್ತವು ಚಂಚಲವಾಗುವದಿಲ್ಲ. ಇಷ್ಟೇ ಅಲ್ಲ, ಆತ್ಮಾನಂದವನ್ನು ಸವಿಯುವ ಸಂಭ್ರಮದಲ್ಲಿ ಅವನಿಗೆ ಲೌಕಿಕದುಃಖಗಳ ಅರಿವೇ ಆಗುವದಿಲ್ಲ. ಕನಸಿನಲ್ಲಿ ತನ್ನ ಆಸ್ತಿಯೆಲ್ಲಾ ನಷ್ಟವಾಯಿತೆಂದರೆ, ಕನಸಿನ ತನ್ನ ಮಕ್ಕಳು ಸತ್ತರೆಂದರೆ, ಅಧಿಕಾರವೇ ಮುಂತಾದವುಗಳೆಲ್ಲ ತೀರಿದವೆಂದರೆ, ಎಚ್ಚರವಾಗಿರುವವನಿಗೆ ಹೇಗೆ ಹಾಸ್ಯದ ಮಾತಾಗಿ ಕಾಣುವದೋ ಹಾಗೆಯೇ ವ್ಯವಹಾರದ ದುಃಖಗಳ ವಿಷಯವೂ ಧ್ಯಾನಯೋಗಿಗೆ ಪರಿಹಸನೀಯವಾಗಿಯೇ ಕಾಣುತ್ತಿರುವವು.

ಇದೇ ಯೋಗವು. ಯೋಗವೆಂದರೆ ಕೂಡುವದು, ಒಂದರೊಡನೆ ಸೇರುವದು. ಆದರೆ ನಾವು ವರ್ಣಿಸುತ್ತಿರುವ ಧ್ಯಾನಯೋಗದಲ್ಲಿ ಹೊಸದಾಗಿ ಒಂದನ್ನು ಸೇರಿ ಕೊಳ್ಳುವ ಸಂಭವವೇನೂ ಇಲ್ಲ. ಪರಮಾತ್ಮನು ಯೋಗಿಯ ಸ್ವರೂಪವೇ

ಆಗಿರುವದರಿಂದ ಅವನನ್ನು ಹೊಸದಾಗಿ ಸೇರಿಕೊಳ್ಳುವದೆಂದರೇನು? ಆದ್ದರಿಂದ ಇಲ್ಲಿ ಯೋಗ ಎಂಬ ಶಬ್ದಕ್ಕೆ ಸೇರಿಕೊಳ್ಳುವದು ಎಂಬ ಅರ್ಥವು ಹೊಂದುವದಿಲ್ಲ. ಇದು ದುಃಖಸಂಯೋಗದ ವಿಯೋಗವು. ಇಂದ್ರಿಯಗಳಿಂದ ವಿಷಯಗಳನ್ನು ಮುಟ್ಟಿದರೆ ದುಃಖವೇ ಆಗುವದೆಂದು ನಮ್ಮೆಲ್ಲರ ಅನುಭವದಲ್ಲಿಯೂ ಇದೆ. ಒಂದು ವೇಳೆ ಸ್ವಲ್ಪ ಸುಖಾಭಾಸವು ತೋರಿಕೊಂಡರೂ ಕೊನೆಯಲ್ಲಿ ಆ ಸುಖವೆಂಬುದೂ ದುಃಖಕ್ಕೆ ಕಾರಣವಾಗುವದರಿಂದ ಇಂದ್ರಿಯವ್ಯವಹಾರವೆಲ್ಲವೂ ದುಃಖಸಂಯೋಗವೇ ಆಗಿರುತ್ತದೆ. ಈ ಧ್ಯಾನಯೋಗದಲ್ಲಿ ದುಃಖಸಂಯೋಗದ ವಿಯೋಗವು, ಅಗಲುವಿಕೆಯು, ಆಗುತ್ತದೆ; ಆದ್ದರಿಂದ ಇದನ್ನು ಯೋಗ ಎಂದು ವಿಪರೀತಲಕ್ಷಣೆಯಿಂದ ಕರೆಯುತ್ತಾರೆ. ಅಮಂಗಲವಾದ ವಾರವನ್ನು ಮಂಗಲವಾರವೆಂದು ಕರೆಯುವಂತೆ ದುಃಖದ ವಿಯೋಗವನ್ನೇ ಇಲ್ಲಿ ಯೋಗವೆಂದು ಕರೆದಿರುತ್ತದೆ.

ಇಂಥದ್ದು ಈ ಧ್ಯಾನಯೋಗದ ಸ್ವರೂಪವು. ಯಾರು ಶಾಸ್ತ್ರೀಯಕರ್ಮಗಳನ್ನು ಈಶ್ವರಾರ್ಪಣಬುದ್ಧಿಯಿಂದ ಮಾಡಿ ಭಗವದಾರಾಧನೆಯಿಂದ ಚಿತ್ತಶುದ್ಧಿಯನ್ನು ಪಡೆದು ವಿಷಯಗಳಲ್ಲಿ ವೈರಾಗ್ಯವನ್ನು ಹೊಂದಿ ಕರ್ಮಸಂನ್ಯಾಸಪೂರ್ವಕವಾಗಿ ನಿತ್ಯವೂ ಆತ್ಮಚಿಂತನೆಯಲ್ಲಿಯೇ ಕಾಲಕ್ಷೇಪವನ್ನು ಮಾಡುತ್ತಿರುವರೋ ಅಂಥ ಮಹಾತ್ಮರಿಗೆ ಈ ಯೋಗದ ಆನಂದವು ದೊರೆಯುವದು. ಪೂರ್ವದಲ್ಲಿ ಕಾಲುನಡಗೆಯಿಂದ ಕಾಶಿಗೆ ಯಾತ್ರಿಕರಾಗಿ ಹೋಗಿ ಅಲ್ಲಿ ಗಂಗೆಯಲ್ಲಿ ಮಿಂದು ವಿಶ್ವನಾಥನನ್ನು ಆರಾಧಿಸಿ ತಾವು ಬರುವಾಗ ಕಾವಡಿಯಲ್ಲಿ ಗಂಗೆಯನ್ನು ಹೊತ್ತು ತಮ್ಮ ಊರಿಗೆ ಬಂದು ಜನರಿಗೆಲ್ಲ ಸಮಾರಾಧನೆಯನ್ನು ಮಾಡಿ ಒಂದೊಂದು ಉದ್ಧರಣೆಯ ಪ್ರಮಾಣದಲ್ಲಿ ಗಂಗೆಯನ್ನು ತೀರ್ಥವಾಗಿ ಕೊಡುತ್ತಿದ್ದ ಪದ್ಧತಿಯು ಈಗಲೂ ನಮ್ಮಲ್ಲಿ ಕೆಲವರಿಗೆ ನೆನಪಿನಲ್ಲಿರುತ್ತದೆಯಲ್ಲವೆ? ಆದರಂತೆ ಧ್ಯಾನಯೋಗಿಗಳು ಆತ್ಮಾನುಭವದ ಗಂಗೆಯನ್ನು ತಂದು ನಮಗೆಲ್ಲ ಹಂಚುತ್ತಾರೆ; ತಾವೂ ಆನಂದಿಗಳಾಗಿ ತಮ್ಮ ಉಪದೇಶದಿಂದ ಸುತ್ತುಮುತ್ತಲವರನ್ನೂ ಆನಂದಕರವಾದ ಉಪದೇಶಗಳಿಂದ ಸೇಚನಮಾಡಿ ಧನ್ಯರೆನಿಸುತ್ತಾರೆ. ಇಂಥ ಧ್ಯಾನಯೋಗಿಗಳು ಎಷ್ಟು ಪ್ರಮಾಣದಲ್ಲಿರುವರೋ, ಈ ಪ್ರಪಂಚವೂ ಅಷ್ಟು ಪ್ರಮಾಣದಿಂದ ಸುಖಮಯವಾಗಿರುತ್ತದೆ.

# ೪೫. ಯೋಗಪ್ರಾಪ್ತಿಗಾಗಿ ಮಾಡಬೇಕಾದ ಪ್ರಯತ್ನ ೬-(೨೪-೨೬)

(೧.೬.೪೭)

ಭಗವದ್ಗೀತೆಯಲ್ಲಿ ಏಳುನೂರೇ ಶ್ಲೋಕಗಳಿವೆ. ಇಷ್ಟು ಸಣ್ಣ ಗ್ರಂಥದಲ್ಲಿಯೇ ಒಂದೇ ವಿಷಯವನ್ನು ಮತ್ತೆ ಮತ್ತೆ, ಬೇಸರವನ್ನು ಹುಟ್ಟಿಸದ ಹಾಗೆ, ಬೇರೆ ಬೇರೆಯ ರೀತಿಯಲ್ಲಿ ವರ್ಣಿಸಿ ಉಪದೇಶಿಸಿರುತ್ತದೆ. ಅಧ್ಯಾತ್ಮವಿಚಾರವು ಮನಸ್ಸಿಗೆ ಹಿಡಿಯುವದು ಕಷ್ಟ; ಆದ್ದರಿಂದ ಅದನ್ನೇ ಮತ್ತೆಮತ್ತೆ ತಿರುಗಿಸಿ ತಿರುಗಿಸಿ ಹೇಳಬೇಕಾಗುತ್ತದೆ. ಇಂಥ ಸಂದರ್ಭದಲ್ಲಿ ಪುನರುಕ್ತಿ ಎಂಬುದು ದೋಷವಲ್ಲ; ಅದೊಂದು ಭೂಷಣವೇ. ಪರಮಾರ್ಥತತ್ತ್ವವನ್ನು ತಿಳಿಯದೆ ಇರುವದರಿಂದ ಕಾಮ್ಯಕರ್ಮಗಳೂ ಅವುಗಳಿಂದ ಸುಖದುಃಖಗಳನ್ನು ಅನುಭವಿಸುವದಕ್ಕಾಗಿ ಪುನಃ ಪುನಃ ಶರೀರಗ್ರಹಣವೂ ಆಗುತ್ತಿರುತ್ತವೆ. ಪರಮಾರ್ಥತತ್ತ್ವವನ್ನು ಅರಿತುಕೊಂಡರೆ ಈ ಸಂಸಾರವು ತೊಲಗಿಬಿಡುತ್ತದೆ. ಇದಿಷ್ಟೇ ಉಪದೇಶಮಾಡಬೇಕಾಗಿರುವದು. ಆದರೆ ಅವಿದ್ಯೆಯೆಂಬುದು ನಮ್ಮಿಂದ ಎಷ್ಟು ತಪ್ಪುಗಳನ್ನು ಹೇಗೆ ಮಾಡಿಸುವದೆಂದು ಲೆಕ್ಕಮಾಡಿ ಹೇಳುವದಕ್ಕೆ ಬರುವದಿಲ್ಲ. ಅವಿದ್ಯಾವಿಲಾಸದಿಂದ ಮತ್ತೆ ಮತ್ತೆ ಕಾಮ್ಯಕರ್ಮಗಳಿಗೆ ವಶರಾಗಿ ಚಿತ್ರವಿಚಿತ್ರವಾದ ದುಃಖಗಳನ್ನು ಅನುಭವಿಸುತ್ತಿರುವದೇ ನಮ್ಮ ಹಣೆಯಬರಹವಾಗಿ ಬಿಟ್ಟಿದೆ.

ನಮಗೆಲ್ಲ ಅವಿದ್ಯೆಯ ಅಂಧಕಾರದ ಮಬ್ಬು ಕವಿದುಕೊಂಡುಬಿಟ್ಟಿದೆ. ಅದರ ಕ್ಷೇತ್ರದಲ್ಲಿರುವವರೆಗೆ ನಮಗೆ ದುಃಖಪರಂಪರೆಯ ಕೋಟಲೆಯು ತಪ್ಪಿದ್ದಲ್ಲ. ಆದರೆ ಪರಮಾತ್ಮನ ಕಡೆಗೆ ತಿರುಗಿದೆವೋ ಇಲ್ಲವೊ, ಈ ಕತ್ತಲೆಯೆಲ್ಲ ಹಾರಿಬಿಡುತ್ತದೆ. ಪರಮಾತ್ಮಚಿಂತನೆ. ವಿಷಯಚಿಂತನೆ ಇವೆರಡೂ ಒಂದು ಕಡೆಯಲ್ಲಿ ಇರುವ ಹಾಗಿಲ್ಲ. ವಿಷಯಚಿಂತನೆಯನ್ನು ಬಿಟ್ಟಷ್ಟೂ ನಮಗೆ ಸುಖ, ಪರಮಾತ್ಮನ ಚಿಂತನೆ ಯಿಂದ ದೂರವಾದಷ್ಟೂ ನಮಗೆ ದುಃಖ. ಈ ಸರಳವಾದ ಸುಲಭವೇದ್ಯವಾದ ತತ್ತ್ವವನ್ನು ನಾವು ಎಂದಿಗೆ ಕಲಿಯುವದು?

**ಯನ್ಮುಹೂರ್ತಂ ಕ್ಷಣಂ ವಾಪಿ ವಾಸುದೇವೋ ನ ಚಿಂತ್ಯತೇ ।**
**ಸಾ ಹಾನಿಸ್ತನ್ಮಹಚ್ಛಿದ್ರಂ ಸಾ ಭ್ರಾಂತಿಃ ಸಾ ಚ ವಿಕ್ರಿಯಾ ॥**

ಭಗವಂತನನ್ನು ಒಂದು ಮುಹೂರ್ತ, ಕಡೆಗೆ ಒಂದು ಕ್ಷಣ, ಚಿಂತಿಸುವದನ್ನು ಬಿಟ್ಟರೂ ಸಾಕು, ಅದೇ ಹಾನಿಯು, ಅದೇ ದುಃಖಗಳು ಪ್ರವೇಶಮಾಡುವದಕ್ಕೆ ನಮ್ಮ ಸುಖದುರ್ಗದ ಗೋಡೆಯಲ್ಲಾದ ಬಿರುಕು, ಅದೇ ನಮ್ಮ ಚಿತ್ತದ ಭ್ರಾಂತಿ,

ಅದೇ ನಮ್ಮ ಸ್ವರೂಪದಲ್ಲಾದ ವಿಕಾರವು-ಎಂಬ ಪುರಾಣವಚನವು ಅಕ್ಷರಶಃ ನಿಜವಾಗಿರುತ್ತದೆ. ಲೋಕದಲ್ಲಿ ಕರ್ಮವನ್ನು ಮಾಡದೆ ಜಾತಿಸಾಂಕರ್ಯವೇ ಮುಂತಾದ ದೋಷದಿಂದ ಕೂಡಿದವರನ್ನು 'ಪತಿತ' ಎಂದು ಕರೆಯುವದುಂಟು. ಆದರೆ ಪರಮಾತ್ಮನ ಚಿಂತನೆಯನ್ನು ಸ್ವಲ್ಪ ಹೊತ್ತು ಬಿಟ್ಟರೂ ಯೋಗಿಯಾದವನು ನಿಜವಾಗಿ 'ಪತಿತ' (ತತ್ತ್ವದಿಂದ ಉರುಳಿಬಿದ್ದವನು) ಆಗುತ್ತಾನೆ. ಪರಮಾತ್ಮಚಿಂತನೆಯ ರೂಪವಾದ ಯೋಗದ ಹೆಚ್ಚುಗಾರಿಕೆಯು ಇದರಿಂದ ಸ್ಪಷ್ಟವಾಗುತ್ತದೆ.

ಯೋಗವೆಂದರೇನೆಂಬುದರ ವರ್ಣನೆಯು ಹಿಂದಿನ ಉಪನ್ಯಾಸದಲ್ಲಿ ಆಗಿರುತ್ತದೆ. ಈಗ ಆ ಯೋಗವನ್ನು ಪಡೆದುಕೊಳ್ಳುವದಕ್ಕೆ ಮಾಡಬೇಕಾದ ಯತ್ನವನ್ನು ತಿಳಿಸುತ್ತಾರೆ. ಹಿಂದೆ ಇದನ್ನೂ ಒಂದು ರೀತಿಯಲ್ಲಿ ತಿಳಿಸಿಯೇ ಇದೆಯಾದರೂ ವಿಶೇಷವಾಗಿ ಈ ದಿಕ್ಕಿನಲ್ಲಿ ಪ್ರಯತ್ನಮಾಡಬೇಕೆಂದು ಒತ್ತಿಹೇಳುವದಕ್ಕಾಗಿ ಮತ್ತೆ ಮುಖ್ಯಭಾಗವನ್ನು ತಿಳಿಸುತ್ತಿದ್ದಾರೆ. ಹಿಂದೆ ಹೇಳಿದ ಯೋಗಕ್ಕಾಗಿ ಮನೋನಿಶ್ಚಯವನ್ನು ಮಾಡಿಕೊಂಡು, "ಹೇಗಾದರೂ ಈ ಕಾರ್ಯವನ್ನು ಸಾಧಿಸಿಯೇ ಬಿಡುತ್ತೇನೆ, ಇದರಿಂದ ಎಷ್ಟು ಕಷ್ಟಪರಂಪರೆ ಒದಗಿದರೂ ಚಿಂತೆಯಿಲ್ಲ" ಎಂದು ದೃಢಸಂಕಲ್ಪವನ್ನು ಮಾಡಿಕೊಂಡು, ಪ್ರಯತ್ನಿಸಬೇಕು. ಮನಸ್ಸಿನಲ್ಲಿ ನಿಶ್ಚಯಿಸಿಕೊಳ್ಳುವದೊಂದೇ ಸಾಲದು; ಮನಸ್ಸಿನಲ್ಲಿ ಬೇಸರವನ್ನು ತಳೆಯದೆ ಒಂದೇ ಸಮನೆ ಪ್ರಯತ್ನವನ್ನು ಮಾಡಬೇಕು. "ಮರಳಿ ಯತ್ನವ ಮಾಡು" ಎಂಬ ಲೋಕೋಕ್ತಿಯು ಈ ಸಂದರ್ಭಕ್ಕೆ ಬಹಳ ಹೊಂದಿಕೆಯಾಗಿರುತ್ತದೆ. ಇದರಲ್ಲಿ ಮಾಡಬೇಕಾದ ಮುಖ್ಯಪ್ರಯತ್ನವು ಯಾವದೆಂದರೆ:

**ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥** (೬-೨೪)
**ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿನ್ತಯೇತ್ ॥** (೬-೨೫)

ಮೊಟ್ಟಮೊದಲು ಕಾಮಗಳನ್ನು ಬಿಡಬೇಕು. ಕರ್ಮಗಳಿಗೆ ಸಂಕಲ್ಪವೇ ಕಾರಣವು; ಆದ್ದರಿಂದ ಸಂಕಲ್ಪವನ್ನು ಮಾಡುವ ಅಭ್ಯಾಸವನ್ನು ತಪ್ಪಿಸಿಕೊಂಡರೆ ಕಾಮಗಳು ಹುಟ್ಟಡಗಿಹೋಗುವವು. ಅಧ್ಯಾತ್ಮಸಾಧನೆಯು ಫಲಕಾರಿಯಾಗುವದಕ್ಕೆ ಕಾಮವೇ ಅಡ್ಡಿ. ಶ್ರುತಿಯಲ್ಲಿ ಹೇಳಿರುವದೇನು? "ಈ ಸಾಧಕನ ಹೃದಯದಲ್ಲಿರುವ ಕಾಮಗಳೆಲ್ಲವೂ ಎಂದಿಗೆ ಬಿಡುಗಡೆಯಾಗುವವೋ, ಆಗಲೇ ಮರ್ತ್ಯನು ಅಮೃತನಾಗುವನು, ಇಲ್ಲಿಯೇ ಬ್ರಹ್ಮವನ್ನು ಸೇರುವನು" ಆದ್ದರಿಂದ ಸಂಕಲ್ಪದಿಂದ ಆಗುವ

ಕಾಮಗಳೆಲ್ಲವನ್ನೂ ಒಂದೂ ಉಳಿಯದಂತೆ ಮೊದಲು ತೊಲಗಿಸಿಕೊಳ್ಳಬೇಕು. ಬ್ರಹ್ಮವನ್ನು ಪಡೆದುಕೊಂಡರೆ ಸಕಲಕಾಮಗಳೂ ದೊರೆಯುತ್ತವೆ-ಎಂದು ಶ್ರುತಿಯಲ್ಲಿದೆ; ಸಕಲಕಾಮಗಳನ್ನೂ ತ್ಯಜಿಸಬೇಕೆಂದು ಶಾಸ್ತ್ರದಲ್ಲಿ ಹೆಜ್ಜೆಹೆಜ್ಜೆಗೂ ಉಪದೇಶಿಸಿರುತ್ತದೆ. ಇವೆರಡೂ ಒಂದಕ್ಕೊಂದು ವಿರುದ್ಧವಾದ ಉಪದೇಶಗಳಲ್ಲವೆ? ಎಂದರೆ ಅಲ್ಲ. ಏಕೆಂದರೆ ಸಕಲಕಾಮಗಳನ್ನೂ ಪಡೆಯುವ ಯತ್ನವನ್ನು ಬಿಟ್ಟವನಿಗೇ ಸಕಲ ಕಾಮಗಳೂ ಸಿಕ್ಕುವವು. ಈ ವಿರೋಧಾಭಾಸವನ್ನು ಮನಗಾಣುವದಕ್ಕಾಗಿ ಒಂದು ದೃಷ್ಟಾಂತವನ್ನು ತಿಳಿಸುವೆನು. ಒಬ್ಬ ಮನುಷ್ಯನು ನದಿಯ ನೀರಿನೊಳಗೆ ದೂರದಲ್ಲಿ ಥಳಗುಟ್ಟುತ್ತಿರುವ ಪದಾರ್ಥವನ್ನು ಕಂಡು ಅದನ್ನು ತೆಗೆದುಕೊಳ್ಳಬೇಕೆಂದು ಮತ್ತೆ ಮತ್ತೆ ಮುಳುಗುತ್ತಿದ್ದನು. ಆದರೆ ಅವನು ಮುಳುಗಿದಾಗ ಮಾತ್ರ ಅದು ಕೈಗೆ ಎಟುಕುತ್ತಿರಲಿಲ್ಲ. ಆದ್ದರಿಂದ ತಾನು ಪದಾರ್ಥವನ್ನು ಸರಿಯಾಗಿ ಗುರಿಯಿಟ್ಟು ನೋಡಿಕೊಂಡು ಮುಳುಗಿದರೆ ಅದು ಸಿಕ್ಕಿಯೇ ತೀರುವದೆಂದು ನಿಶ್ಚಯಿಸಿ ಅವನು ಮತ್ತೆ ಮತ್ತೆ ಮುಳುಗಿ ಪ್ರಯತ್ನಪಡುತ್ತಿದ್ದನು. ಸುಮ್ಮನೆ ಆಯಾಸಪಡುತ್ತಿದ್ದ ಇವನನ್ನು ಕಂಡು ನದಿಯ ದಡದ ಮೇಲಿದ್ದ ಒಬ್ಬ ಸಾಧುವು "ಏನಯ್ಯ, ಅದೇಕೆ ಇಷ್ಟೊಂದು ಶ್ರಮಪಡುತ್ತಿದ್ದೀಯೆ?" ಎಂದು ಕೇಳಿದನು. ಆದರೆ ಮುಳುಗುತ್ತಿದ್ದ ಮನುಷ್ಯನಿಗೆ ನೀರಿನೊಳಗಿದ್ದದ್ದು ಒಂದು ರತ್ನವೆಂಬ ನಿಶ್ಚಯವಾಗಿದ್ದದ್ದರಿಂದ ತನ್ನ ರಹಸ್ಯವನ್ನು ತಿಳಿಸಲಾರದೆ ಮತ್ತೆ ಮತ್ತೆ ಮುಳುಗುತ್ತಲೇ ಇದ್ದನು. ಸಾಧುವು ವಿರಕ್ತನೂ ಪರೋಪಕಾರಿಯೂ ಆಗಿದ್ದರಿಂದ ಆ ಮನುಷ್ಯನು ಮಾಡಿದ ಅನಾದರವನ್ನು ಲೆಕ್ಕಿಸದೆ "ಅಪ್ಪ, ನೀನು ಕಾಣುತ್ತಿರುವದು ರತ್ನವಲ್ಲ; ಅದು ರತ್ನದ ಪ್ರತಿಬಿಂಬ. ನಿಜವಾದ ರತ್ನವು ಅಗೋ ಆ ಮರದ ಕೊಂಬೆಯ ಮೇಲಿದೆ, ನೋಡು!" ಎಂದು ತೋರಿಸಿದನು. ಆ ಮನುಷ್ಯನು ಮುಳುಗುವ ಪ್ರಯತ್ನವನ್ನು ಕೈಬಿಟ್ಟು ಮರವನ್ನೇರಿ ನೋಡಲು ಅಲ್ಲಿ ನಿಜವಾದ ರತ್ನವಿತ್ತು. ನಾವುಗಳೂ ಹಾಗೆಯೇ ಹೊರಗಿನ ವಸ್ತುಗಳೇ ನಮ್ಮ ಕಾಮಕ್ಕೆ ಯೋಗ್ಯವಾದವೆಂದು ತಿಳಿದು, ಆ ವಿಷಯಗಳನ್ನು ಸಂಗ್ರಹಿಸುವದಕ್ಕೆ ಪ್ರಯತ್ನಪಡುತ್ತೇವೆ. ಆ ವಿಷಯಗಳು ಸಿಕ್ಕದೆ, ಅಥವಾ ಸಿಕ್ಕಿ ದಂತಾದರೂ ಬೇಗ ನಷ್ಟವಾಗಿ, ನಮ್ಮನ್ನು ಗೋಳುಗುಟ್ಟಿಸುತ್ತಿರುವವು. ಆ ಅವಿವೇಕಿಯು ನೀರಿನಲ್ಲಿ ಮತ್ತೆ ಮತ್ತೆ ಮುಳುಗುತ್ತಿದ್ದಂತೆಯೇ ನಾವೂ ಈ ಕಾಮಾಭಾಸಗಳಿಗಾಗಿ ಸಂಸಾರನದಿಯಲ್ಲಿ ಮತ್ತೆ ಮತ್ತೆ ಮುಳುಗಿ ಸಂಕಟಪಡುತ್ತಿರುವೆವು. ನಿಜವಾದ ಕಾಮಗಳು ನಮ್ಮ ಒಳಗೇ ಇರುವವು. ನಮ್ಮೊಳಗಿರುವ ಕಾಮಗಳನ್ನು ಹೊರಗೆ ಹುಡುಕುತ್ತಿದ್ದರೆ ಅವು ಸಿಕ್ಕುವದು ಹೇಗೆ? ಆದ್ದರಿಂದ ಹೊರಗಿನ ಪ್ರತಿಬಿಂಬರೂಪವಾದ ಕಾಮಗಳನ್ನೆಲ್ಲ ಕೈಬಿಟ್ಟು ನಾವು ಒಳಗಡೆಗೆ ತಿರುಗಬೇಕು.

ಮನಸ್ಸಿನಿಂದಲೇ ಇಂದ್ರಿಯಗಳನ್ನು ಬಿಗಿಹಿಡಿಯಬೇಕು. ಹೊರಗಿನ ಇಂದ್ರಿಯಗಳಿಂದ ವಿಷಯಗಳನ್ನು ಭೋಗಿಸಲಿ, ಬಿಡಲಿ, ಮನಸ್ಸು ಇಂದ್ರಿಯಗಳಿಗೆ ತಾಕದೆ ಇದ್ದರಾಯಿತು, ಇಂದ್ರಿಯಗಳು ಹತೋಟಿಗೆ ಬಂದುಬಿಡುವವು. ರಾಗದ್ವೇಷವಿಲ್ಲದೆ ವಿಷಯಗಳನ್ನನುಭವಿಸಬೇಕು ಎಂದು ಹಿಂದೆ ಉಪದೇಶಿಸಿರುವದರ ಉದ್ದೇಶವೇ ಇದು. ಅದರಲ್ಲಿಯೂ ತಟ್ಟನೆ ಇಂದ್ರಿಯಗಳನ್ನು ಹಿಂತಿರುಗಿಸಿ ಮನಸ್ಸನ್ನು ಒಮ್ಮೆಗೇ ಆತ್ಮವಸ್ತುವಿನಲ್ಲಿ ನಿಲ್ಲಿಸಿಬಿಡುತ್ತೇನೆಂಬ ಹಠದಿಂದ ಉಪಯೋಗವಿಲ್ಲ. ಮೆಲ್ಲಮೆಲ್ಲಗೆ, ಮನಸ್ಸನ್ನು ಕುಸಿಯಬಿಡದೆ, ವಿಷಯಗಳಿಂದ ಹಿಮ್ಮೆಟ್ಟಿಸಬೇಕು.

ಯೋಗಕ್ಕೆಲ್ಲ ಆತ್ಮನೇ ಗುರಿ. ಆತ್ಮನಲ್ಲಿಯೇ ಲಕ್ಷ್ಯವಿಟ್ಟು ಚಿಂತಿಸುತ್ತಾ ಮನಸ್ಸನ್ನು ಆತ್ಮಸಂಸ್ಥವಾಗಿ ಮಾಡಿಬಿಡಬೇಕು, ಆತ್ಮನಲ್ಲಿ ಆತ್ಮನ ರೂಪದಿಂದ ನಿಲ್ಲುವಂತೆ ಮಾಡಿಕೊಳ್ಳಬೇಕು. ಆ ಬಳಿಕ ಮತ್ತೆ ಯಾವದನ್ನೂ ಚಿಂತಿಸಬಾರದು. ಯಾವನು ಕರ್ಮಯೋಗದಿಂದ ಮನಸ್ಸನ್ನು ಶುದ್ಧಿಮಾಡಿಕೊಂಡಿರುವನೋ ಅವನು ಮಾತ್ರ ಇಂಥ ಧ್ಯಾನಯೋಗವನ್ನು ಸಾಧಿಸುವದಕ್ಕೆ ನಿಜವಾದ ಅಧಿಕಾರಿಯು. ಸಾಮಾನ್ಯರಾದ ನಾವುಗಳು ಈ ಹೆಚ್ಚಿನ ಸ್ಥಿತಿಗೆ ಏರಲಾರೆವಾದರೂ ಮನಸ್ಸನ್ನು ಸ್ವಲ್ಪಸ್ವಲ್ಪವಾಗಿ ವಿಷಯಗಳಿಂದ ಹಿಂತಿರುಗಿಸುವದಕ್ಕೆ ಪ್ರಯತ್ನಿಸಬೇಕು ಎಂಬಿಷ್ಟನ್ನಾದರೂ ಅಭ್ಯಾಸಮಾಡುವದಕ್ಕೆ ಯತ್ನಿಸಬಹುದು. ಮನಸ್ಸನ್ನು ಪರಮಾತ್ಮನ ಕಡೆಗೆ ತಿರುಗಿಸುವ ಪ್ರಯತ್ನವನ್ನು ಮಾಡುತ್ತಿರಬೇಕು. ಮನಸ್ಸು ಚಂಚಲವಾಗಿರುತ್ತದೆ, ಅಸ್ಥಿರವಾಗಿರುತ್ತದೆ; ಅದು ಯಾವ ಯಾವ ನಿಮಿತ್ತದಿಂದ ಹರಿದಾಡುವದೋ ಅದದರಿಂದ ಯೋಗಿಯಾದವನು ಹಿಂತಿರುಗಿಸಿಕೊಂಡು ತನ್ನ ಸ್ವಾಧೀನಕ್ಕೆ ತಂದುಕೊಳ್ಳಬೇಕು—ಎಂದು ಇಲ್ಲಿ ಉಪದೇಶಿಸಿದೆ.

ಇಲ್ಲಿ ಒಂದು ವಿಚಾರ, ಮನಸ್ಸು ಸಹಜವಾಗಿ ಚಂಚಲವೆಂಬುದು ನಮಗೆ ಸಾಮಾನ್ಯವಾಗಿ ಅನುಭವಕ್ಕೆ ಬರುವದಿಲ್ಲ. ಅದನ್ನು ಸ್ಥಿರಗೊಳಿಸಿಕೊಳ್ಳುವೆನು ಎಂದು ಪ್ರಯತ್ನಿಸಿದಾಗಲೇ ಅದರ ಚಾಂಚಲ್ಯವು ಮನಸ್ಸಿಗೆ ಸ್ಫುಟವಾಗಿ ಗೊತ್ತಾಗುತ್ತದೆ. ಮನಸ್ಸನ್ನು ಸ್ಥಿರಗೊಳಿಸುವದಕ್ಕೆ ನಮ್ಮಂಥವರ ಬರಿಯ ಸ್ವಪ್ರಯತ್ನವು ಹೆಚ್ಚು ಉಪಯೋಗಕ್ಕೆ ಬರುವದಿಲ್ಲ. ಭಗವಂತನನ್ನೇ ಇದಕ್ಕೂ ಸಹಾಯವಾಗಿ ಉಪಯೋಗಿಸಿಕೊಳ್ಳಬೇಕು. ಬ್ರಹ್ಮವು ಎಲ್ಲೆಲ್ಲಿಯೂ ಇರುತ್ತದೆ; "ಸರ್ವಂ ಖಲ್ವಿದಂ ಬ್ರಹ್ಮ" ಎಂದು ಶ್ರುತಿಯು ಹೇಳುತ್ತದೆ. ಇದನ್ನು ಸ್ಮರಣೆಗೆ ತಂದುಕೊಂಡ ಹಾಗೆಲ್ಲ ಮನಸ್ಸು ಶಾಂತವಾಗುತ್ತದೆ, ಮನಸ್ಸನ್ನು ವಿಷಯಗಳಿಂದ ಬಿಡಿಸಿಕೊಳ್ಳುವೆನು, ಇದರ ಚಾಂಚಲ್ಯವನ್ನು ಅಡಗಿಸುವೆನು ಎಂಬ ಹಠವನ್ನು ತೊಟ್ಟರೆ ಅದು ಇನ್ನಷ್ಟು ಕುಣಿದಾಡುವದು. ಮೊದಲು ಪರಮಾತ್ಮನನ್ನು ಮನಸ್ಸಿಗೆ ತಂದುಕೊಳ್ಳಿರಿ; ಆಗಲೂ

ಮನಸ್ಸು ಕುಣಿದಾಡುತ್ತಿದ್ದರೆ ಸುಮ್ಮನೆ ಅದರ ಆಟವನ್ನು ನೋಡುತ್ತಿರಿ.' ನೀವು ಉದಾಸೀನರಾಗಿ ನೋಡುತ್ತಿದ್ದ ಹಾಗೆಯೇ, ತಳಮಳನೆ ಕಾಯುತ್ತಿದ್ದ ಎಣ್ಣೆಯು ಸ್ವಲ್ಪ ಹೊತ್ತಿನಮೇಲೆ ತಾನೇ ಸದ್ದಡಗಿಸಿಕೊಳ್ಳುವಂತೆ, ಮನಸ್ಸು ಸ್ವಲ್ಪ ಹೊತ್ತು ನೆಗೆದಾಡುತ್ತಿದ್ದು ಬಳಿಕ ತನಗೆತಾನೇ ತೆಪ್ಪಗಾಗುವದು. ಅಂತೂ ಸಂಕಲ್ಪವನ್ನು ನಿಲ್ಲಿಸಿದರೆ ಕಾಮಗಳು ಹೋಗುತ್ತವೆ, ಕಾಮಗಳು ಇಲ್ಲವಾದರೆ ಮನಸ್ಸು ಪರಮಾತ್ಮನ ಚಿಂತನೆಗೆ ಅಣಿಯಾಗುತ್ತದೆ; ಪರಮಾತ್ಮನ ಚಿಂತನೆಯು ಬಲವಾದಷ್ಟೂ ಕಾಮಗಳ ಕಾಟವು ಕಡಿಮೆಯಾಗುತ್ತದೆ.

## ೪೬. ಯೋಗದ ಫಲ ೬-(೨೭-೩೨)

(೮.೬.೪೭)

ಯೋಗವೆಂಬ ಮಾತನ್ನು ಎರಡರ್ಥದಲ್ಲಿ ಉಪಯೋಗಿಸುತ್ತಾರೆ. ಭೌತಿಕ ವಿಜ್ಞಾನಶಾಸ್ತ್ರಜ್ಞರು "ಲಾಬರೇಟರಿ" ಎಂಬ ತತ್ತ್ವ ನಿರೀಕ್ಷಣಶಾಲೆಯಲ್ಲಿ ವಸ್ತುವಿವರಗಳನ್ನು ಲಕ್ಷ್ಯವಿಟ್ಟು ನೋಡುವ ಕ್ರಮವೆಂದು ಒಂದರ್ಥ. ಇದನ್ನು ಅಧ್ಯಾತ್ಮಶಾಸ್ತ್ರದಲ್ಲಿ ನಿದಿಧ್ಯಾಸನವೆಂದು ಕರೆಯುವರು. ಭಾವನೆಯಿಂದ ವಸ್ತುವನ್ನು ಹೀಗೆಂದು ಕಲ್ಪಿಸಿಕೊಂಡು ಚಿಂತಿಸುವದು ಎಂದು ಮತ್ತೊಂದರ್ಥ. ಈ ಅಧ್ಯಾಯದಲ್ಲಿ ಮೊದಲನೆಯ ಅರ್ಥದ ಯೋಗವನ್ನೇ ನಾವು ವಿಚಾರಿಸುತ್ತಿರುವದು. ಈಗ ಈ ಯೋಗದ ಫಲವನ್ನು ಹೇಳುತ್ತಾರೆ. ಯೋಗಿಯಾದವನ ಮನಸ್ಸು ಇತರ ವಿಷಯಗಳನ್ನು ತಳ್ಳಿಹಾಕಿ ಆತ್ಮನಲ್ಲಿಯೇ ನಿಂತಿರುತ್ತದೆ.

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥** (೬-೨೭)

ಆಗ ಅವನ ಮನಸ್ಸು ಪ್ರಶಾಂತವಾಗಿರುತ್ತದೆ; ಅದರಲ್ಲಿ ಯಾವ ವಿಕ್ಷೇಪವೂ ಇರುವದಿಲ್ಲ. ಮನಸ್ಸೆಂಬುದು ಹೊಸಲಮೇಲಿನ ದೀಪದಂತೆ ಇದೆ; ಅದನ್ನು ಹೊರಗಿನ ವ್ಯವಹಾರಕ್ಕೂ ಉಪಯೋಗಿಸಬಹುದು, ಅಧ್ಯಾತ್ಮಜೀವನಕ್ಕೆ ಸಾಧನವಾಗಿಯೂ ಉಪಯೋಗಿಸಬಹುದು. ವ್ಯವಹಾರದಲ್ಲಿ ಅದು ಪೂರ ಚಟುವಟಿಕೆಯಾಗಿರಬೇಕು; ಆಯಾ ಕಾಲಕ್ಕೆ ಬಂದದ್ದನ್ನು ಆಯಾ ಕ್ಷಣದಲ್ಲಿ ಅರಿತು ಮುಂಬರಿಯುತ್ತಿರಬೇಕು. ಅಧ್ಯಾತ್ಮಜೀವನಕ್ಕೂ ಮನಸ್ಸಿನ ಪ್ರಶಾಂತತೆ ಬೇಕಾಗುತ್ತದೆ. ಸಮುದ್ರದ ಬೇರೆಬೇರೆಯ ಮಟ್ಟಗಳಲ್ಲಿಯೇ ಜೀವಿಸುವ ಪ್ರಾಣಿಗಳಿರುತ್ತವೆ. ಕೆಲವು ಪ್ರಾಣಿಗಳು ತೀರ ಕೆಳಗಡೆಯಲ್ಲಿರುವವು, ಇನ್ನೂ ಕೆಲವು ಮೇಲುಗಡೆಯಲ್ಲಿಯೇ ಇರುವವು. ಕೆಳಗಡೆ

ಜೀವಿಸುವ ಪ್ರಾಣಿಗಳಿಗೆ ನೀರಿನ ಒತ್ತಡವು ಬೇಕಾಗಿರುವಷ್ಟು ಪ್ರಮಾಣದಲ್ಲಿ ಮೇಲುಗಡೆ ಸಿಕ್ಕುವದಿಲ್ಲವಾದ್ದರಿಂದ ಅವು ಮೇಲಕ್ಕೆ ಬಂದ ಮಾತ್ರದಿಂದ ಅವುಗಳ ಶರೀರವು ಒಡೆದುಕೊಂಡು ಸತ್ತುಹೋಗುತ್ತವೆ. ಇದರಂತೆ ಮೇಲಿನ ಮಟ್ಟದ ಪ್ರಾಣಿಗಳೂ ಕೆಳಗಡೆ ಜೀವಿಸಿರಲಾರವು. ದಾರ್ಷ್ಟಾಂತಿಕದಲ್ಲಿ ವ್ಯವಹಾರಚತುರ ನಾದವನ ಮನಸ್ಸು ಕೆಳಗಡೆ ಇಳಿದು ಅಧ್ಯಾತ್ಮಯೋಗವನ್ನು ಅಭ್ಯಾಸಮಾಡಲಾರದು, ಏಕೆಂದರೆ ಅದಕ್ಕೆ ಪ್ರಶಾಂತಿಯಿರುವದಿಲ್ಲ. ವ್ಯವಹಾರಕ್ಕೆ ರಜೋಗುಣವು ಬೇಕು; ಧ್ಯಾನಯೋಗಕ್ಕೆ ರಜಸ್ಸನ್ನು ಮೆಟ್ಟಿರುವ ಸತ್ತ್ವಗುಣವು ಬೇಕು.

ಯಾವನು ಹೀಗೆ ಪ್ರಶಾಂತಮನಸ್ಸಿನವನಾಗಿರುವನೋ ಅವನು ಬ್ರಹ್ಮವೇ ಆಗಿರುತ್ತಾನೆ. ಶ್ರೀರಾಮನು ವನವಾಸದಲ್ಲಿರುವವರೆಗೆ ತಪಸ್ವಿಗಳಂತೆ ಜಟಾಧರ ನಾಗಿದ್ದನು. ಅವನು ರಾವಣನನ್ನು ಕೊಂದು ಸೀತಾಸಮೇತನಾಗಿ ಅಯೋಧ್ಯೆಗೆ ಬಂದ ಬಳಿಕ ಭರತನ ಅಭಿಮತದಂತೆ ನಿಪುಣರಾದವರಿಂದ ಜಡೆಯನ್ನು ಬಿಡಿಸಿ ಮಂಗಲಸ್ನಾನವನ್ನು ಮಾಡಿಸಿ ವಸ್ತ್ರಭೂಷಣಾದಿಗಳಿಂದ ಅಲಂಕರಿಸಿದ ಬಳಿಕ ಹೇಗೆ ಮೊದಲಿನ ಶ್ರೀರಾಮನೇ ಆಗಿ ಕಂಡನೋ, ಹಾಗೆ ಅವಿದ್ಯಾಕಾಮಕರ್ಮಗಳ ಫಲವಾಗಿ ಅಬ್ರಹ್ಮವಾಗಿದ್ದವನು ಧ್ಯಾನಯೋಗದ ಸಂಸ್ಕಾರವನ್ನು ಪಡೆದಾಗ ಅಬ್ರಹ್ಮಕ್ಕೆ ಕಾರಣವಾದ ಯಾವ ಕಲ್ಮಷವೂ ಇಲ್ಲದ್ದರಿಂದ ಬ್ರಹ್ಮವೇ ಆಗಿಬಿಡುವನು.

ಹೀಗೆ ಬ್ರಹ್ಮಭೂತನಾದ ಆ ಯೋಗಿಗೆ ಒಂದು ಉತ್ತಮವಾದ ಸುಖವು ಬಂದು ಸೇರಿಕೊಳ್ಳುತ್ತದೆ. ಯೋಗದ ಫಲವಾಗಿ ಬರುವ ಆನಂದವನ್ನು ಮನಸ್ಸಿನಲ್ಲಿ ಕಲ್ಪಿಸಿಕೊಳ್ಳುವದೂ ನಮ್ಮಿಂದ ಆಗಲಾರದು. ಅಬ್ರಹ್ಮವಾಗಿರುವವರು ತಮ್ಮ ಬ್ರಹ್ಮ ಸ್ವರೂಪವನ್ನು ಬಿಟ್ಟು ಬಲುದೂರ ಬಂದಿರುತ್ತಾರೆ. ಕೋಲ್ರಿಡ್ಜ್ ಎಂಬಾತನು ಉದಾ ಹರಿಸಿರುವ ಒಂದು ಸುಭಾಷಿತವನ್ನು ಇಲ್ಲಿ ನಾವು ಮನದಂದುಕೊಳ್ಳಬಹುದು:

It is the advice of the wise man "Dwell at home" or with yourself; and though there are very few that do this, yet it is surprising that the greatest part of mankind cannot be prevailed upon at least to visit themselves sometimes."

ಭಾವಾರ್ಥ: " ಮನೆಯಲ್ಲಿ ವಾಸವಾಗಿರಿ, ಅಥವಾ ನಿಮ್ಮ ಸ್ವರೂಪದಲ್ಲಿಯೇ ಇರಿ; ಎಂಬುದು ಬಲ್ಲವರ ಹಿತೋಕ್ತಿ. ಹೀಗೆ ಮಾಡುವವರೇ ಬಹಳ ಕಡಿಮೆ. ಆದರೆ ಕೊನೆಯ ಪಕ್ಷಕ್ಕೆ ಆಗಾಗ್ಗೆ ಒಂದೊಂದು ಸಲವಾದರೂ ತಮ್ಮನ್ನು ತಾವು ನೋಡುವದಕ್ಕೆ ಹೋಗುವದು ಅವಶ್ಯವೆಂಬ ಮಾತನ್ನು ಕೂಡ ಮಾನವಜಾತಿಯಲ್ಲಿ ಬಲು ಮಂದಿ ಕೇಳದೆ ಇರುವದು ಅಚ್ಚರಿಯಾಗಿರುತ್ತದೆ." ಯೋಗಿಯಾದವನು ತನ್ನ

ಸ್ವರೂಪವಾದ ಬ್ರಹ್ಮಸ್ವರೂಪದಲ್ಲಿಯೇ ನೆಲೆನಿಲ್ಲುವದಕ್ಕೆ ಪ್ರಯತ್ನಮಾಡುತ್ತಿರುವ ನಾದ್ದರಿಂದ ಅವನಿಗೆ ಉತ್ತಮವಾದ ಸುಖವು ಮೀಸಲಾಗಿರುತ್ತದೆ. ಈ ಸುಖಕ್ಕೆ ಯಾವ ಕರಣವೂ ಬೇಕಿಲ್ಲ; ಕಬ್ಬನ್ನು ಜಗಿದು ಸಿಹಿರಸವನ್ನು ಸವಿಯುವಂತೆ ಆಯಾಸದಿಂದ ಬರುವ ಸುಖವಿದಲ್ಲ. ಇದನ್ನು ಇಂಥದ್ದರಿಂದ ಅನುಭವಿಸಬೇಕು ಎಂಬ ವಿಭಾಗವು ಇಲ್ಲಿರುವದಿಲ್ಲ. ಈ ಸುಖವು ಯೋಗಿಯ-ನಮ್ಮೆಲ್ಲರ-ಆತ್ಮನಾಗಿರುವ ಬ್ರಹ್ಮಕ್ಕೇ ಸೇರಿದ್ದು; ಆದ್ದರಿಂದ ಚಿನ್ನದ ಮೆರುಗಿನಂತೆ, ಚಂದ್ರನ ಬೆಳದಿಂಗಳಂತೆ, ಹಾಲಿನ ಬಿಳುಪಿನಂತೆ ಸ್ವಾಭಾವಿಕವಾದದ್ದು.

ಬ್ರಹ್ಮದ ಸಂಸ್ಪರ್ಶವು, ಬ್ರಹ್ಮವನ್ನು ನೇರಾಗಿ ಮುಟ್ಟುವದೆಂಬುದು, ಬ್ರಹ್ಮವೇ ಆಗಿಬಿಡುವದೆಂಬುದು, ಇಂಥ ಉತ್ತಮವಾದ ಆನಂದವನ್ನು ಕೊಡುತ್ತದೆಯೆಂದೂ ವಿಷಯಸುಖಗಳಿಂದ ನಮಗೆ ದುಃಖವೇ ಆಗುವದೆಂದೂ ನಮ್ಮಗಳಿಗೆ ಅನುಭವ ದಲ್ಲಿಲ್ಲವೆನ್ನುವ ಹಾಗಿಲ್ಲ; ಎಚ್ಚರದಲ್ಲಿ ವಿಷಯಗಳನ್ನು ಅನುಭವಿಸುವೆವೆನ್ನುವಾಗಲೂ ನಮಗೆ ಆಗುವ ಆಯಾಸವನ್ನು ನಾವೆಲ್ಲರೂ ಬಲ್ಲೆವು. ಗಾಢನಿದ್ರೆಯಲ್ಲಿ ಯಾವದೊಂದು ವಿಷಯವನ್ನು ಸಂಪಾದಿಸಿ ಯಾವದೊಂದು ಇಂದ್ರಿಯದಿಂದ ಅನುಭವಿಸುವ ಆಯಾಸವೂ ಇಲ್ಲದೆಯೇ, ವಿಲಕ್ಷಣವಾದ ಸುಖವು ದೊರಕುವದನ್ನೂ ನಾವುಗಳು ಬಲ್ಲೆವು. ಹೀಗಿದ್ದರೂ ಅದೇನು ಮಾಯೆಯೊ, ನಮ್ಮ ಮನಸ್ಸು ಈ ಸ್ವರೂಪವನ್ನು ಪಡೆದುಕೊಳ್ಳುವ ಧ್ಯಾನಯೋಗಕ್ಕೆ ಒಲಿಯಲೊಲ್ಲದು. ನಿಜವಾಗಿ ಮನುಷ್ಯನ ಮನುಷ್ಯತ್ವವು ಎತರಲ್ಲಿದೆ? ಮನುಷ್ಯನಲ್ಲಿ ಯಾವನಿಗೆ ಸರಿಯಾದ ಮನಸ್ಸಿಲ್ಲವೋ ಅವನು ಬದುಕಿದ್ದರೂ ಬದುಕಿದ್ದಂತೆ ಅಲ್ಲ; ಅವನಲ್ಲಿ ಮನುಷ್ಯತ್ವದ ಗುರುತೇ ಇಲ್ಲ. ನಿಜವಾದ ಸುಖವನ್ನು ಅನುಭವಿಸುವ ವಿದ್ಯೆಯನ್ನು ಅರಿಯುವ ಮನಸ್ಸಿಲ್ಲದವನು ಎಷ್ಟು ಭೋಗರಾಶಿಗಳನ್ನು ಒಟ್ಟಿಕೊಂಡರೆ ತಾನೆ ಪ್ರಯೋಜನವೇನು? ವಿಷಯಗಳಿಗೆ ಬೆಲೆಕಟ್ಟುವದು ಮನಸ್ಸೇ. ಒಂದು ಹೆಣದ ಮುಂದೆ ಎಷ್ಟು ಭೋಗಸಾಮಗ್ರಿಗಳನ್ನು ತಂದಿಟ್ಟರೆ ತಾನೆ ಅದು ಅವುಗಳನ್ನು ಕಂಡು ನಲಿಯಬಲ್ಲದೆ? ಆದ್ದರಿಂದ ಯಾವನು ಸುಖದ ಬುಗ್ಗೆಯಾದ ಬ್ರಹ್ಮಸ್ವರೂಪವನ್ನು ಕಂಡುಕೊಂಡು ಅದರಲ್ಲಿಯೇ ನೆಲೆನಿಂತಿರು ವದಕ್ಕೆ ಪ್ರಯತ್ನಿಸುವನೋ ಅವನೇ ನಿಜವಾದ ಮನುಷ್ಯನು. ವಿಷಯಸ್ಪರ್ಶಗಳು ದುಃಖಯೋನಿಗಳು, ಬ್ರಹ್ಮಸಂಸ್ಪರ್ಶವು ಸುಖಕ್ಕೆ ನೇರಾದ ಕಾರಣವು.

ಈ ಗುಟ್ಟನ್ನರಿಯದೆ ನಾವು ಧ್ಯಾನಯೋಗಿಗಳನ್ನು ಹಳಿಯುವ ಮೂರ್ಖತನಕ್ಕೆ ಕೂಡ ಹೋಗುವೆವು. ಕೆಲವು ಮಹನೀಯರು ಪಾಶ್ಚಾತ್ಯರಿಂದ ಕಲಿತುಕೊಂಡ "Dignity of Labour" ಕಷ್ಟಪಟ್ಟು ಕೆಲಸಮಾಡುವದರ ಗೌರವ ಎಂಬ ಮಾತನ್ನು ಆಗಾಗ್ಗೆ ಬಳಸುತ್ತಾ ಯೋಗಾಭ್ಯಾಸವನ್ನು ತಿರಸ್ಕರಿಸುವರು! ಆದರೆ ಕೆಲಸದ

ಗೌರವವು ಕೆಲಸದಲ್ಲಿದೆಯೊ, ಕೆಲಸ ಮಾಡುವವನಿಗೂ ಇತರರಿಗೂ ಸುಖವನ್ನು ತಂದುಕೊಡುವದರಲ್ಲಿದೆಯೊ? ಇದನ್ನು ಚೆನ್ನಾಗಿ ಯೋಚಿಸಬೇಕು. ಯಾವಾಗಲೂ ಗಾಡಿಗೆ ಕಟ್ಟುತ್ತಿದ್ದ ಒಂದು ಕುದುರೆ, "ಅಯ್ಯೋ! ಮನುಷ್ಯರಿಗೆ ಯಾವ ಸುಖವೋ ನಾನು ಕಾಣೆ; ಅವರಿಗೆ ಕೋರಡೆಯ ಪೆಟ್ಟೇ ಇಲ್ಲವಲ್ಲ! ಎಂದಿತಂತೆ. ಕಷ್ಟಪಟ್ಟು ಕೆಲಸಮಾಡುವದರಿಂದಾಗುವ ಸುಖದಿಂದ ಕೆಲಸಕ್ಕೆ ಗೌರವ ಎಂಬುದನ್ನು ಮರೆತವರು, ಕಷ್ಟಪಡುತ್ತಿರುವದೇ ಗೌರವ ಎಂದು ಎಣಿಸಿದವರಾಗುವರು. ಯಾವನೋ ಒಬ್ಬ ಪಾಶ್ಚಾತ್ಯನು "ಭರತಖಂಡದವರು ಎಷ್ಟೋ ಶತಮಾನಗಳಿಂದ ತಮ್ಮ ಮೂಗಿನ ತುದಿಯನ್ನು ನೋಡುತ್ತಾ ಕೂತಿರುವರು" ಎಂದು ನಮ್ಮ ದೇಶದ ಯೋಗವನ್ನು ಹಾಸ್ಯಮಾಡಿರುತ್ತಾನೆ. ನಾನು ಓದಿದ್ದ ಒಂದು ಪಠ್ಯಪುಸ್ತಕದಲ್ಲಿ ಯಾರೋ ಒಬ್ಬ ಕ್ರಿಸ್ತಿಯನ್ ಪಾದ್ರಿಯು ಸಮಾಧಿ ಎಂಬುದು ಒಂದು ಬಗೆಯ ಮೂರ್ಛಾರೋಗವೆಂದು ಬರೆದಿದ್ದನು! ಪಾಪ! ದೋಷೈಕದೃಷ್ಟಿಯಿಂದ ನಮ್ಮ ಗ್ರಂಥಗಳನ್ನು ಪರಿಶೀಲಿಸುವದಕ್ಕೆ ಹೊರಟ ನಿರ್ಭಾಗ್ಯರಿಗೆ ಸಮಾಧಿಯ ಆನಂದವು ಹೇಗೆ ತಿಳಿಯಬೇಕು? ಬ್ರಹ್ಮಸಂಸ್ಪರ್ಶದಿಂದ ಸಿಕ್ಕುವ ಸುಖಶಾಂತಿಗಳನ್ನು ಸಾಧನದಿಂದ ಸಂಪಾದಿಸಿಕೊಂಡಿರುವ ಮಹಾತ್ಮನೊಬ್ಬನಿಗೇ ಅವುಗಳ ನಿಜವಾದ ಬೆಲೆಯು ಗೊತ್ತಾಗಿರುತ್ತದೆ. ಮಿಕ್ಕವರೇನು ಬಲ್ಲರು, ಅದರ ಸವಿಯನ್ನ? ಸಾಹಿತ್ಯಸಂಗೀತಾದಿಗಳ ಸುಖವು ವಿಷಯಸುಖಕ್ಕಿಂತ ಎಷ್ಟು ಮಿಗಿಲಾದದ್ದು! ಆದರೆ ಬ್ರಹ್ಮಸಂಸ್ಪರ್ಶದ ಕೋಟಿಯಲ್ಲೊಂದು ಪಾಲಿಗೂ ಆ ಸುಖವು ಸಮನಲ್ಲ! ಶಾಂತಿಸುಖಗಳನ್ನು ಸಂಪಾದಿಸಿಕೊಂಡವನ ಬಾಳು ಸಾರ್ಥಕ, ಅದನ್ನು ಕಳೆದುಕೊಂಡಿರುವವರ ಬಾಳು ವ್ಯರ್ಥ, ಧ್ಯಾನಯೋಗದಿಂದ ಬ್ರಹ್ಮಸ್ವರೂಪದ ಅರಿವನ್ನು ಮಾಡಿಕೊಂಡಿದ್ದ ಒಬ್ಬ ಋಷಿಯ ಬಾಯಲ್ಲಿ ಬಂದ ಈ ಮಂತ್ರವನ್ನು ಕೇಳಿ:

> **ವೇದಾಹಮೇತಂ ಪುರುಷಂ ಮಹಾನ್ತಮ್।**
> **ಆದಿತ್ಯವರ್ಣಂ ತಮಸಸ್ತು ಪಾರೇ ।**
> **ತಮೇವ ವಿದಿತ್ವಾತಿಮೃತ್ಯುಮೇತಿ ನಾನ್ಯಃ ಪನ್ಥಾ ವಿದ್ಯತೇಽಯನಾಯ॥**

"ನಾನು ಈ ಮಹಾಪುರುಷನನ್ನು ಅರಿತುಕೊಂಡಿರುವೆನು; ಈತನು ಪ್ರಕಾಶಮಯನು, ಅಜ್ಞಾನದ ಕಗ್ಗತ್ತಲೆಯ ಆಚೆಯಲ್ಲಿರುವನು. ಈತನನ್ನು ಅರಿತುಕೊಂಡರೇ ಮೃತ್ಯುವನ್ನು ದಾಟಿದ ಸ್ಥಿತಿಯನ್ನು ಪಡೆಯುತ್ತಾರೆ, ಇದಕ್ಕಿಂತ ಬೇರೆ ಯಾವ ಹಾದಿಯೂ ಆ ಸ್ಥಿತಿಯನ್ನು ಸೇರುವದಕ್ಕೆ ಇರುವದಿಲ್ಲ!" ಬ್ರಹ್ಮಸಂಸ್ಪರ್ಶವೆಂಬ ಸ್ಪರ್ಶಮಣಿಯನ್ನು ಮುಟ್ಟಿದವರೆಲ್ಲರೂ ಬ್ರಹ್ಮವೆಂಬ ಚಿನ್ನವಾಗುವರು.

ನಾವೆಲ್ಲರೂ ಈ ಧ್ಯಾನಯೋಗದಿಂದ ಸಿಕ್ಕುವ ಉತ್ತಮವಾದ ಸುಖಶಾಂತಿಗಳನ್ನು ಪಡೆದುಕೊಳ್ಳುವದಕ್ಕೆ ಯತ್ನಿಸಬೇಕು. ಧ್ಯಾನಯೋಗವು ನೇರಾಗಿ ಯಾರಿಗೆ ದೊರೆತಿಲ್ಲವೋ ಅವರು ಕರ್ಮಯೋಗವನ್ನು ಮಾಡಿಕೊಂಡು ಅದಕ್ಕೆ ಸಿದ್ಧತೆಯನ್ನಾದರೂ ಪಡೆಯಬೇಕು. ಯೋಗಕ್ಕೆ ಇದುವರೆಗೆ ಹೇಳಿದ ವೈಯಕ್ತಿಕಫಲವಲ್ಲದೆ ಇನ್ನೊಂದು ಮಹಾಫಲವಿದೆ. ಏಕೆಂದರೆ ಧ್ಯಾನಯೋಗದಿಂದ ನಿಜದ ಅರಿವನ್ನು ಸಂಪಾದಿಸಿಕೊಂಡ ಹೊರತು ಯಾರೊಬ್ಬನಿಗೂ ಪರಮಪುರುಷಾರ್ಥಕ್ಕೆ ಬೇರೆಯ ಹಾದಿಯಿಲ್ಲ. ಧ್ಯಾನಯೋಗದ ಫಲವೆಂದರೆ ಸರ್ವಾತ್ಮಭಾವವೇ.

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ಅತಿ ॥**

ಬ್ರಹ್ಮಾದಿಯಾಗಿ ಸ್ತಂಬದವರೆಗೆ ಇರುವ ಭೂತಗಳಲ್ಲೆಲ್ಲ ಒಬ್ಬನೇ ಆತ್ಮನಿರುವನು, ಆ ಒಬ್ಬ ಆತ್ಮನಲ್ಲಿಯೇ ಎಲ್ಲಾ ಭೂತಗಳೂ ಇರುವವು ಎಂಬ ನಿಜವನ್ನು ಕಾಣುವದೇ ಯೋಗಯುಕ್ತನಾದದ್ದಕ್ಕೆ ಫಲವು. ನಮಗೆ ಆತ್ಮನಾಗಿರುವ ಪರಮಾತ್ಮನೇ ಎಲ್ಲರಿಗೂ ಆತ್ಮನಾಗಿರುತ್ತಾನೆ ಎಂಬ ತಿಳಿವಳಿಕೆಯು ಬಂದರೆ ಸಾಕು; ಎಲ್ಲರನ್ನೂ ಪ್ರೇಮದಿಂದ ನೋಡುವದು, ಎಲ್ಲರಿಗೂ ಹಿತವನ್ನು ಮಾಡುವದಕ್ಕೆ ಯತ್ನಿಸುವದು-ಇವು ಸ್ವಭಾವವಾಗಿ ಬಿಡುವವು. ಇದೇ ಅಧ್ಯಾತ್ಮವಿದ್ಯೆಯ ವ್ಯಾವಹಾರಿಕಪ್ರಯೋಜನವು. ತತ್ತ್ವಜ್ಞಾನವೆಂಬುದು ನಮ್ಮ ಜ್ಞಾನಕ್ಕೆ ವಿಪರೀತವಾದ ಸ್ವರೂಪದ್ದಾಗಿರುತ್ತದೆ. ನಾವು ಸಾಮಾನ್ಯವಾಗಿ ನಮ್ಮಲ್ಲಿ ಆತ್ಮನಿರುವನೆಂದು ತಿಳಿದುಕೊಂಡಿರುತ್ತೇವೆ; ಆದರೆ ನಿಜವೇನೆಂದರೆ ನಾವು ಆತ್ಮನಲ್ಲಿರುತ್ತೇವೆ. ನಮ್ಮೊಳಗೆ ಒಬ್ಬ ಆತ್ಮನಿದಾನೆಂಬ ಅರಿವಾದರೂ ಎಲ್ಲರಿಗೂ ಸುಲಭವಾಗಿ ದೊರಕಲಾರದು. ಆದರೆ ಯಾರಿಗೆ ಈ ಅರಿವು ಉಂಟಾಗಿರುವದೋ ಅವರು ನಾವೆಲ್ಲರೂ ಆತ್ಮನಲ್ಲಿರುತ್ತೇವೆ ಎಂಬ ಅರಿವನ್ನು ಸಂಪಾದಿಸಿಕೊಳ್ಳುವದಕ್ಕೆ ಯತ್ನಿಸಬೇಕು. ಇದಕ್ಕೆ ಸಮಷ್ಟಿಬುದ್ಧಿಯು ಅತ್ಯವಶ್ಯವಾಗಿರುತ್ತದೆ. ವಾಯುವು ಉಸಿರಿನ ರೂಪದಿಂದ ನಮ್ಮ ಶರೀರದಲ್ಲಿರುವದೆಂದು ನಾವು ಸಾಮಾನ್ಯವಾಗಿ ತಿಳಿದುಕೊಂಡಿರುವೆವಷ್ಟೆ; ಆದರೆ ನಿಜವೇನು? ನಮ್ಮೆಲ್ಲರ ಶರೀರಗಳೂ ವಾಯುಮಂಡಲದಲ್ಲಿರುತ್ತವೆ; ಅದರ ಒಂದಂಶವನ್ನು ನಾವು ಉಸಿರಾಡುವದಕ್ಕೆ ಉಪಯೋಗಿಸುತ್ತಿದೇವೆ. ಇದರಂತೆ ಪ್ರಾಣವು ನಮ್ಮ ಶರೀರದಲ್ಲಿದೆ ಎಂದು ತಿಳಿಯುವದಕ್ಕಿಂತ ಪ್ರಾಣದಲ್ಲಿಯೇ ನಮ್ಮ ಶರೀರಗಳು ಇವೆಯೆಂದೂ ನಮ್ಮ ಶರೀರದಲ್ಲಿ ಕಾಣಿಸಿಕೊಳ್ಳುವ ಪ್ರಾಣವು ಸಮಷ್ಟಿಪ್ರಾಣದ ಒಂದಂಶವೆಂದೂ ತಿಳಿಯುವದೇ ಹೆಚ್ಚಿನ ಅರಿವು. ಹೀಗೆಯೇ ನಮ್ಮ ಮನಸ್ಸು ಸಮಷ್ಟಿಮನಸ್ಸಿನ ಒಂದಂಶವು.

ಇದರಂತೆಯೇ ಯಾವದೊಂದು ಶರೀರದ ಅಳತೆಗೂ ಸಿಕ್ಕದೆ ಇರುವ ಸರ್ವಗತನಾದ ಆತ್ಮನನ್ನು ನಾವು ನಮ್ಮೊಳಗೆ ವ್ಯಕ್ತಿಯಾಗಿರುವನೆಂದು ತಪ್ಪಾಗಿ ಭಾವಿಸಿರುವೆವು. ಆಕಾಶದಲ್ಲಿಯೇ ಇರುವ ಗಡಿಗೆಯೊಳಗೆ ಘಟಾಕಾಶವಿರುವದೆಂದು ಎಣಿಸುವಂತೆ ಆತ್ಮನಲ್ಲಿಯೇ ಇರುವ ನಮ್ಮೊಳಗೆ ಆತ್ಮನಿರುವನೆಂದು ಎಣಿಸುವದೂ ತಪ್ಪುತಿಳಿವಳಿಕೆಯ ಫಲವೇ. ಆದ್ದರಿಂದ ಆತ್ಮನಲ್ಲಿಯೇ ನಾವಿರುವೆವು ಎಂಬುದೇ ಸರಿಯಾದ ಜ್ಞಾನ. ಈ ಜ್ಞಾನದಿಂದ ನಾವು ಪರಮಾತ್ಮನೊಡನೆ ಒಂದಾಗಿಬಿಡುವೆವು. "I am and my Father are one" ಎಂದು ಏಸುಕ್ರಿಸ್ತನು ಹೇಳಿರುವದರಲ್ಲಿ ಈ ಮಹಾತತ್ತ್ವವು ಕಾಣುತ್ತದೆ. ಯಾವನೋ ಒಬ್ಬ ಮಹಾಪುರುಷನು ಮಾತ್ರ ಹೀಗೆ ಬ್ರಹ್ಮಾತ್ಮೈಕ್ಯವನ್ನು ಪಡೆದಿರುತ್ತಾನೆಂದು ಭಾವಿಸಬಾರದು. ನಾವುಗಳು ತಿಳಿದಿರಲಿ, ತಿಳಿಯದಿರಲಿ, ನಾವೆಲ್ಲರೂ ಅದೇ ಪರಮಾತ್ಮನಲ್ಲಿದ್ದು ಅವನಿಂದಲೇ ಬಂದು ವ್ಯವಹರಿಸುತ್ತಿದ್ದು ಅವನಲ್ಲಿಯೇ ಸೇರುವೆವಾದ್ದರಿಂದ ಯಾವಾಗಲೂ ಆತನೊಂದಿಗೆ ಒಂದಾಗಿಯೇ ಇರುವೆವು.

ಜಗತ್ತಿಗೆ ಶಾಂತಿಸುಖಗಳು ದಕ್ಕಬೇಕಾದರೆ ಈ ತಿಳಿವಳಿಕೆಯು ಹರಡಬೇಕು, ನಾವುಗಳು ಬೇರೆಬೇರೆಯಾಗಿರುತ್ತೇವೆ; ಒಬ್ಬರ ಸುಖದುಃಖಗಳು ಮತ್ತೊಬ್ಬರಿಗೆ ಆಗುವಂತಿಲ್ಲ. ಆದ್ದರಿಂದ ನಮ್ಮನಮ್ಮ ಸ್ವಾರ್ಥವನ್ನು ನಾವು ನಾವು ನೋಡಿಕೊಳ್ಳೋಣ ಎಂಬ ಪೃಥಗ್ಭಾವನೆಯು ಕಡಿಮೆಯಾಗಬೇಕು. ಎಲ್ಲಾ ಪ್ರಾಣಿಗಳಲ್ಲಿಯೂ ಒಬ್ಬ ಪರಮಾತ್ಮನೇ ಪೂರ್ಣವಾಗಿ ತನ್ನ ಸ್ವರೂಪದಲ್ಲಿರುತ್ತಾನೆ ಎಂಬ ತಿಳಿವಳಿಕೆಯಿಂದ ಎಲ್ಲರ ಹಿತವನ್ನೂ ಬಯಸುವ ಮಹಾತ್ಮರು ಹೆಚ್ಚಬೇಕು. ಯಾವ ಮಹನೀಯರು ಭಗವಂತನು ಎಲ್ಲೆಲ್ಲಿಯೂ ಇರುತ್ತಾನೆ, ಎಲ್ಲವೂ ಆ ಭಗವಂತನಲ್ಲಿಯೇ ಇದೆ-ಎಂಬ ಅದ್ಭುತವಾದ ದರ್ಶನವನ್ನು ಸಂಪಾದಿಸಿಕೊಂಡಿರುತ್ತಾರೋ ಅವರಿಗೆ ಭಗವಂತನು ದೂರವಿದಾನೆ ಎಂಬ ಔದಾಸೀನ್ಯವು ಎಂದಿಗೂ ಆಗುವಂತಿಲ್ಲ; ಭಗವಂತನಿಗೆ ಅವರು ಎಂದಿಗೂ ದೂರವಾಗಲಾರರು. ಭಗವಂತನೂ ಭಗವದ್ಭಕ್ತರಾದ ಜ್ಞಾನಿಗಳೂ ಎಂದೆಂದಿಗೂ ಒಂದೇ. ಅವರು ಕೃತಕೃತ್ಯರು, ಅವರು ಸ್ವಪ್ರಯೋಜನಕ್ಕಾಗಿ ಏನನ್ನೂ ಮಾಡಿಕೊಳ್ಳಬೇಕಾದದ್ದೇ ಇರುವದಿಲ್ಲ, ಆದರೂ ಅವರು ಎಲ್ಲರಿಗೂ ಸುಖವನ್ನೇ ಕೋರುತ್ತಿರುವರು, ಎಲ್ಲರ ದುಃಖವನ್ನೂ ಪರಿಹರಿಸುವದಕ್ಕೆ ಯತ್ನವನ್ನು ಮಾಡು ತ್ತಿರುವರು. ಧ್ಯಾನಯೋಗವು ಪರಿಪಕ್ವವಾಗಿ ಜ್ಞಾನವು ಕೈವಶವಾಗಿರುವ ಪರಮ ಯೋಗಿಗಳು ಯಾರು?

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**

**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ॥**(೬-೩೨)

ನಾವುಗಳು ನಮ್ಮ ಶರೀರದ ಯಾವದೊಂದು ಅವಯವಕ್ಕೆ ಸುಖವಾದರೂ ನಮಗೇ ಸುಖವಾಯಿತೆಂದು ಭಾವಿಸುವಂತೆಯೂ ಯಾವದೊಂದು ಅವಯವಕ್ಕೆ ದುಃಖವಾದರೂ ನಮಗೇ ದುಃಖವಾಯಿತೆಂದೂ ಬಗೆಯುವಂತೆ ಉತ್ತಮಯೋಗಿ ಯಾದವನು ಎಲ್ಲಾ ಪ್ರಾಣಿಗಳಲ್ಲಿಯೂ ಒಬ್ಬ ಪರಮಾತ್ಮನೇ ಇರುವನೆಂಬ ತಿಳಿವಳಿಕೆಯಿಂದ ಯಾವ ಪ್ರಾಣಿಗಳಿಗೆ ದುಃಖವಾದರೂ ತನಗೆ ಆದಂತೆ, ಯಾವ ಪ್ರಾಣಿಗಳಿಗೆ ಸುಖವಾದರೂ ತನಗೇ ಸುಖವಾದಂತೆ ಎಂದು ನಿಶ್ಚಯಿಸಿ ಸರ್ವಭೂತಗಳ ಹಿತದಲ್ಲಿಯೇ ರತನಾಗಿರುತ್ತಾನೆ.

## ೪೭. ಮನಸ್ಸನ್ನು ನಿಗ್ರಹಿಸುವದು ಹೇಗೆ? ೬-(೩೩-೪೦)

(ಗೀ.೬.೪೭)

ಧ್ಯಾನಯೋಗದ ಪರಮಪ್ರಯೋಜನವನ್ನು ಹಿಂದೆ ವರ್ಣಿಸಿದ್ದಾಗಿದೆ. ಎಲ್ಲರ ಆತ್ಮನೂ ಒಬ್ಬನೇ ಪರಮಾತ್ಮನು ಎಂದು ಅರಿತುಕೊಳ್ಳುವದು; ಯಾವನೊಬ್ಬನಿಗೆ ಆಗುವ ಸುಖವಾಗಲಿ ದುಃಖವಾಗಲಿ ತನಗೇ ಆದಂತೆ ಭಾವಿಸುವ ಸರ್ವಭೂತ ಹಿತದೃಷ್ಟಿಯನ್ನು ಸಂಪಾದಿಸಿಕೊಂಡು ಎಲ್ಲರನ್ನೂ ಆನಂದದಲ್ಲಿಯೇ ನಿಲ್ಲಿಸುವದಕ್ಕೆ ಯತ್ನಿಸುವದು-ಇದು ಧ್ಯಾನಯೋಗವು ವಶನಾದವನ ಹೆಗ್ಗುರುತು.

ತನ್ನಂತೆ ಪರರು ಎಂಬುದು, ತನಗೆ ಹೇಗೆ ಅನಿಷ್ಟವಾದದ್ದು ದುಃಖವನ್ನೂ ಇಷ್ಟವಾದದ್ದು ಸುಖವನ್ನೂ ಉಂಟುಮಾಡುವದೋ ಹಾಗೆ ಎಲ್ಲರಿಗೂ ಆಗುತ್ತಿರುತ್ತದೆ; ಯಾರಿಗೂ ದುಃಖವು ಬೇಡ, ಎಲ್ಲರಿಗೂ ಸುಖವು ಬೇಕು ಎಂಬುದು- ಅನುಮಾನ ಪ್ರಮಾಣದಿಂದಲೇ ಜನರಿಗೆ ತಿಳಿದಿರುತ್ತದೆ. ಇದಕ್ಕೆ ಗೀತೆಯ ಉಪದೇಶವೇತಕ್ಕೆ?- ಎಂದು ನಮ್ಮಲ್ಲಿ ಕೆಲವರಿಗೆ ಶಂಕೆಯುಂಟಾಗಬಹುದು. ಆದರೆ ಇಲ್ಲಿ ನಿಜವೇನು? ನಮಗೆ ಆಗುವ ಸುಖವನ್ನೂ ಅದರಿಂದಾಗುವ ಹರ್ಷವನ್ನೂ ನಾವು ಹೇಗೆ ಅನುಭವಿಸುವೆವೋ ಹಾಗೆ ಪರರ ಸುಖವನ್ನಾಗಲಿ ಅದರಿಂದ ಅವರಿಗೆ ಆಗುವ ಹರ್ಷವನ್ನಾಗಲಿ ಅನುಭವಿಸಿ ಅವರೇ ನಾವೆಂದು ಎಂದಿಗಾದರೂ ಭಾವಿಸುವೆವೆ? ನಾವು ನಿಜವಾಗಿ ಜನರ ಸುಖವನ್ನು ನಮ್ಮ ಸುಖವೆಂದೂ ಜನರ ದುಃಖವನ್ನು ನಮ್ಮ ದುಃಖವೆಂದೂ ಭಾವಿಸಿದ್ದರೆ ನಿರಪರಾಧಿಗಳನ್ನು ಹುರಿದುಂಬಿಸಿ ಯುದ್ಧವೆಂಬ ಹೆಸರಿನಲ್ಲಿ ಭೀಕರ ಕೊಲೆಗೆ ಸಜ್ಜುಗೊಳಿಸುತ್ತಿದ್ದೆವೆ? ಹೊಟ್ಟೆಗಿಲ್ಲದ ಜನರು ಸಾಯುತ್ತಿರುವ ಇಂಥ ವಿಷಮಸಮಯದಲ್ಲಿ ಒಬ್ಬರೊಡನೊಬ್ಬರು ಹೊಡೆದಾಡಿ ಸಾಯುತ್ತಿದ್ದೆವೆ? ಇಲ್ಲ, ಈಗ ಮಾನವನು ದಾನವನಾಗಿರುತ್ತಾನೆ. ಅವನಲ್ಲಿ ದಯಾ

ರಸದ ಬುಗ್ಗೆಯು ಬತ್ತಿಹೋಗಿರುತ್ತದೆ. ಹೀಗಿದ್ದರೂ ನಾವು ತನ್ನಂತೆ ಪರರೆಂಬ ಜ್ಞಾನವುಳ್ಳವರೆಂದು ಜಂಭಕೊಚ್ಚಿಕೊಳ್ಳುತ್ತಿರುವೆವಲ್ಲ! ಎಂಥ ನಾಚಿಕೆಗೇಡಾದ ಮಾತಿದು!

ಲೋಕಕ್ಕೆ ನಿಜವಾದ ಶಾಂತಿಯು ಬರಬೇಕಾದರೆ ಯೋಗಿಯ ದೃಷ್ಟಿಯನ್ನು ನಾವೆಲ್ಲರೂ ಅವಲಂಬಿಸುವದಕ್ಕೆ ಪ್ರಯತ್ನಿಸಬೇಕು. ಯಾವದೊಂದು ಪ್ರಾಣಿಗೆ ತೊಂದರೆಮಾಡಿದರೂ ಈಶ್ವರನ ವಿಷಯಕ್ಕೆ ಅಪರಾಧಮಾಡಿದಂತೆ ಆಗುತ್ತದೆ ಎಂಬುದರ ಅರಿವಾಗಬೇಕು. ಒಂದು ಸಣ್ಣ ಪ್ರಾಣಿಗೆ ಉಪಕಾರವನ್ನು ಮಾಡಿದರೂ ಅದು ಈಶ್ವರನ ಸೇವೆಯಾಗುತ್ತದೆ ಎಂಬ ನಂಬಿಕೆಯುಂಟಾಗಬೇಕು. ನಮ್ಮ ದೃಷ್ಟಿಯು ಇದಕ್ಕೆ ವಿಪರೀತವಾಗಿರುತ್ತದೆ. “ತ್ಯಜೇದೇಕಂ ಕುಲಸ್ಯಾರ್ಥೇ” ಎನ್ನುವ ಹಾಗೆ ಅಮೆರಿಕನ್ನರು ಜಪಾನರ ಮೇಲೆ ಬಾಂಬು ಹಾಕಿದ್ದು ಒಳ್ಳೆಯದೇ ಆಯಿತು; ಏಕೆಂದರೆ ಆ ಕಾರಣದಿಂದ ಕೂಡಲೆ ಯುದ್ಧವು ನಿಂತಿತು, ಶಾಂತಿಯು ಮೈದೋರಿತು-ಎಂದು ಭಾವಿಸುವವರು ಅನೇಕರು ನಮ್ಮಲ್ಲಿರುತ್ತಾರೆ. ಅದು ಸರಿಯೆಂದು ನನಗೆ ತೋರುವದಿಲ್ಲ. ಆಟಂಬಾಂಬಿನ ಪ್ರಯೋಗವು ವಿಷದ ಮುಳ್ಳಿನ ಬೀಜವನ್ನು ಬಿತ್ತಿದಂತೆ ಆಗಿರುತ್ತದೆ ಎಂದೇ ನನ್ನ ಅಭಿಪ್ರಾಯ. ಏಕೆಂದರೆ ಈಗ ಬೇರೆಬೇರೆಯ ಜನಾಂಗಗಳು ಆಟಂಬಾಂಬಿನ ರಹಸ್ಯವನ್ನು ಭೇದಿಸಬೇಕೆಂದು ಪ್ರಯತ್ನಿಸುತ್ತಿರುತ್ತಾರೆ; ಆಟಂಬಾಂಬಿನ ಆಟವು ಸಾಗದಂಥ ಪ್ರತ್ಯಸ್ತ್ರವೊಂದನ್ನು ನಿರ್ಮಾಣಮಾಡುವದಕ್ಕೂ ಕುತೂಹಲವುಳ್ಳವರಾಗಿರುತ್ತಾರೆ. ಅವರು ತಮ್ಮ ಪ್ರಯತ್ನದಲ್ಲಿ ಜಯಶೀಲರಾಗಲಿ, ಆಗದಿರಲಿ-ಜಪಾನೀಯರ ಮನಸ್ಸಿನಲ್ಲಿ ನೆಟ್ಟಿರುವ ಬಿಳಿಯರ ದ್ವೇಷವನ್ನು ಆಟಂಬಾಂಬು ಕಿತ್ತುಹಾಕಿತೆಂದು ಭಾವಿಸುವದಕ್ಕೆ ಯಾವ ಕಾರಣವೂ ಇಲ್ಲ. ಅಮೆರಿಕನ್ನರ ವಿಜಯವು ಈಗಿನ ಪ್ರಮುಖರಾಷ್ಟ್ರಗಳಲ್ಲಿ ಅಸೂಯೆಯನ್ನು ಹೆಚ್ಚಿಸುವದಕ್ಕೆ ಕಾರಣ ವಲ್ಲವೆಂದು ಹೇಳುವದಕ್ಕೂ ಆಗುವದಿಲ್ಲ. ಲೋಕದಲ್ಲಿ ಎಲ್ಲಿತಾನೆ ಈಗ ನಿಜವಾದ ಶಾಂತಿಯಿದೆ? “ನ ಹಿ ವೈರೇಣ ವೈರಾಣಿ ಶಾಮ್ಯಂತೀಹ ಕದಾಚನ” ವೈರದಿಂದ ವೈರಗಳು ಎಂದಿಗೂ ಶಾಂತವಾಗುವದಿಲ್ಲ—ಎಂಬ ಯುಧಿಷ್ಠಿರವಾಕ್ಯಕ್ಕೆ ಎರಡಿಲ್ಲ. ಲೋಕಕ್ಕೆ ಶಾಂತಿಯು ನಿಜವಾಗಿಯೂ ದೊರಕಬೇಕೆಂದು ಹವಣಿಸುವವರು ಧ್ಯಾನಯೋಗಿಯ ಧ್ಯೇಯವನ್ನಿಟ್ಟುಕೊಂಡು ಪರರ ಸುಖದುಃಖಗಳನ್ನು ತಮ್ಮದೆಂದು ಭಾವಿಸುವ ಅಭ್ಯಾಸವನ್ನು ಕೂಡಲೆ ಕೈಗೊಳ್ಳಬೇಕು.

ಭಗವಂತನು ವರ್ಣಿಸಿದ ಯೋಗದ ಅದ್ಭುತಮಹಿಮೆಯನ್ನು ಕೇಳಿದ ಅರ್ಜುನನು ಒಂದು ಪ್ರಶ್ನೆಯನ್ನು ಮಾಡಿರುತ್ತಾನೆ:

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥** (೬-೩೩)

ಯೋಗದಲ್ಲಿರುವ ಮನಸ್ಸು ಎಂಥ ಹೆಚ್ಚಿನ ದುಃಖದಿಂದಲೂ ಚಲಿಸುವದಿಲ್ಲ; ಅದು ಗಾಳಿಯಿಲ್ಲದ ಕಡೆಯಲ್ಲಿರುವ ದೀಪದಂತೆ ಅಲುಗಾಡದೆ ಇರುತ್ತದೆ; ಯೋಗಿಯು ಎಲ್ಲೆಲ್ಲಿಯೂ ಸಮದರ್ಶನನಾಗಿರುತ್ತಾನೆ-ಎಂದು ಮುಂತಾಗಿ ಭಗವಂತನು ಹೇಳಿದ್ದು ಅರ್ಜುನನಿಗೆ ಸಂಶಯವನ್ನುಂಟುಮಾಡಿತು. ಮನಸ್ಸು ಇಂಥ ಸಮಸ್ಥಿತಿಯನ್ನು ಪಡೆಯುವದು ಸಾಧ್ಯವೆ? ಮನಸ್ಸನ್ನು ಹೊರಗಿನ ವಿಷಯಗಳಿಂದ ಬಿಗಿಹಿಡಿದು ಆತ್ಮನಲ್ಲಿಯೇ ನಿಲ್ಲಿಸುವದೂ, ಆ ಆತ್ಮನೇ ಎಲ್ಲರಲ್ಲಿಯೂ ಇರುವನೆಂದು ಹೊರಗಿನ ತಾರತಮ್ಯಗಳನ್ನೆಲ್ಲ ಒರಸಿಹಾಕಿ ಸರ್ವಸಮತ್ವವನ್ನು ಕಂಡುಕೊಳ್ಳುವದೂ ಸಾಧ್ಯವೆ? ಮನಸ್ಸೆಂದರೆ ಮನನಮಾಡುತ್ತಿರುವದು; ಮನನವೆಂದರೆ ಎಡಬಿಡದೆ ಕಂಪಿಸುತ್ತಿರುವದು, ಚಲಿಸುತ್ತಿರುವದು. ಹೀಗೆ ಗಾಳಿಯಂತೆ ಕಂಡಕಡೆಗೆ ಹರಿಯುತ್ತಿರುವ ಈ ಮನಸ್ಸನ್ನು ನಿಗ್ರಹಿಸುವದು ಹೇಗೆ ಸಾಧ್ಯ? ಇದೇನೋ ಗಾಳಿಯನ್ನು ಮೂಟೆ ಕಟ್ಟುವಂಥ ದುಷ್ಕರವಾದ ಕಾರ್ಯವಾಗಿ ತೋರುತ್ತಿದೆಯಲ್ಲ! ಎಂದು ಅರ್ಜುನನಿಗೆ ಶಂಕೆಯುಂಟಾಯಿತು. ಆತ್ಮನನ್ನು ಬಿಟ್ಟು ಹೊರಕ್ಕೆ ವಿಷಯಗಳ ಕಡೆಗೆ ಹರಿಯುತ್ತಿರುವ ಮನಸ್ಸನ್ನು ಹಿಂತಿರುಗಿಸಿ ಆತ್ಮನಲ್ಲಿಯೇ ನಿಲ್ಲಿಸಿಕೊಳ್ಳುವದೆಂಬುದು ಕಾಶಿಯವರೆಗೆ ಬಂದಿರುವ ಗಂಗೆಯನ್ನು ಮತ್ತೆ ಹಿಮಾಲಯಕ್ಕೆ ಕಳುಹಿಸುವದಕ್ಕೆ ಮಾಡುವ ಪ್ರಯತ್ನದಂತೆ ಅಸಂಭವ ಎಂದು ತೋರಿತು.

ಈ ಶಂಕೆಯ ಪರಿಹಾರವನ್ನು ಭಗವಂತನು ಹೇಗೆ ಮಾಡಿರುತ್ತಾನೆ ಎಂಬುದನ್ನು ಈಗ ಪರಿಶೀಲಿಸೋಣ:

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।**
**ಅಭ್ಯಾಸೇನ ತು ಕೌನ್ತೇಯ ವೈರಾಗ್ಯೇಣ ಚ ಗೃಹ್ಯತೇ ॥** (೬-೩೫)

ಮನಸ್ಸನ್ನು ಬಿಗಿಹಿಡಿಯುವದು ಕಷ್ಟವೆಂಬುದು ನಿಜ; ಅದು ಚಂಚಲವೆಂಬುದೂ ನಿಜ. ಚಂಚಲವಾದ ಮನಸ್ಸನ್ನು ಕಟ್ಟಿಹಾಕುತ್ತೇನೆಂದು ಹಠತೊಟ್ಟರೆ ಅದು ಮತ್ತಷ್ಟು ಚಂಚಲವಾಗುತ್ತದೆ. ಆದರೂ ಅದನ್ನು ಉಪಾಯದಿಂದ ನಿಗ್ರಹಿಸುವದು ಸಾಧ್ಯ. ಗಂಗಾನದಿಯನ್ನು ಹಿಮಾಲಯದ ಕಡೆಗೆ ತಿರುಗಿಸುವದು ಅಸಾಧ್ಯವೆಂಬುದೂ ಒಂದು ದೃಷ್ಟಿಯಿಂದ ನಿಜವೇ ಆದರೂ ಬುದ್ಧಿವಂತರಾದ ಶಿಲ್ಪಿಗಳು ಅದನ್ನು ಬೇರೆಬೇರೆಯ ಕಡೆಗೆ ಕಾಲುವೆಗಳಿಂದ ತಿರುಗಿಸಿ ಮೊದಲು ಅಸಾಧ್ಯವೆಂದು ಕಾಣುವ ಆ ಕೆಲಸವನ್ನು ಸಾಧಿಸುವದಕ್ಕೂ ಬರುತ್ತದೆ. ಇದರಂತೆ ಹಠದಿಂದ ಮನಸ್ಸನ್ನು ಕಟ್ಟಿಹಾಕುವದಕ್ಕೆ ಪ್ರಯತ್ನಿಸುವದು ಮೂರ್ಖತನವಾದರೂ ಅಭ್ಯಾಸ, ವೈರಾಗ್ಯ-ಎಂಬ ಉಪಾಯಗಳಿಂದ ಅದನ್ನು ಹಿಡಿತಕ್ಕೆ ತಂದುಕೊಳ್ಳಬಹುದು. ಅಭ್ಯಾಸವೆಂದರೆ ವಿಷಯಗಳನ್ನು ಬಿಡಿಬಿಡಿಸಿ ಅವುಗಳ ದೋಷವನ್ನು ಮನಗಾಣುವದು.

ಈ ಲೋಕದಲ್ಲಿ ಯಾವದೊಂದು ವಿಷಯವೂ ದುಃಖಕ್ಕೆ ಸಂಬಂಧಪಡದೆ ಇರುವದಿಲ್ಲ. ನೋಡುವದಕ್ಕೆ ಎಷ್ಟೇ ರಮಣೀಯವಾಗಿದ್ದರೂ ವಿಷಯವನ್ನು ಚೆನ್ನಾಗಿ ನಿಟ್ಟಿಸಿನೋಡಿದರೆ ಅದರೊಳಗಿನ ವಿಷದ ಹೂರಣದ ಅರಿವಾಗುತ್ತದೆ. ಹೀಗೆ ವಿಷಯದ ದೋಷವನ್ನು ಮನಸ್ಸಿನಲ್ಲಿ ಹೊರಳಿಸಿಹೊರಳಿಸಿ ಮನಸ್ಸು ಆತ್ಮನಲ್ಲಿಯೇ ನಿಲ್ಲುವಂತೆ ಮಾಡಬೇಕು. ಮತ್ತೆ ಹೊರಕ್ಕೆ ಬಂದರೆ ಅದನ್ನು ಮತ್ತೂ ಹಿಡಿದೆಳೆದು ಆತ್ಮನಲ್ಲಿ ನಿಲ್ಲಿಸಿಕೊಳ್ಳಬೇಕು. ಹೊರಗೆ ಹೋದಾಗಲೆಲ್ಲ ವಿಷಯದ ದೋಷಗಳನ್ನು ಬಿಡಿಸಿ ತಿಳಿಸುವದು, ಅದರಲ್ಲಿ ವೈರಾಗ್ಯವನ್ನುಂಟುಮಾಡುವದು, ಮತ್ತೆ ಹಿಡಿತಂದು ಆತ್ಮನನ್ನು ತೋರಿಸುವದು-ಇದೇ ಮನಸ್ಸನ್ನು ಹಿಡಿಯುವದಕ್ಕೆ ಉಪಾಯವು. ಯಾವನು ವೈರಾಗ್ಯ, ಅಭ್ಯಾಸ-ಎಂಬ ಈ ಉಪಾಯದ್ವಯವನ್ನವಲಂಬಿಸಿ ಪ್ರಯತ್ನ ಮಾಡುವನೋ ಅವನಿಗೆ ಮನಸ್ಸು ಅವಶ್ಯವಾಗಿ ಕಾಲಾನುಕಾಲಕ್ಕೆ ವಶವಾಗುತ್ತದೆ.

ಇಲ್ಲಿ ಅರ್ಜುನನಿಗೆ ಮತ್ತೊಂದು ಸಂಶಯವುಂಟಾಯಿತು: ಯಾವನು ಈ ರೀತಿಯಲ್ಲಿ ಪ್ರಯತ್ನಮಾಡುತ್ತಿದ್ದರೂ ಸಾಕಾದಷ್ಟು ಪ್ರಯತ್ನವನ್ನು ಮಾಡಿರುವದಿಲ್ಲವೋ, ಯಾವನು ಶ್ರದ್ಧೆಯಿಂದ ಪ್ರಯತ್ನವನ್ನು ಮಾಡುತ್ತಿದ್ದರೂ ವಿಷಯವಾಸನೆಯ ಪ್ರಾಬಲ್ಯದಿಂದ ಸಾಯುವಕಾಲಕ್ಕೆ ಈ ಚಿಂತನೆಯಿಂದ ಚಲಿಸಿ ಹೊರಮುಖವಾಗಿ ಬಿಡುವನೋ ಅವನ ಗತಿಯೇನು? ಯಾವನು ಧ್ಯಾನಯೋಗಕ್ಕೆ ಸಿದ್ಧನಾಗಬೇಕೆಂದು ಕರ್ಮಗಳನ್ನೆಲ್ಲ ಸಂನ್ಯಾಸಮಾಡಿರುವನೋ ಅವನಿಗೆ ಧ್ಯಾನಯೋಗದ ಫಲವೂ ಆಗದಿದ್ದರೆ ಹೇಗೆ? ಅವನಿಗೆ ಕರ್ಮದ ಫಲವೂ ಇಲ್ಲ, ಧ್ಯಾನದ ಫಲವೂ ಇಲ್ಲ- ಹೀಗಾಗಿ ಉಭಯಭ್ರಷ್ಟನಾಗುವನೋ ಹೇಗೆ? ಹೊರಟಿದ್ದು ಪರಮಾತ್ಮನನ್ನು ಮುಟ್ಟುವದಕ್ಕೆ, ಆದರೆ ಅವನು ಸೇರುವದು ಎಲ್ಲಿಗೆ?- ಎಂಬುದೇ ಅರ್ಜುನನ ಸಂಶಯ.

ಇದಕ್ಕೆ ಭಗವಂತನು ಕೊಟ್ಟಿರುವ ಉತ್ತರವನ್ನು ಇನ್ನು ವಿಮರ್ಶಿಸೋಣ:

**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥**

ಯಾವನು ಉತ್ತಮವಾದ ಸಾಧನವನ್ನು ಮಾಡುತ್ತಿರುವನೋ ಅವನಿಗೆ ದುರ್ಗತಿಯಾಗುವದೆಂದು ಶಂಕಿಸುವದಕ್ಕೆ ಯಾವ ಕಾರಣವೂ ಇರುವದಿಲ್ಲ. ಮನುಷ್ಯನ ಮನಸ್ಸಿನಲ್ಲಿ ಎಂಥ ವಿಚಾರಗಳಿರುವವೋ ಅಂಥ ವಾಸನೆಗಳಿರುತ್ತವೆ; ಅಂಥ ವಾಸನೆಗಳು ಕಾಲಾನುಕಾಲಕ್ಕೆ ಉದ್ಬೋಧಕಸಾಮಗ್ರಿಯು ಸನ್ನಿಹಿತವಾದರೆ ಕೂಡಲೆ ಸ್ಥೂಲರೂಪವನ್ನು ಪಡೆಯುತ್ತವೆ. ಆದ್ದರಿಂದ ಯೋಗಿಯಂಥ ಕಲ್ಯಾಣ ಸಾಧನವನ್ನು ಅಭ್ಯಾಸಮಾಡುತ್ತಿರುವವನಿಗೆ ಕೆಟ್ಟ ಫಲವುಂಟಾಗುವದೆಂದು ಶಂಕಿಸುವದಕ್ಕೆ ಎಲ್ಲಿ ಅವಕಾಶವಿದೆ? ಇಂಥ ಸಾಧಕನಿಗೆ ಈ ಲೋಕದಲ್ಲಿಯೂ ಕೆಟ್ಟದಾಗಲಾರದು;

ಪರಲೋಕದಲ್ಲಿಯೂ ಕೆಟ್ಟದ್ದಾಗಲಾರದು. ಯಾವನು ಉತ್ತಮವಾದ ಸಂಸ್ಕಾರಗಳನ್ನು ಮನಸ್ಸಿನಲ್ಲಿ ರಾಶಿಹಾಕಿಕೊಂಡಿರುವನೋ ಅವನು ಉತ್ತಮವಾದ ಫಲಾನುಭೋಗಕ್ಕೆ ಬುತ್ತಿಯನ್ನು ಕಟ್ಟಿಕೊಂಡಿರುವನೆಂದು ತಿಳಿಯಬೇಕು.

ಇಲ್ಲಿ ಮನಸ್ಸಿನ ಸ್ವಭಾವದ ಬಗ್ಗೆ ಒಂದು ನಿಯಮವನ್ನು ಹೇಳಿದಂತೆ ಆಗಿರುತ್ತದೆ. ಮನಸ್ಸಿನಲ್ಲಿ ನಮಗೆ ವಿಧವಿಧವಾದ ವಿಚಾರಗಳುಂಟಾಗುತ್ತಿರುವವಷ್ಟೆ. ಯಾವ ವಿಚಾರವೂ ಇಲ್ಲದಾಗ ಮನಸ್ಸು ಖಾಲಿಯಾಗಿರುವದೆಂದು ಭಾವಿಸಬಾರದು. ಮನಸ್ಸಿನಲ್ಲಿ ಹುಟ್ಟಿದ ಪ್ರತಿಯೊಂದು ಭಾವನೆಯೂ ತನ್ನ ತನ್ನ ಸಂಸ್ಕಾರವನ್ನು ಬಿಟ್ಟು ಮರೆಯಾಗಿರುತ್ತದೆ; ಆದ್ದರಿಂದ ಮನಸ್ಸು ಸುಮ್ಮನಿರುವದೆಂಬ ಸುಷುಪ್ತ್ಯಾದಿಗಳಲ್ಲಿಯೂ ಅದರಲ್ಲಿ ನಮ್ಮ ವಿವಿಧಭಾವನೆಗಳ ಸಂಸ್ಕಾರಗಳು ಅಡಗಿಕೊಂಡೇ ಇರುತ್ತವೆ. ಬಂದಬಂದ ಸಂಸ್ಕಾರವನ್ನೇ ಅವಿಚಿಕೊಂಡು ಯಾವದೊಂದನ್ನೂ ವ್ಯಕ್ತಪಡಿಸದೆ ಇರುವದೇ ಮನಸ್ಸಿನ ಸ್ವಭಾವವು. ಆದರೆ ಹೊರಗಿನ ನಿಮಿತ್ತವು ಯಾವದಾದರೊಂದು ಬಂದರೆ ನೀರಿನಲ್ಲಿ ಮುಳುಗಿರುವ ಪ್ರಾಣಿಗಳು ಮೇಲಕ್ಕೆ ತಲೆಹಾಕುವಂತೆ ಈ ಸಂಸ್ಕಾರಗಳಲ್ಲಿ ಯಾವಯಾವವಕ್ಕೆ ಉದ್ಬೋಧಕಸಾಮಗ್ರಿಯು ಬರುತ್ತದೆಯೋ ಅದು ಮೇಲಕ್ಕೆದ್ದು ತೋರಿಕೊಳ್ಳುತ್ತದೆ. ಆದ್ದರಿಂದ ನಾವು ಮಾಡಿರುವ ಧರ್ಮಾಧರ್ಮಗಳಿಗೆ ಕಾಲಾಂತರದಲ್ಲಿಯೂ ಲೋಕಾಂತರದಲ್ಲಿಯೂ ಫಲವು ಆಗಿಯೇ ತೀರುತ್ತದೆ. ಮನಸ್ಸಿನಲ್ಲಿ ಕೆಟ್ಟ ಸಂಸ್ಕಾರಗಳು ಇದ್ದರೆ ಅವು ಎದ್ದುಕೊಂಡಾಗ ಕೆಟ್ಟ ಫಲಗಳೂ, ಒಳ್ಳೆಯ ಸಂಸ್ಕಾರಗಳು ಇದ್ದರೆ ಅವು ಎದ್ದುಕೊಂಡಾಗ ಒಳ್ಳೆಯ ಫಲಗಳೂ ನಾವು ಬೇಡವೆಂದರೂ ಆಗಿಯೇ ತೀರುವವು. ಆದ್ದರಿಂದ ನಾವು ನಮ್ಮ ಮನಸ್ಸಿನಲ್ಲಿ ಎಂಥ ಭಾವನೆಗಳಿಗೆ ಇಂಬುಗೊಡುವೆವೆಂಬ ವಿಷಯದಲ್ಲಿ ಎಚ್ಚರಿಕೆಯಿಂದಿರಬೇಕು. ನಾವು ಇಂಥ ವಾಸನೆಗಳಿಗೆ ಸ್ಥಳ ಕೊಟ್ಟೇವು, ಇಂಥ ವಾಸನೆಗಳನ್ನು ಹತ್ತಿರ ಬರಲೀಸೆವು-ಎಂದು ಪ್ರತಿಜ್ಞೆ ಮಾಡುವದಕ್ಕೆ ಯಾರಿಂದಲೂ ಆಗಲಾರದು. ಆದ್ದರಿಂದ ಈ ವಿಷಯದಲ್ಲಿ ವಿವೇಕಿಯಾದವನು ಮಾಡಬೇಕಾದದ್ದೇನೆಂದರೆ, ತನ್ನ ಮನಸ್ಸನ್ನು ಭಗವಂತನ ಅಧೀನದಲ್ಲಿಟ್ಟುಬಿಡಬೇಕು. "ತಚ್ಚಿಂತನಂ ತತ್ಕಥನಮನ್ಯೋನ್ಯಂ ತತ್ಪ್ರಬೋಧನಮ್" ಎಂಬಂತೆ ಆತನ ವಿಷಯವನ್ನೇ ಚಿಂತಿಸುತ್ತಿರಬೇಕು, ಆತನ ವಿಷಯವನ್ನೇ ಕುರಿತು ಮಾತನಾಡುತ್ತಿರಬೇಕು, ಒಬ್ಬರೊಡನೊಬ್ಬರು ಸೇರಿದಾಗ ಆತನ ವಿಷಯದಲ್ಲಿಯೇ ಸಂಭಾಷಣೆಮಾಡಬೇಕು. ಇಂಥ ಅಭ್ಯಾಸವನ್ನು ಇಟ್ಟುಕೊಂಡವರಿಗೆ ಒಂದು ಸದ್ವಾಸನೆ ಹೊರಕ್ಕೇಳುವಾಗ ತನ್ನ ಸಹಚರರಾದ ಹತ್ತು ವಾಸನೆಗಳನ್ನು ಜೊತೆಯಲ್ಲಿ ಕರೆದುಕೊಂಡು ಬರುತ್ತದೆ. ಇಂಥ ಧ್ಯಾಯಿಗಳಿಗೇ ಪರಮಪುರುಷಾರ್ಥವು ದೊರಕುವದು.

# ೪೮. ಯೋಗಸಾಧನವು ಕೊಡುವ ಕಾಲಾಂತರಫಲಗಳು ೬-(೪೧-೪೪)

(೨೨.೬.೪೭)

ಜನರು ಪರಮಾರ್ಥತತ್ತ್ವವನ್ನು ಅರಿತುಕೊಂಡು ಉತ್ತಮವಾದ ಜೀವನವನ್ನು ನಡೆಸುತ್ತಾ ನಲಿಯುತ್ತಿರಬೇಕೆಂಬುದೇ ಗೀತೆಯ ಉಪದೇಶವು. ಇದಕ್ಕೆ ಕರ್ಮಯೋಗವನ್ನು ಬಹಿರಂಗಸಾಧನವಾಗಿಯೂ ಧ್ಯಾನವನ್ನು ಅಂತರಂಗಸಾಧನವಾಗಿಯೂ ತಿಳಿಸಿರುತ್ತದೆ. ಧ್ಯಾನಯೋಗವನ್ನೇ ಆರನೆಯ ಅಧ್ಯಾಯದಲ್ಲಿ ಹೇಳಿರುವದು; ಇದನ್ನು ಅಪ್ರಧಾನಮಾಡುವದರಿಂದ ಯಾವ ಪ್ರಯೋಜನವೂ ಆಗುವದಿಲ್ಲ. "ಗೀತೆಯಲ್ಲಿ ಕರ್ಮಯೋಗವನ್ನೇ ಮುಖ್ಯವಾಗಿ ಹೇಳಿರುತ್ತದೆ; ಧ್ಯಾನವನ್ನೂ ಆಗಾಗ್ಗೆ ಮಾಡಬಹುದು. ಆದರೆ ಯಾವಾಗಲೂ ಹಾಗೇ ಇದ್ದರೇನು ಗತಿ? ವ್ಯವಹಾರಕ್ಕೇ ಹೆಚ್ಚು ಬೆಲೆಯನ್ನು ಕೊಡಬೇಕು" ಎನ್ನುವವರು ಅನೇಕರು ಇರುತ್ತಾರೆ! ಈಗ್ಗೆ ಲೌಕಿಕವ್ಯವಹಾರಕ್ಕೆ ಹೆಚ್ಚಿನ ಬೆಲೆ ಬಂದಿದೆ ಎಂಬುದೇನೋ ನಿಜ. ಹೊಟ್ಟೆಬಟ್ಟೆಗೆ ಚಿಂತೆಯಿಲ್ಲ ಎನ್ನುವವರನ್ನು ಪುಣ್ಯವಂತರು ಎಂದು ಭಾವಿಸುವಂತೆ ಆಗಿರುತ್ತದೆ. ಆದರೆ ಹಿಂದೆ ಯಾವಾಗಲೂ ಹೀಗೇ ಇತ್ತೆಂದಾಗಲಿ, ಮುಂದೆಯೂ ಯಾವಾಗಲೂ ಹೀಗೇ ಇರುವದೆಂದಾಗಲಿ ಭಾವಿಸುವದು ತಪ್ಪು. "ಹೊಟ್ಟೆಬಟ್ಟೆಗಿಂತಲೂ ಹೆಚ್ಚಿನದೂ ಜೀವನದಲ್ಲಿದೆ. "ಹೊಟ್ಟೆಯ ಯೋಚನೆಯೇಕೆ? ನಮ್ಮನ್ನು ಸೃಷ್ಟಿಸುವದಕ್ಕಿಂತ ಮುಂಚೆಯೇ ಭಗವಂತನು ಆಹಾರವನ್ನು ಸೃಷ್ಟಿಸಿರುತ್ತಾನೆ" ಎನ್ನುವ ಕಾಲವೂ ಇತ್ತು. "ಕಲ್ಲಿನಲ್ಲಿರುವ ಕಪ್ಪೆಗೆ ಅಲ್ಲಲ್ಲಿಗೇ ಆಹಾರವನ್ನು ತಂದಿತ್ತವರು ಯಾರು?" ಎಂಬ ದಾಸರ ಮನೋಭಾವವನ್ನು ನಾವು ಲಕ್ಷಿಸಬೇಕು. ಈಶ್ವರನನ್ನು ಮರೆತು ಹೊಟ್ಟೆಬಟ್ಟೆಯ ವಿಚಾರದಲ್ಲಿಯೇ ಕಾಲವನ್ನು ಕಳೆಯುವವರು ಅಲ್ಪರು. ಈಶ್ವರನ ಚಿಂತೆಯಲ್ಲಿ ಕರ್ಮಯೋಗವನ್ನು ಮಾಡಿದರೂ ಒಂದು ಬಗೆಯ ಆನಂದವು ನಮಗೆ ದೊರಕುವದು. ಹೀಗಿರುವಲ್ಲಿ ಎಲ್ಲವನ್ನೂ ಬಿಟ್ಟು ಭಗವಂತನ ಸ್ಮರಣೆಯಲ್ಲಿಯೇ ಕಾಲವನ್ನು ಕಳೆಯುವವರಿಗೆ ದೊರಕುವ ಆನಂದವನ್ನು ಏನೆಂದು ಹೊಗಳಬೇಕು?

ಆಸನಾದಿಗಳು ಈ ಯೋಗಕ್ಕೆ ಬಹಿರಂಗಸಾಧನಗಳು; ಆತ್ಮನಲ್ಲಿಯೇ ಮನಸ್ಸನ್ನಿಡುವಿಕೆ, ಮತ್ತೇನನ್ನೂ ಚಿಂತಿಸದಿರುವಿಕೆ-ಅಂತರಂಗವು. ಅಧ್ಯಾತ್ಮದ ಆನಂದವೆಂಬುದು ನಮ್ಮೆಲ್ಲರಿಗೂ ಜನ್ಮಸಿದ್ಧವಾದ ಹಕ್ಕು; ಅದನ್ನು ಪಡೆಯುವದೆಂದರೆ ಕಿಟಕಿಯ ಮೂಲಕ ಹೊರಗಿರುವ ಪದಾರ್ಥವನ್ನು ಇಣಿಕಿ ನೋಡುವಷ್ಟು ಸುಲಭವಾಗಿರುತ್ತದೆ.

ಅದಕ್ಕೆ ಮಾಡಬೇಕಾದ್ದೆಲ್ಲ ಇಷ್ಟೆ. ಹೊರಗಿನ ವಿಷಯಗಳ ವಾಸನೆಗಳನ್ನೆಲ್ಲ ಮಟ್ಟು ಮಾಡಿಕೊಂಡು, ಹೊರಗಿನ ಕರ್ಮಗಳನ್ನೆಲ್ಲ ಬಿಟ್ಟು ಒಳಕ್ಕೆ ಇಣಕಿ ನೋಡಬೇಕು. ಹೇಗೋ ಮಾಡಿ ಮನಸ್ಸನ್ನು ಆತ್ಮನಿಗೆ ಹೊಂದಿಸಿ ಆತ್ಮನಲ್ಲಿ ಒಂದಾಗಿಸಿಕೊಳ್ಳಬೇಕು. ಆ ಕೂಡಲೆ ಎಲ್ಲವೂ ಆತ್ಮನಾಗಿಯೇ ಕಾಣುತ್ತದೆ. ಆನೆ, ಇರುವೆ-ಮುಂತಾದ ತಾರತಮ್ಯವುಳ್ಳ ಪ್ರಾಣಿಗಳಲ್ಲಿ ಯಾವ ತಾರತಮ್ಯವೂ ಇಲ್ಲದ ಆನಂದಸ್ವರೂಪನಾದ ಪರಮಾತ್ಮನೇ ಕಾಣಿಸುವದಕ್ಕೆ ಮೊದಲಾಗುತ್ತಾನೆ. ಇದೇ ತತ್ತ್ವವು. ಸಮಾಧಿಜನ್ಯವಾದ ಈ ಆನಂದವನ್ನು ನಮ್ಮಲ್ಲಿ ಪ್ರತಿಯೊಬ್ಬನೂ ಪ್ರಯತ್ನಪಟ್ಟು ತಾನೇ ಪಡೆದುಕೊಂಡು ಮನದಟ್ಟುಮಾಡಿಕೊಳ್ಳಬೇಕು. ಅದು ಹಾಗಿದೆ, ಹೀಗಿದೆ ಎಂದು ವರ್ಣಿಸಿ ತಿಳಿಸುವದು ಸಾಧ್ಯವಿಲ್ಲ. ಮನಸ್ಸಿನ ಪ್ರತ್ಯಯಕ್ಕೇ ಸಿಕ್ಕದಿರುವ ಆ ಆನಂದವನ್ನು ಮಾತಿನಿಂದ ತಿಳಿಸುವದು ಹೇಗಾದೀತು?

ಇಲ್ಲಿ ಒಂದು ಶಂಕೆ; ಹೊರಗಿನ ವ್ಯವಹಾರವನ್ನೆಲ್ಲ ಬಿಟ್ಟು, ಸಕಲಶಾಸ್ತ್ರೀಯ ಕರ್ಮಗಳನ್ನೂ ಬಿಟ್ಟು, ಧ್ಯಾನಯೋಗಕ್ಕೆ ಕುಳಿತರೆ ನೀವು ಹೇಳುವ ಈ ಆನಂದವೂ ಸಿಕ್ಕದೆ ಹೋದರೆ ಏನು ಗತಿ? ಅಂಥ ಸಾಧಕನಿಗೆ ಮುಂದಿನ ಜನ್ಮದಲ್ಲಿ ಈ ಲೋಕದಲ್ಲಿ ಯಾವ ಫಲವಾಗುವದು? ಪರಲೋಕದಲ್ಲಿ ಯಾವ ಫಲವಾಗುವದು? ಕರ್ಮಫಲವೂ ಇಲ್ಲದೆ ಯೋಗದ ಫಲವೂ ಇಲ್ಲದೆ ತ್ರಿಶಂಕುವಾಗುವನೋ ಏನೋ! ಸಾಧಕನಿಗೆ ಶ್ರದ್ಧೆ ಇದೆ, ಆದರೆ ಪ್ರಯತ್ನವು ಪೂರ್ತಿಯಾಗಿಲ್ಲ. ಕರ್ಮವನ್ನು ಬಿಟ್ಟಿದ್ದಾನೆ, ಧ್ಯಾನವು ಪಕ್ವವಾಗಿಲ್ಲ. ಇಂಥವನಿಗೆ ಈ ಶರೀರವು ಬಿದ್ದ ಬಳಿಕ ಯಾವ ಫಲವಾಗುವದು?

ಅರ್ಜುನನು ಈ ಪ್ರಶ್ನೆಯನ್ನು ಹಾಕಿರುತ್ತಾನೆ. ಭಗವಂತನು ಇದಕ್ಕೆ ಮೊದಲು ಹೇಳಿರುವ ಸಾಮಾನ್ಯವಾದ ಉತ್ತರವೇನೆಂದರೆ, ಯೋಗಿಗೆ ಈ ಲೋಕದಲ್ಲಿಯೂ ಕೆಟ್ಟಗತಿಯಾಗುವಂತಿಲ್ಲ, ಪರದಲ್ಲಿಯೂ ಕೆಟ್ಟಗತಿಯಾಗುವಂತಿಲ್ಲ. ಏಕೆಂದರೆ ಈ ಜನ್ಮದಲ್ಲಿ ಶರೀರವಿರುವವರೆಗಂತೂ ಧ್ಯಾನದ ಅಭ್ಯಾಸದಿಂದಾಗುವ ಆನಂದವನ್ನು ಪಡೆಯುತ್ತಿರುತ್ತಾನೆ. ಸಾಯುವಾಗ ಪರಮೇಶ್ವರನ ಚಿಂತನೆಯು ಒಂದು ವೇಳೆ ತಪ್ಪಿದರೂ ಬಹು ದೀರ್ಘಕಾಲದವರೆಗೆ ಮಾಡಿದ ಯೋಗಾಭ್ಯಾಸದ ಫಲವಾಗಿ ಪರದಲ್ಲಿಯೂ ಉತ್ತಮಗತಿಯೇ ಆಗುವದು. ಉತ್ತಮಸಾಧನವನ್ನು ಮಾಡಿದವನಿಗೆ ಕೆಟ್ಟಗತಿಯಾಗುವ ಸಂಭವವೇ ಇಲ್ಲವಷ್ಟೆ. ಇದು ಸಾಮಾನ್ಯವಾದ ಉತ್ತರವು. ಇನ್ನು ವಿಶೇಷವಾಗಿ ಯೋಗಿಗೆ ಇಂಥ ಗತಿಯೇ ಆಗುವದೆಂದು ಭಗವಂತನು ಹೇಳುತ್ತಾನೆ:

**ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥**(೬-೪೧)

ಧ್ಯಾನಯೋಗಿಯು ಯಾವ ಕರ್ಮವನ್ನೂ ಮಾಡದಿರುವದರಿಂದ ಅಧರ್ಮಿಷ್ಠ ನೆಂದು ಭಾವಿಸುವಹಾಗಿಲ್ಲ. ಧ್ಯಾನಯೋಗವೆಂಬುದು ಧರ್ಮಮೇಘವು. ಆ ಧರ್ಮಕ್ಕೆ ಸದ್ಗತಿಯಾಗಲೇಬೇಕಲ್ಲವೆ? ಧ್ಯಾನಮಾಡಿದರೆ ಏನಾಗುವದೋ ಎಂದು ಅಂಜಿ ಸುಮ್ಮನಿರುವವನಿಗಿಂತಲೂ ಜಯಶೀಲನಾಗದೆ ಇದ್ದರೂ ಚಿಂತೆಯಿಲ್ಲ, ಧ್ಯಾನಯೋಗ ವನ್ನು ತತ್ಪರತೆಯಿಂದ ಅಭ್ಯಾಸಮಾಡಿದವನು ಎಷ್ಟೋ ಮೇಲು. ಸ್ಕೂಲಿನಲ್ಲಿ ಓದದೆ ಪರೀಕ್ಷೆಗೆ ಹೋಗದೆ ಇರುವವನಿಗಿಂತ ಓದಿ ಪರೀಕ್ಷೆಯಲ್ಲಿ ತೇರ್ಗಡೆಯಾಗದೆ ಇರುವವನು ಕೂಡ ಬಹಳ ಮೇಲಲ್ಲವೆ? ಇದಲ್ಲದೆ ಕರ್ಮಸಂನ್ಯಾಸವೆಂಬುದೇನೂ ಅಧರ್ಮವಲ್ಲ. ಅಧಿಕಾರಿಯಾದವನು ಸಂನ್ಯಾಸಮಾಡುವೆನೆಂದು ಸಂಕಲ್ಪಿಸಿದ ಮಾತ್ರದಿಂದಲೇ ಹಿಂದಿನ ಏಳು ತಲೆಯವರೂ ಮುಂದಿನ ಏಳು ತಲೆಯವರೂ ಉದ್ಧಾರವಾಗುತ್ತಾರೆ; ಅವನ ತಾಯಿಗೂ ಹೆಂಡತಿಗೂ ಮುಂದೆ ಪುಂಜನ್ಮವು ಬರುತ್ತದೆ ಎಂದು ಧರ್ಮಶಾಸ್ತ್ರಕಾರರು ನುಡಿದಿರುತ್ತಾರೆ. ಗೃಹಸ್ಥನೆಂದರೇ ಭಯ ವೆಂದರ್ಥ; ಸಂನ್ಯಾಸವನ್ನು ಸ್ವೀಕರಿಸುವಾಗ ಅಭಯದಾನ ಎಂಬ ಅಹಿಂಸಾಪ್ರತಿಜ್ಞೆಯನ್ನು ಮಾಡಿಸುತ್ತಾರೆ. ಸಂನ್ಯಾಸಿಯಾದವನಿಗೆ ನನ್ನದು ಎಂಬುದೇ ಇಲ್ಲ; "ಜನಕೃಪಾನೈಷ್ಠುರ್ಯ ಮುತ್ಸೃಜ್ಯತಾಮ್" ಎಂದಿರುವಂತೆ ಕೆಲವರಲ್ಲಿ ಕೃಪೆಯನ್ನೂ ಮತ್ತೆ ಕೆಲವರಲ್ಲಿ ನೈಷ್ಠುರ್ಯವನ್ನೂ ಮಾಡಬೇಕಾದ ಆವಶ್ಯಕತೆಯೇ ಸಂನ್ಯಾಸಿಗೆ ಬರುವದಿಲ್ಲ. ಹೀಗೆ ಸರ್ವರಿಗೂ ಅಭಯದಾನವನ್ನು ಕೊಡುವ, ಅಖಿಲಾತ್ಮನಾದ ಭಗವಂತನ ಚಿಂತೆ ಯಲ್ಲಿಯೇ ಜೀವನವನ್ನೆಲ್ಲ ಕಳೆಯುವ, ಪುಣ್ಯಾತ್ಮನಿಗೆ ಎಂಥ ಗತಿಯಾದೀತು?- ಎಂದು ಸಂಶಯವನ್ನಾದರೂ ತಳೆಯುವದಕ್ಕೆ ಕಾರಣವೇನಿದೆ? ಅವನು ಪುಣ್ಯಕರ್ಮಿಗಳ ಲೋಕಗಳನ್ನು ಪಡೆದು ಅಲ್ಲಿ ದೀರ್ಘಕಾಲದವರೆಗೆ ಸುಖವನ್ನು ಪಡೆಯುತ್ತಾನೆ.

ಇನ್ನು ಅವನು ಮತ್ತೆ ಭೂಲೋಕದಲ್ಲಿ ಹುಟ್ಟಿದರೊ? ಎಂದರೆ ಆಗಲಿ, ಅವನಿಗೆ ಎಲ್ಲಿಯೂ ಯಾವದಕ್ಕೂ ಕೊರತೆಯಿರುವದಿಲ್ಲ. ಶ್ರೀಮಂತರ ಮನೆಯಲ್ಲಿ ಹುಟ್ಟಿ ವಿವಿಧಭೋಗಗಳನ್ನು ಅನುಭವಿಸುತ್ತಾನೆ. ಲೋಕದಲ್ಲಿ ಐಶ್ವರ್ಯವಂತರು ಹಲವರು ಇರುತ್ತಾರೆ. ಆದರೆ ಶುಚಿಯಾದ ಆಚಾರವುಳ್ಳವರೂ ಆಗಿ ಸಿರಿವಂತ ರಾಗಿರುವವರು ಬಹಳ ಕಡಿಮೆ. ಅಂಥ ಜನ್ಮವು ಪೂರ್ವಜನ್ಮದ ಸುಕೃತದಿಂದ ಮಾತ್ರವೇ ದೊರೆಯತಕ್ಕದ್ದು. ತನ್ನ ಮನೆಯಲ್ಲಿರುವ ಧನವೆಲ್ಲ ಸದ್ವಿನಿಯೋಗವೇ ಆಗಿ ತನಗೆ ನಿಯಮದಿಂದ ಸುಖವನ್ನೇ ಕೊಡಬೇಕೆಂಬ ನಿಯಮವೇನೂ ಇಲ್ಲ; ಆದರೆ ಪುಣ್ಯವಂತರಿಗೆ ಮಾತ್ರ ಶುದ್ಧಾಚಾರವೂ ಇರುವದರಿಂದ ಅವರಿಗೆ ಧನದಿಂದ ಆಗಬೇಕಾದ ಸುಖವೆಲ್ಲವೂ ಪೂರ್ಣವಾಗಿ ದಕ್ಕುತ್ತದೆ.

ಯೋಗಭ್ರಷ್ಟನಾದವನಿಗೆ ದೊರಕುವ ಫಲವು ಇಷ್ಟರಲ್ಲಿಯೇ ಕೊನೆಗಾಣುವದಿಲ್ಲ. ಅವನ ಸಾಧನವು ಹೆಚ್ಚು ಪಕ್ವವಾಗಿದ್ದರೆ ಅವನಿಗೆ ಮುಂದೆ ಯೋಗಿಗಳ ಮನೆಯಲ್ಲಿಯೇ ಜನ್ಮವುಂಟಾಗುತ್ತದೆ. ಸಾಮಾನ್ಯವಾಗಿ ಯೋಗಿಗಳಾಗಿರುವ ಮಹಾತ್ಮರ ಸಂಗವು ದೊರಕುವದೇ ಕಷ್ಟ; ಹೀಗಿರುವಲ್ಲಿ ಅವರ ಮನೆಯಲ್ಲಿಯೇ ಹುಟ್ಟುವವರು ಎಂಥ ಧನ್ಯರು!

**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್।**

ಇಂಥ ಜನ್ಮವು ಹಿಂದೆ ಹೇಳಿದ ಶುದ್ಧಾಚಾರದ ಪುಣ್ಯವಂತರ ಮನೆಯಲ್ಲಿ ಹುಟ್ಟುವದಕ್ಕಿಂತಲೂ ಕಷ್ಟ. ಬುದ್ಧನು ಹೇಳಿರುವ ಒಂದು ದೃಷ್ಟಾಂತವನ್ನು ಇಲ್ಲಿ ನೆನಪಿಗೆ ತಂದುಕೊಳ್ಳುವದು ಪ್ರಯೋಜನಕಾರಿಯಾಗಿರುವದು. ಒಂದು ಸಮುದ್ರದಲ್ಲಿ ಒಂದು ಆಮೆಯಿರುವದಂತೆ, ಅದು ದಿವ್ಯಸಹಸ್ರಯುಗಕ್ಕೆ ಒಂದು ಸಲ ನೀರಿನಮೇಲೆ ತಲೆಹಾಕುವದಂತೆ. ಅದೇ ಸಮುದ್ರದಲ್ಲಿ ಗಾಳಿಯ ಹೊಡೆತದಿಂದಲೂ ಅಲೆಗಳ ಹೊಡೆದಾಟದಿಂದಲೂ ಅತ್ತಿತ್ತ ಚಲಿಸುತ್ತಿರುವ ಒಂದು ನೊಗವಿರುವದಂತೆ. ಈ ಆಮೆಯು ತನ್ನ ಕತ್ತನ್ನು ಆ ಮರದ ಕಂಡಿಯೊಳಕ್ಕೆ ಸಿಕ್ಕಿಸಿಕೊಳ್ಳುವ ಸಂಭವವು ಎಷ್ಟುಮಟ್ಟಿಗೆ ಇದೆ? ಸತ್ಕುಲದಲ್ಲಿ ಯೋಗಿಗಳ ಮನೆಯಲ್ಲಿ ಹುಟ್ಟುವದು ಅಷ್ಟೇ ಸುಲಭಸಾಧ್ಯ! ಆದರೆ ಧ್ಯಾನಯೋಗಿಗೆ ಇಂಥ ಜನ್ಮವೂ ಸಿಕ್ಕಿಬಿಡುತ್ತದೆ! ಅವನಿಗೆ ಅಲ್ಲಿ ಯೋಗದ ವಾಸನೆಯೂ ಎದ್ದು ಕೊಂಡುಬಿಡುತ್ತದೆ.

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನನ್ದನ ॥** (೬-೪೩)
**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥** (೬-೪೪)

ಕೆಲವರು ಪೂರ್ವಸಾಧನದ ಬಲದಿಂದ ಚಿಕ್ಕ ವಯಸ್ಸಿನಲ್ಲಿಯೇ ಯೋಗಾಭ್ಯಾಸಕ್ಕೆ ಮನಸ್ಸು ಮಾಡುತ್ತಾರೆ. ಆದರೆ ಕೆಲವರು ತಂದೆತಾಯಿಗಳು ಮಗನ ವ್ಯವಹಾರವು ಕೆಟ್ಟುಹೋಗುವದಲ್ಲ!- ಎಂದು ಅದಕ್ಕೆ ಅಡ್ಡಿಮಾಡುವದುಂಟು! ಇದು ಶುದ್ಧ ಅವಿವೇಕತನ. ಭಾಗ್ಯವಶದಿಂದ ಇಂಥ ಸತ್ಪುತ್ರರು ಹುಟ್ಟುವರೇ ಹೊರತು ಸಾಮಾನ್ಯವಾಗಿ ಹುಟ್ಟುವದಿಲ್ಲ. ಆದ್ದರಿಂದ ನಮ್ಮ ಮಕ್ಕಳಲ್ಲಿ ಅಧ್ಯಾತ್ಮಸಾಧನೆಯ ವಾಸನೆಯಾದರೂ ಕಂಡರೆ ಅಡ್ಡಿಮಾಡುವದರ ಬದಲು ನಮ್ಮ ಕೈಯಲ್ಲಾದ ಸಹಾಯವನ್ನೇ ಮಾಡಬೇಕು. ಇದರಿಂದ ನಮಗೂ ಪುಣ್ಯವುಂಟು. ಅಂಥವರು ನಿಜವಾಗಿ ಮಹಾತ್ಮರಾಗಿದ್ದರಂತೂ ನಮ್ಮ ಕುಲವೆಲ್ಲ ಉದ್ಧಾರವಾಗಿಬಿಡುತ್ತದೆ.

ಧೀಮಂತರಾದ ಯೋಗಿಗಳ ಕುಲದಲ್ಲಿ ಹುಟ್ಟಿದ ಧ್ಯಾನಯೋಗಿಯು, ಸಂಗೀತಗಾರರ ಮನೆಯಲ್ಲಿ ಹುಟ್ಟಿರುವ ಹುಡುಗನು ಸಂಗೀತವನ್ನು ಕೇಳಿಕೇಳಿಯೇ ಸಂಗೀತಗಾರ ನಾಗುವಂತೆ, ಬೇಗಬೇಗನೆ ಯೋಗಸಾಧನೆಯಲ್ಲಿ ಮುಂದುವರೆಯುತ್ತಾನೆ. ಯಾರೋ ಅವನನ್ನು ಬಲಾತ್ಕಾರದಿಂದ ಯೋಗಕ್ಕೆ ಎಳೆಯುತ್ತಿರುವರೋ ಎಂಬಂತೆ ಪರಮಾತ್ಮನ ಚಿಂತೆಯಲ್ಲಿಯೇ ಕಾಲವನ್ನು ಕಳೆಯುತ್ತಾನೆ. ಧ್ಯಾನಯೋಗವನ್ನು ಕುತೂಹಲದಿಂದ ಪ್ರವೇಶಮಾಡಿದರೆ ಸಾಕು, ಅಷ್ಟರಿಂದಲೇ ಕರ್ಮಫಲವೆಂಬ ಶಬ್ದಬ್ರಹ್ಮವನ್ನು ಮೀರಿ ಪರಬ್ರಹ್ಮದ ಚಿಂತೆಗೆ ಹಾತುವರಿಯುತ್ತಾನೆ. ಇನ್ನು ಪ್ರಯತ್ನಪೂರ್ವಕವಾಗಿಯೇ ಸಾಧನವನ್ನು ಮಾಡಿದರೆ ಹೇಳಬೇಕಾದದ್ದೇನು? ಸರ್ವಕಲ್ಮಷಗಳನ್ನೂ ನೀಗಿಕೊಂಡು ಪರಿಶುದ್ಧನಾಗಿ ಹಿಂದೆ ಅನೇಕಜನ್ಮಗಳಿಂದ ಹೊಂದಿದ ಯೋಗದ ಸಂಸ್ಕಾರದ ಫಲವಾಗಿ ಪರಬ್ರಹ್ಮವನ್ನೇ ಪಡೆಯುತ್ತಾನೆ. ಆದ್ದರಿಂದ ಧ್ಯಾನಯೋಗಿಗೆ ಎಲ್ಲಾ ದೃಷ್ಟಿಯಿಂದಲೂ ಉತ್ತಮವಾದ ಗತಿಯೇ ಕಾದುಕೊಂಡಿರುತ್ತದೆ.

---

## ೪೯. ಯೋಗದಿಂದ ಜ್ಞಾನವಿಜ್ಞಾನಗಳು ೬-(೪೫-೪೭) ಮತ್ತು ೭-(೧-೨)

(೧೩.೭.೪೭)

ತತ್ತ್ವಜ್ಞಾನಕ್ಕೆ ಅಂತರಂಗಸಾಧನವು ಧ್ಯಾನಯೋಗವೆಂದು ಹೇಳಿರುತ್ತೇನೆ. ಧ್ಯಾನವೆಂಬ ಮಾತನ್ನು ಎರಡು ಅರ್ಥಗಳಲ್ಲಿ ಉಪಯೋಗಿಸುತ್ತಾರೆ. ಒಂದು ಕಲ್ಪನಾರೂಪವಾದ ಭಾವನೆ ಎಂಬ ಅರ್ಥ. ಉದಾಹರಣೆಗೆ ತಂದೆತಾಯಿಗಳನ್ನು ದೇವರೆಂದು ಭಾವಿಸುವದು ಈ ಅರ್ಥದಲ್ಲಿ ಧ್ಯಾನವಾಗಿರುತ್ತದೆ. ಇನ್ನೊಂದು ಅರ್ಥವು ಯಾವದೆಂದರೆ ಪದಾರ್ಥವನ್ನು ಲಕ್ಷ್ಯವಿಟ್ಟು ನೋಡುವದು. ಸಾಮಾನ್ಯವಾಗಿ ನೋಡಿದರೆ ತಿಳಿಯದೆ ಇದ್ದ ರತ್ನದ ತತ್ತ್ವವು ಕಣ್ಣಿಟ್ಟು ಏಕಾಗ್ರಚಿತ್ತದಿಂದ ಪರೀಕ್ಷಿಸಿ ದರೆ ತಿಳಿಯುತ್ತದೆಯಲ್ಲವೆ? ಹೀಗೆ ಏಕಾಗ್ರತೆಯಂತೆ ತತ್ತ್ವಜ್ಞಾನಕ್ಕಾಗಿ ವಸ್ತುವನ್ನು ಕುರಿತು ಚಿಂತಿಸುವದು ಎರಡನೆಯ ಅರ್ಥದಲ್ಲಿ ಧ್ಯಾನವು. ಇದನ್ನು ವೇದಾಂತಿಗಳು ನಿದಿಧ್ಯಾಸನ ಎಂದು ಕರೆಯುವರು. ಆತ್ಮತತ್ತ್ವಜ್ಞಾನಕ್ಕೆ ಈ ನಿದಿಧ್ಯಾಸನವು ಬಹಳ ವಾಗಿ ಅವಶ್ಯವಾಗಿರುತ್ತದೆ. ಶಾಸ್ತ್ರವಾಕ್ಯವನ್ನು ಕೇಳಿ ತಿಳಿದುಕೊಳ್ಳುವದು ಶ್ರವಣವು, ಅದನ್ನು ಗುರುವಿನೊಡನೆ ಚರ್ಚಿಸಿ ಯುಕ್ತಿಗೆ ಹೊಂದಿಸಿಕೊಳ್ಳುವದು ಮನನವು; ಈ ಎರಡೂ ನಡೆದ ಮೇಲೆ ನಿದಿಧ್ಯಾಸನದ ಆವಶ್ಯಕತೆಯು ತೋರಿಕೊಳ್ಳುತ್ತದೆ. ಶ್ರವಣ ಮನನಗಳಿಂದಾಗುವ ತಿಳಿವಳಿಕೆಯು ಮತ್ತೊಬ್ಬರ ಅಧೀನವಾಗಿರುತ್ತದೆ. ಶ್ರವಣವು ಶಾಸ್ತ್ರವನ್ನೂ ಮನನವು ಗುರೂಕ್ತಿಯನ್ನೂ ಮತ್ತು ಯುಕ್ತಿಯನ್ನೂ ಅವಲಂಬಿಸಿ

ಕೊಂಡಿರುತ್ತವೆ. ಆದರೆ ನಿದಿಧ್ಯಾಸನದಿಂದಾಗುವ ಜ್ಞಾನವು ತನಗೇ ನೇರಾಗಿ ತಿಳಿಯಬರತಕ್ಕದ್ದು, ಶ್ರವಣಮನನಜ್ಞಾನಗಳಂತೆ ವಸ್ತುವನ್ನು ಪರೋಕ್ಷರೂಪವಾಗಿ ಪರಾಧೀನವಾಗಿ ತಿಳಿಸತಕ್ಕದ್ದಲ್ಲ.

ಇಂಥ ನಿದಿಧ್ಯಾಸನವನ್ನು ಮಾಡುವವನಿಗೆ ಇಲ್ಲಿಯೇ ಫಲವಾಗಬೇಕಲ್ಲವೆ? ಏನಾದರೂ ನಿಮಿತ್ತದಿಂದ ಸಾಧನವು ಸಂಪೂರ್ಣವಾಗದಿದ್ದರೆ ಅವನ ಗತಿ ಏನು? ಎಂದು ಅರ್ಜುನನು ಕೇಳಿದ್ದನು. ಧ್ಯಾನಯೋಗಿಯ ಪ್ರಯತ್ನವು ಎಂದಿಗೂ ನಿಷ್ಫಲ ವಾಗುವದಿಲ್ಲ. ಅವನು ಮಾಡಿದ್ದೇ ಉತ್ತಮಪುಣ್ಯಕರ್ಮವೆಂದು ಪರಮೇಶ್ವರನು ಅವನಿಗೆ ಪುಣ್ಯವಂತರು ಪಡೆಯಬೇಕಾದ ಉತ್ತಮಲೋಕಗಳಲ್ಲಿ ಎಷ್ಟೋ ವರ್ಷ ಗಳವರೆಗೂ ವಾಸವನ್ನು ಕಲ್ಪಿಸುತ್ತಾನೆ; ಮತ್ತೆ ಈ ಲೋಕದಲ್ಲಿ ಹುಟ್ಟುವಾಗಲೂ ಧನವಂತರೂ ಶುದ್ಧಾಚಾರರೂ ಆದವರ ಮನೆಯಲ್ಲಿ, ಅಥವಾ ಸಾಧನಪರಿಪಾಕ ವಿಶೇಷದಿಂದ ಪರಿಶುದ್ಧರಾದ ಯೋಗಿಗಳ ಮನೆಯಲ್ಲಿಯೇ, ಹುಟ್ಟುವಂತೆ ಅನುಗ್ರಹಿಸುತ್ತಾನೆ- ಎಂದು ಭಗವಂತನು ಅರ್ಜುನನ ಪ್ರಶ್ನೆಗೆ ಉತ್ತರವನ್ನು ಕೊಟ್ಟನು. ಇದು ಧ್ಯಾನಯೋಗದಲ್ಲಿರುವ ಮಹಿಮಾವಿಶೇಷವನ್ನು ಹೊಗಳಿದ್ದೆಂದು ತಿಳಿಯಬೇಕು.

ಶಾಸ್ತ್ರದಲ್ಲಿ ಯಾವದನ್ನು ವಿಧಿಸಬೇಕಾಗಿದೆಯೋ ಅದನ್ನು ಹೊಗಳುವ ಪದ್ಧತಿ ಯಿದೆ. ಪ್ರಕೃತದಲ್ಲಿ ಜ್ಞಾನಕ್ಕೆ ಅಂತರಂಗಸಾಧನವಾಗಿ ಧ್ಯಾನಯೋಗವನ್ನು ವಿಧಿಸು ವದಕ್ಕಾಗಿ ಈ ಯೋಗವನ್ನು ಹೊಗಳಿರುತ್ತದೆ. ಆದ್ದರಿಂದ ಧ್ಯಾನಯೋಗದ ಮುಖ್ಯ ಫಲವನ್ನು ಕೇಳಿ ಅದನ್ನು ಕೊಂಡಾಡಿ ಉಪಸಂಹಾರಮಾಡುವದಕ್ಕಾಗಿ ಭಗವಂತನು ಹೊರಟಿರುತ್ತಾನೆ. ಧ್ಯಾನಯೋಗಕ್ಕೆ ಕರ್ಮದಿಂದಾಗ ಬೇಕಾಗಿದ್ದ ಫಲವು ತಪ್ಪುವ ಹಾಗಿಲ್ಲ; ಉತ್ತಮಕರ್ಮಿಗಳಿಗಿರುವ ಸದ್ಗತಿಯೂ ಉತ್ತಮಜನ್ಮವೂ ದೊರಕುತ್ತದೆ ಎಂದು ಹೇಳಿದ್ದಾಗಿದೆ. ಆದರೆ ಧ್ಯಾನಯೋಗದಿಂದ ಆಗಬೇಕಾಗಿದ್ದ ಸಮ್ಯಗ್ಜ್ಞಾನವು ಇವನಿಗೆ ತಪ್ಪಿದಂತೆಯೇ ಆಗುವದೇನು? ಈ ಜನ್ಮದಲ್ಲಿ ಧ್ಯಾನವು ಪರಿಪೂರ್ಣವಾಗಿ ಜ್ಞಾನದ ಫಲವನ್ನು ಕೊಡದೆ ಇದ್ದರೆ ಮುಂದಿನ ಜನ್ಮದಲ್ಲಿ ಅದರ ಆಶೆಯೇ ಇಲ್ಲವೇನು?- ಎಂದರೆ ಹಾಗಿಲ್ಲ. ಉತ್ತಮಸಂಸ್ಕಾರವು ಎಂದಿಗಾದರೂ ವ್ಯರ್ಥ ವಾದೀತೆ? ಮಾಡಿದ ಪ್ರಯತ್ನಕ್ಕೆ ಕಾಲಾನುಕಾಲದಲ್ಲಿಯಾದರೂ ಫಲವುಂಟಾಗು ವದೆಂಬುದು ನಮ್ಮಗಳ ಅನುಭವದಲ್ಲಿಯೇ ಇದೆ. ನಾನು ವಿದ್ಯಾರ್ಥಿಯಾಗಿದ್ದಾಗ ರಾತ್ರಿಯಲ್ಲಿ ರೇಖಾಗಣಿತದಲ್ಲಿ ಕೆಲವು ತೊಡಕಿನ ಪ್ರಶ್ನೆಗಳನ್ನು ಕುರಿತು ಚಿಂತಿಸಿಚಿಂತಿಸಿ ಪ್ರಯತ್ನವು ಸಫಲವಾಗದೆ ನಿದ್ರೆಯ ಭರದಿಂದ ಹಾಗೆಯೇ ಮಲಗಿಕೊಂಡುಬಿಡುತ್ತಿದ್ದೆನು. ಒಂದೊಂದು ದಿನ ವಿಚಾರಮಾಡಿದ್ದರ ಸಂಸ್ಕಾರದ ಜೋರಿನಿಂದ ಕನಸಿನಲ್ಲಿಯೇ

ಅದೇ ಪ್ರಶ್ನೆಯನ್ನು ಬಿಡಿಸಿನೋಡುವದಕ್ಕೆ ಪ್ರಯತ್ನಿಸಿ ಸಫಲವಾದಂತೆ ಮಧ್ಯರಾತ್ರೆಯಲ್ಲಿ ಕಂಡು ಎಚ್ಚರಗೊಳ್ಳುತ್ತಿದ್ದೆನು. ಕೂಡಲೆ ದೀಪವನ್ನು ಹೊತ್ತಿಸಿ ಹತ್ತಿರವೇ ಇದ್ದ ಸ್ಲೇಟಿನ ಮೇಲೆ ನನಗೆ ನೆನಪಿನಲ್ಲಿದ್ದ ಉತ್ತರವನ್ನು ಬರೆದಿಟ್ಟು ದೀಪವನ್ನು ನಂದಿಸಿ ಮತ್ತೆ ನಿದ್ರೆ ಹೋಗುತ್ತಿದ್ದೆನು. ಬೆಳಿಗ್ಗೆ ಎದ್ದು ನೋಡಿದರೆ ಕನಸಿನಲ್ಲಿ ಕಂಡುಹಿಡಿದ ನಿದ್ದೆಗಣ್ಣಿನಲ್ಲಿ ಬರೆದಿಟ್ಟಿದ್ದ ಆ ಉತ್ತರವು ಸರಿಯಾಗಿಯೇ ಇರುತ್ತಿತ್ತು! ಇಂಥ ಅನುಭವವನ್ನು ನಿಮ್ಮಲ್ಲಿಯೂ ಕೆಲವರು ಪಡೆದಿರಬಹುದು. ಇದರಿಂದ ಏನು ಸ್ಪಷ್ಟ ವಾಗುವದೆಂದರೆ ಈಗ ನಾವು ಮಾಡುವ ಏಕಾಗ್ರತೆಯ ಧ್ಯಾನದ ಫಲವು ಸಂಸ್ಕಾರ ರೂಪದಲ್ಲಿದ್ದುಕೊಂಡು ಅವಶ್ಯವಾಗಿ ಕಾಲಾನುಕಾಲದಲ್ಲಿಯಾದರೂ ಫಲವನ್ನು ಕೊಟ್ಟೇತೀರುವದು.

**ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।**
**ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥** (೬-೪೫)

ಯಾವನು ಪ್ರಯತ್ನಪೂರ್ವಕವಾಗಿ ಧ್ಯಾನಮಾಡುವನೋ ಅವನ ಅಂತಃಕರಣವು ಸಂಸ್ಕಾರವನ್ನು ಹೊಂದುತ್ತಲೇ ಇರುವದು. ಈ ಜನ್ಮದಲ್ಲಿ ಆಗಿರುವ ಸಂಸ್ಕಾರವು ಇಲ್ಲಿಗೇ ಮುಗಿಯುವದಿಲ್ಲ. ಮುಂದಿನ ಜನ್ಮದಲ್ಲಿ ಮತ್ತೆ ಇದರ ಮುಂದಕ್ಕೆ ಪ್ರಯತ್ನ ಮಾಡಿ ಹೊಸಸಂಸ್ಕಾರವನ್ನು ಕೂಡಿಹಾಕಿಕೊಳ್ಳುತ್ತಾನೆ. ಹೀಗೆ ಯೋಗಿಯಾದವನಿಗೆ ಒಂದೊಂದು ಜನ್ಮಕ್ಕೂ ತಕ್ಕಷ್ಟು ಸಂಸ್ಕಾರವು ಆಗುತ್ತಲೇ ಇರುವದು. ಉತ್ತಮಜಾತಿಯ ಕಲ್ಲನ್ನು ತಿಕ್ಕಿದಷ್ಟೂ ಹೊಳಪು ಬರುವಂತೆ, ಹೊಳಪು ಬಂದಷ್ಟೂ ಅದರಲ್ಲಿ ಹೊರಗಿನ ವಸ್ತುಗಳ ಪ್ರತಿಬಿಂಬವು ಹೆಚ್ಚು ಹೆಚ್ಚಾಗಿ ಸ್ಫುಟವಾಗುವಂತೆ, ಸ್ವಚ್ಛದ್ರವ್ಯವಾದ ಅಂತಃಕರಣದಲ್ಲಿ ಯೋಗಾಭ್ಯಾಸದಿಂದ ಸಂಸ್ಕಾರವು ಬಲವಾದಂತೆಲ್ಲ ಬಾಹ್ಯನಿಮಿತ್ತ ದಿಂದ ಆಗಿದ್ದ ಕಶ್ಮಲವು ಕಡಿಮೆಯಾಗುತ್ತಾ ಬರುವದು; ಪರಮಾರ್ಥತತ್ತ್ವವನ್ನು ಪ್ರತಿಬಿಂಬಿಸುವ ಯೋಗತ್ಯೆಯೂ ಅದರಲ್ಲಿ ಹೆಚ್ಚುತ್ತಾ ಬರುವದು. ಹೀಗೆ ಅನೇಕ ಜನ್ಮಗಳಲ್ಲಿ ಧ್ಯಾನಯೋಗವನ್ನು ಮಾಡಿದ ಮಹಾಪುರುಷನು ಕೊನೆಗೆ ಸಂಸಿದ್ಧ ನಾಗುವನು, ಧ್ಯಾನಯೋಗದ ಫಲವಾದ ಜ್ಞಾನವನ್ನು ಪಡೆಯುವನು; ಅದರಿಂದ ಪುರುಷಾರ್ಥಪ್ರಾಪ್ತಿಯನ್ನೂ ಹೊಂದುವನು. ಯೋಗದ ಮಹಿಮೆಯು ಇಂಥ ಅದ್ಭುತವಾದದ್ದು!

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ॥** (೬-೪೬)

ಈ ಶ್ಲೋಕದಲ್ಲಿರುವ ಪ್ರತಿಯೊಂದು ಶಬ್ದವೂ ಬೇರೆಬೇರೆಯ ಅರ್ಥದಲ್ಲಿ ಪ್ರಯೋಗವಾಗುತ್ತದೆ. ಆದ್ದರಿಂದ ಪ್ರಕೃತಕ್ಕೆ ಸರಿಹೋಗುವ ಅರ್ಥವನ್ನು ನಾವು

ಸ್ವೀಕರಿಸಬೇಕಾಗುವದು. ಯೋಗವೆಂಬ ಮಾತಿಗೆ ಈಶ್ವರಾರ್ಪಣಬುದ್ಧಿಯಿಂದ ಕರ್ಮವನ್ನು ಮಾಡುವದು, ಧ್ಯಾನ, ಜ್ಞಾನ-ಇವೆಲ್ಲವೂ ಅರ್ಥವಾದರೂ ಪ್ರಕೃತದಲ್ಲಿ ಧ್ಯಾನ ಯೋಗವೆಂಬುದೇ ಅರ್ಥ. ಏಕೆಂದರೆ ಧ್ಯಾನಯೋಗವನ್ನು ವಿಧಾನಮಾಡುವದಕ್ಕೇ ಈ ಶ್ಲೋಕವು ಬಂದಿರುತ್ತದೆ. ಯೋಗಿಯು ತಪಸ್ವಿಗಳಿಗಿಂತ ಉತ್ತಮನು. **ತಪಸ್ಸೆಂದರೆ** ಇಲ್ಲಿ ಉಪವಾಸವೇ ಮುಂತಾದ ಶಾರೀರಿಕ ತಪಸ್ಸು. ಅನಶನಕ್ಕಿಂತ ಹೆಚ್ಚಿನ ತಪಸ್ಸಿಲ್ಲ ಎಂದು ಶ್ರುತಿಯಲ್ಲಿರುತ್ತದೆ; ಶ್ರದ್ಧೆಯಿಂದ ಒಂದಾನೊಂದು ಸಂಕಲ್ಪವನ್ನು ಮಾಡಿ ಉಪವಾಸವನ್ನು ಮಾಡುವದು ಅನೇಕ ಪಾಪಗಳಿಗೆ ಪ್ರಾಯಶ್ಚಿತ್ತವಾಗಿರುವದೆಂದು ದೊಡ್ಡವರು ಹೇಳುತ್ತಾರೆ. ಇಂಥ ತಪಸ್ಸಿಗಿಂತಲೂ ಯೋಗವು ಹೆಚ್ಚು; ಏಕೆಂದರೆ ತಪಸ್ಸುಗಳಿಂದಾಗುವದಕ್ಕಿಂತಲೂ ಉತ್ತಮವಾದ ಚಿತ್ತಶುದ್ಧಿಯು ಯೋಗದಿಂದ ಆಗುತ್ತದೆ. ಜ್ಞಾನವೆಂದರೆ ಶಾಸ್ತ್ರದಿಂದ ಆತ್ಮಾದಿಪದಾರ್ಥಗಳ ವಿಷಯದಲ್ಲಿ ಸಂಪಾದಿಸಿ ಕೊಂಡಿರುವ ತಿಳಿವಳಿಕೆ. ಜ್ಞಾನಕ್ಕಿಂತಲೂ ಯೋಗವು ಹೆಚ್ಚಿನದು, ಎಂದರೆ ಶಾಸ್ತ್ರಾರ್ಥಪಾಂಡಿತ್ಯವನ್ನು ಸಂಪಾದಿಸಿಕೊಂಡವನಿಗಿಂತಲೂ ಆ ವಿಷಯಗಳನ್ನು ತನ್ನ ಅನುಭವಕ್ಕೆ ತಂದುಕೊಳ್ಳುವದಕ್ಕೆ ಪ್ರಯತ್ನಮಾಡುತ್ತಿರುವ ಧ್ಯಾನಯೋಗಿಯೇ ಉತ್ತಮಸಾಧಕನು. **ಕರ್ಮವೆಂದರೆ** ಇಲ್ಲಿ ಕರ್ಮಯೋಗವು. ಸಂಗತ್ಯಾಗಫಲತ್ಯಾಗ ಪೂರ್ವಕವಾಗಿ ಮಾಡಿರುವ ಕರ್ಮವು ಕಾಮ್ಯಕರ್ಮವೇ ಮುಂತಾದವುಗಳಿಗಿಂತ ಹೆಚ್ಚಿನ ಸಾಧನವೇ ಸರಿ; ಏಕೆಂದರೆ ಭಗವಂತನ ಸ್ಮರಣೆಗೆ ಅದು ಸಮೀಪವಾಗಿರುತ್ತದೆ. ಆದರೆ ಭಗವಂತನ ಧ್ಯಾನವನ್ನೇ ಮಾಡುವ ಯೋಗವು ಕರ್ಮಯೋಗಕ್ಕಿಂತ ಭಗವಂತನಿಗೆ ಇನ್ನೂ ಹತ್ತಿರವಾಗಿರುವದರಿಂದ ಅದೇ ಹೆಚ್ಚಿನ ಸಾಧನವು. ಹೀಗೆ ತಪಸ್ಸು, ಕರ್ಮ, ಜ್ಞಾನ, ಇವೆಲ್ಲಕ್ಕಿಂತಲೂ ಧ್ಯಾನಯೋಗವು ಹೆಚ್ಚಿನದಾದ್ದರಿಂದ ಅದನ್ನು ಕೈಗೊಂಡು ತತ್ತ್ವಜ್ಞಾನವನ್ನು ಸಂಪಾದಿಸಿಕೊಳ್ಳಬೇಕು-ಎಂಬುದು **ಶ್ಲೋಕದ** ಅಭಿಪ್ರಾಯವು.

ಈ ಅಧ್ಯಾಯದ ಕೊನೆಯ ಶ್ಲೋಕವು ಮುಂದಿನ ಮೂರು ಅಧ್ಯಾಯಗಳಿಗೂ ಪೀಠಿಕೆಯಾಗಿರುವದೆಂದು ಭಾವಿಸಬಹುದು. ಏಕೆಂದರೆ-

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾನ್ತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ॥**(೬-೪೭)

ಈ ಶ್ಲೋಕದಲ್ಲಿ ಹಿಂದೆ ಎಲ್ಲಾ ಸಾಧಕರಿಗಿಂತಲೂ ಯೋಗಿಯು ಹೆಚ್ಚಿನವನೆಂದು ಹೇಳಿ ಆ ಹೆಚ್ಚುಗಾರಿಕೆಗೆ ಕಾರಣವೇನೆಂಬುದನ್ನು ಸೂಚಿಸುತ್ತದೆ. ಯೋಗವೆಂದರೆ ಧ್ಯಾನವು. ಧ್ಯಾನದ ಹೆಚ್ಚುಗಾರಿಕೆಯು ಧ್ಯೇಯದ ಸ್ವಭಾವದಿಂದ ನಿರ್ಣಯಿಸ

ತಕ್ಕದ್ದಾಗಿರುತ್ತದೆ. ಯಾವದಾದರೊಂದು ವಸ್ತುವಿನಲ್ಲಿ ಏಕಾಗ್ರತೆಯನ್ನು ಸಂಪಾದಿಸಿಕೊಂಡ ಮಾತ್ರದಿಂದ ಯೋಗಿ ಎನ್ನಿಸಿಕೊಳ್ಳುವದಾದರೆ ಮನೆಯೊಳಗಿನ ಪೆಟ್ಟಿಗೆಯನ್ನೇ ಕುರಿತು ಏಕಾಗ್ರತೆಯಿಂದ ಚಿಂತಿಸುತ್ತಿರುವ ಕಳ್ಳನನ್ನೂ ಯೋಗಿ ಎನ್ನಬೇಕಾದೀತು! ಯೋಗವೆಂದರೆ ಶಾಸ್ತ್ರವಿಹಿತವಾದ ಧ್ಯೇಯವಸ್ತುಗಳಲ್ಲಿ ಚಿತ್ತವನ್ನು ಏಕಾಗ್ರತೆಯಿಂದ ಸ್ಥಿರಗೊಳಿಸಿಕೊಳ್ಳುವದು. ಶಾಸ್ತ್ರದಲ್ಲಿ ಹೇಳಿರುವ ರುದ್ರಾದಿತ್ಯಾದಿದೇವತೆಗಳನ್ನು ಧ್ಯಾನಮಾಡುವವರೂ ಯೋಗಿಗಳೇ ಸರಿ; ಆದರೆ ಸರ್ವದೇವಾತ್ಮನಾದ ವಾಸುದೇವ ಭಗವಂತನನ್ನು ಧ್ಯಾನಮಾಡುವ ಯೋಗಿಯು ಅವರಿಗಿಂತಲೂ ಉತ್ತಮವೆನಿಸುವನು. ಭಗವದ್ಗೀತೆಯಲ್ಲಿ ಎಲ್ಲೆಲ್ಲಿಯೂ ಭಗವಂತನಿಗೇ ಪ್ರಾಧಾನ್ಯವಿದೆ. ಕರ್ಮವನ್ನು ಮಾಡಿದರೆ ಭಗವಂತನ ಆರಾಧನೆಗಾಗಿ ಮಾಡಬೇಕು, ಧ್ಯಾನಮಾಡಿದರೆ ಭಗವಂತನನ್ನೇ ಧ್ಯಾನಮಾಡಬೇಕು, ಅರಿತುಕೊಳ್ಳಬೇಕಾದರೆ ಭಗವಂತನನ್ನೇ ಅರಿತುಕೊಳ್ಳಬೇಕು-ಎಂಬುದು ಗೀತೆಯ ಮುಖ್ಯೋಪದೇಶವು. ಅಧ್ಯಾತ್ಮಭಂಡಾರವಾಗಿರುವ ಉಪನಿಷತ್ತುಗಳಲ್ಲಿ ಜ್ಞೇಯವೆಂದು ಆರಿಸಿಕೊಂಡಿರುವದು ಪರಮಾತ್ಮನೊಬ್ಬನನ್ನೇ; ಮಿಕ್ಕದ್ದೆಲ್ಲವೂ ಅಜ್ಞೇಯವು. ಮುಖ್ಯಜ್ಞೇಯವಾಗಿರುವ ಪರಮಾತ್ಮನನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತಂತೆಯೇ ಎಂಬುದು ಉಪನಿಷತ್ತುಗಳ ಉಪದೇಶವು. ಉಪನಿಷತ್ತುಗಳ ಸಾರಸಂಗ್ರಹವೆಂದು ಪ್ರಸಿದ್ಧವಾಗಿರುವ ಗೀತೆಯಲ್ಲಿಯೂ ಅದನ್ನೇ ಉಪದೇಶಿಸಿದೆ ಎಂದು ನಿರೀಕ್ಷಿಸುವದು ಯುಕ್ತವಾಗಿರುತ್ತದೆ. ಈ ಉಪನಿಷದ್ವಾಕ್ಯವನ್ನು ಕೇಳಿರಿ:

**ಏತಜ್ಜ್ಞೇಯಂ ನಿತ್ಯಮೇವಾತ್ಮಸಂಸ್ಥಂ ನಾತಃ ಪರಂ ವೇದಿತವ್ಯಂ ಹಿ ಕಿಂಚಿತ್।**
**ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್॥**

ಇದೊಂದೇ ಜ್ಞೇಯವು. ಇದು ಯಾವಾಗಲೂ ಆತ್ಮಸಂಸ್ಥವಾಗಿರುತ್ತದೆ. ಆತ್ಮನಲ್ಲಿ ಆತ್ಮನ ರೂಪದಿಂದಲೇ ಇದ್ದುಕೊಂಡಿರುತ್ತದೆ. ಈ ಪರಮಾತ್ಮತತ್ತ್ವಕ್ಕಿಂತ ಬೇರೊಂದು ಜ್ಞೇಯವು ಇರುವದೇ ಇಲ್ಲ. ಅಧಿಷ್ಠಾನವನ್ನು ಅರಿತುಕೊಂಡರೆ ಅದರಲ್ಲಿ ಹುಟ್ಟುಗಟ್ಟಿರುವದನ್ನೆಲ್ಲ ಅರಿತಂತೆ ಆಯಿತಲ್ಲವೆ? ಇದರಂತೆ ಭೋಕ್ತೃವಾದ ಜೀವನು, ಭೋಗ್ಯವಾದ ಶರೀರಾದಿಗಳು, ಪ್ರೇರಿತೃವಾದ ಪರಮೇಶ್ವರನು-ಇವರೆಲ್ಲರ ತತ್ತ್ವವೂ ನಿಜವಾಗಿ ಈ ಪರಬ್ರಹ್ಮವೇ ಆಗಿರುತ್ತದೆ. ಇಂಥ ಬ್ರಹ್ಮವೇ ನಮ್ಮ ಆತ್ಮನಾಗಿರುವದರಿಂದ ಅದನ್ನು ಲಕ್ಷ್ಯವಿಟ್ಟು ಚಿಂತಿಸಬೇಕು-ಆದ್ದರಿಂದ ಅರ್ಜುನನೆ, ಯೋಗಿಯಾಗು ಎಂದು ಭಗವಂತನು ನಿದಿಧ್ಯಾಸನವನ್ನು ಮಾಡಿ ಆತ್ಮನನ್ನು ಆತ್ಮರೂಪದಿಂದ ಕಂಡುಕೊಳ್ಳಬೇಕೆಂದು ಉಪದೇಶಿಸಿರುವದು ಈ ಉಪನಿಷದ್ವಾಕ್ಯಕ್ಕೆ ಅನುಗುಣವಾಗಿರುತ್ತದೆ.

ಯೋಗವು ಜ್ಞಾನಕ್ಕೆ ಅಂತರಂಗಸಾಧನವೆಂದು ಹೇಳುತ್ತಾ ಬಂದದ್ದಾಗಿದೆ. ಈ ಅಭಿಪ್ರಾಯವನ್ನು ಭಗವಂತನು ಏಳು, ಎಂಟು, ಒಂಬತ್ತನೆಯ ಅಧ್ಯಾಯಗಳಲ್ಲಿ ಸ್ಪಷ್ಟಪಡಿಸುವನು. ಯೋಗದ ಫಲವು ಜ್ಞಾನವೇ ಎಂಬುದು ಆ ಅಧ್ಯಾಯಗಳಲ್ಲಿ ವಿಶೇಷವಾಗಿ ತಿಳಿಯುವದು. ಕೆಲವರು ಭಗವದ್ಗೀತೆಯನ್ನು ಕರ್ಮಷಟ್ಕ, ಉಪಾಸನಾ ಷಟ್ಕ, ಜ್ಞಾನಷಟ್ಕ ಎಂದು ಆರಾರು ಅಧ್ಯಾಯಗಳಾಗಿ ವಿಂಗಡಿಸಿರುತ್ತಾರೆ; ಮತ್ತೆ ಕೆಲವರು ತತ್ಪದಾರ್ಥ, ತ್ವಂಪದಾರ್ಥ, ಅಸಿಪದಾರ್ಥ-ಎಂಬ ಮೂರು ಅರ್ಥಗಳನ್ನು ಮೂರು ಷಟ್ಕಗಳಲ್ಲಿ ಹೇಳಿದೆ ಎಂದು ಭಾವಿಸಿರುತ್ತಾರೆ. ಇಂಥ ವಿಭಾಗಗಳು ಒಂದಕ್ಕೊಂದು ಹೊಂದದವುಗಳಾಗಿವೆ; ತಮ್ಮ ತಮ್ಮ ಮನಸ್ಸಿನಲ್ಲಿ ಕಲ್ಪಿಸಿಕೊಂಡಿರುವ ಸಾಂಪ್ರದಾಯಿಕೋಪದೇಶಗಳಿಗೆ ಗೀತೆಯನ್ನು ಹೊಂದಿಸುವ ಪ್ರಯತ್ನದ ನಿರರ್ಥಕತೆ ಯನ್ನು ತೋರ್ಪಡಿಸುವದಕ್ಕೆ ಇವು ಸಾಕಾಗಿವೆ. ವಸ್ತುಗತಿಯನ್ನು ನೋಡಿದರೆ ಭಗವಂತನು ಜ್ಞಾನಯೋಗ, ಕರ್ಮಯೋಗ ಎಂಬ ಎರಡು ಸಾಧನಗಳನ್ನು ವಿವರಿಸಿ ಕರ್ಮಯೋಗವು ಜ್ಞಾನಯೋಗಕ್ಕೆ ಚಿತ್ತಶುದ್ಧಿಯ ಮೂಲಕವಾಗಿ ಸಾಧನ ವಾಗಿರುವದೆಂದು ಹೇಳಿದ ಬಳಿಕ ಕರ್ಮಯೋಗದಿಂದ ಬಹಿರ್ಮುಖತ್ವವನ್ನು ಕಳೆದುಕೊಂಡಿರುವವನು ಧ್ಯಾನಯೋಗರೂಪವಾದ ಅಂತರಂಗಸಾಧನಕ್ಕೆ ತಕ್ಕವನಾಗುವ ನೆಂದು ಉಪದೇಶಿಸಿರುತ್ತಾನೆ. ಈಗ ಈ ಧ್ಯಾನವು ಭಗವತ್ಪರವಾಗಿದ್ದರೆ ಪರಮಾರ್ಥ ಜ್ಞಾನವೆಂಬ ಫಲವು ಸಿಕ್ಕುವದೆಂದು ಈ ಯೋಗಗಳ ಪರಸ್ಪರಸಂಬಂಧವನ್ನು ತಿಳಿಸುತ್ತಿದಾನೆ. ಉದಾಹರಣೆಗೆ ಏಳನೆಯ ಅಧ್ಯಾಯದ ಪ್ರಾರಂಭದ ಎರಡು ಶ್ಲೋಕಗಳನ್ನು ವಿಮರ್ಶಿಸೋಣ:

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥** (೭-೧)
**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯತ್ ಜ್ಞಾತವ್ಯಮವಶಿಷ್ಯತೇ ॥**(೭-೨)

"ಅರ್ಜುನನೆ, ನನ್ನಲ್ಲಿಯೇ ಆಸಕ್ತಿಯುಳ್ಳ ಮನಸ್ಸಿನಿಂದ, ನನ್ನನ್ನೇ ಆಶ್ರಯಿಸಿ ಕೊಂಡು ಯೋಗವನ್ನು ಮಾಡುತ್ತಿದ್ದರೆ, ಯಾವ ಸಂಶಯವೂ ಇಲ್ಲದಂತೆ ಸಮಗ್ರವಾಗಿ ನನ್ನನ್ನು ಹೇಗೆ ಅರಿತುಕೊಳ್ಳಲಾಪೆಯೋ ಅದನ್ನು ಹೇಳುವೆನು, ಕೇಳು. ಈಗ ನಿನಗೆ ಜ್ಞಾನವನ್ನೂ ವಿಜ್ಞಾನವನ್ನೂ ಒಂದಿಷ್ಟೂ ಉಳಿಯದಂತೆ ಹೇಳಿಕೊಡುವೆನು. ಇದನ್ನು ಅರಿತುಕೊಂಡರೆ ಇಲ್ಲಿ ಮತ್ತೊಂದು ಅರಿಯಬೇಕಾದದ್ದು ಉಳಿದಿರುವದಿಲ್ಲ" ಎಂಬುದು ಶ್ಲೋಕಗಳ ಅಕ್ಷರಾರ್ಥವು. ಈಗ ಈ ವಾಕ್ಯಗಳಲ್ಲಿ ಅಡಗಿರುವ ಅಭಿಪ್ರಾಯವೇನೆಂಬುದನ್ನು ನೋಡೋಣ:

ಪರಮಾತ್ಮನಲ್ಲಿ ಆಸಕ್ತವಾದ ಏಕಾಗ್ರತೆಯ ಮನಸ್ಸಿನಿಂದ ಯೋಗವನ್ನು ಮಾಡುತ್ತಿರಬೇಕು; ಪರಮೇಶ್ವರನನ್ನೇ ಆಶ್ರಯಿಸಿಕೊಂಡು ಯೋಗವನ್ನು ಮಾಡುತ್ತಿರಬೇಕು. ಸ್ವರ್ಗವೇ ಮುಂತಾದ ಪುರುಷಾರ್ಥಗಳಿಗೆ ಅಗ್ನಿಹೋತ್ರವೇ ಮುಂತಾದ ಸಾಧನಗಳು ಆಶ್ರಯವಾಗಿರುವವಷ್ಟೆ; ಪ್ರಕೃತದಲ್ಲಿ ಧ್ಯಾನಯೋಗಿಗೆ ಅಂಥ ಯಾವ ಹೊರಗಿನ ಆಶ್ರಯಗಳೂ ಇರುವದಿಲ್ಲ. ಅವನು ಭಗವಂತನನ್ನೇ ಆಶ್ರಯಿಸಿಕೊಂಡು ಯೋಗವನ್ನು ಮಾಡುತ್ತಿರಬೇಕು. "ನಾನು ಮಾಡುತ್ತಿರುವ ಧ್ಯಾನವುಕೂಡ ನನ್ನದಲ್ಲ, ಆತನ ಅನುಗ್ರಹದ ಬಲದಿಂದಲೇ ಆತನನ್ನು ಚಿಂತಿಸುತ್ತಿರುವೆನು" ಎಂಬ ದೃಢವಿಶ್ವಾಸದಿಂದ ಭಗವಂತನನ್ನೇ ಸಾಧನವಾಗಿ ಆಶ್ರಯಿಸಿಕೊಂಡು ಆತ್ಮನಲ್ಲಿಯೇ ನೆಟ್ಟ ದೃಷ್ಟಿಯಿಂದ ಧ್ಯಾನಮಾಡುತ್ತಿರಬೇಕು. ಇದಿಷ್ಟೂ ನಾವು ಹಿಂದೆಯೇ ಅರಿತುಕೊಂಡಿರುವ ನಿದಿಧ್ಯಾಸನದ ಸ್ವರೂಪವಾಯಿತು. ಇನ್ನು ಇದಕ್ಕೆ ಫಲವೇನು? ಎಂದರೆ ಆತ್ಮನನ್ನು ಅಸಂಶಯವಾಗಿ ಸಮಗ್ರವಾಗಿ ಅರಿತುಕೊಳ್ಳುವದು. ಸಂಶಯವಿಲ್ಲದೆ ಇದೇ ಭಗವಂತನ ತತ್ತ್ವವು ಎಂದು ತಿಳಿದುಕೊಳ್ಳುವದು; ಮತ್ತು ಸಮಗ್ರವಾಗಿ, ಆತ್ಮನ ಸ್ವರೂಪವನ್ನೇ ಅಲ್ಲದೆ ಆತನ ವಿಭೂತಿ, ಶಕ್ತಿ, ಐಶ್ವರ್ಯ-ಮುಂತಾದ ಗುಣಗಳನ್ನೂ ಸಂಪೂರ್ಣವಾಗಿ ತಿಳಿದುಕೊಳ್ಳುವದು ಇವೆರಡೂ ಈ ಧ್ಯಾನಯೋಗದ ಫಲಗಳು.

ಈ ತಿಳಿವಳಿಕೆಯು ಎರಡು ಬಗೆಯಾಗಿರುತ್ತದೆ. ಶಾಸ್ತ್ರದಲ್ಲಿ ಹೇಳಿರುವಂತೆ ತಿಳಿಯುವದು ಜ್ಞಾನವು; ನೇರಾಗಿ ತನ್ನ ಅನುಭವಕ್ಕೆ ತಂದುಕೊಳ್ಳುವ ತಿಳಿವಳಿಕೆಯು ವಿಜ್ಞಾನವು. ಈ ಎರಡು ಬಗೆಯಾದ ತಿಳಿವಳಿಕೆಯನ್ನು ಸ್ವಲ್ಪವೂ ಉಳಿಯದಂತೆ ಹೇಳಿಕೊಡುತ್ತೇನೆ-ಎಂದು ಭಗವಂತನು ಹೇಳಿರುತ್ತಾನೆ. ಇದನ್ನು ತಿಳಿದುಕೊಂಡರೆ ತಿಳಿದುಕೊಳ್ಳಬೇಕಾದದ್ದು ಮತ್ತೇನೂ ಉಳಿಯುವದೇ ಇಲ್ಲ. ಲೋಕದಲ್ಲಿ ನಾವು ಯಾವದನ್ನು ತಿಳಿದುಕೊಂಡರೂ ಅದನ್ನು ಸಂಪೂರ್ಣವಾಗಿ ತಿಳಿಯುವದಕ್ಕೆ ಆಗಿರುವದಿಲ್ಲ; ನಾವು ಇನ್ನೂ ಅದರ ವಿಷಯದಲ್ಲಿ ತಿಳಿದುಕೊಳ್ಳಬೇಕಾದದ್ದು ಎಷ್ಟೋ ಉಳಿದಿರುತ್ತದೆ. ಆ ವಸ್ತುವಲ್ಲದೆ ನಾವು ತಿಳಿದುಕೊಳ್ಳಬೇಕಾದ ವಸ್ತುಗಳೂ ಬೇರೆಯಾಗಿ ಆಗಣಿತವಾಗಿರುತ್ತವೆ. ಸರಿಯಾದ ತಿಳಿವಳಿಕೆ ಎಂದರೇನು?- ಎಂಬುದಕ್ಕೆ ಇಂಗ್ಲಿಷಿನಲ್ಲಿ ಒಂದು ಲಕ್ಷಣವಾಕ್ಯವಿದೆ. To know everything of something, and something of everything. "ಯಾವದಾದರೊಂದು ವಸ್ತುವಿನ ವಿಷಯಕ್ಕೆ ಸರ್ವವನ್ನೂ ತಿಳಿದಿರುವದು, ಮತ್ತು ಎಲ್ಲಾ ವಸ್ತುಗಳ ವಿಷಯಕ್ಕೂ ಸ್ವಲ್ಪವಾದರೂ ತಿಳಿದಿರುವದು." ಈ ಲಕ್ಷಣವಾಕ್ಯವನ್ನು ಯಥಾಶ್ರುತವಾಗಿ ಹಿಡಿದರೆ ಇದರಲ್ಲಿರುವ ಎರಡು ಉಪದೇಶಗಳೂ ನಮ್ಮಂಥ ಮಿತಬುದ್ಧಿಯ ಜೀವರಿಗೆ ಅಸಾಧ್ಯವಾಗಿವೆ

ಎಂದು ಹೇಳಬೇಕಾಗುತ್ತದೆ. ಯಾವ ವಸ್ತುವನ್ನು ತಾನೆ ಸಂಪೂರ್ಣವಾಗಿ ಅರಿತಿದ್ದೇವೆಂದು ನಾವು ಹೇಳಿಕೊಳ್ಳಬಹುದು? ಅಥವಾ ಪ್ರಪಂಚದಲ್ಲಿರುವ ಅಸಂಖ್ಯಾತ ವಸ್ತುಗಳ ವಿಷಯದಲ್ಲೆಲ್ಲ ಒಂದಿಷ್ಟಾದರೂ ಬಲ್ಲೆವೆಂದು ನಾವು ಎದೆ ತಟ್ಟಿಕೊಂಡು ಹೇಳಲಾಪವೆ? ಆದ್ದರಿಂದ ಈ ವಾಕ್ಯದ ಅಭಿಪ್ರಾಯವನ್ನು ಹೀಗೆ ತಿಳಿದುಕೊಳ್ಳಬೇಕಾಗುವದು; ಮನುಷ್ಯನು ವಿದ್ವಾವಂತನೆನಿಸಬೇಕಾದರೆ ಯಾವದಾದರೊಂದು ಗೊತ್ತಾದ ವಿಷಯದಲ್ಲಿ ವಿಶೇಷಜ್ಞಾನವನ್ನೂ ಅದಕ್ಕೆ ಸಂಬಂಧಪಟ್ಟಿರುವ ಹಲವು ವಿಷಯಗಳ ಸಾಮಾನ್ಯಜ್ಞಾನವನ್ನೂ ಸಂಪಾದಿಸಿಕೊಳ್ಳಬೇಕು-ಎಂದು ಈ ವಾಕ್ಯದ ಅರ್ಥ. ಎಂಥ ಪಂಡಿತನೇ ಆಗಲಿ ತನ್ನ ಜೀವಮಾನವನ್ನೆಲ್ಲ ಒಂದೇ ವಿಷಯದ ತಿಳಿವಳಿಕೆಗಾಗಿ ಮೀಸಲಾಗಿರಿಸಿದರೂ ಅದರ ಏಕದೇಶವನ್ನು ಮಾತ್ರ ತಿಳಿದುಕೊಳ್ಳಬಲ್ಲನು. 'ನ್ಯೂಟನ್' ಎಂಬ ಭೌತಿಕವಿಜ್ಞಾನಶಾಸ್ತ್ರಜ್ಞನು ತನ್ನ ಕಾಲದಲ್ಲಿ ಅಸಾಧಾರಣವೈಜ್ಞಾನಿಕನೆನಿಸಿಕೊಂಡಿದ್ದನು. ಆ ಸುಪ್ರಸಿದ್ಧವಿದ್ವಾಂಸನು ಕೂಡ ತನ್ನ ಅಂತಿಮ ವಯಸ್ಸಿನಲ್ಲಿ "ಜ್ಞಾನಸಾಗರದ ದಂಡೆಯಮೇಲೆ ಶಂಖ, ಕವಡೆ-ಮುಂತಾದವುಗಳನ್ನು ಆರಿಸುತ್ತಿರುವ ಮಕ್ಕಳಂತಿರುವೆವು ನಾವು" ಎಂದುಕೊಂಡನಂತೆ! ಹೀಗೆ ಅನಾತ್ಮಜ್ಞಾನವೆಂಬುದು ಅನಂತವಾಗಿರುತ್ತದೆ; ತಿಳಿಯತಕ್ಕವಸ್ತುಗಳೂ ಹೇರಳವಾಗಿರುತ್ತವೆ; ನಮ್ಮ ಜೀವಿತದಲ್ಲಿ ವಿದ್ಯಾರ್ಜನೆಗೆ ಇರುವ ಕಾಲವೂ ಅತ್ಯಲ್ಪವಾಗಿರುತ್ತದೆ; ಆ ಕಾಲದಲ್ಲಿ ನಾವು ಮಾಡುವ ಪ್ರಯತ್ನಗಳಿಗೆ ವಿಘ್ನಗಳು ಅನೇಕವಾಗಿರುತ್ತವೆ. ಹೀಗಿರುವಲ್ಲಿ ಯಾವದೊಂದು ವಿಷಯದಲ್ಲಿಯೂ ಮನುಷ್ಯನು ತಾನು ಸರ್ವಜ್ಞನು ಎಂದು ಜಂಭಕೊಚ್ಚಿಕೊಳ್ಳುವದಕ್ಕೆ ಆಗುವಂತೆಯೇ ಇಲ್ಲ.

ಆದರೂ ಅಧ್ಯಾತ್ಮಶಾಸ್ತ್ರಜ್ಞರು ಹೀಗೆನ್ನುವರು: ಒಂದಾನೊಂದು ಪರಮಾರ್ಥತತ್ತ್ವವಿದೆ. ಅದರಲ್ಲಿಯೇ, ಕನಸಿನಲ್ಲಿ ಒಬ್ಬನಲ್ಲಿ ವಿವಿಧಪ್ರಪಂಚವು ಕಲ್ಪಿತವಾಗಿ ತೋರುತ್ತಿರುವಂತೆ, ಈ ವಿಚಿತ್ರಪ್ರಪಂಚವೆಲ್ಲವೂ ಕಲ್ಪಿತವಾಗಿ ತೋರುತ್ತಿರುತ್ತದೆ. ಆ ಪರಮಾರ್ಥವನ್ನು ತಿಳಿದುಕೊಂಡರೆ ಸರಿ, ಕೂಡಲೆ ಸ್ವಪ್ನಪ್ರಪಂಚವೆಲ್ಲವೂ-ತನ್ನ ಪ್ರಮಾತೃಪ್ರಮಾಣಪ್ರಮೇಯವಿಭಾಗದೊಡನೆ-ಮಾಯವಾಗಿ ಹುಸಿಯಾಗಿ ಅಸಾರವಾಗಿ ಅಜ್ಞೇಯವಾಗಿಬಿಡುವಂತೆ, ಈ ದ್ವೈತಪ್ರಪಂಚವೆಲ್ಲವೂ ಕರಗಿ ಹುಸಿಯಾಗಿ ಅಸಾರವಾಗಿ ಅಜ್ಞೇಯವಾಗಿಬಿಡುವದು. ಈ ದೃಷ್ಟಿಯಿಂದ ನೋಡಿದರೆ ಪರಮಾರ್ಥವೊಂದೇ ಜ್ಞೇಯವು; ಮಿಕ್ಕದ್ದು ಯಾವದೂ ಜ್ಞೇಯವಲ್ಲ, ಎಂದರೆ ಪುರುಷಾರ್ಥಕ್ಕೆ ತಾನೇ ನೇರಾಗಿ ಸಾಧನವಲ್ಲ. ಈ ತತ್ತ್ವವನ್ನು ತಿಳಿದರೆ ಇನ್ನೇನೂ ತಿಳಿದುಕೊಳ್ಳಬೇಕಾದದ್ದು ಉಳಿದಿರುವದಿಲ್ಲ. ಇದರಲ್ಲಿಯೇ ಎಲ್ಲವೂ ಕಲ್ಪಿತವಾಗಿರುವ ತೋರಿಕೆಯಾಗಿರುತ್ತದೆಯಾಗಿ ಇದನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತಂತೆ ಆಯಿತು.

ಪರಮಾರ್ಥದೃಷ್ಟಿಯಿಂದ ಇರುವ ಎಲ್ಲವೂ ಆತ್ಮತತ್ತ್ವವೊಂದೇ ಆಗಿರುವದರಿಂದ ಆತ್ಮಜ್ಞನನ್ನು ಸರ್ವಜ್ಞನು ಎಂದು ಕರೆಯಬಹುದು. ಇಲ್ಲಿ ಸರ್ವಜ್ಞನು ಎಂದರೆ ರೈಲು, ಏರೋಪ್ಲೇನ್, ಹಡಗು, ಜಹಜು-ಮುಂತಾದ ಎಲ್ಲಾ ವಸ್ತುಗಳನ್ನೂ ವಿಶೇಷ ರೂಪದಿಂದ ತಿಳಿದುಕೊಂಡಿರುವವನು ಎಂದೇನೂ ಅರ್ಥವಲ್ಲ. ಗೋಡೆಯೆಲ್ಲವೂ ಇಟ್ಟಿಗೆಯೇ, ಮೆಟ್ಟಿಲೆಲ್ಲವೂ ಇಟ್ಟಿಗೆಯೇ ಎಂದು ಇಟ್ಟಿಗೆಯ ರೂಪದಿಂದ ಗೋಡೆಯನ್ನೂ ಮೆಟ್ಟಿಲನ್ನೂ ಅರಿತುಕೊಳ್ಳುವಂತೆ ಯಾವದೊಂದು ಅನಾತ್ಮರೂಪವಾದ ತೋರಿಕೆಯಾದರೂ ನಿಜವಾಗಿ ಆತ್ಮನೇ ಎಂದು ತಿಳಿದುಕೊಂಡಿರುವದರಿಂದ ಆತ್ಮಜ್ಞನು ಸರ್ವಜ್ಞನು ಎನಿಸುವನು.

ನಿಜವಾಗಿನೋಡಿದರೆ ಆತ್ಮನೊಬ್ಬನೇ ಪರಮಾರ್ಥತತ್ತ್ವವು, ಆತ್ಮನಲ್ಲಿಯೇ ನಮ್ಮ ಸರ್ವವ್ಯವಹಾರವೂ ಕಲ್ಪಿತವಾಗಿರುತ್ತದೆ. ಆದರೂ ಇದು ನಮಗೆ ತಿಳಿಯದು. ಅಜ್ಞಾನನಿದ್ರೆಯಲ್ಲಿ ನಾವು ನಾನಾತ್ವದ ಕನಸನ್ನು ಕಾಣುತ್ತಿರುವೆವು. ಜ್ಞಾನವೆಂಬ ಎಚ್ಚರವಾದ ಕೂಡಲೆ ಇದೆಲ್ಲವೂ ಆತ್ಮನೇ, ವ್ಯವಹಾರದ ಎಲ್ಲಾ ಜ್ಞಾನಗಳಲ್ಲಿಯೂ ನಾವು ನಿಜವಾದ ಆತ್ಮನನ್ನೇ ಅರಿಯುತ್ತಿರುವೆವು-ಎಂದು ನಮಗೆ ತಿಳಿವಳಿಕೆಯಾಗುವದು. ಲೌಕಿಕವಾದ ವಿದ್ಯೆಗಳು ಯಾವವೂ ಯಾವ ಕೆಲಸಕ್ಕೂ ಬರುವವಲ್ಲ ಎಂದೇನೂ ಅಭಿಪ್ರಾಯವಲ್ಲ. ಮಗ್ಗಿಯು ಲೆಕ್ಕಕ್ಕೆ ಉಪಯೋಗವಾಗುವಂತೆ ಈ ವಿದ್ಯೆಗಳೆಲ್ಲವೂ ಆತ್ಮನ ನಿಜವಾದ ಸ್ವರೂಪವನ್ನು ತಿಳಿಸುವ ಬ್ರಹ್ಮವಿದ್ಯೆಗೆ ಒಯ್ಯುವಂತಾಗಬೇಕು. ಆದ್ದರಿಂದಲೇ ಬ್ರಹ್ಮವಿದ್ಯೆಯನ್ನು "ಸರ್ವವಿದ್ಯಾಪ್ರತಿಷ್ಠ" ಎಲ್ಲಾ ವಿದ್ಯೆಗಳೂ ಹೋಗಿ ಮುಟ್ಟಬೇಕಾದ ವಿದ್ಯೆ-ಎಂದು ಉಪನಿಷತ್ತಿನಲ್ಲಿ ಕರೆದಿರುತ್ತದೆ. ನಮ್ಮ ತಿಳಿವಳಿಕೆಯೆಲ್ಲವೂ ಒಂದಲ್ಲದಿದ್ದರೆ ಒಂದು ದಾರಿಯಿಂದ ಈ ಮಹಾಜ್ಞೇಯನಾದ ಆತ್ಮನನ್ನು ತಿಳಿಸಿಕೊಡುವದಕ್ಕೆ ಸಾಧನವಾಗಬೇಕು. ಏಕೆಂದರೆ ಇದು ನಮ್ಮ ಪರಮಪುರುಷಾರ್ಥಕ್ಕೆ ಸಾಧನವಾಗಿರುತ್ತದೆ.

ಈ ಆತ್ಮಜ್ಞಾನವೇ ನಿಜವಾದ ಯೋಗವು. ಯೋಗವೆಂಬ ಶಬ್ದವನ್ನು ಆಸನ, ಪ್ರಾಣಾಯಾಮ-ಮುಂತಾದ ಹೊರಗಿನ ಸಾಧನಗಳಿಗೆ ಉಪಯೋಗಿಸಿರುವದು ಗೌಣಾರ್ಥದಲ್ಲಿ. ನಿಜವಾಗಿ ಯೋಗವೆಂದರೆ ಮನಸ್ಸನ್ನು ಆತ್ಯಂತಿಕವಾಗಿ ಪರಮಾರ್ಥದಲ್ಲಿ ನಿಲ್ಲಿಸತಕ್ಕದ್ದು; ಇದು ಆತ್ಮಜ್ಞಾನವಲ್ಲದೆ ಮತ್ತೊಂದಲ್ಲ. ಉಳಿದ ಜ್ಞಾನಗಳಲ್ಲಿ ಇನ್ನೂ ತಿಳಿಯಬೇಕೆಂಬ ಬಾಯಾರಿಕೆಯು ಇದ್ದೇ ಇರುತ್ತದೆ, ಜೀವನದಲ್ಲಿ ಒದ್ದಾಟವೂ ತಪ್ಪುವದಿಲ್ಲ. ಇದನ್ನು ನಾನು ತಿಳಿದಿಲ್ಲ, ಇದನ್ನು ನಾನು ಪಡೆಯಲಿಲ್ಲ-ಎಂಬ ಅಶಾಂತಿಯು ಮಿಕ್ಕ ಯಾವ ಜ್ಞಾನದಿಂದಲೂ ತಪ್ಪಲಾರದು. ಆದರೆ ಆತ್ಮಜ್ಞಾನವು ಹಾಗಲ್ಲ. ಇದರಿಂದ ಯಾರೊಬ್ಬರಿಗೂ ಅತೃಪ್ತಿಯಾಗುವದಿಲ್ಲ, ಎಲ್ಲರಿಗೂ ಒಂದೇ

ಬಗೆಯ ತೃಪ್ತಿಯು ಉಂಟಾಗುತ್ತದೆ. ಈಗ ಪಾಶ್ಚಾತ್ಯದೇಶಗಳಲ್ಲಿ ಸಮತಾವಾದವೆಂಬ ಒಂದು ಸಮಾಜಸುಧಾರಣೆಯ ಕ್ರಮವು ಎದ್ದಿರುತ್ತದೆ. ಎಲ್ಲರಿಗೂ ಸಮಾನವಾದ ಹಕ್ಕನ್ನೂ ಜವಾಬ್ದಾರಿಯನ್ನೂ ಹಂಚಿಕೊಡುವದೇ ಅದರ ಉದ್ದೇಶವು. ಆದರೆ ಈ ವಾದದಲ್ಲಿ ಎಲ್ಲರಿಗೂ ತೃಪ್ತಿಯನ್ನು ಹಂಚಿಕೊಡುವದಕ್ಕೆ ಯಾವ ಸಾಧನವೂ ಇರುವದಿಲ್ಲ. ಸಮತಾವಾದದ ಹೆಸರಿನಲ್ಲಿ ಎಷ್ಟೋ ಅಶಾಂತಿಯು ಎದ್ದುಕೊಳ್ಳುತ್ತದೆ. ನಿಜವಾದ ಸಮತಾವಾದವು ಆತ್ಮಜ್ಞಾನವನ್ನು ಮುಂದಿಟ್ಟುಕೊಂಡಿರಬೇಕು. ಈ ಜ್ಞಾನವು ಬಂದರೆ ಇನ್ನು ಮುಂದಕ್ಕೆ ಅತೃಪ್ತಿಯಿರುವದಿಲ್ಲ, ಆನಂದದಲ್ಲಿ ಎಲ್ಲರಿಗೂ ಸಮಾನವಾದ ಭಾಗವು ದೊರಕುತ್ತದೆ ಎಂಬುದು ಖಂಡಿತ.

ಭಗವಂತನು ಹೇಳಿದ್ದರ ಸಾರವಿದು: ನೀನು ನನ್ನನ್ನೇ ನಂಬಿ ನನ್ನನ್ನೇ ಗುರಿಯಾಗಿಟ್ಟುಕೊಂಡರೆ, ನನ್ನನ್ನೇ ಧ್ಯಾನಿಸುವ ಯೋಗವನ್ನು ಅವಲಂಬಿಸಿದರೆ, ಅರಿಯತಕ್ಕದ್ದನ್ನೆಲ್ಲ ಅರಿತುಕೊಂಡು ಪಡೆದುಕೊಳ್ಳತಕ್ಕದ್ದನ್ನೆಲ್ಲ ಪಡೆದುಕೊಂಡು ಈ ಸಂಸಾರದುಃಖದಿಂದ ಪಾರಾಗಿ ನಿತ್ಯತೃಪ್ತನಾಗಿ ಸರ್ವಸಮತ್ವಬುದ್ಧಿಯಿಂದ ಲೋಕೋಪಕಾರಿಯಾಗಿರುವೆ; ಇದು ಹೇಗೆಂಬುದನ್ನು ವಿವರಿಸಿ ಹೇಳುವೆನು ಕೇಳು— ವಿಷಯಗಳ ಭೋಗವೆಂಬುದು ಉಪ್ಪುನೀರುಕುಡಿದಂತೆ, ಪರಮಾರ್ಥದ ಜ್ಞಾನವೆಂಬುದು ಅಮೃತವನ್ನು ಪಾನಮಾಡಿದಂತೆ. ಈ ಜ್ಞಾನದಿಂದ ಆಗುವ ನಿತ್ಯತೃಪ್ತಿಯ ಪ್ರಾಪ್ತಿಗಾಗಿ ಎಲ್ಲರೂ ಪ್ರಯತ್ನಮಾಡತಕ್ಕದ್ದು. ಈ ಪ್ರಯತ್ನದಲ್ಲಿ ಎಲ್ಲರೂ ಕೃತಕೃತ್ಯರಾಗಬಹುದು. ಇದರಲ್ಲಿ ಪಾಲಿಗಾಗಿ ಯಾರೊಬ್ಬರೂ ಮತ್ತೊಬ್ಬರೊಡನೆ ಕಚ್ಚಾಡಬೇಕಾಗಿಲ್ಲ. ಇಂಥ ಜ್ಞಾನವನ್ನು ಈಗ ಭಗವಂತನು ಹೇಳಹೊರಟಿರುತ್ತಾನೆ.

## ೫೦. ಆತ್ಮತತ್ತ್ವ ೭-(೩-೫)
### (೨೦.೭.೪೭)

ನಮ್ಮ ವ್ಯವಹಾರವೆಲ್ಲ ಮನಸ್ಸಿನ ಸ್ಥಿತಿಯಮೇಲೆ ನಿಂತಿರುತ್ತದೆ. ಮನಸ್ಸೆಂಬುದೊಂದು ಬಹಳ ಜಟಿಲವಾದ ಯಂತ್ರವು. ಮನುಷ್ಯನು ಈ ಯಂತ್ರವನ್ನು ಹೇಗೆ ಉಪಯೋಗಿಸುವನೋ ಅವನ ಜೀವನವೂ ಅದರಂತೆ ಇರುವದು. ಮನಸ್ಸನ್ನು ವಿಷಯಗಳ ಚಿಂತನೆಗೆ ಹತ್ತಿಸಿಕೊಂಡು ವಿಷಯದಲ್ಲಿಯೇ ಮುಳುಗಿರುವವರು ವಿಷಯಿಗಳು. ಇವರಲ್ಲಿ ಕೆಲವರು ಸ್ಥೂಲವಿಷಯಗಳನ್ನೂ ಮತ್ತೆ ಕೆಲವರು ಸೂಕ್ಷ್ಮವಿಷಯಗಳನ್ನೂ ಚಿಂತಿಸುತ್ತಿರುವರು. ಇಂದ್ರಿಯಗಳ ಮೂಲಕವಾಗಿ ಆಯಾ

ವಿಷಯಗಳನ್ನು ಮುಟ್ಟಿ ಉಪಯೋಗಿಸುವದರಲ್ಲಿ ಕುಶಲರಾದಂತೆಲ್ಲ ಅವರಿಗೆ ಹೊಸಹೊಸ ರೀತಿಯ ಭೋಗೇಚ್ಛೆಯೆಂಬ ಬಾಯಾರಿಕೆಯು ಎದ್ದುಕೊಳ್ಳುವದು, ಈ ಬಾಯಾರಿಕೆಯಿಂದ ಅವರು ವಿಷಯಗಳ ಬೇಟೆಗೆಂದು ಹೊರಟು ಬಗೆಬಗೆಯಾದ ಜನ್ಮಗಳನ್ನು ಪಡೆಯುತ್ತಿರುವರು. ಇದೇ ಸಂಸಾರವು. ಇನ್ನು ಕೆಲವರು ಇದೇ ಮನಸ್ಸನ್ನು ಮತ್ತೊಂದು ಬಗೆಯಲ್ಲಿ ಉಪಯೋಗಿಸುವರು. ಅವರಿಗೆ ವಿಷಯಗಳಲ್ಲಿ ಯಾವ ನಿತ್ಯವಾದ ನಿಜವಾದ ಸುಖವೂ ಇಲ್ಲವೆಂದು ನಿಶ್ಚಯವಾಗಿಬಿಟ್ಟಿರುವದರಿಂದ ಅವರು ವಿಷಯಗಳಲ್ಲಿ ವಿರಕ್ತರಾಗಿರುತ್ತಾರೆ. ಇಂದ್ರಿಯಗಳನ್ನು ಮುಂದುಮುಂದಕ್ಕೆ ನೂಕುವದು ಅವರಿಗೆ ಸ್ವಲ್ಪವೂ ಇಷ್ಟವಿಲ್ಲ; ಆದ್ದರಿಂದ ಅವರು ಅವುಗಳನ್ನು ಹಿಂದುಹಿಂದಕ್ಕೆ ಜಗ್ಗಿ ಎಳೆದುಕೊಳ್ಳುತ್ತಾರೆ. ಮನಸ್ಸನ್ನು ಶಾಸ್ತ್ರಾಚಾರ್ಯರ ಉಪದೇಶ ದಂತೆ ಆತ್ಮಚಿಂತನೆಗೆ ತಿರುಗಿಸಿಕೊಂಡು ಆತ್ಮತತ್ತ್ವವನ್ನು ಕಾಣುವದರಲ್ಲಿಯೇ ಅವರು ತತ್ಪರರಾಗಿರುತ್ತಾರೆ. ಮೂಢರಿಗೆ ವಿಷಯಗಳಲ್ಲಿ ಎಂಥ ಪ್ರೀತಿಯಿರುವದೋ ಅಂಥ ಪ್ರೀತಿಯೇ ಅಥವಾ ಅದಕ್ಕೂ ಹೆಚ್ಚಿನ ಪ್ರೀತಿಯೇ ಆತ್ಮನಲ್ಲಿರುತ್ತದೆ. ವಿಷಯಿಗಳು ವಿಷಯಚಿಂತನೆಯನ್ನು ಮಾಡುವದಕ್ಕಿಂತಲೂ ಬಲವಾಗಿ ತತ್ಪರತೆಯಿಂದ ಅವರು ಆತ್ಮತತ್ತ್ವವನ್ನು ಕುರಿತು ಮನಸ್ಸನ್ನು ಹೊರಳಾಡಿಸಿ ಏಕಾಗ್ರತೆಗೊಳಿಸಿ ಚಿಂತಿಸುತ್ತಿರುವರು. ಈ ಚಿಂತನೆಯೇ ಧ್ಯಾನಯೋಗವು. ಈ ಧ್ಯಾನಯೋಗದ ಬಲದಿಂದ ಅವರಿಗೆ ಧ್ಯಾನದಲ್ಲಿ ಕೌಶಲವುಂಟಾಗುವದು. ಹೊಸಹೊಸ ರೀತಿಯ ಆನಂದವು ಅನುಭವಕ್ಕೆ ಬರಲಾರಂಭಿಸುವದು. ಆಗ ಅವರು ಧ್ಯಾನವನ್ನು ಇನ್ನೂ ಬಲವಾಗಿ ಮಾಡಿಕೊಂಡು ಆತ್ಮನನ್ನೇ ಹುಡುಕುತ್ತಾ ಆತ್ಮನ ಕಡೆಗೇ ಧಾವಿಸುವರು. ಆಗ ಅವರಿಗೆ ತತ್ತ್ವಜ್ಞಾನವುಂಟಾಗುತ್ತದೆ.

ತತ್ತ್ವಜ್ಞಾನವು ಯಾರಿಗೆ ಉಂಟಾಗುವದೋ ಅವರು ಇನ್ನು ಹೊಸದಾಗಿ ತಿಳಿದುಕೊಳ್ಳಬೇಕಾದದ್ದು ಯಾವದೂ ಉಳಿಯುವದಿಲ್ಲ. ಆದ್ದರಿಂದ ಅವರಿಗೆ ಮನಸ್ಸಿನಲ್ಲಿ ಯಾವ ಅಶಾಂತಿಯೂ ಇರುವದಿಲ್ಲ. ಆತ್ಮನೊಬ್ಬನೇ ಪರಮಾರ್ಥವೆಂಬ ಜ್ಞಾನದಿಂದ ಆತ್ಮನಲ್ಲಿ ಹುಟ್ಟಿಹಾಕಿಕೊಂಡಿರುವ ವಿಷಯಪ್ರಪಂಚವೆಲ್ಲವೂ ಅಸಾರವಾಗಿ ಮಾಯಿಕವಾಗಿ ತೋರಿಬಿಡುವದರಿಂದ ಅವರು ಇನ್ನು ಹೊಸದಾಗಿ ಅರಿತುಕೊಳ್ಳ ಬೇಕಾದದ್ದಾಗಲಿ, ಸಂಪಾದಿಸಿಕೊಳ್ಳಬೇಕಾದದ್ದಾಗಲಿ ಇರುವದಿಲ್ಲವೆಂಬುದು ಸ್ವಾಭಾವಿಕ ವಾಗಿರುತ್ತದೆ. ಯಾರು ಜ್ಞಾನಿಗಳೋ ಅವರು ಸರ್ವವಿಧದಿಂದಲೂ ಕೃತಕೃತ್ಯರು.

ಆದರೆ ಯಾರುಯಾರು ಜ್ಞಾನಕ್ಕೆ ಪ್ರಯತ್ನಮಾಡುವರೋ ಅವರಿಗೆಲ್ಲ ಈ ಜ್ಞಾನವು ಸಿಕ್ಕುವಹಾಗಿಲ್ಲ. ಜ್ಞಾನಕ್ಕೆಂದು ಪ್ರಯತ್ನಮಾಡುವವರೇ ಬಹಳ ಸ್ವಲ್ಪ; ಮನುಷ್ಯರಲ್ಲಿ ಸಾವಿರಕ್ಕೆ ಒಬ್ಬನಂತೆ ಪ್ರಯತ್ನಮಾಡುತ್ತಾನೋ ಇಲ್ಲವೂ! ಇನ್ನು ಹಾಗೆ

ಪ್ರಯತ್ನಮಾಡುವವರಿಗೆಲ್ಲ ಜ್ಞಾನವು ದೊರಕುವದೆ? ಷಡಕ್ಷರಕವಿಯು ಕವಿತೆಯ ವಿಷಯದಲ್ಲಿ ಹೀಗೆಂದಿರುತ್ತಾನೆ. "ಶಾಸ್ತ್ರವೆಂಬ ರೋಹಣಪರ್ವತವನ್ನು ಎಷ್ಟೋಜನ ಹತ್ತುತ್ತಾರೆ; ಆದರೆ ಮಾರಾರಿಯ ಕೃಪೆಯಿಲ್ಲದವನಿಗೆ ಆ ಪರ್ವತದ ಮೇಲುಗಡೆ ಯಲ್ಲಿರುವ ಕವಿತೆ ಎಂಬ ಚಿಂತಾರತ್ನವು ದೊರೆಯಲಾರದು." ಆತ್ಮಜ್ಞಾನದ ವಿಷಯದಲ್ಲಿ ಇದು ಇನ್ನೂ ಚೆನ್ನಾಗಿ ಹೊಂದುತ್ತದೆ. ಆತ್ಮನ ವಿಷಯವಾಗಿ ಶ್ರವಣ ಮಾಡುವದಕ್ಕೂ ಅನೇಕರಿಗೆ ಪುಣ್ಯವಿರುವದಿಲ್ಲ; ಆದರೆ ಶ್ರವಣಮಾಡಿದವರಲ್ಲಿ ಕೂಡ ಬಲುಮಂದಿ ಈ ಆತ್ಮನನ್ನು ಅರಿತುಕೊಳ್ಳಲಾರದೆ ಇರುವರು-ಎಂದು ಶ್ರುತಿಯು ಜ್ಞಾನದ ಬೆಲೆಯನ್ನು ಹೊಗಳುತ್ತಿರುವದು. ಹೀಗೆಂದು ನಾವು ನಿರಾಶರಾಗ ಬಾರದು; ಬಿಡದೆ ಪ್ರಯತ್ನಮಾಡುತ್ತಿರಬೇಕು ಜ್ಞಾನಕ್ಕಾಗಿ ಪ್ರಯತ್ನಮಾಡುವವರನ್ನೇ ಸಿದ್ಧರು ಎಂದು ಭಗವಂತನು ಇಲ್ಲಿ ಹೊಗಳಿರುತ್ತಾನೆ. ಪ್ರಯತ್ನವು ನಮ್ಮದು, ಜ್ಞಾನ ಪ್ರಾಪ್ತಿಯು ಭಗವಂತನ ಅನುಗ್ರಹದಿಂದ ಬರತಕ್ಕದ್ದು.

ಇಷ್ಟೊಂದು ಹೊಗಳಿರುವ ಈ ಜ್ಞಾನವು ಬಹುರಹಸ್ಯವಾಗಿರಬೇಕು ಎಂದು ಯಾರಾದರೂ ಭಾವಿಸಬಹುದು. ಹಾಗೇನೂ ಇಲ್ಲ. ಅದು ಸರಿಯಾದ ಯೋಗ್ಯತೆ ಯಿರುವ ಯಾರಿಗಾದರೂ ತಿಳಿಯುವಂತೆ ಇರುತ್ತದೆ. ಆದರೂ ಎಷ್ಟೋ ಜನರಿಗೆ ಅಂತಃಕರಣದ ಸಂಸ್ಕಾರವು ಸಾಲದ್ದರಿಂದ ಅದು ಲಭ್ಯವಾಗಿರುವದಿಲ್ಲ. ಭಗವಂತನು ಜ್ಞಾನದ ಸ್ವರೂಪವನ್ನು ವರ್ಣಿಸಿರುವ ಬಗೆಯನ್ನು ಕೇಳಿರಿ:

**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥** (೭-೪)
**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್॥**(೭-೫)

ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ ಎಂದು ಭಗವಂತನ ಪ್ರಕೃತಿಯು ಎಂಟು ವಿಧವಾಗಿರುತ್ತದೆ. ಇದು ಅಪರ ಪ್ರಕೃತಿ; ಜೀವರೂಪವಾಗಿರುವದು ಭಗವಂತನ ಪರಾಪ್ರಕೃತಿಯು, ಅದು ಜಗತ್ತೆಲ್ಲವನ್ನೂ ಧರಿಸಿರುವದು. ಈ ಎರಡು ಪ್ರಕೃತಿಗಳಿಂದ ಎಲ್ಲಾ ಭೂತಗಳೂ ಉಂಟಾಗುತ್ತವೆ. ಈ ತತ್ತ್ವವನ್ನು ಅರಿತುಕೊಳ್ಳಬೇಕು. ಇದೇ ಜ್ಞಾನವು.

ಈ ಪ್ರಕೃತಿಯ ಸ್ವರೂಪವನ್ನು ಸ್ವಲ್ಪ ವಿವರವಾಗಿ ತಿಳಿದುಕೊಳ್ಳುವದಕ್ಕೆ ಪ್ರಯತ್ನಮಾಡೋಣ. ಪ್ರಕೃತಿ ಎಂಬ ಮಾತು ಸಾಂಖ್ಯರಲ್ಲಿ ಪ್ರಧಾನ ಎಂಬರ್ಥದಲ್ಲಿ ಪ್ರಯೋಗವಾಗುತ್ತದೆ. ಪ್ರಧಾನವೆಂದರೆ ಯಾವದರಲ್ಲಿ ಜಗತ್ತೆಲ್ಲವೂ ಬೀಜರೂಪ

ವಾಗಿರುವದೋ ಅದು. ಒಂದಾನೊಂದು ಮೂಲಕಾರಣವು ಮೊದಲು ಬೀಜರೂಪ ವಾಗಿದ್ದು ಸೃಷ್ಟಿಯ ಕಾಲಕ್ಕೆ ಮಹತ್ತು, ಅಹಂಕಾರ, ತನ್ಮಾತ್ರೆಗಳು, ಪಂಚಭೂತಗಳು- ಎಂದು ಬಗೆಬಗೆಯ ತತ್ತ್ವಗಳಾಗಿ ಪರಿಣಮಿಸುವದು; ಅದರಿಂದಲೇ ಪ್ರಪಂಚವೆಲ್ಲವೂ ಆಗಿರುತ್ತದೆ ಎಂಬುದು ಪರಿಣಾಮವಾದಿಗಳಾದ ಸಾಂಖ್ಯರ ಮತವು. ಆದರೆ ಸಾಂಖ್ಯರ ಶಬ್ದವನ್ನೇ ವೇದಾಂತಿಗಳು ಬಳಸಿದರೂ ಅವರು ಈ 'ಪ್ರಕೃತಿ' ಎಂಬ ಶಬ್ದಕ್ಕೆ ಕೊಟ್ಟಿರುವ ಅರ್ಥವೇ ಬೇರೆ. ಪ್ರಕೃತಿ ಎಂದರೆ ಸ್ವತಂತ್ರವಾಗಿರುವ ಒಂದು ತತ್ತ್ವವಲ್ಲ; ಪರಮಾತ್ಮನ ಶಕ್ತಿ. ವಸ್ತುವಿನ ಶಕ್ತಿಯೂ ವಸ್ತುವೂ ಬೇರೆಬೇರೆಯಲ್ಲ; ಬೆಂಕಿಯ ಸುಡುವ ಶಕ್ತಿಯು ಬೆಂಕಿಗಿಂತ ಬೇರೆಯಾಗಿರುವದಿಲ್ಲ. ಇದರಂತೆ ಪರಮಾತ್ಮನ ಶಕ್ತಿಯು ಪರಮಾತ್ಮನಿಗಿಂತ ಬೇರೆಯಾಗಿರುವದಿಲ್ಲ. ಹಾಲಿಗೂ ಅದರ ಬಿಳುಪಿಗೂ ಇರುವ ಸಂಬಂಧವು ಪರಮಾತ್ಮನಿಗೂ ಅವನ ಶಕ್ತಿಯಾದ ಮಾಯೆಗೂ ಇರುತ್ತದೆ. ಪೃಥ್ವಿ, ಅಪ್ಪು-ಮುಂತಾದ ಆಧಿಭೌತಿಕ, ವಸ್ತುಗಳೆಲ್ಲವೂ ಈ ಮಾಯೆಯ ಕಾರ್ಯವೇ. ಹೊರಗಿನ ಪಂಚಭೂತಗಳೂ ಒಳಗಿನ ಮನಸ್ಸು, ಬುದ್ಧಿ ಅಹಂಕಾರ-ಇವುಗಳೂ ಪರಮಾತ್ಮನ ಶಕ್ತಿಯ ವಿಲಾಸವೇ. ಆದ್ದರಿಂದ ಎಲ್ಲವೂ ಆ ಪರಮಾತ್ಮನೇ-ಎಂಬುದು ತತ್ತ್ವಜ್ಞಾನದ ಒಂದು ಭಾಗವು.

ಇದುವರೆಗೆ ಹೇಳಿರುವದು ಅಪರ ಪ್ರಕೃತಿ, ಇದು ಜಡರೂಪವಾದ ಪ್ರಪಂಚ ವಾಗಿ ತೋರುತ್ತಿರುವದು. ಇನ್ನು ಇದಕ್ಕಿಂತ ಬೇರೆಯಾಗಿರುವ ಪರಪ್ರಕೃತಿಯೊಂದುಂಟು. ಅಪರ ಎಂದರೆ ಕಡಿಮೆಯದು, ಪರ ಎಂದರೆ ಹೆಚ್ಚಿನದು, ಪರಪ್ರಕೃತಿಯ ಹೆಚ್ಚುಗಾರಿಕೆ ಏನೆಂದರೆ ಅದು ಚೇತನವಾಗಿರುತ್ತದೆ. ಚೇತನದ ವಶದಲ್ಲಿ ಜಡವಿರುತ್ತದೆ. ಜಗತ್ತಿನಲ್ಲಿರುವ ಆಬ್ರಹ್ಮಸ್ತಂಬಪರ್ಯಂತವಾದ ಭೂತಗಳೆಲ್ಲಕ್ಕೂ ಶರೀರೇಂದ್ರಿಯ ಸಂಘಾತಗಳಿವೆಯಷ್ಟೆ; ಅವು ಜಡಪ್ರಕೃತಿಯ ಕಾರ್ಯಗಳು. ಅವುಗಳ ಜೀವವು ಚೇತನಪ್ರಕೃತಿಯು. ಒಬ್ಬ ಸೂರ್ಯನ ಕಿರಣಗಳು ಹಲವು ಇದ್ದು ದಿಕ್ಕುದಿಕ್ಕಿಗೂ ಹರಡಿರುವಂತೆ ಜೀವರೆಂಬ ಪರಾಪ್ರಕೃತಿಯ ಕಿರಣಗಳು ಜಗತ್ತೆಲ್ಲವನ್ನೂ ವ್ಯಾಪಿಸಿ ರುತ್ತವೆ. ಚೇತನವು ಅಚೇತನಕ್ಕಿಂತ ಹೆಚ್ಚೆಂಬುದನ್ನು ತಿಳಿಸುವದಕ್ಕೆ ಶ್ರೀವಿವೇಕಾನಂದ ಸ್ವಾಮಿಗಳು ಒಂದು ದೃಷ್ಟಾಂತವನ್ನು ಕೊಟ್ಟಿರುತ್ತಾರೆ. ಒಂದು ದೊಡ್ಡ ರೈಲಿನ ಎಂಜಿನ್ನು ಭರ್ರೆಂದು ವೇಗದಿಂದ ಬರುತ್ತಿರುವಲ್ಲಿ ಒಂದು ಸಣ್ಣಹುಳು ತನ್ನ ಪ್ರಾಣರಕ್ಷಣೆಗೆಂದು ಬೇಗ ಬೇಗನೆ ಕಂಬಿಯನ್ನು ಹಾದು ಓಡಿಹೋಗುತ್ತಿರುತ್ತದೆ. ಇಲ್ಲಿ ನೋಡುವದಕ್ಕೆ ಎಂಜಿನ್ನಿನ ಶಕ್ತಿಯು ಹೆಚ್ಚೆಂದೂ ಹುಳುವಿನ ಶಕ್ತಿಯು ಕಡಿಮೆಯೆಂದೂ ತೋರುವದು. ಆದರೆ ಸ್ವಲ್ಪ ಒಳಹೊಕ್ಕುನೋಡಿದರೆ ಆ ಯಂತ್ರವು ಯಂತ್ರಿಯಾದ ಚೇತನನ ಪ್ರೇರಣೆಗೆ ಒಳಪಟ್ಟು ನಡೆಯುತ್ತಿರುವದು.

ಹುಳುವಾದರೋ ತನ್ನ ಸ್ವತಂತ್ರವಾದ ಇಚ್ಛೆಯಿಂದ ಸಂಚರಿಸುತ್ತಿರುತ್ತದೆ. ಆದ್ದರಿಂದ ಜೀವಭೂತವಾಗಿರುವ ಪರಾಪ್ರಕೃತಿಯು ಅಪರಪ್ರಕೃತಿಯನ್ನು ಆಳುತ್ತಿರುತ್ತದೆ ಎಂದಾಯಿತು.

ಇದು ಹೇಗೇ ಇರಲಿ. ಈ ಶಕ್ತಿಗಳು ಶಕ್ತನಾದ ಭಗವಂತನಿಗಿಂತ ಬೇರೆಯಲ್ಲ ವೆಂಬುದನ್ನು ನಾವು ಚೆನ್ನಾಗಿ ಮನಸ್ಸಿಗೆ ಹತ್ತಿಸಿಕೊಳ್ಳಬೇಕು. ಪರಮಾತ್ಮನೊಬ್ಬನೇ ಚಿಚ್ಛಕ್ತಿಜಡಶಕ್ತಿಗಳ ರೂಪದಿಂದ ತೋರಿಕೊಂಡು ತನ್ನ ಲೀಲೆಯನ್ನು ತೋರ್ಪಡಿಸಿ ಕೊಳ್ಳುತ್ತಿರುವನು. ಜಡವಾಗಿರುವ ಶರೀರಗಳನ್ನು ಸೃಷ್ಟಿಸುವದು, ಅವುಗಳಲ್ಲಿ ಜೀವರಾಶಿ ಒಳಹೊಕ್ಕಿರುವದು, ಆ ಜೀವರುಗಳನ್ನು ತನ್ನ ಅಂತರ್ಯಾಮಿರೂಪದಿಂದ ನಿಯಮಿಸುತ್ತಿರುವದು-ಇದೆಲ್ಲವೂ ಆತನ ಲೀಲೆಯು. ಒಬ್ಬ ಮಹನೀಯರು ನನಗೆ ಚಿರಪರಿಚಿತರಾಗಿದ್ದರು. ಅವರು ತಮ್ಮ ಕನಸೊಂದರಲ್ಲಿ ಕಂಡ ಪರಮಾತ್ಮನ ಅಂತರ್ಯಾಮಿತ್ವವನ್ನು, ಆತನ ವಶದಲ್ಲಿಯೇ ಚರಾಚರವೆಲ್ಲವೂ ಹೇಗೆ ಇದ್ದುಕೊಂಡಿರು ವದೆಂಬುದನ್ನು, ಹೀಗೆಂದು ವರ್ಣಿಸಿ ನನಗೆ ಹೇಳಿದ್ದರು. ಶ್ರೀಕೃಷ್ಣನೇ ಅವರಿಗೆ ಕನಸಿನಲ್ಲಿ ದರ್ಶನವನ್ನು ಕೊಟ್ಟನಂತೆ. "ತಾವು ಯಾರು?" ಎಂದು ಅವರು ಕೇಳಲು "ಅಪ್ಪಾ, ನಾನು ಯಾರೆಂಬುದನ್ನು ನಿನಗೆ ನಿದರ್ಶನಪೂರ್ವಕವಾಗಿ ತಿಳಿಸುವೆನು. ಇಗೋ ನೋಡು, ಇಲ್ಲಿ ಕಾಣುತ್ತಿರುವ ಜೀವರುಗಳ ವ್ಯಾಪಾರವೆಲ್ಲವೂ ನನ್ನ ವಶದಲ್ಲಿವೆ. ಈ ಜೀವರಿಗೆ ಪ್ರಾಣವಾಯುವನ್ನು ತುಂಬಿ ಇರುವವನು ನಾನು. ಇಗೋ, ಇವರ ಪ್ರಾಣಗಳನ್ನು ಸೆಳೆದುಕೊಳ್ಳುವೆನು! ನೋಡು, ಅವರು ಹೇಗೆ ಲಿಬಿಲಿಬಿ ಒದ್ದಾಡುತ್ತಿರುವರು. ಇಗೋ ಈಗ ಪ್ರಾಣವಾಯುವನ್ನು ತುಂಬುವೆನು, ನೋಡು ಹೇಗೆ ಸಪ್ರಾಣರಾಗಿ ಚೇತರಿಸಿಕೊಳ್ಳುತ್ತಿದ್ದಾರೆ!" ಎಂದು ತನ್ನ ಅದ್ಭುತ ಲೀಲೆಯನ್ನು ತೋರಿಸಿದನಂತೆ! ಪರಮಾತ್ಮನು ಜಗತ್ತಿಗೇ "ಪ್ರಾಣದನು," "ಪ್ರಾಣನಿಲಯನು." ಎಂದು ವಿಷ್ಣುಸಹಸ್ರನಾಮದಲ್ಲಿ ವರ್ಣಿಸಿರುತ್ತದೆ. ಜಗತ್ತಿನ ಹುಟ್ಟು ಸಾವುಗಳೇ ಆತನ ಆಧೀನವು. ಆತನಿಗಿಂತ ಹೆಚ್ಚಿನದು ಯಾವದೊಂದೂ ಇರುವದಿಲ್ಲ. ಇದನ್ನು ಸರಿಯಾಗಿ ಅರಿತುಕೊಂಡರೆ ತತ್ತ್ವಜ್ಞಾನವಾಯಿತು.

ಇಡಿಯ ಜಗತ್ತಿಗೆ ಮೂಲವಾಗಿರುವವನು ಪರಮಾತ್ಮನು. ಆ ಮೂಲವನ್ನು ತಿಳಿದರೆ ತತ್ತ್ವಜ್ಞಾನವೆನಿಸುವದು. ಜಗತ್ತನ್ನು ಮೇಲೆಮೇಲೆ ನೋಡಿದರೆ ಸಾಲದು; ಆದರೆ ಮೂಲವನ್ನು ನೋಡಬೇಕು. ಈ ಜಗತ್ತಿನ ತಿರುಳು ಆ ಪರಮಾತ್ಮನೇ. ಆ ತಿರುಳನ್ನು ಕಂಡುಕೊಳ್ಳುವದೇ ನಮ್ಮ ಗುರಿಯಾಗಿರಬೇಕು. ಜಗತ್ತಿನಲ್ಲಿರುವದೆಲ್ಲವೂ ಆ ಪರಮಾತ್ಮನಲ್ಲಿ ದಾರಕ್ಕೆ ಪೋಣಿಸಿದ ರತ್ನಗಳಂತೆ ಪೋಣಿಸಿಕೊಂಡಿರುತ್ತದೆ. ದ್ರಾಕ್ಷಿಯ ಬಳ್ಳಿಯಲ್ಲಿ ಎಲ್ಲೆಲ್ಲಿಯೂ ದ್ರಾಕ್ಷಿಯ ರಸವು ತುಂಬಿತುಳುಕಾಡುತ್ತಿರುತ್ತದೆ;

ಅದು ಪಕ್ವವಾದ ಹಣ್ಣುಗಳಲ್ಲಿ ಚೆನ್ನಾಗಿ ಕಾಣಿಸಿಕೊಳ್ಳುತ್ತದೆ. ಇದರಂತೆ ಆತ್ಮನು ಇಡಿಯ ಜಗತ್ತಿಗೇ ರಸವಾಗಿರುತ್ತಾನಾದರೂ "ರಸೋಽಹಮಪ್ಸು" ದ್ರವವಸ್ತು ಗಳಲ್ಲಿ-ಪಾನಕ, ಎಳನೀರು, ಹಾಲು, ಕಬ್ಬಿನ ರಸ ಮುಂತಾದವುಗಳಲ್ಲಿ-ಅವುಗಳ ಸವಿಯಾಗಿ ತೋರುತ್ತಿರುತ್ತಾನೆ. ಒಳಗಣ್ಣನ್ನು, ಒಕ್ಕಡೆಗೆ ನಿಲ್ಲಿಸಿ ಒಳಹೊಕ್ಕು ನೋಡು ವದರಿಂದ ಇದನ್ನು ಅರಿತುಕೊಳ್ಳಬಹುದು. ಆರನೆಯ ಅಧ್ಯಾಯದಲ್ಲಿ ಹೇಳಿರುವ ಧ್ಯಾನಯೋಗವು ಪರಿಪಕ್ವವಾದರೆ ಈ ತತ್ತ್ವಜ್ಞಾನವುಂಟಾಗುತ್ತದೆ; ಆ ಜ್ಞಾನದಲ್ಲಿಯೇ ನೆಲೆನಿಂತಿರುವವರಿಗೆ ಎಲ್ಲವೂ ಭಗವಂತನೇ ಎಂಬ ಜ್ಞಾನನಿಷ್ಠೆಯು ಅಳವಡುವದು. ಇದೇ ಪರಮಪುರುಷಾರ್ಥವು, ಮುಮುಕ್ಷುಗಳಾದವರ ಹೆಗ್ಗುರಿಯು.

ಆದರೆ ಯಾರಿಗೆ ಇನ್ನೂ ಇಂಥ ಜ್ಞಾನನಿಷ್ಠೆಯು ದಕ್ಕಿರುವದಿಲ್ಲವೋ ಅಂಥ ಮಂದಮಧ್ಯಮಾಧಿಕಾರಿಗಳಿಗಾಗಿ ನಾನು 'ಇಲ್ಲಿ ಹೀಗಿದ್ದೇನೆ, ಅಲ್ಲಿ ಹಾಗಿದ್ದೇನೆ' ಎಂದು ಭಗವಂತನು ತಿಳಿಸಿಕೊಡುತ್ತಾನೆ. ಉಪಾಧ್ಯಾಯರು ಕಪ್ಪುಹಲಗೆ, ಹುಣಸೇ ಬೀಜ- ಮುಂತಾದವುಗಳನ್ನು ಉಪಯೋಗಿಸಿಕೊಂಡು ಸಂಖ್ಯೆ, ಅಕ್ಷರ- ಮುಂತಾದವುಗಳ ಅರಿವನ್ನುಂಟುಮಾಡಿಕೊಡುವಂತೆ ಸಾಧಕರಿಗೆ ಇಂಥ ಭಾವನೆಯಿಂದ ತತ್ತ್ವಜ್ಞಾನಕ್ಕೆ ದಾರಿಯನ್ನು ಮಾಡಿಕೊಟ್ಟಿರುತ್ತಾನೆ. "ಅರ್ಜುನನೆ, ನಾನು ಅಪ್ಪುಗಳಲ್ಲಿ, ದ್ರವದ್ರವ್ಯಗಳಲ್ಲಿ, ಕಾಣುವ ರಸವಾಗಿರುತ್ತೇನೆ-ಎಂದು ಭಾವಿಸುತ್ತಿರು. ಭರದ್ವಾಜರ ಆತಿಥ್ಯ, ಪಂಚವಟಿ, ಅಯೋಧ್ಯೆ-ಮುಂತಾದವುಗಳ ವರ್ಣನೆಯನ್ನು ಕೇಳಿದ್ದವರು ಆಯಾ ಕ್ಷೇತ್ರಗಳಲ್ಲಿ ಆಯಾ ಭಾವನೆಯನ್ನು ಮಾಡುವದರಿಂದಲೇ ಮನಸ್ಸು ಉತ್ತಮಭೂಮಿಕೆಯನ್ನು ಮುಟ್ಟುತ್ತದೆ. ಆದ್ದರಿಂದ ಇಲ್ಲಿ 'ರಸೋಽಹಮಪ್ಸು ಕೌನ್ತೇಯ' ಎಂಬಲ್ಲಿಂದ ಹಿಡಿದು 'ಕಾಮೋಽಸ್ಮಿ ಭರತರ್ಷಭ' ಎಂಬವರೆಗಿನ ವರ್ಣಿಸಿರುವಂಥ ಭಾವನೆಯನ್ನು ಮಾಡುತ್ತಿರಬೇಕು—ಎಂದಿರುತ್ತಾನೆ.

ಇಂಥ ಭಾವನೆಯಿಂದ ಆಗುವ ಪ್ರಯೋಜನವೇನು?- ಎಂದು ಯಾರಾದರೂ ಕೇಳಬಹುದು. ಇದಕ್ಕೆ ಹೊರಗಿನ ವಸ್ತುಗಳಲ್ಲಿ ನಮಗಿರುವ ಭಾವನೆ ಏನು?- ಎಂಬುದನ್ನು ಸ್ವಲ್ಪ ಪರೀಕ್ಷಿಸಬೇಕು. ಯಾವ ಪದಾರ್ಥವನ್ನು ಕಂಡರೂ 'ಇದು ನನ್ನದು, ನಾನು ಇದಕ್ಕೆ ಇಂತಿಷ್ಟು ಬೆಲೆಯನ್ನು ಕೊಟ್ಟು ನನ್ನದು ಮಾಡಿಕೊಂಡಿದ್ದೇನೆ'- ಎಂಬ ಭಾವನೆಯೇ ನಮ್ಮಲ್ಲಿ ಮೂಡಿಕೊಳ್ಳುತ್ತಿರುವದು. ಯಾವದೊಂದು ಪದಾರ್ಥ ವನ್ನೇ ಆದರೂ ನನ್ನದೆಂಬ ಅಭಿಮಾನವನ್ನು ಹಾಕಿಕೊಂಡಹೊರತು ಅನುಭವಿಸುವದು ನಮಗೆ ಸಾಧ್ಯವಿಲ್ಲ; ಪದಾರ್ಥಗಳು ಇದ್ದಂತೆಯೇ ಅವನ್ನು ಅನುಭವಿಸಿದರೆ ಹೆಚ್ಚಿನ ಆನಂದವಾಗುವದು. ಒಬ್ಬ ಮನುಷ್ಯನು ಬಗೆಬಗೆಯ ಆಭರಣಗಳನ್ನು ಧರಿಸಿಕೊಂಡು

ದಾರಿಯಲ್ಲಿ ಹೋಗುತ್ತಿದ್ದನಂತೆ. ಒಬ್ಬ ದಾರಿಹೋಕನು "ಅಪ್ಪ, ಸ್ವಲ್ಪ ನಿಲ್ಲು; ನಿನ್ನ ಒಡವೆಯನ್ನು ನೋಡಿ ಸ್ವಲ್ಪ ಆನಂದಿಸುವೆನು" ಎಂದನಂತೆ. ಆಗ ಒಡವೆಗಳನ್ನು ಧರಿಸಿದ್ದವನು "ಅವನ್ನು ಹಾಕಿಕೊಂಡಿರುವವನು ನಾನು; ನಿನಗೇನು ಇದರಲ್ಲಿ ಆನಂದ?" ಎಂದು ಕೇಳಲು "ಛೆ, ಇದು ರಹಸ್ಯವು, ನಿನಗೆ ತಿಳಿಯದು; ನಿನಗೆ ಇವು ನನ್ನವು ಎಂಬ ಅಭಿಮಾನವಿರುವದರಿಂದ ನೀನು ಇವನ್ನು ಸರಿಯಾಗಿ ಅನುಭವಿಸಲಾರೆ. ನನಗೇ ಅವುಗಳ ಆನಂದವು ನಿಜವಾಗಿ ಆಗುವದು" ಎಂದನಂತೆ! ಇದು ನಿಜ. ನಾವು ಯಾವದನ್ನು ಅನುಭವಿಸುವದಕ್ಕೆ ಹೊರಟರೂ 'ನನ್ನದು' ಎಂಬ ಕಲಾಯವನ್ನು ಬಳಿದೇ ಅನುಭವಿಸುತ್ತೇವೆ. ಮಜ್ಜಿಗೆಯ ಪಳಿದ್ಯವನ್ನು ಚಪ್ಪರಿಸು ತ್ತಿರುವವರಿಗೆ ಕೊನೆಯಲ್ಲಿ ಪಾತ್ರೆಯ ದೋಷದಿಂದ ಕಿಲುಬಿನ ಸೋಂಕು ಬಂದರೆ ನಾಲಗೆಗೆ ರುಚಿಯನ್ನು ಸವಿಯುವ ಶಕ್ತಿ ತಟ್ಟನೆ ಕುಂಠಿತವಾಗುವ ಹಾಗೆ ನಾನು, ನನ್ನದು-ಎಂಬ ಭಾವನೆಯ ದೋಷದಿಂದ ಈ ಜಗತ್ತಿನ ಭೋಗಗಳಲ್ಲಿ ನಮಗೆ ಕಿಲುಬಿನ ಸವಿಯೇ ಕಾಣಿಸುತ್ತಿರುತ್ತದೆ. ಆದ್ದರಿಂದ 'ನಾನು' 'ನನ್ನದು' ಎಂಬ ಭಾವನೆಯನ್ನು ಕಳೆದುಕೊಳ್ಳಬೇಕು; ಇದೆಲ್ಲವೂ ಪರಮಾತ್ಮನ ವಿಭೂತಿಯೇ ಎಂಬ ಭಾವನೆಯನ್ನು ಮಾಡಿಕೊಳ್ಳುವ ಅಭ್ಯಾಸವನ್ನು ಮಾಡಬೇಕು.

ನಾಟಕದಲ್ಲಿ ಅಂಕಪರದೆಯನ್ನು ತೆರೆದ ಮಾತ್ರದಿಂದ ಪಾತ್ರಗಳನ್ನು ಕಾಣುವ ಹಾಗೆ ನಾನು ನನ್ನದೆಂಬ ಪರದೆಯನ್ನು ತೆಗೆದುಹಾಕಿದರೆ ಭಗವಂತನನ್ನು ಒಂದಿಷ್ಟು ಕಂಡಹಾಗಾಗುವದು. ಎಲ್ಲವೂ ಈಶ್ವರಸೃಷ್ಟಿಯೇ, ಈಶ್ವರ ವಿಭೂತಿಯೇ ಆಗಿರುತ್ತದೆ. ಆದರೂ ನಾವು ಕೃತಕವಾದ ಭಾವನೆಯಿಂದ ನಾನು, ನನ್ನದು-ಎಂಬ ದುಃಖದ ಬೀಜವನ್ನು ಬಿತ್ತಿ ಭೋಗಗಳನ್ನು ಕಲುಷಿತವಾಗಿ ಮಾಡಿಕೊಳ್ಳುತ್ತಿದೇವೆ. ಈ ಭಾವನೆಯನ್ನು ಬಿಟ್ಟರೆ ಸಹಜವಾದ ಆನಂದವನ್ನು ಅನುಭವಿಸಬಹುದು. ಪರಮಾತ್ಮ ಭಾವನೆಯನ್ನು ಬೆಳೆಯಿಸಿಕೊಳ್ಳುವದಕ್ಕೆ ಎಲ್ಲೆಲ್ಲಿ ಯಾವಯಾವದು ಉತ್ಕೃಷ್ಟವಾಗಿ ತೋರುವದೋ ಅದೆಲ್ಲವೂ ಭಗವಂತನೇ ಎಂಬ ಭಾವನೆಯನ್ನು ಮೊದಲು ಅಭ್ಯಾಸಮಾಡಬೇಕು. ಕೃತಕವಾದ ಭಾವನೆಗೆ ವಿಷಯವಾದದ್ದು ದುಃಖದ ಬೀಜವು; ಸಹಜವಾದ ಈಶ್ವರತ್ವದ ಭಾವನೆಗೆ ವಿಷಯವಾದದ್ದು ಆನಂದಹೇತುವು. ಆದ್ದರಿಂದ ತತ್ತ್ವಜ್ಞಾನದಲ್ಲಿ ನಿಷ್ಠೆಯನ್ನು ಪಡೆಯಬೇಕೆಂಬ ಮುಮುಕ್ಷುಗಳು ಮೊದಲನೆಯ ಸಾಧನವಾಗಿ ಈ ಭಾವನೆಯನ್ನು ಅಭ್ಯಾಸಮಾಡಬೇಕು.

# ೪೧. ಭಗವದ್ಭಾವನೆಯಿಂದ ಜ್ಞಾನ ೭-(೮-೯)

(೨೭.೭.೪೭)

ಧ್ಯಾನದಿಂದ ಭಗವತ್ತತ್ತ್ವಜ್ಞಾನವು ಹೇಗಾಗುವದು, ಆ ಜ್ಞಾನದ ಫಲವೇನು ?- ಎಂಬುದನ್ನು ತಿಳಿಸುವದಕ್ಕೆ ಶ್ರೀಕೃಷ್ಣಭಗವಂತನು ಹೊರಟಿರುತ್ತಾನೆ. ಭಗವಂತನಿಗೆ ಪರಪ್ರಕೃತಿ, ಅಪರಪ್ರಕೃತಿ-ಎಂಬ ಎರಡು ಪ್ರಕೃತಿಗಳಿರುತ್ತವೆ. ಪರಪ್ರಕೃತಿಯು ಚೇತನಕ್ಕೆ ಕಾರಣವಾದದ್ದು, ಅಪರಪ್ರಕೃತಿಯು ಅಚೇತನಕ್ಕೆ ಕಾರಣವಾದದ್ದು. ಚೇತನಾಚೇತನರೂಪವಾದದ್ದೆಲ್ಲವೂ ಪರಮಾತ್ಮನ ಕಾರ್ಯವೇ. ಪರಮಾತ್ಮನು ರತ್ನಗಳನ್ನು ಪೋಣಿಸಿರುವ ದಾರದಂತೆ ಎಲ್ಲದರಲ್ಲಿಯೂ ವ್ಯಾಪಿಸಿಕೊಂಡಿರುತ್ತಾನೆ.

ಈ ತತ್ತ್ವವನ್ನು ನೇರಾಗಿ ಚಿಂತಿಸಿ ಮನಗಾಣಲಾರದವರು ಈ ಭಾವನೆಯನ್ನಾದರೂ ಮಾಡಬೇಕು. ಜ್ಞಾನಪ್ರಕರಣದಲ್ಲಿ ಭಾವನೆಯು ಬಂದರೂ ಜ್ಞಾನವೇ ಮುಖ್ಯವಾಗಿರುತ್ತದೆ. ನಾನು ಅಪ್ಪಿನಲ್ಲಿ ರಸವಾಗಿರುತ್ತೇನೆ, ಚಂದ್ರಸೂರ್ಯರಲ್ಲಿ ಬೆಳಕಾಗಿರುತ್ತೇನೆ; ಆದ್ದರಿಂದ ಹಾಗೆಂದೇ ಭಾವಿಸು-ಎಂದು ಇಲ್ಲಿ ಹೇಳಿರುವ ಭಾವನೋಪದೇಶಗಳಿಗೆ ಅರ್ಥ.

ಪರಮಾತ್ಮನು ಎಲ್ಲಕ್ಕೂ ರಸವು, ರುಚಿಯು; ಇದನ್ನು ತಿಳಿಸುವದಕ್ಕೆ ಒಂದು ದೃಷ್ಟಾಂತವನ್ನು ಕೊಡಬಹುದು. ಸಂಗೀತಕಚೇರಿಯು ನಡೆದಿರುವಾಗ ಸಭಿಕರೆಲ್ಲರೂ ಸಂಗೀತವನ್ನೇ ತಿಳಿದವರಾಗಿರಬಹುದು; ಆದರೆ ಅವರ ಮನಸ್ಸು ಬೇರೆಯ ಸುಖದುಃಖಗಳಲ್ಲಿ ವ್ಯಾಪೃತವಾಗಿದ್ದರೆ ಹಾಡಿಕೆಯು ಎಲ್ಲರಿಗೂ ಸಮಾನವಾಗಿದ್ದರೂ ಅದರ ಸವಿಯನ್ನು ಎಲ್ಲರೂ ಒಂದೇ ಸಮನಾಗಿ ಅನುಭವಿಸಲಾರರು. ಇದರಂತೆ ಜನರ ಅಂತಃಕರಣಗಳು ಬೇರೆಬೇರೆಯ ಅಂತಸ್ತುಗಳಲ್ಲಿರುವದರಿಂದ ತಮಗೆ ಸಿಕ್ಕುವ ಭೋಗಗಳಿಂದ ಆನಂದವನ್ನು ಅನುಭವಿಸುವದು ಎಲ್ಲರಿಂದಲೂ ಆಗುವ ಹಾಗಿಲ್ಲ. ರಜಸ್ತಮೋಗುಣಗಳ ಮಬ್ಬು ಇರುವ ಅಂತಃಕರಣಕ್ಕೆ ಪರಮಾತ್ಮನ ಆನಂದವು ದೊರೆಯಲಾರದು; ಸತ್ತ್ವಗುಣವು ಹೆಚ್ಚಾಗಿರುವವರಿಗೆ ಮಾತ್ರವೇ ಅದು ಸಾಧ್ಯವಾಗಿರುತ್ತದೆ. ಆನಂದವು ಹೊರಗಿನ ಪದಾರ್ಥಗಳಲ್ಲಿರುವದಿಲ್ಲ, ಅದು ಆತ್ಮವಸ್ತುವಿನಲ್ಲಿರುತ್ತದೆ. ಶಂಕರಾಚಾರ್ಯರು ಒಂದು ಕಡೆಯಲ್ಲಿ ಹೇಳಿರುವಂತೆ ಪುಣ್ಯದ ಫಲವಾಗಿ ಜನರು ಬಯಸಿದ ಪದಾರ್ಥಗಳು ಸಿಕ್ಕುತ್ತವೆ. ಆ ಇಷ್ಟವಸ್ತುಗಳ ದರ್ಶನದಿಂದ ಮನಸ್ಸಿನ ಅಲುಗಾಟವು ನಿಲ್ಲುತ್ತದೆ. ಆ ಮನಸ್ಸಿನಲ್ಲಿ ಕಲ್ಮಷವು ಇಲ್ಲದ್ದರಿಂದ ಆತ್ಮನ ಆನಂದರಸವೇ ಅಂತಃಕರಣದಲ್ಲಿ ತೋರಿಕೊಳ್ಳುತ್ತದೆ; ಇದರಂತೆ ದುಃಖವೆಂಬುದೂ ಪಾಪದ ಫಲವಾಗಿರುವ ರಜಸ್ತಮೋಗುಣಗಳ ಮಬ್ಬಿನಿಂದ ಅಂತಃಕರಣದಲ್ಲಿಯೇ ಉಂಟಾಗುತ್ತದೆ. ವಿರಕ್ತರಾದ ಸಾಧುಸಂನ್ಯಾಸಿಗಳು ಯಾವಾ

ಗಲೂ ಆನಂದದಿಂದಿರುವದಕ್ಕೆ ಅವರ ಪರಮಾತ್ಮಚಿಂತನೆಯೇ ಕಾರಣವು. ಮನಸ್ಸು ನಿರ್ಮಲರಾದವರು ವನದಲ್ಲಿರಲಿ, ಮನೆಯಲ್ಲಿರಲಿ-ಅವರಿಗೆ ನಿತ್ಯವೂ ಆನಂದವೇ ಇರುತ್ತದೆ, ಏಕೆಂದರೆ ಅವರ ಅಂತಃಕರಣದಲ್ಲಿ ಆನಂದರಸಘನವಾದ ಪರಮಾತ್ಮನು ಮನೆಮಾಡಿಕೊಂಡಿರುತ್ತಾನೆ. ಆದ್ದರಿಂದ ಆನಂದವು ಬೇಕೆನ್ನುವವರು ತಮ್ಮ ಅಂತಃಕರಣವನ್ನು ಶುಚಿಯಾಗಿಟ್ಟುಕೊಳ್ಳುವದನ್ನು ಮೊದಲು ಕಲಿಯಬೇಕು.

"ಚಂದ್ರಸೂರ್ಯರಲ್ಲಿರುವ ಬೆಳಕೇ ನಾನು" ಎಂದು ಭಗವಂತನು ಹೇಳಿಕೊಂಡಿರುತ್ತಾನೆ. ಚಂದ್ರಸೂರ್ಯರ ಬೆಳಕು ಯಾವದು? ಅವೆಲ್ಲವೂ ಪರಮಾತ್ಮನದೇ. ಲೋಕದಲ್ಲಿ ಕಾಣುವ ಪದಾರ್ಥಗಳನ್ನು ನಾವು ನೋಡುವಾಗಲೆಲ್ಲ ಸೂರ್ಯನ ಅಥವಾ ಚಂದ್ರನ ಬೆಳಕಿನಲ್ಲಿಯೇ ಅದನ್ನು ನೋಡುತ್ತಿರುವೆವು. ಆದರೂ ನಾವು ಬೆಳಕಿನ ಸಹಾಯದಿಂದಲೇ ವ್ಯವಹಾರಮಾಡುತ್ತಿರುವೆವೆಂಬುದನ್ನು ಮರೆತು ಬಿಟ್ಟಿರುತ್ತೇವೆ. ಸೂರ್ಯನ ಮಹಿಮೆಯನ್ನು ವೈದಿಕವಾಙ್ಮಯದಲ್ಲಿ ಬಾಯಿತುಂಬ ಹೊಗಳಿರುತ್ತದೆ. ಲೌಕಿಕದೃಷ್ಟಿಯಿಂದ ನೋಡಿದರೂ ಬೆಳಕು, ಔಷ್ಣ್ಯ ಮುಂತಾದವುಗಳನ್ನು ಮಿತವಾಗಿ, ಬೇಕಾದಷ್ಟು ಮಾತ್ರವೇ ಪರಿಣಾಮದಲ್ಲಿ ಹಿತವಾಗುವಂತೆ ಸೂರ್ಯನು ಕೊಡುವದ ರಿಂದಲೇ ನಾವುಗಳು ಬದುಕಿರುತ್ತೇವೆ. ಪೈರುಪಚ್ಚೆಗಳು ರಸವತ್ತಾಗಿ ಪಾಕವಾಗುತ್ತಿರುವವು. ಶಾಸ್ತ್ರದೃಷ್ಟಿಯಿಂದ ನೋಡಿದರಂತೂ ಅಲ್ಲಿ ಸಾಕ್ಷಾತ್ ಹಿರಣ್ಯಗರ್ಭನೇ ಒಳಗೆ ವಾಸವಾಗಿರುತ್ತಾನೆ. ಆದರೂ ನಮಗೆ ನಿತ್ಯವೂ ಗೋಚರವಾಗುತ್ತಿರುವದರಿಂದ ಸೂರ್ಯಚಂದ್ರರೆಂದರೆ ನಮಗೆ ಅಸಡ್ಡೆಯಾಗಿಬಿಟ್ಟಿದೆ. ಸೂರ್ಯಚಂದ್ರರನ್ನು ಪರ ಮಾತ್ಮನ ಮೂರ್ತಿಯೆಂದು ನಾವು ತಿಳಿಯದಿರಲು ಕಾರಣವೇನು? ನಮ್ಮ ಅಂತಃ ಕರಣದಲ್ಲಿ ಈಗ ವಿವೇಕಸೂರ್ಯನು ಅಸ್ತನಾಗಿರುತ್ತಾನೆ. ಅದನ್ನು ಸರಿಪಡಿಸಿಕೊಂಡರೆ ಚಂದ್ರಸೂರ್ಯರ ಬೆಳಕೆಂಬುದು ಪರಮಾತ್ಮನ ಪ್ರಭೆಯೇ ಎಂದು ನಮಗೆ ಮನದಟ್ಟಾಗಿಬಿಡುತ್ತದೆ.

ಈಗ ಪರಮಾತ್ಮನ ಮತ್ತೊಂದು ವಿಭೂತಿಯನ್ನು ಕುರಿತು ವಿಚಾರಿಸೋಣ. "ಸರ್ವವೇದಗಳಲ್ಲಿ ನಾನು ಪ್ರಣವವಾಗಿರುತ್ತೇನೆ" ಎಂದು ಆತನು ಹೇಳಿರುತ್ತಾನೆ. ಇದು ಬಹು ದೊಡ್ಡ ವಿಷಯ. ವೇದದ ಆದಿಯಲ್ಲಿಯೂ ಅಂತ್ಯದಲ್ಲಿಯೂ ಓಂಕಾರವಿರುತ್ತದೆ; ಓಂಕಾರವೆಂಬ ಸಂಪುಟದಲ್ಲಿ ವೇದವೆಲ್ಲವೂ ಅಡಗಿರುತ್ತದೆ. ವೇದದ ಸಾರವೆಲ್ಲವೂ ಓಂಕಾರವಾಗಿರುತ್ತದೆ. ಬ್ಯಾಂಕಿನಲ್ಲಿರುವ ಹಣದಲ್ಲಿ ಎಷ್ಟು ಬೇಕಾದರೂ ಚೆಕ್ಕುಬರೆದು ತರಿಸಿಕೊಳ್ಳಬಹುದಾಗಿರುವಂತೆ ವೇದದಲ್ಲಿ ಎಷ್ಟು ಭಾಗದ ಅರ್ಥವನ್ನಾದರೂ, ನಮ್ಮನಮ್ಮ ಯೋಗ್ಯತೆಗೆ ಅನುಗುಣವಾಗಿ, ನಾವು ಓಂಕಾರದಲ್ಲಿ ಕಾಣಬಹುದು. ವೇದಗಳನ್ನು ಕೂಡ ಸಂನ್ಯಾಸಮಾಡುವ ಯತಿಗಳು ಓಂಕಾರವನ್ನು ಜಪಿಸುತ್ತಿರುತ್ತಾರೆ! ಮಂತ್ರೋಪದೇಶವನ್ನು ಮಾಡುವವರು

ಓಂಕಾರಪೂರ್ವಕವಾಗಿ ಬೇರೆಬೇರೆಯ ಮಂತ್ರಗಳನ್ನು ಉಪದೇಶಿಸುತ್ತಾರೆ; ಕಾರಣ ವೇನೆಂದರೆ ಆಯಾ ಮಂತ್ರದ ಸಾರವು ಓಂಕಾರದಲ್ಲಿಯೇ ಅಡಗಿರುತ್ತದೆ. ಅಥವಾ ಓಂಕಾರವೇ ಅವರಿಗೆ ಅವರ ಮಂತ್ರರೂಪದಲ್ಲಿ ಅನುಭವಕ್ಕೆ ಬರುತ್ತಿರುವದು ಎಂದು ಹೇಳಬಹುದು. ಈಗ ವೇದಾಧ್ಯಯನವನ್ನು ಮಾಡುವದೇ ಕಡಿಮೆಯಾಗಿ ಬಿಟ್ಟಿರುವದರಿಂದ ವೇದವೆಲ್ಲವೂ ಓಂಕಾರದಲ್ಲಿದೆ ಎಂಬ ವಾಕ್ಯಕ್ಕೆ ನಮಗೆ ಸರಿಯಾಗಿ ಅರ್ಥವಾಗುವಂತಿಲ್ಲ. ಆದರೆ ವೇದವೆಂದರೆ ವಿಶ್ವವನ್ನೇ ತಿಳಿಸುವ ತಿಳಿವಳಿಕೆ; ಆದ್ದರಿಂದ ಓಂಕಾರದಲ್ಲಿ ವಿಶ್ವವೇ ಅಡಗಿರುತ್ತದೆ ಎಂದು ನಾವುಗಳು ಚಿಂತಿಸಬೇಕು. ಓಂಕಾರವು ಪರಮಹಂಸರ ಧನವು; ಅವರಿಗೇ ಓಂಕಾರವನ್ನು ಅನುಸಂಧಾನಮಾಡುವ ಅಧಿಕಾರವಿದೆ ಎಂದು ಶಾಸ್ತ್ರಗಳು ಹೇಳುವವು. ಇದರ ಗುಟ್ಟನ್ನು ಅರಿಯದವರು, "ನಮಗೇಕೆ ಓಂಕಾರದ ಹಕ್ಕಿಲ್ಲ? ನಾವೂ ಓಂಕಾರವನ್ನು ಜಪಿಸಿದರೇನಾಗುತ್ತದೆ?" ಎಂದು ಆಕ್ಷೇಪಿಸುವರು. ಇಲ್ಲಿ ಹಕ್ಕಿನ ವಿವಾದವೇನೂ ಇಲ್ಲ. ಯಾರು ಓಂಕಾರದ ಪರಮಾರ್ಥವನ್ನು ಅರಿತು ಆನಂದಿಸಬಲ್ಲರೋ, ಅಂಥ ವೇದಾಧಿಕಾರಿಗಳು ಮಾತ್ರ ಓಂಕಾರವನ್ನು ಜಪಿಸುವದು ಫಲದಾಯಕವಾಗುವದು. ಆದರೆ ಯಾರಿಗೆ ಈ ಯೋಗ್ಯತೆ ಇಲ್ಲವೋ ಅವರು, 'ರಾಮ' 'ಕೃಷ್ಣ' ಮುಂತಾದ ನಾಮಗಳನ್ನು ಜಪಿಸಿ ಆ ನಾಮಗಳನ್ನೇ ಓಂಕಾರದ ಸ್ಥಾನದಲ್ಲಿಟ್ಟು ಗೌರವಿಸಿ ಕೃತಾರ್ಥರಾಗಬೇಕು.

ಭಗವಂತನು "ಆಕಾಶದಲ್ಲಿರುವ ಶಬ್ದವು ನಾನು" ಎಂದು ಹೇಳಿರುವದನ್ನು ಈಗ ಮನದಂದುಕೊಳ್ಳೋಣ. ಶಬ್ದವು ಅವ್ಯಕ್ತವೆಂದೂ ಉದ್ಭೂತವೆಂದೂ ಎರಡು ಬಗೆಯಾಗಿರುತ್ತದೆ. ಉದ್ಭೂತವಾದ ಶಬ್ದವು ಆಕಾಶದ ಗುಣವಾಗಿ ತೋರಿದರೂ ಅವ್ಯಕ್ತವಾದ ಶಬ್ದವು ಪರಮಾತ್ಮನಿಗಿಂತ ಅನ್ಯವೆಂದಾಗಲಿ ಅನನ್ಯವೆಂದಾಗಲಿ- ತಿಳಿಯುವದಕ್ಕೆ ಬಾರದೆ ಇರುತ್ತದೆ; ನಿಜವಾಗಿ ಅದು ಪರಮಾತ್ಮನೇ ಆಗಿರುತ್ತದೆ. ಪರಮಾತ್ಮನೇ ಸೃಷ್ಟಿಯ ಆದಿಯಲ್ಲಿ ಶಬ್ದದ ರೂಪವಾಗಿ ತೋರಿಕೊಳ್ಳುವನೆಂದು ಶಬ್ದಬ್ರಹ್ಮವಾದಿಗಳು ಹೇಳುವರು. ಆದ್ದರಿಂದ ಆಕಾಶವು ಸರ್ವಗತವಾಗಿರುವಲ್ಲಿ ಭಗವಂತನು ಅದರಲ್ಲಿ ಶಬ್ದರೂಪದಿಂದ ಅನುಗತನಾಗಿರುತ್ತಾನೆ ಎಂದು ಅನುಸಂಧಾನ ಮಾಡುವ ಅಭ್ಯಾಸವನ್ನು ಮಾಡಬೇಕು. ಹೀಗೆಯೇ ಮನುಷ್ಯನಲ್ಲಿ ಕಾಣುವ ಪೌರುಷವು, ಎಂದರೆ ಪುರುಷಭಾವವು ಭಗವಂತನೆಂದು ಭಾವಿಸಬೇಕು. ಪುರುಷರು ಮಾತ್ರ ಭಗವಂತನ ವಿಭೂತಿ, ಸ್ತ್ರೀಯರಲ್ಲ-ಎಂದೇನೂ ಅಭಿಪ್ರಾಯವಲ್ಲ. ಪುರುಷತ್ವವು ಯಾವ ಧೈರ್ಯಾದಿಸುಗುಣಗಳಿಗೆ ಸೂಚಕವಾಗಿರುವದೋ ಆ ಸುಗುಣಗಳು ಪರಮಾತ್ಮನ ವಿಭೂತಿ ಎಂದು ಅಭಿಪ್ರಾಯ. "ಪೃಥ್ವಿಯಲ್ಲಿರುವ ಪುಣ್ಯಗಂಧವು ನಾನು" ಎಂಬ ವಾಕ್ಯದ ಕಡೆಗೆ ಈಗ ಕಣ್ಣು ಹೊರಳಿಸೋಣ. ಇಲ್ಲಿ ಸುಗಂಧವು

ಮಾತ್ರ ಭಗವಂತನೆಂದದ್ದರಿಂದ ಪೃಥ್ವಿಯಲ್ಲಿರುವ ದುರ್ಗಂಧವು ಭಗವಂತನಿಂದಲ್ಲದಿದ್ದರೆ ಮತ್ತೆಲ್ಲಿಂದ ಬರುವದು? ಎಂಬ ಶಂಕೆಯು ಹುಟ್ಟುವದು. ಅದಕ್ಕೆ ಉತ್ತರವನ್ನು ಶಂಕರಾಚಾರ್ಯರು ಹೇಳಿರುವದು ಹೇಗೆಂದರೆ, ಪೃಥ್ವಿಯಲ್ಲಿ ಪುಣ್ಯಗಂಧವು ಸ್ವಭಾವದಿಂದಲೇ ಇದ್ದುಕೊಂಡಿರುತ್ತದೆ; ಆದರೆ ಅದರಲ್ಲಿರುವ ಕೆಟ್ಟವಾಸನೆ ಎಂಬುದು ಅವಿದ್ಯೆ, ಅಧರ್ಮ-ಮುಂತಾದವುಗಳಿಂದ ಮತ್ತೊಂದು ಬೇರೆಯ ಭೂತದ ಸಂಬಂಧ ದಿಂದ ಆಗಿರುತ್ತದೆ. ಊರಿನ ಚರಂಡಿಗಳಲ್ಲಿ ದುರ್ಗಂಧವು ಬರುವದನ್ನು ಅಲ್ಲಲ್ಲಿ ನಾವು ನೋಡಿರುತ್ತೇವೆ. ಅಲ್ಲಿ ಚರಂಡಿಗಳೆಂದರೆ ರಸ್ತೆಯ ಎರಡು ಪಕ್ಕಗಳಲ್ಲಿ ಸುಮ್ಮನೆ ತೋಡಿರುವ ಮಣ್ಣಿನ ಕಾಲುವೆಗಳಾಗಿರುತ್ತವೆ; ಅವುಗಳಲ್ಲಿ ಜನರು ಬಗೆಬಗೆಯ ನೀರನ್ನು ಚೆಲ್ಲುತ್ತಿರುತ್ತಾರೆ. ಆಗ ಭೂಮಿಯಲ್ಲಿ ನಾತವು ಎದ್ದುಕೊಳ್ಳುತ್ತದೆ, ಕೊಚ್ಚೆಯಾಗುತ್ತದೆ. ಅದನ್ನು ತೆಗೆದುಹಾಕಿದಂತೆಲ್ಲ ಆ ಚರಂಡಿಗಳು ಇನ್ನಷ್ಟು ಆಳವಾಗಿ ಇನ್ನಷ್ಟು ಕೊಚ್ಚೆಯ ನಾತವನ್ನು ಎಬ್ಬಿಸುತ್ತಾ ಸೊಳ್ಳೆಗಳಿಗೆ ಅವಕಾಶವನ್ನು ಕಲ್ಪಿಸಿರುತ್ತವೆ. ನಲ್ಲಿಯ ನೀರನ್ನು ಚರಂಡಿಯಲ್ಲಿ ಹರಿಯಬಿಟ್ಟು ಪುಣ್ಯಗಂಧವುಳ್ಳ ಮಣ್ಣನ್ನು ದುರ್ಗಂಧವಾಗಿ ಮಾಡಿ ಜನರ ಆರೋಗ್ಯವನ್ನು ಕೆಡಿಸುವ ಅವಕಾಶವನ್ನು ಕಲ್ಪಿಸುವ ಪಾಪವು ತಮ್ಮದೆಂಬುದನ್ನು ಅನೇಕ ಮುನಿಸಿಪಾಲಿಟಿಯವರು ಮನಸ್ಸಿಗೆ ಹಚ್ಚಿಕೊಳ್ಳದೆ ಇರುತ್ತಾರೆ. ಪೃಥ್ವಿಯಲ್ಲಿ ಪುಣ್ಯಗಂಧವಿರುವಂತೆ ಅಪ್ಪಿನಲ್ಲಿ ಪುಣ್ಯರಸ ವಿರುತ್ತದೆ, ತೇಜಸ್ಸಿನಲ್ಲಿ ಪುಣ್ಯರೂಪವಿರುತ್ತದೆ, ವಾಯುವಿನಲ್ಲಿ ಪುಣ್ಯಸ್ಪರ್ಶವಿರುತ್ತದೆ, ಆಕಾಶದಲ್ಲಿ ಪುಣ್ಯಶಬ್ದವಿರುತ್ತದೆ. ಅವೆಲ್ಲವೂ ಭಗವಂತನೆಂದೇ ತಿಳಿದು ಆರಾಧಿಸಬೇಕು. ಯಾರು ಈ ಪಂಚಭೂತಗಳನ್ನು ಕೆಡಿಸುವರೋ ಅವರು ಭಗವಂತನಿಗೇ ಅಪಚಾರ ಮಾಡಿದಂತಾಗುವದು. ಇಡಿಯ ಜಗತ್ತೇ ಭಗವಂತನಿರುವ ದೇವಾಲಯವು; ಆದ್ದರಿಂದ ನಾವು ಎಲ್ಲೆಲ್ಲಿಯೂ ಆತನ ಸಾನ್ನಿಧ್ಯಕ್ಕೆ ತಕ್ಕ ಗೌರವವನ್ನು ತೋರಿಸಬೇಕು ಎಂಬುದು ಇದರಿಂದ ಏರ್ಪಡುತ್ತದೆ.

"ಸಮಸ್ತಭೂತಗಳಲ್ಲಿರುವ ಜೀವನವು ನಾನು" ಎಂದು ಭಗವಂತನು ಹೇಳಿರುವದರ ಅಭಿಪ್ರಾಯವೇನು? ಯಾವ ಪ್ರಾಣಿಯ ಜೀವನಕ್ಕೆ ಧಕ್ಕೆಯನ್ನು ತಂದರೂ ಪರಮೇಶ್ವರನಿಗೆ ಅಪಚಾರವಾಗಿರುತ್ತದೆ. ಹಿಂದೆ ಪಶ್ಚಿಮದೇಶದ ಬೇರೆಬೇರೆಯ ರಾಷ್ಟ್ರಗಳು ಪ್ರಜೆಗಳ ನೆಮ್ಮದಿಗೂ ಸ್ವಾತಂತ್ರ್ಯಕ್ಕೂ ಅನುಕೂಲ ಪಡಿಸುವದಕ್ಕಾಗಿ ತಾವು ಯುದ್ಧವನ್ನು ಹೂಡಿರುವದಾಗಿ ಜಂಭವನ್ನು ಕೊಚ್ಚಿಕೊಂಡವು. ಆದರೆ ಅವರು ಮಾಡಿದ ಕೃತ್ಯಗಳು ಯಾವವು? ಜಮೀನುಗಳನ್ನು ಸುಟ್ಟು ಪೈರು ಪಚ್ಚೆಯನ್ನು ಹಾಳುಮಾಡಿದರು, ಕೆರೆಕಟ್ಟೆಗಳನ್ನು ಒಡೆದುಹಾಕಿದರು, ಊರಿನಲ್ಲಿ ನಿರಾಯುಧರಾದ ನಿರಪರಾಧಿಗಳಾದ ಜನರ ಮೇಲೆ ಬಾಂಬುಗಳನ್ನು ಮಳೆಗರೆದರು, ಮನೆಮಠಗಳನ್ನೂ ಸುಂದರವಾದ ಭವನಗಳನ್ನೂ ಕೆಡವಿ ನೆಲಸಮಮಾಡಿದರು!

ಜನರಿಗೆ ಆನಂದವಾಗಿರುವದಕ್ಕೆ ದುಡ್ಡಲ್ಲ, ಬೇಕಾದದ್ದು; ಶರೀರ, ಇಂದ್ರಿಯ, ಪ್ರಾಣ-ಇವು ಬೇಕು. ಆದರೆ ಅವುಗಳಲ್ಲಿ ಅಸಡ್ಡೆ ತೋರಿ, ಪ್ರಾಣಿಗಳನ್ನು ಹೊಡಿ, ಬಡಿ, ಕಡಿ, ಕೊಚ್ಚು, ಕೊಲ್ಲು-ಎಂದು ಮನುಷ್ಯರ ಬೇಟೆಯನ್ನು ಮಾಡಿದರೆ, ನಿರಪರಾಧಿಗಳಾದ ಮೂಕಪ್ರಾಣಿಗಳನ್ನು ವಿನಾಕಾರಣವಾಗಿ ಹಿಂಸಿಸಿದರೆ, ಜೀವನದ ವಿಷಯದಲ್ಲಿ ನಮಗೆ ಎಂಥ ಅಭಿಪ್ರಾಯವಿದೆ ಎನ್ನಬೇಕು! ಇದಕ್ಕೆಲ್ಲ ಮೂಲವೇನು? ಮನುಷ್ಯರಿಗೆ, ಅದರಲ್ಲಿಯೂ ಪಾಶ್ಚಾತ್ಯರಿಗೆ, ಇಂಥ ಕ್ರೌರ್ಯದಲ್ಲಿ ಪ್ರೀತಿ ಹೇಗಾಯಿತು? ಎಂದು ಯಾರಾದರೂ ಕೇಳಬಹುದು. ಅವರಿಗೆ ಯಂತ್ರಗಳ ನಿರ್ಮಾಣ, ವಿಷಯಭೋಗಗಳ ರಾಶೀಕರಣ, ಜನರನ್ನು ಮೋಸಮಾಡಿ ಹಿಂಸಿಸಿ ಹಣಗಳಿಸುವ ಹವಣಿಕೆ-ಇವುಗಳಲ್ಲಿ ಪ್ರೀತಿ ಹೆಚ್ಚಿತು. ಆ ಕಡೆಯ ಒಬ್ಬ ಕವಿಯು ಅವರ ಮನಸ್ಸಿನ ಅಂತಸ್ತಿಗೆ ತಕ್ಕ ಕವಿತೆಯನ್ನು ಬರೆದನು. "ದೇವರು ಸತ್ತಿರುವನು" ಎಂಬ ಸಂದೇಶವನ್ನು ಜನರಿಗೆ ಸಾರಿದನು. ದಯೆ, ಧರ್ಮ, ಸ್ವಾರ್ಥತ್ಯಾಗ, ಭಕ್ತಿ ಮುಂತಾದವು ಹೆಣ್ಣುಗುಣಗಳೆಂತಲೂ 'ಶೌರ್ಯ, ಧೈರ್ಯ, ರಾಷ್ಟ್ರವನ್ನು ವಿಸ್ತರಿಸುವದು, ಯುದ್ಧವನ್ನು ಮಾಡುವದು-ಮುಂತಾದವು ಗಂಡುಗುಣಗಳೆಂತಲೂ ಉಪದೇಶಿಸಿದನು. ಕಾಮದ ಹುಚ್ಚಿನಲ್ಲಿದ್ದ ಪಾಶ್ಚಾತ್ಯರು ಅದಕ್ಕೆ ಕಿವಿಗೊಟ್ಟರು. ಅದರ ಫಲವೇನು? ಈಗ ಪಾಶ್ಚಾತ್ಯರ ಪ್ರಭಾವಶಾಲಿಗಳಾದ ರಾಷ್ಟ್ರಗಳು ಒಂದರ ಹಿಂದೊಂದು ಉರುಳಿ ಬೀಳುತ್ತಿವೆ! ಅಲ್ಲಿಯ ಪಟ್ಟಣಗಳು ಸ್ಮಶಾನದಂತೆ ಕಾಣುವದಕ್ಕೆ ಮೊದಲಾಗಿವೆ! ಅವರ ಅಧಿಕಾರವು ದಿನದಿನಕ್ಕೂ ಸಂಕುಚಿತವಾಗುತ್ತಿದೆ! ಅವರು ತಾವೇ ತುಳಿದಿಟ್ಟಿದ್ದ ಜನಾಂಗಗಳನ್ನು ಆಳಲಾರದೆ, "ನಿಮಗೆ ಸ್ವಾತಂತ್ರ್ಯವನ್ನು, ಕೊಟ್ಟಿದ್ದೇವೆ" ಎಂಬ ಹೇಡಿತನದ ಹಾಡನ್ನು ಗಾನಮಾಡುವದಕ್ಕೆ ಮೊದಲುಮಾಡಿದ್ದಾರೆ! ಆದ್ದರಿಂದ ವಿವೇಕಿಗಳು ಈ ಕೊರಕಲಿಗೆ ಒಯ್ಯುವ ಸೀಳುಹಾದಿಯನ್ನು ಬಿಡಬೇಕು. ಪರಮಾತ್ಮನ ಭಕ್ತಿಯೆಂಬ ರಾಜಬೀದಿಯಲ್ಲಿ ನಡೆಯುವ ಸಂಕಲ್ಪವನ್ನು ಮಾಡಬೇಕು. ಪರಮಾತ್ಮನ ಕಲ್ಯಾಣಗುಣಗಳನ್ನು ಸುಮ್ಮನೆ ಭಾವನೆಮಾಡಿದರೂ ನಾವು ಬದುಕುವೆವು. ಇನ್ನು ಆ ಭಾವನೆಯಿಂದ ಜ್ಞಾನವೇ ಉಂಟಾದರೆ ಹೇಳಬೇಕಾದದ್ದೇ ಇಲ್ಲ. ಈ ಅಧ್ಯಾಯದ ಆದಿಯಲ್ಲಿ "ನನ್ನನ್ನು ಆಶ್ರಯಿಸಿ ಯೋಗವನ್ನು ಮಾಡುತ್ತಿದ್ದರೆ ಅಸಂಶಯವಾಗಿ ಸಮಗ್ರವಾಗಿ ನನ್ನನ್ನು ತಿಳಿಯುವೆ" ಎಂದು ಭಗವಂತನು ಹೇಳಿರುವಂತೆ ಪರಮಾತ್ಮಭಾವನೆಯಲ್ಲಿರುವವರಿಗೇ ಮುಂದೆ ತತ್ತ್ವಜ್ಞಾನವು ಹುಟ್ಟುವದು. ಸರ್ವವೂ ಪರಮಾತ್ಮನೆಂಬ ಭಾವನೆಯಿಂದ ಕಂಡುಕೊಂಡರೆ ಎಲ್ಲರಿಗೂ ಕಲ್ಯಾಣ, ಜ್ಞಾನದಿಂದ ಅರಿತುಕೊಂಡರಂತೂ ನಿತ್ಯಕಲ್ಯಾಣವಾಗುವದು! ಅಂಥ ಜ್ಞಾನಿಗಳೇ ಹೆಚ್ಚಲಿ!

# ೫೨. ಭಗವದ್ಭಾವನೆಯಿಂದ ಮಾಯೆಯನ್ನು ದಾಟಬಹುದು ೭-(೧೦-೧೪)

(೩.೮.೪೭)

ಭಗವಂತನು ಪರ, ಅಪರ ಎಂಬ ಎರಡು ಪ್ರಕೃತಿಗಳ ಮೂಲಕವಾಗಿ ಜಗತ್ತಿಗೆ ಕಾರಣನಾಗಿರುತ್ತಾನೆ. ತನ್ನ ಪ್ರಕೃತಿಯನ್ನು ಅಥವಾ ಮಾಯೆಯನ್ನು ವಶಗೊಳಿಸಿಕೊಂಡು ಆತನು ಎಲ್ಲವನ್ನೂ ಸೃಷ್ಟಿಸಿರುತ್ತಾನೆ. ಭಗವಂತನಿಗೆ ಮಾಯಾ ಶಕ್ತಿಯು ವಶವಾಗಿದೆ ಎಂದರೆ ಸರ್ಕಸ್ಸಿನ ಹುಲಿಯು ಹುಲಿಯನ್ನಾಡಿಸುವವನಿಗೆ ವಶವಾಗಿರುವಂತೆ ಅಲ್ಲ, ಆನೆಯು ಮಾವಟಿಗನಿಗೆ ವಶವಾಗಿರುವಂತೆ ಅಲ್ಲ. ಪರಮಾತ್ಮನೇ ಮಾಯಾಶಕ್ತಿಯಾಗಿರುತ್ತಾನೆ; ಆತನೇ ತನ್ನಲ್ಲಿರುವ ಶಕ್ತಿದ್ವಯದಿಂದ ಜಗತ್ತಿನ ರೂಪದಿಂದ ತೋರಿಕೊಳ್ಳುತ್ತಿದಾನೆ, ಆತನೇ ಎಲ್ಲಾ ಪ್ರಾಣಿಗಳಲ್ಲಿಯೂ ಇರುವ ಜೀವವಾಗಿರುತ್ತಾನೆ. ವಿಶ್ವಾಮಿತ್ರಾದಿಗಳು ತಪಃಪ್ರಭಾವದಿಂದ ತಾವೇ ಹೊಸಸೃಷ್ಟಿಯನ್ನು ಮಾಡಿದರೆಂದು ಪುರಾಣಗಳಲ್ಲಿ ವರ್ಣಿತವಾಗಿರುವದು ನಿಜ; ಆದರೆ ಅವರ ತಪಃಶಕ್ತಿಯು ಎಲ್ಲಿಂದ ಬಂತು? ತಪಸ್ವಿಗಳಲ್ಲಿರುವ ಆ ತಪಸ್ಸೂ ಪರಮಾತ್ಮನೇ. ಆದ್ದರಿಂದ ಪರಮಾತ್ಮನಿಗಿಂತ ಬೇರೆಯಾದ ಸ್ವತಂತ್ರವಾದ ಕಾರಣವು ಯಾವದೊಂದೂ ಇರುವದಿಲ್ಲ.

"ಎಲೈ ಪಾರ್ಥನೆ, ಸರ್ವಭೂತಗಳಿಗೂ ಸನಾತನವಾಗಿರುವ ಬೀಜವು ನಾನು" ಎಂಬ ಭಗವದುಕ್ತಿಗೆ ಈಗ ನಾವು ಸುಲಭವಾಗಿ ಅರ್ಥವನ್ನು ಮಾಡಿಕೊಳ್ಳ ಬಹುದಾಗಿರುತ್ತದೆ. ಯಾವ ಪ್ರಾಣಿಗಳಾಗಲಿ ಪಂಚಭೂತಗಳಲ್ಲಿ ಯಾವದೊಂದು ಭೂತವಾಗಲಿ ಹುಟ್ಟುವದಕ್ಕೆ ಕಾರಣವು ಭಗವಂತನೇ. ಕಾರ್ಯರೂಪವಾಗಿರುವ ವಸ್ತುಗಳಲ್ಲಿಯೇ ಪರಸ್ಪರಕಾರ್ಯಕಾರಣಭಾವವನ್ನು ಕಾಣುವದು ವ್ಯಾವಹಾರಿಕ ದೃಷ್ಟಿಯಿಂದ ಸರಿಯಾಗಬಹುದು; ಆದರೆ ಅದು ಪರಮಾರ್ಥವಲ್ಲ. ನಾವೆಲ್ಲರೂ ಬ್ರಹ್ಮವಂಶ್ಯರು; ಎಲ್ಲರಿಗೂ ಬ್ರಹ್ಮವೇ ಕಾರಣ, ಎಲ್ಲದಕ್ಕೂ ಬ್ರಹ್ಮವೇ ಕಾರಣ. ಶ್ರುತಿಯಲ್ಲಿ ಪರಮಾತ್ಮನಿಂದ ಒಂದೊಂದಾಗಿ ವಸ್ತುಗಳು ಕಾರ್ಯಕಾರಣಭಾವವನ್ನು ಹೊಂದಿ ಉಂಟಾಗುತ್ತಿರುವಂತೆ ಹೇಳಿದೆ; ಆಕಾಶದಿಂದ ವಾಯು, ವಾಯುವಿನಿಂದ ತೇಜಸ್ಸು, ತೇಜಸ್ಸಿನಿಂದ ಅಪ್ಪು, ಅಪ್ಪಿನಿಂದ ಪೃಥ್ವಿ-ಎಂದು ಮುಂತಾಗಿ ಕಾರ್ಯಕಾರಣ ಭಾವದ ಸರಪಳಿಯ ಕೊಂಡಿಗಳನ್ನು ಒಂದೊಂದಾಗಿ ನಮ್ಮ ಲಕ್ಷ್ಯಕ್ಕೆ ಶ್ರುತಿಯು ತಂದಿರುವದು ನಮ್ಮ ದೃಷ್ಟಿ ಸೌಕರ್ಯಕ್ಕಾಗಿ. ಆದರೆ ಪರಮಾರ್ಥವೇನೆಂದರೆ

ಇದೆಲ್ಲವನ್ನೂ ಆತನೇ ಸೃಷ್ಟಿಸಿರುವನು. ವಿಕಾಸವಾದವೆಂಬ ಆಧುನಿಕಸಿದ್ಧಾಂತದಂತೆ ಒಂದ್ಧರಿಂದ ಒಂದು ತತ್ತ್ವವು ಸೃಷ್ಟಿಯಾಗುತ್ತಾ ಬಂದಿರುತ್ತದೆ. ಆದರೆ ಕನಸಿನಲ್ಲಿ ನೋಡಿದರೂ ಅದೇ ಬಗೆಯ ವಿಕಾಸದ ಅನುಕ್ರಮವು ಇರುವಂತೆ ನಮಗೆ ತೋರುತ್ತದೆ; ಎಚ್ಚತ್ತಮಾತ್ರದಿಂದ ಒಬ್ಬ ಆತ್ಮನಲ್ಲಿಯೇ ಆಯಾ ದೃಶ್ಯಗಳು ಕಲ್ಪಿತವಾಗಿದ್ದವೆಂದೂ ಅವುಗಳಲ್ಲಿ ನಿಜವಾಗಿಲ್ಲದ ಕಾರ್ಯಕಾರಣಭಾವವು ಸ್ವಪ್ನಕಾಲಕ್ಕೆ ಭಾಸವಾಯಿತೆಂದೂ ನಿಶ್ಚಯವಾಗಿಬಿಡುತ್ತದೆ. ಅಲ್ಲವೆ? ಇದರಂತೆ ಸರಿಯಾಗಿ ನೋಡಿದರೆ ಇಡಿಯ ಜಗತ್ತೇ ನೇರಾಗಿ ಪರಮಾತ್ಮನಿಂದ ಉಂಟಾಗಿರುತ್ತದೆ ಎಂಬುದೇ ಪರಮಾರ್ಥವು. ಪರಮಾತ್ಮನೇ ಜಗತ್ತಿಗೆ ಸನಾತನವಾದ, ಆದಿಮಧ್ಯಾಂತ ರಹಿತವಾದ, ಬೀಜವು. ಕಾಲಾದಿಗಳು ಕೂಡ ಪರಮಾತ್ಮನೆಂಬ ಕಾರಣದ ಕಾರ್ಯವೇ.

"ಬುದ್ಧಿವಂತರ ಬುದ್ಧಿಯು ನಾನು", "ತೇಜಸ್ವಿಗಳ ತೇಜಸ್ಸು ನಾನು" - ಎಂಬೀ ವಿಭೂತಿಗಳನ್ನು ಹೇಳಿರುವದೂ ಜ್ಞಾನವನ್ನು ಹೊಗಳುವದಕ್ಕೇ. ಬುದ್ಧಿ ಎಂದರೆ ಅಂತಃಕರಣದಲ್ಲಿರುವ ವಿವೇಕಶಕ್ತಿಯು; ತೇಜಸ್ಸೆಂದರೆ ಪ್ರಗಲ್ಭತೆ. ಬುದ್ಧಿ, ತೇಜಸ್ಸು-ಇವು ಅಂತಃಕರಣದಲ್ಲಿ ತೋರುವ ಸಾರಪದಾರ್ಥಕ್ಕೆ ಉಪಲಕ್ಷಣವು. ಭಗವಂತನು ಆಧ್ಯಾತ್ಮಿಕ, ಆಧಿಭೌತಿಕಜಗತ್ತೆಲ್ಲಕ್ಕೂ ಸಾರವಾಗಿರುತ್ತಾನೆ ಎಂದು ಭಾವಿಸಬೇಕು.

"ಬಲವಂತರಲ್ಲಿರುವ ಕಾಮರಾಗವಿವರ್ಜಿತವಾದ ಬಲವು ನಾನು" ಎಂದು ಭಗವಂತನು ಹೇಳಿರುವದರ ಅಭಿಪ್ರಾಯವನ್ನು ಈಗ ವಿಚಾರಮಾಡೋಣ. ಕಾಮವೆಂದರೆ ಇಂಥ ವಸ್ತುಗಳು ಬೇಕೆಂದು ಹಂಬಲಿಸುವದು, ರಾಗವೆಂದರೆ ತನ್ನಲ್ಲಿರುವ ವಸ್ತುಗಳಲ್ಲಿ ನಿಂತು ರಂಗಾಗುತ್ತಿರುವದು. ಮನುಷ್ಯನಿಗೆ ತನ್ನ ಕಾರ್ಯಗಳನ್ನು ಸಾಧಿಸಿಕೊಳ್ಳುವದಕ್ಕೆ ಬಲವು ಬೇಕು; ಅಂಥ ಬಲವು ಭಗವಂತನೇ. ಆದರೆ ಆ ಬಲವು ಕಾಮರಾಗಗಳಿಂದ ರಹಿತವಾಗಿರಬೇಕು. ಸಾತ್ತ್ವಿಕರಾದವರು ದೇಹಧಾರಣೆ ಮಾಡಿಕೊಂಡಿರುವ ಮಟ್ಟಿಗೆ ವಿಷಯಗಳಲ್ಲಿ ಕಾಮರಾಗವಿಲ್ಲದ ಬಲವನ್ನು ಬಯಸು ವರು; ಆ ಬಲವೇ ಭಗವಂತನು. ಬಲವು ಪರಿಮಿತವಾಗಿರಬೇಕೆಂದೇನೂ ಇಲ್ಲಿ ಅಭಿಪ್ರಾಯವಿಲ್ಲ. ಕಾಮರಾಗಗಳಿಂದ ಮನುಷ್ಯನು ಮಾಡಬಾರದ ಕರ್ಮಗಳಿಗೂ ತನ್ನ ಬಲವನ್ನು ಉಪಯೋಗಿಸಬಹುದಷ್ಟೆ; ಅಂಥ ಬಲವು ಭಗವದ್ಭಾವನೆಗೆ ಅಡ್ಡಿಯಾಗಿರುತ್ತದೆ. ಹಾಗಿಲ್ಲದ ಸಾತ್ತ್ವಿಕಬಲವು ಭಗವದ್ಭಾವನೆಗೂ ತತ್ತ್ವಜ್ಞಾನಕ್ಕೂ ಸಹಕಾರಿಯಾಗಿರುವದರಿಂದ ಅದನ್ನು ಭಗವಂತನ ವಿಭೂತಿ ಎಂದು ತಿಳಿಯಬೇಕು.

ಇದರಂತೆ ಭೋಗಾರ್ಥವಾದ ಕಾಮವು ಭಗವದ್ಭಾವನೆಗೆ ವಿರುದ್ಧವಾಗಿರುವದರಿಂದ ಆಹಾರಪಾನಾದಿಗಳ ಕಾಮವು ಭಗವಂತನೇ ಎಂದು ಭಾವಿಸಬೇಕು.

ಒಟ್ಟಿನಲ್ಲಿ ಜಗತ್ತಿನಲ್ಲಿ ಯಾವದು ಶಿಷ್ಟರ ಹೊಗಳಿಕೆಗೆ ಪಾತ್ರವಾಗಿರುವದೋ ಅದೆಲ್ಲವೂ ಭಗವಂತನೆಂದೇ ಭಾವಿಸಬೇಕು. ಸತ್ಯವಾದದ್ದು, ಶಿವವಾದದ್ದು, ಸುಂದರವಾದದ್ದು-ಎಲ್ಲವೂ ಭಗವಂತನೇ. ಇಂಥ ಭಾವನೆಯು ಒಂದು ಬಗೆಯ ಉಪಾಸನೆ. ಅದಕ್ಕೆ ಉತ್ಕೃಷ್ಟವಾದ ಫಲವಿದೆ. ಆದರೆ ಒಳ್ಳೆಯದು ಮಾತ್ರ ಪರಮಾತ್ಮನೆಂದೂ ಮಿಕ್ಕದ್ದು ಬೇರೊಂದು ಪದಾರ್ಥವೆಂದೂ ತಿಳಿಯುವದು ತತ್ತ್ವಜ್ಞಾನವಾಗಲಾರದು. ಆದ್ದರಿಂದ ಮುಮುಕ್ಷುವಾದವನು ಸಾತ್ತ್ವಿಕವಾದ, ರಾಜಸವಾದ, ತಾಮಸವಾದ ವಸ್ತುಗಳೆಲ್ಲವೂ ಪರಮಾತ್ಮನಿಂದಲೇ ಬಂದಿರುತ್ತವೆ ಎಂಬ ಅರಿವನ್ನು ಮಾಡಿಕೊಳ್ಳುವದಕ್ಕೆ ಯತ್ನಿಸಬೇಕು. ಸತ್ತ್ವಗುಣದಿಂದ ಉಂಟಾಗಿರುವ, ಸಾತ್ತ್ವಿಕಭಾವನೆಯನ್ನು ಎಬ್ಬಿಸುವದಕ್ಕೆ ಸಹಕಾರಿಯಾಗುವ ವಸ್ತುವೇ ಸಾತ್ತ್ವಿಕಭಾವವು. ಹೀಗೆಯೇ ರಜಸ್ಸಿನಿಂದಾಗಿರುವ, ರಾಜಸಭಾವನೆಯನ್ನು ಎಬ್ಬಿಸು ವದಕ್ಕೆ ತಕ್ಕ ವಸ್ತು ರಾಜಸವು. ತಮೋಗುಣದಿಂದಾಗಿರುವ ತಾಮಸಭಾವನೆಯನ್ನು ಎಬ್ಬಿಸುವದಕ್ಕೆ ತಕ್ಕದ್ದಾಗಿರುವ ವಸ್ತು ತಾಮಸವು. ಈ ಸಾತ್ತ್ವಿಕರಾಜಸತಾಮಸ ಭಾವನೆಗಳೆಲ್ಲವೂ ಪರಮಾತ್ಮನಿಂದಲೇ ಬಂದಿರುವವು; ಇವುಗಳು ಭಗವಂತನಲ್ಲಿಯೇ ಇದ್ದುಕೊಂಡು ಆತನ ಅಧೀನವಾಗಿರುವವು; ಭಗವಂತನು ಇವುಗಳಲ್ಲಿಲ್ಲ. ಸಂಸಾರಿಗಳಾದ ಜೀವರು ಸಾತ್ತ್ವಿಕ, ರಾಜಸ, ತಾಮಸವಸ್ತುಗಳನ್ನೇ ಭಾವಿಸುತ್ತಾ ಸಾತ್ತ್ವಿಕಾದಿ ವಸ್ತುಗಳಲ್ಲಿಯೇ ತಾದಾತ್ಮ್ಯವನ್ನು ಹೊಂದಿ ಅವುಗಳಲ್ಲಿಯೇ ನಿಂತುಬಿಟ್ಟಿರುತ್ತಾರೆ. ಆದರೆ ಅವರಿಗೆಲ್ಲ ಆತ್ಮನಾಗಿರುವ ಭಗವಂತನು ಈ ಯಾವ ಗುಣಗಳಿಗೂ ವಶನಾಗದೆ ಅದರೊಳಗೇ ಇದ್ದುಕೊಂಡಿರುತ್ತಾನೆ. ಈ ತತ್ತ್ವವನ್ನು ನಾವು ಮನಸ್ಸಿಗೆ ತಂದುಕೊಂಡು ಗುಣಗಳ ಕಾರ್ಯವಾಗಿರುವ ಬಾಹ್ಯವಸ್ತುಗಳಲ್ಲಿ ನಾನೆಂಬ ಆತ್ಮ ಬುದ್ಧಿಯನ್ನು ಬಿಡಬೇಕು; ಪರಮಾತ್ಮನಲ್ಲಿಯೇ ಆತ್ಮಬುದ್ಧಿಯನ್ನು ಮಾಡುತ್ತಿರಬೇಕು. "ಎಲ್ಲರಿಗೂ ಆತ್ಮನಾಗಿರುವ ಭಗವಂತನೇ ನನ್ನ ಆತ್ಮನು" ಎಂಬ ಭಾವನೆಯನ್ನು ಬಲಗೊಳಿಸಿಕೊಳ್ಳುತ್ತಿರುವ ಸಾಧಕರಿಗೆ ಗುಣಮಯವಾದ ವಿಷಯಗಳಲ್ಲಿ ಅವುಗಳಿಗೆ ವಶರಾಗಿ ನಿಲ್ಲುವ ಕಷ್ಟವು ತಪ್ಪುತ್ತದೆ. ಈಗ ನಾವು ವಿಷಯಗಳ ಭಾವನೆಯನ್ನೇ ಹೆಚ್ಚಿಸಿಕೊಳ್ಳುತ್ತಿರುವೆವು. ಟೀಸೊಪ್ಪಿನ ಭಾವನೆಯನ್ನು ಜನರಲ್ಲಿ ಹೆಚ್ಚಿಸುವದಕ್ಕೆ ಅದನ್ನು ಬೆಳೆಯುವವರು ಮಾಡುತ್ತಿರುವ ಪ್ರಚಾರಕ್ರಮವನ್ನು ಇಲ್ಲಿ ಮನಸ್ಸಿಗೆ ತಂದುಕೊಂಡರೆ ಇದಕ್ಕೊಂದು ಉತ್ತಮವಾದ ಉದಾಹರಣೆಯು ದೊರಕುವದು. ಟೀ ಕುಡಿಯುವವರ ಚಿತ್ರವನ್ನು ಅಲ್ಲಲ್ಲಿ ಗೋಡೆಗೆ ಅಂಟಿಸುವದು, ಅದರ ಮಾತನ್ನು ಆಡಿ ಆಡಿ ಜನರಿಗೆ ಅದರಲ್ಲಿ

ಆದರವುಂಟಾಗುವಂತೆ ಮಾಡುವದು, ಯಾವ ಪ್ರತಿಫಲವನ್ನೂ ಬಯಸದೆಯೇ ಹಾಲು ಸಕ್ಕರೆಗಳನ್ನು ಕೂಡ ತಾವೇ ಹಾಕಿ ಕುಡಿಯುವದಕ್ಕೆ ಟೀ ಮಾಡಿಕೊಡುವದು- ಹೀಗೆಲ್ಲ ಅವರು ತಮ್ಮ ದೂತರ ಮೂಲಕ ಆ ವಸ್ತುವಿನ ಭಾವನೆಯನ್ನು ಜನರಲ್ಲಿ ತುಂಬುತ್ತಿರುತ್ತಾರೆ. ಅದರ ಫಲವಾಗಿ ನಾಲಗೆಯನ್ನೂ ಮನಸ್ಸನ್ನೂ ತದ್ಭಾವ ಭಾವನೆಯಿಂದ ಪರಾಧೀನಗೊಳಿಸಿಕೊಂಡ ಮಂಕರು, ಟೀ ಪಾನವಿಲ್ಲದೆ ಮತ್ತೆ ಯಾವ ನಿತ್ಯವ್ಯವಹಾರವನ್ನೂ ಮಾಡಲಾರದಂಥ ಮನೋದೌರ್ಬಲ್ಯವನ್ನು ತಂದುಕೊಂಡುಬಿಡುತ್ತಾರೆ! ಹೀಗೆಯೇ ನಾವು ಮಿಕ್ಕ ವಿಷಯಗಳ ಭಾವನೆಯ ಪರಿಣಾಮವನ್ನೂ ಅರಿತುಕೊಳ್ಳಬೇಕು.

ಸಾತ್ತ್ವಿಕರಾಜಸತಾಮಸವಸ್ತುಗಳಿಂದಾಗುವ ಈ ಪರಿಣಾಮವನ್ನೂ ಅವುಗಳ ಹಿಡಿತದಿಂದ ಪಾರಾಗುವ ಬಗೆಯನ್ನೂ ಭಗವಂತನು ಮುಂದಿನ ಎರಡು ಶ್ಲೋಕಗಳಲ್ಲಿ

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥**(೭-೧೩)
**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರಂತಿ ತೇ ॥**(೭-೧೪)

"ಈ ಇಡಿಯ ಜಗತ್ತೇ ಈ ಗುಣಮಯವಾದ ಮೂರು ಬಗೆಯ ವಸ್ತುಗಳಿಂದ ಮೋಹಿತವಾಗಿರುವದರಿಂದ ಇವುಗಳಿಗಿಂತ ಆಚೆ ಇರುವ ಅವ್ಯಕ್ತನಾದ ನನ್ನನ್ನು ಗುರುತಿಸಲಾರದೆ ಇರುವರು." ಈ ವಾಕ್ಯದ ಅಭಿಪ್ರಾಯವನ್ನು ವಿವರವಾಗಿ ತಿಳಿದುಕೊಳ್ಳಬೇಕು. ಈ ಪ್ರಪಂಚವೆಂಬುದು ತ್ರಿಗುಣಾತ್ಮಕವಾದ ವಸ್ತುಗಳ ಒಂದು ಅಂಗಡಿಯಂತೆ ಇರುತ್ತದೆ. ಇದನ್ನು ಕಂಡು ಮಕ್ಕಳಂತೆ ಮುಗ್ಧರಾದ ಜನರು "ಅದು ಬೇಕು, ಇದು ಬೇಡ" ಎಂದು ವ್ಯವಹರಿಸುತ್ತಿರುವರು. ಗುಣಮಯವಾದ ವಸ್ತುಗಳನ್ನು ಕಂಡು ತಾವುತಾವೇ ಅವುಗಳನ್ನು ಮೈಮೇಲೆ ಹಾಕಿಕೊಂಡು ಕೆಟ್ಟುಹೋಗುತ್ತಿರುವರು. ಈಗ ಕೆಲವು ವರ್ಷಗಳ ಹಿಂದೆ ಮಧುಗಿರಿಯಲ್ಲಿದ್ದಾಗ ನನಗೆ ಒಂದು ಕನಸಾಯಿತು. ಒಂದು ದೊಡ್ಡ ಗಾಡಿ; ಅದರಲ್ಲಿ ಉರಿಯುವ ಪದಾರ್ಥಗಳನ್ನು ಹಾಕಿದ್ದ ಕೊಪ್ಪರಿಗೆಯನ್ನಿಟ್ಟುಕೊಂಡು ಬೀದಿಯಮೇಲೆ ಮೆರವಣಿಗೆ ಹೊರಟಿದ್ದರು. ಜನರ ಸಂದಣಿಯು ಹೆಚ್ಚಾಗಿತ್ತು. ದೇವರ ಉತ್ಸವವನ್ನು ನೋಡುವದಕ್ಕೆ ಬರುವವರ ಹಾಗೆ ಒಂದೊಂದು ಮನೆಯವರೂ ಜನರ ಗುಂಪಿನಲ್ಲಿ ಬಂದು ಸೇರುತ್ತಿದ್ದರು. ದೇವರಿಗೆ ಹಣ್ಣುಕಾಯಿಗಳನ್ನು ಒಪ್ಪಿಸುವವರು ಬಂದು ಮಂಗಳಾರತಿಯನ್ನು

ಮಾಡಿಸಿಕೊಂಡು ಮನೆಗೆ ಹೋಗುವಂತೆ ಪ್ರತಿಯೊಂದು ಮನೆಯವರೂ ಒಂದೊಂದು ಕಟ್ಟಿಗೆಯನ್ನು ತಂದು ಬಂಡಿಯಲ್ಲಿದ್ದ ಉರಿಗೆ ತೋರಿಸಿ ಹತ್ತಿಸಿಕೊಂಡು ಆ ಕೊಳ್ಳಿಯನ್ನು ತಮ್ಮತಮ್ಮ ಮನೆಯಮೇಲಕ್ಕೆ ಎಸೆದುಕೊಳ್ಳುತ್ತಿದ್ದರು! ಈ ಕನಸಿನ ಅರ್ಥವೇನೆಂಬುದು ನನಗೆ ಆಗ ಗೊತ್ತಾಗಿರಲಿಲ್ಲ.

ಆದರೂ ಜನರು ಗುಣಮಯವಾದ ಜ್ವಾಲೆಯಲ್ಲಿ ಒಂದೊಂದು ಕೊಳ್ಳಿಯನ್ನು ಹತ್ತಿಸಿಕೊಂಡು ತಮ್ಮ ತಮ್ಮ ಮೇಲೆ ಎಸೆದುಕೊಳ್ಳುತ್ತಿರುವರೆಂಬುದು ನಿಜ. ಈ ಗುಣಮಯಪ್ರಪಂಚವು ನೋಡುವದಕ್ಕೆ ಉರಿಯಂತೆ ಬಿಸಿಯಾಗಿ ಶಾಖವನ್ನು ಬೀರುತ್ತಿರುವದಿಲ್ಲ; ಅದು ಬಹಳ ಸುಂದರವಾಗಿ ಚಿತ್ತಾಕರ್ಷಕವಾಗಿರುತ್ತದೆ. ಅದನ್ನು ಕಾಣುತ್ತಲೇ ಜನರು ಮೋಹಿತರಾಗಿಬಿಡುತ್ತಾರೆ. ಹಳ್ಳಿಗಳಲ್ಲಿ ಕೆಲವರಿಗೆ ಮೋಹಿನಿಯ ದರ್ಶನವಾಯಿತೆಂದೂ-ಮೊದಲು ಅದು ಸುಂದರವಾದ ಸ್ತ್ರೀಯ ಆಕಾರದಿಂದ ತೋರಿಕೊಂಡಿದ್ದು ಕೊನೆಗೆ ಭುಗ್ಗೆಂದು ಒಂದು ಉರಿಯಾಗಿ ಎದ್ದು ಮಾಯ ವಾಯಿತೆಂದೂ-ಅದರಿಂದ ನೋಡಿದವನಿಗೆ ಜ್ವರ ಬಂದಿರುತ್ತದೆ ಎಂದೂ ಜನರು ಆಡಿಕೊಳ್ಳುತ್ತಿರುವದುಂಟು. ಆ ಮೋಹಿನಿಯಂತೆ ಮೊದಲು ಮನಮೋಹಕವಾಗಿದ್ದು ಕೊನೆಯಲ್ಲಿ ತಾಪತ್ರಯದ ಉರಿಯಲ್ಲಿ ಕೆಡಹಿ ಕಾಯಿಸಿ ಬೇಯಿಸಿ ಕರಗಿಸುವಂತೆ ಇರುವದು, ಈ ಗುಣಮಯವಾದ ಜಗತ್ತು! ಸಂಸಾರಿಗಳಾದ ಜನರೇ ಇದನ್ನು ನೋಡಿ ಹಿರಿಹಿರಿ ಹಿಗ್ಗುತ್ತಾ ಮುಂದಕ್ಕೆ ನುಗ್ಗುವರು; ಆ ಬಳಿಕ ಅದರ ಸಂಬಂಧದಿಂದಾದ ಭೋಗದಿಂದ ಮತ್ತರಾಗುವರು; ಕೊನೆಗೆ ಅದರ ಅಗಲುವಿಕೆಯಿಂದಲೂ ಭೋಗದ ಕೆಟ್ಟ ಪರಿಣಾಮದಿಂದಲೂ ವ್ಯಥೆಪಡುತ್ತಿರುವರು! ಹೀಗೆ ವ್ಯಥೆಪಡುತ್ತಿರುವ ಒಬ್ಬರನ್ನು ನೋಡಿ ಮತ್ತೊಬ್ಬರು ಹಾಸ್ಯಮಾಡುತ್ತಿರುವರು. ಆದರೇನು? ಹಾಸ್ಯಮಾಡುವವರೂ ಈ ಗುಣಮಯವಾದ ಮೋಹಿನಿಯ ಹಿಡಿತಕ್ಕೆ ಸಿಕ್ಕಿಯೇ ಇರುವರು!

ಭಗವಂತನು ಈ ಗುಣಮಯಪ್ರಪಂಚಕ್ಕೆ ಹೊರಚ್ಚಾಗಿರುತ್ತಾನೆ. ಎಲ್ಲರಿಗೂ ಆತ್ಮನೇ ಆಗಿರುತ್ತಾನೆ. ಆದರೆ ಗುಣಗಳಲ್ಲಿ ಮುಳುಗಿರುವವರು ಅವನನ್ನು ಗುರುತಿಸುವದಕ್ಕೆ ಆಗುವ ಹಾಗೆಯೇ ಇಲ್ಲ. ಜ್ಞಾನಿಗಳಾದವರೂ ಭಗವಂತನಂತೆಯೇ ಈ ಗುಣಗಳನ್ನು ಮೀರಿರುತ್ತಾರೆ. ಆದರೆ ಅಜ್ಞಾನಿಗಳಿಗೆ ಈ ಗುಣಗಳ ತೊಡಕು ದಿನದಿನಕ್ಕೆ ಹೆಚ್ಚು ಹೆಚ್ಚು ಕಗ್ಗಂಟಾಗುತ್ತಿರುವದು. ಕೆಲವರು ಸಿಟ್ಟಿನಿಂದ ಇವನ್ನು ಬಿಟ್ಟು 'ಅಲ್ಲಿಗೆ ಹೋಗುವೆನು', 'ಇಲ್ಲಿಗೆ ಹೋಗುವೆನು' ಎಂದು ಓಡುವರು. 'ಕಾಶಿಗೆ ಹೋಗುವೆನು, ಸಂನ್ಯಾಸವನ್ನು ತೆಗೆದುಕೊಳ್ಳುವೆನು' ಎಂದವರುಂಟು. ಆದರೆ ಆಮೇಲೆ 'ಎಲ್ಲಾ ವಿಷಯಗಳನ್ನೂ ಬಿಟ್ಟು ಕೆಟ್ಟೆನಲ್ಲ!' ಎಂದು ಪಶ್ಚಾತ್ತಾಪದಿಂದ ವಿಷಯಭೋಗದ ಅಗಲುವಿಕೆಯ ದುಃಖವನ್ನು ತಾಳಲಾರದೆ ಮತ್ತೆ ಹಿಂದಿನ

ಆಶ್ರಮವನ್ನು (?) ಸ್ವೀಕರಿಸುವರು, ವಿಷಯದಲ್ಲಿ ಬೀಳುವರು! ಬಲಾತ್ಕಾರದಿಂದ ವಿಷಯಗಳನ್ನು ಬಿಡಿಸಿಕೊಂಡರೆ, ಅವುಗಳ ಹಿಡಿತದಿಂದ ಕೊಸರಿಕೊಂಡು ಓಡುವದಕ್ಕೆ ಪ್ರಯತ್ನಪಟ್ಟರೆ, ಅವುಗಳ ಸಂಬಂಧವು ತಪ್ಪುವದಕ್ಕೆ ಬದಲು ಮತ್ತಷ್ಟು ಬಿಗಿಯಾಗುವದು. ಮುಮುಕ್ಷುಗಳಾದವರು ವಿಷಯಗಳನ್ನು ದೂರವಾಗಿಸುವದರಿಂದ ಸ್ವಲ್ಪ ಪ್ರಯೋಜನ ವುಂಟು; ಆದರೆ ಬಲಾತ್ಕಾರದಿಂದ, ಸಿಟ್ಟಿನಿಂದ, ಹಠದಿಂದ ವಿಷಯಗಳನ್ನು ಬಿಟ್ಟರೆ ಯಾವ ಪ್ರಯೋಜನವೂ ಆಗಲಾರದು. ಮತ್ತೆ ಹೇಗೆ ಬಿಡಬೇಕು? ಎಂದರೆ ಭಗವಂತನು ಅವುಗಳಿಂದ ಹೊರಚ್ಚಾಗಿರುತ್ತಾನೆ, ಅವ್ಯಯನಾಗಿರುತ್ತಾನೆ. ಅವನ ಕಡೆ ಲಕ್ಷ್ಯವಾದಂತೆಲ್ಲ ನಮಗೆ ಸಹಜವಾದ ಆನಂದವು ತೋರಿಕೊಳ್ಳುವದು. ವಿಷಯಾನಂದವೂ ಒಂದು ದೃಷ್ಟಿಯಿಂದ ಆತ್ಮಾನಂದವೇ ಆಗಿರುತ್ತದೆ; ಆದರೂ ವಿಷಯವೆಂಬ ವಿಷವು ಬೆರೆತ ಆನಂದವದು. "ಭಗವಂತನು ನಮ್ಮ ಒಳಗೇ ಇರುತ್ತಾನೆ. ಹೊರಗೆ ಇರುವ ವಿಷಯಗಳನ್ನು ನೋಡು, ಒಳಗಿರುವ ನನ್ನನ್ನು ನೋಡು. ವಿಷಯಗಳಿಂದಾಗುವ ಕ್ಷಣಿಕವಾದ ಸುಖವು ಬೇಕೊ, ನನ್ನಿಂದಾಗುವ ನಿತ್ಯಾನಂದವು ಬೇಕೊ?- ಎಂದು ಕೇಳುತ್ತಿರುತ್ತಾನೆ" ಎಂದು ಒಬ್ಬ ಸಾಧುವರ್ಯರು ಹೇಳುತ್ತಿದ್ದರು. ಆದರೆ ಜನರೋ ಎಂದರೆ ವಿಷಯಗಳನ್ನೇ ನೋಡುತ್ತಿದ್ದಾರೆ; 'ಈ ವಿಷಯವು ಉತ್ತಮವಾದದ್ದು, ಅದು ಹೇಯವಾದದ್ದು' ಎಂದು ಅವುಗಳಲ್ಲಿಯೇ ವಿಂಗಡವನ್ನು ಮಾಡುತ್ತಿರುತ್ತಾರೆ. ವಿಷಯಗಳೆಲ್ಲ ವ್ಯಯ, ದುಃಖಪಡಿಸತಕ್ಕವು; ಭಗವಂತನು ಅವ್ಯಯ, ನಿತ್ಯಾನಂದಸ್ವರೂಪನು, ಇದನ್ನು ತಿಳಿದು ವಿಷಯಗಳಿಂದ ಹಿಂತಿರುಗಿ ಭಗವಂತನನ್ನೇ ನೋಡಬೇಕು. ವಿಷಯಗಳಲ್ಲಿ ಕಾಣುವದೂ ಆತ್ಮನ ಆನಂದವೇ ಸರಿ; ಆದರೆ ಆನಂದವನ್ನು ವಿಷಯಗಳ ಮೂಲಕವಾಗಿ ಏಕೆ ನೋಡಬೇಕು? ನೇರಾಗಿಯೇ ಆತ್ಮನನ್ನೇ ಕಂಡು ಆನಂದಿಸೋಣ.

'ಮೂರು ಗುಣಮಯವಾದ ಭಾವಗಳು' ಎಂದದ್ದರಿಂದ ಒಂದು, ಎರಡು, ಮೂರು-ಎಂದು ಸಂಖ್ಯೆಯನ್ನು ಎಣಿಸಿ ಹೇಳಿದೆಯೆಂದು ಭಾವಿಸಬಾರದು. ಸಾತ್ತ್ವಿಕ, ರಾಜಸ, ತಾಮಸ-ಎಂದು ವಿಷಯಗಳು ಮೂರೇ ಪಂಗಡಗಳಲ್ಲ; ಸತ್ತ್ವರಜಸ್ತಮೋ ಗುಣಗಳ ಬೆರಕೆಯಿಂದ ಒಂದೊಂದರಲ್ಲಿಯೂ ಮೂರುಸಾವಿರಕ್ಕಿಂತ ಹೆಚ್ಚು ಪ್ರಭೇದಗಳಾಗುತ್ತವೆ. ಇಡಿಯ ಬ್ರಹ್ಮಾಂಡವೇ ಗುಣಮಯವಾಗಿರುತ್ತದೆ. ಇದರಲ್ಲಿರುವ ಒಂದೊಂದು ವಸ್ತುವೂ ಗುಣಮಯವಾಗಿರುತ್ತದೆ; ಯಾವ ವಸ್ತುವಿನ ಕಡೆಗೆ ತಿರುಗಿದರೂ 'ನನ್ನನ್ನು ತೆಗೆದುಕೊ, ನನ್ನನ್ನು ತೆಗೆದುಕೊ' ಎಂದು ಮೂಢರ ಮನಸ್ಸನ್ನು ತನ್ನ ಕಡೆಗೇ ಸೆಳೆಯುತ್ತಿರುವದು. ಇದರ ಕಡೆಗೆ ಲಕ್ಷ್ಯವಿಡದೆ ನಮ್ಮೊಳಗೇ ಇರುವ ಪರಮಾತ್ಮನ ಕಡೆಗೆ ತಿರುಗಿದರೆ ಸಾಕು; ಇದೊಂದೂ ಇರುವದಿಲ್ಲ.

ಪರಮಾತ್ಮನನ್ನು ತಿಳಿದರೆ ಗುಣಗಳ ಕಾರ್ಯವಾಗಿರುವ ವಿಷಯಗಳೆಲ್ಲ ಎಲ್ಲಿಗೆ ಹೋಗುವವು? ಪರಮಾತ್ಮನು ಬೇರೆ ಒಂದು, ವಿಷಯಗಳು ಅಥವಾ ಗುಣದ ಕಾರ್ಯವು ಬೇರೆ ಒಂದು; ಹೀಗಿರುವಲ್ಲಿ ಒಂದನ್ನು ತಿಳಿದರೆ ಮತ್ತೊಂದು ಇಲ್ಲವಾಗುವದು ಹೇಗೆ?- ಎಂದು ಶಂಕೆಯುಂಟಾಗಬಹುದು, ಆದರೆ ಗುಣಮಯವಾದ ವಸ್ತುಗಳೆಂಬುದೆಲ್ಲ ಮಾಯೆ; ಮಾಯೆ ಎಂದರೆ ಯುಕ್ತಿಹೀನಪ್ರಕಾಶವು. ಯಾವದು ತೋರುತ್ತಿದ್ದರೂ ಯುಕ್ತಿಗೆ ಹೊಂದದೆ ಇರುವದೋ ಅಂಥಾ ಹುಸಿತೋರಿಕೆಗೆ ಮಾಯೆ ಎಂದು ಹೆಸರು. ಮಾಯಾವಿಯು ಹಾವುಚೇಳುಗಳನ್ನು ಮಾಡಿ ಹಾಕಿದರೆ ಎಲ್ಲರೂ ಅವು ನಿಜವಾದ ಪ್ರಾಣಿಗಳೆಂದು ಭಾವಿಸಿ ಅವಕ್ಕೆ ಅಂಜುವರು. ಆದರೆ ಮಾಯಾವಿಗೆ ಅವು ಬರಿಯ ತೋರಿಕೆ ಎಂಬುದು ಗೊತ್ತು. ಅವನು ಆ ಹಾವು ಚೇಳುಗಳನ್ನೆ ಕೈಯಲ್ಲಿ ಹಿಡಿದುಕೊಳ್ಳುವನು, ಕೊರಳಿಗೆ ಮಾಲಿಕೆಯಾಗಿ ಹಾಕಿಕೊಳ್ಳುವನು, ಜೇಬಿನಲ್ಲಿಟ್ಟುಕೊಳ್ಳುವನು! ಅದೆಲ್ಲ ಅವನ ಮಾಯೆಯಾಗಿರುವದರಿಂದ ಅವನ ವಶವಾಗಿರುತ್ತದೆ. ಅದರಂತೆ ಈ ಜಗತ್ತೆಲ್ಲವೂ ಭಗವಂತನ ಮಾಯೆಯು. "ಇದು ನನ್ನ ಮಾಯೆ" ಎಂದು ಹೇಳಿದರೂ ನಾನು ಎಂದರೆ ವಸುದೇವನ ಮಗನಾದ ಶ್ರೀಕೃಷ್ಣನೆಂಬ ವ್ಯಕ್ತಿಯು ಎಂದು ಯಾರಾದರೂ ಭಾವಿಸಿಯಾರೆಂದು 'ದೈವೀ' ಎಂದು ಹೇಳಿರುತ್ತದೆ. ದೇವನಾದ, ಎಲ್ಲವನ್ನೂ ತನ್ನ ಚಿತ್ಸ್ವರೂಪದಿಂದ ಬೆಳಗುವ ಪರಮಾತ್ಮನ ವಶದಲ್ಲಿರುವ ಮಾಯೆಯಿದು. ಮಿಕ್ಕವರಿಗೆ ಇದು ಸಂಸಾರದ ಅನರ್ಥವನ್ನುಂಟುಮಾಡುತ್ತಿದ್ದರೂ ಆ ಭಗವಂತನ ವಶದಲ್ಲಿದ್ದುಕೊಂಡು, ಆತನ ಇಚ್ಛೆಯಂತೆ ತೋರಿಕೊಳ್ಳುತ್ತಲೂ ಹಾರುತ್ತಲೂ ಇರುತ್ತದೆ. ಇದು 'ಮಾಯೆ' ಎಂದದ್ದರಿಂದಲೇ ಮೊದಲು ಇದ್ದು ಆಮೇಲೆ ಹೋಗುವದಲ್ಲ, ಎಂದು ತಿಳಿಸಿದಂತೆ ಆಯಿತು. ನಿಜವಾಗಿರುವಂತೆ ತೋರಬೇಕು, ನಿಜವಾಗಿರಬಾರದು-ಇದೇ ಮಾಯೆಯ ಲಕ್ಷಣ. ಗುಣಮಯವಾದ ಈ ಮಾಯೆಯು ಅಜ್ಞಾನಿಗಳಿಗೆ ನಿಜವಾಗಿರುವಂತೆ ತೋರುತ್ತದೆ, ಆದರೆ ಜ್ಞಾನಿಗಳ ದೃಷ್ಟಿಯಿಂದ ಅದು ಇರುವದೇ ಇಲ್ಲ.

ಈ ಮಾಯೆಯನ್ನು ಮೀರುವದು ಹೇಗೆ? ಎಂದರೆ ಇದು ಯಾರ ಮಾಯೆಯೋ ಆತನನ್ನು ಅರಿತುಕೊಳ್ಳಬೇಕು. ಜಗತ್ತೆಲ್ಲವನ್ನೂ ಸೃಷ್ಟಿಸಿರುವ ಚತುರ್ಮುಖಬ್ರಹ್ಮನುಕೂಡ ಶ್ರೀಕೃಷ್ಣನನ್ನು ಒಬ್ಬ ವ್ಯಕ್ತಿಯೆಂದು ತಿಳಿದು ಆತನ ಜೊತೆಯಲ್ಲಿದ್ದ ಗೋಪಾಲಕರು, ಗೋವಿನ ಕರುಗಳು-ಎಲ್ಲವನ್ನೂ ತನ್ನ ಮಾಯಾಶಕ್ತಿಯಿಂದ ಅಪಹರಿಸಿದೆನೆಂದು ಭಾವಿಸಿಕೊಂಡನು. ಆದರೆ ಮಾಯಾವಿಯಾದ ಭಗವಂತನು ಮತ್ತೆ ಅದೇ ಕರುಗಳನ್ನು ಅದೇ ಗೋಪಾಲಕರನ್ನು ಸೃಷ್ಟಿಸಿ ಎಲ್ಲವೂ ತಾನೇ ಆಗಿ ತೋರಿಕೊಂಡು ವ್ಯವಹಾರವನ್ನು ಸಾಗಿಸಿದನು! ಮಾಯೆಯ

ಕಡೆಗೇ ಕಣ್ಣಿಟ್ಟವರಿಗೆ ಮಾಯೆಯು ಅಗಾಧವಾದ ಸಾಗರವಾಗಿ ತೋರುವದು. ಆದರೆ ಪರಮಾತ್ಮನನ್ನೇ ಲಕ್ಷ್ಯವಿಟ್ಟು ನೋಡುವವರಿಗೆ ಯಾವ ಮಾಯೆಯೂ ಇರುವದಿಲ್ಲ. ಪರಮಾತ್ಮನೇ ಮಾಯೆಯಾಗಿ ತೋರುತ್ತಿರು ವದರಿಂದ ಪರಮಾತ್ಮನನ್ನು ಕಂಡುಕೊಂಡವರಿಗೆ ಪರಮಾತ್ಮನಿಗಿಂತ ಬೇರೆಯಾಗಿ ಯಾವ ಮಾಯೆಯೂ ಇರುವದೇ ಇಲ್ಲ. ಅಜ್ಞರಿಗೆ ತೋರುತ್ತಿರುವ ಮಾಯಾ ಪ್ರಪಂಚವೇ ಸರಿಯಾದ ದೃಷ್ಟಿಯುಳ್ಳ ಮಹಾತ್ಮರಿಗೆ ಭಗವನ್ಮಾತ್ರವಾಗಿ ತೋರುವದು.

---

## ೫೩. ಭಕ್ತರಲ್ಲಿ ಪ್ರಭೇದಗಳು ೭-(೧೫-೧೬)
## (೧೦.೮.೪೭)

ಮಾಯೆಯಿಂದ ಮೋಹಿತರಾದ ಜನರು ನನ್ನನ್ನು ಗುರುತುಹಿಡಿಯಲಾರರು ಎಂದು ಭಗವಂತನು ಹೇಳಿರುತ್ತಾನೆ. ನಾಟಕದಲ್ಲಿ ವೇಷಹಾಕಿರುವವನು ನಿಜವಾಗಿ ಯಾರು?- ಎಂದು ನೋಟಕರು ಅರಿಯದಿರುವಂತೆ ಗುಣಮಯವಾದ ಬಾಹ್ಯ ರೂಪವನ್ನು ನೋಡುತ್ತಿರುವವರಿಗೆ ಪರಮಾತ್ಮನ ನಿಜವಾದ ಒಳರೂಪವು, ಸಹಜವಾದ ರೂಪವು, ತಿಳಿಯದೆ ಇರುತ್ತದೆ. ಪಾಚಿಕಟ್ಟಿದ ನೀರಿನ ಸ್ವರೂಪವು ಮೇಲುಮೇಲೆ ನೋಡುವವರಿಗೆ ಗೊತ್ತಾಗುವದಿಲ್ಲ. ಮಾಯೆಯು ಪರಮಾತ್ಮನ ಸ್ವಚ್ಛರೂಪಕ್ಕೆ ಪಾಚಿಯಂತೆ ಮುಸುಕಿಕೊಂಡಿರುತ್ತದೆ. ಆ ಮಾಯೆಯನ್ನು ಅದು ತೋರುತ್ತಿರುವ ರೂಪದಲ್ಲಿಯೇ ನೋಡುತ್ತಿರುವವರಿಗೆ ಅದನ್ನು ದಾಟುವದು ಕಷ್ಟವಾಗಿರುತ್ತದೆ; ಆದರೆ ಅದನ್ನು ಪರಮಾತ್ಮನ ರೂಪದಿಂದ ಕಾಣಬಲ್ಲ ಮಹಾನುಭಾವರು ಅದನ್ನು ದಾಟುವರು. "ಮಾಮೇವ ಯೇ ಪ್ರಪದ್ಯನ್ತೇ" ಯಾರು ಈ ಮಾಯಿಕವಾದ ಗುಣಮಯವಾದ ವಿಷಯಗಳ ಪ್ರೀತಿಯನ್ನು ಬಿಟ್ಟು-ನನ್ನನ್ನೇ ಶರಣುಹೊಂದುವರೋ ಅಂಥವರು ಮಾತ್ರ ಈ ಮಾಯೆಯನ್ನು ದಾಟುವರು. ಮಾಯೆಯನ್ನು ದಾಟುವರೆಂದರೆ ಕಾಲುವೆಯನ್ನು ದಾಟುವಂತೆ ಅಲ್ಲ; ಮಾಯೆಯನ್ನು ವಶಗೊಳಿಸಿಕೊಳ್ಳುವರು ಎಂದರ್ಥ. ಮಾಯೆಯನ್ನು ಮಾಯಾವಶವಾದ ದೃಷ್ಟಿಯಿಂದ ನೋಡುವವರಿಗೆ ಕಾಮ, ಕ್ರೋಧ, ಭಯ, ಸಂತೋಷ, ದುಃಖ-ಮುಂತಾದವುಗಳು ಹುಟ್ಟಿಕೊಳ್ಳುವವು; ಆದರೆ ಒಳಹೊಕ್ಕು ಪರಮಾತ್ಮನ ರೂಪವಾಗಿ ಅದನ್ನು ನೋಡುವಾಗ ಅದು ಯಾವ ಅನರ್ಥವನ್ನೂ ಮಾಡಲಾರದೆ ಇರುವದು.

ಭಗವಂತನನ್ನು ಯಾರು ಶರಣುಹೋಗುವದಿಲ್ಲ? ಯಾರಿಗೆ ಈ ಮಾಯೆಯ ಉಪಟಳವು ತಪ್ಪದೆ ಆಗುವದು? ಎಂದರೆ ಭಗವಂತನು ಹೀಗೆನ್ನುತ್ತಾನೆ:

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ।**
**ಮಾಯಯಾಽಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥** (೭-೧೫)

"ಯಾರು ದುಷ್ಕೃತಿಗಳೋ, ಆ ಮೂಢರಾದ ನರಾಧಮರು ನನ್ನನ್ನು ಶರಣು ಹೊಂದುವದಿಲ್ಲ. ಅವರ ಜ್ಞಾನವನ್ನು ಮಾಯೆಯು ಅಪಹರಿಸಿರುತ್ತದೆ, ಅವರು ಆಸುರಭಾವವನ್ನು ಆಶ್ರಯಿಸಿರುತ್ತಾರೆ." ಇಲ್ಲಿ ಹೇಳಿರುವ ಗುಣವಿಚಾರವನ್ನೂ ಆಸುರಸಂಪತ್ತನ್ನೂ ಮುಂದೆ ವಿಸ್ತಾರವಾಗಿ ಹೇಳಲಾಗುತ್ತದೆ. ಭಗವದ್ಗೀತೆಯಲ್ಲಿ ಸಮಾಸವ್ಯಾಸಪದ್ಧತಿಯನ್ನು ಅನುಸರಿಸಿ ತತ್ತ್ವವನ್ನು ಬೋಧಿಸಿರುತ್ತದೆ. ಮೊದಲು ಸಾಂಖ್ಯಯೋಗ, ಕರ್ಮಯೋಗ-ಎಂಬ ಎರಡು ದೊಡ್ಡ ವಿಭಾಗಗಳನ್ನು ಮಾಡಿ ಉಪದೇಶವನ್ನು ಮುಗಿಸಿ ಮತ್ತೆ ಅವುಗಳನ್ನು ವಿಸ್ತರಿಸಿದೆ. ಇಲ್ಲಿ ಬೀಜರೂಪವಾಗಿ ಹೇಳಿರುವ ಗುಣತ್ರಯವಿಚಾರವನ್ನು ಮತ್ತೆ ಹದಿನಾಲ್ಕನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ವರ್ಣಿಸಿರುತ್ತದೆ; ಇಲ್ಲಿ ಹೇಳಿರುವ ಆಸುರಸಂಪತ್ತನ್ನು ಮತ್ತೆ ಹದಿನಾರನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳಿರುತ್ತದೆ. ಒಂದು ದೃಷ್ಟಿಯಿಂದ ನೋಡಿದರೆ ಹದಿನಾಲ್ಕು, ಹದಿನೈದು, ಹದಿನಾರು, ಹದಿನೇಳು-ಈ ಅಧ್ಯಾಯಗಳನ್ನು ಗೀತೆಯ ಪರಿಶಿಷ್ಟವೆಂದೇ ಕರೆಯಬಹುದು. ಹೀಗೆ ಒಂದು ಸಲ ಹೇಳಿದ್ದನ್ನು ಮತ್ತೊಂದು ಸಲ ವಿಸ್ತರಿಸಿ ಉಪದೇಶವನ್ನು ಬೆಳೆಯಿಸಿ ಪೂರ್ಣಗೊಳಿಸುವದು ಪುನರುಕ್ತಿಯಲ್ಲವೆ? ಎಂದು ಶಂಕಿಸಬಾರದು. ಕಠಿಣವಾದ ವಿಷಯವನ್ನು ತಿಳಿಯುವವರೆಗೂ ಬೇರೆಬೇರೆಯ ಮಾತುಗಳಿಂದ ವಿಸ್ತರಿಸುವದು ಭೂಷಣವೇ ಹೊರತು ದೂಷಣವಲ್ಲ.

ಆಸುರಭಾವ, ದೈವಭಾವ—ಎಂಬ ಎರಡು ಭಾವಗಳು ಪ್ರತಿಯೊಬ್ಬ ಮನುಷ್ಯನಲ್ಲಿಯೂ ಇರುತ್ತವೆ. ಈ ಎರಡು ಭಾವಗಳಿಗೂ ಘರ್ಷಣೆಯು ನಡೆದಿರುತ್ತದೆ. ಒಂದು ವೇಳೆಯಲ್ಲಿ ಒಂದು ಉತ್ಕಟವಾಗುತ್ತದೆ, ಮತ್ತೊಂದು ವೇಳೆಯಲ್ಲಿ ಇನ್ನೊಂದು ಪ್ರಬಲವಾಗುತ್ತದೆ. ಆಸುರಭಾವವೆಂಬುದು ಸಹಜವಾಗಿ ಎಲ್ಲರಿಗೂ ಇರುತ್ತದೆ. 'ಅಸುಷು ರಮನ್ತೇ ಇತಿ ಆಸುರಾಃ' ತಮ್ಮ ಪ್ರಾಣವನ್ನು ಹೇಗಾದರೂ, ಮಾಡಬಾರದ್ದನ್ನು ಮಾಡಿಯಾದರೂ, ಉಳಿಸಿಕೊಳ್ಳಬೇಕೆಂಬ ಬುದ್ಧಿಯೇ ಆಸುರ ಭಾವವು. ಒಂದೂರಿನಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಆತನು ತಮ್ಮ ಊರಿಗೆ ಬಂದ ಅತಿಥಿಯೊಬ್ಬನಿಗೆ ಒಂದು ಬಾಳೆಯ ಹಣ್ಣಿನ ಗೊನೆಯನ್ನು ದಾನಮಾಡಬೇಕೆಂಬ ಉದ್ದೇಶದಿಂದ ಅಟ್ಟವನ್ನು ಹತ್ತಿದನು; ಅಷ್ಟರಲ್ಲಿ 'ಈತನಿಗೆ ಒಂದು ಗೊನೆ ಏತಕ್ಕೆ? ಒಂದೆರಡು ಚಿಪ್ಪುಗಳನ್ನು ಕೊಟ್ಟರೆ ಆಗದೆ?' ಎಂಬ ಬುದ್ಧಿಯು ತಲೆದೋರಿಕೊಂಡಿತು! ಮೊದಲು ದಾನಮಾಡಬೇಕೆಂಬ ದೈವಭಾವವು ತೋರಿಕೊಂಡಿತು; ಬಳಿಕ ಅಷ್ಟೊಂದು ಕೊಡಬೇಡವೆಂದು ಆಸುರಭಾವದ ಬುದ್ಧಿಯು ಹೇಳಿತು. ಮನುಷ್ಯನಿಗೆ ತಪ್ಪು

ತಿಳಿವಳಿಕೆಯು ಸಹಜವಾಗಿರುತ್ತದೆ. ಸರಿಯಾದ ತಿಳಿವಳಿಕೆಯು ಪ್ರಮಾಣದಿಂದ ಉಂಟಾಗುತ್ತದೆ. ನಾನು ಎಂಬ ಹುಸಿಕೇಂದ್ರದಲ್ಲಿ ಅಭಿಮಾನವಿಡುವ ಆಸುರಭಾವವು ಒಂದು ಸಾರ್ವತ್ರಿಕಭ್ರಾಂತಿ; ಇದು ಎಲ್ಲರಿಗೂ ಯಾರೂ ಹೇಳಿಕೊಡದೆಯೇ ಇದ್ದು ಬಿಡುತ್ತದೆ. ಆದರೆ ಶಾಸ್ತ್ರಶ್ರವಣದಿಂದಲೂ ಗುರುಗಳ ಬೋಧೆಯಿಂದಲೂ ದೈವಭಾವವು ಉಂಟಾಗಬೇಕಾಗಿದೆ.

ಯಾರಿಗೆ ಆಸುರಭಾವವು ಪ್ರಬಲವಾಗಿರುವದೋ ಅವರು ಪೂರ್ವಜನ್ಮದಲ್ಲಿ ಮಾಡಿದ ಪಾಪದ ಫಲವಾಗಿ ಈಗ ಆ ಭಾವವು ಬಂದಿದೆ ಎಂದು ತಿಳಿಯಬೇಕು. ಇದು ಪಾಪ, ಇದು ಪುಣ್ಯ-ಎಂಬುದನ್ನು ಹೇಗೆ ನಿಶ್ಚಯಿಸಬೇಕು? ಬಹುಜನಗಳು ಮಾಡಬಾರದ್ದೆಂದು ಯಾವದನ್ನು ಒಪ್ಪುವರೋ ಅದು ಪಾಪವು, ಬಹುಜನಗಳು ಯಾವದನ್ನು ಮಾಡಬಹುದೆಂದು ಒಪ್ಪುವರೋ ಅದು ಪುಣ್ಯವು-ಎಂದು ಬಹುಮತದ ಮೇಲೆ ಪಾಪಪುಣ್ಯಗಳನ್ನು ನಿರ್ಧರಿಸುವದು ಸರಿಯಲ್ಲ. ಏಕೆಂದರೆ ಮನುಷ್ಯನ ಮನಸ್ಸು ಚಂಚಲವಾಗಿರುತ್ತದೆ; ಈಗ ಅದಕ್ಕೆ ಒಂದು ಸರಿಯಾಗಿ ಕಂಡರೆ ಇನ್ನೊಂದು ಘಳಿಗೆಗೆ ಅದು ತಪ್ಪೆಂದು ತೋರಿಬಿಡುತ್ತದೆ; ಹೀಗಿರುವಲ್ಲಿ ಜನರ ಮತದಿಂದ ಪಾಪಪುಣ್ಯಗಳನ್ನು ನಿರ್ಣಯಿಸುವದು ಹೇಗಾದೀತು? ರೋಗಿಗಳು ಎಷ್ಟುಮಂದಿ ಒಪ್ಪಿದರೆ ತಾನೆ ಜ್ವರಕ್ಕೆ ಮೊಸರನ್ನವು ಪಥ್ಯವೆನಿಸೀತು? ನಿಜವಾದ ಪಥ್ಯಾಪಥ್ಯಗಳನ್ನು ನಿರ್ಣಯಿಸುವದಕ್ಕೆ ರೋಗಿಯ ಹಿತವನ್ನು ಬಯಸುವ ಪರೋಪಕಾರಿಯಾದ ವೈದ್ಯಶಾಸ್ತ್ರಜ್ಞನೇ ಬೇಕು. ಇದರರಿತೆ ಪಾಪಪುಣ್ಯಗಳನ್ನು ನಿರ್ಣಯಿಸುವದಕ್ಕೆ ಸ್ವಾರ್ಥಪರರಾದ ಎಷ್ಟು ಮಂದಿ ಇದ್ದರೂ ಸಾಲದು; ಅದಕ್ಕೆ ಅಕಾಮಹತರಾದ ತತ್ತ್ವಶಾಸ್ತ್ರಜ್ಞರು ಬೇಕು. ಶಾಸ್ತ್ರವೇ ಪಾಪಪುಣ್ಯಗಳಿಗೆ ಮೂಲಪ್ರಮಾಣವು. ಏಕೆಂದರೆ ಶಾಸ್ತ್ರದೃಷ್ಟಿಗೆ ಯಾವ ಸ್ವಾರ್ಥವೂ ಇರುವದಿಲ್ಲ, ಅದು ಮತ್ತೊಂದು ಪ್ರಯೋಜನ ಸಂಬಂಧದಿಂದ ಎಂದಿಗೂ ದುಷ್ಟವಾಗಿರುವದಿಲ್ಲ.

ಮನುಷ್ಯರಿಗೆ ಸ್ವಾರ್ಥಬುದ್ಧಿ ಏತಕ್ಕೆ ಉಂಟಾಗಿರುವದು? ಪ್ರತಿಯೊಬ್ಬನಿಗೂ ತನ್ನಮೇಲೆಯೇ ಪ್ರೀತಿ ಏತಕ್ಕೆ ಹೆಚ್ಚಾಗಿರುವದು? ಎಕೆಂದರೆ ಅದಕ್ಕೆ ಮನಃಶ್ಶಾಸ್ತ್ರಜ್ಞರು ಇದೊಂದು ಹುಟ್ಟುಗುಣವು, ಪ್ರಾಣಿಗೆ ಸಹಜವಾಗಿರುವ ಮನಸ್ಸಿನ ಒಲವು-ಎಂದಿಷ್ಟೇ ಹೇಳುತ್ತಾರೆ. ಈ ಹುಟ್ಟುಗುಣವೆಂಬುದಕ್ಕೂ ಕಾರಣವಿದೆ ಎಂದು ವೇದಾಂತದಿಂದ ಗೊತ್ತಾಗುತ್ತದೆ. ತನ್ನ ಸ್ವರೂಪವು ಆನಂದರೂಪವಾದ ಪರಮಾತ್ಮನೇ ಆಗಿರುತ್ತದೆ; ಆದ್ದರಿಂದ ಅದರಲ್ಲಿ ಪ್ರೇಮವಿರುವದು ಸಹಜವಾಗಿರುತ್ತದೆ. ಯಾವದನ್ನು ನಾನು ಎಂದು ತಿಳಿದರೂ ಅದೇ ನಮಗೆ ಆನಂದರೂಪವೆಂಬ ಭ್ರಮೆ ಬರುತ್ತದೆ; ಅದನ್ನು ನಾವು ಪ್ರೀತಿಸುವದಕ್ಕೆ ಮೊದಲುಮಾಡಿಬಿಡುತ್ತೇವೆ. 'ಅಹಂಕಾರ'ವೆಂಬ ಹುಸಿ

ಕೇಂದ್ರದಿಂದಾಚೆಗೆ ಮನುಷ್ಯನು ಸಹಜವಾಗಿ ಹೋಗಲಾರನು. ಅಹಂಕಾರವನ್ನು ದಾಟಿ ನಿಜವಾದ ಪರಮಾತ್ಮತತ್ತ್ವವನ್ನು ಹಿಡಿಯುವದಕ್ಕೆ ಶಾಸ್ತ್ರದ ಸಹಾಯವು ಬೇಕು. ಅಲ್ಲಿಯವರೆಗೆ ಸ್ವಾರ್ಥಬುದ್ಧಿಯು ತಪ್ಪುವದಿಲ್ಲ, ಪಾಪಕರ್ಮಗಳು ತಪ್ಪುವದಿಲ್ಲ.

ಪಾಪಕರ್ಮಗಳಿಂದ ಪಾಪಬುದ್ಧಿಯೇ ಬೆಳೆಯುತ್ತದೆ. ಆದ್ದರಿಂದ ದುಷ್ಕೃತಿಗಳಾದವರು ಆಸುರಭಾವವನ್ನೇ ಅನುಸರಿಸುತ್ತಾರೆಂಬುದು ಯುಕ್ತವಾಗಿರುತ್ತದೆ. ಯಾರು ಹೀಗೆ ಪಾಪವನ್ನೇ ಮಾಡುತ್ತಿರುವರೋ ಅವರು ನರಾಧಮರು; ಅವರಿಗಿಂತ ಕೀಳಾದವರು ಮನುಷ್ಯರಲ್ಲಿರುವದಿಲ್ಲ. ಅವರ ಜ್ಞಾನವನ್ನು ಮಾಯೆಯು ಅಪಹರಿಸಿ ಬಿಡುತ್ತದೆ. ಬೇಟೆಗಾರರ ಬಲೆಗೆ ಮೃಗಗಳು ದಿಕ್ಕುಗಾಣದೆ ಓಡಿಬಂದು ಬೀಳುವಂತೆ, ತತ್ತ್ವಜ್ಞಾನದ ಬಲವಿಲ್ಲದೆ ವಿಷಯಗಳ ಆಸೆಯಿಂದ ಪಾಪವನ್ನೇ ಆಚರಿಸುತ್ತಿರುವವರಿಗೆ ಯಾವದು ಸರಿ, ಎತ್ತ ನಡೆಯಬೇಕು-ಎಂಬ ವಿವೇಕವುಂಟಾಗುವ ಸಂಭವವಿಲ್ಲ; ಅಂಥ ಮೂಢರು ಅವಶ್ಯವಾಗಿ ಗುಣಮಯವಾದ ಮಾಯಾಜಾಲಕ್ಕೆ ಸಿಕ್ಕಿಕೊಳ್ಳುತ್ತಾರೆ.

ಇಲ್ಲಿ ದುಷ್ಕರ್ಮವನ್ನು ಮಾಡಿ ಆಸುರಭಾವವನ್ನು ಹೊಂದಿರುವವರನ್ನು 'ಮೂಢರು', 'ನರಾಧಮರು', 'ಮಾಯೆಯಿಂದ ಅಪಹೃತವಾದ ಜ್ಞಾನವುಳ್ಳವರು' 'ಅವರು ಎಂದಿಗೂ ನನ್ನನ್ನು ಶರಣುಹೊಂದುವದಿಲ್ಲ'- ಎಂದು ನಿಂದಿಸಿರುವದು ನಮಗೆಲ್ಲ ಎಚ್ಚರಿಕೆಯನ್ನು ಕೊಡುವದಕ್ಕೆ. ಬುದ್ಧಿವಂತರಾದವರು ದುಷ್ಕರ್ಮಗಳನ್ನು ಬಿಡುವದಕ್ಕೆ ಯತ್ನಿಸಬೇಕು, ಮೆಲ್ಲಗೆ ಮೋಹದಿಂದ ಬಿಡುಗಡೆಯಾಗಬೇಕು. ಹಾಗಾದರೆ ಮಾಯೆಯ ಬಲೆಗೆ ಬೀಳುವದಿಲ್ಲ. ಭಗವಂತನನ್ನು ಹಿಡಿದು ಪಾರಾಗಬಹುದು-ಎಂಬುದೇ ಈ ನಿಂದೆಯ ಉದ್ದೇಶವು.

ಇದಿಷ್ಟೂ ದುಷ್ಕೃತಿಗಳ ವಿಷಯವಾಯಿತು. ಇನ್ನು ಸುಕೃತಿಗಳು ಹೇಗೆ ವರ್ತಿಸುವರು? ಎಂದು ಹೇಳಲು ಮೊದಲುಮಾಡುತ್ತಾನೆ. ಆಸುರಭಾವವನ್ನು ಬಿಡುತ್ತೇನೆಂದು ಹಠಮಾಡಿದರೆ ಆಗುವದಿಲ್ಲ; ದೈವಸಂಪತ್ತಿನವರ ವರ್ತನೆಯನ್ನು ಅನುಸರಿಸುವದೇ ಆಸುರಸಂಪತ್ತಿನ ತ್ಯಾಗಕ್ಕೆ ಉಪಾಯವು. ಇನ್ನು ಮುಂದೆ ವರ್ಣಿಸುವ ದೈವಸಂಪತ್ತಿನವರ ಪಟ್ಟಿಯಲ್ಲಿ ನಾವು ಹೇಗಾದರೂ ಮಾಡಿ ಸೇರಿಕೊಳ್ಳುವದಕ್ಕೆ ಪ್ರಯತ್ನಿಸಬೇಕು.

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥** (೭-೧೬)

ಸುಕೃತಿಗಳು ಎಂದರೆ ಈಶ್ವರನ ಆರಾಧನೆಗಾಗಿ ಕರ್ಮವನ್ನು ಮಾಡುವವರು. ಯಾವದಾದರೊಂದು ಸಂಕಟದಿಂದ ಪಾರಾಗಬೇಕೆಂದು ಪರಮೇಶ್ವರನನ್ನು ಶರಣು ಹೋಗುವ **ಆರ್ತರು**, ತತ್ತ್ವವನ್ನು ತಿಳಿಯಬೇಕೆಂದು ಭಗವಂತನನ್ನು ಮೊರೆಹೋಗುವ

**ಜಿಜ್ಞಾಸುಗಳು**, ತಮಗೆ ಇಷ್ಟವಾದ ವಸ್ತುಗಳು ದೊರಕಲೆಂದು ಭಗವಂತನನ್ನು ಬೇಡುವ **ಅರ್ಥಾರ್ಥಿಗಳು**; ಭಗವಂತನ ತತ್ತ್ವವನ್ನು ಅರಿತುಕೊಂಡು ಭಗವಂತನನ್ನೇ ಸೇವಿಸುತ್ತಿರುವ ಜ್ಞಾನಿ-ಈ ನಾಲ್ಕು ರೀತಿಯ ಜನರು ಭಗವಂತನ ಭಕ್ತರು. ಇವರೆಲ್ಲರೂ ಸುಕೃತದ ಫಲವಾಗಿ ಭಗವಂತನನ್ನು ಭಜಿಸುತ್ತಿರುವರು.

ಅಜಮಿಳನಂತೆ ಪಾಪಗಳನ್ನು ಮಾಡಿ ಕಾಲವನ್ನು ಕಳೆದರೂ ಸಂಕಟಸಮಯದಲ್ಲಿ ಭಗವಂತನ ಕಡೆಗೆ ತಿರುಗುವವರು, ಆರ್ತರು. ವಾಲ್ಮೀಕಿಯು ಬಹುಕಾಲದಿಂದ ಕಿರಾತವೃತ್ತಿಯಿಂದ ಪಾಪಿಯಾಗಿ ಕಾಲವನ್ನು ಕಳೆದು ನಾರದರ ಉಪದೇಶದಿಂದ ಘೋರವಾದ ತನ್ನ ದುಃಸ್ಥಿತಿಯನ್ನು ನೆನೆದು ಮನನೊಂದು ರಾಮಭಕ್ತಿಗೆ ಒಲಿದನು. ಕಷ್ಟಕ್ಕೆ ಸಿಕ್ಕಿದವರೆಲ್ಲರೂ ಭಗವಂತನ ಕಡೆಗೆ ತಿರುಗುತ್ತಾರೆಂಬುದು ಸುಳ್ಳು. ನಾವೂ ಸಂಕಟಬಂದ ಕಾಲಕ್ಕೆ ಭಗವಂತನನ್ನು ಮರೆಹೊಕ್ಕರಾಯಿತೆಂದು ತಿಳಿಯಬಾರದು. ಸಾಯುವ ಕಾಲಕ್ಕೆ ಭಗವಂತನ ಸ್ಮರಣೆಯನ್ನು ಮಾಡಿದರೆ ಸದ್ಗತಿಯಾಗುವದೆಂದು ಕೆಲವರ ಭಾವನೆಯಿರುತ್ತದೆ. ಇದು ನಿಜವಾದರೂ ಮರಣಸಂಕಟವನ್ನು ಅನುಭವಿಸುವಾಗ ಪರಮೇಶ್ವರನ ಧ್ಯಾನಮಾಡುತ್ತೇವೆಂಬ ಭರವಸೆಯೇನು? "ಎಲೈ ಕೃಷ್ಣನೆ, ನಿನ್ನ ಪಾದಪಂಕಜದೊಳಗೆ ನನ್ನ ಮನಸ್ಸೆಂಬ ರಾಜಹಂಸವು ಇಂದೇ ಪ್ರವೇಶಿಸಿಬಿಡಲಿ. ಪ್ರಾಣವು ಹೋಗುವ ಸಮಯದಲ್ಲಿ ಕಫ, ವಾತ, ಪಿತ್ಥ-ಮುಂತಾದ ದೋಷಗಳಿಂದ ಬಿಗಿದುಕೊಂಡಿರುವಾಗ ನಿನ್ನ ಸ್ಮರಣೆಯನ್ನಾದರೂ ನಾನು ಮಾಡುವೆನೆಂದು ಹೇಗೆ ನಂಬಲಿ?" ಎಂದು ಒಬ್ಬ ಭಕ್ತರು ಹೇಳಿರುವದು ನಿಜವಾದ ಮಾತು. ಸಂಕಟದಲ್ಲಿ, ವಿಷಾದದಲ್ಲಿ, ಮೈಯ ಅವಯವಗಳು ಸಡಿಲವಾಗುತ್ತಿರುವಾಗ, ಯಾವದಾದರೊಂದು ಅಂಜಿಕೆಯಾಗುತ್ತಿರುವಾಗ, ಭಯಂಕರವಾದ ಬೇನೆಗಳು ವ್ಯಥೆಗೊಳಿಸುತ್ತಿರುವಾಗ, 'ನಾರಾಯಣ!' ಎಂದು ಗಟ್ಟಿಯಾಗಿ ಕೂಗಿಕೊಂಡರೂ ಸಾಕು, ಎಲ್ಲಾ ಬಗೆಯ ದುಃಖಗಳೂ ಬಿಡುಗಡೆಯಾಗುವವು-ಎಂದು ಸ್ಮೃತಿವಾಕ್ಯವಿರುವದು. ಆದರೆ ಮನುಷ್ಯನಿಗೆ ಯಾವಾಗ ಇಂಥ ಸಂಕಟವಿರುವದಿಲ್ಲ? ಯಾವದಾದರೊಂದು ಆರ್ತಿಯು ನಮಗೆ ಎಲ್ಲಾ ಕಾಲದಲ್ಲಿಯೂ ಇದ್ದೇ ಇರುವದು. ಇನ್ನು ಮುಂದೆ ಇನ್ನೂ ಎಂಥೆಂಥ ಸಂಕಟಗಳು ಬರುವವೊ?- ಎಂದು ಯೋಚನೆಯನ್ನು ತಂದುಕೊಂಡು ಯಾವ ಮಹಾತ್ಮನು ಇಂದೇ ಭಗವಂತನನ್ನು ಭಜಿಸುವದಕ್ಕೆ ಮೊದಲುಮಾಡುವನೋ ಅವನೇ ಸುಕೃತಿಯು, ಅವನೇ ಧನ್ಯನು.

ಆರ್ತಭಕ್ತಿಗಿಂತ **ಅರ್ಥಾರ್ಥಿಭಕ್ತಿಯು** ಮೇಲ್ತರದ್ದು. ಸಂಕಟಬಂದಾಗ ಅಂತಃಕರಣವು ಕುಗ್ಗುವ ಸಂಭವವಿದೆ. ಆದರೆ ನಾವು ನಮಗೆ ಜೀವನಕ್ಕೆ ಏನೇನು ಬೇಕು ಎಂದು ನೋಡುವಾಗ ಉತ್ಸಾಹದಿಂದ ಅದಕ್ಕಾಗಿ ಮುನ್ನಡೆಯುತ್ತೇವೆ. ತನಗೆ

ಬೇಕಾದದ್ದೆಲ್ಲಕ್ಕೂ ಭಗವಂತನೇ ದಾತನೆಂದು ತಿಳಿಯುವವನು ಅರ್ಥಾರ್ಥಿಭಕ್ತನು. ನಾವೆಲ್ಲರೂ ಅರ್ಥಾರ್ಥಿಗಳು; ನಮಗೆಲ್ಲರಿಗೂ ಒಂದಲ್ಲದಿದ್ದರೆ ಒಂದು ಬೇಕು. ಆದರೆ ನಾವು ನಮ್ಮ ಬೇಕುಗಳನ್ನು ಪೂರ್ತಿಮಾಡಿಕೊಳ್ಳುವದಕ್ಕೆ ಯಾರು ಯಾರನ್ನೋ ಶರಣುಹೋಗುವೆವು. ಹಣಕ್ಕಾಗಿ ಸಾಹುಕಾರನನ್ನು, ದೇಹಪುಷ್ಟಿಗೆ ವೈದ್ಯನನ್ನು, ತಿಳಿವಳಿಕೆಗೆ ಉಪಾಧ್ಯಾಯನನ್ನು ಹೀಗೆ ಒಂದೊಂದು ಅರ್ಥಕ್ಕೆ ಒಬ್ಬೊಬ್ಬರನ್ನು ಕೇಳಿ ಕೊಳ್ಳುತ್ತಿರುವೆವು. ಇದೇನೂ ತಪ್ಪಲ್ಲ. ಯಾವದು ಯಾರಿಂದ ದೊರೆಯುವದೋ ಅವರಲ್ಲಿಗೇ ಹೋಗಿ ಅದಕ್ಕಾಗಿ ಪ್ರಯತ್ನಿಸುವದು ಸರಿಯೇ ಆಗಿರುತ್ತದೆ. ನಮಗೆ ನೀರುಬೇಕಾದಾಗ ನೀರಿನ ನಲ್ಲಿಯ ಬಳಿಗೆ ಹೋಗುವೆವು, ಆದರೆ ನಲ್ಲಿಯಲ್ಲಿಯೇ ಸಹಜವಾಗಿ ನೀರು ಬರುತ್ತದೆಯೆ? ಇಲ್ಲ. ಅದಕ್ಕೆ ಒಂದು ನದಿಯಿಂದಲೋ ಕೆರೆ ಯಿಂದಲೋ ನೀರನ್ನು ಎತ್ತಿ ಬಿಟ್ಟಿರುತ್ತಾರೆ. ಆದ್ದರಿಂದ ನೀರಿಗೆ ನದಿಯೇ ಮೂಲ ವೆಂದು ತಿಳಿಯಬೇಕೇ ಹೊರತು ನಲ್ಲಿಯ ಕಬ್ಬಿಣದ ಕಿವಿಯನ್ನು ಹಿಂಡಿದ ಮಾತ್ರ ದಿಂದ ನೀರು ಸುರಿಯುವದೆಂದು ತಿಳಿಯುವದು ಮೂಢತನವಾಯಿತು. ಇದರಂತೆ ಸಾಹುಕಾರರು, ವೈದ್ಯರು, ಉಪಾಧ್ಯಾಯರು ಮುಂತಾದವರಿಂದ ನಾವು ಬಯಸುವ ಹಣ ಮುಂತಾದವುಗಳು ಅವರಿಗೆ ಎಲ್ಲಿಂದ ಬರುವವು? ಇದನ್ನು ಯೋಚಿಸಬೇಕು. ನಾವು ಯಾವದನ್ನು ಬಯಸಿದರೂ ಒಂದೊಂದನ್ನು ದ್ವಾರಕಾರಣವಾಗಿ ಮಾಡಿಕೊಂಡು ಈಶ್ವರನೇ ಅದೆಲ್ಲವನ್ನೂ ಒದಗಿಸಿಕೊಡುತ್ತಾನೆಂಬುದನ್ನು ನಾವು ಯಾವಾಗಲೂ ನೆನಪಿಡಬೇಕು. ಆತನಿಂದಲೇ ನಮಗೆ ಹೊರಗಿನ ಸಾಮಗ್ರಿಗಳೇ ಏಕೆ, ನಮ್ಮ ದೇಹಾದಿಗಳು ಕೂಡ ಬಂದಿವೆ. ಇಂದಿನ ಸ್ವರಾಜ್ಯವೆಂಬುದೂ ಆತನಿಂದಲೇ ನಮಗೆ ಸಿಕ್ಕಿರುತ್ತದೆ. ಹಿಂದೆ ನಮ್ಮ ದೇಶದವರಿಗೆ ಸ್ವರಾಜ್ಯವು ಇತ್ತು. ಈಚೆಗೆ ನಮ್ಮ ಅವಿವೇಕದಿಂದ ಅದು ಹೋಯಿತು. ಈಗ ಮತ್ತೆ ಬಂದಿದೆ. ಮುಂದೇನಾಗುವದೋ ಯಾರು ಬಲ್ಲರು? ಆ ಭಗವಂತನಿಗೆ ಯಾರು ಯಾರು ಪ್ರಿಯರಾಗುವರೋ, ಯಾರುಯಾರಿಗೆ ಅನುಗ್ರಹಿಸಬೇಕೆಂಬ ಇಚ್ಛೆಯು ಅವನಿಗೆ ಬರುವದೋ, ಅವರಿಗೆ ಮಾತ್ರ ತನ್ನ ವಶದಲ್ಲಿರುವ ಧನಸಂಪತ್ತನ್ನೂ ಸುಖಶಾಂತಿಗಳನ್ನೂ ಅನುಗ್ರಹಿಸುವನು. ಇಡಿಯ ವಿಶ್ವಕ್ಕೆ ಒಡೆಯನು ಆತನೇ; ಬ್ರಹ್ಮಾದಿಸ್ತಂಬಪರ್ಯಂತವಾಗಿ ಅವರ ಕರ್ಮಕ್ಕನುಗುಣವಾಗಿ ಸುಖದುಃಖಭೋಗಗಳನ್ನು ಅನುಗ್ರಹಿಸುವಾತನು ಆತನೇ. ಹೀಗೆಂದು ಯಾವಾಗಲೂ ನೆರೆನಂಬಿ ಯಾವನು ಭಗವಂತನನ್ನೇ ಭಜಿಸುತ್ತಿರುವನೋ ಅಂಥ ಸುಕೃತಿಯು ಅರ್ಥಾರ್ಥಿಯು.

ಇನ್ನು **ಜಿಜ್ಞಾಸುಭಕ್ತನ** ವಿಷಯ. ಆರ್ತ, ಅರ್ಥಾರ್ಥಿ- ಈ ಇಬ್ಬರು ಭಕ್ತರಿಗೂ ಜಿಜ್ಞಾಸುಭಕ್ತನಿಗೂ ಸ್ವಲ್ಪ ಹೆಚ್ಚುಕಡಿಮೆ ಇದೆ. ಆರ್ತನು ತನ್ನ ಸಂಕಟವನ್ನು

ಪರಿಹರಿಸಿಕೊಳ್ಳಬೇಕು ಎಂದು ಭಗವಂತನನ್ನು ಭಜಿಸುತ್ತಾನೆ; ಅರ್ಥಾರ್ಥಿಯು ತನ್ನ ಇಷ್ಟಾರ್ಥವು ನೆರವೇರಲಿ ಎಂದು ಆತನನ್ನು ಭಜಿಸುತ್ತಾನೆ. ಅವರಿಬ್ಬರೂ ತಮ್ಮ ಬೇಕುಬೇಡಗಳಿಗೆ ಪರಮಾತ್ಮನೇ ಗತಿ ಎಂದು ನಂಬಿರುತ್ತಾರೆ. ಅವರೂ ಪುಣ್ಯಕರ್ಮದ ಫಲವಾಗಿಯೇ ಭಗವಂತನನ್ನು ಶರಣು ಹೊಕ್ಕಿರುತ್ತಾರೆ, ನಿಜ. ಆದರೆ ಜಿಜ್ಞಾಸುಭಕ್ತನು ಇನ್ನೂ ಹೆಚ್ಚಿನ ಅಂತಸ್ತಿನವನು. ಅವನಿಗೆ ಬೇಕುಬೇಡಗಳ ಗೋಜೇ ಬೇಡವೆಂದು ಅಭಿಲಾಷೆ ಇರುತ್ತದೆ; ಭಗವಂತನಿಂದ ಒಂದು ಇಷ್ಟವನ್ನು ಬೇಡಿ ಅಥವಾ ಒಂದು ಅನಿಷ್ಟವನ್ನು ಪರಿಹರಿಸಿಕೊಂಡರೆ ತಾನು ಕೃತಾರ್ಥನೆಂದು ಅವನು ಎಣಿಸಿರ್ಗುವದಿಲ್ಲ. ಕಾಳಿದಾಸನು ಕುಮಾರಸಂಭವದಲ್ಲಿ ಹಿಮವತ್ಪರ್ವತದ ವರ್ಣನೆಯಲ್ಲಿ ಸಿದ್ಧಪುರುಷರು ಮೋಡಗಳ ಮೇಲುಗಡೆ ಇರುವ ಪರ್ವತದ ಕೋಡುಗಲ್ಲುಗಳಲ್ಲಿದ್ದುಕೊಂಡು ಮಳೆಯು ಹೊಡೆತವಿಲ್ಲದೆ ಸುಖವಾಗಿರುವರು ಎಂದು ಹೇಳಿಲ್ಲವೆ? ಆ ಸಿದ್ಧರಂತೆ ಈ ಜಿಜ್ಞಾಸುಭಕ್ತರು ಬೇಕುಬೇಡಗಳೆಂಬ ಗಾಳಿಮಳೆಗಳ ಅಂಜಿಕೆಯಿಲ್ಲದ ಭಗವಂತನ ಸ್ವರೂಪವನ್ನೇ ಅರಿತು ಕೃತಾರ್ಥರಾಗಬೇಕೆಂಬ ಉನ್ನತವಾದ ಧ್ಯೇಯವುಳ್ಳವ ರಾಗಿರುವರು. ಮಹಾರಾಷ್ಟ್ರದ ಏಕನಾಥರೆಂಬ ಸಾಧುಗಳ ಜೀವನ ಚರಿತ್ರೆಯನ್ನು ತಮ್ಮಲ್ಲಿ ಕೆಲವರಾದರೂ ಕೇಳಿರಬಹುದು. ಅವರು ಯಾವಾಗಲೂ ಶ್ರೀಮನ್ನಾರಾಯಣನ ಸ್ಮರಣೆಯಲ್ಲಿಯೇ ಕಾಲವನ್ನು ಕಳೆಯುತ್ತಿದ್ದರು. ಅವರಿಗೆ ಲೋಕವ್ಯವಹಾರದ ಚಿಂತೆಯೇ ಇಲ್ಲದ್ದರಿಂಧ ಐಹಿಕದೃಷ್ಟಿಯವರ ಪಾಲಿಗೆ ಅವರು ಕಡುಬಡವ ರಾಗಿರುತ್ತಿದ್ದರು. ಒಂದು ದಿನ ಅವರು ಗೋದಾವರಿಯ ಸ್ನಾನವನ್ನು ಮಾಡಿಕೊಂಡು ಮನೆಗೆ ಬರುವ ಹೊತ್ತಿಗೆ ಎಂಟು ಜನ ದಿವ್ಯ ಸುಂದರಿಯರು ಅವರ ಕಣ್ಣಿಗೆ ಬಿದ್ದರು. “ನೀವು ಯಾರು?” ಎಂದು ಸಾಧುಗಳು ಕೇಳುತ್ತಲೂ ಅವರು “ನಾವು ಅಷ್ಟಸಿದ್ಧಿಗಳು; ಶ್ರೀಮಹಾಲಕ್ಷ್ಮಿಯ ಆಜ್ಞೆಯಂತೆ ತಮ್ಮ ದಾಸ್ಯಕ್ಕೆ ಬಂದಿರುತ್ತೇವೆ. ನಮಗೆ ಅಪ್ಪಣೆ ಯೇನು?” ಎಂದರಂತೆ. ಏಕನಾಥರು ಭಗವಂತನ ಆಶ್ರಯವೊಂದನ್ನೇ ಬಯಸುವವರು. ಆದ್ದರಿಂದ ಅವರು ಕೂಡಲೆ “ನೀವು ನನ್ನ ಅಪ್ಪಣೆಯನ್ನು ಪಾಲಿಸುವವರಾದರೆ, ಈ ಕೂಡಲೆ ಹೊರಟುಹೋಗಿಬಿಡಿ!” ಎಂದರಂತೆ! ಇಂಥ ವಿರಕ್ತರು, ಜಿಜ್ಞಾಸುಭಕ್ತರು! ಅವರಿಗೆ ಪರಮಾರ್ಥತತ್ತ್ವವನ್ನು ತಿಳಿಯುವದೊಂದೇ ಗುರಿಯಾಗಿರುತ್ತದೆ.

ಮುಂದಿನ ಉಪನ್ಯಾಸದಲ್ಲಿ ನಾಲ್ಕನೆಯವನಾದ ಜ್ಞಾನಿಭಕ್ತನ ವಿಷಯವನ್ನು ತೆಗೆದುಕೊಳ್ಳುವೆನು. ಆರ್ತ, ಅರ್ಥಾರ್ಥಿ, ಜಿಜ್ಞಾಸು, ಜ್ಞಾನಿ-ಈ ನಾಲ್ವರೂ ಭಗವಂತನನ್ನು ಭಜಿಸುವದಕ್ಕೆ ಅಧಿಕಾರಿಗಳಾದ ಸುಕೃತಿಗಳು. ದುಷ್ಕೃತಿಗಳಿಗೆ ಈ ನಾಲ್ಕರಲ್ಲಿ ಯಾವದೊಂದು ಪ್ರಕಾರವೂ ರುಚಿಸುವದಿಲ್ಲ ಎಂದು ಭಗವಂತನು ಇಲ್ಲಿ ಹೇಳಿರುತ್ತಾನೆ.

# ೫೪. ಜ್ಞಾನಿಯು ಏಕಭಕ್ತನು ೭-(೧೭-೨೦)
(೧೭.೮.೪೭)

ಜ್ಞಾನದ ವಿಷಯವು ಪ್ರಾರಂಭವಾಗಿರುತ್ತದೆ. ಸಾಮಾನ್ಯರಾದ ಜನರು ಮಾಯಾವಶರಾಗಿರುವದರಿಂದ ತತ್ತ್ವವನ್ನು ಅರಿಯರು. ಆಸುರಭಾವವನ್ನು ಆಶ್ರಯಿಸಿರುವ ದುಷ್ಕೃತಿಗಳಿಗೆ ಮಾಯೆಯನ್ನು ಜಯಿಸುವದು ಅಶಕ್ಯವಾಗಿರುತ್ತದೆ. ಆದರೆ ಯಾರು ಪರಮಾತ್ಮನೇ ತಮಗೆ ಬೇಕೆನ್ನುವರೋ ಅವರು ಮಾತ್ರ ಆತನ ತತ್ತ್ವವನ್ನು ಅರಿಯುವರು, ಆತನನ್ನೇ ಪಡೆಯುವರು. ಭಗವಂತನ ಕಡೆಗೆ ತಿರುಗುವ ಸುಕೃತಿಗಳು ನಾಲ್ಕು ವರ್ಗದವರಿರುತ್ತಾರೆ. ಆರ್ತ, ಅರ್ಥಾರ್ಥಿ, ಜಿಜ್ಞಾಸು, ಜ್ಞಾನಿ ಎಂದು ಅವರು ನಾಲ್ಕು ವರ್ಗಗಳಾಗಿ ವಿಂಗಡವಾಗಿರುತ್ತಾರೆ. ಈ ನಾಲ್ಕು ಜನರಲ್ಲಿ ಮೊದಲನೆಯ ಮೂರು ವರ್ಗದವರನ್ನು ಹಿಂದೆ ವಿವರಿಸಿದ್ದಾಗಿದೆ. ಈಗ ಜ್ಞಾನಿಯ ವಿಚಾರವನ್ನು ತಿಳಿಯಬೇಕಾಗಿದೆ.

ಜ್ಞಾನಿಯ ತತ್ತ್ವವನ್ನು ಅರಿಯುವದಕ್ಕೆ ಇಂದ್ರಿಯಗಳ ಗಡಿಬಿಡಿ ಕಡಿಮೆಯಾದರೆ ಒಳ್ಳೆಯದು. ಸಾವಧಾನವಾಗಿ ಆಲೈಸಬೇಕು. ಭಗವದ್ಭಕ್ತರಲ್ಲಿ ಆರ್ತ, ಅರ್ಥಾರ್ಥಿ-ಈ ಇಬ್ಬರಿಗಿಂತ ಜಿಜ್ಞಾಸುಭಕ್ತನು ಹೆಚ್ಚಿನ ಅಂತಸ್ತಿನವನೆಂದು ಹಿಂದೆ ತಿಳಿಸಲಾಗಿದೆ. ಆದರೆ ಜ್ಞಾನಿಯ ಅಂತಸ್ತು ಇನ್ನೂ ಮೇಲಿರುವದು.

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**

**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥**(೭-೧೭)

"ಅವರಲ್ಲಿ ಜ್ಞಾನಿಯು ನಿತ್ಯಯುಕ್ತನು, ಏಕಭಕ್ತನು; ಆದ್ದರಿಂದ ಅವರೆಲ್ಲರಿಗಿಂತ ಹೆಚ್ಚಿನವನು. ಏಕೆಂದರೆ ಜ್ಞಾನಿಗೆ ನಾನು ಅತ್ಯಂತಪ್ರಿಯನು, ಅವನೂ ನನಗೆ ಅತ್ಯಂತ ಪ್ರಿಯನು" ಭಗವಂತನೇ ಜ್ಞಾನಿಭಕ್ತನನ್ನು ಹೇಗೆ ವರ್ಣಿಸಿರುತ್ತಾನೆ, ನೋಡಿ! ಆರ್ತನು ಭಕ್ತನೇ ಸರಿ, ಅರ್ಥಾರ್ಥಿಯೂ ಭಕ್ತನೇ; ಜಿಜ್ಞಾಸುವು ಭಕ್ತನೆಂಬುದಕ್ಕೆ ಸಂಶಯವೇ ಇಲ್ಲ. ಆದರೆ ಅವರದು ಸನಿಮಿತ್ತಭಕ್ತಿ; ಜ್ಞಾನಿಯು ಅನಿಮಿತ್ತ ಭಕ್ತನಾಗಿರುತ್ತಾನೆ. ಅವರು ಗುಣಭಕ್ತರು, ಜ್ಞಾನಿಯು ಮುಖ್ಯಭಕ್ತನಾಗಿರುತ್ತಾನೆ. ಸನಿಮಿತ್ತಭಕ್ತಿಯ ತತ್ತ್ವವನ್ನು ತಿಳಿಯುವದಕ್ಕೆ ಒಂದು ಉದಾಹರಣೆಯನ್ನು ಹೇಳುವೆನು— ಒಂದು ಮನೆಯಲ್ಲಿ ಚಿಕ್ಕ ಹುಡುಗಿಯೊಬ್ಬಳೇ ಇದ್ದಳು. ಅವಳಿಗೆ ಸ್ವಲ್ಪ ಅಂಜಿಕೆ ಯಾಯಿತು. ಅನಾಥರಿಗೆ ಪರಮೇಶ್ವರನೇ ಗತಿ, ಆತನೇ ಅವರ ಯೋಗಕ್ಷೇಮವನ್ನು ನೋಡಿಕೊಳ್ಳುವನು- ಎಂದು ದೊಡ್ಡವರು ಆಡಿಕೊಳ್ಳುತ್ತಿದ್ದ ಮಾತುಗಳು ಅವಳ ಕಿವಿಗೆ ಬಿದ್ದಿದ್ದವು. ಆದ್ದರಿಂದ ಆಕೆಯು "ದೇವ, ಈಗ

ಮನೆಯಲ್ಲಿ ಯಾರೂ ಇಲ್ಲ; ನೀನೇ ನನ್ನನ್ನು ನೋಡಿಕೊಳ್ಳಬೇಕು" ಎಂದು ಮೊರೆಯಿಡುವದಕ್ಕೆ ಮೊದಲು ಮಾಡಿದಳು. ಆದರೆ ಅಷ್ಟರಲ್ಲಿ ಆ ಹುಡುಗಿಯ ಅಜ್ಜಿ ಮನೆಗೆ ಬಂದಳು. ಆಗ ಆ ಹುಡುಗಿ "ದೇವ, ನೀನೇನೂ ತೊಂದರೆ ತೆಗೆದು ಕೊಳ್ಳಬೇಕಾದದ್ದಿಲ್ಲ. ನಮ್ಮ ಅಜ್ಜಿ ಬಂದಿರುತ್ತಾಳೆ. ಅವಳೇ ನನ್ನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಾಳೆ" ಎಂದಳಂತೆ! ಆರ್ತನಿಗೆ ಆರ್ತಿಯಿಂದ, ಮತ್ತು ಅರ್ಥಾರ್ಥಿಗೆ ಒಂದಾನೊಂದು ಇಷ್ಟಾರ್ಥಕ್ಕಾಗಿ ಬಂದಿರುವ ಭಕ್ತಿಯು ಹೀಗೆ ಒಂದಾನೊಂದು ನಿಮಿತ್ತದಿಂದ ಆಗಿರುವದರಿಂದ ಅದು ತಾತ್ಕಾಲಿಕಭಕ್ತಿಯಾಗಿಯೂ ಇರಬಹುದು. ಅದು ಕೊನೆಯವರೆಗೂ ಇರುವ ಹಾಗೆಯೇ ಇಲ್ಲ.

ಆದರೆ ಜಿಜ್ಞಾಸುವಿಗೆ ಜ್ಞಾನನಿಮಿತ್ತದಿಂದ ಇರುವ ಭಕ್ತಿಯು ಜ್ಞಾನವುಂಟಾದ ಬಳಿಕ ಹೋಗಿಬಿಡುವದಿಲ್ಲ; ಅದು ಪರಮಾತ್ಮನ ಜ್ಞಾನದಿಂದ ನಿತ್ಯವಾದ ಮುಖ್ಯ ಭಕ್ತಿಯಾಗಿಬಿಡುತ್ತದೆ. ಆರ್ತಿಯು ಪರಿಹಾರವಾದರೆ ಹೋಗಿಬಿಡುವ ಆರ್ತನ ಭಕ್ತಿಯಂತೆ, ಇಷ್ಟಾರ್ಥವು ನೆರವೇರಿದರೆ ಮರೆಯಾಗಿಬಿಡುವ ಅರ್ಥಾರ್ಥಿಯ ಭಕ್ತಿಯಂತೆ, ಅದು ಹೋಗುವದಲ್ಲ. ಏಕೆಂದರೆ ಪರಮಾತ್ಮನ ಮಹತ್ತ್ವವು ನಿತ್ಯ ವಾಗಿರುತ್ತದೆ.

ಜ್ಞಾನಿಯು ಭಗವಂತನಿಗೆ ಅತ್ಯಂತ ಪ್ರಿಯನಾಗಿರುತ್ತಾನೆ. ಏಕೆಂದರೆ ಜ್ಞಾನಿಗೆ ಭಗವಂತನು ಅತ್ಯಂತ ಪ್ರಿಯನಾಗಿರುತ್ತಾನೆ. ಭಗವಂತನಿಗೆ ಎಲ್ಲರಲ್ಲಿಯೂ ಸಹಜವಾಗಿಯೇ ಪ್ರೇಮವಿರುತ್ತದೆ; ಆದರೆ ಭಕ್ತರ ಪ್ರೇಮವು ಅವನನ್ನು ಅವರ ಕಡೆಗೇ ಎಳೆದುಕೊಂಡುಬಿಡುತ್ತದೆ. ಗಜೇಂದ್ರನು ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತಿದ್ದಾಗ ಮಹಾವಿಷ್ಣುವು ಲಕ್ಷ್ಮಿಯನ್ನು ಅತ್ತ ಒತ್ತರಿಸಿ, ಗರುಡನನ್ನು ಎಳೆದು ಕರೆದುಕೊಂಡು ಹೊರಟನೆಂದೂ ತನ್ನ ಚಕ್ರವನ್ನು ಮೊದಲೇ ಹೋಗುವಂತೆ ಬಿಟ್ಟುಬಿಟ್ಟನೆಂದೂ ಹರಿಕಥೆಯವರು ವರ್ಣಿಸುವದುಂಟು. ಅಂಥ ಪ್ರೇಮವು ಭಕ್ತರಲ್ಲಿ ಭಗವಂತನಿಗೆ ಇರುತ್ತದೆ. ಆರ್ತಾದಿಭಕ್ತರೆಲ್ಲರೂ ಅವನಿಗೆ ಹೆಚ್ಚಿನವರೇ ಸರಿ. ಆದರೆ ಜ್ಞಾನಿಯಲ್ಲಿ ಅತ್ಯಂತ ಪ್ರೇಮವು ಇರುವದಕ್ಕೆ ಒಂದು ಕಾರಣವಿದೆ. ಭಗವಂತನು ತಮ್ಮ ಆತ್ಮನೇ ಎಂದು ಜ್ಞಾನಿಯು ಅರಿತಿರುತ್ತಾನೆ; ಆದ್ದರಿಂದ ಭಗವಂತನಿಗೆ ಅವನಲ್ಲಿ ಆತ್ಮ ಬುದ್ಧಿಯಿರುತ್ತದೆ. ಉಳಿದ ಭಕ್ತರು ತದೀಯರು, ಭಗವಂತನವರು; ಆದರೆ ಜ್ಞಾನಿಯು ಭಗವಂತನ ಆತ್ಮವೇ. ಅವನು ಭಗವಂತನೇ ಅನುತ್ತಮಗತಿಯೆಂಬುದನ್ನು ಬಲ್ಲನು. ಉಳಿದ ಭಕ್ತರು ತಮ್ಮ ಉಪಾಸನೆಯ ಬಲದಿಂದ ಕಾಲಾಂತರದಲ್ಲಿ ಲೋಕವಿಶೇಷದಲ್ಲಿ ಭಗವಂತನ ಸಾಯುಜ್ಯವನ್ನು ಪಡೆಯಬೇಕಾಗಿರುತ್ತದೆ. ಆದರೆ ಜ್ಞಾನಿಯು ಹಾಗಲ್ಲ. ನಿತ್ಯಪ್ರಾಪ್ತವಾದ ಪರಮಾತ್ಮನಸ್ವರೂಪವನ್ನು ಜ್ಞಾನದಿಂದ

ಅರಿತುಕೊಂಡು ಪರಮಾತ್ಮನಲ್ಲಿ ನಿಲ್ಲುವದೇ ಅತ್ಯಂತ ಶ್ರೇಷ್ಠವಾದ ಗತಿ ಎಂಬುದನ್ನು ಅವನೊಬ್ಬನೇ ಬಲ್ಲನು; ಆದ್ದರಿಂದ ಜ್ಞಾನಿಯೇ ನನ್ನ ಆತ್ಮನು, ಎಂದು ಭಗವಂತನು ಹೇಳಿರುತ್ತಾನೆ. ಜ್ಞಾನಿಯು ನಿತ್ಯಯುಕ್ತನು; ಅವನ ಚಿತ್ತವು ಎಂದೆಂದಿಗೂ ಭಗವಂತನಲ್ಲಿ ಸಮಾಹಿತವಾಗಿರುತ್ತದೆ; ಆ ಚಿತ್ತಸಮಾಧಿಗೆ ಏರಿಳಿತಗಳೇ ಇರುವದಿಲ್ಲ. ಜ್ಞಾನಿಯು ಏಕಭಕ್ತನು, ಎಂದರೆ ಮುಖ್ಯಭಕ್ತನು; ಉಳಿದ ಭಕ್ತರಂತೆ ಗೌಣಭಕ್ತನಲ್ಲ. ಚಿತ್ರವನ್ನು ನೋಡಿ 'ಬೆಕ್ಕು ಹಾಲನ್ನು ಕುಡಿಯುತ್ತದೆ' ಎನ್ನುವಾಗ ಬೆಕ್ಕು ಹಾಲನ್ನು ಕುಡಿಯುವ ಹಾಗೆ ಭಾವವನ್ನುಂಟುಮಾಡುವ ಚಿತ್ರವೆಂದು ನಮ್ಮ ಅಭಿಪ್ರಾಯ. ಆದರೆ ನಿಜವಾಗಿ ಬೆಕ್ಕು ಹಾಲು ಕುಡಿಯುವಾಗ ನಮಗೆ ಆಗುವ ಭಾವವೇ ಬೇರೆ. ಅಲ್ಲಿ ಹಾಲೂ ಮುಖ್ಯ, ಬೆಕ್ಕೂ ಮುಖ್ಯ, ಹಾಲು ಕುಡಿಯುವದೂ ಮುಖ್ಯವೇ, ಗೌಣವಲ್ಲ. ಜ್ಞಾನಿಯು ಭಗವಂತನಿಗೆ ಅತ್ಯಂತ ಪ್ರಿಯನಾಗಿರುತ್ತಾನೆ, ಏಕೆಂದರೆ ಆತನ ಆತ್ಮನೇ ಆಗಿರುತ್ತಾನೆ; ಆದ್ದರಿಂದ ಅವನ ಪ್ರೇಮವು ಎಲ್ಲಾ ಬಗೆಯಿಂದಲೂ ಮುಖ್ಯಭಕ್ತಿ ಯಾಗಿರುತ್ತದೆ, ಅದು ಸುಮ್ಮನೆ ಉಪಚಾರಕ್ಕೆ ಭಕ್ತಿ ಎನ್ನಿಸಿಕೊಳ್ಳುವದಿಲ್ಲ.

ಆರ್ತಾದಿಭಕ್ತರನ್ನು ಭಗವಂತನ ಪರಿವಾರದವರಂತೆ ಕಾಣಬೇಕು. ಅವರನ್ನು ಗೌರವದಿಂದಲೂ ಪ್ರೇಮದಿಂದಲೂ ಆದರಿಸುವದು ಭಗವಂತನ ಪ್ರಸಾದಕ್ಕೆ ಕಾರಣವಾಗುತ್ತದೆ. ಆದರೆ ಜ್ಞಾನಿಯ ವಿಷಯದಲ್ಲಿ ಅಷ್ಟೇ ಅಲ್ಲ. ಅವನು ಭಗವಂತನ ಸ್ವರೂಪವೇ ಎಂದರಿಯಬೇಕು.

**ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ (೭-೧೯)**

ನಮಗೆ ಭಗವಂತನು ಬೇಕು, ಭಗವಂತನೇ ಬೇಕು-ಎನ್ನುವವರು ಭಕ್ತರು. ಭಗವಂತನು ನಮ್ಮೆಲ್ಲರ ಆತ್ಮನೇ; ಆತನಿಗೂ ನನಗೂ ಯಾವ ಭೇದವೂ ಇಲ್ಲ ಎನ್ನುವ ಅರಿವು ಜ್ಞಾನಿಯದು. ಇಂಥ ಜ್ಞಾನವು ಎಷ್ಟೋ ಜನ್ಮಗಳಲ್ಲಿ ಮಾಡಿದ ಪುಣ್ಯಕರ್ಮದ ಫಲವು. ಬಹುದೀರ್ಘಕಾಲ ಬಹಳ ಆದರದಿಂದ ಮಾಡಿದ ಶ್ರವಣಮನನ ನಿದಿಧ್ಯಾಸನಗಳ ಫಲವಾಗಿ "ವಾಸುದೇವನೇ ಸರ್ವವು" ಎಂಬ ಜ್ಞಾನವುಂಟಾಗಿ ಇಂಥ ಮುಖ್ಯಭಕ್ತಿಯು ದೊರಕುವದು. ವಾಸುದೇವನೆಂಬುದು ಸಂಕೇತನಾಮವಲ್ಲ; ವಸುದೇವನ ಮಗನೆಂಬ ಅರ್ಥದಲ್ಲಿಯೂ ಇಲ್ಲಿ ಪ್ರಯುಕ್ತವಾಗಿರುವದಿಲ್ಲ, ಎಲ್ಲೆಲ್ಲಿಯೂ ಎಲ್ಲರ ಆತ್ಮನಾಗಿರುವಾತನೇ ವಾಸುದೇವನು; ಯಾವನಲ್ಲಿ ಎಲ್ಲಾ ಭೂತಗಳೂ ವಾಸಮಾಡುತ್ತಿರುವವೋ ಆತನೇ ವಾಸುದೇವನು. ವಾಸುದೇವನಿಗಿಂತ ಬೇರೆಯಾಗಿ ಯಾವದೊಂದೂ ಇರುವದಿಲ್ಲ; ಆತನೇ ಎಲ್ಲವೂ-ಎಂಬ ಜ್ಞಾನವು ಬಂದು ಅನನ್ಯ

ಭಕ್ತಿಯಿಂದ ನಿಂತವನು ಮಹಾತ್ಮನು; ಮಿಕ್ಕವರೆಲ್ಲರೂ ಕ್ಷುದ್ರಾತ್ಮರು, ಅಲ್ಪಾತ್ಮರು. ನನಗೆ ಅದು ಬೇಕು, ಇದು ಬೇಕು-ಎನ್ನುವವರು ಸಿಕ್ಕುತ್ತಾರೆ; ಆದರೆ ಪರಮಾತ್ಮನೇ ಬೇಕು ಎಂದು ಚಡಪಡಿಸುವವರು ಎಷ್ಟು ಮಂದಿ ಸಿಕ್ಕುತ್ತಾರೆ? ಒಬ್ಬ ಶಿಷ್ಯನು ನೀರಿನಲ್ಲಿ ಮುಳುಗಿದಾಗ ನೀರಿನಿಂದ ಮೇಲಕ್ಕೇಳುವದಕ್ಕೆ ಒದ್ದಾಡುತ್ತಿದ್ದನಂತೆ. ಗುರುವು ಅವನನ್ನು ಮೇಲಕ್ಕೆತ್ತಿ "ನಿನಗೆ ನೀರಿನಲ್ಲಿ ಮುಳುಗಿದ್ದಾಗ ಏನು ಬೇಕಾಗಿತ್ತು?" ಎಂದು ಕೇಳಿದನಂತೆ. "ಉಸಿರಿಗಾಗಿ ಒದ್ದಾಡುತ್ತಿದ್ದೆ; ಆಗ ನನಗೆ ಉಸಿರು ಕಟ್ಟಿಹೋಗಿತ್ತು" ಎಂದು ಶಿಷ್ಯನು ಉತ್ತರವನ್ನು ಕೊಡಲು "ಸರಿ, ಪರಮಾತ್ಮನಿಗಾಗಿ ಹೀಗೆಯೇ ಒದ್ದಾಡುವ ಮನಸ್ಸು ನಿನಗೆ ಯಾವಾಗ ಬರುವದೋ ಆಗ ಭಕ್ತಿಯ ಉತ್ಕಟವಾಯಿತು; ಆಗ ಆತನು ನಿನಗೆ ಸಿಕ್ಕುತ್ತಾನೆ" ಎಂದು ಗುರು ಹೇಳಿದನಂತೆ! ಹೀಗೆ ಪರಮಾತ್ಮನ ಪ್ರೇಮಕ್ಕಾಗಿ, ಆತನ ಪ್ರಾಪ್ತಿಗಾಗಿ, ಹಾತುವರಿಯುತ್ತಿರುವವರು ಮುಮುಕ್ಷುಗಳೆನಿಸುವರು. ಮುಮುಕ್ಷುಗಳಿಗೇ ಇಂಥ ಬೆಲೆ ಇರುವಾಗ ನಿಜವಾದ ಮುಕ್ತಜ್ಞಾನಿಗಳ ಹೆಚ್ಚುಗಾರಿಕೆಯನ್ನು ಹೇಳತಕ್ಕದ್ದೇನಿದೆ? "ಎಲ್ಲೆಲ್ಲಿಯೂ ತುಂಬಿರುವ ಪರಮಾತ್ಮನೇ ಸರ್ವವು, ಆತನೇ ನನ್ನ ಆತ್ಮನು" ಎಂದು ತಿಳಿಯುವ ಮಹಾತ್ಮರು ಎಲ್ಲಿ ಸಿಕ್ಕುವರು?

ವಾಸುದೇವಭಗವಂತನೇ ಸರ್ವವು-ಎಂಬ ಜ್ಞಾನವು ಸಿಕ್ಕುವದು ಬಹು ಕಷ್ಟ. ಏಕೆಂದರೆ ಮನುಷ್ಯರಿಗೆ ಕಾಮಗಳು ಅನಂತವಾಗಿರುವವು. ಇಂಥಿಂಥ ಕಾಮಗಳು ಇಂಥಿಂಥ ದೇವತೆಯ ಆರಾಧನೆಯಿಂದ ಪೂರ್ಣವಾಗುವವು ಎಂದು ಶಾಸ್ತ್ರದಲ್ಲಿ ಹೇಳಿರುತ್ತದೆ. ಯಾರಿಗೆ ಬಗೆಬಗೆಯ ಕಾಮಗಳು ಗಂಟುಬಿದ್ದಿರುವವೋ ಅವರು ತತ್ತ್ವಜ್ಞಾನಕ್ಕೆ ಎಂದಿಗೂ ಅಧಿಕಾರಿಗಳಲ್ಲ. ಏಕೆಂದರೆ ತತ್ತ್ವವನ್ನು ವಿಚಾರಿಸುವದಕ್ಕೆ ವಿಕ್ಷೇಪವಿಲ್ಲದ, ಏಕಾಗ್ರವಾದ ಚಿತ್ತವು ಬೇಕು; ಆದರೆ ಕಾಮಗಳು ತಮ್ಮ ತಮ್ಮ ಕಡೆಗೆ ಕಾಮಿಗಳ ಚಿತ್ತವನ್ನು ಜಗ್ಗುತ್ತಾ ವಿಕ್ಷೇಪವನ್ನುಂಟುಮಾಡುತ್ತಲೇ ಇರುವವು. ಆದ್ದರಿಂದ ಅವರು ಒಂದೊಂದು ಸಣ್ಣರೋಗಕ್ಕೂ ಒಂದೊಂದು ಔಷಧಿಯನ್ನು ಹುಡುಕುವ ಅಲ್ಪರ ಹಾಗೆ ಆಯಾ ಕಾಮವನ್ನು ಪೂರ್ತಿಗೊಳ್ಳಿಸುವದಕ್ಕಾಗಿ ಆಯಾ ದೇವತೆಗಳನ್ನು ಪೂಜಿಸುತ್ತಾರೆ. ಕಾಮಿಗಳಿಗೆ ತಮ್ಮ ಇಷ್ಟಾರ್ಥವನ್ನು ನೆರವೇರಿಸುವ ಇಂದ್ರಾದಿದೇವತೆಗಳ ಅನುಗ್ರಹವು ಬೇಕಾಗಿರುತ್ತದೆ. ಈ ಕಾಮಾವಿಷ್ಟವಾಗಿರುವ ಪ್ರಕೃತಿಗೆ ವಶರಾಗಿ ಅವರು ಆಯಾ ನಿಯಮಗಳನ್ನು ಇಟ್ಟುಕೊಂಡು ಆಯಾ ದೇವತೆಯ ಭಕ್ತರಾಗುವರು. ಪೂಜ್ಯಪೂಜಕಭಾವದಿಂದ "ಈ ದೇವತೆಯು ನನಗಿಂತ ಬೇರೆ, ನನಗಿಂತ ಉತ್ಕೃಷ್ಟವಾದದ್ದು, ನಿಗ್ರಹಾನುಗ್ರಹಸಾಮರ್ಥ್ಯವುಳ್ಳದ್ದು" ಎಂದು ದೇವತಾರಾಧನೆಗೆ ಮನಸ್ಸನ್ನು ಮಾಡುವವರು ಅನ್ಯದೇವತಾಭಕ್ತರೆನಿಸುವರು. ಅಂಥವರು ಮಾಡುವ ಪೂಜೆಯು

ಕೆಟ್ಟದ್ದೇನೂ ಅಲ್ಲ; ಅವರು ಮಾಡುವ ಪೂಜೆಯಿಂದ ಅವರಿಗೆ ಫಲವಾಗುವಂತೆ, ಆಯಾ ಆರಾಧನೆಯಲ್ಲಿ ಅವರಿಗೆ ಶ್ರದ್ಧೆಯುಂಟಾಗುವಂತೆಯೇ ಭಗವಂತನು ಅನುಗ್ರಹಿಸುತ್ತಾನೆ. ಆ ಶ್ರದ್ಧೆಯಿಂದ ಅವರು ಪೂಜೆಯನ್ನು ಮಾಡಿ, ಆ ಭಗವಂತನ ನಿಯಮದಂತೆಯೇ ಆಯಾ ದೇವತೆಯಿಂದ ಆಯಾ ಫಲವನ್ನು ಪಡೆದೇ ಪಡೆಯುತ್ತಾರೆ. ಆದರೂ ಆ ಫಲವು ವಾಸುದೇವಪರಮಾತ್ಮನ ಭಕ್ತಿಗೆ ದೊರಕುವ ಫಲಕ್ಕೆ ಹೋಲಿಸಿದರೆ ಕ್ಷಣಿಕವಾದದ್ದು. ಅಲ್ಪಬುದ್ಧಿಯುಳ್ಳವರಿಗೆ ಅದೇ ಹೆಚ್ಚಿನದೆಂದು ತೋರಬಹುದು. ಆದರೆ ಅಷ್ಟೇ ಆಯಾಸದಿಂದಲೇ ಭಗವಂತನನ್ನೇ ಭಜಿಸಬಹುದು. ವಾಸುದೇವನೇ ಸರ್ವವು ಎಂಬ ಜ್ಞಾನವನ್ನು ಪಡೆದು ಅನಂತವಾದ ಅಮೃತತ್ವವನ್ನೇ ಪಡೆದುಕೊಳ್ಳಬಹುದು. ಕಾಮಗಳಿಂದ ದೇವತೆಗಳನ್ನು ಆರಾಧನೆಮಾಡಿ ಕಾಮಗಳನ್ನು ಹೊಂದಬಹುದು; ಅಥವಾ ಆಯಾ ದೇವತೆಯಲ್ಲಿ ಹೆಚ್ಚಿನ ಭಕ್ತಿಯಿಂದ ಆಯಾ ದೇವತೆಯ ಸಾಯುಜ್ಯವನ್ನು ಹೊಂದಬಹುದು. ಹಾಗೆಯೇ ನಿಷ್ಕಾಮನಾಗಿ ಪರಮಾತ್ಮನನ್ನೇ ಭಜಿಸಿ ಜ್ಞಾನಿಯಾಗಿ ಪರಮಾತ್ಮನನ್ನೇ ಸೇರಿಕೊಂಡು ಆನಂದಿಸ ಬಹುದು. ಆದರೆ ಹೀಗೆ ಭಗವಂತನೇ ತನಗೆ ಬೇಕೆಂದು ಹವಣಿಸುವ ಮುಮುಕ್ಷುಗಳು ಮಾತ್ರ ವಿರಳರಾಗಿರುತ್ತಾರೆ. ಎರಡಕ್ಕೂ ಆಯಾಸವೇನೂ ಹೆಚ್ಚುಕಡಿಮೆಯಿಲ್ಲ. ಆದರೂ ಅಲ್ಪಜ್ಞರಾದವರು ನನ್ನನ್ನು ಭಜಿಸದೆ ದೇವತೆಗಳನ್ನು ಭಜಿಸಿ ಅಲ್ಪಫಲದಿಂದ ತೃಪ್ತರಾಗುವರಲ್ಲ! ಎಂದು ಭಗವಂತನು ಕನಿಕರವನ್ನು ತೋರಿಸುತ್ತಿದ್ದಾನೆ.

## ೫೫. ಜನರು ಭಗವಂತನನ್ನೇ ಏತಕ್ಕೆ ಭಜಿಸುವದಿಲ್ಲ? ೭-(೨೦-೨೫)

### (೪-೮-೪೭)

ಜ್ಞಾನದ ವಿಷಯವಾಗಿ ಭಗವಂತನು ಹೇಳುತ್ತಿದ್ದಾನೆ. "ವಾಸುದೇವಃ ಸರ್ವಮಿತಿ" ವಾಸುದೇವನೇ ಎಲ್ಲವೂ ಎಂದು ತಿಳಿಯುವವನು ಮಹಾತ್ಮನು, ಅಂಥವನು ಸಿಕ್ಕುವದು ಕಷ್ಟ ಎಂದು ಭಗವಂತನು ಹೇಳಿರುತ್ತಾನಷ್ಟೆ. ವಾಸುದೇವನೇ ಸರ್ವವು ಎಂಬುದನ್ನು ಎರಡುದೃಷ್ಟಿಯಿಂದ ಹೇಳಬಹುದು; ವಾಸುದೇವನು ಸರ್ವಕ್ಕೂ ಕಾರಣನು, ವಾಸುದೇವನನ್ನು ಬಿಟ್ಟು ಯಾವದೂ ಇರುವದಿಲ್ಲ ಎಂಬುದು ಒಂದು ತಿಳಿವಳಿಕೆಯು; ವಾಸುದೇವನೇ ಎಲ್ಲಾ ದೇವತೆಗಳೂ ಆಗಿರುತ್ತಾನೆ- ಎಂಬುದು ಇನ್ನೊಂದು ತಿಳಿವಳಿಕೆ. ಈ ಎರಡನೆಯ ತಿಳಿವಳಿಕೆಯನ್ನು ಸ್ವಲ್ಪ ಬಿಡಿಸಿ

ತಿಳಿದುಕೊಳ್ಳತಕ್ಕದ್ದಿದೆ. ಪರಮಾತ್ಮನು ಸರ್ವದೇವತಾಮಯನಾಗಿರುತ್ತಾನಾದರೂ ಪರಿಚ್ಛಿನ್ನಾಭಿಮಾನಿಗಳಾದ ದೇವತೆಗಳಲ್ಲಿ ಒಂದೊಂದೂ ಬಿಡಿಬಿಡಿಯಾಗಿ ಪರಮಾತ್ಮನಲ್ಲ. ಒಬ್ಬೊಬ್ಬ ದೇವತೆಗೂ ಪರಿಚ್ಛಿನ್ನವಾದ ಶರೀರವಿದೆ, ಒಂದೊಂದು ಗೊತ್ತಾದ ಲೋಕವಿದೆ, ಒಂದೊಂದು ಗೊತ್ತಾದ ವ್ಯಾಪಾರವಿದೆ. ಈ ದೇವತೆಗಳ ವಿಚಾರವು ಹಿಂದಿನ ಅಧ್ಯಾಯಗಳಲ್ಲಿ ಅಲ್ಲಲ್ಲಿ ಇಷ್ಟಿಷ್ಟು ಬಂದಿರುತ್ತದೆ. ಉದಾಹರಣೆಗೆ ಮೂರನೆಯ ಅಧ್ಯಾಯದಲ್ಲಿ "ಈ ಯಜ್ಞದಿಂದ ದೇವತೆಗಳನ್ನು ತೃಪ್ತಿಗೊಳಿಸಿ" (೩-೧೧) ಎಂಬ ಪ್ರಜಾಪತಿವಾಕ್ಯದಲ್ಲಿ ದೇವತೆಗಳಿಗೆ ಯಜ್ಞದ ಮೂಲಕವಾಗಿ ಆಹಾರವು ದೊರೆಯುವದೆಂದು ಹೇಳಿದೆ; ಐದನೆಯ ಅಧ್ಯಾಯದ ಕೊನೆಯಲ್ಲಿ ಪರಮೇಶ್ವರನೇ ಯಜ್ಞದ ಭೋಕ್ತನು ಎಂದು ಹೇಳಿದೆ. ಯಜ್ಞದಲ್ಲಿ ಬೇರೆಬೇರೆಯ ದೇವತೆಗಳಿಗೆ ಸ್ವಾಹಾ! ಎಂದು ನಾವು ಆಹುತಿಯನ್ನು ಕೊಟ್ಟರೂ - ಪಟೇಲರಿಗೆ ಕೊಡುವ ಕಂದಾಯವು ರಾಜನಿಗೇ ಮುಟ್ಟುವಂತೆ - ಪರಮೇಶ್ವರನಿಗೇ ತಲುಪುತ್ತದೆ ಎಂಬುದು ಆ ವಾಕ್ಯದ ಅಭಿಪ್ರಾಯ. ದೇವತೆಗಳಿಗೂ ಪರಮೇಶ್ವರನಿಗೂ ಇರುವ ಸಂಬಂಧವನ್ನು ಕುರಿತು ಈಗ ಸ್ವಲ್ಪ ವಿಸ್ತಾರವಾಗಿ ವಿಮರ್ಶಿಸಬಹುದಾಗಿದೆ.

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್॥** (೭-೨೧)
**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ।**
**ಲಭತೇ ಚ ತತಃ ಕಾಮಾನ್ ಮಯ್ಯೆವ ವಿಹಿತಾನ್ ಹಿ ತಾನ್॥**(೭-೨೨)

"ಯಾವ ಯಾವನು ಯಾವಯಾವ ದೇವತಾತನುವನ್ನು ಶ್ರದ್ಧೆಯಿಂದ ಅರ್ಚನೆಮಾಡುವದಕ್ಕೆ ಪ್ರಯತ್ನಿಸುತ್ತಾನೋ ಆಯಾ ಭಕ್ತನಿಗೆ ಅದರಲ್ಲಿಯೇ ಶ್ರದ್ಧೆಯನ್ನುಂಟುಮಾಡುವೆನು. ಅವನು ಆ ಶ್ರದ್ಧೆಯಿಂದ ಕೂಡಿ ಆ ದೇವತೆಯ ಆರಾಧನೆಗೆ ಪ್ರಯತ್ನಮಾಡುತ್ತಾನೆ; ಮತ್ತು ಆ ಅರ್ಚನೆಯಿಂದ ತನಗೆ ಬೇಕಾಗಿದ್ದ ಕಾಮಗಳನ್ನು ಪಡೆದುಕೊಳ್ಳುತ್ತಾನೆ. ಆ ಫಲಗಳನ್ನು ನಾನೇ ಕೊಡುವೆನು." ಭಗವಂತನ ಈ ವಾಕ್ಯದಲ್ಲಿ ಈಶ್ವರನಿಗೂ ದೇವತೆಗಳಿಗೂ ಇರುವ ಸಂಬಂಧವನ್ನು ಸ್ಪಷ್ಟಪಡಿಸಿರುತ್ತದೆ. ಇದನ್ನು ಸರಿಯಾಗಿ ತಿಳಿದುಕೊಳ್ಳಲಾರದೆ ಪಾಶ್ಚಾತ್ತ್ಯರು ಕೆಲವರು ಭರತಖಂಡದವರು ಅನೇಕೇಶ್ವರವಾದಿಗಳು ಎಂದು ಜರಿಯುತ್ತಾರೆ. ನಮ್ಮ ದೇಶದವರೂ ಕೆಲವರು ತಿಳಿದೋ ತಿಳಿಯದೆಯೋ ಅವರನ್ನು ಅನುಕರಿಸಿ ಇದೇ ಅಭಿಪ್ರಾಯವನ್ನು ಹೊರಪಡಿಸುತ್ತಿರುವರು. ಆದರೆ ಇದರ ತತ್ತ್ವವು ವೇದದದಲ್ಲಿಯೇ ಸ್ಪಷ್ಟವಾಗಿ ಉಕ್ತವಾಗಿರುತ್ತದೆ. ವೈದಿಕೋಪದೇಶವನ್ನು ನಾವು ವೇದದಿಂದಲೇ ತಿಳಿದು ಕೊಳ್ಳಬೇಕಾಗಿರುವದು ನ್ಯಾಯವಾಗಿರುತ್ತದೆ.

ಬೃಹದಾರಣ್ಯಕವೆಂಬ ಉಪನಿಷತ್ತಿನಲ್ಲಿ ವಿದಗ್ಧಶಾಕಲ್ಯನಿಗೂ ಯಾಜ್ಞವಲ್ಕ್ಯನಿಗೂ ನಡೆದ ಒಂದು ಸಂವಾದವಿದೆ. ಅದರಲ್ಲಿ ದೇವತೆಗಳ ಸಂಖ್ಯೆಯನ್ನು ಕುರಿತ ಚರ್ಚೆಯಿದೆ. "ಯಾಜ್ಞವಲ್ಕ್ಯನೆ, ದೇವತೆಗಳು ಎಷ್ಟು ಮಂದಿ?" "ಮೂರು ಮುನ್ನೂರು; ಮೂರು ಸಾವಿರ!" "ದೇವತೆಗಳು ನಿಜವಾಗಿ ಎಷ್ಟು ಮಂದಿ?" "ಮೂವತ್ತುಮೂರು" "ದೇವತೆಗಳು ನಿಜವಾಗಿ ಎಷ್ಟುಮಂದಿ?" "ಆರು ಜನ" "ನಿಜವಾಗಿ ದೇವತೆಗಳು ಎಷ್ಟು ಮಂದಿ?" "ಮೂರು ಮಂದಿ." "ನಿಜವಾಗಿ ದೇವತೆಗಳು ಎಷ್ಟು ಮಂದಿ?" "ಇಬ್ಬರು." "ದೇವತೆಗಳು ನಿಜವಾಗಿ ಎಷ್ಟು ಮಂದಿ?" "ಒಂದೂವರೆ." "ದೇವತೆಗಳು ನಿಜವಾಗಿ ಎಷ್ಟು ಮಂದಿ?" "ಒಬ್ಬನು." ಆ ಒಬ್ಬನ ಮಹಿಮೆಗಳೇ ಬೇರೆಬೇರೆಯ ಸಂಖ್ಯೆಯ ದೇವತೆಗಳು - ಎಂದು ಆ ಉಪನಿಷತ್ತಿನಲ್ಲಿ ವಿವರಿಸಿರುತ್ತದೆ. ಪರಮಾತ್ಮನೊಬ್ಬನೇ ಅವರವರ ಕಾಮಗಳನ್ನು ಪರಿಪೂರ್ಣಗೊಳಿಸುವ ಅನಂತಶಕ್ತಿಗಳುಳ್ಳವನಾದ್ದರಿಂದ ಆಯಾ ದೇವತೆಯೆಂದು ಆತನನ್ನೇ ಆಯಾ ಭಕ್ತರು ಪೂಜಿಸುವರು. ಅಪೇಕ್ಷಾಬುದ್ಧಿಯಿಂದ ಕೋರ್ಟಿನಲ್ಲಿ ಮ್ಯಾಜಿಸ್ಟ್ರೇಟ್ ಎನ್ನಿಸಿಕೊಳ್ಳುವವನೇ ಹೆಂಡತಿಗೆ ಗಂಡನೂ ಮಕ್ಕಳಿಗೆ ತಂದೆಯೂ ಅಳಿಯನಿಗೆ ಮಾವನೂ ಆಗಿರುವಂತೆ ಆ ಒಬ್ಬ ಭಗವಂತನೇ ಬಡವರಿಗೆ ಶ್ರಿಯಃಪತಿ ಯಾಗಿರುವನು; ದುರ್ಬಲರಿಗೆ ಬಲವನ್ನು ಕೊಡುವ ಇಂದ್ರನಾಗಿರುವನು; ರೈತರಿಗೆ ಮಳೆಯನ್ನು ಕೊಡುವ ಪರ್ಜನ್ಯನಾಗಿರುವನು. ವೇದದಲ್ಲಿ ಹೇಳಿರುವಂತೆ "ಏಕಂ ಸದ್ವಿಪ್ರಾ ಬಹುಧಾ ವದನ್ತಿ" ಇರುವದು ಒಂದು, ಒಬ್ಬ ಪರಮಾತ್ಮನನ್ನೇ ಋಷಿಗಳು ದೃಷ್ಟಿಭೇದದಿಂದ ಬೇರೆಬೇರೆಯ ದೇವತೆಯೆಂದು ಕರೆದಿರುತ್ತಾರೆ. ಪರಮಾತ್ಮನೆಂಬ ಕಟ್ಟೆಯಿಂದ ದೇವತೆಗಳೆಂಬ ನಾಲೆಗಳು, ಹೊರಟುಬಂದು ಭಕ್ತರ ಹೃದಯಕ್ಷೇತ್ರದಲ್ಲಿ ಹರಿದು ಇಷ್ಟಾರ್ಥಗಳೆಂಬ ಪೈರುಗಳನ್ನು ಕೊಡುತ್ತಿರುವವು. ಎಲ್ಲಾ ದೇವತೆಗಳ ಮೂಲಕವೂ ಒಬ್ಬ ಪರಮಾತ್ಮನೇ ಆಯಾ ಭಕ್ತರ ಕಾಮಗಳನ್ನು ಪರಿಪೂರ್ತಿ ಗೊಳಿಸುತ್ತಿರುವನು.

ಆದರೆ ಕಾಲುವೆಗಳಿಂದ ಅವರವರಿಗೆ ಬೇಕಾದ ಸಣ್ಣ ಫಲಗಳು ಉಂಟಾದರೂ ಅವೇ ನದಿಯೆಂದು ಯಾವ ವಿವೇಕಿಯೂ ಭ್ರಮಿಸುವದಿಲ್ಲ. ಇದರಂತೆ ಇಂದ್ರಾದಿ ಗಳಿಂದ ಆಯಾ ಕಾಮಗಳು ನೆರವೇರುವವಾದರೂ ಆ ಫಲಗಳು ಅಂತವಂತ ವಾಗಿರುತ್ತವೆ; ಅಲ್ಪಪ್ರಜ್ಞರು ಅಷ್ಟರಿಂದಲೇ ತೃಪ್ತರಾಗಿರುತ್ತಾರೆ. ಒಂದೊಂದು ದೇವತೆಯನ್ನು ಪೂಜಿಸಿದರೆ, ಆಯಾ ದೇವತೆಯ ಸ್ಥಾನವೇ ಕೊನೆಗೆ ದೊರಕುವ ಫಲವು. ಆದರೆ ವಾಸುದೇವಭಗವಂತನೇ ಸರ್ವವು ಎಂದು ಭಜಿಸುವ ಮಹಾತ್ಮನಿಗೆ

ವಾಸುದೇವಪ್ರಾಪ್ತಿಯೇ ಫಲವಾಗುವದು. ಭಜನೆಯ ಆಯಾಸವು ಹೀಗೆ ಸಮನಾಗಿದ್ದರೂ ಭಗವಂತನ ಭಜನೆಯಿಂದ ಅನಂತವಾದ ಫಲವಾಗುವದೆಂಬುದನ್ನು ಅರಿತು, ಸಮುದೂರದಲ್ಲಿರುವ ಕಾಲುವೆಯನ್ನು ಬಿಟ್ಟು ನದಿಯನ್ನೇ ಸೇರುವ ವಿವೇಕಿಗಳಂತೆ, ವಿಚಾರಪರರಾದವರು ವಾಸುದೇವಭಗವಂತನನ್ನೇ ಭಜಿಸುವರು. ಇಲ್ಲಿ ದೇವತೆಗಳ ಫಲವನ್ನು ನಿಂದಿಸಿರುವದು ದೇವತಾರಾಧನೆಯು ತಪ್ಪೆಂದು ತಿಳಿಸುವದಕ್ಕಲ್ಲ. ಭಗವಂತನ ಆರಾಧನೆಯಲ್ಲಿ ಎಲ್ಲ ಫಲಗಳೂ ಅಡಕವಾಗಿರುವವು ಎಂದು ತಿಳಿಸುವದಕ್ಕೆ. ವಾಸುದೇವಭಗವಂತನನ್ನೇ ಎಲ್ಲರೂ ಏತಕ್ಕೆ ಭಜಿಸುವದಿಲ್ಲ? ಎಂದರೆ—

> ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯನ್ತೇ ಮಾಮಬುದ್ಧಯಃ ।
> ಪರಂ ಭಾವಮಜಾನನ್ತೋ ಮಮಾವ್ಯಯಮನುತ್ತಮಮ್ ॥(೭-೨೪)

ಭಗವಂತನೆಂದರೆ ಎಲ್ಲರಂತೆ ಒಬ್ಬ ವ್ಯಕ್ತಿಯಲ್ಲ. ಆದರೂ ಆತನ ಅವತಾರದ ರೂಪಗಳನ್ನು ಕಂಡು ಭಗವಂತನೆಂಬುವನು ಹಿಂದೆ ಅವ್ಯಕ್ತನಾಗಿದ್ದು ಈಗ ವ್ಯಕ್ತನಾಗಿರುತ್ತಾನೆ ಎಂದು ಮೂಢರು ಭಾವಿಸುತ್ತಾರೆ. ಶ್ರೀಕೃಷ್ಣನೆಂಬುವನು ಹಿಂದೆ ಇರಲಿಲ್ಲ, ಈಗ ವಸುದೇವನ ಮನೆಯಲ್ಲಿ ಹುಟ್ಟಿರುವನು-ಎಂದೇ ದ್ವಾಪರಯುಗದಲ್ಲಿ ಅನೇಕ ಅವಿವೇಕಿಗಳ ಭಾವನೆಯಾಗಿತ್ತು. ಪರಮಾತ್ಮನೆಂದರೆ ಜನ್ಮರಹಿತನು, ಅವ್ಯಯವಾದ ಸ್ವರೂಪವುಳ್ಳವನು, ನಿತ್ಯಶುದ್ಧಬುದ್ಧಮುಕ್ತಸ್ವರೂಪನು- ಎಂಬ ತತ್ತ್ವವನ್ನು ಅರಿಯದೆ ಇರುವವರು ಅವನೂ ತಮ್ಮಂತೆ ಹುಟ್ಟುಹೊಂದುಗಳುಳ್ಳ ಒಬ್ಬ ವ್ಯಕ್ತಿಯೆಂದು ಭ್ರಮಿಸುವರು. ಪರಮಾತ್ಮನ ತತ್ತ್ವವು ಹೊರಗಿನ ಗುಣಮಯವಾದ ಮಾಯೆಯಿಂದ ಆವೃತವಾಗಿರುತ್ತದೆ. ಆದ್ದರಿಂದ ಮಾಯೆಯಿಂದ ಮೋಹಿತರಾದವರು ಅವನ ತತ್ತ್ವವನ್ನು ಅರಿಯರು. ನಲ್ಲಿಯಲ್ಲಿ ತೊಟ್ಟಿಕ್ಕುವ ನೀರನ್ನು ಕಂಡು ನಲ್ಲಿಯಲ್ಲಿ ನೀರಿನ ಸಂಬಂಧವು ತಪ್ಪಿದೆ ಎಂಬ ತತ್ತ್ವವನ್ನು ಅರಿಯದೆ ಈ ಊರಲ್ಲಿ ನೀರಿಗೆ ಬಡತನ ಎಂದು ಭ್ರಮಿಸುವ ಹಾಗೆ, ಬೆಳಕಿನ ಮಹಿಮೆಯಿಂದ ಕಾಣುತ್ತಿರುವ ಚಿಮಣಿಯನ್ನು 'ಆ ಹಸುರು ಚಿಮಣಿಯು ಹಸಿರು ಬೆಳಕನ್ನು ಕೊಡುತ್ತಿದೆ' ಎಂದು ಭ್ರಮಿಸುವ ಹಾಗೆ ಆಗಾಗ್ಗೆ ಉಪಾಧಿಗಳ ಮೂಲಕವಾಗಿ ತೋರಿಕೊಳ್ಳುವ, ಎಲ್ಲಾ ಉಪಾಧಿಗಳನ್ನೂ ತನ್ನ ಬೆಳಕಿನಿಂದಲೇ ಬೆಳಗುವ, ಪರಮಾತ್ಮಚೈತನ್ಯದ ತತ್ತ್ವವನ್ನು ಅರಿಯಲಾರದ ಮೂಢರು, ಪರಮಾತ್ಮನೇ ವ್ಯಕ್ತಾವ್ಯಕ್ತರೂಪಗಳನ್ನು ಪಡೆಯುತ್ತಿರುವ ನೆಂದು ಭ್ರಮಿಸುವರು. ಪರಮಾತ್ಮನನ್ನು ಮಾಯೆಯು ಆವರಿಸಿಕೊಂಡಿದೆ ಎಂಬುದು

ಹೇಗೆ? ಸೂರ್ಯನನ್ನು ಮೋಡವು ಕವಿದುಕೊಂಡಿದೆ ಎಂದು ಸೂರ್ಯನ ಬೆಳಕಿನಿಂದಲೇ ತಿಳಿಯುವಂತೆ, ಮಾಯೆಯು ಪರಮಾತ್ಮನನ್ನು ಮುಸುಕಿದೆ ಎಂಬುದನ್ನೂ ಪರಮಾತ್ಮನ ಚೈತನ್ಯದ ಬೆಳಕಿನಿಂದಲೇ ನಾವೆಲ್ಲರೂ ಅರಿತುಕೊಳ್ಳುತ್ತಿರುವೆವು. ಆದರೂ ನಾವು ಮಾಯೆಯ ಕಡೆಗೇ ದೃಷ್ಟಿಯನ್ನು ತಿರುಗಿಸಿಕೊಂಡಿರುವದರಿಂದ ಪರಮಾತ್ಮತತ್ತ್ವವನ್ನು ಅರಿತುಕೊಳ್ಳಲಾರದೆ ಇರುವೆವು.

**ಘನಚ್ಛನ್ನದೃಷ್ಟಿರ್ಘನಚ್ಛನ್ನಮರ್ಕಂ**
**ಯಥಾ ನಿಷ್ಪ್ರಭಂ ಮನ್ಯತೇ ಚಾತಿಮೂಢಃ।**
**ತಥಾ ಬದ್ಧವದ್ ಭಾತಿ ಯೋ ಮೂಢದೃಷ್ಟೇಃ**
**ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ॥**

"ಕಣ್ಣಿನ ದೃಷ್ಟಿಗೆ ಮರೆಯಾಗಿರುವ ಮೋಡದ ವಶದಿಂದ ಸೂರ್ಯನಿಗೆ ಮೋಡವು ಕವಿದುಕೊಂಡಿದೆ, ಸೂರ್ಯನು ಈಗ ಅಷ್ಟು ಚೆನ್ನಾಗಿ ಹೊಳೆಯುತ್ತಿಲ್ಲ" ಎಂದು ಅತಿಮೂಢರಾದವರು ಭಾವಿಸುವ ಹಾಗೆ ಪರಮಾತ್ಮನೂ ಮೂಢರ ಕಣ್ಣಿಗೆ ಮಾಯಾವೃತನಾಗಿರುತ್ತಾನೆ. ಮಾಯೆಯು ಸತ್ತ್ವರಜಸ್ತಮಗಳೆಂಬ ಮೂರು ಗುಣಗಳಿಂದ ಆಗಿರುತ್ತದೆ. ಮಾಯಾಮಯವಾಗಿರುವ ವಸ್ತುಗಳು ಈ ಗುಣಗಳ ಬೆರಕೆಯಿಂದ ಕ್ಷಣಕ್ಕೊಂದು ರಂಗಾಗುತ್ತಿರುವವು; ಅವರ ದೃಷ್ಟಿಯೂ ಹಾಗೆ ಕ್ಷಣಕ್ಕೊಂದು ಬಗೆಯಾಗಿ ಮಾರ್ಪಡುತ್ತಿರುವದು. ಗೋಂದಾವಳಿ ಎಂಬ ಕ್ಷೇತ್ರದಲ್ಲಿದ್ದ ಬ್ರಹ್ಮಚೈತನ್ಯರೆಂಬ ಸಾಧುಗಳ ಫೋಟೋ ತೆಗೆದುಕೊಳ್ಳುವದಕ್ಕೆ ಅವರ ಅಪ್ಪಣೆಯಿಲ್ಲದೆ ಪ್ರಯತ್ನಮಾಡಿದವರಿಗೆ ಒಬ್ಬೊಬ್ಬರಿಗೆ ಒಂದೊಂದು ಬಗೆಯಲ್ಲಿ ಚಿತ್ರವು ಬರುತ್ತಿತ್ತಂತೆ? ಅವರು ತಮ್ಮ ಯೋಗಶಕ್ತಿಯಿಂದ ಹಾಗೆ ಗಳಿಗೆಗೊಂದು ಬಗೆಯಾಗಿ ಮಾರ್ಪಡುತ್ತಿದ್ದರಂತೆ! ಆದರೆ ಅವರು ಒಪ್ಪಿದಾಗ ತೆಗೆದ ಫೋಟೋವಿನಲ್ಲಿ ಮಾತ್ರ ಅವರ ಯಥಾರ್ಥಚಿತ್ರವು ಬೀಳುತ್ತಿತ್ತಂತೆ. ಹೀಗೆಯೇ ಹೊರಗಿನ ಮಾಯೆಯಿಂದಲೂ ಸ್ವಬುದ್ಧಿಯಿಂದ ಮೂಢರಾದ ದಿಕ್ಕುತೋಚದ ಜನರು ಪರಮಾತ್ಮನನ್ನು ಗುರುತು ಹಿಡಿಯಲಾರದೆ ಇರುತ್ತಾರೆ. ಮಾಯೆಯೂ ಬೇರೆಬೇರೆಯಾಗುತ್ತಿರುತ್ತದೆ, ಬುದ್ಧಿಯೂ ಬೇರೆಬೇರೆಯಾಗುತ್ತಿರುತ್ತದೆ. ಹೀಗಿರುವಲ್ಲಿ ಪರಮಾತ್ಮತತ್ತ್ವವನ್ನು ಹೀಗೆಯೇ ಸರಿ ಎಂದು ನಿರ್ಧರಿಸುವದು ಹೇಗೆ ಸಾಧ್ಯವಾದೀತು? ಆದ್ದರಿಂದಲೇ ಈ ಮೂಢರು ಪರಿಚ್ಛಿನ್ನವಾದ ರೂಪವನ್ನೇ ಪರಮಾತ್ಮನೆಂದುಕೊಂಡು ಅಜ್ಞಾನಕ್ಕೆ ಸಿಕ್ಕಿ ಒದ್ದಾಡುತ್ತಿರುವರು.

ಪರಮಾತ್ಮನ ಸ್ವರೂಪಕ್ಕೂ ನಮಗೂ ಎಷ್ಟು ದೂರ! ಪರಮಾತ್ಮನ ಜ್ಞಾನಕ್ಕೂ ನಮ್ಮ ತಿಳಿವಳಿಕೆಗೂ ಎಷ್ಟು ಅಂತರ! ಈಗಿನ ನಮ್ಮ ಸ್ಥಿತಿಯಲ್ಲಿ ನಾವು ಪರಮಾತ್ಮನನ್ನು ಸರಿಯಾಗಿ ಅರಿತುಕೊಳ್ಳುವಂತೆಯೇ ಇಲ್ಲ.

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ॥** (೭-೨೬)

"ಅರ್ಜುನನೇ, ನಾನು ಹಿಂದಿನ, ಈಗಿನ ಮತ್ತು ಮುಂದಿನ ಭೂತಗಳನ್ನು ಎಲ್ಲವನ್ನೂ ಬಲ್ಲೆನು. ಆದರೆ ನನ್ನನ್ನು ಯಾರೊಬ್ಬರೂ ಅರಿಯರು" ಎಂದು ಭಗವಂತನು ಹೇಳಿರುತ್ತಾನೆ. ಮೂಢರು ಭಗವಂತನನ್ನು ಪರಿಚ್ಛಿನ್ನನೆಂದು ತಿಳಿದರೂ ನಿಜವಾಗಿ ಆತನು ಎಲ್ಲೆಲ್ಲಿಯೂ ಯಾವಾಗಲೂ ಒಂದೇ ಸಮನಾಗಿರುತ್ತಾನೆ. ಆತನಿಗೆ ಹಿಂದಿನದು, ಈಗಿನದು, ಮುಂದಿನದು - ಎಲ್ಲವನ್ನೂ ಈಗಲೇ ಅರಿತುಕೊಳ್ಳಬಲ್ಲ ಮೂರು ಕೊಳವೆಯ ದುರ್ಬೀನು ದೃಷ್ಟಿಯೊಂದಿರುತ್ತದೆ. ನಾವು ಪರಿಚ್ಛಿನ್ನದೃಷ್ಟಿಯುಳ್ಳವರು. ನಮಗೆ ಹಿಂದಿನದನ್ನು ದುಃಖದಿಂದಲೋ ಹೆಮ್ಮೆಯಿಂದಲೋ ಪಶ್ಚಾತ್ತಾಪದಿಂದಲೋ ನೋಡುವದು ಪದ್ಧತಿಯಾಗಿಬಿಟ್ಟಿದೆ. ಇದರಂತೆಯೇ ಮುಂದಿನದನ್ನು ಕುತೂಹಲದಿಂದ, ಭಯದಿಂದ ಸುಖದುಃಖನಿರೀಕ್ಷಣೆಯಿಂದ ನೋಡುವ ಅಭ್ಯಾಸವಿದೆ. ಈಗಿನ ಕಾಲದಲ್ಲಿಯೂ ಹೀಗೆಯೇ ವಸ್ತುಗಳನ್ನು ಬೇರೆಬೇರೆಯ ಭಾವಗಳಿಂದ ಕೂಡಿಯೇ ನಾವು ನೋಡಬೇಕಾಗಿದೆ. ಇದೂ ಅಲ್ಲದೆ ಒಂದೊಂದು ಕಾಲದ ನೋಟವಿರುವಾಗ ನಮಗೆ ಮಿಕ್ಕೆರಡರ ನೋಟವಿರುವದಿಲ್ಲ; ನಾವು ಕಾಲವಶರಾಗಿರುವದರಿಂದ ಆಯಾ ಕಾಲವು ನಮ್ಮನ್ನು ಹಿಡಿದು ಕಟ್ಟಿ ಆಯಾ ದೃಶ್ಯಗಳನ್ನು ತೋರಿಸಿ ಆಯಾ ಭಾವಗಳನ್ನು ನಮ್ಮ ಅಂತಃಕರಣದಲ್ಲಿ ತುಂಬುತ್ತಿರುವದು. ಆದರೆ ಭಗವಂತನು ಹೀಗಲ್ಲ; ಆತನು **ಭೂತಭವ್ಯಭವನ್ನಾಥನು,** ಮೂರು ಕಾಲಗಳಿಗೂ ಒಡೆಯನು, ಕಾಲಕಾಲನು ಅಥವಾ ಕಾಲಾಂತಕನು. ಆತನು ಕಾಲ ವಶನಲ್ಲ, ಕಾಲಕ್ಕೂ ಸಾಕ್ಷಿಯಾಗಿರುವಾತನು. ಯೋಗಿಗಳು ಇಂದ್ರಿಯಗಳ ನೆರವನ್ನು ಬಯಸದೆ ಭೂತಭವಿಷ್ಯತ್ಕಾಲಗಳ ಎಲ್ಲಾ ದೃಶ್ಯಗಳನ್ನೂ ಒಂದಾನೊಂದು ವಿಲಕ್ಷಣವಾದ ದೃಷ್ಟಿಯಿಂದ ನೋಡಬಲ್ಲವರೆಂಬ ನಂಬಿಕೆಯಿರುತ್ತದೆ. ಆದರೆ ಭಗವಂತನು ಯೋಗೀಶ್ವರನು, ಆದ್ದರಿಂದ ಆತನು ತನ್ನ ನಿತ್ಯಸಿದ್ಧಸ್ವರೂಪವಾದ ಯೋಗದೃಷ್ಟಿಯಿಂದ ಮೂರು ಕಾಲದಲ್ಲಿ ಆಗುವದನ್ನೂ ಒಟ್ಟಿಗೆ ನೋಡಬಲ್ಲನು. ಶ್ರುತಿಯು "ಕಣ್ಣಿಲ್ಲದಿದ್ದರೂ ನೋಡುತ್ತಾನೆ, ಕಿವಿಯಿಲ್ಲದಿದ್ದರೂ ಕೇಳುತ್ತಾನೆ" ಎಂದು ಭಗವಂತನ ಸರ್ವಜ್ಞತ್ವವನ್ನು

ಕೊಂಡಾಡುತ್ತದೆ. ಸೂರ್ಯನು ತನ್ನ ಪವಿತ್ರವಾದ ಬೆಳಕಿನಿಂದ ಎಲ್ಲವನ್ನೂ ಬೆಳಗುತ್ತಿದ್ದರೂ ಲೋಕದ ಪದಾರ್ಥಗಳ ಅಶುಚಿತ್ವವು ಅವನಿಗೆ ಅಂಟದೆ ಇರುವಂತೆಯೇ ಭಗವಂತನು ಹೀಗೆ ತನ್ನ ನಿತ್ಯದೃಷ್ಟಿಯಿಂದ ಎಲ್ಲವನ್ನೂ ನೋಡುತ್ತಿರುವನಾದರೂ ಆತನಿಗೆ ಪ್ರಪಂಚದ ಯಾವ ದೋಷವೂ ಅಂಟುವದಿಲ್ಲ.

ಹೀಗೆ ಭಗವಂತನು ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿರುವ ಸಕಲಭೂತಗಳ ಆಗುಹೋಗುಗಳನ್ನೂ ಬಲ್ಲನು. ಆದರೆ ಭಗವದ್ಭಕ್ತರನ್ನು ಬಿಟ್ಟರೆ ಮತ್ತೆ ಯಾರೂ ಆತನ ನಿಜವನ್ನು ಅರಿಯಲಾರರು; ಏಕೆಂದರೆ ಸಾಮಾನ್ಯಜನರಿಗೆ ಭಗವಂತನ ಅನುಗ್ರಹದಿಂದ ಲಭ್ಯವಾದ ತತ್ತ್ವಜ್ಞಾನವು ದಕ್ಕಿರುವದಿಲ್ಲ. ಏನೂ ತಿಳಿಯದ ಮಕ್ಕಳು ಸಮುದ್ರದ ದಡದಲ್ಲಿ ಬಿದ್ದಿರುವ ಶಂಖ, ಕಪ್ಪೆಯ ಚಿಪ್ಪು, ಬೆಣಚುಕಲ್ಲು-ಮುಂತಾದವುಗಳನ್ನು ಆರಿಸಿಕೊಂಡು ಮಡಲಿಗೆ ಹಾಕಿಕೊಳ್ಳುತ್ತಾ ಎತ್ತೆತ್ತಲೋ ಹೋಗಿ ದಾರಿಗಾಣದೆ ಸಂಕಟಪಡುವಂತೆ ಮೂಢ ಜನರು ಮಾಯಾಸಮುದ್ರದ ದಡದಲ್ಲಿ ಇದು ಚಿನ್ನ, ಅದು ಬೆಳ್ಳಿ, ಇದು ಐಶ್ವರ್ಯ, ಇದು ವಿದ್ಯೆ, ಅದು ಕೀರ್ತಿ, ಅದು ಮನೆಮಠ - ಎಂದು ಹಲವು ಬೇಕುಗಳನ್ನು ಕಲ್ಪಿಸಿಕೊಂಡು, ತಮ್ಮ ಮನೆಯಾದ ಪರಮಾತ್ಮನನ್ನು ಬಿಟ್ಟು ದೂರವಾಗಿ ಎಲ್ಲಿಗೋ ಬಂದುಬಿಟ್ಟಿರುವರು. ಮಕ್ಕಳಂತೆ ಅಜ್ಞಾನದ ಕತ್ತಲೆಯಲ್ಲಿ ದಿಕ್ಕುಗಾಣದೆ, ಬಗೆಬಗೆಯ ಕರ್ಮಗಳನ್ನು ಮಾಡುತ್ತಾ ಬೇರೆಬೇರೆಯ ಜನ್ಮಗಳನ್ನು ಹೊಂದಿ ದುಃಖಪಡುತ್ತಿರುವರು. ಹುಟ್ಟುವಾಗಲೆ ಅವರಿಗೆ ಶೀತ, ಉಷ್ಣ, ಸುಖ, ದುಃಖ, ಹರ್ಷವಿಷಾದ - ಮುಂತಾದ ಒಂದಕ್ಕೊಂದು ವಿರುದ್ಧವಾದ ಅನುಭವಗಳನ್ನು ಕೊಡುವ ಇಚ್ಛಾದ್ವೇಷಗಳಿಂದಾಗುವ ದ್ವಂದ್ವಮೋಹವು ಕವಿದುಕೊಂಡಿರುವದು. ಇದು ಬೇಕು, ಇದು ಬೇಡ - ಎಂಬ ಬುದ್ಧಿಗೆ ಇಚ್ಛಾದ್ವೇಷಬುದ್ಧಿ ಎಂದು ಹೆಸರು. ಸಾಮಾನ್ಯಜನರ ಜೀವನವೆಲ್ಲ ಈ ಬೇಕು ಬೇಡಗಳ ಸಂತೆಯಾಗಿರುತ್ತದೆ. ಒಂದು ವಸ್ತು ಬೇಕು, ಇನ್ನೊಂದು ಬೇಡ-ಎಂಬ ವ್ಯವಸ್ಥೆಯೂ ಕೂಡ ಈ ದ್ವಂದ್ವಮೋಹದ ಸನ್ನಿಯಲ್ಲಿರುವದಿಲ್ಲ. ಈಗ ಬೇಕೆಂದಾಗಿರುವ ವಸ್ತುವೇ, ಇನ್ನೊಂದು ಘಳಿಗೆಗೆ ಬೇಡವೆಂದಾಗಿಬಿಡುತ್ತದೆ. ಈ ದ್ವಂದ್ವಮೋಹದ ಬಲೆಯು ದಟ್ಟವಾಗಿ ಹೆಣೆದುಕೊಂಡಿರುತ್ತದೆ; ಎಲ್ಲೆಲ್ಲಿಯೂ ಹರಡಿಕೊಂಡುಬಿಟ್ಟಿರುತ್ತದೆ; ಬೇಟೆಯಲ್ಲಿ ಮೃಗಗಳು ಎಲ್ಲಿ ಹೋದರೂ ಬೇಟೆಗಾರರ ಬಲೆಗೆ ಬೀಳುವ ಏರ್ಪಾಡು ಇರುತ್ತದೆಯಲ್ಲವೆ? ಇದರಂತೆ ಸೃಷ್ಟಿಯಲ್ಲಿರುವ ಈ ಪ್ರಾಣಿಗಳು ಎತ್ತಕಡೆಗೆ ತಿರುಗಿದರೂ ಈ ದ್ವಂದ್ವಮೋಹದ ಬಲೆಯೇ ಕಾದುಕೊಂಡಿರುತ್ತದೆ. ಆದ್ದರಿಂದ ಅವರಿಗೆ ಸಮ್ಮೋಹವುಂಟಾಗಿ ಬುದ್ಧಿಯು ಕೆಡುವದು.

ಪರಮಾತ್ಮನನ್ನು ಅರಿತುಕೊಳ್ಳುವದಕ್ಕೆ ಇದೇ ದೊಡ್ಡ ಅಡಚಣೆ. ಆದರೆ ಎಲ್ಲರಿಗೂ ಹೀಗೆ ಜ್ಞಾನಕ್ಕೆ ಅಡ್ಡಿಯಿರುವದಿಲ್ಲ. ಏಕೆಂದರೆ:

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।**
**ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ॥(೭-೨೮)**

ಶ್ರೀ ರಾಮಕೃಷ್ಣಪರಮಹಂಸರು ಹೇಳಿರುವ ಮೀನುಬಲೆಯ ದೃಷ್ಟಾಂತವನ್ನು ಇಲ್ಲಿ ತೆಗೆದುಕೊಳ್ಳಬಹುದು. ಕೆಲವು ಜಾಣಮೀನುಗಳು ಎಂದಿಗೂ ಬಲೆಗೆ ಬೀಳುವದೇ ಇಲ್ಲ. ಇನ್ನು ಕೆಲವು ಬಲೆಯಲ್ಲಿ ಸತ್ತಂತೆ ಬಿದ್ದಿದ್ದು ಬಲೆಯಿಂದ ತೆಗೆದುಹಾಕುತ್ತಲೂ ನೀರಿನೊಳಕ್ಕೆ ಹಾರಿಕೊಳ್ಳುವವು. ಇನ್ನು ಕೆಲವು ಸಣ್ಣ ಸಣ್ಣ ಸಿಡಿಮೀನುಗಳು; ಅವು ಬಲೆಯ ಸಂದಿಯಿಂದಲೇ ನುಣುಚಿಕೊಳ್ಳುತ್ತವೆ. ಇದರಂತೆ ಅತ್ಯಂತ ಸಾತ್ತ್ವಿಕರಾದ ಸನಕಸನಂದಾದಿಗಳು ಮೊದಲಿನಿಂದ ಜ್ಞಾನಭಕ್ತಿವೈರಾಗ್ಯ ಲಕ್ಷಣವಾದ ನಿವೃತ್ತಿಮಾರ್ಗದಲ್ಲಿಯೇ ಇದ್ದುಕೊಂಡು ಬಿಟ್ಟಿರುವರು. ಇನ್ನು ಕೆಲವರು ಸಂಸಾರಕ್ಕೆ ಸಿಕ್ಕಿಕೊಂಡರೂ ಹೆಚ್ಚಾಗಿ ಅದರಲ್ಲಿ ಆಸಕ್ತರಾಗದೆ ವೈರಾಗ್ಯದಿಂದ ಸತ್ಕರ್ಮಾದಿಗಳಿಂದ ಚಿತ್ತಶುದ್ಧಿಯನ್ನು ಮಾಡಿಕೊಂಡು ಜ್ಞಾನವನ್ನು ಪಡೆದು ಮುಕ್ತರಾಗುವರು. ಇನ್ನು ಕೆಲವರು ಹುಟ್ಟಿದಂದಿನಿಂದ ವಿರಕ್ತರಾಗಿ ಮಿಕ್ಕೆಲ್ಲರಿಗಿಂತಲೂ ಬೇಗನೆ ಬಂಧದಿಂದ ಬಿಡುಗಡೆಯನ್ನು ಹೊಂದುವರು. ಇದಕ್ಕೆ ಅವರು ಮಾಡುವ ಪ್ರಯತ್ನವೇ ಕಾರಣವು. ಇಲ್ಲಿ ಪ್ರಯತ್ನವೆಂದರೆ ತನ್ನಲ್ಲಿರುವ ಅಲ್ಪಸಾಮರ್ಥ್ಯದಿಂದ ಮಾಡುವ ಪ್ರಾಣಾಯಾಮಾದಿಸಾಧನವೆಂದು ತಿಳಿಯಬಾರದು. ಪರಮಾತ್ಮನನ್ನೇ ಆಶ್ರಯಿಸಿ ಆತನ ಅನುಗ್ರಹದಿಂದ ಸಂಸಾರದಿಂದ ಪಾರಾಗುವದಕ್ಕೆ ಮಾಡುವ ಯತ್ನವೇ ನಿಜವಾದ ಪ್ರಯತ್ನವು. ಯಾರು ಪುಣ್ಯಕರ್ಮಗಳನ್ನು ಮಾಡಿರುವರೋ ಅಂಥವರಿಗೆ ಮಾತ್ರ ಪರಮಾತ್ಮತತ್ತ್ವವು ಇಂಥದ್ದು ಎಂಬ ದೃಢವಾದ ನಿಶ್ಚಯವುಂಟಾಗುತ್ತದೆ; ಅಂಥ ಶ್ರದ್ಧಾವಂತರು ಮಾತ್ರವೇ ಎಲ್ಲವನ್ನೂ ಕೈಬಿಟ್ಟು ಪರಮಾತ್ಮನನ್ನೇ ಭಜಿಸುತ್ತಾರೆ. ಯಾರು ಹೀಗೆ ದೃಢವ್ರತರಾಗಿ ಪರಮಾತ್ಮನನ್ನೇ ಆಶ್ರಯಿಸುವರೋ ಅಂಥವರಿಗೆ ಮಾತ್ರ ಮೇಲೆ ಹೇಳಿದ ದ್ವಂದ್ವಮೋಹದಿಂದ ಬಿಡುಗಡೆಯಾಗುತ್ತದೆ; ಅಂಥವರು ಮಾತ್ರ ಈ ಸಂಸಾರಪಾಶದಿಂದ ಮುಕ್ತರಾಗುತ್ತಾರೆ.

# ೫೬. ಉಪಾಸನೆಯ ತತ್ತ್ವ ೭-(೨೯-೩೦)

(೩೧-೮-೪೭)

ಏಳನೆಯ ಅಧ್ಯಾಯದ ಕೊನೆಯಲ್ಲಿ ಎಂಟನೆಯ ಅಧ್ಯಾಯದ ವಿಷಯಕ್ಕೆ ಪ್ರವೇಶವನ್ನು ಕೊಡುವ ಎರಡು ಸಂಗ್ರಹ ಶ್ಲೋಕಗಳಿರುತ್ತವೆ. ಅವುಗಳ ಅರ್ಥವನ್ನು ಎಂಟನೆಯ ಅಧ್ಯಾಯದಲ್ಲಿ ವಿಸ್ತರಿಸಿರುತ್ತದೆ. ಮುಂದಿನ ವಿಷಯದಲ್ಲಿ ಕುತೂಹಲ ವುಂಟಾಗುವಂತೆ ಗೀತೆಯಲ್ಲಿ ಆಗಾಗ್ಗೆ ಹೀಗೆ ಮುಂದಿನ ವಿಷಯದ ಬೀಜಭೂತ ವಾಗಿರುವ ಶ್ಲೋಕಗಳನ್ನು ಮೊದಲೇ ಹೇಳಿಡುವ ಪದ್ಧತಿಯಿದೆ.

ಸೂಕ್ಷ್ಮವಾದ ಪದಾರ್ಥಗಳನ್ನು ಅರಿಯುವದಕ್ಕೆ ಸೂಕ್ಷ್ಮವಾದ ಬುದ್ಧಿ ಬೇಕಾಗುತ್ತದೆ. ಆದ್ದರಿಂದಲೇ ಶ್ರುತಿಯಲ್ಲಿ "ಪರಮಾರ್ಥತತ್ತ್ವವನ್ನು ಸೂಕ್ಷ್ಮದರ್ಶಿ ಗಳಾದವರು ಮಾತ್ರ ಮೊನಚಾಗಿರುವ ಸೂಕ್ಷ್ಮಬುದ್ಧಿಯಿಂದ ಕಂಡುಕೊಳ್ಳುವರು" ಎಂದು ಹೇಳಿರುತ್ತದೆ. ಏಕಾಗ್ರವೃತ್ತಿಯಿಂದ ಬುದ್ಧಿಯು ಸೂಕ್ಷ್ಮವಾಗುತ್ತದೆ; ಸೂಕ್ಷ್ಮವಾದ ಬುದ್ಧಿಯಿಂದ ಸೂಕ್ಷ್ಮವಸ್ತುವಿನ ಜ್ಞಾನವುಂಟಾಗುತ್ತದೆ. ಉದಾಹರಣೆಗೆ ಯೂಕ್ಲಿಡ್ ಎಂಬಾತನು ಜ್ಯಾಮೆಟ್ರಿ-(ರೇಖಾಗಣಿತ)-ಎಂಬ ಶಾಸ್ತ್ರದ ಶೋಧನೆಯಲ್ಲಿ ನಿರತ ನಾಗಿದ್ದನು. ಶತ್ರುಸೈನ್ಯದವರು ಹೊರಗೆ ಗದ್ದಲವನ್ನು ಮಾಡುತ್ತಿದ್ದರೂ ಅದರಿಂದ ಮನಸ್ಸಿಗೆ ವಿಕ್ಷೇಪವನ್ನು ತಂದುಕೊಳ್ಳದೆ ಆ ಗಣಿತಶಾಸ್ತ್ರದ ತತ್ತ್ವವನ್ನು ಕಂಡುಹಿಡಿಯು ವದರಲ್ಲಿಯೇ ಆತನ ಮನಸ್ಸು ಮುಳುಗಿತ್ತು - ಎಂದು ಹೇಳುತ್ತಾರೆ. ಇಂಥ ಏಕಾಗ್ರತೆಯಿಂದಲೇ ಆತನು ರೇಖಾಗಣಿತದ ಸೂಕ್ಷ್ಮತತ್ತ್ವಗಳನ್ನು ಕಂಡುಹಿಡಿದು ಪ್ರಖ್ಯಾತನಾದನು. ಹೊಸತತ್ತ್ವಗಳನ್ನು ಕಂಡುಹಿಡಿಯುವವರಿಗೆ ಋಷಿಗಳು ಎಂದು ಹೆಸರು. ಯೂಕ್ಲಿಡ್ ಎಂಬಾತನು ಜ್ಯಾಮೆಟ್ರಿಯ ತತ್ತ್ವಗಳನ್ನು ಕಂಡುಹಿಡಿದು ಆ ತತ್ತ್ವಗಳ ವಿಷಯಕ್ಕೆ ಋಷಿ ಎನ್ನಿಸಿಕೊಂಡನು. ನಮ್ಮ ದೇಶದ ಋಷಿಗಳು ಆತ್ಮತತ್ತ್ವ ದಲ್ಲಿಯೇ ಏಕಾಗ್ರಚಿತ್ತರಾಗಿ ಆ ತತ್ತ್ವವನ್ನು ಕಂಡುಕೊಂಡರು. ತತ್ತ್ವಜ್ಞಾನವಾಗುವದಕ್ಕೆ ಹೀಗೆ ಏಕಾಗ್ರಚಿತ್ತತೆಯಿಂದ ತತ್ತ್ವಚಿಂತನೆ ಮಾಡುವ ಉತ್ತಮಸಾಮರ್ಥ್ಯವು ಅವಶ್ಯವಾಗಿರುತ್ತದೆ.

ಆದರೆ ಇದು ಯಾರಿಗೆ ಸಾಧ್ಯವಿಲ್ಲವೋ ಅಂಥವರಿಗೆ ಶಾಸ್ತ್ರದಲ್ಲಿ ಬೇರೆಯ ಸಾಧನವನ್ನು ಹೇಳಿರುತ್ತದೆ. ಉತ್ತಮಾಧಿಕಾರಿಗಳಿಗೆ ಶಾಸ್ತ್ರದಲ್ಲಿ ಹೇಳಿರುವ ತತ್ತ್ವವನ್ನು ತರ್ಕಕ್ಕೆ ಹೊಂದಿಸಿಕೊಂಡು ಸೂಕ್ಷ್ಮದೃಷ್ಟಿಯಿಂದ ನೋಡಿ ಅನುಭವಕ್ಕೆ ಹೊಂದಿಸಿ ಕೊಳ್ಳುವ ಉಪಾಯವು ಸಾಧ್ಯವಾಗುತ್ತದೆ. ನಡುತರದ ಅಧಿಕಾರಿಗಳಿಗೆ **ಉಪಾಸನೆಯೇ**- ಶಾಸ್ತ್ರವೂ ಗುರುಗಳೂ ಉಪದೇಶಿಸಿದ ತತ್ತ್ವವನ್ನು ಭಾವನೆಮಾಡಿಕೊಂಡು

ಹೋಗುವದೇ - ಉಪಾಯವು. ತೀರ ಕೆಳಗಿನ ಅಂತಸ್ತಿನ ಅಧಿಕಾರಿಗಳು ಕರ್ಮಕ್ಕೆ ತಕ್ಕವರು. ಆದರೆ ಕರ್ಮವನ್ನು ಮೀರಿ ಜ್ಞಾನಕ್ಕೆ ತಕ್ಕ ವಿಚಾರಶಕ್ತಿಯಿಲ್ಲದವರಿಗೆ ಈ ಭಾವನಾತ್ಮಕವಾದ ಉಪಾಸನೆಯು ಉತ್ತಮವಾದ ಸಾಧನವಾಗಿರುತ್ತದೆ. ಯಾವದನ್ನು ಧ್ಯಾನಮಾಡಬೇಕೋ ಅದಕ್ಕಿಂತ ಬೇರೆಯಾದ ಪ್ರತ್ಯಯವು ನಡುವೆ ಬಾರದಂತೆ ಅದೇ ಪ್ರತ್ಯಯವನ್ನು ಧಾರಾಕಾರವಾಗಿ ಇಟ್ಟುಕೊಂಡಿರುವದೇ ಉಪಾಸನೆ ಎನಿಸುವದು. ಉದಾಹರಣೆಗೆ ಶ್ರೀರಾಮನ ಪಟ್ಟಾಭಿಷೇಕವು ಮಾರನೆಯ ದಿನ ನಡೆಯಬೇಕೆಂದು ಗೊತ್ತಾದಾಗಿನಿಂದ ಕೌಸಲ್ಯಾದೇವಿಯು ಅದೇ ಚಿಂತೆಯನ್ನು ಮಾಡುತ್ತಾ ನಿದ್ರೆಯನ್ನು ಕೂಡ ಮಾಡದೆ ರಾತ್ರೆಯನ್ನು ಕಳೆದಳು. ಮಾರನೆಯ ದಿನವೂ ಗೌರೀಪೂಜೆಯನ್ನು ಮಾಡುತ್ತಾ ತನ್ನ ಮಗನಿಗೆ ನಿರ್ವಿಘ್ನವಾಗಿ ಪಟ್ಟಾಭಿಷೇಕವಾಗಲೆಂದು ಪ್ರಾರ್ಥನೆ ಮಾಡುತ್ತಿದ್ದಳಂತೆ. ಈ ರೀತಿಯಾದ ಏಕಾಕಾರವಾದ ಪ್ರತ್ಯಯಧಾರೆಯು ಉಪಾಸನೆ ಯಾಗುತ್ತದೆ. ಜೋಯಿಸರು ಈ ಜಾತಕಕ್ಕೆ ಅರುವತ್ತೈದನೆಯ ವರ್ಷಕ್ಕೆ ಗಂಡವಿದೆ ಎಂದರೆ ಅದೇ ಭಾವನೆಯನ್ನು ಹತ್ತಿಸಿಕೊಂಡು ಕೊರಗುವವರು ಎಷ್ಟು ಮಂದಿ! ಪರಮಾತ್ಮನು ಹೀಗಿರುತ್ತಾನೆ, ಹೀಗೆಂದು ಧ್ಯಾನಿಸಿರಿ - ಎಂದು ದೊಡ್ಡವರು ಉಪದೇಶಿಸಿದರೆ ಅದರಂತೆಯೇ ಶ್ರದ್ಧೆಯಿಂದ ಚಿಂತಿಸುವದು ಉಪಾಸನೆಯು.

ಮನುಷ್ಯನಿಗೆ ಭಾವನೆಯೆಂಬುದು ಸಹಜವಾಗಿರುತ್ತದೆ. ಆದರೆ ಯಾವದಾದ ರೊಂದು ವಸ್ತುವಿನ ಭಾವನೆಯನ್ನು ಹತ್ತಿಸಿಕೊಂಡು ಜನರು ಕೆಡುವರು. ಅನೃತವಾದ ವಸ್ತುವನ್ನು ಭಾವನೆಮಾಡಿದರೂ ಅದು ನಮಗೆ ದೊರೆಯಲಾರದು. ದೂರದಲ್ಲಿರುವ ದೀಪದ ಕುಡಿಯನ್ನು ಕಂಡು ರತ್ನವೆಂದು ಭಾವಿಸಿಕೊಂಡರೆ ಅದು ನಿಜವಾಗಿ ರತ್ನವಾದೀತೆ? ಆದರೆ ದೂರದಲ್ಲಿ ಕಾಣುವ ರತ್ನದ ಪ್ರಭೆಯಿಂದ ಅಲ್ಲಿ ರತ್ನವಿರುವ ದೆಂದು ಕಲ್ಪಿಸುವದೂ ಭ್ರಮೆಯೇ ಆದರೂ ಆ ಭಾವನೆಯಿಂದ ಮುಂದುವರಿ ಯುವವನಿಗೆ ನಿಜವಾದ ರತ್ನವೇ ಸಿಕ್ಕುತ್ತದೆ. ಅಲ್ಲವೆ? ಹೀಗೆ ವಸ್ತ್ವನುಸಾರಿಯಾಗಿರುವ ಭ್ರಮೆಗೆ ಸಂವಾದಿಭ್ರಮೆ ಎಂದು ಹೆಸರು. ಆತ್ಮವಸ್ತುವನ್ನು ಇದ್ದದ್ದನ್ನು ಇದ್ದಂತೆ ಅರಿತುಕೊಳ್ಳುವಷ್ಟು ಸೂಕ್ಷ್ಮವಾದ ಬುದ್ಧಿಯು ಇಲ್ಲದ ಮಧ್ಯಮಾಧಿಕಾರಿಗಳಿಗೆ ಶಾಸ್ತ್ರದಲ್ಲಿ ಉಪದೇಶಿಸಿರುವ ಉಪಾಸನೆಯೆಂಬುದು ಈ ಸಂವಾದಿಭ್ರಮೆಯಂತೆ ವಸ್ತುಪ್ರಾಪ್ತಿಗೆ ಸಾಧಕವಾಗಿರುತ್ತದೆ. ಅದರಿಂದ ಇಲ್ಲಿಯೇ ಈಗಲೇ ವಸ್ತುವು ದೊರಕದಿದ್ದರೂ ಕಾಲಾಂತರದಲ್ಲಿ ದೇಶಾಂತರದಲ್ಲಿ ದೊರಕುತ್ತದೆ.

ಭಾವನೆಯು ಫಲಕಾರಿಯಾಗುವದು ಹೇಗೆ? ಎಂಬುದರ ತತ್ತ್ವವನ್ನು ನಾವು ಸ್ವಲ್ಪ ಪರಿಶೀಲಿಸುವದು ಒಳ್ಳೆಯದು. ಮನಸ್ಸಿನಲ್ಲಿ ಒಂದು ವಿಲಕ್ಷಣಶಕ್ತಿಯಿದೆ. ಅದರಲ್ಲಿ ಎಂಥ ಭಾವನೆಯು ಪ್ರಬಲವಾಗಿರುವದೋ ಅದಕ್ಕೆ ಅನುಗುಣವಾಗಿ

ಭಾವುಕನ ಸುತ್ತುವಳಿಯವು ಏರ್ಪಡುತ್ತದೆ. ಜನರ ಮನಸ್ಸಿನಲ್ಲಿ ಬಗೆಬಗೆಯ ಭಾವನೆಗಳು ಒಂದಾಗುತ್ತಲೊಂದು ಎದ್ದುಕೊಳ್ಳುತ್ತಲೇ ಇರುವವು. ಅವುಗಳಲ್ಲಿ ಕೆಲವು ಒಳ್ಳೆಯ ಫಲವನ್ನು ಕೊಡುವ ಭಾವನೆಗಳು; ಇನ್ನು ಕೆಲವು ಕೆಟ್ಟಫಲವನ್ನು ಕೊಡುವ ಭಾವನೆಗಳು; ಇನ್ನೂ ಕೆಲವು ಸಾಮಾನ್ಯವಾದ ಔದಸೀನ್ಯರೂಪದವು. ಆದರೆ ಬಗೆಬಗೆಯಾದ ಭಾವನೆಗಳು ಮನಸ್ಸಿನಲ್ಲಿ ಏಳುತ್ತಿರುವದರಿಂದ ಮನಸ್ಸಿನಲ್ಲಿ ಮಾಲಿನ್ಯವುಂಟಾಗುವದೇ ಹೊರತು ಹೊಸದಾದ ಫಲವು ಯಾವದೂ ಅವಕ್ಕೆ ಕಾಣುವದಿಲ್ಲ. ಆದರೆ ಉತ್ಕಟವಾದ ಭಾವನೆಗಳು ಇದ್ದರೆ ಮಾತ್ರ ಮನಸ್ಸನ್ನು ತಮ್ಮ ವಶಕ್ಕೆ ತೆಗೆದುಕೊಂಡು ಮನುಷ್ಯನನ್ನೂ ಅವನ ಸನ್ನಿವೇಶವನ್ನೂ ತಮಗೆ ಅನುಗುಣವಾಗಿ ಮಾರ್ಪಡಿಸುವವು. ಉಪಾಸನೆಮಾಡುವವರು ಶ್ರದ್ಧಾವಿಶ್ವಾಸಗಳಿಂದ ಎಡೆಬಿಡದೆ ದೀರ್ಘಕಾಲದವರೆಗೆ ಭಾವನೆಮಾಡುತ್ತಲೇ ಇರಬೇಕು. ಶಾಸ್ತ್ರೋಕ್ತವಾದ ಭಾವನೆಯನ್ನು ಸಾಯುವವರೆಗೂ ಮಾಡುತ್ತಿರಬೇಕೆಂದು ವಿಧಿಸಿರುವದಕ್ಕೆ ಇದೇ ಕಾರಣವು.

ಭಾವನೆಗೆ ದೃಷ್ಟಫಲವೆಂದೂ ಅದೃಷ್ಟಫಲವೆಂದೂ ಎರಡು ಫಲಗಳುಂಟು. ಒಂದೇ ಬಗೆಯ ಭಾವನೆಯನ್ನು ಆದರದಿಂದ ದೀರ್ಘಕಾಲದವರೆಗೆ ತಾತ್ಪರ್ಯದಿಂದ ನಡೆಯಿಸಿದರೆ ಉಪಾಸನೆಯ ವಿಷಯವು ತನ್ನ ಎದುರಿಗೆ ಕಣ್ಣಿಗೆ ಕಟ್ಟಿದಂತೆ ಕಾಣುವದು ದೃಷ್ಟಫಲವು. ಇದನ್ನೇ ಸಾಕ್ಷಾತ್ಕಾರವೆನ್ನುವರು. ರಾಮಕೃಷ್ಣಾದಿಗಳನ್ನು ಹೀಗೆ ಧ್ಯಾನಮಾಡುವವರಿಗೆ ಅವರ ಸಾಕ್ಷಾತ್ಕಾರವಾಗಿರುವದೆಂದೂ ಅವರೊಡನೆ ಸಂಭಾಷಣಾದಿಗಳನ್ನೂ ಕೂಡ ಆ ಉಪಾಸಕರು ನಡೆಯಿಸಿರುವರೆಂದೂ ಪುರಾಣ ಗಳಿಂದಲೂ ದೊಡ್ಡವರ ಉಕ್ತಿಗಳಿಂದಲೂ ನಿಮಗೆ ತಿಳಿಯಬಂದಿರಬಹುದು. ಧ್ಯೇಯ, ಧ್ಯಾನ, ಧ್ಯಾತೃ - ಎಂಬ ತ್ರಿಪುಟಿಯು ಹೋಗಿ ಧ್ಯೇಯವೊಂದೇ ಉಳಿಯುವವರೆಗೆ ಮಾಡಿದ ಧ್ಯಾನಕ್ಕೇ ಈ ಸಾಕ್ಷಾತ್ಕಾರವೆಂಬ ಫಲವು ಉಂಟಾಗುತ್ತದೆ. ಒಂದೂರಿನಲ್ಲಿ ನಮ್ಮ ಹತ್ತಿರ ಬಂಧುಗಳೊಬ್ಬರು ಇದ್ದರು. ಅವರಿಗೆ ತಮ್ಮ ಮರಣವು ಇಂಥ ದಿನವೇ ಆಗುವದೆಂದು ಅದು ಹೇಗೋ ತಿಳಿಯಿತು. ಕೂಡಲೆ ಅವರು ತಮ್ಮ ವ್ಯವಹಾರದ ಕೆಲಸಗಳನ್ನೆಲ್ಲ ವ್ಯವಸ್ಥೆ ಮಾಡಿ ಮಕ್ಕಳಿಗೆ ಹೇಳಬೇಕಾದ ಬುದ್ಧಿವಾದಗಳನ್ನೆಲ್ಲ ಹೇಳಿ ಮುಂದೆ ತಮಗೆ ಅಂತ್ಯಕ್ರಿಯೆಯಲ್ಲಿ ಮಾಡಬೇಕಾದದ್ದು ಏನೇನೆಂಬ ತಿಳಿವಳಿಕೆಯನ್ನು ಕೂಡ ತಿಳಿಸಿ ಖರ್ಚುವೆಚ್ಚಗಳ ವ್ಯವಸ್ಥೆಯನ್ನು ನಿರ್ಣಯಿಸಿ ಕೆಲವರು ಆಪ್ತರನ್ನು ಹತ್ತಿರವಿಟ್ಟುಕೊಂಡಿದ್ದು ಸಾಯುವ ದಿನ "ಹೋಗಿಬರಲೆ?" ಎಂದು ಎಲ್ಲಿಗೋ ಪ್ರಯಾಣಹೋಗುವವರಂತೆ ದೇಹವನ್ನು ಬಿಟ್ಟು ಹೋದರು. ಅವರಿಗೆ ಯಾವ ರೋಗವೂ ಬಂದಿರಲೇ ಇಲ್ಲ! ಈ ದೃಷ್ಟಾಂತದಲ್ಲಿ ಸಾವಿನ ಭಾವನೆ ಮಾತ್ರ ಅವರಿಗೆ ಇದ್ದಿತು. ಅದರ ಸಾಕ್ಷಾತ್ಕಾರವೂ ಅವರಿಗೆ ಆಯಿತು.

ಆದರೆ ಪರಮೇಶ್ವರನ ಭಾವನೆಯನ್ನೇ ಅವರು ಮಾಡಿದ್ದರೆ ಜನ್ಮವು ಸಾರ್ಥಕವಾಗುತ್ತಿತ್ತು. ಸಾಯುವಾಗ ಪರಮೇಶ್ವರನ ಸಾಕ್ಷಾತ್ಕಾರವೇ ಆಗಿ ಆತನ ಸ್ಥಾನವೇ ಸಿಕ್ಕಿಬಿಡುತ್ತಿತ್ತು! ಆದ್ದರಿಂದ ಪರಮಾತ್ಮಭಾವನೆಯನ್ನು ಮಾಡುವದರ ಪ್ರಯೋಜನವೇನೆಂಬುದು ನಿಮಗೆಲ್ಲ ಸ್ಪಷ್ಟವಾಗುತ್ತದೆ. ಮನುಷ್ಯನು ಹುಟ್ಟಿದ್ದಕ್ಕೆ ಪರಮೇಶ್ವರನ ಚಿಂತೆಯನ್ನು ಮನಸ್ಸಿಗೆ ಹತ್ತಿಸಿಕೊಳ್ಳಬೇಕು; ಅದೇ ಜನ್ಮದ ಸಾಫಲ್ಯವು. ಮುಂದೆ ಗೀತೆಯಲ್ಲಿ ಈ ಜಾತಿಯ ವಿಷಯವು ಬರುತ್ತದೆ. ಆದ್ದರಿಂದ ಈ ಅರ್ಧಘಂಟೆಯನ್ನು ಇದರ ವಿವರಕ್ಕಾಗಿ ವಿನಿಯೋಗಿಸಿರುತ್ತೇನೆ.

**ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತನ್ತಿ ಯೇ।**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ॥(೭-೨೯)**
**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥(೭-೩೦)**

"ಮುಪ್ಪುಸಾವುಗಳ ಬಿಡುಗಡೆಗಾಗಿ ನನ್ನನ್ನು ಆಶ್ರಯಿಸಿ ಯಾರು ಪ್ರಯತ್ನ ಮಾಡುವರೋ ಅವರು ಆ ಬ್ರಹ್ಮವನ್ನೂ ಅಧ್ಯಾತ್ಮಾದಿಗಳನ್ನೂ ತಿಳಿಯುವರು." "ಮುಪ್ಪುಸಾವುಗಳು ಹುಟ್ಟಿದ ಪ್ರಾಣಿಗಳಿಗೆಲ್ಲ ಉಂಟು. ಹೀಗಿರುವಲ್ಲಿ ಅವುಗಳಿಂದ ಬಿಡುಗಡೆ ಹೇಗೆ? ಎಂದು ಯಾರಾದರೂ ಶಂಕಿಸಬಹುದು. ಆದರೆ ಅಧ್ಯಾತ್ಮವಿದ್ಯೆಯ ದೃಷ್ಟಿಯಿಂದ ನೋಡಿದರೆ ನಮಗೆ ಮುಪ್ಪುಸಾವುಗಳಿರುವವು - ಎಂಬುದೇ ತಪ್ಪು ತಿಳಿವಳಿಕೆ." ಏಕೆಂದರೆ ಆತ್ಮನಿಗೆ ಶರೀರವುಂಟೆಂಬುದೇ ಸುಳ್ಳು. ಕನಸಿನಲ್ಲಿ ಕಾಣುವ ಶರೀರವೂ ಅದರ ಧರ್ಮಗಳೂ ಹೇಗೆ ಎಂದೆಂದಿಗೂ ನಮಗೆ ಸೇರಿಯೇ ಇಲ್ಲವೋ ಹಾಗೆ ಈ ಎಚ್ಚರದ ಶರೀರವೂ ಇದರ ಧರ್ಮಗಳೂ ಬರಿಯ ತೋರಿಕೆಯಾಗಿರುವದರಿಂದ ಇವುಗಳು ನಮಗೆ ಸಂಬಂಧಿಸಿಯೇ ಇರುವದಿಲ್ಲ. ಈ ಆತ್ಮನು ಹುಟ್ಟುವದಿಲ್ಲ, ಸಾಯುವದಿಲ್ಲ; ಹಳೆಯ ಬಟ್ಟೆಯನ್ನು ಬಿಸುಟು ಹೊಸ ಬಟ್ಟೆಯನ್ನು ಧರಿಸುವವನಿಗೆ ಸ್ವರೂಪದಲ್ಲಿ ಯಾವ ವಿಕಾರವೂ ಆಗದೆ ಇರುವಂತೆಯೇ ಆತ್ಮನಿಗೆ ಮುಪ್ಪು ಸಾವು ಮುಂತಾದ ಯಾವ ವಿಕಾರವೂ ಇಲ್ಲವೇ ಇಲ್ಲ. ಇದನ್ನು ಹಿಂದೆ ಜ್ಞಾನದೃಷ್ಟಿಯಿಂದ ಪ್ರತಿಪಾದಿಸಿದ್ದಾಗಿದೆ. ಆದರೆ ಈಗ ಇಲ್ಲಿ ಉಪಾಸನಾದೃಷ್ಟಿಯಿಂದ ಇದನ್ನು ಪ್ರತಿಪಾದಿಸಲಾಗುತ್ತದೆ. ಈ ದೃಷ್ಟಿಯಲ್ಲಿ ದೇಹಪ್ರಯುಕ್ತವಾದ ಮುಪ್ಪು ಸಾವುಗಳು ನಮಗೆ ಉಂಟಾದರೂ ಜರಾಮರಣರಹಿತನಾದ ಪರಮಾತ್ಮನ ಧ್ಯಾನವನ್ನು ಮಾಡಿದರೆ ಆತನನ್ನೇ ಸೇರಿಬಿಡುವೆವು. ಆಮೇಲೆ ನಮಗೆ ಶಾಶ್ವತಬ್ರಹ್ಮಲೋಕದ ಪ್ರಾಪ್ತಿಯಾಗಿಬಿಡುವದು; ಅಲ್ಲಿಂದ ಮುಂದಕ್ಕೆ ನಮಗೆ ಯಾವ ಮುಪ್ಪುಸಾವುಗಳೂ

ಇರುವದಿಲ್ಲ. ನನ್ನ ಫೋಟೋವಿಗೆ ಗೆದ್ದಲು ಹಿಡಿದರೆ ನನ್ನ ದೇಹಕ್ಕೇನಾದರೂ ಕೊರತೆಯಾದೀತೆ? ಇಲ್ಲ. ಇದರಂತೆ ಹುಸಿತೋರಿಕೆಯಾದ ದೇಹವು ಬಂದರೆ, ಹೋದರೆ, ಮುಪ್ಪಾದರೆ ಅಥವಾ ಸತ್ತರೆ ನನಗೆ ಯಾವ ಕೊರತೆ? - ಇದೀಗ ಜ್ಞಾನಿಯ ದೃಷ್ಟಿ.

ಈ ದೃಷ್ಟಿಯನ್ನು ಅವಲಂಬಿಸುವದು ಯಾರಿಗೆ ಕಷ್ಟವಾಗಿರುತ್ತದೆಯೋ ಅವರು ಈ ಅಭಿಪ್ರಾಯವನ್ನು ನಂಬಿಕೊಂಡರೆ ಸಾಕು. "ನನ್ನ ಆತ್ಮನಿಗೆ ಯಾವ ಮುಪ್ಪುಸಾವುಗಳೂ ಇಲ್ಲ" ಎಂಬ ಭಾವನೆಯನ್ನು ಬಲಪಡಿಸಿಕೊಂಡು ಪರಮಾತ್ಮನ ಚಿಂತನೆಯಲ್ಲಿಯೇ ಕಾಲವನ್ನು ಕಳೆದರೆ ಅಂಥವರಿಗೆ ಆ ಉಪಾಸನೆಯ ಫಲವಾಗಿ ಜರಾಮರಣರಹಿತನಾದ ಪರಮಾತ್ಮನ ಸಾಯುಜ್ಯವು ದೊರೆಯುವದು. ಪರಮಾರ್ಥ ಸತ್ಯವಾಗಿರುವ ಪರಮಾತ್ಮನೇ ನಮ್ಮ ಆತ್ಮನು ಎಂಬುದನ್ನು ಜ್ಞಾನದಿಂದ ಅರಿತರೆ ಈಗಲೇ ಇಲ್ಲಿಯೇ ನಮಗೆ ಜರಾಮರಣಗಳಿಂದ ಬಿಡುಗಡೆಯಾಗಿರುತ್ತದೆ. ಇದು ದೃಷ್ಟಫಲವಾಗಿರುವದರಿಂದ ಇದರ ವಿಷಯಕ್ಕೆ ಯಾವ ಶಂಕೆಯೂ ಬರುವಂತೆ ಇರುವದಿಲ್ಲ. ಆದರೆ ಉಪಾಸನೆಯಿಂದ ಆಗುವ ಪರಲೋಕದ ಫಲಕ್ಕೆ ಶಾಸ್ತ್ರವಾಕ್ಯದಲ್ಲಿ ಶ್ರದ್ಧೆಯಿರಬೇಕಾಗುತ್ತದೆ. ಪರಮೇಶ್ವರನ ಭಾವನೆಯಿಂದ ಪರಮೇಶ್ವರಸಾಯುಜ್ಯ ವಾಗುವದೆಂಬುದು ನಂಬುವದಕ್ಕೆ ಅಷ್ಟೇನೂ ಕಷ್ಟವಾದ ಉಪದೇಶವಲ್ಲ. ಪರಲೋಕದ ಸುಖಕ್ಕಾಗಿ ಜನ್ಮಾಂತರದಲ್ಲಿ ತಮಗೆ ದುಃಖವಿಲ್ಲದೆ ಸುಖವಾಗಿ ಜೀವನವಾಗುವದಕ್ಕಾಗಿ ಆಸ್ತಿಕರು ಪಾಪವನ್ನು ಬಿಟ್ಟು ಪುಣ್ಯಕರ್ಮಗಳನ್ನು ಮಾಡುವಂತೆ ಉಪಾಸನೆಯಲ್ಲಿಯೂ ತೊಡಗುವರೆಂದು ನಾವು ಧಾರಾಳವಾಗಿ ನಂಬಬಹುದು.

ಇದಂತಿರಲಿ. ಪರಮಾತ್ಮನೇ ತನ್ನ ಆತ್ಮನು ಎಂಬ ಜ್ಞಾನವುಳ್ಳವನಿಗೆ ಅಥವಾ ನಂಬಿಕೆಯುಳ್ಳವನಿಗೆ ಮೇಲೆ ಹೇಳಿದ ಫಲಗಳಲ್ಲದೆ ಮತ್ತೆ ಯಾವದಾದರೂ ವ್ಯಾವಹಾರಿಕವಾದ ದೃಷ್ಟಫಲವುಂಟೆ? ಎಂದರೆ ಉಂಟು. ಅಂಥ ಜ್ಞಾನವೂ ಧ್ಯಾನವೂ ಆಯಾ ವ್ಯಕ್ತಿಯ ಸ್ವರೂಪವನ್ನೇ ಬದಲಾಯಿಸಿಬಿಡುತ್ತದೆ. ಇರುವಷ್ಟಕ್ಕೆ ತೃಪ್ತಿಪಡದೆ, ಇಲ್ಲದ್ದನ್ನು ಮನಸ್ಸಿಗೆ ಹತ್ತಿಸಿಕೊಂಡು ವ್ಯಥೆಪಡುತ್ತಿರುವವರಿಗೆ ಆ ಕೊರಗಿನಿಂದಲೇ ಮುಪ್ಪು ಬೇಗನೆ ಬಂದುಬಿಡುತ್ತದೆ. **ಮನಸ್ಸಿನಲ್ಲಿ ಉತ್ಸಾಹವಿರುವ ದೆಂಬುದೇ ಒಂದು ಆರೋಗ್ಯ ಒಂದು ಬಲವು. ಚಿಂತೆಯೇ ಮುಪ್ಪು, ಸಂತೋಷವೇ ಯೌವನ** - ಎಂಬ ಗಾದೆಯು ಅಕ್ಷರಶಃ ನಿಜವಾಗಿರುತ್ತದೆ. ಮಹಾತ್ಮಾಗಾಂಧಿಯವರು ವಯಸ್ಸಿನಲ್ಲಿ ಮುಂದುವರಿದವರಾಗಿದ್ದರೂ ಉಪ್ಪಿನ ಕಾನೂನನ್ನು ಮುರಿಯುವದಕ್ಕೆಂದು ಕೈಗೊಂಡ ದೂರ ಪ್ರಯಾಣದ ಉತ್ಸಾಹವು ಎಂಥದ್ದು! ಈ ಲೋಕದಲ್ಲಿ ಜನರಿಗೆ ಬಂದೊದಗುವ ಮುಪ್ಪನ್ನು ಎರಡು

ಬಗೆಯಾಗಿ ವಿಂಗಡಿಸಬೇಕು. ಸರಿಯಾಗಿ ಕೆಲಸಮಾಡದೆ ಇಂದ್ರಿಯಗಳನ್ನು ಹರಿಯಬಿಡುವವರಿಗೆ ಬಂದು ಆಕ್ರಮಿಸಿಕೊಳ್ಳುವ ಮುಪ್ಪು ಒಂದು ವಿಧ. ಶರೀರವೂ ಅದರ ಅಂಗಗಳೂ ಕೆಲಸಮಾಡಿ ಪ್ರಕೃತಿನಿಯಮಕ್ಕನುಗುಣವಾಗಿ ಸವೆದದ್ದರಿಂದ ಆಗುವ ಮುಪ್ಪು ಮತ್ತೊಂದು ವಿಧ. ಸದ್ಯೋಜಾತನಾದ ಪರಮಾತ್ಮನೇ ತನ್ನ ಆತ್ಮನೆಂದು ನಂಬಿರುವ ಉಪಾಸಕರಿಗೆ ಸ್ವಾಭಾವಿಕರೀತಿಯಿಂದ ಮುಪ್ಪು ಬಂದರೂ ಯೌವನದ ಕಳೆಯಿರುತ್ತದೆ. ಇವರಿಗೆ ರೋಗಾದಿಗಳೂ ಬರಬಹುದು; ಆದರೆ ಇವರಿಗೆ ಉಪಾಸನೆಯಿಂದ ಬಂದ ಆತ್ಮಬಲವು ಎಂದಿಗೂ ಕುಗ್ಗುವುದಿಲ್ಲವಾದ್ದರಿಂದ ಇವರು ರೋಗದ ದಶೆಯಲ್ಲಿ ಮಾಡುವ ಕೆಲಸವೇನೂ ಕಡಿಮೆಯಾಗಿರುವದಿಲ್ಲ. ನಿರ್ಬಲರಿಗೆ ಬಲವು ರಾಮನು, ನಿರ್ಧನರಿಗೆ ಧನವು ರಾಮನು. ಮಾನವರಿಗೆ ಯಾವ ಯಾವ ಕೊರತೆ ಇರುವದೋ ಅದನ್ನೆಲ್ಲ ಪರಿಪೂರ್ಣಗೊಳಿಸಿಕೊಡುವಾತನು ರಾಮನು. ಆ ಪರಮೇಶ್ವರನನ್ನೇ ಚಿಂತಿಸುತ್ತಾ ಆತನೇ ತನ್ನ ನಿಜವಾದ ಆತ್ಮನೆಂಬ ಭಾವನೆಯನ್ನು ಬೆಳೆಸಿಕೊಳ್ಳುವವರಿಗೆ ವ್ಯವಹಾರದಲ್ಲಿ ಕೂಡ ಉತ್ತಮಫಲವಾದೀತು! ಮನುಷ್ಯನಿಗೆ ನಾನು ಇಂಥವನ ಮಗನು ಎಂಬ ಸಂಕುಚಿತಭಾವನೆಯಿಂದ ಈ ಶರೀರದ ರೋಗವೂ ಮುಪ್ಪೂ ಮರಣವೂ ನನ್ನವು ಎಂಬ ನಂಬಿಕೆಯು ದೃಢವಾಗಿ ಬಿಟ್ಟಿರುತ್ತದೆ. ಆದರೆ ಸರ್ವಾತ್ಮನಾದ ಭಗವಂತನೇ ನನ್ನ ಆತ್ಮನು ಎಂಬ ಉಪಾಸನೆಯು ಬಲವಾದವನಿಗೆ ಜೈಲಿನಿಂದ ಬಿಡುಗಡೆಯಾಗಿರುವ ಬಂದಿಯಂತೆ ಈ ಜರಾಮರಣಗಳ ಭಾವನೆಯ ಕಟ್ಟು ಸಡಿಲವಾಗಿಬಿಡುತ್ತದೆ.

ಕಲ್ಪಿತವಾಗಿರುವ ಈ ಒಂದು ಜನ್ಮದ ಆತ್ಮನು ನಾನು ಎಂಬ ವಿಶ್ವಾಸವಿರುವವನಿಗೇ ವ್ಯವಹಾರದಲ್ಲಿ ಎಷ್ಟೋ ಅನುಕೂಲಗಳುಂಟಾಗುತ್ತಿರುವಾಗ ಪರಮಾತ್ಮನ ಭಾವನೆಯಿಂದ ಎಂಥ ಫಲವಾಗಬೇಕು! ಆದ್ದರಿಂದ ಈ ಉಪಾಸನೆಯನ್ನು ನಾವು ಅವಲಂಬಿಸಬೇಕು. ಆಗ್ಗೆ ನಿಜವಾದ ಸ್ವಾತಂತ್ರ್ಯವೂ ಸ್ವಾರಾಜ್ಯವೂ ನಮ್ಮವಾಗುವವು. 'ಶ್ರೀರಾಮ' ಎಂಬ ಪರಮೇಶ್ವರನ ನಾಮವನ್ನು ಪತ್ರಗಳಲ್ಲಿ ಬರೆದು ಮುಂದಿನ ವ್ಯವಹಾರದ ವಿಷಯಗಳನ್ನು ನಾವು ಬರೆಯುವದಕ್ಕೆ ಆರಂಭಿಸುವೆವು; ಇಷ್ಟು ಮಾತ್ರದಿಂದಲೇ ನಮ್ಮ ಕಾರ್ಯವು ನಿರ್ವಿಘ್ನವಾಗಿ ನೆರವೇರುವದೆಂದೂ ಯಾವ ಕಷ್ಟನಿಷ್ಠುರಗಳೂ ಇಲ್ಲದೆ ಲಾಭವೂ ಜಯವೂ ನಮಗೆ ವಶವಾಗುವವೆಂದೂ ಬಲ್ಲವರು ಹೇಳುತ್ತಾರೆ. ಇನ್ನು ಪರಮಾತ್ಮನನ್ನೇ ಹೃದಯದಲ್ಲಿಟ್ಟುಕೊಂಡಿರುವವರಿಗೆ ಆಗುವ ಫಲವನ್ನು ಹೇಳುವದೇನಿದೆ? ಯಾರ ಹೃದಯದಲ್ಲಿ ಮಂಗಲಾಯತನನಾದ ಶ್ರೀಹರಿಯು ನೆಲಸಿರುವನೋ ಅವರಿಗೆ ಯಾವಾಗಲೂ ಲಾಭವು, ಯಾವಾಗಲೂ ಎಲ್ಲೆಲ್ಲಿಯೂ ಜಯವು ಆಗುತ್ತಿರುವದು - ಎಂದು ಸ್ಮೃತಿವಚನವಿದೆ. ಏಕೆಂದರೆ

ಆಗ 'ನಾನು' ಪರಮೇಶ್ವರನ ವ್ಯಾಪಾರದಲ್ಲಿ ಗಿರಾಕಿಯಲ್ಲ; ನಾನೆಂಬುದು ಅಳಿಸಿ ಹೋಗಿ ಸಾಧಕನು ಪರಮೇಶ್ವರನ ಅಂಗಡಿಯ ಪಾಲುದಾರನಾಗಿಬಿಡುವನು. ಪರಮೇಶ್ವರನ ಅಂಗಡಿಯಲ್ಲಿ ಯಾವಾಗಲೂ ಲಾಭವೇ, ಎಂದಿಗೂ ನಷ್ಟವಾಗುವ ಹಾಗಿಲ್ಲ. ಆ ಅಂಗಡಿಯ ಪಾಲುದಾರನಿಗೆ ನಷ್ಟವು ಹೇಗಾಗಬೇಕು? ಆಗ ಅವನು ಅಜೇಯನಾಗಿಬಿಡುವನು; ಇನ್ನು ಸೋಲು ಹೇಗೆ ಆಗಬೇಕು? ಆಗ ಈ ಜೀವನದಲ್ಲಿ ಆಗುವ ಜನ್ಮ, ರೋಗ, ಜರೆ, ಮರಣ - ಮುಂತಾದ ಯಾವ ಬಾಧೆಗಳೂ ತೋರಿಕೊಳ್ಳಲಾರವು.

ಮುಪ್ಪುಸಾವುಗಳಿಂದ ಬಿಡುಗಡೆಯಾಗುವದಕ್ಕೆ ನಾವೇ ಸ್ವತಂತ್ರವಾಗಿ ಪ್ರಯತ್ನಮಾಡಿದರೆ ಅವುಗಳಿಂದ ನಮಗೆ ಬಿಡುಗಡೆಯಾಗುವದು ಸಾಧ್ಯವಿಲ್ಲ. ಆದರೆ ಪರಮೇಶ್ವರನನ್ನೇ ಆಶ್ರಯಿಸಿ ಯಾರು ಪ್ರಯತ್ನಿಸುವರೋ ಅವರಿಗೆ ಯಾವದೂ ಅಸಾಧ್ಯವಲ್ಲ. ಅವರಿಗೆ ಬ್ರಹ್ಮವೂ ಅಧ್ಯಾತ್ಮವೂ ಅಧಿಭೂತವೂ ಅಧಿದೈವವೂ ಅಧಿಯಜ್ಞವೂ ತಿಳಿಯುತ್ತದೆ: ಅವರು ಸಾಯುವ ಕಾಲದಲ್ಲಿಯೂ ಆ ಪರಮಾತ್ಮನನ್ನೇ ಚಿಂತಿಸುತ್ತಾ ಆತ್ಮನನ್ನೇ ಸೇರುತ್ತಾರೆ. ಇದು ಹೇಗೆಂಬುದು ಮುಂದಿನ ಅಧ್ಯಾಯದಲ್ಲಿ ವಿಶದವಾಗುತ್ತದೆ.

## ೫೭. ಪರಮೇಶ್ವರನ ಭಾವನೆ ೮-(೧-೬)
(೭-೯-೪೭)

ಉಪಾಸನೆಗೂ ನಿದಿಧ್ಯಾಸನಕ್ಕೂ ಇರುವ ತಾರತಮ್ಯವನ್ನು ಹಿಂದಿನ ದಿನ ವಿವರಿಸಿರುತ್ತೇನೆ. ಉಪಾಸನೆಯೆಂದರೆ ಭಾವನಾರೂಪವಾದ ಧ್ಯಾನವು; ಅದನ್ನು ಬಲವಾಗಿ ಸಾಧನೆಮಾಡಿದರೆ ವಸ್ತುವು ಇಲ್ಲಿಯೇ ಇದ್ದಂತೆ ಪ್ರತ್ಯಕ್ಷರೂಪವಾಗಿ ನಮಗೆ ಅರಿವಾಗುವದು. ಅದಕ್ಕೆ ಸಾಕ್ಷಾತ್ಕಾರವೆಂದು ಹೆಸರು. ಈ ಸಾಕ್ಷಾತ್ಕಾರದ ಫಲವಾಗಿ ಕಾಲಾಂತರದಲ್ಲಿ ಲೋಕಾಂತರದಲ್ಲಿ ಧ್ಯೇಯವಸ್ತುವಿನ ನಿಜವಾದ ಪ್ರಾಪ್ತಿಯಾಗುವದು. ಆದರೆ ನಿದಿಧ್ಯಾಸನದ ಪರಿ ಹೀಗಲ್ಲ, ಯಾವ ವಸ್ತುವಿನ ತತ್ತ್ವವನ್ನು ಅರಿತುಕೊಳ್ಳಬೇಕೋ ಅದರಲ್ಲಿಯೇ ಮನಸ್ಸನ್ನು ಏಕಾಗ್ರತೆಗೊಳಿಸಿದರೆ ಅದು ಇದ್ದಂತೆ ನಮ್ಮ ಅರಿವಿಗೆ ವಿಷಯವಾಗುತ್ತದೆ. ಶಬ್ದವಿಲ್ಲದಿದ್ದರೂ ಶಬ್ದವು ಕೇಳಬರುವದಕ್ಕೂ, ಶಬ್ದವು ದೂರದಲ್ಲಿದ್ದು ನಮ್ಮ ಕಿವಿಗೆ ಕ್ರಮಕ್ರಮವಾಗಿ

ಕೇಳಬರುವದಕ್ಕೂ ಇರುವ ತಾರತಮ್ಯವೇ ಈ ಎರಡು ಬಗೆಯ ಅರಿವುಗಳಿಗೂ ಇರುತ್ತದೆ. ಶ್ರೀರಾಮಾನುಜಾಚಾರ್ಯರು ಶ್ರೀಶಂಕರಾಚಾರ್ಯರು ಇಬ್ಬರೂ ಜ್ಞಾನದಿಂದ ಮೋಕ್ಷವಾಗುವದೆಂಬ ಸಿದ್ಧಾಂತವನ್ನು ಒಪ್ಪಿರುತ್ತಾರೆ. ಆದರೆ ಜ್ಞಾನವೆಂದರೆ ಏನು?- ಎಂಬ ಬಗ್ಗೆ ಇಬ್ಬರಿಗೂ ಮತಭೇದವಿರುತ್ತದೆ. ರಾಮಾನುಜರ ಮತದಲ್ಲಿ ಉಪಾಸನೆಗಿಂತ ಬೇರೆಯಾದ ಜ್ಞಾನವನ್ನೇ ಶಾಸ್ತ್ರದಲ್ಲಿ ಹೇಳಿರುವದಿಲ್ಲ. ಪರಮೇಶ್ವರನನ್ನು ಧ್ಯಾನಮಾಡಿ ಕಾಲಾಂತರದಲ್ಲಿ ಲೋಕಾಂತರದಲ್ಲಿ ಪರಮೇಶ್ವರನ ಸಾಮ್ಯವನ್ನು ಪಡೆಯುವದೇ ಮುಕ್ತಿ ಎಂಬುದು ಆ ಆಚಾರ್ಯರ ಅಭಿಪ್ರಾಯವು. ಆದರೆ ಶಂಕರಾಚಾರ್ಯರ ಅಭಿಪ್ರಾಯವೇನೆಂದರೆ; ಉಪಾಸನೆಯೆಂಬ ಭಾವನಾರೂಪವಾದ ಜ್ಞಾನವನ್ನು ಶಾಸ್ತ್ರದಲ್ಲಿ ಹೇಳಿದೆ; ಆದರೆ ಅದಕ್ಕಿಂತ ಮೇಲಿನದಾಗಿ ನಿದಿಧ್ಯಾಸನದಿಂದ ಸಿಕ್ಕುವ ವಸ್ತುತತ್ತ್ವಜ್ಞಾನವೂ ಒಂದಿದೆ. ಈ ಜ್ಞಾನದಿಂದಲೇ ಮುಕ್ತಿಯೆಂಬುದು ಆ ಆಚಾರ್ಯರ ಮತವು. ಈ ಇಬ್ಬರ ಮತದಲ್ಲಿ ಇವರದ್ದು ಸರಿ, ಅವರದ್ದು ಸರಿ- ಎಂದು ಜಗಳವಾಡುವದರಿಂದ ಯಾವ ಪ್ರಯೋಜನವೂ ಆಗುವದಿಲ್ಲ. ಸಾಧಕರಾದವರು ಶ್ರದ್ಧೆಯಿಂದ ಸಾಧನಮಾಡಿ ತಾವುತಾವೇ ಸ್ವಂತ ಅನುಭವದಿಂದ ಒಂದು ನಿರ್ಧಾರಕ್ಕೆ ಬರಬೇಕಾಗಿರುತ್ತದೆ.

ಇದಂತಿರಲಿ. ಈ ಎಂಟನೆಯ ಅಧ್ಯಾಯದಲ್ಲಿ ನಾವು ವಿಚಾರಮಾಡುತ್ತಿರುವದು ಉಪಾಸನಾರೂಪವಾದ ಜ್ಞಾನವೆಂಬುದು ಸರ್ವಸಮ್ಮತವಾಗಿರುತ್ತದೆ. ಹಿಂದಿನ ಅಧ್ಯಾಯದ ಕೊನೆಯಲ್ಲಿ ಸೂತ್ರರೂಪವಾಗಿ ಹೇಳಿರುವ ಎರಡು ಶ್ಲೋಕಗಳ ವಿಸ್ತಾರವು ಇಲ್ಲಿರುತ್ತದೆ. ಆದ್ದರಿಂದ ನಾವು ಭಾವನಾದೃಷ್ಟಿಯಿಂದಲೇ ಇಲ್ಲಿರುವ ವಿಷಯಗಳನ್ನು ಗ್ರಹಿಸಬೇಕು. ಆದ್ದರಿಂದ ಇಲ್ಲಿ ಶ್ರದ್ಧೆಗೆ ಹೆಚ್ಚಿನ ಸ್ಥಾನವಿರುತ್ತದೆ. ಯಾರು ಶ್ರದ್ಧೆಯಿಂದ ಉಪಾಸನೆಮಾಡುವರೋ ಅವರಿಗೆ ಈ ಲೋಕದಲ್ಲಿ ಉಪಾಸನೆಯ ಫಲವಾಗಿ ಸಾಕ್ಷಾತ್ಕಾರವೂ ಅದರಿಂದಾಗುವ ಶಾಂತಿಯೂ ಅನುಭವಕ್ಕೆ ಬರುವವು; ಪರಲೋಕದಲ್ಲಿ ಶಾಸ್ತ್ರೋಕ್ತವಾದ ಪರಮಫಲವು ಲಭಿಸುವದು.

ಅರ್ಜುನನು ಹಿಂದಿನ ಅಧ್ಯಾಯದಲ್ಲಿ ಹೇಳಿರುವ ವಿಷಯದ ವಿವರಣೆಯನ್ನು ತಿಳಿಯಬೇಕೆಂದು ಪ್ರಶ್ನೆಮಾಡುತ್ತಿದ್ದಾನೆ. "ಎಲೈ ಪುರುಷೋತ್ತಮನೆ, ಆ ಬ್ರಹ್ಮವೆಂಬುದು ಯಾವದು? ಅಧ್ಯಾತ್ಮವೆಂದರೆ ಯಾವದು? ಕರ್ಮವೆಂದರೆ ಯಾವದು? ಅಧಿಭೂತ, ಅಧಿದೈವ, ಇವುಗಳು ಯಾವುವು? ಅಧಿಯಜ್ಞನೆಂದರೆ ಯಾರು? ಅವನು ಹೇಗೆ ಅಧಿಯಜ್ಞನು? ಜನರು ಸಾಯುವಕಾಲದಲ್ಲಿ ನಿನ್ನನ್ನು ಚಿಂತಿಸಬೇಕೆಂದೆಯಲ್ಲ, ಹೇಗೆ ಚಿಂತಿಸಬೇಕು?" ಎಂಬುದು ಅವನ ಪ್ರಶ್ನೆಗಳು. ಇದಕ್ಕೆ ಭಗವಂತನು ಕೊಟ್ಟಿರುವ ಉತ್ತರವನ್ನು ಸ್ವಲ್ಪ ವಿವರವಾಗಿ ತಿಳಿದುಕೊಳ್ಳೋಣ.

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥** (೮-೩)
**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥**(೮-೪)

ಬ್ರಹ್ಮವೆಂದರೆ ಪರವಸ್ತುವಾದ ಅಕ್ಷರತತ್ತ್ವವು. ನಾಶವಾಗದ ಪರಮಾರ್ಥ ತತ್ತ್ವವು. ಹಿಂದೆ ಎರಡನೆಯ ಅಧ್ಯಾಯವೇ ಮುಂತಾದ ಕಡೆಗಳಲ್ಲಿ ನಮ್ಮಗಳೆಲ್ಲರ ನಿಜವಾದ ಆತ್ಮನು ಪರಮಾತ್ಮನೆಂತಲೂ ಅವನಲ್ಲಿ ಜನ್ಮವೃದ್ಧಿಕ್ಷಯಾದಿವಿಕಾರಗಳು ಇಲ್ಲವೆಂತಲೂ ಯುಕ್ತಿಪೂರ್ವಕವಾಗಿ ತೋರಿಸಿಕೊಟ್ಟಿತ್ತು. ಇದು ಯಾರ ಅನುಭವಕ್ಕೆ ನೇರಾಗಿ ತಿಳಿದುಬಂದಿಲ್ಲವೋ ಅವರು ಶಾಸ್ತ್ರವಚನದ ಆಧಾರದಿಂದ ನಾಶವಾಗದೆ ಇರುವ, ಯಾವ ವಿಕಾರವೂ ಇಲ್ಲದ ತತ್ತ್ವವೇ ಬ್ರಹ್ಮವು— ಎಂದು ನಂಬಬೇಕು. ಯಾರು ಭಗವಂತನನ್ನು ಆಶ್ರಯಿಸಿ ಜರಾಮರಣಗಳಿಂದ ಬಿಡುಗಡೆಯಾಗಬೇಕೆಂದು ಪ್ರಯತ್ನಿಸುತ್ತಿರುವರೋ ಅವರು ಮೊಟ್ಟಮೊದಲು ಈ ನಂಬಿಕೆಯನ್ನು ಮನಸ್ಸಿಗೆ ಹತ್ತಿಸಿಕೊಳ್ಳಬೇಕು, ಅಧ್ಯಾತ್ಮವೆಂದರೆ ಸ್ವಭಾವವು, ಅಧ್ಯಾತ್ಮವೆಂಬ ಶಬ್ದಕ್ಕೆ ಸ್ವಲ್ಪ ವಿವರಣೆ ಅವಶ್ಯವು.[1] **ಅಧ್ಯಾತ್ಮ** ಎಂದರೆ ಶರೀರದೊಳಗೆ ಇರುವ ತತ್ತ್ವವು. ಶರೀರದ ಹೊರಗೆ ಇರುವದು ಅಧಿಭೂತವು. ಹೊರಗಿನ ವಿಷಯಗಳನ್ನು ತಿಳಿಯುವದಕ್ಕೆ ಸಾಧಕವಾಗಿರುವ ಸೂರ್ಯ, ಚಂದ್ರ - ಮುಂತಾದವು ಅಧಿದೈವ. ಹೀಗೆ ಪ್ರಪಂಚವನ್ನು ಮೂರಾಗಿ ವಿಂಗಡಿಸಿ ತಿಳಿಸುವದು ಆಸ್ತಿಕದರ್ಶನಗಳಲ್ಲಿ ಒಂದು ಕ್ರಮವು. ನಮ್ಮೊಳಗಿನ ತತ್ತ್ವವನ್ನು ತಿಳಿದರೆ ಪ್ರಪಂಚವೇ ಬೇರೆ ರೀತಿಯಲ್ಲಿ ಕಾಣುವದು. ನಮ್ಮ ಒಳಗಿರುವ ಮನಸ್ಸು, ಪ್ರಾಣ, ಬುದ್ಧಿ - ಇವೆಲ್ಲಕ್ಕಿಂತಲೂ ಒಳಗಿರುವ, ಸಾಕ್ಷಿಚೈತನ್ಯವೇ ನಮ್ಮೆಲ್ಲರಿಗೂ ಆತ್ಮನಾಗಿರುತ್ತದೆ ಎಂಬುದನ್ನು ತಿಳಿದರೆ ನಮ್ಮ ದೃಷ್ಟಿಕೋಣವು ಬದಲಾಯಿಸುವದು. ನಮ್ಮ ಸುತ್ತಮುತ್ತಲಿನ ಪ್ರಾಣಿಗಳಲ್ಲಿ ಹೆಚ್ಚಿನ ಪ್ರೇಮವುಂಟಾಗುವದು. **ಈ ಅಧ್ಯಾತ್ಮತತ್ತ್ವವನ್ನು ಜನರಿಗೆ ತಿಳಿಯಪಡಿಸುವದು ಪ್ರಕಾಶವು; ಈ ನಮ್ಮ ಕಾರ್ಯಾಲಯವು ಅಧ್ಯಾತ್ಮವಿದ್ಯೆಯ ಪ್ರಚಾರಕ್ಕಾಗಿಯೇ ಸ್ಥಾಪಿತವಾಗಿರುವದರಿಂದ ಇದಕ್ಕೆ ಅಧ್ಯಾತ್ಮಪ್ರಕಾಶಕಾರ್ಯಾಲಯ ಎಂದು ಹೆಸರು.**

ಇದಂತಿರಲಿ, ಪ್ರಕೃತದಲ್ಲಿ ಉಪಯೋಗಿಸಿರುವ ಬ್ರಹ್ಮ ಅಧ್ಯಾತ್ಮ - ಮುಂತಾದ ಶಬ್ದಗಳೆಲ್ಲವೂ ಪಾರಿಭಾಷಿಕವಾಗಿರುತ್ತವೆ; ಭಗವಂತನೇ ಅವುಗಳ ಅರ್ಥವನ್ನು ಇಲ್ಲಿ ವಿವರಿಸುತ್ತಿದ್ದಾನೆ. ವ್ಯಾಕರಣವೇ ಮುಂತಾದ ಶಾಸ್ತ್ರಗಳಲ್ಲಿ ಗುಣ,

---

[1] ಅಧ್ಯಾತ್ಮವೆಂದರೇನು ? ಎಂಬ ಹೆಸರಿನ ಪ್ರಶ್ನೋತ್ತರರೂಪವಾದ ಚಿಕ್ಕ ಪುಸ್ತಕವನ್ನು ಶ್ರೀ ಶ್ರೀಗಳವರು ಬರೆದಿರುತ್ತಾರೆ. ಅದು ಈಗಲೂ ಸಿಗುತ್ತದೆ.

ವೃದ್ಧಿ, ನದೀ - ಮುಂತಾದ ಸಂಜ್ಞಾಶಬ್ದಗಳನ್ನು ಒಂದೊಂದು ಗೊತ್ತಾದ ಅರ್ಥದಲ್ಲಿ ಬಳಸಿರುವಂತೆಯೇ ಇಲ್ಲಿಯೂ ಬ್ರಹ್ಮಾದಿಶಬ್ದಗಳನ್ನು ಉಪಯೋಗಿಸಿರುತ್ತದೆ. ಬ್ರಹ್ಮವೆಂದರೆ ದೊಡ್ಡದು; ಆದರೆ ಯಾವದಾದರೊಂದು ದೊಡ್ಡಪದಾರ್ಥವನ್ನು ಬ್ರಹ್ಮವೆಂದು ಇಲ್ಲಿ ಕರೆದಿಲ್ಲ. ವೇದಾಂತವೇದ್ಯವಾದ ನಾಶವಿಲ್ಲದ ಪರಮಾರ್ಥತತ್ತ್ವವೇ ಬ್ರಹ್ಮವು ಎಂದು ತಿಳಿಯಬೇಕು - ಎಂದು ಹೇಳಿದ್ದಾಯಿತಷ್ಟೆ. ಇದರಂತೆ ಅಧ್ಯಾತ್ಮ ಎಂದರೆ ನಮ್ಮ ಶರೀರದಲ್ಲಿರುವ ಯಾವದಾದರೊಂದು ವಸ್ತುವಲ್ಲ; ಸ್ವಭಾವವೇ- ಎಂದರೆ ಪ್ರತಿದೇಹದಲ್ಲಿ ಒಳಗಿನ ಆತ್ಮನಾಗಿರುವಿಕೆಯೇ - ಅಧ್ಯಾತ್ಮವು.

ಇನ್ನು ಕರ್ಮವೆಂದರೇನು? ಕರ್ಮಶಬ್ದಕ್ಕೆ ಕೆಲಸ ಎಂದಿಷ್ಟೇ ಅರ್ಥವು. ಆದರೂ ಯಾವದಾದರೊಂದು ಕೆಲಸವನ್ನು ಇಲ್ಲಿ ಕರ್ಮ ಎಂಬ ಮಾತಿನಿಂದ ತಿಳಿಸಿರುವದಿಲ್ಲ. ಭೂತಭಾವೋದ್ಭವಕರವಾದ, ಪ್ರಾಣಿಗಳು ಹುಟ್ಟುವಂತೆ ಮಾಡುವ ವಿಸರ್ಗವು, ದೇವತೋದ್ದೇಶದಿಂದ ಚರು, ಪುರೋಡಾಶ— ಮುಂತಾದ ದ್ರವ್ಯಗಳನ್ನು ತ್ಯಾಗಮಾಡುವದು, ಇಲ್ಲಿ ಕರ್ಮ ಎನಿಸುತ್ತದೆ. ಈ ಕರ್ಮದಿಂದ ಪ್ರಾಣಿಗಳು ಉತ್ಪತ್ತಿಯಾಗುವ ಬಗೆಯನ್ನು ಹಿಂದೆ ಮೂರನೆಯ ಅಧ್ಯಾಯದ ವಿವರಣೆಯಲ್ಲಿ ಹೇಳಿದ್ದಾಗಿರುತ್ತದೆ. ಜರಾಮರಣದಿಂದ ಬಿಡುಗಡೆಯಾಗಬೇಕೆಂಬ ಉಪಾಸಕರು ಈ ಶಾಸ್ತ್ರೋಕ್ತಕರ್ಮದ ಮಹಿಮೆಯಲ್ಲಿಯೂ ನಂಬಿಕೆಯನ್ನಿಡಬೇಕು.

ಈಗ **ಅಧಿದೈವ**ವೆಂದರೆ ಯಾವದು? ಪುರುಷನಾದ ಹಿರಣ್ಯಗರ್ಭನು. ಆದಿತ್ಯಮಂಡಲದೊಳಗೆ ಅದಕ್ಕೆ ಅಭಿಮಾನಿಯಾದ ಒಬ್ಬ ದೇವನು ಇರುವನೆಂದೂ ಅವನು ಸರ್ವದೇವಮಯನೆಂದೂ ಆತನ ಶಕ್ತಿವಿಶೇಷಗಳೇ ದೇವತೆಗಳೆಂದೂ ವೈದಿಕರು ನಂಬುತ್ತಾರೆ. ಜ್ಞಾನ, ಧರ್ಮ, ವೈರಾಗ್ಯ, ಆನಂದ - ಮುಂತಾದವುಗಳು ಆತನಲ್ಲಿ ಇನ್ನಿಲ್ಲವೆನ್ನುವಷ್ಟು ಮಿಗಿಲಾಗಿರುತ್ತವೆ. ಆತನ ಶಕ್ತಿಗಳ ಚೂರುಗಳೇ ನಮ್ಮಗಳಲ್ಲಿಯೂ ಇರುತ್ತವೆ. ನಮ್ಮ ಅಂತಃಕರಣಗಳೆಂಬ ವ್ಯಷ್ಟಿಗಳ ಒಟ್ಟಿಗೆ ಆತನು ಒಡೆಯನು. ಈ ಬ್ರಹ್ಮಾಂಡದಲ್ಲಿ ಆತನ ಆಳ್ವಿಕೆಗೆ ಒಳಪಡದೆ ಇರುವ ವಸ್ತುವು ಯಾವದೂ ಇರುವದಿಲ್ಲ. ಹೀಗೆ ಇವನಿಂದ ಇಡಿಯ ಜಗತ್ತೇ ಪೂರ್ಣವಾಗಿರು ವದರಿಂದ ಈತನಿಗೆ **ಪುರುಷ** ಎಂದು ಹೆಸರು. ಪ್ರಾಣಿಗಳಾದ ನಮ್ಮೆಲ್ಲರ ಕರಣಗಳಿಗೂ ಅನುಗ್ರಾಹಕನಾಗಿರುವದರಿಂದಲೂ ಸರ್ವದೇವತಾಮಯನಾಗಿರುವ ದರಿಂದಲೂ ಈತನ ಮೂಲಕವೇ ಸಾಧಕನು ಪರಗತಿಯನ್ನು ಹೊಂದಬೇಕಾಗಿರುವ ದರಿಂದಲೂ ಈ ಪುರುಷನೇ ಅಧಿದೈವತವು ಎಂದು ಉಪಾಸಕನು ನಂಬಬೇಕು.

ಇನ್ನು **ಅಧಿಯಜ್ಞ**ನೆಂದರೆ ಯಾರು? ಇದಕ್ಕೆ ಭಗವಂತನು "ನಾನೇ ಅಧಿಯಜ್ಞವು, ನಾನೇ ಈ ದೇಹದಿಂದ ಮಾಡಬೇಕಾಗಿರುವ ಯಜ್ಞಕ್ಕೆ ಒಡೆಯನು" ಎಂದು

ಉತ್ತರಕೊಟ್ಟಿರುತ್ತಾನೆ. ಯಜ್ಞಕ್ಕೆ ಭಗವಂತನೇ ಗುರಿಯು ಎಂದು ಉಪಾಸಕನು ನಂಬಬೇಕು. ಈ ದಿನ ಕೃಷ್ಣಾಷ್ಟಮಿಯಾಗಿರುವದರಿಂದ ಪ್ರಾಸಂಗಿಕವಾಗಿ ಸ್ವಲ್ಪ ಶ್ರೀಕೃಷ್ಣನ ವಿಚಾರವನ್ನು ಹೇಳುವೆನು. ಭಾಗವತದಲ್ಲಿರುವ ಒಂದು ಕಥೆಯನ್ನು ನೆನಪಿಗೆ ತಂದುಕೊಳ್ಳಿರಿ. ಯಜ್ಞಕ್ಕೆ ಕೇಂದ್ರವು ಯಾವದು? ಪಶುವಲ್ಲ. ಈಗಿನವರು ಯಜ್ಞವೆಂದರೇನು? ಎಂದು ಕೇಳಿದರೆ ಕೆಲವು ಪಶುಗಳನ್ನು ಕೊಲ್ಲುವ ಒಂದಾನೊಂದು ಕರ್ಮ ಎಂದು ತಟ್ಟನೆ ಹೇಳಿಬಿಡುತ್ತಾರೆ. ಯಜ್ಞವೆಂದರೆ ಭಗವಂತನ ಆರಾಧನೆಯು. ಅಲ್ಲಿ ಯಜಮಾನನು ಯಜ್ಞದೀಕ್ಷೆಯನ್ನು ಸ್ವೀಕರಿಸಿ ವ್ರತಸ್ಥನಾಗಿರುವನು. ಆತನು ಮಾಡುವ ದೇವತಾರಾಧನೆಗೆ ಸಹಾಯಕರಾಗಿ ಋತ್ವಿಜರುಗಳು ಬಂದಿರುವರು. ಸದಸ್ಸಿನಲ್ಲಿ ಕರ್ಮಜ್ಞಾನವಿದ್ಯಾವಿಶಾರದರಾದ ವಿದ್ವಾಂಸರುಗಳು ಚರ್ಚಿಸುತ್ತಾ ಕುಳಿತಿರುವರು. ಜನಕಮಹಾರಾಜನು ಮಾಡಿದ ಯಜ್ಞದಲ್ಲಿ ಸಾವಿರಾರು ಗೋಗಳ ಕೋಡಣಸನ್ನು ಚಿನ್ನದಿಂದ ಅಲಂಕಾರಮಾಡಿ ಬ್ರಹ್ಮವಿದ್ಯೆಯಲ್ಲಿ ಶ್ರೇಷ್ಠನಾದವನಿಗೆ ಸಂಭಾವನೆ ಎಂದು ನಿಲ್ಲಿಸಿದ್ದರೆಂಬ ಉಪನಿಷತ್ತಿನ ಕಥೆಯನ್ನು ನೆನಪಿಗೆ ತಂದುಕೊಂಡರೆ ಆಗ ಯಜ್ಞವೆಂದರೆ ಎಂಥ ಪವಿತ್ರವಾದ ಕರ್ಮ ಎಂಬುದರ ಅರಿವು ಸ್ವಲ್ಪಮಟ್ಟಿಗೆ ನಮಗೆ ಆದೀತು. ಇಂಥ ಒಂದು ಯಜ್ಞವು ನಡೆದಿದ್ದ ಕಾಲದಲ್ಲಿ ಶ್ರೀಕೃಷ್ಣನು ತನ್ನ ಗೆಳೆಯರಾದ ಗೋಪಾಲರ ಮೂಲಕವಾಗಿ ಯಜ್ಞವನ್ನು ಮಾಡುತ್ತಿದ್ದ ಬ್ರಾಹ್ಮಣರನ್ನು ಕೇಳಿ ಸ್ವಲ್ಪ ಅನ್ನವನ್ನು ತರುವಂತೆ ಹೇಳಿಕಳುಹಿಸಿದನು. ಯಜ್ಞಕಾಲದಲ್ಲಿ ಪರಮೇಶ್ವರನ ಪ್ರಸನ್ನತೆಗಾಗಿ ನೂರಾರು ಜನ ಯೋಗ್ಯರಾದ ಬ್ರಾಹ್ಮಣರಿಗೆ ಅನ್ನಸಂತರ್ಪಣೆ ಯಾಗುತ್ತಿರುತ್ತದೆ. ಆದರೆ ಯಜ್ಞಕ್ಕೆ ಒಡೆಯನು ಯಾರು-ಎಂಬುದನ್ನು ತಿಳಿಯದೆ ಯಾರಿಗೆ ಅನ್ನವನ್ನು ಹಾಕಿದರೆ ತಾನೆ ಏನು?

**ದೇಶಃ ಕಾಲಃ ಪೃಥಗ್ದ್ರವ್ಯಂ ಮಂತ್ರತಂತ್ರರ್ತ್ವಿಜೋಽಗ್ನಯಃ॥**
**ದೇವತಾ ಯಜಮಾನಶ್ಚ ಕ್ರತುರ್ಧರ್ಮಶ್ಚ ಯನ್ಮಯಃ॥**
**ತಂ ಬ್ರಹ್ಮ ಪರಮಂ ಸಾಕ್ಷಾದ್ ಭಗವಂತಮಧೋಕ್ಷಜಮ್।**
**ಮನುಷ್ಯದೃಷ್ಟ್ಯಾ ದುಷ್ಪ್ರಜ್ಞಾ ಮರ್ತ್ಯಾತ್ಮಾನೋ ನ ಮೇನಿರೇ ॥**

ಯಜ್ಞವಾಗುವ ದೇಶ, ಕಾಲ, ಅದರಲ್ಲಿ ಉಪಯೋಗಿಸುವ ದ್ರವ್ಯಗಳು ಕರ್ಮಕಾಲದಲ್ಲಿ ಪ್ರಯೋಗಿಸುವ ಮಂತ್ರತಂತ್ರಗಳು, ಯಜ್ಞಕ್ಕೆ ಸಹಾಯಕರಾದ ಋತ್ವಿಜರು, ಅಗ್ನಿಗಳು, ಯಜ್ಞಕ್ಕೆ ಉದ್ದೇಶ್ಯರಾಗಿರುವ ದೇವತೆಗಳು, ಯಜ್ಞವನ್ನು ಮಾಡುವ ಯಜಮಾನನು, ಆ ಯಜ್ಞವೂ ಅದರಿಂದ ಉಂಟಾಗುವ ಧರ್ಮ-ಇವೆಲ್ಲವೂ ಯಾವ ಭಗವಂತನ ರೂಪವಿಶೇಷಗಳೋ ಆತನನ್ನು ಮನುಷ್ಯಮಾತ್ರನೆಂದು ಬಗೆದ ಆ ಬ್ರಾಹ್ಮಣರಿಗೆ ಯಜ್ಞಾನ್ನವನ್ನು ಶ್ರೀಕೃಷ್ಣನಿಗೆ ಕೊಡಬಹುದೆಂಬ ಉದಾರ

ಬುದ್ಧಿಯು ಹೇಗೆ ಬಂದೀತು? ಅವರು ಕೊಡುತ್ತೇವೆನ್ನಲೂ ಇಲ್ಲ, ಕೊಡುವದಿಲ್ಲ ವೆನ್ನಲೂ ಇಲ್ಲ! ಆದರೆ ಅದೇ ಬ್ರಾಹ್ಮಣರ ಸ್ತ್ರೀಯರ ಪ್ರೇಮಮಯವಾದ ಹೃದಯದ ವ್ಯಾಪಾರವನ್ನು ನೋಡಿರಿ! ಅವರು ಯಾವ ಶಾಸ್ತ್ರವನ್ನೂ ಓದಿದವರಲ್ಲದಿದ್ದರೂ ಶ್ರೀಕೃಷ್ಣನ ವೃತ್ತಾಂತವನ್ನು ಕೇಳಿದ ಒಡನೆಯೇ ಉತ್ತಮವಾದ ಭಕ್ಷ್ಯಭೋಜ್ಯಗಳನ್ನು ತಂದು ಭಕ್ತಿಯಿಂದ ಸಮರ್ಪಿಸಿದರು. ಬ್ರಾಹ್ಮಣರಿಗೆ ಭೂತದಯೆ ಎಂಬುದೇನೂ ಗೊತ್ತಿಲ್ಲದ ವಿಷಯವಾಗಿರಲಿಲ್ಲ; ಆದರೆ ಅವರಿಗೆ ಹೃದಯಕ್ಕಿಂತ ಲೌಕಿಕಬುದ್ಧಿಯ ವಿಕಾಸವು ಹೆಚ್ಚಾಗಿತ್ತು. ಆದ್ದರಿಂದ ಅವರಿಗೆ ಶ್ರೀಕೃಷ್ಣನು ಭೂಭಾರವನ್ನು ಕಳೆಯುವದಕ್ಕೆ ಅವತರಿಸಿದ ಪರಮಾತ್ಮನು; ಅವನಿಗೆ ಕೊಟ್ಟ ಅನ್ನವು ಸಕಲಯಜ್ಞಗಳ ಫಲವನ್ನೂ ಕೊಡುವದು ಎಂಬ ನಂಬಿಕೆಯಿಲ್ಲವಾಯಿತು. ಅಧಿಯಜ್ಞನು ಭಗವಂತನೆಂದು ತಿಳಿದು ಮಾಡುವ ಕರ್ಮದಿಂದಲೂ ಉಪಾಸನೆಯಿಂದಲೂ ಎಂಥ ಉತ್ತಮವಾದ ಆನಂದವಾದೀತು ಎಂಬುದು ಅನುಭವದಿಂದಲೇ ಗೊತ್ತಾಗುವದು.

ಈ ಶಾಸ್ತ್ರೀಯದೃಷ್ಟಿಯನ್ನು ಸ್ವಲ್ಪ ಅಳವಡಿಸಿಕೊಂಡರೆ, ಸರ್ವಭೂತಮಯ ನಾದ ಸರ್ವದೇವತಾಮಯನಾದ ಭಗವಂತನ ಆರಾಧನೆಯು ಮನುಷ್ಯಜನ್ಮದ ಗುರಿ ಎಂಬುದನ್ನು ಸ್ವಲ್ಪ ಮನದಂದರೆ, ಉತ್ತಮವಾದ ಕೃಷ್ಣಾಷ್ಟಮಿಯಾಗುವದು. ಇಂಥ ಭಾವನೆಯು ಹೆಚ್ಚಾದರೆ ಜಗತ್ತಿನಲ್ಲಿರುವ ಸ್ವಾರ್ಥಬುದ್ಧಿಯು ಕಡಿಮೆಯಾಗಿ ಈಗ ಎಲ್ಲೆಲ್ಲಿಯೂ ಕಾಣುವ ದುರಾಗ್ರಹಗಳು, ಮುಷ್ಕರಗಳು - ಇವೆಲ್ಲವೂ ನಿಲ್ಲುವವು. ನಮ್ಮನಮ್ಮ ಸ್ವಾರ್ಥದ ಬುದ್ಧಿಯನ್ನು ಬಿಡುವದಿಲ್ಲ ಎಂಬ ಜನರ ಸಂಖ್ಯೆಯು ಕಡಿಮೆಯಾದಂತೆಲ್ಲ ಭೂಲೋಕದಲ್ಲಿ ಸುಖಶಾಂತಿಗಳು ಹೆಚ್ಚುಹೆಚ್ಚಾಗಿ ಕಾಣಿಸಿ ಕೊಳ್ಳುವವು. ಇದು ಉಪಾಸಕರಲ್ಲದ ಲೌಕಿಕರು ಕೂಡ ಈ ವಿಚಾರದಿಂದ ಪಡೆದುಕೊಳ್ಳಬಹುದಾದ ಪ್ರಯೋಜನವು.

ಅರ್ಜುನನು ಕೇಳಿದ್ದ ಇನ್ನೊಂದು ಪ್ರಶ್ನೆಗೆ ಈಗ ಭಗವಂತನು ಉತ್ತರವನ್ನು

**ಅನ್ತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಮ್।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ॥** (೮-೫)

"ಅಂತಕಾಲದಲ್ಲಿಯೂ ನನ್ನನ್ನೇ ಸ್ಮರಿಸುತ್ತಾ ಯಾವನು ದೇಹವನ್ನು ಬಿಟ್ಟು ತೆರಳುವನೋ ಆತನು ನನ್ನ ಭಾವವನ್ನು ಪಡೆಯುವನು, ಇದರಲ್ಲಿ ಸಂಶಯವಿಲ್ಲ." ಅಂತಕಾಲದಲ್ಲಿಯೂ ಪರಮಾತ್ಮನ ಸ್ಮರಣೆಯಿರಬೇಕೆಂದು ತಿಳಿಸುವ ಚ ಶಬ್ದವನ್ನು ಲಕ್ಷ್ಯದಲ್ಲಿಡಬೇಕು. ಕೆಲವರು ತಮ್ಮ ವ್ಯವಹಾರದ ಕಾಲದಲ್ಲಿ ಹೇಗಿದ್ದರೂ ಚಿಂತೆ ಯಿಲ್ಲ, ಸಾಯುವಕಾಲದಲ್ಲಿ ಮಾತ್ರ ಶುಚಿಯಾಗಿದ್ದು ಪರಮಾತ್ಮನ ಸ್ಮರಣೆಯಿದ್ದರೆ

ಅಷ್ಟುಮಾತ್ರದಿಂದಲೇ ಸದ್ಗತಿಯಾಗುವದೆಂದು ಭಾವಿಸಿಕೊಂಡಿರುತ್ತಾರೆ. ಇದು ಸರಿಯಲ್ಲ. ಅಂತಕಾಲವು ಪರಮಾತ್ಮನ ಸ್ಮರಣೆಗೆ ಮೀಸಲಾಗಿರಿಸಬೇಕಾದ ವಿಶೇಷ ಕಾಲವಲ್ಲ; ಯಾವಾಗಲೂ ಮಾಡುತ್ತಿರಬೇಕೆಂಬುದು ಮುಖ್ಯವು. ಆದರೆ ಅಂತ ಕಾಲದಲ್ಲಿ, ಸಾಯುವ ವೇಳೆಯಲ್ಲಿ, ಮನುಷ್ಯನು ತನ್ನ ಇಡಿಯ ಬಾಳಿನಲ್ಲಿ ಏತೇತರಲ್ಲಿ ಆಸಕ್ತಿಯನ್ನಿಟ್ಟುಕೊಂಡಿದ್ದನೋ ಅದನ್ನು ಅಗಲಿ ಹೋಗುವೆನಲ್ಲ!- ಎಂಬ ಕೊರಗು ವಿಶೇಷವಾಗಿ ಹತ್ತಿಕೊಳ್ಳುವ ಸಂಭವವು ಹೆಚ್ಚಾಗಿದೆ. ಇದರಿಂದ ದೇಹವನ್ನು ಸಂಕಟವಿಲ್ಲದೆ ಬಿಟ್ಟುಹೋಗುವದು ಸಾಧ್ಯವಾಗುವದಿಲ್ಲ. ಮುಂದಿನ ಜನ್ಮದ ಕರ್ಮಫಲಭೋಗಕ್ಕೂ ಈ ಅಂತಕಾಲದ ವಾಸನೆಯು ಕಾರಣವಾಗಿರುತ್ತದೆ. ಆದ್ದರಿಂದ ಅಂತಕಾಲದಲ್ಲಿ ನಮ್ಮ ಅಂತಃಕರಣದ ವಾಸನೆಗಳು ಹೇಗೆ ಇರುತ್ತವೆಂಬ ಬಗ್ಗೆ ನಾವು ಎಚ್ಚರಿಕೆಯಿಂದಿರಬೇಕು.

ಅಂತಕಾಲದಲ್ಲಿ ಪರಮಾತ್ಮನನ್ನೇ ಸ್ಮರಿಸುತ್ತಿರಬೇಕು; ಮತ್ತೆ ಯಾವದರ ಚಿಂತೆಯೂ ಮನಸ್ಸಿಗೆ ಹತ್ತಿಕೊಳ್ಳಬಾರದು. ಇದು ಬಹಳ ಮುಖ್ಯ. ಆರ್ತರಾದವರು, ಸಂಸಾರದ ಭಾರದಿಂದ ಕುಸಿದಿರುವವರು, ಮೈಕೈಗಳಲ್ಲಿಯೂ ಮನಸ್ಸಿನಲ್ಲಿಯೂ ಸಡಿಲುಬಿದ್ದವರು, ತಮಗೆ ಯಾವದೋ ಒಂದು ಭಯವು ಬಂದು ಆವರಿಸಿ ಕೊಳ್ಳಬಹುದೆಂಬ ದಿಗಿಲಿನಲ್ಲಿರುವವರು, ಭಯಂಕರವಾದ ಬೇನೆಗಳಲ್ಲಿ ಬಿದ್ದಿರುವವರು ಇಂಥವರೆಲ್ಲರೂ 'ನಾರಾಯಣ' ಎಂಬ ಶಬ್ದವೊಂದನ್ನೇ ಗಟ್ಟಿಯಾಗಿ ಉಚ್ಚರಿಸಿದ ಮಾತ್ರದಿಂದ ದುಃಖಿಗಳೆಲ್ಲದರಿಂದಲೂ ಬಿಡುಗಡೆಯಾಗಿ ಸುಖಿಗಳಾಗುವರು ಎಂದು ಬಲ್ಲವರು ಹೇಳುತ್ತಾರೆ. ಅಂತಕಾಲದಲ್ಲಿ ಈ ಅನರ್ಥಪರಂಪರೆಯೆಲ್ಲವೂ ನಮ್ಮ ಮುಂದೆ ಬಂದು ನಮ್ಮನ್ನು ಬೆದರಿಸುತ್ತಿರುತ್ತದೆ. ಹೀಗಿರುವದರಿಂದ ಆಗ ಪರಮಾತ್ಮನ ಸ್ಮರಣೆಯು ಎಂದಿಗಿಂತಲೂ ಬಲವಾಗಿರಬೇಕೆಂಬುದು ನ್ಯಾಯವಾಗಿರುತ್ತದೆ. ನಮ್ಮ ಆರ್ತಿಗಳು, ಮನಸ್ಸಿನ ಸೋಲುಗಳು, ಅಂಜಿಕೆಗಳು, ರೋಗರುಜಿನಗಳು - ಇವೆಲ್ಲಕ್ಕೂ ಅನಾತ್ಮವಾದ ವಿಷಯಗಳ ಚಿಂತನೆಯೇ ಮೂಲವಾಗಿರುತ್ತದೆಯಾದ್ದರಿಂದ ಪರಮಾತ್ಮನನ್ನು ಬಿಟ್ಟು ಮತ್ತೆ ಯಾವದನ್ನೂ ಮನಸ್ಸಿಗೆ ತಂದುಕೊಳ್ಳಬಾರದೆಂಬುದು ಯುಕ್ತವೇ ಆಗಿರುತ್ತದೆ. ಇವೆರಡೂ ಉಪಾಸನೆಯ ಅಂಗಗಳು. ಪರಮಾತ್ಮನನ್ನೇ ಚಿಂತಿಸುತ್ತಿರಬೇಕು, ಮತ್ತೆ ಏನನ್ನೂ ಚಿಂತಿಸಬಾರದು, ಸಾಯುವವರೆಗೂ ಹೀಗೆಯೇ ಚಿಂತಿಸುತ್ತಿರಬೇಕು-ಎಂದು ಬ್ರಹ್ಮಸೂತ್ರದಲ್ಲಿ ಬಾದರಾಯಣರು ಉಪಾಸನೆಯು ಫಲಕಾರಿಯಾಗುವದಕ್ಕೆ ಬೇಕಾದ ಸಾಧನಕ್ರಮವನ್ನು ನಿರ್ಣಯಿಸಿರುತ್ತಾರೆ. ಅದನ್ನೇ ಇಲ್ಲಿ "ಅಂತಕಾಲೇ ಚ ಮಾಮೇವ ಸ್ಮರನ್" ಎಂಬ ವಾಕ್ಯದಿಂದ ತಿಳಿಸಿರುತ್ತದೆ.

ಅಂತಕಾಲದಲ್ಲಿಯೂ ಭಗವಂತನನ್ನು ಸ್ಮರಣೆಗೆ ತಂದುಕೊಂಡಿದ್ದಕ್ಕೆ ಉದಾಹರಣೆ

ಯಾಗಿ ಅಜಮಿಳನ ಕಥೆಯನ್ನು ಜನರು ನೆನಪಿಗೆ ತಂದುಕೊಳ್ಳುವದುಂಟು. ಆದರೆ ಇದಕ್ಕಾಗಿ ಪುರಾಣಕಾಲಕ್ಕೇ ಹೋಗಬೇಕಾದ ಆವಶ್ಯಕತೆಯಿರುವದಿಲ್ಲ. ಈ ಕಲಿಗಾಲದಲ್ಲಿಯೂ ಕೆಲವು ಉತ್ತಮವಾದ ಉದಾಹರಣೆಗಳು ನಮಗೆ ಸಿಕ್ಕುತ್ತವೆ. ದಾವಣಗೆರೆಯಲ್ಲಿ ನಾನು ಇದ್ದಾಗ್ಗೆ ಒಂದು ಸಲ ಪ್ಲೇಗು ಬಂತು. ನನ್ನ ಸ್ನೇಹಿತರು ವೀರಬಸಯ್ಯನೆಂಬವರೊಬ್ಬರ ಹೆಂಡತಿಗೂ ಆ ಸಾಂಕ್ರಾಮಿಕರೋಗದ ಚಿಹ್ನೆಗಳು ಕಾಣಸಿಕೊಂಡವು. ಆಕೆಯು ಕೂಡಲೆ ಶಿವಪಂಚಾಕ್ಷರಿಯನ್ನು ಜಪಿಸುವದಕ್ಕೆ ಪ್ರಾರಂಭಿಸಿದಳು. ತಾನು ಆ ಮಂತ್ರವನ್ನು ಉಚ್ಚರಿಸುವದಕ್ಕೆ ಅಶಕ್ತಳಾಗಬಹುದೆಂದು ತಿಳಿದು ಇಬ್ಬರು ಜಂಗಮಯ್ಯಗಳಿಂದ ತನ್ನ ಎರಡು ಕಿವಿಗಳಲ್ಲಿಯೂ ಆ ಮಂತ್ರವನ್ನು ಹೇಳಿಸುವಂತೆ ಏರ್ಪಡಿಸಿಕೊಂಡಳು. ತನಗಾಗಿ ಅಳುವವರನ್ನು ಅಲ್ಲಿ ನಿಲ್ಲದಂತೆ ದೂರ ಕಳುಹಿಸಿದಳು. ಹೀಗೆ ಪರಮಶಿವನ ಚಿಂತೆಯಿಂದಲೇ ಶಾಂತಚಿತ್ತಳಾಗಿ ದೇಹವನ್ನು ಬಿಟ್ಟಳು, ಆ ಧನ್ಯೆ! ಇಂಥ ಉದಾಹರಣೆಗಳನ್ನು ನಿಮ್ಮಲ್ಲಿಯೂ ಕೆಲವರು ಕಂಡಿರಬಹುದು. ರಾತ್ರೆಯಲ್ಲಿ ಮಲಗುವಾಗ ಶುಭವಾದ ಆಲೋಚನೆಗಳನ್ನು ಮನಸ್ಸಿನಲ್ಲಿ ತುಂಬಿಕೊಂಡು ನಿದ್ರೆಹೋದವನು ಯಾವ ದುಃಸ್ವಪ್ನಗಳನ್ನೂ ಕಾಣದೆ ಬೆಳಗ್ಗೆ ಮಂಗಳಕರವಾದ ಆಲೋಚನೆಯಿಂದ ಕೂಡಿ ಉಲ್ಲಾಸದಿಂದ ಏಳಬಹುದಾಗಿರುವಂತೆ ಸಾಯುವ ಕಾಲದಲ್ಲಿ ಭಗವಂತನಲ್ಲಿ ಚಿತ್ತವನ್ನಿಟ್ಟುಕೊಂಡು ದೇಹವನ್ನು ಬಿಟ್ಟವರಿಗೆ ಪರಲೋಕದಲ್ಲಿ ದುರ್ಗತಿಯಾದೀತೆಂಬ ಅಂಜಿಕೆಯಿರುವದಿಲ್ಲ, ಮುಂದಿನ ಜನ್ಮದಲ್ಲಿ ದುಃಖವನ್ನನುಭವಿಸುವ ಶಂಕೆಯೂ ಇರುವದಿಲ್ಲ.

ಇಷ್ಟೇ ಅಲ್ಲ, ಸಾಯುವಕಾಲದಲ್ಲಿರುವ ಮನಸ್ಸಿನ ಸ್ಥಿತಿಯಿಂದಲೇ ಮುಂದಿನ ಗತಿಯನ್ನು ನಿರ್ಣಯಿಸಬೇಕಾಗಿರುವದರಿಂದ ಅಂತಕಾಲದಲ್ಲಿ ಭಗವಂತನ ಸ್ಮರಣೆಯಿರುವದೆಂಬುದು ಒಂದು ಅನರ್ಘವಾದ ಆಸ್ತಿಯೆನ್ನಬೇಕಾಗಿದೆ. ಅಂತಕಾಲದ ಸ್ಮರಣೆಯು ಹೀಗೆ ಜೀವರುಗಳ ಮುಂದಿನ ಸ್ಥಿತಿಯನ್ನು ನಿರ್ಣಯಿಸುವದೆಂಬುದು ಒಂದು ಸಾಮಾನ್ಯನಿಯಮವು. ಅದು ಭಗವಂತನ ಸ್ಮರಣೆಗೆ ಮಾತ್ರ ಅನ್ವಯಿಸುವದಿಲ್ಲ. ಏಕೆಂದರೆ—

**ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯನ್ತೇ ಕಲೇವರಮ್।**
**ತಂ ತಮೇವೈತಿ ಕೌನ್ತೇಯ ಸದಾ ತದ್ಭಾವಭಾವಿತಃ॥** (೮-೬)

ಮನುಷ್ಯನ ಅಂತಃಕರಣವೆಂಬುದೇನು? ಅದು ಒಂದು ವಾಸನೆಗಳ ಕಣಜವೆನ್ನಬಹುದು; ಯಾವನು ಈವರೆಗೆ ಏನೇನು ಆಲೋಚನೆಯನ್ನು ಮಾಡಿಕೊಂಡಿರುತ್ತಾನೋ, ಯಾವ ಯಾವ ಮಾತುಗಳನ್ನು ಆಡಿರುತ್ತಾನೋ, ಯಾವ ಯಾವ ಕರ್ಮಗಳನ್ನು ಮಾಡಿರುತ್ತಾನೋ, ಯಾವ ಯಾವ ಸುಖದುಃಖಗಳನ್ನು ಅನುಭವಿಸಿ

ರುತ್ತಾನೋ-ಅದೆಲ್ಲದರ ವಾಸನೆಗಳೂ ಅಂತಃಕರಣದಲ್ಲಿ ಇದ್ದುಕೊಂಡುಬಿಟ್ಟಿರುತ್ತವೆ. ಎಷ್ಟೇ ಅಲ್ಪವಾಗಿರಲಿ, ಯಾವ ನಡೆಯಾಗಲಿ ನುಡಿಯಾಗಲಿ ಆಲೋಚನೆಯಾಗಲಿ, ತನ್ನ ವಾಸನೆಯೊಂದನ್ನು ಬಿಟ್ಟೇ ತನ್ನ ವ್ಯಕ್ತಸ್ವರೂಪವನ್ನು ಮರೆಮಾಡಿಕೊಳ್ಳುತ್ತದೆ. ಈ ವಾಸನೆಗಳ ರಾಶಿಯನ್ನೇ ನಾವು "ಸಂಚಿತಕರ್ಮ" ಎಂಬ ಹೆಸರಿನಿಂದ ಕರೆಯುವದು. ಈ ವಾಸನೆಗಳೆಲ್ಲ ತೀರ ಅವ್ಯಕ್ತವಾಗಿದ್ದರೂ ನಿರ್ವ್ಯಾಪಾರವಾಗಿರುತ್ತವೆ ಯೆಂದು ತಿಳಿಯಬಾರದು. ಭೂಮಿಯಲ್ಲಿರುವ ಬಗೆಬಗೆಯ ಬೀಜಗಳು ಮಳೆ ಬೀಳುತ್ತಲೂ ಮೊಳಕೆಯಾಗುವಂತೆ ತಮಗೆ ಅನುಗುಣವಾದ ಹೊರಗಿನ ಸನ್ನಿವೇಶಗಳು ದೊರಕಿದಕೂಡಲೆ ಅವು ರೂಪಿಸಿಕೊಂಡು ಮತ್ತೆ ವ್ಯಕ್ತವಾಗುವವು. ಈ ರೀತಿಯಲ್ಲಿ ವ್ಯಕ್ತವಾಗಿರುವ ಭಾವಗಳೇ ಈಗ "ಪ್ರಾರಬ್ಧಕರ್ಮ" ಎನ್ನಿಸಿಕೊಂಡಿರುತ್ತವೆ. ಪ್ರಾರಬ್ಧಕರ್ಮದ ಫಲವಾದ ಈಗಿನ ನಮ್ಮ ಭಾವನೆಗಳು ಪ್ರಬಲವಾಗಿರುವದರಿಂದ ಮೇಲಕ್ಕೇಳಬೇಕೆಂದು ಕತ್ತೆತ್ತುತ್ತಿರುವ ಸಂಚಿತಭಾವನೆಗಳನ್ನು ಅಮುಕಿಟ್ಟುಕೊಂಡಿರು ತ್ತವೆ. ಈ ಮೇಲಿನ ಒತ್ತಡವು ಹೋದಾಗ ಯಾವದು ಮೊದಲು ಎದ್ದುಕೊಳ್ಳುವದೋ ಯಾರು ಬಲ್ಲರು? ಆದ್ದರಿಂದ ಆಗ ಎಚ್ಚರಿಕೆಯಿಂದಿರಬೇಕು.

ಸಾಯುವ ಕಾಲಕ್ಕೆ ಪ್ರಾರಬ್ಧಕರ್ಮವು ಮುಗಿದುಹೋಗಿರುತ್ತದೆ. ಸಂಚಿತದಲ್ಲಿ ಯಾವ ವಾಸನೆ ಪ್ರಬಲವಾಗಿರುವದೋ ಅದು ಸಹಜವಾಗಿ ಎದ್ದುಕೊಳ್ಳುತ್ತದೆ. ಹರಿಕಥೆಯಲ್ಲಿ ಯಾರೋ ಒಬ್ಬರು ಒಂದು ಉಪಕಥೆಯನ್ನು ಹೇಳಿದರು. ಒಬ್ಬ ಸಾಹುಕಾರನು ಸಾಯುವಕಾಲಕ್ಕೆ "ಕ-ಕ-ಕ-" ಎಂದನಂತೆ. ತಂದೆಯು ಯಾವದೋ ರಹಸ್ಯವನ್ನು ತಿಳಿಸುವದಕ್ಕೆ ಪ್ರಯತ್ನಮಾಡುತ್ತಿದ್ದಾನೆಂದು ಭಾವಿಸಿ ಮಕ್ಕಳು ಒಂದು ವೀರ್ಯವತ್ತರವಾದ ಔಷಧಿಯಿಂದ ಅವನಿಗೆ ಮಾತನಾಡುವ ಶಕ್ತಿಯು ಬರುವಂತೆ ಮಾಡಿಸಿದರು. ಆಗ ಆ ಮುದುಕನು "ಕಸುಡಿಗೆಯನ್ನು ಕರು ಕಡಿಯುತ್ತಿದೆ" ಎಂದನಂತೆ! ಅವನಿಗೆ ತನ್ನ ಆಸ್ತಿಯಲ್ಲಿ, ತನ್ನ ಮನೆಯಲ್ಲಿರುವ ಒಂದು ಕಸುಡಿಗೆಯಲ್ಲಿ ಕೂಡ ಮಿತಿಮೀರಿದ ಅಭಿಮಾನವಿತ್ತು. ಆದ್ದರಿಂದ ಸಾಯುವಾಗಲೂ ಅದರ ಯೋಚನೆಯೇ ಹೊರತು "ನನ್ನ ಬಾಳಿನಲ್ಲಿ ನಾನು ಮಾಡಿರುವ ಪಾಪಪುಣ್ಯಗಳು ಎಂಥವು? ಅವುಗಳ ಫಲವಾಗಿ ನನಗೆ ಪರಲೋಕದಲ್ಲಿ ಏನಾದೀತು? ಜನ್ಮಾಂತರದಲ್ಲಿ ಯಾವ ಫಲವಾದೀತು? ಎಂಥ ಜನ್ಮವು ಬಂದೀತು?" ಎಂಬುದರ ಯೋಚನೆಯೇನೂ ಮನಸ್ಸಿಗೆ ಬರಲಿಲ್ಲ. ಆದರೆ ಎಂಥ ಯೋಚನೆಯಿಂದ ಕೂಡಿ ಮನುಷ್ಯನು ಸಾಯುವನೋ ಅಂಥ ಗತಿಯೂ, ಅಂಥ ಜನ್ಮವೂ, ಮನುಷ್ಯನಿಗೆ ಬರುತ್ತದೆ. ಬದುಕಿರುವಾಗ ಎಂಥ ಭಾವಗಳನ್ನು ಅಂತಃಕರಣದಲ್ಲಿ ತುಂಬಿಕೊಂಡಿರುವನೋ ಅಂಥ ಕರ್ಮಗಳನ್ನು ಮಾಡುತ್ತಾನೆ, ಅಂಥ ವಾಸನೆಯು ಅಂತಃಕರಣದಲ್ಲಿ

ಹೇರಳವಾಗಿರುತ್ತದೆ; ಸಾಯುವಾಗಲೂ ಅದಕ್ಕನುಗುಣವಾದ ವಾಸನೆಗಳೇ ಪ್ರಬಲವಾಗಿ ಮುಂದಿನ ಗತಿಯನ್ನೂ ಜನ್ಮವನ್ನೂ ಗೊತ್ತುಪಡಿಸುವವು. ಆದ್ದರಿಂದಲೇ ಸಾಯುವ ಕಾಲಕ್ಕೆ ಭಗವಂತನ ಸ್ಮರಣೆಯೇ ಇರಬೇಕಾದರೆ ಯಾವಾಗಲೂ ಆ ಭಾವನೆಯಿಂದಲೇ ಅಂತಃಕರಣವು ಊಡಿಕೊಂಡಿರಬೇಕು. ಇದನ್ನೇ "ಸದಾ ತದ್ಭಾವಭಾವಿತಃ" ಎಂದು ಭಗವಂತನು ಹೇಳಿರುತ್ತಾನೆ.

ಗೀತೆಯಲ್ಲಿ ಉಪನಿಷತ್ತುಗಳಂತೆಯೇ ಅನನ್ಯಚಿತ್ತದಿಂದ ಭಗವಂತನನ್ನೇ ಚಿಂತಿಸುತ್ತಿರಬೇಕೆಂದು ಮತ್ತೆ ಮತ್ತೆ ಬೋಧಿಸಿರುವದಕ್ಕೆ ಇದೇ ಕಾರಣವು. ನಾವು ಭಗವಂತನನ್ನೇ ಚಿಂತಿಸುವದಕ್ಕೆ ಮಾಡಬೇಕಾದ ಪ್ರಯತ್ನವು ಯಾವದು? - ಎಂದು ನೀವು ಕೇಳಬಹುದು. ಅದಕ್ಕೆ ಉತ್ತರವೇನೆಂದರೆ, ಗಾಳಿಯು ಈ ಕುಟೀರದ ಒಳಕ್ಕೆ ನುಗ್ಗುವದಕ್ಕೆ ಏನು ಮಾಡಬೇಕೋ ಅಂಥ ಪ್ರಯತ್ನವನ್ನು ಮಾಡಬೇಕು. ಹೊರಗಡೆ ಗಾಳಿಯು ಎಲ್ಲಾ ಕಡೆಯಲ್ಲಿಯೂ ಮುತ್ತಿಕೊಂಡಿರುತ್ತದೆ, ನಾವು ಕಿಟಕಿಯನ್ನು ಮುಚ್ಚಿಕೊಂಡಿರುವದೊಂದೇ ಅದು ಒಳಕ್ಕೆ ಬರುವದಕ್ಕೆ ಅಡ್ಡಿ; ಕಿಟಕಿಗಳನ್ನು ತೆಗೆದೆವೊ, ಇಲ್ಲವೊ, ಕೂಡಲೆ ಗಾಳಿಯು ಒಳಕ್ಕೆ ನುಗ್ಗುತ್ತದೆ. ಅಲ್ಲವೆ? ಇದರಂತೆ ನಾವು ವಿಷಯಚಿಂತನೆಗಳಿಂದ ಮನಸ್ಸನ್ನು ಮುಚ್ಚಬಾರದು; ಮನಸ್ಸಿನ ಕಿಟಕಿಗಳನ್ನು ತೆರೆದರೆ ಸಾಕು, ಕೂಡಲೆ ಪರಮಾತ್ಮನ ಚಿಂತೆಯು ಅದರೊಳಕ್ಕೆ ನುಗ್ಗುವದು.

ಮೊದಲನೆಯದಾಗಿ ಶಾಸ್ತ್ರದಲ್ಲಿಯೂ ಪರಮಾತ್ಮನ ಅಸ್ತಿತ್ವದಲ್ಲಿಯೂ ನಂಬಿಕೆಯಿರಬೇಕು. ಇದು ಬಹುಮುಖ್ಯವಾದದ್ದು. ಒಬ್ಬರ ಮನೆಯೊಳಗೆ ಸೇರಿರುವ ಕಳ್ಳನಿಗೆ ಇಂಥದ್ದೊಂದು ಕೊಠಡಿಯಲ್ಲಿ ಒಡವೆಯ ಪೆಟ್ಟಿಗೆಯಿದೆ ಎಂದು ತಿಳಿಯಬಂದರೆ ಅವನ ಮನಸ್ಸು ಎಲ್ಲಿರುತ್ತದೆ? - "ಯಾವಾಗ ಆ ಕೊಠಡಿಯೊಳಕ್ಕೆ ಹೋದೇನು, ಎಂದಿಗೆ ಆ ಪೆಟ್ಟಿಗೆಯನ್ನು ಅಪಹರಿಸಿ ಅದರೊಳಗಿನ ಒಡವೆಗಳನ್ನು ತೆಗೆದುಕೊಂಡೇನು!" - ಎಂಬ ಯೋಚನೆಯೇ ಅವನ ತಲೆಯಲ್ಲೆಲ್ಲ ತುಂಬಿಕೊಂಡುಬಿಡುತ್ತದೆಯಲ್ಲವೆ? ಯಜಮಾನನು ಇವನು ಕಳ್ಳನೆಂದು ಅರಿಯದೆ ಮಾಡುತ್ತಿರುವ ಅತಿಥಿಸತ್ಕಾರಗಳು ಯಾವವೂ ಈ ಕಳ್ಳನಿಗೆ ರುಚಿಸುತ್ತಿರುವದಿಲ್ಲ. "ಎಂದಿಗೆ ರಾತ್ರಿಯಾದೀತು! ಯಾವಾಗ ದೀಪವನ್ನು ಆರಿಸಿಯಾರು! ಯಾವಾಗ್ಗೆ ಇವರಿಗೆಲ್ಲ ನಿದ್ರೆ ಹತ್ತೀತು! ಸುದೈವದಿಂದ ನನಗೆ ಕೊಠಡಿಯ ಪ್ರವೇಶವು ದೊರಕಬಾರದೆ?" ಎಂಬ ಹಂಬಲು ಅವನ ಅಂತಃಕರಣವನ್ನು ಮುಸುಕಿಕೊಂಡುಬಿಡುತ್ತದೆ! ಇದರಂತೆಯೇ ಪರಮಾತ್ಮನೆಂಬ ನಿಧಿಯು ನಮ್ಮ ಹೃದಯದಲ್ಲಿದೆ, ಪರಮಾತ್ಮನನ್ನು ಧ್ಯಾನ ಮಾಡುವವರಿಗೆ ಆತನು ಒಲಿಯುತ್ತಾನೆ - ಎಂಬ ಉಪದೇಶವನ್ನು ಕೇಳುವ ಮುಮುಕ್ಷುವಿಗೆ ಪರಮೇಶ್ವರನ ಚಿಂತೆಯೇ ಜೀವನವಾಗಿಬಿಡಬೇಕು! "ಸದಾ

ತದ್ಭಾವಭಾವಿತ"ನಾಗಿಬಿಡಬೇಕು. ಹಾಗಾದರೆ ಆ ಭಗವಂತನನ್ನೇ ಉಪಾಸಕನು ಸೇರಿಬಿಡುತ್ತಾನೆ.

ಭಗವಂತನು ನಿಶ್ಚಯವಾಗಿ ಇರುತ್ತಾನೆ. ಆತನೇ ನಮ್ಮ ಯೋಗಕ್ಷೇಮಗಳನ್ನು ನೋಡಿಕೊಳ್ಳುತ್ತಾನೆ-ಎಂಬ ನಂಬಿಕೆಯು ಬಲವಾಗಿಬಿಟ್ಟರೆ ನಮ್ಮ ಹೃದಯವನ್ನೇ ಆತನಿಗೆ ಅರ್ಪಿಸಿಬಿಡುವೆವು; ನಮ್ಮ ಜೀವನದ ಎಡರು ತೊಡರುಗಳನ್ನೆಲ್ಲ ಆತನಿಗೇ ಹೇಳಿಕೊಳ್ಳುವೆವು; ಆತನು ನಮ್ಮ ಪಾಲಿಗೆ ಮಿಕ್ಕದ್ದೆಲ್ಲಕ್ಕಿಂತಲೂ ನಿಶ್ಚಯವಾಗಿರುವ ಪರಮಸತ್ಯನೆಂಬ ಭಾವನೆಯು ನಮ್ಮ ಅಂತಃಕರಣದಲ್ಲಿ ಕ್ಷಣಕ್ಷಣಕ್ಕೂ ಹೆಚ್ಚುತ್ತಿರುತ್ತದೆ. ನಮ್ಮ ಕಷ್ಟಗಳನ್ನು ಆತನಲ್ಲಲ್ಲದೆ ಮತ್ತೆ ಯಾರಲ್ಲಿ ಬಿಚ್ಚಿಹೇಳಿಕೊಳ್ಳಬಹುದು? ನಾನು ಓದಿದ ಒಂದು ಇಂಗ್ಲಿಷು ಪುಸ್ತಕದಲ್ಲಿ ಈ ಕಥೆಯಿದೆ. ಇದು ಕಲ್ಪಿತಕಥೆಯಲ್ಲ, ಹೀಗೆಯೇ ನಡೆಯಿತು ಎಂದು ಆ ಪುಸ್ತಕದಲ್ಲಿದ್ದಂತೆ ನನ್ನ ನೆನಪು. "ಒಬ್ಬ ಕೆಲಸಗಾರನು ಒಂದು ಗಣಿಯಲ್ಲಿ ಒಂದಂಶದ ಪಾಲಿನ ಮೇಲೆ ಕೆಲಸಮಾಡುತ್ತಿದ್ದನು. ಗಣಿಯಲ್ಲಿ ಈತನು ಎಷ್ಟು ಅದಿರನ್ನು ತೆಗೆಯುತ್ತಾನೋ ಅದರಲ್ಲಿ ಇಂತಿಷ್ಟು ಇವನ ಪಾಲಿಗೆ ಬರಬೇಕೆಂಬ ಕರಾರಿನ ಮೇಲೆ ಇವನು ಕೆಲಸಕ್ಕೆ ಸೇರಿಕೊಂಡಿದ್ದನು. ತಿಂಗಳಿಗೆ ಇಷ್ಟೆಂಬ ನಿಗದಿಯಾದ ಸಂಬಳವೇನೂ ಇವನಿಗೆ ಇರಲಿಲ್ಲ. ಅದಿರು ಸಿಕ್ಕರೆ ಫಲವುಂಟು. ಇಲ್ಲದಿದ್ದರೆ ಇಲ್ಲ. ಒಂದು ಸಲ ಇವನು ತಿಂಗಳೆಲ್ಲಾ ಕೆಲಸಮಾಡಿದರೂ ಒಂದು ಕಾಸೂ ಪ್ರತಿಫಲವಿಲ್ಲವಾಯಿತು. ಒಂದು ದಿನ ಶನಿವಾರ ರಾತ್ರೆ; ಆ ದಿನ ತಿನ್ನುವದಕ್ಕೆ ಏನೇನೂ ಮನೆಯಲ್ಲಿಲ್ಲ, ಕೊಳ್ಳುವದಕ್ಕೆ ಕೈಯಲ್ಲಿ ಕಾಸೂ ಇಲ್ಲ! ಮಕ್ಕಳೆಲ್ಲ ಮಲಗಿಕೊಂಡರು. ಆಗ ಇವನು ಮನಸ್ಸಿನಲ್ಲಿ ಚಿಂತಾಕ್ರಾಂತನಾಗಿ ಏಕಾಂತದಲ್ಲಿ ಕ್ರಿಸ್ತಿಯನ್ನರ ಪದ್ಧತಿಯಂತೆ ಮೊಣಕಾಲೂರಿ ದೇವರನ್ನು ಹೀಗೆಂದು ಬೇಡಿಕೊಂಡನು. "ದೇವ, ನಾನು ಹೊಟ್ಟೆಗಿಲ್ಲದೆ ಸತ್ತರೆ ಚಿಂತೆಯಿಲ್ಲ. ಆದರೆ ಈ ಮಕ್ಕಳು, ಈ ಮುದ್ದುಮಕ್ಕಳು! ಅವರು ಹೊಟ್ಟೆಗಿಲ್ಲದೆ ಸಾಯುತ್ತಿರುವರಲ್ಲ! ಇದನ್ನು ನಾನು ತಾಳಲಾರೆ. ನಿನಗೆ ಇದು ಸಹಿಸುತ್ತದೆಯೇನು?" ಈ ದೀನ ಪ್ರಾರ್ಥನೆಯು ಮುಗಿಯುವ ಹೊತ್ತಿಗೆ ಯಾರೋ ಕದತಟ್ಟಿದಂತೆ ಆಯಿತು. "ಯಾರು?" ಉತ್ತರವಿಲ್ಲ. "ಯಾರು?" "ನಾನು"; "ನಾನು ಎಂದರೆ?" "ನಾನು." ಕದ ತೆಗೆದು ನೋಡುತ್ತಾನೆ? ಯಾರೂ ಇಲ್ಲ; ಆದರೆ ಒಂದು ಬುಟ್ಟಿಯಲ್ಲಿ ಹಣ್ಣು, ರೊಟ್ಟಿ ಮುಂತಾದದ್ದು ತುಂಬಿದೆ! ಈ ಕಥೆಯಲ್ಲಿ ನಾವು ತಿಳಿಯಬೇಕಾದದ್ದೆಲ್ಲ ಇಷ್ಟೇ. ಆ ಬಡಪ್ರಾಣಿಯು ಪರಮೇಶ್ವರನನ್ನು ಪ್ರಾರ್ಥಿಸುವಾಗ ದೇವರ ಅಸ್ತಿತ್ವದಲ್ಲಿ, ದೇವರು ನಮ್ಮ ಪ್ರಾರ್ಥನೆಯನ್ನು ಈಡೇರಿಸುವನೆಂಬ ವಿಷಯದಲ್ಲಿ ಅವನಿಗೆ ಎಂಥ ಅಚಲಶ್ರದ್ಧೆಯಿತ್ತು! ಇದೇ ಶ್ರದ್ಧೆಯು ಉಪಾಸಕನಿಗೆ ಇರಬೇಕು.

# ೫೮. ಉಪಾಸನೆಯ ಅಭ್ಯಾಸ ೮-(೭-೧೧)

(೧೪-೯-೪೭)

ಹಿಂದಿನ ದಿನ "ಅಂತಕಾಲೇ ಚ" ಎಂಬ ವಾಕ್ಯದ ವಿವರಣೆಯನ್ನು ಮಾಡಿದ್ದಾಗಿದೆ. ಮನುಷ್ಯನಿಗೆ ಈ ಜನ್ಮದ ಕೊನೆಯ ಕಾಲದಲ್ಲಿ ಎಂಥ ಭಾವನೆಯು ಎದ್ದುಕೊಂಡಿರುವದೋ ಅದಕ್ಕನುಗುಣವಾದ ಜನ್ಮವು ಮುಂದೆ ಬರುತ್ತದೆ. ಯಾರಿಗೆ ಪರಮೇಶ್ವರನ ಭಾವನೆಯೇ ಇರುವದೋ ಅವರು ಪರಮೇಶ್ವರನ ಸಾಯುಜ್ಯವನ್ನೇ ಪಡೆಯುತ್ತಾರೆ ಎಂದು ಅಲ್ಲಿ ತಿಳಿಸಿದ್ದಾಗಿದೆ. ನಿದ್ರೆಯಿಂದ ಎಚ್ಚತ್ತವನು ತನ್ನ ಹಿಂದಿನ ಭಾವನೆಗಳನ್ನೇ ಮುಂದುವರಿಸುವಂತೆ ಈ ಜನ್ಮದಲ್ಲಿ ಕೊನೆಯಲ್ಲಿ ಎದ್ದುಕೊಂಡಿದ್ದ ಭಾವಗಳು ಮರಣಾನಂತರದಲ್ಲಿ ಲೋಕಾಂತರಗಳಲ್ಲಿಯೂ ಜನ್ಮಾಂತರಗಳಲ್ಲಿಯೂ ತಮ್ಮ ಫಲವನ್ನು ಕೊಡುವವು. ಈಗಿನ ಭಾವನೆಗೆ ಹಿಂದಿನ ಭಾವನೆಗಳೇ ಕಾರಣ ವಾಗಿರುತ್ತವೆ. ಮನಸ್ಸಿನಲ್ಲಿ ಬೇರೆಬೇರೆಯ ವೃತ್ತಿಗಳು ಎದ್ದುಕೊಳ್ಳುತ್ತಿರುವವಷ್ಟೆ; ಇವಕ್ಕೆ ನಮ್ಮ ಹಿಂದಿನ ವೃತ್ತಿಗಳ ವಾಸನೆಗಳೇ ಕಾರಣವಾಗಿರುತ್ತವೆ ಎಂಬುದನ್ನು ವಿವರಿಸಿ ತಿಳಿಸಿದ್ದಾಗಿದೆ.

ಯಾವ ಭಾವವನ್ನು ಮನಸ್ಸಿನಲ್ಲಿ ಹೊರಳಾಡಿಸುತ್ತಿರುವೆವೋ ಆ ಭಾವವು ನಮ್ಮ ಹೊರಗೆ ರೂಪಿಸಿಕೊಳ್ಳುತ್ತದೆ ಎಂಬುದೊಂದು ಅಂತಃಕರಣವ್ಯಾಪಾರದ ನಿಯಮವು. ಜರ್ಮನಿಯಲ್ಲಿ ಜನರನ್ನು ಯುದ್ಧಕ್ಕೆ ಸಜ್ಜುಗೊಳಿಸುವ ಉದ್ದೇಶದಿಂದ ಚಿಕ್ಕಹುಡುಗರಿಗೂ ಸಿಪಾಯಿಗಳ ಉಡುಪನ್ನು ಕೊಡುವದು, ಕೈಯಲ್ಲಿ ಪಿಸ್ತೂಲನ್ನಿಡು ವದು— ಮುಂತಾದ ಅಭ್ಯಾಸವನ್ನು ಮಾಡಿಸುವಂತೆ ಹಿಟ್ಲರನು ಪ್ರೋತ್ಸಾಹಿಸಿದ್ದನಂತೆ. ಅದರ ಫಲವಾಗಿ ಒಬ್ಬ ಯುವಕನು ಮನೆಯಲ್ಲಿ ತಿರುಗಾಡುತ್ತಿದ್ದಾಗ ತನ್ನ ಪ್ರತಿಬಿಂಬವನ್ನು ಕಂಡಕೂಡಲೆ ಎದುರಿಗೆ ಯಾರೋ ಶತ್ರು ಬಂದನೆಂಬ ಭಾವನೆಯಿಂದ ಕೈಯಲ್ಲಿದ್ದ ಬಂದೂಕನ್ನು ಹಾರಿಸಿಬಿಟ್ಟನಂತೆ! ಒಳಗೆ ಈ ಕ್ಷಾತ್ರಭಾವನೆಯು ಸಣ್ಣಸಣ್ಣದಾಗಿ ಬೆಳೆದುಕೊಂಡು ಕೊನೆಗೆ ದೊಡ್ಡದಾಗಿ ಹೊರಕ್ಕೆ ಹೊಮ್ಮಿತು. ವೃತ್ತಿಗಳಿಗೆ ತಕ್ಕಂತೆ ಅವುಗಳ ಫಲವೂ ಹೊರಗೆ ಕಾಣಿಸಿಕೊಳ್ಳುತ್ತದೆ. ಕೆಲವು ಭಾವಗಳು ರೂಪಿಸಿಕೊಳ್ಳುವದಕ್ಕೆ ಸ್ವಲ್ಪ ಕಾಲವಿಳಂಬವೂ ದೇಶವಿಶೇಷದ ನಿರೀಕ್ಷಣೆಯೂ ಆಗಬಹುದು; ಇನ್ನು ಕೆಲವು ಈಗಲೆ ಹೊರಗೆ ಕಾಣಿಸಿಕೊಂಡುಬಿಡಬಹುದು. ಅಂತೂ ಮನಸ್ಸಿನ ಭಾವನೆ, ಅದಕ್ಕನುಗುಣವಾದ ಮಾತು, ಆಮೇಲೆ ಕೆಲಸ, ಮುಂದೆ ಅದರ ಫಲ - ಇಷ್ಟು ಒಂದು ಗೊತ್ತಾದ ವ್ಯವಸ್ಥೆಯಿಂದ ನಡೆಯುತ್ತಲೇ ಇರುವವು.

ಹಿಂದೆ ಋಷಿಗಳ ಭಾವನೆಗಳು ಹೊರಗಿನ ವಾತಾವರಣದಲ್ಲೆಲ್ಲ ವ್ಯಾಪಿಸಿ ಸುತ್ತುಮುತ್ತಲಿನ ಪ್ರಾಣಿಗಳ ಮೇಲೂ ಪರಿಣಾಮವನ್ನು ಉಂಟುಮಾಡುತ್ತಿತ್ತೆಂದು ಕವಿಗಳು ವರ್ಣಿಸುತ್ತಾರೆ. ಕೆಟ್ಟವರ ಭಾವನೆಗಳೂ ಹೀಗೆಯೇ ವ್ಯಾಪಿಸುತ್ತವೆ. ಈಗ ರಾಜಕೀಯವಿಚಾರವನ್ನು ನೋಡಿರಿ. ಎಲ್ಲರ ಬಾಯಲ್ಲಿಯೂ ಅದೇ. ಇದಕ್ಕೆ ಕೆಲವರು ನಾಯಕರ ಭಾವನೆಗಳೇ ಕಾರಣ. ಆದ್ದರಿಂದ ವ್ಯವಹಾರದಲ್ಲಿ ನಾವಿಟ್ಟುಕೊಂಡ ಧ್ಯೇಯಕ್ಕೆ ತಕ್ಕ ಭಾವನೆಗಳು ನಮ್ಮ ಅಂತಃಕರಣದಲ್ಲಿ ಮೂಡುವವು; ಅದಕ್ಕನು ಗುಣವಾದ ಸಹವಾಸವೇ ನಮಗೆ ದೊರಕುವದು. ಅಂಥ ನಡೆನುಡಿಗಳೇ ನಮಗೆ ಜೀವನವಾಗುವದು. ಆದಕಾರಣ ಮಕ್ಕಳಿಗೆ ಚಿಕ್ಕಂದಿನಿಂದಲೂ ಒಳ್ಳೆಯ ಭಾವನೆಗಳನ್ನು ಕೊಡುತ್ತಿರಬೇಕು. ನಮ್ಮ ಭಾವನೆಗಳೇ ನಮ್ಮ ನಡೆನುಡಿಗಳಲ್ಲಿ ಕಾಣಿಸಿಕೊಳ್ಳುವವೆಂಬುದನ್ನು ಯಾವಾಗಲೂ ನೆನಪಿನಲ್ಲಿಟ್ಟುಕೊಂಡಿರಬೇಕು. ಇದು ಪ್ರಕೃತಿ ನಿಯಮವು. ಆದ್ದರಿಂದಲೇ ಭಗವಂತನು ಅರ್ಜುನನಿಗೆ ಹೀಗೆಂದು ಉಪದೇಶಿಸಿರುತ್ತಾನೆ.

**ತಸ್ಮಾತ್ ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಃ ॥ (೮-೭)**

“ಆದ್ದರಿಂದ ಎಲ್ಲಾ ಕಾಲಗಳಲ್ಲಿಯೂ ನನ್ನನ್ನು ಸ್ಮರಿಸು, ಈಗ ಯುದ್ಧ ಮಾಡು. ನನ್ನಲ್ಲಿಯೇ ಮನೋಬುದ್ಧಿಗಳನ್ನು ಅರ್ಪಿಸುವೆಯಾದರೆ ನನ್ನನ್ನೇ ಸೇರುವೆ, ಯಾವ ಸಂಶಯವೂ ಇಲ್ಲ.” ಯಾವ ಭಾವನೆಯಿರುವದೋ ಅದಕ್ಕೆ ತಕ್ಕಂತೆ ನಮ್ಮ ವ್ಯವಹಾರವೂ ಪರಲೋಕದಲ್ಲಿ ಫಲವೂ ಮುಂದಿನ ಜನ್ಮವೂ ಆಗುವವೆಂಬ ಪ್ರಕೃತಿನಿಯಮವಿರುವದರಿಂದ ಭಗವಂತನನ್ನೇ ಸ್ಮರಣೆಮಾಡುತ್ತಾ ನಮ್ಮ ಸ್ವಧರ್ಮವನ್ನು ಮಾಡಿಕೊಂಡು ಹೋಗಬೇಕು. ಭಗವಂತನ ಸ್ಮರಣೆಯಿಂದ ನಮ್ಮ ವ್ಯವಹಾರವು ಕೆಡುವದೆಂದು ಶಂಕಿಸಬಾರದು. ಭಗವಂತನೇ ಎಲ್ಲಕ್ಕೂ ತಿರುಳು. ಭಗವಂತನನ್ನು ಸ್ಮರಿಸುತ್ತಾ ಮಾಡುವ ಕೆಲಸವು ಉತ್ತಮವಾದೀತೇ ಹೊರತು ಎಂದಿಗೂ ಕೆಡಲಾರದು. ಅದಕ್ಕೆ ಬದಲಾಗಿ ‘ನಾನು’ ಎಂಬ ಭಾವನೆ ಬಂದರೆ ಕೆಲಸವು ಕೆಡುವದು; ‘ನಾನು’ ಎಂಬ ಭಾವನೆಯಿಲ್ಲದ ಕೆಲಸವು ಉತ್ತಮವಾಗುವದು. ಮಕ್ಕಳು ಮೈಮರೆತು ಆಡುತ್ತಿರುವಾಗ ಅವರಿಗೆ ಆಗುವ ಆನಂದವನ್ನು ನೆನಪಿಸಿಕೊಳ್ಳಿರಿ. ಚಿತ್ರವನ್ನು ಬರೆಯುವದು, ಸಂಗೀತ, ಭಾಷಣ, ವಿಚಾರ - ಮುಂತಾದವುಗಳಲ್ಲಿ ಆಯಾ ವಿಷಯದಲ್ಲಿ ಮುಳುಗಿರುವವರಿಗೆ ‘ನಾನು’ ಎಂಬ ಭಾವವು ಒಂದಿಷ್ಟೂ ಇರುವದಿಲ್ಲ; ಆಗಲೆ ಅವರ ಕಲಾಕೌಶಲವು ಎದ್ದು ಕಾಣುವದೆಂಬುದು ಎಲ್ಲರ ಅನುಭವದಲ್ಲಿಯೂ

ಇರುವ ಮಾತು. ಹೆಚ್ಚೇಕೆ? ವ್ಯವಹಾರದಲ್ಲಿ 'ನಾನು' ಎಂಬ ಅಭಿಮಾನವು ಎದ್ದುಕೊಂಡಿರುವಾಗ ಯಾವ ಕೆಲಸವೂ ಚೆನ್ನಾಗಿ ಆಗುವದಿಲ್ಲ; ಆದ್ದರಿಂದಲೇ ಜನರು ತಮ್ಮ ತಮ್ಮ ಕೆಲಸದಲ್ಲಿ ಉತ್ಸಾಹವನ್ನು ತೋರಿಸುವ ಮುಂಚೆ ತಮ್ಮನ್ನು ತಾವು ಮರೆಯುವಂತೆ ನಶ್ಯ, ಕಾಫಿ, ಮದ್ಯ, ಭಂಗಿ - ಮುಂತಾದ ಉತ್ತೇಜನ ಸಾಧನಗಳನ್ನು ಉಪಯೋಗಿಸುತ್ತಾರೆ. ನಾನು ಎಂಬ ಬುದ್ಧಿಯಿಲ್ಲದಿದ್ದರೆ ಕಾರ್ಯವು ಚೆನ್ನಾಗಿ ಆಗುವದೆಂದು ಅವರೆಲ್ಲರೂ ತಿಳಿದಿರುವರೆಂದು ಹೇಳುವದಕ್ಕೆ ಬರುವದಿಲ್ಲ; ಆದರೂ ಅವರು ತಾವು ಉಪಯೋಗಿಸುವ ಸಾಧನಗಳು ಉತ್ತರಕಾಲದಲ್ಲಿ ಕೊಡಬಹುದಾದ ದುಷ್ಪರಿಣಾಮವನ್ನು ಕೂಡ ಕಡೆಗಣಿಸಿ ತತ್ಕಾಲದಲ್ಲಿ ಆಗುವ ಉತ್ತೇಜನೆಗೆ ಮರುಳಾಗಿರುತ್ತಾರೆಂಬುದರಲ್ಲಿ ಸಂಶಯವಿಲ್ಲ. ನಾನು ಎಂಬುದು ಕ್ಷಣಿಕವಾಗಿ ಮರೆಯಾದ ಮಾತ್ರದಿಂದಲೇ ಕೆಲಸಕ್ಕೆ ಇಷ್ಟು ಪ್ರಯೋಜನವಾದರೆ ನಿಜವಾಗಿ ಅದು ಭಗವಂತನ ಚಿಂತನೆಯಿಂದ ಕರಗಿಹೋದಾಗ ಎಂಥ ಅಮೂಲ್ಯವಾದ ಫಲವಾಗಬೇಕಾಯಿತು!

ಈ ರಹಸ್ಯವನ್ನು ಭಗವಂತನು "ಮಾಮನುಸ್ಮರ ಯುಧ್ಯ ಚ" ಎಂಬ ವಾಕ್ಯದಿಂದ ಹೊರಗೆಡವಿರುತ್ತಾನೆ. ಅರ್ಜುನನು "ನಾನು ಕೊಲ್ಲುತ್ತೇನೆ, ಇವರೆಲ್ಲರೂ ಸಾಯುತ್ತಾರೆ; ಇದರಿಂದ ನನಗೆ ಪಾಪವು ಬರುತ್ತದೆ. ಹೀಗಿರುವಾಗ ನಾನು ಪೂಜ್ಯರಾದ ಭೀಷ್ಮದ್ರೋಣಾದಿಗಳೊಡನೆ ಹೇಗೆ ಹೋರಾಡಲಿ!— ಎಂದು ಅಹಂಭಾವನೆಯಿಂದ ಮಂಕಾಗಿದ್ದನು. ಇಂಥ ಸಮಯದಲ್ಲಿ ಭಗವಂತನು ಉತ್ತಮ ವ್ಯವಹಾರದ ರಹಸ್ಯವನ್ನು ಅವನಿಗೆ ಉಪದೇಶಮಾಡುತ್ತಾನೆ. "ನಾನು ಎಂಬುದನ್ನು ಭಗವಂತನಲ್ಲಿ ಅಡಗಿಸಿ ವ್ಯವಹಾರವನ್ನು ಮಾಡು" ಎಂಬ ಉತ್ತಮಉಪದೇಶವನ್ನು ನಾವೆಲ್ಲರೂ ಮನಸ್ಸಿನಲ್ಲಿ ಚೆನ್ನಾಗಿ ಹೊರಳಾಡಿಸಬೇಕು. ನಮ್ಮ ಹೊರಗಿನ ವ್ಯವಹಾರವೆಂಬುದೊಂದು ಭಗವಂತನ ಲೀಲೆಯು. ಇದರಲ್ಲಿ ಎಲ್ಲರೂ ಭಗವಂತನಲ್ಲಿ ಒಂದಾಗಿ ನಡೆದುಕೊಂಡರೆ ಸರಿಯಾದ ಮೇಳವಾಗುವದು. ತಾಳವೂ ಮೇಳವೂ ಇರುವ ಸಂಗೀತವು ಇಂಪಾಗಿ ಸಂಗೀತದಲ್ಲಿ ಪಾತ್ರವನ್ನು ವಹಿಸಿರುವವರಿಗೂ ಕೇಳುವವರಿಗೂ ಸುಖವಾಗಿರುವದಲ್ಲವೆ? ಹಾಗೆ ನಮ್ಮ ನಮ್ಮ ವ್ಯವಹಾರವನ್ನು ಭಗವಂತನ ಅನುಸ್ಮರಣೆಯಿಂದ ಕೂಡಿಸಿದರೆ ಒಟ್ಟು ವ್ಯವಹಾರದಲ್ಲಿ ಅದರ ಮೇಲನವಾಗುತ್ತದೆ. ಅದು ನಮಗೂ ನಮ್ಮ ನೆರೆಯವರಿಗೂ ಸುಖಕರವೂ ಹಿತವೂ ಆಗಿರುತ್ತದೆ. "ಮಾಮ್ ಅನುಸ್ಮರ, ಯುಧ್ಯ ಚ" ಎಂಬುದು ಎರಡು ಬೇರೆಬೇರೆಯ ಸಾಧನೆಗಳೆಂದು ಭ್ರಮಿಸಬಾರದು. ನಮ್ಮ ವ್ಯವಹಾರವೂ ಸ್ಮರಣೆಯೂ ಹೊಂದುಗೆ ಯಾಗಿ ಸೇರಿಕೊಂಡು ಒಂದೇ ಸಮರಸವಾದ ಸಾಧನವಾಗಬೇಕು. ಕರ್ಮವನ್ನು

ಮಾಡುವಾಗಲೆಲ್ಲ ಈ ಅನುಸ್ಮರಣೆಯ ಸಮುಚ್ಚಯವು ಇದ್ದುಕೊಂಡಿರಲಿ; ಆಗ ಜೀವನವು ಸುಖದ ಸೂರೆಯಾಗುತ್ತದೆ.

ಭಗವಂತನಲ್ಲಿಯೇ ಮನೋಬುದ್ಧಿಗಳನ್ನು ಅರ್ಪಣೆಮಾಡಿ ಈ ಉಪಾಸನೆಯನ್ನು ನಡೆಯಿಸಬೇಕು. ಹೀಗಿದೆ ಹಾಗಿದೆ- ಎಂದು ವಿಕಲ್ಪಿಸುವದು ಮನಸ್ಸು; ಆದ್ದರಿಂದ ಇಂಥದ್ದಿದು - ಎಂದು ನಿಶ್ಚಯಿಸುವದು ಬುದ್ಧಿ. ಈ ವಿಭಾಗವು ಜ್ಞಾನದೃಷ್ಟಿಯಿಂದ ಹೇಳಿದ್ದು. ಹೀಗೆ ಮಾಡಲೊ, ಹಾಗೆ ಮಾಡಲೊ? ಎಂದು ವಿಕಲ್ಪಿಸುವದು ಮನಸ್ಸು; ಹೀಗೆಯೇ ಮಾಡುವೆನು - ಎಂದು ನಿಶ್ಚಯಿಸುವದು ಬುದ್ಧಿ. ಇದು ಸಾಧನದೃಷ್ಟಿಯಿಂದ ಹೇಳಿದ ವಿಭಾಗವು. ಪ್ರಕೃತದಲ್ಲಿ ಸಾಧನದ ವಿಚಾರವು ನಡೆದಿರುತ್ತದೆಯಾದ್ದರಿಂದ ನಮ್ಮ ವಿಮರ್ಶೆಗೂ ನಿಶ್ಚಯಕ್ಕೂ ಭಗವಂತನೇ ವಿಷಯ ವಾಗಿರಬೇಕು. ಏನನ್ನೋ ಯೋಚಿಸಿಕೊಳ್ಳುತ್ತಾ ಏನನ್ನೋ ಮಾಡುವ ವ್ಯಗ್ರತೆಯಿರ ಬಾರದು. ಹೀಗೆ ಭಗವಂತನನ್ನೇ ಮನೋಬುದ್ಧಿಗಳಿಗೆ ವಿಷಯವಾಗಿ ಮಾಡಿಕೊಂಡು ಭಗವಂತನನ್ನೇ ಅನುಸ್ಮರಣೆ ಮಾಡುತ್ತಾ ಕರ್ತವ್ಯಕರ್ಮವನ್ನು ಮಾಡುತ್ತಿದ್ದರೆ ಈ ಲೋಕದಲ್ಲಿ ಭಗವಂತನಲ್ಲಿ ನಿಷ್ಠೆ, ಪರಲೋಕದಲ್ಲಿ ಭಗವಂತನ ಪ್ರಾಪ್ತಿ - ಇವು ಕಟ್ಟಿಟ್ಟ ಬುತ್ತಿಯಾಗುವವು.

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್॥** (೮-೮)

"ಎಲೈ ಪಾರ್ಥನೆ, ಅಭ್ಯಾಸಯೋಗದಿಂದ ಕೂಡಿದ ಅನನ್ಯಗಾಮಿಯಾದ ಚಿತ್ತದಿಂದ ದಿವ್ಯನಾದ ಪರಮಪುರುಷನನ್ನು ಚಿಂತಿಸುತ್ತಿರುವವನು ಆ ಪುರುಷನನ್ನೇ ಪಡೆಯುವನು" ಮತ್ತೊಂದನ್ನು ಚಿಂತಿಸದೆ ಪರಮಾತ್ಮನನ್ನೇ ಎಡೆಬಿಡದೆ ಚಿಂತನೆ ಮಾಡುತ್ತಿರುವದು **ಅಭ್ಯಾಸಯೋಗವು**. ಈ ಎಂಟನೆಯ ಅಧ್ಯಾಯವನ್ನು "ಅಭ್ಯಾಸ ಯೋಗ"ವೆಂದೇ ಕೆಲವರು ಕರೆದಿರುತ್ತಾರೆ; ಆ ಹೆಸರೂ ಇದಕ್ಕೆ ಒಪ್ಪುತ್ತದೆ. ಪರಮಾತ್ಮನನ್ನೇ ಅನುಚಿಂತಿಸುವದು, ಎಂದರೆ ಶಾಸ್ತ್ರಾಚಾರ್ಯರ ಉಪದೇಶಕ್ಕನು ಗುಣವಾಗಿ ಆತನನ್ನೇ ಹಿಂಬಾಲಿಸಿಕೊಂಡಿರುವ ಚಿಂತನೆಯಿಂದ ಕೂಡಿರುವದು. ಇಂಥ ಅನನ್ಯಚಿಂತಕನು ಅವಶ್ಯವಾಗಿ ಸಾಯುವಕಾಲದಲ್ಲಿ ಪರಮಾತ್ಮನನ್ನೇ ಚಿಂತಿಸು ತ್ತಿರಬೇಕಷ್ಟೆ; ಆದ್ದರಿಂದ ಅವನು ಆ ಪರಮಪುರುಷನನ್ನೇ, ಎಂದರೆ ಹಿಂದೆ ಅಧಿದೈವತವೆಂದು ಕರೆದಿರುವ ಸೂರ್ಯಮಂಡಲದಲ್ಲಿರುವ ಪುರುಷನನ್ನೇ ಸೇರುವನು.

ಉಪಾಸನೆಯಲ್ಲಿ ಯಾವ ದೇವತೆಯನ್ನು ಧ್ಯಾನಮಾಡುವರೋ ಆ ದೇವತೆಯ ಗುಣಗಳನ್ನೂ ಚಿಂತಿಸುತ್ತಿರಬೇಕು; ಯಾವ ಮಾರ್ಗದಿಂದ ದೇವತೆಯನ್ನು ಸೇರ ಬೇಕೋ ಅದನ್ನೂ ಚಿಂತಿಸುತ್ತಿರಬೇಕು. ಆದ್ದರಿಂದ ಪ್ರಕೃತದಲ್ಲಿ ಆ ಪರಮಪುರುಷನ

ಗುಣಗಳು ಯಾವವು? ಅವನನ್ನು ಸಾಯುವಕಾಲಕ್ಕೆ ಯಾವ ಮಾರ್ಗದಿಂದ ಪಡೆದುಕೊಳ್ಳಬೇಕು? ಎಂಬುದನ್ನು ವಿವರಿಸುವದಕ್ಕಾಗಿ ಮುಂದಿನ ಗ್ರಂಥಭಾಗವು ಬಂದಿರುತ್ತದೆ.

**ಕವಿಂ ಪುರಾಣಮನುಶಾಸಿತಾರ-**
**ಮಣೋರಣೀಯಾಂಸಮನುಸ್ಮರೇದ್ ಯಃ।**
**ಸರ್ವಸ್ಯ ಧಾತಾರಮಚಿನ್ತ್ಯರೂಪ-**
**ಮಾದಿತ್ಯವರ್ಣಂ ತಮಸಃ ಪರಸ್ತಾತ್॥** (೮-೯)

ಇಲ್ಲಿರುವ ವಿಶೇಷಣಗಳನ್ನೆಲ್ಲ ಸಾಧಕನು ಮನಸ್ಸಿಗೆ ತಂದುಕೊಂಡು ಉಪಾಸನೆಯನ್ನು ಅಭ್ಯಾಸಮಾಡಬೇಕು. ಪರಮಾತ್ಮನು ಅನಂತಕಲ್ಯಾಣಗುಣಗಳುಳ್ಳವನು ಎಂದು ತಿಳಿದಿದ್ದರೆ ಸಾಲದು; ಪ್ರತಿಯೊಂದು ಗುಣವನ್ನೂ ಮನಸ್ಸಿನಲ್ಲಿ ಹೊರಳಾಡಿಸುತ್ತಿರಬೇಕು. ಹಾಗಾದರೇ ಪರಮಾತ್ಮನು ಪ್ರಸನ್ನನಾಗಿ ಅಂಥ ಗುಣರೂಪಗಳೊಡನೆ ಕಾಣಿಸಿಕೊಳ್ಳುವನು. **ಕವಿ** ಎಂದರೆ ಕ್ರಾಂತದರ್ಶಿಯು; ಎಷ್ಟು ದೂರದ ಎಷ್ಟು ಕಾಲದ ವ್ಯವಧಾನವಿದ್ದರೂ ಈಗಲೇ ತಾನಿದ್ದಲ್ಲಿಯೇ ನೋಡತಕ್ಕವನು ಎಂದರ್ಥ. ಸರ್ವಗತನಾಗಿರುವ, ಕಾಲದೇಶಗಳ ಪರಿಚ್ಛೇದವೇ ಇಲ್ಲದ, ಆ ಪರಮಾತ್ಮನಿಗೆ ಯಾವದರ ಮರೆಯಿದ್ದೀತು? ಆತನು ಸರ್ವದಾ ಸರ್ವಜ್ಞನು. **ಪುರಾಣ**ನು, ಅನಾದಿಕಾಲದಿಂದಿರತಕ್ಕವನು. ಆದ್ದರಿಂದ ಹಿಂದೆ ನಡೆದಿರುವದೆಲ್ಲವೂ ಆತನ ಅರಿವಿಗೆ ಗೋಚರವಾಗಿಯೇ ಇರುತ್ತದೆ; ಮುಂದೆಯೂ ಇರತಕ್ಕವನಾದ್ದರಿಂದ ಮುಂದಿನ ಕಾಲದಲ್ಲಿ ಆಗುವದೂ ಅವನಿಗೆ ಗೋಚರವಲ್ಲವೆಂಬಂತಿಲ್ಲ.

**ಅನುಶಾಸಿತೃ** ಎಂದರೆ ಎಲ್ಲಾ ಜಗತ್ತನ್ನೂ ತಾನೊಬ್ಬನೇ ಆಳುವವನು. ಆತನ ನಿಯಮಕ್ಕೆ ಒಳಪಡದೆ ಇರುವದು ಯಾವದೊಂದೂ ಇರುವದಿಲ್ಲ. ಸೂರ್ಯಚಂದ್ರರು ತಮ್ಮತಮ್ಮ ಸ್ಥಾನಗಳಲ್ಲಿರುವದು ಆತನ ಕಟ್ಟಳೆಯಂತೆ; ಭೂಮ್ಯಂತರಿಕ್ಷಗಳು ವಿಂಗಡವಿಂಗಡವಾಗಿರುವದು ಆತನ ಕಟ್ಟಳೆಯ ಪ್ರಕಾರ; ನಿಮಿಷಗಳು, ಮುಹೂರ್ತಗಳು, ಹಗಲುರಾತ್ರಿಗಳು, ಪಕ್ಷಗಳು, ತಿಂಗಳುಗಳು, ಋತುಗಳು, ಸಂವತ್ಸರ - ಎಂಬ ಕಾಲವಿಭಾಗಗಳಾಗಿರುವದು ಆತನ ಕಟ್ಟಳೆಯನ್ನನುಸರಿಸಿ; ನದಿಗಳು ಬೇರೆ ಬೇರೆಯ ದಿಕ್ಕುಗಳಲ್ಲಿ ಹರಿಯುತ್ತಿರುವದು ಆತನ ಕಟ್ಟಪ್ಪಣೆಗನುಗುಣವಾಗಿ, ದಾನವೇ ಮುಂತಾದ ಕರ್ಮಗಳನ್ನು ಮಾಡುವವರಿಗೆ ಆಯಾ ದೇಶಕಾಲಗಳಲ್ಲಿ ತಕ್ಕ ಫಲಗಳು ಆಗುತ್ತಿರುವದೂ ಆತನ ಆಣತಿಯಂತೆ. ಪ್ರಪಂಚದಲ್ಲೆಲ್ಲ ಆತನ ಶಾಸನವೊಂದೇ ನಡೆಯುತ್ತಿರುವದು. ಏನೂ ತಿಳಿಯದ ಮೂರ್ಖರು ಕೆಲವರು ಸನಾತನಧರ್ಮಿಗಳನ್ನು ಅನೇಕೇಶ್ವರವಾದಿಗಳು ಎಂದು ಹಳಿಯುವದುಂಟು. ಆದರೆ ಆಕರ್ಷಣಶಕ್ತಿ,

ಶ್ಲೇಷಣಶಕ್ತಿ, ಸಂಹನನಶಕ್ತಿ - ಎಂದು ಮುಂತಾಗಿ ಹಲವು ಶಕ್ತಿಗಳನ್ನು ನಂಬಿರುವ ಭೌತಿಕವಿಜ್ಞಾನವಾದಿಗಳು ಅವರ ಅಂಗೀಕಾರದಿಂದಲೇ ಬಹುಶಕ್ತಿವಾದಿಗಳಾಗಿ ರುತ್ತಾರೆ. ಇಲ್ಲಿ ಪರಮಾರ್ಥವೇನು? ಈ ಎಲ್ಲಾ ಶಕ್ತಿಗಳೂ ಪರಮೇಶ್ವರನ ಒಂದೇ ಶಕ್ತಿಯ ರೂಪವಿಶೇಷಗಳಾಗಿರುತ್ತವೆ. ನಮಗೆ ಕಾಣಬರುತ್ತಿರುವ ಶಕ್ತಿಗಳೆಲ್ಲ ಪರಮಾತ್ಮನ ಸತ್ತೆಯ ಪ್ರಕಾರಗಳೇ ಆಗಿರುತ್ತವೆ; ಕಾರಣವಿಲ್ಲದೆ ಕಾರ್ಯವಾಗುವುದಿಲ್ಲ - ಎಂಬುದೇ ಮುಂತಾದ ನಿಯಮಗಳೂ ಪರಮಾತ್ಮನ ನಿಯಮವೇ ಆಗಿರುತ್ತವೆ.

**ಅಣುವಿಗೂ ಅಣುವು** ಪರಮಾತ್ಮನು, ಅವನು ಅತ್ಯಂತಸೂಕ್ಷ್ಮನು, ಅತೀಂದ್ರಿಯವಾದ ಮನಸ್ಸಿಗೆ ಕೂಡ ವಿಷಯನಲ್ಲ. ಎಲ್ಲಕ್ಕೂ **ಧಾತ್ರ**; ಎಲ್ಲಾ ಕರ್ಮಫಲಗಳನ್ನೂ ಗೊತ್ತುಪಡಿಸುವಾತನು ಅವನೇ. **ಅಚಿಂತ್ಯರೂಪನು**; ಮಾತಿನಿಂದಾ ಡುವ ಶಬ್ದಗಳು, ಮನಸ್ಸಿನಲ್ಲಿ ಆಗುವ ಪ್ರತ್ಯಯಗಳು, ಇವೆರಡಕ್ಕೂ ಗೋಚರವಾಗಿರುವ ವಸ್ತುಗಳು - ಇವಿಷ್ಟೂ ಚಿಂತ್ಯ ಎನಿಸುತ್ತವೆ. ಆದರೆ ಪರಮಾತ್ಮನ ಶಕ್ತಿಯನ್ನು ಯಾವ ಮಾತೂ ವರ್ಣಿಸಲಾರದು ಎಂಬುದು ಹಾಗಿರಲಿ, ಮನಸ್ಸಿನ ಯಾವ ಪ್ರತ್ಯಯವೂ ಅದನ್ನು ತನಗೆ ಗೋಚರಿಸಿಕೊಂಡು ಚಿಂತಿಸಲಾರದು. ಹಾಗಾದರೆ ಆ ಪರಮಾತ್ಮನಿಗೆ ಯಾವ ಸ್ವರೂಪವೂ ಇಲ್ಲವೇ ಇಲ್ಲ ಎಂದು ಶಂಕಿಸಬಾರದು; ಏಕೆಂದರೆ ಆತನು ನಮ್ಮೆಲ್ಲರ ಆತ್ಮನೇ ಆಗಿರುತ್ತಾನೆ. ಪ್ರತ್ಯಯಗಳೂ ಅನಾತ್ಮ, ವಿಷಯಗಳೂ ಅನಾತ್ಮ; ಆದ್ದರಿಂದ ವಿಷಯಗಳನ್ನು ಪ್ರತ್ಯಯಗಳು ಹಿಡಿಯಬಹುದು. ಆದ್ದರಿಂದಲೇ ಪ್ರತ್ಯಯಗಳಿಗೆ ಗೋಚರವಾಗದ ವಿಷಯವೇ ಇಲ್ಲ ಎಂಬುದೂ ಸರಿಯಾದ ತರ್ಕವಾಗಿದೆ. ಆದರೆ ನಮ್ಮ ಸ್ವರೂಪವೇ ಆಗಿರುವ ಪರಮಾತ್ಮನನ್ನು ಅನಾತ್ಮವಾದ ಯಾವ ಪ್ರತ್ಯಯವು ತಾನೆ ಹಿಡಿಯಲಾಪದು! ಯಾವದೂ ಇಲ್ಲ. ಆದ್ದರಿಂದ ಆತನು ಅಚಿಂತ್ಯರೂಪನು. ಅಷ್ಟುಮಾತ್ರದಿಂದ ಅವನೇ ಇಲ್ಲವೆಂದರೆ ನಾವೇ ಇಲ್ಲವೆಂದಂತೆ ಆದೀತು. ಆ ಪರಮೇಶ್ವರನು **ಆದಿತ್ಯವರ್ಣನು**; ಆದಿತ್ಯನಿಗೆ ಪ್ರಕಾಶವು ಹೇಗೆ ನಿತ್ಯವಾಗಿ ಸ್ವರೂಪವೇ ಆಗಿರುವದೋ ಹಾಗೆ ಚೈತನ್ಯರೂಪವಾದ ಪ್ರಕಾಶವು ಆತ್ಮನ ಸ್ವರೂಪವೇ ಆಗಿ ನಿತ್ಯವಾಗಿರುತ್ತದೆ. ಅದು ತಮಸ್ಸಿಗೆ ಎಂದರೆ ಅಜ್ಞಾನದ ಕತ್ತಲೆಗೆ ಆಚೆ ಇರುತ್ತದೆ. ಆತನನ್ನು ಅರಿಯೆವು ಎನ್ನುವವರಿಗೂ ಆತ್ಮನಾಗಿ ಬೆಳಗುತ್ತಿರುವ ಚೈತನ್ಯಪ್ರಕಾಶನಾದ್ದರಿಂದ ಸೂರ್ಯನಿಗೆ ಕತ್ತಲೆ ಹೇಗೆ ಎಂದಿಗೂ ಇಲ್ಲವೋ, ಸೂರ್ಯನನ್ನು ಕತ್ತಲೆ ಹೇಗೆ ಎಂದಿಗೂ ಆವರಿಸಲಾರದೋ, ಹಾಗೆಯೇ ಆತನಲ್ಲಿ ಯಾವ ಅಜ್ಞಾನವೂ ಇರುವದಿಲ್ಲ. ಆತನನ್ನು ಯಾವ ಜ್ಞಾನವೂ ವಿಷಯೀಕರಿಸಲಾರದು. ಇಂಥ ಗುಣಗಳಿಂದ ಕೂಡಿದ ಪರಮಾತ್ಮನನ್ನು ಅನುಚಿಂತನೆ ಮಾಡುವವನು ಆ ದಿವ್ಯಪುರುಷನನ್ನೇ ಸೇರುವನು.

ಇಂಥ ಪುರುಷನನ್ನು ಹೇಗೆ ಚಿಂತಿಸಬೇಕು? ಯಾವ ಮಾರ್ಗದಿಂದ ಆತನನ್ನು ಸೇರಬೇಕು? ಅದಕ್ಕಾಗಿ ಅನುಸರಿಸಬೇಕಾದ ಸಾಧನಕ್ರಮವು ಯಾವದು? ಎಂದರೆ:

**ಪ್ರಯಾಣಕಾಲೇ ಮನಸಾಽಚಲೇನ**
**ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ।**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್**
**ಸ ತಂ ಪರಂ ಪುರುಷಮುಪೈತಿ ದಿವ್ಯಮ್॥** (೮-೧೦)

ಪ್ರಾಣವು ದೇಹವನ್ನು ಬಿಟ್ಟುಹೋಗುವ ಕಾಲವು ಬರುತ್ತಲೂ ಅಚಲವಾದ ಮನಸ್ಸಿನಿಂದ ಭಕ್ತಿಯಿಂದಲೂ ಯೋಗಬಲದಿಂದಲೂ ಕೂಡಿಕೊಂಡವನಾಗಬೇಕು. ಮನಸ್ಸು ಅತ್ತಿತ್ತ ವಿಷಯಗಳ ಚಿಂತೆಯಿಂದ ಹರಿದಾಡುವದಕ್ಕೆ ಬಿಡಬಾರದು. ಮನಸ್ಸು ಚಂಚಲವಾಗುವದಕ್ಕೆ ವಿಷಯಗಳ ಪ್ರೇಮವೇ ಕಾರಣವಾಗಿರುತ್ತದೆ. ಆದ್ದರಿಂದ ಅದನ್ನು ಪರಮಾತ್ಮನ ಪ್ರೇಮದಿಂದ ಕಟ್ಟಿಹಾಕಬೇಕು. 'ಕವಿಂ ಪುರಾಣಂ' ಎಂದು ಮುಂತಾಗಿ ಮೇಲೆ ವಿವರಿಸಿರುವ ಪರಮೇಶ್ವರನೇ ನಮ್ಮಗಳ ಆತ್ಮನಾಗಿರುತ್ತಾನೆ; ಆತ್ಮನಿಗಾಗಿಯೇ ವಿಷಯಗಳು ಪ್ರಿಯವಾಗಿರುವದರಿಂದ ಪರಮಾತ್ಮನು ಭಕ್ತರಿಗೆ ಪರಮಪ್ರಿಯನಾಗಿರುತ್ತಾನೆ. ಆನಂದಸ್ವರೂಪನಾದ ಆತನನ್ನಲ್ಲದೆ ಮತ್ತೆ ಯಾರಮೇಲೆ ನಮ್ಮ ಪ್ರೇಮವನ್ನಿಡುವದು ಸರಿಯಾದೀತು?

"ಯೋಗಬಲದಿಂದ ಹುಬ್ಬುಗಳ ನಡುವೆ ಪ್ರಾಣವನ್ನು ಚೆನ್ನಾಗಿ ಪ್ರವೇಶ ಮಾಡಿಕೊಳ್ಳಬೇಕು" ಎಂದು ಈ ಶ್ಲೋಕದಲ್ಲಿ ಹೇಳಿರುವದು ಯೋಗಾಭ್ಯಾಸದ ವಿಷಯ. ಹುಬ್ಬುಗಳ ನಡುವೆ ಪ್ರಾಣವನ್ನು ಇಡುವದು ಹೇಗೆ? ಎಂದು ಕೆಲವರಿಗೆ ಶಂಕೆ ಬರುತ್ತದೆ. ಪ್ರಾಣವೆಂದರೆ ಉಸಿರೆಂದೂ ಅದನ್ನು ಹುಬ್ಬಿನ ನಡುವೆ ಇಡಬೇಕೆಂದೂ ಅರ್ಥವನ್ನು ಮಾಡಿಕೊಳ್ಳುವದರಿಂದ ಹೀಗೆ ಸಲ್ಲದ ಶಂಕೆಯುಂಟಾಗುತ್ತಿರುತ್ತದೆ. ಸೂಕ್ಷ್ಮಶರೀರದ ಕ್ರಿಯಾಶಕ್ತಿಯನ್ನು ಪ್ರಾಣವೆಂದೂ ಜ್ಞಾನಶಕ್ತಿಯನ್ನು ಪ್ರಜ್ಞೆಯ ಜೊತೆಯೆಂದೂ ವೈದಿಕವಾಙ್ಮಯದಲ್ಲಿ ಕರೆದಿರುತ್ತಾರೆ. ಪ್ರಾಣವೂ ಪ್ರಜ್ಞೆಯ ಜೊತೆಯಲ್ಲಿಯೇ ಇದ್ದುಕೊಂಡು ಜೊತೆಯಲ್ಲಿಯೇ ಶರೀರವನ್ನು ಬಿಟ್ಟುಹೋಗುತ್ತದೆ. ಆದ್ದರಿಂದ ಪ್ರಾಣವನ್ನಿಡುವದು ಎಂದರೂ ಚಿತ್ತವನ್ನಿಡುವದು ಎಂದರೂ ಒಂದೇ. ಬೇರೆಬೇರೆಯ ಸ್ಥಾನಗಳಲ್ಲಿ ಚಿತ್ತವನ್ನು ನಿಲ್ಲಿಸಿಕೊಂಡರೆ ಬೇರೆಬೇರೆಯ ಸಿದ್ಧಿಗಳಾಗುವವೆಂದು ಯೋಗಿಗಳು ಹೇಳುತ್ತಾರೆ. ಆದರೆ ಇಲ್ಲಿ ಹೇಳಿರುವದು ಪರಮೇಶ್ವರನಲ್ಲಿಯೇ ಚಿತ್ತವನ್ನಿಟ್ಟು ಮತ್ತೊಂದರ ಚಿಂತೆಯನ್ನು ನಡುವೆ ಬರಗೊಡದೆ ಮಾಡುವ ಧ್ಯಾನರೂಪವಾದ ಧಾರಣಾಯೋಗವು. ಇಂಥ ಉಪಾಸಕರಿಗೆ ಚಿತ್ತವು ವಶವಾಗಿರುವದರಿಂದ ಅವರಿಗೆ ಸುಷುಮ್ನಾನಾಡಿಯ ಮೂಲಕವಾಗಿಯೇ ಉತ್ಕ್ರಾಂತಿಯಾಗುತ್ತದೆ.

ಉಪಾಸಕರಿಗಾಗಲಿ ಅನುಪಾಸಕರಿಗಾಗಲಿ ಇಂದ್ರಿಯಗಳ ವ್ಯಾಪಾರವು ಉಪಸಂಹಾರ ವಾಗುವದು ಸಮಾನವಾಗಿರುತ್ತದೆ; ಆದರೆ ಉಪಾಸಕರಲ್ಲದವರು ಕರ್ಮಕ್ಕೆ ವಶರಾಗಿ ಚಕ್ಷುರಾದಿದ್ವಾರಗಳಿಂದ ಪ್ರಾಣವನ್ನು ಬಿಟ್ಟು ಮತ್ತೆ ಜನ್ಮಾಂತರವನ್ನು ಪಡೆಯುವರು. ಉಪಾಸಕರಾದರೋ ಹೃದಯದ ಕೊನೆಯಲ್ಲಿ ಉಂಟಾಗುವ ಬೆಳಕಿನ ಸಹಾಯದಿಂದ ಮೋಕ್ಷನಾಡಿಯಿಂದಲೇ ಮುನ್ನಡೆಯುತ್ತಾರೆ. ಅಂಥವರು ಒಂದೊಂದು ಭೂಮಿಕೆಯನ್ನು ಗೆದ್ದುಕೊಂಡು ಮೇಲುಮೇಲಿನ ಭೂಮಿಕೆಯನ್ನು ಮುಟ್ಟುತ್ತಾ ಮೇಲಕ್ಕೇರುವ ಮಾರ್ಗವನ್ನು ಸೂಚಿಸುವದಕ್ಕೆ "ಹುಬ್ಬುಗಳ ನಡುವೆ ಪ್ರಾಣವನ್ನು ತಂದಿಟ್ಟುಕೊಂಡು" ಎಂಬ ವಾಕ್ಯವನ್ನು ಇಲ್ಲಿ ಉಪಯೋಗಿಸಿರುತ್ತದೆ.

ಹೀಗೆ ಸತತವಾಗಿ ಧ್ಯಾನಮಾಡುತ್ತಿರುವ ಯೋಗಿಗಳು ಆ ಪರಮಪುರುಷನಾದ ದಿವ್ಯನಾದ ಪರಮಾತ್ಮನನ್ನು ಸೇರುವರು. ಆ ಪರಮಾತ್ಮನನ್ನು ಉಪಾಸನೆಯ ಬಲದಿಂದ ಮುಟ್ಟುವೆವೆನ್ನುವರ ಭಾವನೆ ಹೇಗಿರಬೇಕು?—

**ಯದಕ್ಷರಂ ವೇದವಿದೋ ವದನ್ತಿ**
**ವಿಶನ್ತಿ ಯದ್ಯತಯೋ ವೀತರಾಗಾಃ ।**
**ಯದಿಚ್ಛನ್ತೋ ಬ್ರಹ್ಮಚರ್ಯಂ ಚರನ್ತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥** (೮-೧೧)

'ಯಾವದು ಸ್ಥೂಲ, ಅಣು - ಎಂದು ಮುಂತಾಗಿ ವಿಶೇಷರೂಪದಿಂದ ಹೇಳುವದಕ್ಕೆ ಬಾರದಿರುವ ಅಕ್ಷರವಾದ, ನಾಶವಿಲ್ಲದ, ತತ್ತ್ವವೋ, ಯಾವ ತತ್ತ್ವವನ್ನು ರಾಗವೇ ಮುಂತಾದ ದೋಷಗಳಿಲ್ಲದ ಸಂನ್ಯಾಸಿಗಳು ಜ್ಞಾನದಿಂದ ತಾವೇ ಅದೆಂದು ಅರಿತುಕೊಂಡು ಸಾಯುಜ್ಯವನ್ನು ಹೊಂದುವರೋ, ಯಾವ ತತ್ತ್ವವನ್ನು ತಿಳಿಯುವದಕ್ಕೆಂದು ಸದ್ಗುರುವನ್ನು ಸೇರಿ ಜಿಜ್ಞಾಸುಗಳು ಬ್ರಹ್ಮಚರ್ಯೆ ಯನ್ನು ಆಚರಿಸುವರೋ, ಅದೇ ತತ್ತ್ವವು ಈಗ ನಾನು ಉಪಾಸನೆಮಾಡುತ್ತಿರುವ ಪರಮಾತ್ಮನು' ಎಂದು ಮೇಲೆ ಹೇಳಿದ ರೀತಿಯಲ್ಲಿ ಇಂದ್ರಿಯದ್ವಾರಗಳನ್ನೆಲ್ಲ ಬಿಗಿ ಹಿಡಿದುಕೊಂಡು ಮನಸ್ಸನ್ನು ಹೃದಯಕಮಲದಲ್ಲಿ ತಡೆದಿಟ್ಟುಕೊಂಡು, ಯಾವ ವಿಶೇಷವೃತ್ತಿಯೂ ಇಲ್ಲದಂತೆ ಮಾಡಿಕೊಂಡು, ಮೇಲೆ ವಿವರಿಸಿರುವಂತೆ ಸುಷುಮ್ನಾ ನಾಡಿಯ ಮೂಲಕವಾಗಿ ಭೂಮಿಜಯಕ್ರಮದಿಂದ ಪ್ರಾಣವನ್ನು ಮೂರ್ಧಪ್ರದೇಶ ದಲ್ಲಿಟ್ಟುಕೊಂಡು, ಅಲ್ಲಿಯೇ ಚಿತ್ತವೃತ್ತಿಯನ್ನು ನಿಲ್ಲಿಸಿಕೊಂಡು, ಓಂ ಎಂಬ ಪರಮಾತ್ಮನ ನಾಮವನ್ನು ಉಚ್ಚರಿಸುತ್ತಾ ಆ ನಾಮದ ಅರ್ಥವಾಗಿರುವ ಪರಮಾತ್ಮನನ್ನೇ ಸ್ಮರಿಸಿಕೊಳ್ಳುತ್ತಾ ಈ ದೇಹವನ್ನು ಬಿಟ್ಟು ಯಾವನು ತೆರಳುವನೋ ಅವನು ಪರಮಗತಿಯಾದ ಪರಮೇಶ್ವರನನ್ನೇ ಹೊಂದುವನು. ಇಲ್ಲಿ "ದೇಹವನ್ನು ಬಿಟ್ಟು

ಯಾವನು ತೆರಳುವನೋ" ಎಂದು ಹೇಳಿರುವದರಿಂದ ಉಪಾಸಕರಿಗೆ ದೇಹತ್ಯಾಗವು ಅಷ್ಟು ಸ್ವಾಧೀನವಾಗಿರುತ್ತದೆ ಎಂಬುದನ್ನು ತಿಳಿಸಿದಂತೆ ಆಗಿದೆ. ಸಾಮಾನ್ಯಜನರಿಗೆ ಪ್ರಾಣವು ಉತ್ಕ್ರಾಂತಿಯಾಗುತ್ತಿರುವಾಗ ಶರೀರದ ಅಭಿಮಾನವು ಹೆಚ್ಚಾಗಿರುವದರಿಂದ ಅದನ್ನು ಬಿಟ್ಟು ತೆರಳುವದು ಆಗುವದಿಲ್ಲ; ಕಳ್ಳನನ್ನು ಪೊಲೀಸಿನವರು ಎಳೆದೊಯ್ಯು ವಂತೆ ಕಾಲಕರ್ಮಪಾಶವು ಆಯಾ ಸಾಮಾನ್ಯಜೀವನನ್ನು ಎಳೆದೊಯ್ಯುತ್ತಿರುವದು. ಆದ್ದರಿಂದ ಅವನಿಗೆ ಬಹಳ ಸಂಕಟವಾಗುತ್ತಿರುವದು. ಆದರೆ ಉಪಾಸಕರಿಗೆ ಹಾಗಿರುವದಿಲ್ಲ. ಒಂದು ಮನೆಯನ್ನು ಬಿಟ್ಟು ಮತ್ತೊಂದು ಮನೆಗೆ ಹೋಗುವವರ ಹಾಗೆ ಸಲೀಸಾಗಿ ಸಂತೋಷದಿಂದ ಅವರು ಹೊರಟುಹೋಗುತ್ತಾರೆ. ಪರಮಾತ್ಮನ ಸಾರೂಪ್ಯವನ್ನೇ ಅವರು ಪಡೆದುಬಿಡುತ್ತಾರೆ.

ಆಸ್ತಿಕರಾದ ಉಪಾಸಕರು ಶಾಸ್ತ್ರದಲ್ಲಿ ತಿಳಿಸಿರುವಂತೆ ದೃಢವಿಶ್ವಾಸದಿಂದ ಉಪಾಸನೆಯನ್ನು ಮಾಡಿ ಶರೀರತ್ಯಾಗವಾದ ಬಳಿಕ ಪರಮಾತ್ಮನನ್ನೇ ಸೇರುವೆವೆಂದು ಭಾವಿಸಿಕೊಂಡಿರುತ್ತಾರೆ. ಇದೆಲ್ಲ ನಂಬಿಕೆಯಿಂದ ಮಾಡತಕ್ಕ ಸಾಧನವಾಗಿರುತ್ತದೆ. ಆದರೆ ಬದುಕಿದ್ದಾಗಲೇ ಇಂಥ ಉಪಾಸನೆಯಿಂದ ನಮ್ಮ ಮನಸ್ಸು ಒಂದು ಮೇಲಿನ ಮಟ್ಟಕ್ಕೆ ಏರುವದೆಂಬುದು ಅನುಭವಗಮ್ಯವಾಗಿರುತ್ತದೆ - ಎಂಬುದನ್ನೂ ನಾವು ಲಕ್ಷ್ಯದಲ್ಲಿಡಬೇಕು. ಲೌಕಿಕವ್ಯವಹಾರವನ್ನು ಮಾಡುವವರಿಗೂ ದಾನಧರ್ಮ ಪರೋಪಕಾರನಿರತರಿಗೂ ಪರಮಾತ್ಮನ ಭಾವನೆಯಲ್ಲಿ ನಿರತರಾಗಿರುವವರಿಗೂ ಬೇರೆಬೇರೆಯ ಮಟ್ಟದ ಮನಸ್ಸಿರುವದೆಂಬುದೂ ಆಯಾ ಮಟ್ಟದಲ್ಲಿ ಆಗುವ ಆನಂದಾನುಭವವು ಬೇರೆಬೇರೆಯಾಗಿರುವದೆಂಬುದೂ ಅವರವರ ಅನುಭವ ದಲ್ಲಿರುತ್ತದೆ. ರತ್ನಪರೀಕ್ಷಕರೂ, ಸಂಗೀತಗಾರರೂ, ಶಿಲ್ಪಿಗಳೂ, ಬೇರೆಬೇರೆಯ ಕಲಾಕೌಶಲವಂತರೂ ಬೇರೆಬೇರೆಯ ಮಟ್ಟದ ಅರಿವಿನಿಂದ ಅವರವರಿಗೆ ಅಸಾಧಾರಣ ವಾಗಿರುವ ಆನಂದವನ್ನು ಹೊಂದುತ್ತಿರುವಂತೆ ಸಗುಣಸಾಕಾರಪರಮೇಶ್ವರನ ನಿರಂತರಚಿಂತನೆಯಿಂದ ಈ ಲೋಕದಲ್ಲಿ ಈ ಜನ್ಮದಲ್ಲಿಯೇ ಪರಮಾತ್ಮನ ಸಾಕ್ಷಾತ್ಕಾರವನ್ನು ಹೊಂದಿ ತಾವೂ ಆನಂದವನ್ನು ಅನುಭವಿಸುತ್ತಾ ಇತರರಿಗೂ ತಮ್ಮ ಆನಂದದ ತಂಬೆಳಕನ್ನು ಬೀರುತ್ತಿರುವ ಮಹನೀಯರು ಹಿಂದೆಯೂ ಇದ್ದರು; ಈಗಲೂ ಇರಬೇಕು. ಕಬೀರ, ತುಕಾರಾಮ, ನಾಮದೇವ - ಮುಂತಾದ ಭಕ್ತರ ಚರಿತ್ರೆಯಲ್ಲಿ ಇಂಥ ಸಗುಣಸಾಕಾರಪರಮೇಶ್ವರನ ಸಾಕ್ಷಾತ್ಕಾರವಾದದ್ದು ಕಂಡು ಬರುತ್ತದೆ. ಆದ್ದರಿಂದ ನಾವುಗಳು ಭಕ್ತಿಯಿಂದ ಕೂಡಿ ಇಂಥ ಪರಮೇಶ್ವರನ ಚಿಂತನೆಯಲ್ಲಿ ಮಗ್ನರಾಗೋಣ. ಆತನ ಅನುಗ್ರಹದಿಂದ ಇಲ್ಲಿಯೂ ಪರಲೋಕ ದಲ್ಲಿಯೂ ಆನಂದವು ಸೂರೆಯಾಗುವದರಲ್ಲಿ ಸಂದೇಹವಿಲ್ಲ. ನಮ್ಮ ನಮ್ಮ

ಇಷ್ಟದೇವತೆಯನ್ನು ಭಕ್ತಿಯಿಂದ ಉಪಾಸನೆಮಾಡಿ ಆಗ ನಮ್ಮ ಅನುಭವಕ್ಕೆ ಯಾವ ಫಲವು ಗೋಚರವಾಗುವದೆಂಬುದನ್ನು ನಾವುನಾವೇ ಕಂಡುಕೊಳ್ಳಬೇಕಾಗಿದೆ.

ಭಗವಂತನ ಉಪಾಸನೆಯಿಂದ ಕಾರ್ಯಗಳು ಅಡಚಣೆಯಿಲ್ಲದೆ ಸಲೀಸಾಗಿ ನೆರವೇರುವದು. ಇಂಥ ನಷ್ಟವಾಯಿತಲ್ಲ! ಎಂದು ಕೊರಗುವದು ತಪ್ಪುವದು. ಮನಸ್ಸಿಗೆ ಹರ್ಷವಾಗುವದು, ಶಾಂತಿಯು ಬರುವದು; ಚಿತ್ತವು ಶುದ್ಧಿಯಾಗಿ ಆ ಭಗವಂತನ ಸಾಕ್ಷಾತ್ಕಾರವನ್ನೇ ಕೊನೆಯಲ್ಲಿ ಪಡೆದು ಆನಂದಿಸುವೆವು.

## ೫೯. ಉಪಾಸಕರಿಗಾಗುವ ಶಾಶ್ವತಗತಿ ೮-(೧೨-೨೦)
### (೨೧-೯-೪೭)

ಓಂ ಎಂಬ ನಾಮವನ್ನುಚ್ಚರಿಸುತ್ತಾ ಪರಮೇಶ್ವರನನ್ನು ಸ್ಮರಿಸುತ್ತಾ ದೇಹವನ್ನು ಬಿಟ್ಟವರಿಗೆ ಪರಮಗತಿಯಾಗುವದೆಂದು ಹೇಳಿದೆಯಷ್ಟೆ. ಇದು ಉಪನಿಷತ್ತಿನಲ್ಲಿ ಹೇಳಿರುವ ಎರಡು ಮುಖ್ಯೋಪಾಯಗಳಲ್ಲಿ ಒಂದು. ಜ್ಞಾನದಿಂದ ಇಲ್ಲಿಯೇ ಅನಾತ್ಮಸಂಬಂಧವಾದ ಅನರ್ಥಗಳಿಂದ ಬಿಡುಗಡೆಯನ್ನು ಹೊಂದುವದು ಒಂದು ಉಪಾಯವು; ಧ್ಯಾನ ಅಥವಾ ಉಪಾಸನೆಯಿಂದ ಶರೀರಪಾತವಾದ ಬಳಿಕ ಬ್ರಹ್ಮಲೋಕಕ್ಕೆ ಹೋಗಿ ಜ್ಞಾನದ ದ್ವಾರದಿಂದ ಮುಕ್ತಿಯನ್ನು ಪಡೆಯುವದು ಮತ್ತೊಂದು ಉಪಾಯವು. ಎರಡನೆಯ ಉಪಾಯದಲ್ಲಿ ಇಂದ್ರಿಯಗಳನ್ನು ಒಳಗಡೆಗೆ ಎಳೆದುಕೊಳ್ಳಬೇಕು; ಮನಸ್ಸನ್ನು ಕ್ರಮಕ್ರಮವಾಗಿ ಹಿಂಜಗ್ಗಿ ಮೂರ್ಧಪ್ರದೇಶದಲ್ಲಿ ನಿಲ್ಲಿಸಿಕೊಳ್ಳಬೇಕು, ಓಂ ಎಂಬ ಪರಮಾತ್ಮನ ನಾಮವನ್ನು ಉಚ್ಚರಿಸುತ್ತಾ ಪರಮೇಶ್ವರನ ಸ್ಮರಣೆಯನ್ನು ಮಾಡುತ್ತಾ ಇರಬೇಕು. ಇದರಿಂದ ಶರೀರವು ಬಿದ್ದುಹೋದ ಬಳಿಕ ಪರಮಾತ್ಮನನ್ನು ಸಾಧಕನು ಸೇರುವನು. ಕರ್ಮಯೋಗವೇ ಬಹಳ ಕಷ್ಟ; ಇನ್ನು ಅಂತರಂಗಸಾಧನವಾದ ಧ್ಯಾನ ಅಥವಾ ಉಪಾಸನೆಯು ಇನ್ನೆಷ್ಟು ಕಷ್ಟವೆಂಬುದನ್ನು ಹೇಳಬೇಕಾದದ್ದೇ ಇಲ್ಲ. ಆದರೂ ಪರಮಾತ್ಮನ ಅನುಗ್ರಹದಿಂದ ಅದನ್ನೂ ಸಾಧಕರು ಅಳವಡಿಸಿಕೊಳ್ಳುತ್ತಾರೆ.

ಓಂಕಾರವು ವೇದದ ಸಾರವಾಗಿರುತ್ತದೆ. ಸಕಲವನ್ನೂ ಬಿಟ್ಟ ಸಂನ್ಯಾಸಿಯು ವೇದವನ್ನು ಓಂಕಾರದಲ್ಲಿ ಅಡಗಿಸಿಕೊಳ್ಳುತ್ತಾನೆ. ತನ್ನ ಸರ್ವಸ್ವವನ್ನೂ ಮಾರಿ ಬಂದ ಹಣವನ್ನು ಬ್ಯಾಂಕಿನಲ್ಲಿಟ್ಟುಕೊಂಡವನು ಚೆಕ್ಕು ಬರೆದ ಹಾಗೆಲ್ಲ ಹಣವನ್ನು ಪಡೆಯುವಂತೆ ಓಂಕಾರವೆಂಬ ಬ್ಯಾಂಕಿನಲ್ಲಿ ಸಾಧಕನು ಇಚ್ಛಿಸಿದ್ದನ್ನೆಲ್ಲ ಪಡೆದುಕೊಳ್ಳಬಹುದು.

ಆದರೆ ಓಂಕಾರದ ಸ್ವರೂಪವನ್ನು ಸರಿಯಾಗಿ ತಿಳಿಯದಿದ್ದರೆ ಅದರ ಬೆಲೆಯು ಗೊತ್ತಾಗಲಾರದು. ಓಂಕಾರದ ಮೂಲಕವಾಗಿ ಮಾಡಬೇಕೆಂದು ಗೀತೆಯಲ್ಲಿ ಹೇಳಿರುವ ಅನುಷ್ಠಾನವು ನಮಗೆ ಸಾಧ್ಯವಿಲ್ಲದಿದ್ದರೂ ಅದರ ಪರೋಕ್ಷಜ್ಞಾನವನ್ನಾದರೂ ಸಂಪಾದಿಸುವದಕ್ಕೆ ನಾವು ಪ್ರಯತ್ನಪಡಬಹುದು. ಓಂಕಾರದಲ್ಲಿ ಅ, ಉ, ಮ್- ಎಂಬ ಮೂರು ಮಾತ್ರೆಗಳಿವೆ. ಅ ಎಂದರೆ ಇಡಿಯ ಬ್ರಹ್ಮಾಂಡವೇ ಉಪಾಧಿಯಾಗುಳ್ಳ ಪರಮಾತ್ಮನು, ವಿಷ್ಣುವು. ಜಾಗ್ರದಭಿಮಾನಿಯಾದ ಆತ್ಮನನ್ನು ಈ ಮಾತ್ರೆಯು ಹೇಳುವದು. ಹೀಗೆಯೇ ಸಮಷ್ಟಿಮನಸ್ಸೆಲ್ಲವನ್ನೂ ಉಪಾಧಿಯಾಗುಳ್ಳ ಹಿರಣ್ಯ ಗರ್ಭನನ್ನು ಉಕಾರವು ಹೇಳುವದು; ಮತ್ತು ಸಮಸ್ತವನ್ನೂ ಸಂಹರಿಸಿ ತನ್ನಲ್ಲಿ ಅಡಗಿಸಿಕೊಳ್ಳುವ ಅವ್ಯಾಕೃತೋಪಾಧಿಯ ಆತ್ಮನನ್ನು ಮಕಾರವು ಹೇಳುವದು. ಈ ಮೂರು ಮಾತ್ರೆಗಳೂ ಸೇರಿ ಆಗಿರುವ ಓಂಕಾರವು, ತುರೀಯನನ್ನು ಎಂದರೆ ಯಾವ ಉಪಾಧಿಯ ಹಂಗೂ ಇಲ್ಲದೆ ತಾನಿದ್ದಂತೆ ಇರುವ ಆತ್ಮನನ್ನು, ಲಕ್ಷಣೆಯಿಂದ ತಿಳಿಸುವದು; ತುರೀಯನಾಗಿರುವ ಪರಮಾತ್ಮನು ಮನಸ್ಸಿಗಾಗಲಿ ಮಾತಿಗಾಗಲಿ ವಿಷಯನಲ್ಲ.

ಓಂಕಾರವಾಚ್ಯನಾದ ಪರಮಾತ್ಮನನ್ನು ಯಾವಾಗಲೂ ಧ್ಯಾನಮಾಡುತ್ತಿದ್ದರೆ, ಶ್ರುತಿಸ್ಮೃತಿಪುರಾಣಗಳಲ್ಲಿ ವರ್ಣಿಸಿರುವಂತೆ ಆತನ ಸಗುಣಸಾಕಾರವನ್ನು ಸತತವಾಗಿ ಅರ್ಚನೆ, ಧ್ಯಾನ, ನಾಮಸ್ಮರಣಾದಿಗಳಿಂದ ಆರಾಧನೆಮಾಡುತ್ತಿದ್ದರೆ, ಸಾಯುವಾಗಲೂ ಆತನ ಸ್ಮರಣೆಯೇ ಬಂದು ಈ ಪ್ರಪಂಚವನ್ನು ಬಿಟ್ಟಗಲುವ ನಿಮಿತ್ತದಿಂದ ನಮಗೆ ಯಾವ ದುಃಖವೂ ಆಗುವದಿಲ್ಲ. ಸುಲಭವಾಗಿ ದೇಹವನ್ನು ಬಿಟ್ಟು ಹೋಗಬಹುದು. ಪರಮಾತ್ಮನನ್ನು ಸೇರಿಕೊಳ್ಳಬಹುದು. ಪ್ರಪಂಚದಲ್ಲಿ ನಮಗೆ ಇನ್ನಿಲ್ಲವೆನ್ನುವಷ್ಟು ಆಸಕ್ತಿಯಿರುತ್ತದೆ; ಆದ್ದರಿಂದ ಶರೀರವನ್ನು ಬಿಟ್ಟ ಜೀವರುಗಳೂ ಶರೀರವಿದ್ದ ಸ್ಥಳದಲ್ಲಿಯೇ ಹರಿದಾಡುತ್ತಿರುವರಂತೆ! ಪ್ರೇತಗಳಿಗೆ ಶರೀರವಿಲ್ಲದಿದ್ದರೂ ಮನಸ್ಸು ಅಭಿಮಾನದಿಂದ ಸಂಕಟಪಡುತ್ತಿರುವದಂತೆ! ಆದರೆ ಪರಮೇಶ್ವರನ ಧ್ಯಾನವುಳ್ಳವರು ಆತನ ನಾಮವನ್ನೇ ಉಚ್ಚರಿಸುತ್ತಾ ಆ ನಾಮನಾಮಿಗಳನ್ನಲ್ಲದೆ ಮತ್ತೆ ಯಾವ ವಿಷಯದ ಗರಜೂ ಇಲ್ಲದೆ ಸಲೀಸಾಗಿ ಈ ಲೋಕವನ್ನು ಬಿಟ್ಟು ತೆರಳುವರು. ಅವರಿಗೆ ಈ ಲೋಕದಲ್ಲಿರುವಾಗಲೂ ಸಂತೋಷವೇ, ಇದನ್ನು ಬಿಟ್ಟು ಪರಲೋಕಕ್ಕೆ ತೆರಳುವಾಗಲೂ ಸಂತೋಷವೇ. ಸಂನ್ಯಾಸಿಗಳು ಓಂಕಾರವನ್ನು ಜಪಿಸುವಂತೆ ನಾವೂ ಪರಮಾತ್ಮನ ನಾಮಗಳಾದ ರಾಮ, ಶಿವ - ಮುಂತಾದ ಮಂತ್ರಗಳನ್ನು ಗುರೂಪದೇಶಮೂಲಕವಾಗಿ ಪಡೆದುಕೊಂಡು ಅದನ್ನು ಜಪಿಸುತ್ತಿರಬೇಕು. ಆ ನಾಮ ಮತ್ತು ನಾಮಿ (ಪರಮೇಶ್ವರ) - ಇವುಗಳನ್ನು ಬಿಟ್ಟು ಮತ್ತೇನನ್ನೂ ಚಿಂತಿಸದೆ

ಇರಬೇಕು. ಹೀಗಾದರೆ ನಮಗೆ ಆ ಪರಮಾತ್ಮನೆಂಬ ಪರಗತಿಯು ಸುಲಭವಾಗಿ ಸಿಕ್ಕುವದು.

ಅನನ್ಯಚಿತ್ತರಾಗಿ ಸತತವಾಗಿ ಯಾರು ನಿತ್ಯವಾಗಿ ಪರಮಾತ್ಮನನ್ನೇ ಸ್ಮರಿಸುತ್ತಿರುವರೋ ಆ ನಿತ್ಯಯುಕ್ತರಾದ ಯೋಗಿಗಳಿಗೆ ಆತನು ಸುಲಭನಾಗಿರುವವನು. ನಮ್ಮಲ್ಲಿ ಧನಚಿತ್ತರು, ಬಂಧುಚಿತ್ತರು, ಸ್ತ್ರೀಚಿತ್ತರು - ಮುಂತಾದವರು ಅನೇಕರು ಇರುತ್ತಾರೆ; ಆದರೆ ಪರಮಾತ್ಮನಲ್ಲಿಯೇ ನೆಟ್ಟ ಚಿತ್ತವುಳ್ಳವರಾಗಿ ಯಾರು ಪರಮಾತ್ಮನನ್ನೇ ನಿತ್ಯವೂ ನೆನೆಯುತ್ತಿರುವರೋ, ನಿರಂತರವಾಗಿ ದೀರ್ಘಕಾಲದವರೆಗೆ ಆದರ ಸತ್ಕಾರಪೂರ್ವಕವಾಗಿ ಧ್ಯಾನಮಾಡುತ್ತಿರುವ ಆ ಸಾಧಕರಿಗೆ ಮಾತ್ರ ಪರಮಾತ್ಮನು ಸುಲಭನಾಗಿರುತ್ತಾನೆ. ಪರಮಾತ್ಮನನ್ನು ಪಡೆದ ಮಹಾತ್ಮರು ಈ ದುಃಖಾಲಯವಾದ ಅಶಾಶ್ವತವಾದ ಪ್ರಪಂಚವನ್ನು ಮತ್ತೆ ಸೇರುವದೇ ಇಲ್ಲ, ಅವರಿಗೆ ಪುನರ್ಜನ್ಮವೇ ಆಗುವದಿಲ್ಲ - ಎಂದು ಅಭಿಪ್ರಾಯ. ಜನ್ಮವನ್ನು ಪಡೆಯುವದೆಂದರೇನು? ದುಃಖದ ಆಲಯವನ್ನು ಹೊಗುವದು, ಅನಿತ್ಯವಾದ ಸುಖಾಭಾಸಗಳಿಗೆ ಹೆಣಗಾಡುವದು. ಅನನ್ಯಚಿತ್ತರಾದ ಈಶ್ವರೋಪಾಸಕರಿಗೆ ಈ ಎರಡೂ ತಪ್ಪಿಹೋಗುವವು.

ಪಾಶ್ಚಾತ್ಯರು ಪ್ರಪಂಚವಿಷಯವಾಗಿ ನಮಗಿರುವ ದೃಷ್ಟಿಯನ್ನು ಅಶುಭ ದೃಷ್ಟಿಯೆಂದು ಹಳಿಯುತ್ತಾರೆ. ಈ ಲೋಕದಲ್ಲಿ ಹುಟ್ಟುವದು ದುಃಖಕ್ಕಲ್ಲ; ಹುಟ್ಟಿ ಸಂತೋಷವಾಗಿರುವದನ್ನು ಬಿಟ್ಟು ಆತ್ಮಹತ್ಯೆಯನ್ನು ಮಾಡಿಕೊಳ್ಳಬೇಕೆಂದು ಯಾವ ವಿವೇಕಿಯೂ ಹೇಳಲಾರನು. ಆದ್ದರಿಂದ ಲೋಕದಲ್ಲಿ ಜನಿಸುವದು ತಪ್ಪೆಂಬ ಅಭಿಪ್ರಾಯವೇ ತಪ್ಪು ಎಂದು ಅವರೆನ್ನುತ್ತಾರೆ. ಆದರೆ ಇದು ಸರಿಯಲ್ಲ. ಏಕೆಂದರೆ ಮನುಷ್ಯನಿಗೆ ಬೇಕಾಗಿರುವದು ಪುರುಷಾರ್ಥವು. ಆದರೆ ಸಾಮಾನ್ಯರ ದೃಷ್ಟಿಯಿಂದ ಪುರುಷಾರ್ಥವು ಯಾವದು? ಚೆನ್ನಾಗಿ ಉಂಡು, ತಿಂದು, ಕುಡಿದು ವಿಷಯ ಭೋಗಗಳಲ್ಲಿ ಮಗ್ನರಾಗಿರುವದೇ ಪುರುಷಾರ್ಥವೆಂದು ಅವರು ಭಾವಿಸಿರುತ್ತಾರೆ. ಮಕ್ಕಳು ಆಟಕ್ಕಾಗಿ ಹೊಡೆದಾಡುವರು; ಕೆಲವರು ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಪ್ಯಾಸಾಗುವದಕ್ಕೆ ನಂಬರು ಬೇಕೆಂದು ಹಾತುವರಿಯುತ್ತಿರುವರು. ಅವರಿಗೆ ವಿದ್ಯೆ ಬಾರದಿದ್ದರೂ ಚಿಂತೆಯಿಲ್ಲ; ಹೇಗಾದರೂ 'ನಂಬರು' ಬಂದರೆ ಆಯಿತು. ಆದರೆ ತಂದೆತಾಯಿಗಳ ದೃಷ್ಟಿಯಲ್ಲಿ ಹುಡುಗರಿಗೆ ಮುಖ್ಯವಾಗಿ ವಿದ್ಯೆ ಬೇಕು; ಅವರಿಗೆ ನಂಬರು ಬಂದದ್ದು ಅವರ ವಿದ್ಯಾಪಾರಂಗತೆಗೆ ಚಿಹ್ನೆಯಾಗಿದ್ದರೆ ಅದೂ ಬರಲಿ! ಎಂದು ಅವರೆನ್ನುತ್ತಾರೆ. ಅಲ್ಲವೆ? ಇದರಂತೆ ಈ ಲೋಕಕ್ಕೆ ಬೆಲೆಯೂ ಅಷ್ಟೇ ಎಂದು ಬಲ್ಲವರು ಹೇಳುತ್ತಾರೆ. ಧನ ಬೇಕು, ಮನೆ ಬೇಕು, ಹೊಲ ಬೇಕು; ಆದರೆ ಅವನ್ನು ಹೇಗಾದರೂ ಸಂಪಾದಿಸಿದರೆ ಸರಿ ಎಂಬುದನ್ನು ತಿಳಿದವರು ಒಪ್ಪುವದಿಲ್ಲ.

ಅನ್ಯಾಯದಿಂದಲಾದರೂ ಧನವನ್ನು ಸಂಪಾದಿಸಿದರೆ ಆಯಿತೆಂದು ಬಗೆಯುವವರಿಗೆ ಈ ಜನ್ಮವು ಪಾಪದ ಸಂಪಾದನೆಗೇ ಎಂದಾಗುವದು. ಅದೊಂದು ಜನ್ಮವೆನಿಸೀತೆ? ಪಾಪದ ಜನ್ಮವು ನರಕವೇ ಹೊರತು ನಿಜವಾದ ಜನ್ಮವಲ್ಲ ಎಂಬುದು ಅವರ ದೃಷ್ಟಿ. ದೊಡ್ಡವರು ಜನ್ಮಕ್ಕೆ ಅಂಜುವದಿಲ್ಲ, ಎಚ್ಚರದ ದೃಷ್ಟಿಯಿಂದ ಕನಸು ವ್ಯರ್ಥವಾಗಿರುವಂತೆ, ಕನಸಿನಿಂದ ಎಚ್ಚೆತ್ತರೆ ದುಃಖದಿಂದ ಬಿಡುಗಡೆಯಾದಂತೆ ಹೇಗೆ ಜನರು ಭಾವಿಸುವರೋ ಹಾಗೆಯೇ ಬಲ್ಲವರೂ ಈ ಜನ್ಮವು ಒಂದು ಕನಸಿನಷ್ಟು ಬೆಲೆಯುಳ್ಳದ್ದು ಎಂದು ಭಾವಿಸುವರು. ಈ ಕನಸಿನಲ್ಲಿ ಸುಖವಿದೆ, ದುಃಖವೂ ಇದೆ. ಆದರೆ ಇದರಿಂದ ಎಚ್ಚೆತ್ತರೆ, ಪರಮಾತ್ಮನನ್ನೇ ಸೇವಿಸಬೇಕು ಎಂಬ ಎಚ್ಚರವನ್ನು ಪಡೆದರೆ, ಆಗ ಎಂದೆಂದಿಗೂ ದುಃಖದ ಸೋಂಕಿರುವದಿಲ್ಲ. ಆದ್ದರಿಂದ ತಿಳಿದವರ ದೃಷ್ಟಿಯಿಂದ ಪರಮಾತ್ಮನ ಕಡೆಗೆ ಹೊರಡುವದೇ ಪುರುಷಾರ್ಥವು. ಇದೆಲ್ಲವೂ ಪರಮಾತ್ಮನ ಲೀಲೆಯು, ಆತನು ಕಟ್ಟಿರುವ ನಾಟಕವು. ನಾವುಗಳೆಲ್ಲರೂ ಆ ನಾಟಕದಲ್ಲಿ ಪಾತ್ರವನ್ನು ವಹಿಸಿರುವವರು. ಇದನ್ನು ತಿಳಿದುಕೊಂಡರೆ ನಮಗೆ ಈ ಲೋಕವು ದುಃಖಮಯವಲ್ಲ.

ಹೀಗೆ ನೋಡುವಾಗ ಸಂಸಾರವೆಂಬುದು ಒಂದು ದೃಷ್ಟಿಯಿಂದ ಸುಖದುಃಖ ಮಯವಾಗಿರುತ್ತದೆ: ಇನ್ನೊಂದು ದೃಷ್ಟಿಯಿಂದ ಇದೆಲ್ಲವೂ ದುಃಖಾಲಯವೇ ಆಗಿರುತ್ತದೆ. ನಿತ್ಯವಾದ ಶಾಶ್ವತವಾದ ಪರಮಾತ್ಮಪ್ರಾಪ್ತಿರೂಪವಾದ ಆನಂದಕ್ಕೆ ಹೋಲಿಸಿದರೆ ಈ ಸಂಸಾರವು ಎಷ್ಟು ತುಚ್ಛವಾಗಿರುತ್ತದೆ, ಎಷ್ಟು ದುಃಖಮಯ ವಾಗಿರುತ್ತದೆ, ಎಷ್ಟು ಅಶಾಶ್ವತವಾಗಿರುತ್ತದೆ! ರೋಮನ್ನರು ಬ್ರಿಟಿಷ್‌ದ್ವೀಪವನ್ನು ಮುನ್ನೂರು ವರ್ಷಗಳ ಕಾಲ ಆಳುತ್ತಿದ್ದು ಕೊನೆಗೂ ಅದನ್ನು ಬಿಟ್ಟುಹೋದರಂತೆ; ಆದರೆ ಇಂಗ್ಲೆಂಡಿನ ಚರಿತ್ರೆಯಲ್ಲಿ ಅದಕ್ಕೆ ಎರಡು ಪುಟಗಳಷ್ಟು ಸ್ಥಳವೂ ಸಿಕ್ಕಿರುವದಿಲ್ಲ. ಪರಮಾತ್ಮನ ನಿತ್ಯತ್ವಕ್ಕೆ ಹೋಲಿಸಿದರೆ, ಈ ನಮ್ಮ ಬಾಳು ಎಷ್ಟು ಅಶಾಶ್ವತವಾದದ್ದು ಎಂಬುದು ಕೂಡಲೆ ಸ್ಫುಟವಾಗುತ್ತದೆ. ಆದರೂ ನಾವು ಇಲ್ಲಿಯೇ ಕೆಲಸ ಮಾಡಬೇಕಾಗಿರುತ್ತದೆ. ಈ ಸಂಸಾರದ ಅಸಾರತೆಯನ್ನೂ ಅಶಾಶ್ವತತ್ವವನ್ನೂ ಮರೆಯದೆ ಪರಮೇಶ್ವರನ ಕಡೆಗಿರಬೇಕಾದ ದೃಷ್ಟಿಯನ್ನು ಅತ್ತಿತ್ತ ಕದಲಿಸದೆ, ನಮ್ಮ ನಮ್ಮ ಕರ್ತವ್ಯವನ್ನು ನಾವು ನೆರವೇರಿಸುತ್ತಿರಬೇಕು. ಬ್ರಹ್ಮಲೋಕದವರೆಗಿನ ಎಲ್ಲಾ ಲೋಕಗಳೂ ಸ್ವಲ್ಪಸ್ವಲ್ಪ ಕಾಲವಿದ್ದು ನಮ್ಮನ್ನು ಈ ಲೋಕಕ್ಕೆ ಹಿಂತಿರುಗಿಸುವವು; ಪರಮಾತ್ಮನನ್ನು ಪಡೆದರೆ ಮಾತ್ರ ನಿತ್ಯಾನಂದವು ದೊರೆಯುವದು.

ಸಹಸ್ರಯುಗಗಳಾದರೆ ಬ್ರಹ್ಮನ ಒಂದು ಹಗಲು, ಮತ್ತೆ ಸಹಸ್ರಯುಗಗಳಾದರೆ ಆತನಿಗೆ ಒಂದು ರಾತ್ರೆಯಾಗುವದು. ಇಂಥ ದೀರ್ಘಕಾಲವಿರುವ ಬ್ರಹ್ಮಪದವಿಯನ್ನು

ಮುಟ್ಟಿದರೂ ಮತ್ತೆ ಈ ಲೋಕಕ್ಕೆ ಹಿಂತೆರಳಬೇಕಾಗುವದು- ಎಂದಮೇಲೆ ನಮ್ಮ ಲೋಕದ ವಿಷಯಗಳ ಪಾಡೇನು? ಇವುಗಳ ಮೇಲಿನ ಆಶೆಯನ್ನು ಬಿಟ್ಟುಬಿಡಬೇಕು. ಈ ಮಾನುಷಶರೀರವೆಂಬುದೊಂದು ತೂತುಬಿದ್ದ ಹಡಗಿನಂತೆ ಇದೆ. ಇದರಿಂದಲೇ ನಾವು ಸಂಸಾರಸಾಗರವನ್ನು ದಾಟಬೇಕಾಗಿದೆ. ಬಹಳ ಕಾಲವನ್ನು ವಿಷಯಚಿಂತೆಯಿಂದ ಕಳೆಯದೆ, ಸದ್ಗುರುವೆಂಬ ಕರ್ಣಧಾರನನ್ನು ಉಪಯೋಗಿಸಿಕೊಂಡು ಬೇಗನೆ ಸಾಗರದ ಆಚೆಯ ದಂಡೆಯನ್ನು ಸೇರಿಬಿಡಬೇಕು. ಇದನ್ನು ತಿಳಿಸಿಕೊಡುವದಕ್ಕಾಗಿಯೇ ಈ ಲೋಕವು ದುಃಖಾಲಯವೆಂದೂ ಅಶಾಶ್ವತವೆಂದು ಹೇಳಿರುತ್ತದೆ. ಜ್ಞಾನಿಗಳು ಈ ದುಃಖಮಯವಾದ ಲೋಕವನ್ನೇ ಆನಂದಮಯನಾದ ಪರಮಾತ್ಮನನ್ನಾಗಿ ಕಾಣುತ್ತಿರುವರು. ಮಿಕ್ಕವರು ಮಾತ್ರ ಎಚ್ಚರಾಗಿರುವದು, ನಿದ್ರೆಯನ್ನು ಅನುಭವಿಸುವದು; ಬದುಕಿರುವದು, ಸಾಯುವದು; ಸೃಷ್ಟಿಯಲ್ಲಿ ಹೊರಕ್ಕೆ ಬರುವದು, ಪ್ರಲಯದಲ್ಲಿ ಜಗತ್ಕಾರಣದಲ್ಲಿ ಸೇರಿಹೋಗುವದು. ಹೀಗೆ ಮತ್ತೆ ಮತ್ತೆ ಕರ್ಮಪರಾಧೀನರಾಗಿ ಸಂಸಾರದ ರಾಟೆಯಲ್ಲಿ ತೊಳಲುತ್ತಿರುವರು. ಮತ್ತೆ ಹುಟ್ಟುವದು, ಮತ್ತೆ ಸಾಯುವದು, ಮತ್ತೆ ಏಳುವದು, ಮತ್ತೆ ಮಲಗುವದು, ಮತ್ತೆ ಸೃಷ್ಟಿಯಾಗುವದು, ಮತ್ತೆ ಪ್ರಲಯವಾಗುವದು - ಇದೇ ನಮ್ಮ ಈಗಿನ ಬಾಳು !

ಆದರೆ 'ಹೀಗೆ ಮತ್ತೆ ಮತ್ತೆ ಸಂಸಾರದೊಳಗೆ ಸಿಕ್ಕಿಬಿದ್ದು ನರಳುತ್ತಿರುವದೇ ನಮ್ಮ ಬಾಳೋ, ಅಥವಾ ನಮಗೆ ಮತ್ತೆ ಯಾವದಾದರೂ ವಿಶ್ರಾಂತಿಸ್ಥಾನವಿದೆಯೊ? ಎಷ್ಟು ಸಲ ನಿದ್ರಿಸಿದರೂ, ಎಷ್ಟು ಸಲ ಸತ್ತರೂ, ಎಷ್ಟು ಸಲ ಪ್ರಲಯವಾದರೂ ನಾವು ಮತ್ತೆ ಮತ್ತೆ ಅವ್ಯಕ್ತಭಾವವನ್ನು ಬಿಟ್ಟು ವ್ಯಕ್ತಭಾವವನ್ನು ಪಡೆಯುತ್ತಿರುವೆವಲ್ಲ!' ಇದಕ್ಕಿಂತ ಬೇರೆಯಾದ ಶಾಂತಿಸ್ಥಾನವೊಂದು ಇದೆಯೆ? ಎಂದು ಯಾರಿಗೆ ಶಂಕೆಯು ಉದಯಿಸುವದೋ ಅವರಿಗೆ ಈ ಭಗವದುಕ್ತಿಯು ಸಮಾಧಾನವನ್ನು ಕೊಡುತ್ತದೆ.

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ।**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ॥** (೮-೨೦)

ವ್ಯಕ್ತವಾದ ಲೋಕವೆಲ್ಲವೂ ಯಾವದರಲ್ಲಿ ಕಲ್ಪಾಂತದಲ್ಲಿ ಅಡಗುವದೋ ಆ ಸ್ಥಿತಿಗೆ ಅವ್ಯಕ್ತವೆಂದು ಹೆಸರು. ಆ ಅವ್ಯಕ್ತಕ್ಕಿಂತಲೂ ಅವ್ಯಕ್ತನಾಗಿರುವವನು ಪರಮಾತ್ಮನು. ಯಾವ ಬ್ರಹ್ಮನ ನಿದ್ರೆಯಲ್ಲಿ ಎಲ್ಲವೂ ಅವ್ಯಕ್ತವಾಗುವದೋ, ಯಾವನ ಎಚ್ಚರದಲ್ಲಿ ಎಲ್ಲವೂ ವ್ಯಕ್ತವಾಗುವದೋ ಆ ಬ್ರಹ್ಮನನ್ನು ಕೂಡ ಸೃಷ್ಟಿಸುವ ಪರಮಾತ್ಮನು ಎಂಥ ಮಹಿಮೆಯವನು! ಆತನು ಬ್ರಹ್ಮಾದಿಸ್ತಂಬಪರ್ಯಂತವಾದ ಭೂತಗಳೆಲ್ಲವೂ ನಾಶವಾದರೂ ನಾಶವಾಗುವವನಲ್ಲ. ಆತನೇ ನಮಗೆ ಶಾಶ್ವತವಾದ ಪರಮಗತಿಯು.

ಆತನನ್ನು ಪಡೆದರೇ ಸಾಧಕರು ಪುನರಾವೃತ್ತಿಯಿಲ್ಲದ ಪರಮ ಧಾಮವನ್ನು ಪಡೆದವರಾಗುವರು. ಬ್ರಹ್ಮನ ಸ್ವಾಪಾವಸ್ಥೆಯಾದ ಅವ್ಯಕ್ತವೆಂಬುದೇ ನಮಗೆ ತಿಳಿಯಲಾರದಷ್ಟು ಸೂಕ್ಷ್ಮವಾಗಿರುವದು. ಆದರೆ ಅದಕ್ಕಿಂತಲೂ ಪರಮಸೂಕ್ಷ್ಮನಾಗಿರುವದರಿಂದಲೂ ಕಾಲಾಕಾಶಗಳಿಗೂ ಕಾರಣನಾಗಿರುವದರಿಂದಲೂ ಆ ಪರಮಾತ್ಮನು ಅನ್ವರ್ಥವಾಗಿ ಅವ್ಯಕ್ತನಾಗಿರುತ್ತಾನೆ, ಅವನು ಯಾವ ಇಂದ್ರಿಯಗಳಿಗೂ ವ್ಯಕ್ತವಾಗಿ ಕಾಣುವ ಸ್ವಭಾವದವನಲ್ಲ; ಆದರೂ ಆತನೇ ನಮಗೆ ಆತ್ಮನು, ಆತನೇ ಶಾಂತಿಗೂ ಶಾಶ್ವತವಾದ ಸುಖಕ್ಕೂ ಸ್ಥಾನವು.

---

## ೬೦. ಶುಕ್ಲಕೃಷ್ಣಗತಿಗಳು ೮-(೨೧-೨೮)

(೨೮-೯-೪೭)

ಸಂಸಾರವನ್ನೂ ಸಂಸಾರಕ್ಕೆ ಅತೀತವಾದ ಆತ್ಮತತ್ತ್ವವನ್ನೂ ವಿಂಗಡಿಸಿ ಕೊಳ್ಳಬೇಕೆಂಬುದೇ ಭಗವಂತನ ಪರಮೋಪದೇಶವು. ಎಚ್ಚರ, ನಿದ್ರೆ; ಹುಟ್ಟು, ಸಾವು; ಸೃಷ್ಟಿ, ಸ್ಥಿತಿ, ಪ್ರಲಯ - ಇವು ಮತ್ತೆ ಮತ್ತೆ ಆಗುತ್ತಿರುವದು ಸಂಸಾರವು. ಈ ಸಂಸಾರವು ಮತ್ತೆ ಮತ್ತೆ ಆಗುತ್ತಿದ್ದರೂ ಹೊಸಹೊಸ ರೂಪವನ್ನು ಧರಿಸಿ ನಮಗೆ ಬೇಸರವಿಲ್ಲದಂತೆ ಮಾಡಿ, ಆಶ್ಚರ್ಯವನ್ನೂ ಆಸಕ್ತಿಯನ್ನೂ ಉಂಟುಮಾಡಿ, ನಮ್ಮನ್ನು ಮರಳುಗೊಳಿಸುತ್ತಿರುವದು. ನಾಟಕದಲ್ಲಿ ನಟರ ಸಂಖ್ಯೆಯು ಕಡಿಮೆಯಾಗಿದ್ದರೂ ಅವರೇ ಬೇರೆಬೇರೆಯ ಪಾತ್ರವನ್ನು ವಹಿಸಿ ಬೇರೆಬೇರೆಯವರಂತೆ ನಮಗೆ ಕಾಣಿಸಿಕೊಂಡು ನಮ್ಮನ್ನು ಮೋಹಗೊಳಿಸುವರು. ಅದರಂತೆ ಆಬ್ರಹ್ಮಸ್ತಂಬಪರ್ಯಂತವಾದ ವ್ಯಕ್ತ, ಆ ಬಳಿಕ ಇದೆಲ್ಲವೂ ಯಾವದರಲ್ಲಿ ಪ್ರಲಯವಾಗುವದೋ ಆ ಅವ್ಯಕ್ತ - ಹೀಗೆ ವ್ಯಕ್ತಾವ್ಯಕ್ತರೂಪವನ್ನು ಮತ್ತೆಮತ್ತೆ ಧರಿಸುತ್ತಾ ಕ್ರಿಯಾಕಾರಕಫಲರೂಪವಾಗಿ ತೋರಿಕೊಳ್ಳುತ್ತಿರುವದೇ ಸಂಸಾರವು.

ಪರಮಾತ್ಮನು ಈ ವ್ಯಕ್ತಾವ್ಯಕ್ತರೂಪಕ್ಕಿಂತಲೂ ವಿಲಕ್ಷಣನಾಗಿರುತ್ತಾನೆ, ಅವ್ಯಕ್ತಕ್ಕಿಂತಲೂ ಅವ್ಯಕ್ತನಾಗಿರುತ್ತಾನೆ. ಆದರೆ ಅವನು ನಮ್ಮೆಲ್ಲರ ಆತ್ಮನಾಗಿರುತ್ತಾನೆ. ಆದ್ದರಿಂದ ಅವನು ನಮಗೆ ಎಳ್ಳಷ್ಟೂ ದೂರವಿರುವದಿಲ್ಲ; ಆದರೂ ಅವನು ಎಲ್ಲಿರುತ್ತಾನೋ ಎಂದು ನಿರಾಶರಾಗುವೆವು, ನಮ್ಮಲ್ಲಿ ಕೆಲವರು ಅವನು ಇಲ್ಲವೇ ಇಲ್ಲವೆಂದೂ ಸಾಧಿಸುವದಕ್ಕೆ ಹೊರಟಿರುವೆವು! ಜಗತ್ತಿನ ಅವ್ಯಕ್ತ ಸ್ಥಿತಿಗೂ ಯಾವಾಗಲೂ ಅವ್ಯಕ್ತನಾಗಿರುವ ಪರಮಾತ್ಮನಿಗೂ ಇರುವ ತಾರತಮ್ಯವನ್ನು ಒಂದು ದೃಷ್ಟಾಂತದಿಂದ ತಿಳಿಸಬಹುದು. ಶ್ರೀ ಶ್ರದ್ಧಾನಂದರನ್ನು ನೋಡುವೆನೆಂದು ಒಬ್ಬ ಮುಸಲ್ಮಾನನು

ಬಂದನಂತೆ; ಆಗ ಆತನ ದುರುದ್ದೇಶವು ಅವ್ಯಕ್ತವಾಗಿತ್ತು. ಆದರೆ ಆತನೇ ಅವರನ್ನು ಗುಂಡಿಟ್ಟು ಹೊಡೆದಾಗ ಅದು ವ್ಯಕ್ತವಾಯಿತು. ಜಗತ್ತಿನ ಅವ್ಯಕ್ತಸ್ಥಿತಿಯೆಂಬುದು ಒಂದಾನೊಂದು ಕಾಲದಲ್ಲಿ ಹೀಗೆಯೇ ವ್ಯಕ್ತವಾಗತಕ್ಕದ್ದು. ಆದರೆ ಪರಮಾತ್ಮನು ಅವ್ಯಕ್ತನೆಂದರೆ ಹೀಗಲ್ಲ; ಆತನು ಎಂದಿಗೂ ವ್ಯಕ್ತನಾಗುವವನಲ್ಲ. ಹೊರಗಿನ ಉಪಾಧಿಗಳೂ ತಾನೂ ಸೇರಿ ನಾನು ಎಂಬ ಅಭಿಮಾನವು ಜನಕ್ಕೆ ಆಗಿರುತ್ತದೆ; ಕೋಟೂ ತಾನೂ ಸೇರಿ ನಾನು ಎಂಬ ಅಭಿಮಾನದಂತೆಯೇ ಇದು. ಆದರೆ ಕೋಟು ಬಿಚ್ಚಿದರೂ ಬರಿಯ ತನ್ನಲ್ಲಿಯೇ ನಾನು ಎಂಬ ಅರಿವು ಉಳಿದುಕೊಳ್ಳುವದು. ಇದರಂತೆ ವ್ಯಕ್ತಾವ್ಯಕ್ತರೂಪವಾದ ಜಗತ್ತಿನ ಉಪಾಧಿಯ ಹಂಗಿಲ್ಲದೆ ಇರುವ ಪರಮಾತ್ಮನು ನಿತ್ಯವೂ ಅವ್ಯಕ್ತನಾಗಿಯೇ ಇದ್ದರೂ ಅನಾತ್ಮಕ್ಕೆಲ್ಲ ಸಾಕ್ಷಿಯಾಗಿರುವದರಿಂದ ಅವನನ್ನು ಇಲ್ಲವೆನ್ನುವದಕ್ಕಿಲ್ಲ.

ಪ್ರಲಯದಲ್ಲಿ ಎಲ್ಲವೂ ಅವ್ಯಕ್ತವನ್ನು ಸೇರುವದು. ಆಗ ವ್ಯಕ್ತಪ್ರಪಂಚದ ಯಾವ ದುಃಖವೂ ಇರುವದಿಲ್ಲ. ಹೀಗೆ ನೋಡಿದರೆ ಅವ್ಯಕ್ತಪ್ರಾಪ್ತಿಯು ಒಂದು ಬಗೆಯ ಸುಖವಾದರೂ ಮೂರ್ಛೆಯಲ್ಲಿ ಯಾವ ದ್ವೈತದ ದುಃಖವನ್ನೂ ಕಾಣದೆ ಇದ್ದು ಎಚ್ಚತ್ತೊಡನೆ ಮೂರ್ಛೆಯಲ್ಲಿದ್ದೆನೆಂಬ ದುಃಖವನ್ನನುಭವಿಸುವಂತೆ ಈ ಅವ್ಯಕ್ತಪ್ರಾಪ್ತಿಯೂ ಒಂದು ಬಗೆಯ ದುಃಖವೇ ಆಗಿರುವದು. ಪುನರಾವೃತ್ತಿಯಿರುವದರಿಂದ ಅದನ್ನು ಎಲ್ಲಕ್ಕೂ ಹೆಚ್ಚಿನ ಗತಿಯೆಂದು ಯಾರೂ ಕರೆಯಲಾರರು. ಆದರೆ ಪರಮಾತ್ಮನನ್ನು ಪಡೆದರೆ ಮತ್ತೆ ಎಂದೆಂದಿಗೂ ಈ ಸಂಸಾರಕ್ಕೆ ಮರಳುವದಿಲ್ಲವಾದ್ದರಿಂದ ಅದನ್ನು ಅವ್ಯಕ್ತಪ್ರಾಪ್ತಿಗೆ ಹೋಲಿಸಲಾಗುವದಿಲ್ಲ. ಆದ್ದರಿಂದ ಸಾಮಾನ್ಯಜನರು ಸಾಯುವದಕ್ಕೂ ಉಪಾಸಕರು ಸಾಯುವದಕ್ಕೂ ಬಹಳ ತಾರತಮ್ಯವಿದೆ. ಸುಮ್ಮನೆ ಸಾಯುವದೂ ಉಪಾಸನೆಯಿಂದೊಡಗೂಡಿ ಸಾಯುವದೂ ಸಾಮಾನ್ಯರ ದೃಷ್ಟಿಯಿಂದ ಎರಡೂ ಒಂದೇ ಆಗಿರುತ್ತದೆ. ಆದರೂ ಇಲ್ಲಿ ಸಾಯುವದೇ ಮುಖ್ಯವಲ್ಲ; ಒಬ್ಬನು ಸಂಸಾರದ ಚಿಂತನೆಯಿಂದ ಸಂಕಟಪಡುತ್ತಾ ಸಾಯುತ್ತಾನೆ, ಮತ್ತೊಬ್ಬನು ಪರಮಾತ್ಮನ ಚಿಂತನೆಯಿಂದ ಧೀರನಾಗಿ ಸಾಯುತ್ತಾನೆ. ಬಂದೀಖಾನೆಗೆ ಖೈದಿಯೂ ಕಾವಲುಗಾರನೂ ಒಂದೇ ರೀತಿಯಲ್ಲಿ ಪ್ರವೇಶ ಮಾಡುವಂತೆ ತೋರಬಹುದು, ಆದರೆ ಖೈದಿಯು ದುಃಖದಿಂದ ಪ್ರವೇಶಿಸುತ್ತಾನೆ, ಕಾವಲುಗಾರನು ಸ್ವತಂತ್ರನಾಗಿ ಒಳಕ್ಕೆ ಹೋಗುತ್ತಾನೆ. ಸಹಗಮನಪದ್ಧತಿಯಲ್ಲಿ ಪತಿವ್ರತೆಯರು ಧೀರರಾಗಿಯೇ ಚಿತೆಯನ್ನು ಪ್ರವೇಶಿಸುತ್ತಿದ್ದರು; ಬಲಾತ್ಕಾರದಿಂದ ಖ್ಯಾತಿಗಾಗಿ, ಅಥವಾ ಸಮಾಜದ ಅಭಿಪ್ರಾಯದ ಭೀತಿಗಾಗಿ, ಸಹಗಮನ ಮಾಡುತ್ತಿದ್ದವರನ್ನು ಅವರಿಗೆ ಹೋಲಿಸಲಾಗುವದೇ ಇಲ್ಲ. ಸಹಗಮನವನ್ನು

ಕಾನೂನಿನಿಂದ ನಿಲ್ಲಿಸಿದ್ದರೂ ಈಗಲೂ ಅಲ್ಲಲ್ಲಿ ಧೀರರಾದ ಮಹಿಳೆಯರು ಆದರ್ಶರೂಪವಾಗಿ ಅದನ್ನು ಅನುಸರಿಸುವದು ಅಲ್ಲಲ್ಲಿ ಆಗಾಗ ಕೇಳಿಬರುತ್ತದೆ. ಇದು ಮನಃಸ್ಥಿತಿಯ ತಾರತಮ್ಯವನ್ನೂ ಸಾವಿನ ತಾರತಮ್ಯವನ್ನೂ ತಿಳಿಸುತ್ತದೆ. ಇದರಂತೆ ಮರಣಕಾಲದಲ್ಲಿ ಸಂತೋಷದಿಂದ ಕೂಡಿರುವದು ಮಹಾಯೋಗಿಗಳ ಸುಕೃತವು; ಅದು ಸಾಧಾರಣವಾಗಿ ಎಲ್ಲರಿಗೂ ದಕ್ಕತಕ್ಕದ್ದಲ್ಲ; ಹಾಗೆ ಯಾವ ಪರಮಪುರುಷನನ್ನು ಪಡೆಯುವದಕ್ಕೆ ಹೊರಟಿರುವ ಉಪಾಸಕರು ಸಾವಿನ ಕಾಲದಲ್ಲಿಯೂ ಆನಂದದಿಂದಿರುವರೋ, ಯಾವನನ್ನು ಪಡೆದವರು ಮತ್ತೆ ಎಂದೆಂದಿಗೂ ಸಂಸಾರಕ್ಕೆ ಮರಳಿಬರುವದಿಲ್ಲವೋ ಅದೇ ಮಾನವನಿಗೆ ದೊರೆಯ ಬಹುದಾದ ಉತ್ತಮಗತಿಯು.

**ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥** (೮-೨೨)

"ಆ ಪರಮನಾದ ಪುರುಷನನ್ನು ಅನನ್ಯಭಕ್ತಿಯಿಂದ ಮಾತ್ರವೇ ಪಡೆದು ಕೊಳ್ಳಬಹುದು. ಆತನೊಳಗೆ ಎಲ್ಲಾ ಭೂತಗಳೂ ಅಡಕವಾಗಿರುವವು; ಆತನು ಈ ಪ್ರಪಂಚವನ್ನೆಲ್ಲ ವ್ಯಾಪಿಸಿಕೊಂಡಿರುವನು." ಯಾರು ಆತನೇ ತಮಗೆ ಬೇಕೆಂದು ಬದುಕಿರುವಾಗ ಎಡೆಬಿಡದೆ ಭಜಿಸುತ್ತಿರುವರೋ ಅವರಿಗೆ ಮಾತ್ರ ಆತನ ಪ್ರಾಪ್ತಿಯಾಗುವದು. ಭಕ್ತಿ ಎಂಬ ಮಾತು ಏಳನೆಯ ಅಧ್ಯಾಯದಿಂದ ಮತ್ತೆ ಮತ್ತೆ ಬರುತ್ತದೆಯಾದರೂ ಅನನ್ಯಭಕ್ತಿ ಎಂಬ ಶಬ್ದವು ಬರುವದಕ್ಕೆ ಇದೇ ಮೊದಲು ಎನ್ನಬಹುದು. ಗೀತೆಯಲ್ಲಿ ಭಕ್ತಿ ಎಂಬ ಮಾತಿಗೆ ವ್ಯಾಖ್ಯಾನವಿಲ್ಲ; ಅದು ಸುಪ್ರಸಿದ್ಧವಾಗಿರುವಂತೆ ಭಾವಿಸಿ ಪ್ರಯೋಗಿಸಿರುತ್ತದೆ. ಭಕ್ತಿಯೆಂದರೆ ಪ್ರೇಮದಿಂದ ಕೂಡಿದ ಉಪಾಸನೆಯು. "ಅನನ್ಯಚಿತ್ತನಾಗಿ ನನ್ನನ್ನು ನಿತ್ಯವೂ ಸ್ಮರಿಸುವವನಿಗೆ ನಾನು ಸುಲಭವಾಗಿ ದೊರಕುವೆನು" ಎಂದು ಹಿಂದೆ ಒಂದು ಶ್ಲೋಕದಲ್ಲಿ ಭಗವಂತನು ಹೇಳಿರುತ್ತಾನೆ. ಇಲ್ಲಿ ಅನನ್ಯಭಕ್ತಿಯಿಂದ ಪರಮಾತ್ಮನ ಲಾಭವಾಗುವದೆಂದು ಹೇಳಿರುವದು ಇನ್ನೊಂದು ಹೆಜ್ಜೆ ಮುಂದಕ್ಕೆ ನಡೆದಂತೆ ಆಗಿರುತ್ತದೆ. ಪರಮಾತ್ಮನು ಅತ್ಯಂತವಾಗಿ ಪ್ರಿಯನಾಗಿರುವದರಿಂದ, ಯಾವ ಉಪಾಸಕನಿಗೆ ವ್ಯವಹಾರವೆಲ್ಲವೂ ಪರಮಾತ್ಮನಿಗಾಗಿಯೇ ಆಗಿರುವದೋ, ಯಾವನ ಶರೀರ, ಇಂದ್ರಿಯಗಳು, ಮನಸ್ಸು, ಬುದ್ಧಿ - ಎಲ್ಲವೂ ಪರಮಾತ್ಮನಿಗೇ ಮೀಸಲಾಗಿರುವದೋ, ಅಳಿಯನ ಬರುವಿಕೆಯನ್ನು ಕಾದುಕೊಂಡಿರುವ ಅತ್ತೆಯಂತೆ, ಯಾವನು ಪರಮಾತ್ಮನ ಪ್ರಾಪ್ತಿ ಗಾಗಿಯೇ ಹಾತುವರಿಯುತ್ತಿರುವನೋ, ಅವನು ಅನನ್ಯಭಕ್ತನು. ಪರಮಾತ್ಮನನ್ನು ಹೀಗೆ ಸ್ವಲ್ಪವೂ ಅಲುಗಾಡದ ಪ್ರೇಮದಿಂದ ಶಾಸ್ತ್ರಾಚಾರ್ಯರ ಉಪದೇಶಕ್ಕನು

ಗುಣವಾಗಿ ಉಪಾಸನೆಮಾಡುತ್ತಿರುವ ಯೋಗಿಯೊಬ್ಬನು, ಆತನ ಸ್ವರೂಪವೇ ತಾನೆಂದು ತಿಳಿದುಕೊಂಡಿರುವ ಏಕಭಕ್ತಿಯಾದ ಜ್ಞಾನಿಯೊಬ್ಬನು, ಈ ಇಬ್ಬರನ್ನು ಬಿಟ್ಟರೆ ಮತ್ತೆ ಯಾರೂ "ಅನನ್ಯಭಕ್ತಿ"ಯ ಸವಿಯನ್ನು ಅರಿಯರು. ಅನನ್ಯಭಕ್ತರಾದ ಉಪಾಸಕರಿಗೆ ಇಡಿಯ ಜಗತ್ತೇ ಆ ಪರಮಪುರುಷನ ವ್ಯಾಪ್ತಿಯಿಂದ ತುಂಬಿತುಳುಕು ತ್ತಿರುವಂತೆ ಭಾಸವಾಗುತ್ತಿರುವದು. ಅವರು ಬದುಕಿರುವಾಗಲೂ ಭಗವಚ್ಚಿಂತನೆಯಿಂದ ಭಗವನ್ಮಯರಾಗಿರುತ್ತಾರೆ, ಸಾಯುವಾಗ ಆತನ ಚಿಂತನೆಯಿಂದಲೇ ಕೂಡಿರುತ್ತಾರೆ, ಸತ್ತಬಳಿಕ ಆತನನ್ನೇ ಸೇರುತ್ತಾರೆ.

ವೇದದಲ್ಲಿ ಹೇಳಿರುವ ಯಜ್ಞಾದಿಕರ್ಮಗಳಿಗೆ ಉತ್ತಮಗತಿಯನ್ನು ಹೇಳಿರುತ್ತದೆ. ಆದರೆ ಉಪಾಸಕರಿಗೆ ಆಗುವ ಗತಿಯು ಅದಕ್ಕಿಂತಲೂ ಉತ್ತಮವಾದದ್ದೆಂಬುದನ್ನು ತಿಳಿಸುವದಕ್ಕಾಗಿ ಮುಂದಿನ ನಾಲ್ಕು ಶ್ಲೋಕಗಳು ಬಂದಿರುತ್ತವೆ. ಈ ಶ್ಲೋಕಗಳಲ್ಲಿ ಸತ್ತಮೇಲೆ ಆಗುವ ಗತಿಯನ್ನು ವರ್ಣಿಸಿರುತ್ತದೆ. ಅದೆಲ್ಲ ಶಾಸ್ತ್ರಗಮ್ಯವಾಗಿರುವದರಿಂದ ಶ್ರದ್ಧೆಯಿಂದ ನಂಬಬೇಕಾಗಿರುತ್ತದೆ. ಈಗಿನ ಕಾಲದಲ್ಲಿ ಇದನ್ನು ನಂಬುವದು ಕಷ್ಟವಾಗಿರುತ್ತದೆ. ಸ್ವರ್ಗ, ನರಕ - ಮುಂತಾದವುಗಳು ನಿಜವಾಗಿರುವದಿಲ್ಲವಾದರೂ ಜನರನ್ನು ಹೆದರಿಸುವದಕ್ಕಾಗಿ ಶಾಸ್ತ್ರಕಾರರು ಹೀಗೆಲ್ಲ ವರ್ಣಿಸಿರುತ್ತಾರೆ - ಎಂಬುದು ಕೆಲವರ ಮತ. ಆದರೆ ಶಾಸ್ತ್ರಕಾರರಿಗೆ ಜನರನ್ನು ಹೆದರಿಸುವದರಿಂದ ಆಗಬೇಕಾದ ಫಲವಾದರೂ ಏನು? ಗರುಡಪುರಾಣದ ಸಾರೋದ್ಧಾರವನ್ನು ಯಾರಾದರೂ ದೊಡ್ಡವರು ಸತ್ತಾಗ ಹೇಳಿಸುವದುಂಟು. ಅದರಲ್ಲಿ ಪಾಪಿಗಳು ನರಕಕ್ಕೆ ಹೋಗುವ ಮಾರ್ಗವನ್ನು ವಿಸ್ತಾರವಾಗಿ ವರ್ಣಿಸಿರುತ್ತದೆ; ಅವರಿಗೆ ನರಕದಲ್ಲಿ ಆಗುವ ದುಃಖವನ್ನೂ ವಿಸ್ತರಿಸಿರುತ್ತದೆ. ಯಾರು ಪಾಪಿಗಳೊ ಅವರಿಗೆ ನರಕದಲ್ಲಿ ನಿಯತವಾಗಿ ವಾಸವಾಗುವದೆಂದೂ ದ್ವಾದಶಾಕ್ಷರಚಿಂತಕರಾದ ಭಕ್ತರು ಮಾತ್ರ ವೈಕುಂಠಕ್ಕೆ ಹೋಗುವರೆಂದೂ ಹೇಳಿರುತ್ತದೆ. ಪಾಪಿಗಳನ್ನೂ ಪುಣ್ಯವಂತರನ್ನೂ ಯಮನೇ ಬರಮಾಡಿಕೊಳ್ಳುತ್ತಾನೆ. ಯಮನು ಧರ್ಮಾಧರ್ಮಗಳನ್ನು ತೂಗಿ ತಕ್ಕ ಫಲವನ್ನು ಕೊಡತಕ್ಕವನು. ಅವನು ಪಾಪಿಗಳಿಗೆ ಭಯಂಕರನಾಗಿದ್ದರೂ ಪುಣ್ಯವಂತರಿಗೆ ಪರಮಸುಖಿನಾಗಿರುತ್ತಾನೆ. ಸ್ವರ್ಗನರಕಗಳು ನಿಯತಸ್ಥಲಗಳಾಗಿದ್ದರೂ ಅವುಗಳಿಂದಾ ಗುವ ಸುಖದುಃಖಗಳು ನಿಯತವಲ್ಲ; ಮಹಾತ್ಮರು ನರಕಕ್ಕೆ ಹೋದರೂ ಅವರ ಮಹಿಮೆಯಿಂದ ನರಕವಾಸಿಗಳಿಗೂ ಸುಖವೇ ಆಗುವದೆಂದು ಪುರಾಣಗಳಲ್ಲಿ ಹೇಳಿರುತ್ತದೆ. ಪರಮಾತ್ಮನನ್ನೇ ಅನನ್ಯಭಕ್ತಿಯಿಂದ ಚಿಂತಿಸುವವರಿಗೆ ಎಲ್ಲಿದ್ದರೂ ಆನಂದವೇ ಇರುತ್ತದೆ.

ಪ್ರಕೃತದಲ್ಲಿ ಪಾಪಿಗಳ ಗತಿಯನ್ನು ವರ್ಣಿಸಿರುವದಿಲ್ಲ, ಕರ್ಮಿಗಳಿಗೂ

ಉಪಾಸಕರಿಗೂ ಆಗುವ ಗತಿಗಳ ತಾರತಮ್ಯವನ್ನು ಇಲ್ಲಿ ಹೇಳಿರುತ್ತದೆ.

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್।**
**ತತ್ರ ಪ್ರಯಾತಾ ಗಚ್ಛನ್ತಿ ಬ್ರಹ್ಮ ಬ್ರಹ್ಮವಿದೋ ಜನಾಃ॥** (೮-೨೪)
**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್।**
**ತತ್ರ ಚಾನ್ದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ॥** (೮-೨೫)

ಯಾರು ಶಾಸ್ತ್ರೋಕ್ತಕರ್ಮಗಳನ್ನು ಸರಿಯಾಗಿ ಮಾಡಿರುವರೋ ಅವರು ಸತ್ತಬಳಿಕ ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ - ಇವುಗಳ ಅಭಿಮಾನಿ ದೇವತೆಗಳು ಒಂದಾನೊಂದು ಮಾರ್ಗದಲ್ಲಿ ಮೇಲಿನ ಲೋಕಕ್ಕೆ ಕರೆದುಕೊಂಡು ಹೋಗುವರು. ಆದರೆ ಕರ್ಮದ ಫಲದ ಭೋಗವು ಮುಗಿದ ಬಳಿಕ ಕರ್ಮಿಗಳೆಲ್ಲರೂ ಮತ್ತೆ ಈ ಲೋಕಕ್ಕೆ ಹಿಂತೆರಳುವರು. ಕರ್ಮದ ಫಲವು ಹೀಗೆ ಅನಿತ್ಯವಾಗಿರುತ್ತದೆ. ಆದರೆ ಯಾವ ಉಪಾಸಕರು ಅನನ್ಯಭಕ್ತಿಯಿಂದ ಪರಮಾತ್ಮನನ್ನೇ ಚಿಂತಿಸುತ್ತಿರುವರೋ ಅವರನ್ನು ಅಗ್ನಿ, ಜ್ಯೋತಿ, ಅಹಸ್ಸು, ಶುಕ್ಲಪಕ್ಷ, ಉತ್ತರಾಯಣ - ಇವುಗಳ ಅಭಿಮಾನಿದೇವತೆಗಳು ಕ್ರಮಕ್ರಮವಾಗಿ ಮೇಲುಮೇಲಿನ ಲೋಕಗಳಿಗೆ ಕರೆದೊಯ್ಯುವರು. ಉಪಾಸಕರಾದವರು ಪರಮಾತ್ಮನನ್ನು ಧ್ಯಾನಮಾಡುವದಲ್ಲದೆ ತಮಗೆ ಆಗುವ ಗತಿಯ ಕ್ರಮವನ್ನೂ ಚಿಂತಿಸಬೇಕು. ಬೇರೊಂದು ಊರಿಗೆ ಹೋಗುವವನು ದಾರಿಯಲ್ಲಿ ಸಿಕ್ಕುವ ನದಿ, ಬೆಟ್ಟ, ಗ್ರಾಮಗಳು - ಮುಂತಾದ ಹೆಗ್ಗುರುತುಗಳನ್ನು ಮೊದಲೇ ತಿಳಿದುಕೊಂಡಿರುವಂತೆ ದಿನದಿನವೂ ಪರಮಾತ್ಮನನ್ನು ಚಿಂತಿಸುವ ಉಪಾಸಕರು ಆತನನ್ನು ಸೇರುವ ಮಾರ್ಗವನ್ನೂ ಚಿಂತಿಸುತ್ತಿದ್ದರೆ, ಆ ಉಪಾಸನೆಯು ಬಲಿತುಕೊಂಡು ಅದರ ಸಾಕ್ಷಾತ್ಕಾರದ ಫಲವಾಗಿ ಆಯಾ ಮಾರ್ಗವೇ ಸತ್ತಬಳಿಕವೂ ಅವರಿಗೆ ತೋರುತ್ತದೆ. ಮಾರ್ಗದಲ್ಲಿ ಆಯಾ ದೇವತೆಗಳ ದರ್ಶನದಿಂದಲೂ ಅವರು ಪ್ರಸನ್ನರಾಗಿ ಮಾಡುವ ಸಹಾಯದಿಂದಲೂ ಉಲ್ಲಾಸವೂ ಹರ್ಷವೂ ಉಕ್ಕುತ್ತಾ ಹೋಗುವದು. ಒಬ್ಬೊಬ್ಬ ದೇವತೆಯೂ ಉಪಾಸಕನನ್ನು ಆದರದಿಂದ ಸತ್ಕರಿಸಿ ಮುಂದುಮುಂದಕ್ಕೆ ಕರೆದುಕೊಂಡು ಹೋಗಿ ಮೇಲಿನ ಲೋಕದ ದೇವತೆಯು ವಶಕ್ಕೆ ಒಪ್ಪಿಸುವನೆಂದು ಶಾಸ್ತ್ರದಲ್ಲಿ ಹೇಳಿರುತ್ತದೆ. ಪಾಪಿಗಳಿಗೆ ಆಗುವ ದುರ್ಗತಿಯ ಕರ್ಮಿಗಳಿಗೇ ಆಗುವ ಹಾಗಿಲ್ಲ; ಇನ್ನು ಉಪಾಸಕರಿಗೆ ಆಗುವದಿಲ್ಲವೆಂಬುದನ್ನು ಹೇಳಬೇಕಾದದ್ದೇನು?

ಉಪಾಸನೆಯು ಬಲಿತಂತೆ ಭಕ್ತರಿಗೆ ಈ ಲೋಕವೇ, ನಮ್ಮಗಳಿಗೆ ಸುಖದುಃಖಗಳ ಸಂತೆಯಾಗಿ ಕಾಣುತ್ತಿರುವ ಈ ಲೋಕವೇ, ಆನಂದಮಯವಾಗಿ ಬಿಡುತ್ತದೆ. ಅವರು ದೇಹವನ್ನು ಬಿಟ್ಟಮೇಲಂತೂ ಮೇಲುಮೇಲಿನ ಲೋಕಗಳಿಗೆ ಹೋದ

ಹಾಗೆಲ್ಲ ಹೆಚ್ಚು ಹೆಚ್ಚು ಆನಂದವು ಕಾಣಿಸಿಕೊಳ್ಳುತ್ತಾ ಹೋಗುವದು. ಕಟ್ಟಕಡೆಗೆ ಉಪಾಸಕರು ಮುಟ್ಟುವ ಲೋಕವನ್ನು ಬ್ರಹ್ಮಲೋಕವೆಂದು ಕರೆಯುತ್ತಾರೆ. ಕರ್ಮಿಗಳಿಗೆ ಆಗುವದು ಪಿತೃಲೋಕವು; ಆ ಲೋಕದಲ್ಲಿಯೂ ಸುಖವು ದೊರೆಯುತ್ತದೆಯಾದರೂ, ಬ್ಯಾಂಕಿನಲ್ಲಿಟ್ಟಿರುವ ಹಣವು ಮುಗಿಯುವವರೆಗೆ ಮಾತ್ರವೇ ಚೆಕ್ಕಿನ ಮೂಲಕ ವಾಪಸುಪಡೆದುಕೊಳ್ಳಬಹುದಾಗಿರುವಂತೆ, ಪುಣ್ಯವು ಮುಗಿಯುವವರೆಗೆ ಮಾತ್ರವೇ ಆ ಲೋಕದಲ್ಲಿ ಸುಖಪಡಬಹುದಾಗಿರುವದು. ಬ್ರಹ್ಮಲೋಕದ ವಿಷಯದಲ್ಲಿ ಹಾಗಲ್ಲ. ಆ ಲೋಕವನ್ನು ಪರಮೇಶ್ವರಲೋಕವೆಂದೂ ವೈಕುಂಠವೆಂದೂ ಬಗೆಬಗೆಯಾಗಿ ಪುರಾಣಗಳಲ್ಲಿ ವರ್ಣಿಸಿರುತ್ತದೆ. ಸತ್ತ್ವವು ಮಿಗಿಲಿಲ್ಲದಷ್ಟು ಹೆಚ್ಚಿರುವ ಪರಮೇಶ್ವರನ ಭಕ್ತರೇ ಅಲ್ಲಿಗೇ ಹೋಗುವದಕ್ಕೆ ತಕ್ಕವರು. ಆ ಲೋಕವು ಶುದ್ಧಸತ್ತ್ವಮಯ ವಾಗಿರುವದರಿಂದ ಅಲ್ಲಿ ಸಂಕಲ್ಪಮಾತ್ರದಿಂದ ಬಯಸಿದ ಪದಾರ್ಥಗಳು ಕೂಡಲೇ ಸನ್ನಿಹಿತವಾಗುವವು. ಅಲ್ಲಿ ಉತ್ತಮವಾದ ಸಂಕಲ್ಪಗಳೇ ಆಗುವವು. ಅಲ್ಲಿರುವವರೆಲ್ಲ ಲೋಕಕ್ಕೆ ಕಲ್ಯಾಣವನ್ನೇ ಬಯಸುವವರಾಗಿರುವರು; ತತ್ತ್ವವಿಚಾರವನ್ನೇ ಮಾಡುತ್ತಿರು ವವರಾಗಿರುವರು. ಮನಸ್ಸಿನಲ್ಲಿ ಕಲ್ಮಷವಿಲ್ಲದ್ದರಿಂದ ಬ್ರಹ್ಮಲೋಕನಿವಾಸಿಗಳಿಗೆ ಯಾವ ಸಂಶಯಗಳೂ ಉಂಟಾಗುವದಿಲ್ಲ. ಆ ಲೋಕದ ಅಧಿಪತಿಯಾದ ಬ್ರಹ್ಮನ ಸಮಷ್ಟಿ ಮನಸ್ಸಿನ ಸ್ಥಿತಿಯನ್ನೇ ಅಲ್ಲಿರುವವರೆಲ್ಲ ಅನುಸರಿಸಿರುತ್ತಾರೆ. ಆದ್ದರಿಂದ ಅಲ್ಲಿ ಯಾರುಯಾರು ತತ್ತ್ವಜ್ಞಾನವನ್ನು ಹೊಂದಿರುವರೋ ಅವರೆಲ್ಲರೂ ಆ ಕಲ್ಪದ ಕೊನೆಯಲ್ಲಿ ಪುನರಾವೃತ್ತಿಯಿಲ್ಲದೆ ಮುಕ್ತಿಯನ್ನೇ ಪಡೆದುಕೊಳ್ಳುತ್ತಾರೆ.

ಮೇಲೆ ವರ್ಣಿಸಿರುವ ಎರಡು ಗತಿಗಳೊಳಗೆ ಕರ್ಮಿಗಳಿಗೆ ಆಗುವ ಗತಿಯು **ಕೃಷ್ಣಗತಿ** ಎನಿಸುವದು; ಏಕೆಂದರೆ, ಅದರಲ್ಲಿ ಜ್ಞಾನದ ಪ್ರಕಾಶವು ಇರುವದಿಲ್ಲ. ಉಪಾಸಕರಿಗೆ ಆಗುವ ಗತಿಯು **ಶುಕ್ಲಗತಿ** ಎನಿಸುವದು. ಏಕೆಂದರೆ ಅದರಲ್ಲಿ ಜ್ಞಾನದ ಪ್ರಕಾಶವಾಗುತ್ತದೆ. ಶುಕ್ಲಗತಿಯಲ್ಲಿ ಪರಮಾತ್ಮನ ಜ್ಞಾನವು ಆಗಿ ಕಡೆಗೆ ಮುಕ್ತಿಯೇ ಆಗಿಬಿಡುವದರಿಂದ ಅಂಥ ಉಪಾಸಕರಿಗೆ ಮತ್ತೆ ಸಂಸಾರದ ಬಂಧವು ಉಂಟಾಗುವದಿಲ್ಲ. ಹೀಗೆ ಈ ಎರಡು ವರ್ಗಗಳಿಗಿರುವ ತಾರತಮ್ಯವನ್ನು ಯಾವನು ತಿಳಿದಿರುತ್ತಾನೋ, ಯಾವನು ಅನಿತ್ಯವಾದ ಕರ್ಮಮಾರ್ಗವನ್ನು ಅನುಸರಿಸದೆ ನಿತ್ಯಫಲವನ್ನು ಕೊಡುವ ಉಪಾಸನೆಯನ್ನೇ ಅನುಸರಿಸುವನೋ, ಅಂಥವನಿಗೆ ಈ ಸಂಸಾರದ ಮೋಹವು ಎಂದಿಗೂ ಆಗುವದಿಲ್ಲ. ಅವನು ಯಾವಾಗಲೂ ಆನಂದ ದಾಯಕನಾದ ಪರಮಾತ್ಮನ ಅನನ್ಯಭಕ್ತಿಯಿಂದ ಕೂಡಿದ ಉಪಾಸನಾಮಾರ್ಗದಲ್ಲಿಯೇ ಇದ್ದು, ಉಪಾಸ್ಯವಾದ ಬ್ರಹ್ಮವನ್ನೇ ಪಡೆದುಕೊಂಡುಬಿಡುತ್ತಾನೆ. ಈ ಪ್ರಕರಣದ ಸಾರವನ್ನೆಲ್ಲ ಒಂದು ಶ್ಲೋಕದಲ್ಲಿ ಭಗವಂತನು ಸಂಗ್ರಹಿಸಿರುತ್ತಾನೆ:

**ವೇದೇಷು ಯಜ್ಞೇಷು ತಪಸ್ಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್॥** (೮-೨೮)

ಕ್ರಮವರಿತು ನಿಯಮದಿಂದ ಸಾಂಗವಾಗಿ ಮಾಡಿದ ವೇದಾಧ್ಯಯನದಿಂದ ಯಾವ ಫಲವಾಗುವದೋ, ಆ ವೇದಗಳಲ್ಲಿ ಹೇಳಿರುವ ಉತ್ತಮವಾದ ಯಜ್ಞಗಳನ್ನು ಅನುಷ್ಠಾನಮಾಡುವವರಿಗೆ ಯಾವ ಫಲವಾಗುವದೋ, ಉತ್ತಮವಾದ ತಪಸ್ಸುಗಳನ್ನು ಸರಿಯಾಗಿ ಮಾಡಿದವರಿಗೆ ಯಾವ ಫಲವಾಗುವದೋ, ಶಾಸ್ತ್ರದಲ್ಲಿ ಹೇಳಿರುವಂತೆ ಸತ್ಪಾತ್ರರಾದವರಿಗೆ ಉತ್ತಮವಸ್ತುಗಳನ್ನು ದಾನಮಾಡಿದವರಿಗೆ ಯಾವ ಫಲವು ಸಿಕ್ಕುವದೋ, ಇಂಥ ಫಲವೆಲ್ಲಕ್ಕಿಂತಲೂ, ಕರ್ಮಮಾರ್ಗದಲ್ಲಿ ದೊರೆಯುವ ಅತ್ಯಂತಉತ್ತಮವಾದ ಫಲಕ್ಕಿಂತಲೂ, ಹೆಚ್ಚಿನದಾಗಿ ಅವುಗಳೆಲ್ಲವನ್ನೂ ಎಲ್ಲಾ ಬಗೆಯಿಂದಲೂ ಮೀರಿರುವ ಪರಮಪದವಿಯನ್ನು, ಈ ಅಧ್ಯಾಯದಲ್ಲಿ ಹೇಳಿರುವ ಕ್ರಮದಲ್ಲಿ ಉಪಾಸನೆಮಾಡಿದವನು ಸೇರುತ್ತಾನೆ; ಸಕಲಜಗತ್ಕಾರಣವಾಗಿರುವ ಪರಬ್ರಹ್ಮವನ್ನೇ ಸೇರಿ ಮುಕ್ತನಾಗುತ್ತಾನೆ.

ಈ ಅಧ್ಯಾಯದಲ್ಲಿ ಹೇಳಿರುವ ಉಪಾಸನಾಕ್ರಮವನ್ನು ಶಂಕರಾಚಾರ್ಯರು "ಧಾರಣಾಯೋಗ" ಎಂದು ಕರೆದಿರುತ್ತಾರೆ. ಪರಮಾತ್ಮನಲ್ಲಿಯೇ ಮನಸ್ಸನ್ನು ನಿಲ್ಲಿಸಿಕೊಂಡು ಆತನೇ ತಮಗೆ ಪ್ರಾಣವೆಂದು ಉಪಾಸನೆಮಾಡುತ್ತಿರುವವರು, ಬದುಕಿರುವಾಗಲೂ ಪರಮಾತ್ಮನಲ್ಲಿಯೇ ಇದ್ದು, ಸತ್ತಬಳಿಕವೂ ಆತನನ್ನೇ ಸೇರುವರು ಎಂಬುದು ಅಧ್ಯಾಯದ ಸಾರವು. ಈಗ್ಗೆ ನಾವು ಕಾಮಕ್ರೋಧವಿವಶರಾಗಿ ವಿಷಯ ಚಿಂತನೆಯಿಂದ ಕೆಡುತ್ತಿರುವೆವು. ಹೊಟ್ಟೆಬಟ್ಟೆಗಳಿಗೂ ಸರಿಯಾಗಿಲ್ಲದಿದ್ದರೂ ನಮ್ಮಗಳನ್ನು ಮದಮಾತ್ಸರ್ಯಗಳು ಬಿಟ್ಟಿಲ್ಲ. ಕೆಸರಿನಲ್ಲಿ ಒದ್ದಾಡುವ ಹುಳುಗಳು ಒಂದನ್ನೊಂದು ಕಚ್ಚುವದಕ್ಕೆ ಹೋಗುವಂತೆ, ಇಲ್ಲದಸಲ್ಲದ ಜಗಳಗಳನ್ನು ಕಟ್ಟಿಕೊಂಡು ಈ ಮಂಗಲ ಕರವಾದ ಭೂಲೋಕವನ್ನು ನರಕವಾಗಿ ಮಾಡಿಕೊಳ್ಳುತ್ತಿದ್ದೇವೆ! ಈ ಹವ್ಯಾಸವನ್ನು ಬಿಟ್ಟು ಪರಮಾತ್ಮನನ್ನು ಚಿಂತಿಸುವ ಅಭ್ಯಾಸವನ್ನು ಸಂಪಾದಿಸಿಕೊಳ್ಳೋಣ. ಸ್ವಪ್ರಯತ್ನ ದಿಂದಲೇ ನಮ್ಮ ವ್ಯವಹಾರವೆಲ್ಲವೂ ಸಾಗುವದೆಂಬ, ನಮ್ಮ ಇಷ್ಟಾರ್ಥವೆಲ್ಲವೂ ನಮ್ಮನಮ್ಮ ಸಾಹಸದಿಂದಲೇ ನೆರವೇರುವದೆಂಬ, ದುರಾಗ್ರಹವನ್ನು ಬಿಟ್ಟು ಪರಮಾತ್ಮ ನಿಗೇ ಶರಣುಹೋಗೋಣ. ಆಗ ಆ ಕರುಣಾಳುವು ಕೈಹಿಡಿಯುವನು. ಆತನೇ ನಮ್ಮ ಬುದ್ಧಿವೃತ್ತಿಗಳನ್ನು ಸರಿಯಾದ ಹಾದಿಯಲ್ಲಿ ಹರಿಯುವಂತೆ ಪ್ರೇರಿಸಲಿ! ಆಗ ಆತನು ನಮಗೆ ಸನ್ಮತಿಯನ್ನು ಕೊಟ್ಟು ಸತ್ಪಥದಲ್ಲಿ ನಡೆಯಿಸುವನು.

# ೭೧. ಪರಮಾತ್ಮಜ್ಞಾನ ೯-(೧-೫)

(೫-೧೦-೪೭)

ಭಗವದ್ಗೀತೆಯಲ್ಲಿ ವಾಸುದೇವನೆಂಬ ಪರಮಾರ್ಥತತ್ತ್ವವನ್ನು ನೇರಾಗಿ ಕಂಡುಕೊಂಡು ಕೃತಾರ್ಥರಾಗಬಹುದೆಂಬುದನ್ನೇ ಪ್ರಧಾನವಾಗಿ ಹೇಳಿರುತ್ತದೆ. ಇಂಥ ಜ್ಞಾನಕ್ಕೆ ಕರ್ಮಯೋಗವನ್ನೂ ಧ್ಯಾನಯೋಗವನ್ನೂ ಕ್ರಮಕ್ರಮವಾಗಿ ಪ್ರಾಪ್ತಿ ಸಾಧನವಾಗಿ ಹೇಳಿರುತ್ತದೆ.

ಪರಮಾರ್ಥತತ್ತ್ವವನ್ನು ನೇರಾಗಿ ಅರಿತುಕೊಳ್ಳಬಲ್ಲವರು ಉತ್ತಮಾಧಿಕಾರಿಗಳು. ಅದನ್ನೇ ಭಾವನೆಯ ಬಲದಿಂದ ಲೋಕಾಂತರವನ್ನು ಸೇರಿ ಅಲ್ಲಿ ಕ್ರಮಕ್ರಮವಾಗಿ ಜ್ಞಾನವನ್ನು ಪಡೆದು ಕೃತಾರ್ಥರಾಗುವವರು ಮಧ್ಯಮಾಧಿಕಾರಿಗಳು. ಈ ಮಧ್ಯಮಾಧಿ ಕಾರಿಗಳನ್ನು ಎಂಟನೆಯ ಅಧ್ಯಾಯದಲ್ಲಿ ವರ್ಣಿಸಿರುತ್ತದೆ. ಓಂಕಾರದ ಧ್ಯಾನವನ್ನು ಮಾಡಿ, ಆ ಯೋಗಿಯು ದೇವಯಾನವೆಂಬ ಶುಕ್ಲಮಾರ್ಗದಿಂದ ಬ್ರಹ್ಮಲೋಕವನ್ನು ಸೇರುವನೆಂದೂ ಕರ್ಮರೂಪವಾದ ಯಜ್ಞದಾನತಪಸ್ಸುಗಳ ಫಲವೆಲ್ಲವನ್ನೂ ಮೀರಿದ ಫಲವನ್ನು ಪಡೆಯುವನೆಂದೂ ಕ್ರಮಮುಕ್ತಿಯನ್ನು ಅವನಿಗೆ ಹೇಳಿದ್ದಾಗಿದೆ.

ಉಪಾಸಕನಿಗೆ ಬ್ರಹ್ಮಲೋಕದಲ್ಲಿ ಸಂಕಲ್ಪಮಾತ್ರದಿಂದ ಯಾವ ಫಲವಾದರೂ ಆಗಿಬಿಡುವದೆಂದು ಶ್ರುತಿಯಲ್ಲಿ ವರ್ಣಿತವಾಗಿರುತ್ತದೆ. ಸಾಧಾರಣವಾಗಿ ಕಾಮವಶ ರಾಗಿರುವ ಜನರ ಸಂಕಲ್ಪಗಳಿಗೆ ಅನೇಕ ಪ್ರತಿಘಾತಗಳುಂಟು. ಸಂಕಲ್ಪಿಸಿದ್ದೆಲ್ಲ ಜನರಿಗೆ ಸಿದ್ಧಿಯಾಗುವದಿಲ್ಲ. ಭೌತಿಕವಿಜ್ಞಾನಶಾಸ್ತ್ರದಿಂದ ಪ್ರತಿಘಾತಗಳನ್ನು ಕಡಿಮೆ ಮಾಡಿಕೊಳ್ಳಬಹುದು. ಆ ಶಾಸ್ತ್ರದ ಸಹಾಯದಿಂದ ಆಕಾಶಯಾನ, ದೂರ ವಾರ್ತಾಜ್ಞಾನ, ದೂರಶ್ರವಣ, ದೂರದರ್ಶನ - ಮುಂತಾದ ಶಕ್ತಿಗಳನ್ನು ಸಂಪಾದಿಸಿಕೊಳ್ಳಬಹುದು. ಆದರೆ ಅಷ್ಟು ಮಾತ್ರದಿಂದ ನಮ್ಮ ಕಾಮಗಳಿಗೆ ಅಡ್ಡಿಗಳು ಇಲ್ಲದಂತೆ ಮಾಡಿಕೊಳ್ಳುವದು ಆಗಲಾರದು. ವಿಜ್ಞಾನಶಾಸ್ತ್ರದ ಈ ಶೋಧಗಳಿಂದಲೇ ಜನರಲ್ಲಿ ರಾಗದ್ವೇಷಗಳು ಹೆಚ್ಚುತ್ತಿರುವದೂ ಮಾನವನ ಸಂಕಲ್ಪಕ್ಕೆ ಅಡ್ಡಿಗಳು ಹೇರಳವಾಗುತ್ತಿರುವದೂ ನಮ್ಮ ಅನುಭವದಲ್ಲಿರುತ್ತದೆ. ರಾಗದ್ವೇಷಗಳಿರುವವರಿಗೆ ಈ ಪ್ರತಿಘಾತಗಳು ತಪ್ಪುವಹಾಗಿಲ್ಲ. ಮನುಷ್ಯರಿಗೆ ಆಗುವ ಭೋಗಗಳಲ್ಲಿ ಯಾರಿಗೆ ವೈರಾಗ್ಯವುಂಟಾಗಿರುವದೋ ಅವರಿಗೆ ಮನುಷ್ಯರಿಗಿಂತಲೂ ಪ್ರತಿಘಾತಗಳು ಕಡಿಮೆಯಾಗಿರುವವು. ಆದ್ದರಿಂದಲೇ ದೇವತೆಗಳಿಗೆ ಅಂತರ್ಧಾನವೇ ಮುಂತಾದ ಸಿದ್ಧಿಗಳಿರುವವೆಂದು ಶಾಸ್ತ್ರದಲ್ಲಿ ಹೇಳಿರುವದು ಹೊಂದುತ್ತದೆ. ಕಾಮದ ಹೊಡೆತವನ್ನು ಎಷ್ಟೆಷ್ಟು ತಪ್ಪಿಸಿಕೊಳ್ಳುವೆವೋ ಅಷ್ಟಷ್ಟು ಶಕ್ತಿಯೂ ಜ್ಞಾನವೂ ಆನಂದವೂ ಹೆಚ್ಚುವದು

ಎಂಬುದೇ ಇಲ್ಲಿ ತಿಳಿಯಬೇಕಾದ ನಿಯಮವು. ಕಾಮವು ಸತ್ಯಕಾಮವೆಂದೂ ಅನೃತಕಾಮವೆಂದೂ ಎರಡುಬಗೆ. ಸತ್ಯಕಾಮವೆಂದರೆ ಸಂಕಲ್ಪಮಾತ್ರದಿಂದ ದೊರಕಿಯೇ ತೀರುವ ನಿತ್ಯವಾದ ಕಾಮವು; ಅನೃತಕಾಮವೆಂದರೆ ಹಾಗೆ ದೊರಕದೆ ಇರುವ ಹುಸಿತೋರಿಕೆಯು. ಸಾಮಾನ್ಯಜನರ ಸ್ವರೂಪವೂ ಪರಮಾತ್ಮನೇ ಆಗಿರುತ್ತಾನಾದ್ದರಿಂದ ಅವರಲ್ಲಿಯೂ ಸತ್ಯಕಾಮಗಳೇ ಇರುತ್ತವೆಯಾದರೂ ಅವನ್ನು ಅನೃತಕಾಮಗಳು ಮುಚ್ಚಿಕೊಂಡಿರುತ್ತವೆ. ಅನೃತವು ಅವರನ್ನು ಹೊರಕ್ಕೆ ಸೆಳೆಯುತ್ತಿರುವದರಿಂದಲೇ ಅವರು ಸತ್ಯಕಾಮಗಳನ್ನು ಅನುಭವಿಸಲಾರದೆ ಸಂಕಟಪಡುತ್ತಿರುವರು. ಆದರೆ ಯಾರು ಪರಮಾತ್ಮನನ್ನೇ ನೆನೆಯುತ್ತಾ, ಪರಮಾತ್ಮನಲ್ಲಿರುವ ಸತ್ಯಕಾಮಗಳನ್ನೇ ಚಿಂತಿಸುತ್ತಾ, ಕಾಲವನ್ನು ಕಳೆಯುವರೋ, ಅವರಿಗೆ ಈ ಲೋಕದಲ್ಲಿಯೇ ಹೊರಗಿನ ಅನೃತಕಾಮಗಳ ಕಾಟವು ತಪ್ಪಿ, ಪರಮಾತ್ಮನ ಮತ್ತು ಅವನಲ್ಲಿರುವ ಸತ್ಯಕಾಮಗಳ ಸಾಕ್ಷಾತ್ಕಾರವು ಭಾವನಾಬಲದಿಂದ ಆಗಿರುತ್ತದೆ. ಶರೀರವು ಬಿದ್ದಬಳಿಕ ಅವರ ಮನಸ್ಸಿನಲ್ಲಿದ್ದೇ ನಿಜವಾಗಿ ಅವರಿಗೆ ಇಚ್ಛಿಸಿದ ಸಿದ್ಧಿಗಳೆಲ್ಲವೂ ಸತ್ಯಲೋಕದಲ್ಲಿ ದೊರೆಯುತ್ತವೆ. ಹೀಗೆಂದು ಶ್ರುತಿಯಲ್ಲಿ ವರ್ಣಿಸಿರುತ್ತದೆ.

ಗೀತೆಯಲ್ಲಿ ಈ ಸಿದ್ಧಿಗಳ ವಿಚಾರವನ್ನು ಹೇಳಿಲ್ಲ; ಏಕೆಂದರೆ, ನಿಜವಾಗಿ ಭಗವಂತನ ಉಪಾಸಕರು ಯಾವ ಸಿದ್ಧಿಗಳಿಗೂ ಮರುಳಾಗುವದಿಲ್ಲ. ಅವರಿಗೆ ಪರಮಾತ್ಮನೇ ಬೇಕು. ಅವರಿಗೆ ಸಿದ್ಧಿಗಳೇನೊ ಅವಶ್ಯವಾಗಿ ಉಂಟಾಗುವವಾದರೂ ಅವರು ಅವಕ್ಕಾಗಿ ತಹತಹಪಡುತ್ತಿರುವದಿಲ್ಲ. ಅವರಿಗೆ ಬೇಕಾಗಿರುವದೆಲ್ಲ ಪರಮಾತ್ಮನೇ; ಆ ಪರಮಾತ್ಮನನ್ನು ಪಡೆದರೆ ಎಲ್ಲಾ ಫಲವನ್ನೂ ಪಡೆದಂತೆಯೇ ಆಯಿತೆಂದು ಅವರ ಎಣಿಕೆ.

ಇದುವರೆಗೆ ಹೇಳಿರುವದು ದೇಹವು ಬಿದ್ದಬಳಿಕ ಶುಕ್ಲಗತಿಯಿಂದ ದೊರಕುವ ಗತಿಯು. ಈ ಗತಿಯಿಂದ ಬ್ರಹ್ಮಸಾಯುಜ್ಯವನ್ನು ಪಡೆದವರೂ ಪರಂಪರೆಯಿಂದ ಜ್ಞಾನಮೂಲಕವಾಗಿಯೇ ಪರಮಪುರುಷಾರ್ಥವನ್ನು ಪಡೆಯುವದರಿಂದ ಇದನ್ನು ಕ್ರಮಮುಕ್ತಿ ಎಂದು ಕರೆಯುತ್ತಾರೆ. ಈಗ ಭಗವಂತನು ಇಲ್ಲಿಯೇ ಪಡೆಯಬಹುದಾಗಿರುವ ಸದ್ಯೋಮುಕ್ತಿಯನ್ನು ಹೇಳುವೆನೆಂದು ತಿಳಿಸುವದಕ್ಕಾಗಿ ಹೀಗೆಂದಿರುತ್ತಾನೆ:

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್॥** (೯-೧)
**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥** (೯-೨)

ಯೋಗಿಯಾದವನು ಭಗವಂತನನ್ನೇ ಆಶ್ರಯಿಸಿ ಸಾಧನಮಾಡುತ್ತಿದ್ದರೆ ಯಾವ ಸಂಶಯವೂ ಇಲ್ಲದಂತೆ ಭಗವತ್ತತ್ತ್ವವನ್ನು ಹೇಗೆ ಅರಿತುಕೊಳ್ಳುವನೆಂಬುದನ್ನು ಹೇಳುವದಕ್ಕೆ ಏಳನೆಯ ಅಧ್ಯಾಯದಿಂದಲೇ ಪ್ರಾರಂಭಿಸಿರುತ್ತದೆ. "ಜ್ಞಾನವನ್ನೂ ವಿಜ್ಞಾನವನ್ನೂ ಹೇಳುತ್ತೇನೆ; ಇದನ್ನು ಅರಿತುಕೊಂಡರೆ ಮತ್ತೇನೂ ಅರಿಯ ತಕ್ಕದ್ದಿರುವದಿಲ್ಲ" ಎಂದು ಭಗವಂತನು ಆ ಅಧ್ಯಾಯದ ಪ್ರಾರಂಭದಲ್ಲಿಯೇ ಪ್ರತಿಜ್ಞೆ ಮಾಡಿರುತ್ತಾನೆ. ಈವರೆಗೆ ಹೇಳಿರುವದು ಜ್ಞಾನವು; ಶಾಸ್ತ್ರದಲ್ಲಿ ಹೇಳಿರುವಂತೆ ಪರಮಾತ್ಮನನ್ನು ಅರಿತುಕೊಂಡು ಚಿಂತಿಸುವದೇ ಜ್ಞಾನವೆನಿಸುವದು. ಈಗ ವಿಜ್ಞಾನವನ್ನು ಹೇಳುವದಕ್ಕೆ ಮೊದಲು ಮಾಡಿರುತ್ತದೆ. ಈ ವಿಜ್ಞಾನವು ಹಿಂದೆ ಹೇಳಿರುವ ಜ್ಞಾನಕ್ಕಿಂತ ಬೇರೆ ಎಂದು ತಿಳಿಸುವದಕ್ಕಾಗಿ ಇದನ್ನು 'ತು' (ಆದರೆ) ಎಂಬ ಮಾತಿನಿಂದ ವಿಂಗಡಿಸಿ ಹೇಳಿರುತ್ತದೆ.

ಇದು ಗುಹ್ಯತಮವಾದದ್ದು. ಹಿಂದೆ ಹೇಳಿದ ಉಪಾಸನೆಯೂ ಗುಹ್ಯವಾದದ್ದೇ; ಪರಮಾತ್ಮನ ವಿಷಯವೆಂಬುದು ಲೋಕದ ಜನರಿಗೆ ಗುಟ್ಟೇ ಆಗಿರುತ್ತದೆ, ಎಷ್ಟು ಹೇಳಿದರೂ ತಿಳಿಯುವದಿಲ್ಲ. ಆದರೂ ಈಗ ಹೇಳುವ ಜ್ಞಾನವು ಅದಕ್ಕಿಂತಲೂ ಗುಟ್ಟಾದದ್ದು. ಇದು ರಾಜಗುಹ್ಯವು; ಗುಟ್ಟುಗಳಲ್ಲೆಲ್ಲ ಗುಟ್ಟು. ಈ ಗುಟ್ಟನ್ನು ಅರಿತವನೇ ನಿಜವಾಗಿ ಅರಿತವನು. ಇಲ್ಲಿ ಹೇಳಿರುವದೇ ನಿಜವಾದ ವಿದ್ಯೆ, ತಿಳಿವಳಿಕೆ. ಹಿಂದೆ ಹೇಳಿರುವ ಉಪಾಸನೆಯೂ ವಿದ್ಯೆಯೇ, ಏಕೆಂದರೆ ಅದೂ ಪರಮಾರ್ಥದ ಚಿಂತನೆಯ ರೂಪವಾಗಿರುತ್ತದೆ. ಆದರೆ ಇದು ರಾಜವಿದ್ಯೆ, ವಿದ್ಯೆಗಳಲ್ಲೆಲ್ಲ ನಿಜವಾಗಿ ವಿದ್ಯೆ ಎನ್ನಿಸಿಕೊಳ್ಳುವದಕ್ಕೆ ತಕ್ಕದ್ದು. ಇದನ್ನು ಅರಿತರೆ ಅಶುಭದಿಂದ ಬಿಡುಗಡೆಯಾಗುತ್ತದೆ. ಪರಮಾತ್ಮನ ಉಪಾಸನೆಯಿಂದಲೇ, ಶಾಸ್ತ್ರದಲ್ಲಿ ಹೇಳಿರುವಂತೆ ಎಡೆಬಿಡದೆ ಚಿಂತಿಸುವದರಿಂದಲೇ, ಅಶುಭವಾದ ಸಂಸಾರದಿಂದ ಮುಕ್ತಿಯಾಗುತ್ತದೆ. ಆದರೆ ಅದು ಕಾಲಾಂತರದಲ್ಲಿ ದೇಶಾಂತರದಲ್ಲಿ ಆಗುವ ಬಿಡುಗಡೆ. ಇದು ನೇರಾಗಿ ಇಲ್ಲಿಯೇ ಸಾಧಕನ ಪ್ರತ್ಯಕ್ಷವಾದ ಅನುಭವಕ್ಕೆ ಗೋಚರ ವಾಗುವ ಮುಕ್ತಿ. ಉಪಾಸಕರಿಗೆ ಕೂಡ ಈ ವಿಜ್ಞಾನದ ದ್ವಾರದಿಂದಲೇ ಆತ್ಯಂತಿಕವಾದ ಮುಕ್ತಿಯಾಗಬೇಕಾಗಿರುತ್ತದೆ. ಆದ್ದರಿಂದ ಈ ಜ್ಞಾನದಿಂದಲೇ ಅಶುಭದಿಂದ ನಿಜವಾದ ಬಿಡುಗಡೆಯು ಆಗುತ್ತದೆ ಎಂದು ಭಗವಂತನು ಹೇಳಿರುತ್ತಾನೆ.

ಈ ಜ್ಞಾನವು ರಾಜವಿದ್ಯೆ, ರಾಜಗುಹ್ಯವು, ಉತ್ತಮವಾದ ಪವಿತ್ರಸಾಧನವು. ಪ್ರಾಯಶ್ಚಿತ್ತವೇ ಮುಂತಾದ ಸಾಧನಗಳು ತತ್ಕಾಲಕ್ಕೆ ದೋಷಗಳನ್ನು ಕಳೆಯಬಹುದು. ಆದರೆ ಮತ್ತೆ ಅದೇ ದೋಷಗಳು ಉಂಟಾಗದಂತೆ ಮಾಡುವ ಯೋಗ್ಯತೆಯು ಅವಕ್ಕಿಲ್ಲ. ಈ ಆತ್ಮವಿಜ್ಞಾನವುಂಟಾದರೆ ಮಾತ್ರ ಯಾವದೊಂದು ದೋಷವೂ

ಎಳ್ಳಷ್ಟೂ ಉಳಿಯದೆ ಸಂಪೂರ್ಣವಾಗಿ ಆತ್ಯಂತಿಕವಾಗಿ ಒರಸಿಹೋಗುತ್ತದೆ. ಇದು ನೇರಾಗಿ ಅನುಭವಕ್ಕೆ ಬರುವಂಥದ್ದು. ಇಷ್ಟೆಲ್ಲ ಗುಣಗಳಿರುವವೆಂದಮೇಲೆ ಇದು ಧರ್ಮಕ್ಕೆ ವಿರುದ್ಧವಾಗಿರಬಹುದೆಂದು ಶಂಕಿಸುವಂತೆಯೂ ಇಲ್ಲ; ಏಕೆಂದರೆ ಧರ್ಮಕ್ಕೆಲ್ಲ ತಳಹದಿಯಾಗಿರುವ ಆತ್ಮನ ಸ್ವರೂಪವನ್ನೇ ಇದು ತಿಳಿಸಿಕೊಡುತ್ತದೆ; ಇಂಥ ಸಕಲಗುಣಸಂಪೂರ್ಣವಾದ ಇದನ್ನು ದೊರಕಿಸಿಕೊಳ್ಳುವದು ಬಹಳ ಕಷ್ಟವೆಂದು ಎಣಿಸಬೇಡ; ಇದನ್ನು ಸುಲಭವಾಗಿ, ಶರೀರಾಯಾಸವಾಗಲಿ ಚಿತ್ತಕ್ಲೇಶವಾಗಲಿ ಇಲ್ಲದೆ, ಕುಳಿತಲ್ಲಿಯೇ ರತ್ನವನ್ನು ಚೆನ್ನಾಗಿ ನಿಟ್ಟಿಸಿನೋಡಿ ಅದರ ತತ್ತ್ವವನ್ನು ಕಂಡುಕೊಳ್ಳುವಂತೆ, ಈಗಲೇ ಇಲ್ಲಿಯೇ ಸಂಪಾದಿಸಿಕೊಂಡುಬಿಡಬಹುದು; ಅಷ್ಟು ಸುಲಭವಾದರೆ ಅದರ ಫಲವೂ ಅಲ್ಪವಾಗಿರಬಹುದು ಎನ್ನುವದಕ್ಕಿಲ್ಲ; ಏಕೆಂದರೆ ಕಾಲಾತೀತವಾದ ಆತ್ಮತತ್ತ್ವವನ್ನು ಇದು ದೊರಕಿಸಿಕೊಡುವದರಿಂದ ಇದರ ಫಲವು ಅವ್ಯಯವಾಗಿರುವದು, ಎಂದೆಂದಿಗೂ ನಾಶವಾಗದೆ ಇರುತ್ತದೆ. ಈ ಜ್ಞಾನದಲ್ಲಿಯೂ ಇದರಿಂದ ದೊರಕುವ ಫಲದಲ್ಲಿಯೂ ಶ್ರದ್ಧೆಯಿಲ್ಲದವರಿಗೆ, ಮತ್ತೇನಾದರೂ ಸಿಕ್ಕಿದರೂ ಸಿಕ್ಕಬಹುದು. ಆದರೆ ಅವರಿಗೆ ಭಗವಂತನಾದ ನನ್ನ ಪ್ರಾಪ್ತಿಯು ಎಂದಿಗೂ ಆಗಲಾರದು.

ಜ್ಞಾನವಿಲ್ಲದವರು ಏನು ಮಾಡಿದರೂ ಯಾವ ಫಲವನ್ನು ಪಡೆದುಕೊಂಡರೂ ಮೃತ್ಯುಸಂಸಾರದ ಹಾದಿಗೆ ಹಿಂತಿರುಗದೆ ಇರುವದಕ್ಕೆ ಆಗುವದಿಲ್ಲ. ಸಂಸಾರವು ಮೃತ್ಯುವಿನ ಹಾದಿ ಎಂಬುದು ಅದರಿಂದ ಹೊರಬಿದ್ದಾಗಿದ್ದು ಪರೀಕ್ಷಿಸುವವರಿಗೆ ಮಾತ್ರ ತಿಳಿಯುತ್ತದೆ. ಭೋಗವೆಂದರೇನು? ಸಾವಿನ ಹತ್ತಿರಹತ್ತಿರಕ್ಕೆ ಹೋಗುವದು. ಏಕೆಂದರೆ ಭೋಗಗಳನ್ನು ನಾವು ಭೋಗಿಸುವೆವು ಎನ್ನುವಾಗಲೂ ನಿಜವಾಗಿ ಅವೇ ನಮ್ಮನ್ನು ಭೋಗಿಸುತ್ತಿರುವವು. ಭೋಗವು ಆದ ಬಳಿಕ ನಮಗೆ ಅದರಿಂದ ಮೃತ್ಯುವಿನ ದುಃಖವು ಉಂಟಾಗುವದೆಂದು ಭಾವಿಸಬಾರದು. ಭೋಗಸಮಕಾಲ ದಲ್ಲಿಯೇ ನಾವು ಮೃತ್ಯುವಿನ ಬಾಯಿಗೆ ಸಿಕ್ಕಿರುತ್ತೇವೆ. ಬೆಕ್ಕು ಇಲಿಯನ್ನು ಹಿಡಿದುಕೊಂಡು ಬಿಟ್ಟು ಬಿಟ್ಟು ಚೆಣ್ಣಾಟವಾಡಿ ಕೊನೆಗೆ ಅದನ್ನು ಕಬಳಿಸುವಂತೆ ಮೃತ್ಯುವೂ ಜೀವರನ್ನು ತನ್ನ ಬೇಟೆಯ ಕ್ಷೇತ್ರಕ್ಕೆ ಸಿಕ್ಕಿಸಿಕೊಂಡು ಗೋಳುಗುಟ್ಟಿಸುತ್ತಿರು ತ್ತಾನೆ. ಯಮನ ಹತ್ತಿರ ರೋಗಗಳು ಮೂರ್ತಿಮಂತವಾಗಿ ಸಭೆಯಲ್ಲಿರುವರೆಂದು ಪುರಾಣದಲ್ಲಿ ವರ್ಣಿಸಿರುತ್ತದೆ; ಯಮನು ತನಗೆ ಇಷ್ಟಬಂದಾಗ ಪ್ಲೇಗು, ಕಾಲರಾ-ಮುಂತಾದ ಭೀಕರರೋಗಗಳನ್ನು ಜೀವರ ಮೇಲೆ ಬಿಡುತ್ತಾನೆ. ಆಗ ಯಾವ ವೈದ್ಯರೂ ಅವನ್ನು ಎದುರಿಸಲಾರದೆ ಇರುತ್ತಾರೆ. ತಂದೆಯ ಆಸ್ತಿಗಾಗಿ ಅಣ್ಣತಮ್ಮಂದಿರು ಹೊಡೆದಾಡುತ್ತಿರುವಾಗ, ವೈದ್ಯನು ರೋಗಿಯನ್ನು ಖಂಡಿತವಾಗಿ ವಾಸಿಮಾಡುವೆನೆಂದು

ಅಭಯವನ್ನು ಕೊಡುತ್ತಿರುವಾಗ ಈ ಎರಡು ಸಂದರ್ಭದಲ್ಲಿಯೂ ಮೃತ್ಯುವು ನಗುತ್ತಿರುವನಂತೆ! ಭೋಗವನ್ನು ಸವಿಯುತ್ತಾ ಸುಖಿಯಾಗಿರುವೆವೆಂದು ನಾವುಗಳು ಎಣಿಸುತ್ತಿರುವಾಗಲೇ ಮೃತ್ಯುವಿನ ಹಲ್ಲುಸಂದಿಯಲ್ಲಿ ಸಿಕ್ಕಿ ನರಳುತ್ತಿರುವೆವೆಂಬುದನ್ನು ನಾವೆಲ್ಲಿ ಬಲ್ಲೆವು? ಹಲಸಿನ ಹಣ್ಣನ್ನು ತಿನ್ನುತ್ತಿರುವವನು ರುಚಿಯ ಕಡೆಗೇ ಲಕ್ಷ್ಯವನ್ನು ಕೊಟ್ಟಿರುವವರೆಗೆ ಆ ಹಣ್ಣು ಹೊಟ್ಟೆನೋವನ್ನು ಸಿದ್ಧಮಾಡುತ್ತಿದೆ ಎಂದು ಹೇಗೆತಾನೆ ತಿಳಿದೀತು?

ಜ್ಞಾನವನ್ನು ಹೊಗಳಿ ಅಜ್ಞಾನದಲ್ಲಿರುವ ದೋಷವನ್ನೂ ಹೇಳಿದ್ದಾಯಿತು. ಈಗ ಜ್ಞಾನವನ್ನೂ ಅದರ ಫಲವನ್ನೂ ವಿಶೇಷವಾಗಿ ತಿಳಿಸುವದಕ್ಕಾಗಿ ಭಗವಂತನು ಹೊರಟಿರುತ್ತಾನೆ. ಮೃತ್ಯುಸಂಸಾರವಾಗಿ ಸಾಧಾರಣಜನರಿಗೆ ಕಾಣುತ್ತಿರುವ ಇದೇ ಜಗತ್ತೇ ಜ್ಞಾನಿಗಳಿಗೆ ಪರಮಾತ್ಮಮಯವಾಗಿ ಕಾಣುತ್ತಿರುವದು. ಅನಿಷ್ಟವಾದ ಸಂಸಾರವೇ ಅಜ್ಞಾನಿಗಳಿಗೆ ಗೋಚರವಾಗುವದು. ಅಮೃತಸ್ವರೂಪನಾದ ಪರಮಾತ್ಮನೇ ಜ್ಞಾನಿಗಳಿಗೆ ಕಾಣುತ್ತಿರುತ್ತಾನೆ. ಪರಮಾತ್ಮನಿಗೂ ಈ ಸಂಸಾರದ ಜಗತ್ತಿಗೂ ಇರುವ ಸಂಬಂಧವನ್ನು ಭಗವಂತನು ವರ್ಣಿಸುತ್ತಿರುವದನ್ನು ಕೇಳಿರಿ.

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥** (೯-೪)
**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥** (೯-೫)

ಈ ಸಂಸಾರವು ನಿಜವಾಗಿ ಪರಮಾತ್ಮನೇ ಆಗಿರುವದು. ಎಲ್ಲಾ ಭೂತಗಳೂ ಪರಮಾತ್ಮನಲ್ಲಿಯೇ ಇರುವವು, ಪರಮಾತ್ಮನಲ್ಲಿಯೇ ಕಲ್ಪಿತವಾಗಿರುವವು, ಪರಮಾತ್ಮನು ಭೂತಗಳಲ್ಲಿಲ್ಲ. ನಿಜವಾಗಿ ನೋಡಿದರೆ ಎಲ್ಲೆಲ್ಲಿಯೂ ಪರಮಾತ್ಮನೇ, ಎಲ್ಲವೂ ಪರಮಾತ್ಮನೇ. ಭ್ರಾಂತಿಯಿಂದ ಈ ಸಂಸಾರವು ನಮಗೆ ಕಾಣುತ್ತಿರುವದು. ಭ್ರಾಂತಿಯೆಂದರೆ ಸರಿಯಾಗಿರುವದನ್ನು ಮರೆಯಿಸಿ ತಪ್ಪಾದದ್ದನ್ನೇ ಸರಿ ಎಂದು ತಿಳಿಸುವ ಜ್ಞಾನವು. ಈ ಸಂಸಾರವು ತೋರುತ್ತಿರುವಾಗಲೂ ಇದಕ್ಕೆ ಪರಮಾತ್ಮನೇ ಆಧಾರವಾಗಿರುತ್ತಾನೆ, ಪರಮಾತ್ಮನೇನೂ ಈ ಸಂಸಾರದ ಆಧಾರದಿಂದ ಇರುವದಿಲ್ಲ. ಆದರೂ ನಮಗೆ ಸಂಸಾರವೇ ಸ್ವತಂತ್ರವಾಗಿರುವದೆಂದು ಕಾಣಿಸುತ್ತಿರುವದಲ್ಲ! ಇಷ್ಟೇ ಅಲ್ಲ. ನಿಜವಾಗಿರುವವನು ಪರಮಾತ್ಮನೊಬ್ಬನೇ, ಜಗತ್ತು ಇಲ್ಲವೇ ಇಲ್ಲ. ಆದರೂ ಪರಮಾತ್ಮನೇ ಇಲ್ಲವೆಂದೂ ಜಗತ್ತೊಂದೇ ಇರುವದೆಂದೂ ನಮಗೆ ತೋರುತ್ತಿರುವದಲ್ಲ! ಇದೇಕೆ? ಎಂದರೆ ಅಜ್ಞಾನದಿಂದ. ಪರಮಾತ್ಮನೇ ಸತ್ಯವೆಂಬ ವಿಜ್ಞಾನವು ನಮಗೆ ಆದಾಗ ಈ ನಮ್ಮ ತಪ್ಪುತಿಳಿವಳಿಕೆಯು ಹಾರಿಹೋಗುತ್ತದೆ.

"ಭೂತಗಳು ನನ್ನಲ್ಲಿವೆ, ನಾನು ಭೂತಗಳಲ್ಲಿಲ್ಲ" ಎಂಬುದನ್ನು ಶ್ರೀ ಕೃಷ್ಣ ಭಗವಂತನು ಬಾಲಲೀಲೆಯಲ್ಲಿ ಯಶೋದಾದೇವಿಗೆ ತೋರಿಸಿಕೊಟ್ಟನು. 'ಕೃಷ್ಣನು ಮಣ್ಣುತಿಂದಿದಾನೆ' ಎಂದು ಬಲರಾಮನು ದೂರು ಹೇಳಿದಾಗ ಯಶೋದೆಯು ಅವನ ಬಾಯಿಯನ್ನು ತೆರೆದು ಪರೀಕ್ಷಿಸಿದಳಂತೆ. ಆಗ ಆತನ ಹೊಟ್ಟೆಯಲ್ಲಿ ಆಕೆಗೆ ಹದಿನಾಲ್ಕು ಲೋಕಗಳೂ ಕಾಣಿಸಿದವಂತೆ. ಆಗ ಈ ಕೃಷ್ಣನು ನನ್ನ ಮಗನಲ್ಲ; ಈರೇಳು ಲೋಕಗಳಿಗೂ ಒಡೆಯನಾದ ಭಗವಂತನೇ ಎಂಬ ಅರಿವು ಆಕೆಗೆ ಆಯಿತಂತೆ. ಆದರೇನು? ಐದೇ ನಿಮಿಷದಲ್ಲಿ ಆ ಭಗವಂತನ ಮಾಯೆಯಿಂದ ಮೋಹಿತಳಾಗಿ ಮತ್ತೆ ಇವನು ನನ್ನ ಮುದ್ದುಕಂದನೇ ಎಂಬ ಮೋಹಕ್ಕೆ ಬಲಿಯಾದಳಂತೆ! "ಪಶ್ಯ ಮೇ ಯೋಗಮೈಶ್ವರಮ್" ನನ್ನ ಈಶ್ವರಶಕ್ತಿಯಾದ ಯೋಗವನ್ನು ನೋಡು?" ಎಂದು ಭಗವಂತನು ಹೇಳಿರುವದಕ್ಕೆ ಇದೇ ಕಾರಣ. ಭಗವಂತನ ಯೋಗವು ಎರಡು ಬಗೆಯಾಗಿರುತ್ತದೆ. ಭಕ್ತರಿಗೆ ತಾನೇ ಎಲ್ಲಕ್ಕೂ ಆಧಾರನೆಂದೂ, ನಿಜವಾಗಿ ತಾನೇ ಎಲ್ಲವೂ ಆಗಿರುವೆನೆಂದೂ ತೋರಿಸಿಕೊಳ್ಳುತ್ತಾನೆ. ಅಹಂಕಾರಿಗಳಿಗೆ ತಾನೇ ಇಲ್ಲವೆಂದೂ ಇರುವದೆಲ್ಲ ಜಗತ್ತೇ ಎಂದೂ ತೋರುತ್ತಾನೆ. ಕಾಗೆಗಳಿಗೆ ಹಗಲಾಗಿರುವದೇ ಗೂಬೆಗಳಿಗೆ ರಾತ್ರಿಯಾಗಿರುವಂತೆ ಜ್ಞಾನಿಗಳಿಗೆ ಪರಮಾರ್ಥಸತ್ಯವಾಗಿರುವ ಪರಮಾತ್ಮನೇ ಅಜ್ಞಾನಿಗಳಿಗೆ ಕಾಣಿಸದೆ ಜಗತ್ತಾಗಿ ಕಾಣಿಸುತ್ತಿರುತ್ತಾನೆ. ಇದೇ ಆತನ ಯೋಗಮಾಯೆ!

ಭಗವಂತನು ತನ್ನ ಉಪದೇಶವನ್ನು ವಿಶದಪಡಿಸುವದಕ್ಕಾಗಿ ಒಂದು ದೃಷ್ಟಾಂತ ವನ್ನು ಕೊಟ್ಟಿರುತ್ತಾನೆ. ಸರ್ವತ್ರವೂ ಸಂಚರಿಸುತ್ತಿರುವದೆಂಬ ಗಾಳಿಯು ಹೇಗೆ ಆಕಾಶದಲ್ಲಿರುವದೋ ಹಾಗೆ ಪರಮಾತ್ಮನಲ್ಲಿ ಸರ್ವಭೂತಗಳೂ ಇರುತ್ತಿರುವವು. ಈ ದೃಷ್ಟಾಂತದಲ್ಲಿ ವಿವಕ್ಷಿತವಾಗಿರುವ ಅಂಶವು ಯಾವದೆಂದರೆ, ವಾಯುವು ತನ್ನ ಸಂಚಾರದಿಂದಲೂ ಸ್ಪರ್ಶದಿಂದಲೂ ಎಲ್ಲೆಲ್ಲಿಯೂ ವ್ಯಾಪಿಸಿರುವ ಮಹಾಭೂತವೆಂತ ನಮಗೆ ತೋರುತ್ತಿರುವದು; ಆದರೆ ಆ ವಾಯುವಿಗೆ ಅವಕಾಶವನ್ನು ಕೊಟ್ಟಿರುವ ಆಧಾರವಸ್ತು ಯಾವದು? ಎಂದು ವಿಚಾರಮಾಡಿದವರಿಗೆ ಆಕಾಶವು ಅದಕ್ಕಿಂತಲೂ ವ್ಯಾಪಕವೆಂದೂ ಆ ವಾಯುವು ಆಕಾಶದ ಆಧಾರವಿಲ್ಲದೆ ಇರಲೇ ಆರದೆಂದೂ ತಿಳಿದುಬರುತ್ತದೆ. ಇದರಂತೆ ಪರಮಾತ್ಮನ ಆಧಾರದಿಂದಲೇ ಸರ್ವಭೂತಗಳೂ ಇರುತ್ತವೆ. ಇನ್ನೊಂದು ಅಂಶವು ಯಾವದೆಂದರೆ, ವಾಯುವು ಎಲ್ಲೆಲ್ಲಿಯೂ ಬೀಸುತ್ತಿದ್ದರೂ ಅದರ ಸೋಂಕಿನಿಂದ ಆಕಾಶಕ್ಕೆ ಯಾವ ಲೋಪವೂ ಆಗಿರುವದಿಲ್ಲ; ಇದರಂತೆ ಭೂತಗಳ ದೋಷವು ಪರಮಾತ್ಮನಿಗೆ ಒಂದಿಷ್ಟೂ ಇರುವದಿಲ್ಲ. ಇನ್ನೂ ಒಂದಂಶವು ಯಾವದೆಂದರೆ, ವಾಯುವು ನಿಜವಾಗಿ ಆಕಾಶದ ಕಾರ್ಯವು. ಮಣ್ಣೇ

ಮಡಕೆಯಾಗುವಂತೆ ಆಕಾಶವೇ ವಾಯುವಾಗಿ ತೋರುತ್ತಿರುವದು. ಈ ದೃಷ್ಟಿಯಲ್ಲಿ ಇರುವದೆಲ್ಲ ಆಕಾಶವೇ ಹೊರತು ವಾಯುವೆಂಬುದೇ ಇಲ್ಲ. ಇದರಂತೆ ಸಮಸ್ತ ಭೂತಗಳಿಗೂ ಪರಮಾತ್ಮನೇ ಕಾರಣನಾಗಿರುತ್ತಾನೆ, ಆದ್ದರಿಂದ ಭೂತಗಳೆಂದರೂ ಪರಮಾತ್ಮನೇ, ಪರಮಾತ್ಮನಿಗಿಂತ ಬೇರೆಯಾಗಿ ಭೂತಗಳೇ ಇರುವದಿಲ್ಲ.

ಹೀಗೆ ಪರಮಾತ್ಮನು ಭೂತಗಳನ್ನು ಧರಿಸಿರುವನು, ಭೂತಗಳಲ್ಲಿರುವವನಲ್ಲ; ಭೂತಗಳ ಉತ್ಪತ್ತಿಗೆ ಆತನೇ ಕಾರಣನು, ಆದ್ದರಿಂದ ಆತನೊಬ್ಬನೇ ಪರಮಾರ್ಥ ವಾಗಿರುವವನು ಭೂತಗಳೆಂಬವೆಲ್ಲ ಸ್ವಪ್ನದ ತೋರಿಕೆಗಳಂತೆ ಬರಿಯ ತೋರಿಕೆ ಗಳಾಗಿರುತ್ತವೆ. ಅವು ಪರಮಾತ್ಮನೆಂಬ ಅಧಿಷ್ಠಾನದಲ್ಲಿ ಕಲ್ಪಿತವಾಗಿರುತ್ತವೆ. ಭೂತಗಳು ಇರುವಾಗಲೂ ಲಯವಾದಾಗಲೂ - ಹಗ್ಗದಲ್ಲಿ ಕಲ್ಪಿತವಾಗಿರುವ ಹಾವು ಯಾವಾಗಲೂ ಹಗ್ಗದ ಅಧೀನವಾಗಿರುವಂತೆ-ಪರಮಾತ್ಮನ ವಶವಾಗಿರುತ್ತವೆ. ಇದನ್ನು ಆಗಲೆ ಎಂಟನೆಯ ಅಧ್ಯಾಯದಲ್ಲಿ ತಿಳಿಸಿದ್ದಾಗಿದೆ. ಒಂದೊಂದು ಕಲ್ಪವು ಮುಗಿಯುತ್ತಲೂ ಎಲ್ಲಾ ಭೂತಗಳೂ ಭಗವಂತನ ಪ್ರಕೃತಿಯಲ್ಲಿ ಅಡಗಿದ್ದು ಹೊಸ ಕಲ್ಪವು ಬರುತ್ತಲೂ ಹೊರತೋರಿಕೊಳ್ಳುತ್ತವೆ. ಹೀಗೆ ಜಗತ್ತು ಮತ್ತೆಮತ್ತೆ ಲಯವಾಗಿ ಮತ್ತೆಮತ್ತೆ ಸೃಷ್ಟಿಯಾಗುತ್ತಿದ್ದರೂ ಪ್ರತಿಯೊಂದು ಕಲ್ಪದವರೂ ಹೊಸದಾಗಿರುವ ಈ ಜಗತ್ತನ್ನು ನೋಡಿ "ಇದು ಸತ್ಯವು, ಇದು ಎಷ್ಟು ಚೆನ್ನಾಗಿದೆ!" ಎಂದು ಮೆಚ್ಚುತ್ತಿರುವರು. ಜನರು ಸಂಸಾರವನ್ನು ಹೂಡಿಹೂಡಿ ಮತ್ತೆಮತ್ತೆ ದುಃಖಿಸುವಂತೆಯೂ, ಒಂದಕ್ಕೆ ಮೂರುಪಟ್ಟು ಹಣ ಕೊಡುತ್ತೇನೆ ಎಂಬ ಗಿರಗಟ್ಟಿ ದುಡ್ಡಿನ ಆಟದಲ್ಲಿ ಮತ್ತೆ ಮತ್ತೆ ಆಸೆಯಿಂದ ಜನರು ದುಡ್ಡನ್ನು ಹಾಕಿಹಾಕಿ ಮೋಸಹೋಗಿ ದುಃಖಿಸುವಂತೆಯೂ, ಮಾಯಾವಿಲಾಸಕ್ಕೆ ಮರಳಾಗುವ ಜನರು ಅವಶರಾಗಿ, ಪೊಲೀಸಿನವನ ಕೈಯಲ್ಲಿರುವ ಖೈದಿಗಳಂತೆ ಪ್ರಕೃತಿಪರತಂತ್ರರಾಗಿ, ಸುಳ್ಳನ್ನೇ ನಿಜವೆಂದು ನಂಬಿ ದುಃಖದೊಳಕ್ಕೆ ದೂಡಲ್ಪಡುತ್ತಿರುವರು!

ಭಗವಂತನ ಪ್ರಕೃತಿಯು ಹೀಗೆ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ಮಾಡುತ್ತಿದ್ದರೂ ಜಗತ್ತಿನಲ್ಲಿರುವ ಪ್ರಾಣಿಗಳು ಇಲ್ಲಿಯ ಸಂಸಾರಮಾಯೆಗೆ ಸಿಕ್ಕಿ ಬಿದ್ದು ಮತ್ತೆ ನರಳುತ್ತಿದ್ದರೂ ಭಗವಂತನಿಗೆ ಆ ಕರ್ಮಗಳಿಂದ ಯಾವ ಬಂಧವೂ ಆಗುವದಿಲ್ಲ; ಏಕೆಂದರೆ ಆತನಿಗೆ ಯಾವ ಕರ್ಮದಲ್ಲಿಯೂ ಸಂಗವಿರುವದಿಲ್ಲ. ಅವನು ಅವುಗಳಲ್ಲಿ ಉದಾಸೀನನಂತೆ ಇರುತ್ತಾನೆ. ಹಗ್ಗವು ಹಾವಾಗಿ ಜನರನ್ನು ಹೆದರಿಸುತ್ತದೆ ಎಂಬಲ್ಲಿ ಹೇಗೆ ಹಗ್ಗಕ್ಕೆ ಕರ್ತೃತ್ವವಿಲ್ಲವೋ ಹಾಗೆಯೇ ಇಲ್ಲಿಯೂ ತಿಳಿಯಬೇಕು. ಜನರು ಪರಮಾತ್ಮನ ಪ್ರಕೃತಿಗೆ ವಶರಾಗಿ ಸಂಸಾರದಲ್ಲಿ ಸಿಕ್ಕಿ ನರಳುತ್ತಿದ್ದರೂ ಪರಮಾತ್ಮನು ಆ ನರಳುವಿಕೆಗೆ ಹೊಣೆಯಲ್ಲ. ಅಜ್ಞಾನಿಗಳಿಗೆ ಮಾಯೆ ಜಗತ್ತಾಗಿ ಅವರನ್ನು

ನರಳಿಸುವದು, ಜ್ಞಾನಿಗಳಿಗೆ ಪರಮಾತ್ಮನಾಗಿ ಕಾಣಿಸಿಕೊಂಡು ಉದ್ಧರಿಸುವದು - ಇವೆಲ್ಲವೂ ಅವರವರ ಕರ್ಮಕ್ಕೂ ತಿಳಿವಳಿಕೆಗೂ ಸೇರಿದ್ದು. ತಿಳಿವಳಿಕೆಯಿಂದ ಫಲವೇನು? ಎಂದರೆ, ಪರಮಾತ್ಮನು ನಮ್ಮೆಲ್ಲರಿಗೂ ಆತ್ಮನಾಗಿರುತ್ತಾನೆ. ಇದನ್ನು ತಿಳಿದುಕೊಳ್ಳದ್ದರಿಂದ ಸಂಸಾರದ ಬಂಧವಾಗಿರುತ್ತದೆ. ಜ್ಞಾನಿಗಳ ಉಪದೇಶದಿಂದ ಇದನ್ನು ಅರಿತುಕೊಂಡರೆ ಮೋಕ್ಷವಾಗುತ್ತದೆ. ನಾವು ಯಾವಯಾವ ದುಃಖವನ್ನು ಅನುಭವಿಸುತ್ತಿದ್ದರೂ ಆ ದುಃಖವನ್ನೆಲ್ಲ ವಿಷಯೀಕರಿಸಿ ನೋಡುತ್ತಿರುವ ಸಾಕ್ಷಿಯು ನಮ್ಮಲ್ಲಿಯೇ ಇರುವದೆಂಬುದು ನಮಗೆ ಅನುಭವಸಿದ್ಧವಾಗಿರುತ್ತದೆ. ಆ ದುಃಖವು ಬರುವ ಮುಂಚೆಯೂ ಬಂದಾಗಲೂ ಅದು ಹೋದಬಳಿಕವೂ ನಾವು ಅದನ್ನು ಸಾಕ್ಷಿಯಾಗಿ ಕಂಡು ವರ್ಣಿಸುತ್ತಿರುವೆವು. ಆದರೆ ನಾವು ಈ ಸಾಕ್ಷಿಯನ್ನೂ ಸುಖದುಃಖದಲ್ಲಿ ಅಭಿಮಾನಪಡುತ್ತಿರುವ 'ನಾನು' ಎಂಬಂಶವನ್ನೂ ಬಿಡಿಸಿ ತಿಳಿಯದೆ ಇರುವದರಿಂದ ನಮಗೆ ಜ್ಞಾನದ ಪೂರ್ಣಪ್ರಯೋಜನವು ಆಗಿರುವದಿಲ್ಲ.

ಈವರೆಗೆ ಹೇಳಿರುವದರ ಸಾರವೇನೆಂದರೆ ಒಬ್ಬ ಪರಮಾತ್ಮನೇ ನಮ್ಮೆಲ್ಲರಿಗೂ ಆತ್ಮನಾಗಿರುತ್ತಾನೆ. ಅವನು ಎಲ್ಲಕ್ಕೂ ಸಾಕ್ಷಿಯಾಗಿರುತ್ತಾನೆ. ನಮ್ಮಲ್ಲಿ 'ನಾನು' 'ನಾನು' ಎಂದು ತೋರುವ ಭಾಗವು ಸಾಕ್ಷ್ಯವಾಗಿರುವದರಿಂದ ಅದಕ್ಕಿಂತ ಈ ಸಾಕ್ಷಿಯು ವಿಲಕ್ಷಣನಾಗಿರುತ್ತಾನೆ. ಈ ನಾನು ಎಂಬುದು ಯಾವಾಗಲೂ ನಮ್ಮ ಸ್ವರೂಪಕ್ಕೆ ಅಂಟಿಕೊಂಡಿರುವದಲ್ಲ. ಇದು ನಮ್ಮ ಎಚ್ಚರ, ಕನಸು ಎಂಬ ಅವಸ್ಥೆಗಳಲ್ಲಿ ಮಾತ್ರ ಕಾಣುತ್ತಿರುವದು. ನಾನು ಇದನ್ನು ಇದರಿಂದ ಅರಿಯುತ್ತಿದ್ದೇನೆ ಎಂಬ ತ್ರಿಪುಟಿಯು ಆ ಅವಸ್ಥೆಗಳಲ್ಲಿ ತೋರುತ್ತಿರುತ್ತದೆ. ಆದರೆ ಗಾಢನಿದ್ರೆಯಲ್ಲಿ ಈ ತ್ರಿಪುಟಿಯಿರುವದಿಲ್ಲ. ನಾನು ಎಂಬುದು ಅಲ್ಲಿ ಕಾಣುವದಿಲ್ಲ. ಆದರೆ ನಮ್ಮ ನಿಜವಾದ ಆತ್ಮನಾದ ಸಾಕ್ಷಿಯು ಮಾತ್ರ ಇದ್ದೇ ಇರುತ್ತಾನೆ. ನಿದ್ರೆಯಲ್ಲಿ 'ನಾನು' ಎಂಬ ಅಭಿಮಾನವಿಲ್ಲ; ಆದರೆ ನಾನೇ ಅಲ್ಲಿಲ್ಲ ಎಂದು ಹೇಳುವದು ಮಾತ್ರ ಸಲ್ಲದು. ಏಕೆಂದರೆ ನಾನೇ ನಿದ್ರಿಸಿದೆನು ಎಂಬ ಅನುಭವಕ್ಕೆ ಯಾವ ಬಾಧಕವೂ ಇರುವದಿಲ್ಲ. ಆ ನಾನು ಯಾವದು? ವಿಷಯಗಳೂ ಇಂದ್ರಿಯಗಳೂ ಇರುವಾಗ 'ನಾನು' ಎಂಬ ಹುಸಿತೋರಿಕೆಯಿರುತ್ತದೆ. ಈ ಮೂರನ್ನೂ ನೋಡುತ್ತಿರುವ ಸಾಕ್ಷಿಯಾದ ನಾನು ಇವುಗಳಿಲ್ಲದ ನಿದ್ರೆ, ಸಮಾಧಿ -ಮುಂತಾದ ಅವಸ್ಥೆಗಳಲ್ಲಿಯೂ ಇರುತ್ತದೆ. ಆ ನಾನು ಎಂಬ ಸಾಕ್ಷಿಯು ಕೇವಲ ವಾದ, ನಿರ್ಗುಣವಾದ ಚಿನ್ಮಾತ್ರವಾಗಿರುತ್ತದೆ.

ನಾನು ಮತ್ತು ಇದನ್ನು ಅರಿಯುತ್ತಿರುವ ಸಾಕ್ಷಿ - ಇವೆರಡರ ವಿವೇಕವನ್ನು ತಿಳಿಸಿಕೊಡುವದಕ್ಕೆ ಶ್ರುತಿಯಲ್ಲಿ ಒಂದು ದೃಷ್ಟಾಂತವನ್ನು ಕೊಟ್ಟಿರುತ್ತದೆ: ಒಂದು ಮರದಲ್ಲಿ ಎರಡು ಪಕ್ಷಿಗಳಿವೆಯಂತೆ. ಅವುಗಳಲ್ಲಿ ಒಂದು ಮರದ ಹಣ್ಣನ್ನು

ಸವಿಯುತ್ತಾ ಇರುತ್ತದೆಯಂತೆ; ಇನ್ನೊಂದು ಇದನ್ನು ನೋಡುತ್ತಾ ಸುಮ್ಮನೆ ಇರುತ್ತದೆಯಂತೆ. ಈ ದೃಷ್ಟಾಂತದ ಅಭಿಪ್ರಾಯವೇನೆಂದರೆ; ಶರೀರವು ದೃಷ್ಟಾಂತದ ಮರದಂತೆ, ಇದರಲ್ಲಿ ತೋರಿಬರುವ ನಾನು ಎಂಬ ಚಿದಾಭಾಸವೂ ಅದನ್ನು ಕಾಣುತ್ತಿರುವ ಸಾಕ್ಷಿಚೈತನ್ಯವೂ ಮರದಲ್ಲಿರುವ ಎರಡು ಹಕ್ಕಿಗಳಂತೆ ಒಂದೇ ಕಡೆಯಲ್ಲಿರುವವು. ಆದರೆ ನಾನೆಂಬ ಜೀವನು ಈ ಶರೀರದಿಂದ ಆದ ಕರ್ಮಗಳೂ ಫಲಗಳೂ ತನ್ನವೆಂಬ ಅಭಿಮಾನದಿಂದ ಸುಖದುಃಖಗಳನ್ನು ಸವಿಯುತ್ತಿರುವನು. ನೋಡುತ್ತಿರುವ ಪರಮಾತ್ಮನು ಮಾತ್ರ ಯಾವ ಫಲಕ್ಕೂ ಗಂಟುಬೀಳದೆ ಇರುವನು. ಅವನೇ ಪರಮಾರ್ಥವಾಗಿ ನಮ್ಮೆಲ್ಲರ ಆತ್ಮನು. ಆ ಸಾಕ್ಷಿಯ ಸ್ವರೂಪವನ್ನು ಚೆನ್ನಾಗಿ ಬಿಡಿಸಿನೋಡಿದರೆ ಆತನು ಅದ್ವಿತೀಯನಾಗಿರುವನು, ನಿರ್ಗುಣನಾಗಿರುವನು, ನಾನುಗಳು ಅನಂತರಾಗಿರುವವು. ಎಚ್ಚರದಲ್ಲಿ ಕೂಡ ಒಂದೊಂದವಸ್ಥೆಯಲ್ಲಿ ಒಂದೊಂದು ನಾನು ತೋರಿಕೊಳ್ಳುವದು. ಕನಸುಗಳು ಅನಂತವಾಗಿರುವವೆಂಬುದು ತಿಳಿದೇ ಇದೆ; ಆದ್ದರಿಂದ ಅವುಗಳಲ್ಲಿ ತೋರುವ ನಾನುಗಳೂ ಅನಂತವಾಗಿರುವವು. ಆದರೆ ಈ ಅನಂತವಾದ ನಾನುಗಳನ್ನು ಯಾವ ಮಾರ್ಪಾಡೂ ಇಲ್ಲದೆ ನೋಡುತ್ತಿರುವ ಸಾಕ್ಷಿಯಲ್ಲಿ ಯಾವ ಸಂಖ್ಯೆಯೂ ಇಲ್ಲ, ಅವನೇ ನಮ್ಮ ಮುಖ್ಯ ಆತ್ಮನು. ನಾವು ಸಾಕುಮಗನನ್ನು ಮುದ್ದಿಸುತ್ತಾ ಹಡೆದ ಮಗನನ್ನು ತಳ್ಳಿಹಾಕಿರುವ ಮೂಢರಂತೆ, ತೋರಿಕೆಯ ನಾನುಗಳನ್ನೇ ನಮ್ಮ ಆತ್ಮನೆಂದು ಆಯಾ ಅವಸ್ಥೆಯಲ್ಲಿ ನಂಬಿಕೊಂಡು ವ್ಯವಹರಿಸುತ್ತಾ ನಮ್ಮ ನಿತ್ಯಾತ್ಮನಾದ ಈ ಸಾಕ್ಷಿಯನ್ನು ಮರೆತುಬಿಟ್ಟಿರುವೆವು, ಇದು ಸರಿಯಲ್ಲ.

"ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ" ಅವ್ಯಕ್ತಮೂರ್ತಿಯಾದ ನನ್ನಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿರುವದು ಎಂದು ಭಗವಂತನು ಅಪ್ಪಣೆ ಮಾಡಿರುವದನ್ನೂ "ಪ್ರತ್ಯಕ್ಷಾವಗಮಂ" ನೇರಾಗಿ ಅರಿಯುವದಕ್ಕೆ ಬರುವಂಥದ್ದು ಎಂದು ಹೇಳಿರುವದನ್ನೂ ನಾವು ನೆನಪಿನಲ್ಲಿಡಬೇಕು. ಈ ಸಾಕ್ಷಿರೂಪವಾದ ಚೈತನ್ಯವು ಈ ವರ್ಣನೆಗೆ ತಕ್ಕದ್ದಾಗಿರುವದು. ಹುಸಿನಾನು ಜನನಮರಣಗಳ ರೂಪವಾದ ಮೃತ್ಯುಸಂಸಾರದ ಮಾರ್ಗದಲ್ಲಿರತಕ್ಕದ್ದು; ಅದನ್ನು ದಾಟಿ ಅಮೃತ ರೂಪವಾದ ಈ ಸಾಕ್ಷಿಯಲ್ಲಿ ನಿಂತು ನೋಡುವದನ್ನು ಕಲಿತುಕೊಳ್ಳಬೇಕು. ಈ ವಿಜ್ಞಾನವನ್ನೇ ಈ ಅಧ್ಯಾಯದ ಪ್ರಾರಂಭದಲ್ಲಿ ಹೊಗಳಿರುವದು.

# ೬೨. ಪರಮಾತ್ಮನ ವಿಜ್ಞಾನ ೯-(೬-೮)

(೧೨-೧೦-೪೭)

ಜ್ಞಾನವಿಜ್ಞಾನಗಳನ್ನು ಬಿಡಿಸಿ ವಿವರಿಸುವದಕ್ಕೆ ಭಗವಂತನು ಹೊರಟಿರುತ್ತಾನೆ. ಜ್ಞಾನವೆಂದರೆ ಬರಿಯ ಶಾಸ್ತ್ರದ ತಿಳಿವಳಿಕೆ, ವಿಜ್ಞಾನವೆಂದರೆ ಅನುಭವವು. ಆತ್ಮನ ವಿಷಯದಲ್ಲಿ ಬರಿಯ ಶಾಸ್ತ್ರದ ತಿಳಿವಳಿಕೆ ಇದ್ದರೆ ಸಾಲದು, ಅನುಭವವೂ ಬೇಕು. ಉತ್ತರದೇಶದಿಂದ ಬಂದಿದ್ದ ಒಬ್ಬ ಹುಟ್ಟುಕುರುಡನು ನಮಗೆ ತಿರುವಾಡಿಯಲ್ಲಿ ಸಿಕ್ಕಿದನು. ಅವನಿಗೆ ಪಾಣಿನಿಯ ಅಷ್ಟಾಧ್ಯಾಯಗಳ ಪರಿಚಯವು ಎಷ್ಟು ಚೆನ್ನಾಗಿ ಆಗಿತ್ತೆಂದರೆ, ಯಾವದಾದರೊಂದು ಶಬ್ದವನ್ನು ಕೊಟ್ಟರೆ ಅದಕ್ಕೆ ವ್ಯುತ್ಪತ್ತಿಯನ್ನು ಹೇಳುವದಕ್ಕೆ ಪ್ರಕೃತಿ, ಪ್ರತ್ಯಯ, ಆಗಮ, ಆದೇಶ - ಮುಂತಾದವುಗಳು, ಯಾವ ಸೂತ್ರದಿಂದ ಯಾವ ಯಾವ ಕಾರ್ಯಗಳು ಆಗುವವೆಂಬುದನ್ನು ಸ್ಪಷ್ಟವಾಗಿ ವಿವರಿಸುತ್ತಿದ್ದನು. ಇಂಥ ಸೂತ್ರದಿಂದ ಇಂಥ ಶಬ್ದವು ಇಲ್ಲಿ ಅನುವೃತ್ತವಾಗಿದೆ, ಹೀಗೆ ಸೂತ್ರಕ್ಕೆ ತಾತ್ಪರ್ಯ - ಎಂದು ಪ್ರಕ್ರಿಯೆಯನ್ನೆಲ್ಲ ತಿಳಿಸುತ್ತಿದ್ದನು. ಸೂತ್ರಗಳು, ವಾರ್ತಿಕಗಳು - ಮುಂತಾದ ಈ ಶಬ್ದಪ್ರಪಂಚವು ಅಷ್ಟು ದೊಡ್ಡದಾಗಿದ್ದರೂ ಆ ಪುಣ್ಯಾತ್ಮನಿಗೆ ವ್ಯಾಕರಣಶಾಸ್ತ್ರದ ಸಾಕ್ಷಾತ್ಕಾರವು ಅಷ್ಟುಮಟ್ಟಿಗೆ ಆಗಿತ್ತು! ಆದರೆ ಶಾಸ್ತ್ರದ ವಾಸನೆಯಿಂದ ಯಾವ ಮಾತನ್ನು ಹೇಗೆ ಬೇಕೆಂದರೆ ಹಾಗೆ ವ್ಯುತ್ಪತ್ತಿಮಾಡಿ ತೋರಿಸುವ ಚಟವು ಅವನಿಗೆ ಬಂದುಬಿಟ್ಟಿತ್ತು. "ಕಾಮಯತೇ ಇತಿ ಕನ್ಯಾ - ಕನ್ಯೆ ಎಂದರೆ ಕಾಮಿಸಬಲ್ಲವಳು; ಆದ್ದರಿಂದ ಪ್ರೌಢಾವಿವಾಹಕ್ಕೆ ಆ ಶಬ್ದದಲ್ಲಿಯೇ ಆಧಾರವಿದೆ. ಹೀನಾನ್ ದುನೋತಿ ಇತಿ ಹಿಂದುಃ- ಹೀನರಾದವರನ್ನು ಸಂಕಟ ಗೊಳಿಸುವವನು ಹಿಂದು; ಆದ್ದರಿಂದ ಹಿಂದುಗಳು ಇತರರಿಗೆ ದುಃಖವನ್ನುಂಟು ಮಾಡುವದು ತಪ್ಪಲ್ಲ" ಹೀಗೆಲ್ಲ ಶಬ್ದಗಳನ್ನು ತಿರಿಚುವ ಪಾಂಡಿತ್ಯವೂ ಅವನಿಗಿತ್ತು. ಆದರೆ ಅದು ಅನುಭವರಹಿತವಾಗಿತ್ತು.

ನಮಗೆ ಆತ್ಮನ ವಿಷಯದಲ್ಲಿ ಬೇಕಾಗಿರುವದು ಇಂಥ ಶಬ್ದಗಳ ಆಡಂಬರವಲ್ಲ; ನಿಜವಾದ ಅನುಭವವು ಬೇಕು. ಪ್ರಕೃತದಲ್ಲಿ ಸೃಷ್ಟಿಸ್ಥಿತಿಪ್ರಲಯಗಳ ವಿಚಾರವೂ ಬಂದಿರುತ್ತದೆ. ಪರಮಾತ್ಮನಿಂದಲೇ ಜಗತ್ತು ಸೃಷ್ಟಿಯಾಗಿ, ಆತನಲ್ಲಿಯೇ ಇದ್ದು, ಆತನಲ್ಲಿಯೇ ಲಯವಾಗುತ್ತದೆ - ಎಂದು ಹೇಳಿರುವ ಮಾತನ್ನು ನಮ್ಮ ಅನುಭವಕ್ಕೆ ಹೊಂದಿಸಿಕೊಳ್ಳುವದು ಹೇಗೆ? ಜಗತ್ತಿನ ಪ್ರಲಯವಾಗುವವರೆಗೆ ನಾವೇನೂ ಬದುಕಿರುವ ಹಾಗಿಲ್ಲ. ಆದರೂ ಈ ವಿಷಯವನ್ನು ತಿಳಿದುಕೊಳ್ಳುವದಕ್ಕೆ ಸಾಧನ

ವಾಗಿರುವಂತೆ ಭಗವಂತನು ನಮಗೆ ಜಾಗ್ರತ್ಸ್ವಪ್ನ ಸುಷುಪ್ತಿಗಳೆಂಬ ಅವಸ್ಥಾತ್ರಯವನ್ನು ಅನುಗ್ರಹಿಸಿರುತ್ತಾನೆ. ನಮ್ಮಲ್ಲಿ ಪ್ರತಿಯೊಬ್ಬನೂ ತನ್ನತನ್ನ ಆತ್ಮನಿಂದ ಜಗತ್ತಿನ ಸೃಷ್ಟಿಸ್ಥಿತಿಲಯಗಳು ಆಗುತ್ತಿರುವದನ್ನು ಈ ಅವಸ್ಥಾತ್ರಯಗಳ ಮೂಲಕವಾಗಿ ಅನುಭವಕ್ಕೆ ತಂದುಕೊಳ್ಳಬಹುದಾಗಿದೆ. ಈಗ ನಾನು ಇಲ್ಲಿ ಹೇಳಿರುವ ಸೃಷ್ಟಿಸ್ಥಿತಿಲಯಗಳ ವಿಚಾರವನ್ನು ಅವಸ್ಥಾತ್ರಯಕ್ಕೆ ಹೊಂದಿಸಿ ಹೇಳುತ್ತೇನೆ. ತಾವೆಲ್ಲರೂ ಏಕಾಗ್ರಮನಸ್ಸಿನಿಂದ ಕೇಳಬೇಕು; ಯುಕ್ತಿಗೂ ಅನುಭವಕ್ಕೂ ಇದು ಎಷ್ಟರಮಟ್ಟಿಗೆ ಹೊಂದುತ್ತದೆ ಎಂದು ನೀವು ನೀವೇ ನೋಡಿಕೊಳ್ಳಬೇಕು. ಇದೇ ಶ್ರವಣಮನನನಿದಿಧ್ಯಾಸನಗಳೆಂಬ ಸಾಧನವು.

"ಮತ್ಸ್ಥಾನಿ ಸರ್ವಭೂತಾನಿ" ಎಂಬ ವಾಕ್ಯದ ಅರ್ಥವನ್ನು ಹೀಗೆ ಬಿಡಿಸಿ ತಿಳಿದುಕೊಳ್ಳಬೇಕು. ಸರ್ವಭೂತಗಳೂ - ಎಲ್ಲಾ ದೇಶ, ಎಲ್ಲಾ ಕಾಲ, ಎಲ್ಲಾ ನಿಮಿತ್ತ, ಇವುಗಳಿಂದ ಕೂಡಿದ ಎಚ್ಚರದ ಪ್ರಪಂಚವೆಲ್ಲವೂ - ನನ್ನಲ್ಲಿ, ನನ್ನ ಆತ್ಮನಲ್ಲಿ ಇರುತ್ತದೆ. ಎಲ್ಲಾ ಕಾಲವೂ ಈ ಎಚ್ಚರದ ಪ್ರಪಂಚಕ್ಕೆ ಸೇರಿರುತ್ತದೆ. ಏಕೆಂದರೆ ಕಾಲವೆಂದರೇನು? ಸೂರ್ಯನ ಅಥವಾ ಚಂದ್ರನ ಗತಿಯಿಂದ ನಮಗೆ ಆಗುವ ಒಂದಾನೊಂದು ಅನುಭವವಿಶೇಷ. ಎಚ್ಚರದಲ್ಲಿ ನಮಗೆ ಕಾಣುತ್ತಿರುವದೆಲ್ಲ ಈ ಕಾಲಕ್ಕೆ ಕಟ್ಟುಬಿದ್ದಿರುವಂತೆ ಕಾಣುತ್ತದೆ. ಆದರೆ ಈ ಸೂರ್ಯಚಂದ್ರರು ನಮ್ಮ ಕನಸಿನಲ್ಲಿರುವದಿಲ್ಲ. ಕನಸಿನಲ್ಲಿಯೂ ಇದೇ ಸೂರ್ಯಚಂದ್ರರನ್ನು ಕಂಡಂತೆ ನಮಗೆ ಭಾಸವಾಗುವದು ನಿಜ. ಆದರೆ ನಿಜವಾಗಿ ಅವರು ಇದೇ ಸೂರ್ಯಚಂದ್ರರಲ್ಲ. ಏಕೆಂದರೆ ಕನಸಿನಲ್ಲಿ ಏಳೆಂಟು ಘಂಟೆಯ ವ್ಯವಹಾರವನ್ನು ಮಾಡಿದಂತೆ ನಮಗೆ ಅನುಭವವಾಗಿ ಎಚ್ಚೆತ್ತು ನೋಡಲಾಗಿ ನಾನು ಒಂದೆರಡು ಘಂಟೆಗಳ ಕಾಲವು ಮಾತ್ರ ನಿದ್ರಿಸಿದ್ದೆ ಎಂದು ಗಡಿಯಾರದಿಂದ ತಿಳಿದುಬರುತ್ತದೆ. ಎಚ್ಚರದಲ್ಲಿನ ಎರಡು ಘಂಟೆ ಕನಸಿನಲ್ಲಿನ ಏಳೆಂಟು ಘಂಟೆಯಾದರೆ ಎರಡು ಕಾಲಗಳೂ ಅದೇ ಸೂರ್ಯಚಂದ್ರರಿಂದಾಯಿತೆಂದು ಹೇಳುವದಕ್ಕಾದೀತೆ? ಇದಲ್ಲದೆ ಎಚ್ಚರದ ರಾತ್ರಿಯಲ್ಲಿ ಹಾಸಿಗೆಯಮೇಲೆ ಮಲಗಿದ್ದವನು ಕನಸಿನಲ್ಲಿ ನಡುಹಗಲಿನ ಹೊತ್ತಿನಲ್ಲಿ ಬೀದಿಯಲ್ಲಿ ಅಡ್ಡಾಡುತ್ತಿದ್ದಂತೆ ಕಾಣುತ್ತಾನೆ. ಆದ್ದರಿಂದಲೂ ಎಚ್ಚರದ ದೇಶಕಾಲಗಳು ಕನಸಿನ ದೇಶಕಾಲಗಳಿಗಿಂತ ಬೇರೆ ಎಂದಾಯಿತು. ಆದ್ದರಿಂದ ಎಚ್ಚರದ ದೇಶಕಾಲನಿಮಿತ್ತಗಳಿಂದ ಕೂಡಿದ ಪ್ರಪಂಚವೇ ಬೇರೆ, ಕನಸಿನ ದೇಶಕಾಲನಿಮಿತ್ತಗಳಿಂದ ಕೂಡಿದ ಪ್ರಪಂಚವೇ ಬೇರೆ. ಎಚ್ಚರದ ಪ್ರಪಂಚವು ಎಚ್ಚರಕ್ಕೆ ಕಟ್ಟುಬಿದ್ದಿರುತ್ತದೆ. ಆದ್ದರಿಂದ ಈ ಪ್ರಪಂಚವು, ಈಗ ನಾನು ನೋಡುತ್ತಿರುವ ಪ್ರಪಂಚವು, ನನ್ನ ಎಚ್ಚರಕ್ಕೆ ಕಟ್ಟು ಬಿದ್ದಿರುತ್ತದೆ. ನಾವುಗಳು ಸಾಮಾನ್ಯವಾಗಿ ತಿಳಿದುಕೊಂಡಿರುವಂತೆ, ನಾನು ಈ

ಪ್ರಪಂಚದಲ್ಲಿರುವದಿಲ್ಲ. "ಮತ್ಸ್ಥಾನಿ ಸರ್ವಭೂತಾನಿ, ನ ಚಾಹಂ ತೇಷ್ವವಸ್ಥಿತಃ" ಎಂಬುದರ ಅರ್ಥವಿದು.

ಪ್ರಪಂಚವು, ಸರ್ವಭೂತಗಳು, ಎಂದರೆ ಎಚ್ಚರದ ಪ್ರಪಂಚವೂ ಎಚ್ಚರದಲ್ಲಿ ಕಾಣುವ ಪ್ರಪಂಚದ ಸರ್ವಭೂತಗಳೂ ಎಂಬಿದನ್ನು ನಾವು ಚೆನ್ನಾಗಿ ಮನದಟ್ಟು ಮಾಡಿಕೊಳ್ಳಬೇಕು. ಎಚ್ಚರಕ್ಕೂ ಈ ಪ್ರಪಂಚಕ್ಕೂ ಅವಿನಾಭಾವವಿರುತ್ತದೆ. ಎಚ್ಚರ ವೆಂದರೆ ಇಂದ್ರಿಯಗಳಿಂದ ವಿಷಯಗಳನ್ನು ಅನುಭವಿಸುವದು. ಇಂದ್ರಿಯಗಳಾಗಲಿ ವಿಷಯಗಳಾಗಲಿ ಒಂದನ್ನು ಬಿಟ್ಟು ಮತ್ತೊಂದು ಇರುವದಿಲ್ಲ. ಶಬ್ದವೆಂದರೆ ಕಿವಿಯು ಕೇಳುವ ಶಬ್ದ, ರೂಪವೆಂದರೆ ಕಣ್ಣು ನೋಡುವ ರೂಪ - ಇತ್ಯಾದಿ. ಕಿವಿಯಿಲ್ಲದಿದ್ದರೆ ಶಬ್ದವೆಲ್ಲಿ? ಕಣ್ಣಿಲ್ಲದಿದ್ದರೆ ರೂಪವೆಲ್ಲಿ? ಆದ್ದರಿಂದ ಕಣ್ಣು, ಕಿವಿ-ಮುಂತಾದ ಇಂದ್ರಿಯಗಳು ಇಲ್ಲದಾಗ ರೂಪ, ಶಬ್ದ - ಮುಂತಾದ ವಿಷಯಗಳೂ ಇರಲಾರವು. ನಾವು ಎಚ್ಚರದಿಂದ ಕನಸಿಗೆ ಹೋಗುವಾಗ ಇಂದ್ರಿಯಗಳನ್ನೂ ಅವುಗಳಿಗೆ ತೋರುವ ಶಬ್ದಾದಿವಿಷಯಗಳನ್ನು ಕಳಚಿಕೊಂಡೇ ಹೋಗಿಬಿಡುತ್ತೇವೆ. ಅಲ್ಲಿರುವಂತೆ ತೋರುವ ಇಂದ್ರಿಯಗಳಾಗಲಿ ವಿಷಯಗಳಾಗಲಿ ಎಚ್ಚರದವುಗಳಲ್ಲವೇ ಅಲ್ಲ.

ಆದ್ದರಿಂದ "ನ ಚ ಮತ್ಸ್ಥಾನಿ ಭೂತಾನಿ" ಕನಸಿನಲ್ಲಿ ನಾನಿದ್ದೇನೆ, ಎಚ್ಚರದ ಪ್ರಪಂಚವಿಲ್ಲ, ಯಾವ ಭೂತಗಳೂ ಅಲ್ಲಿಲ್ಲ. ಭೂತಭವಿಷ್ಯದ್ವರ್ತಮಾನಕಾಲಗಳಿಂದ ಕೂಡಿದ, ಸ್ವರ್ಗಮರ್ತ್ಯಪಾತಾಳರೂಪವಾದ ಈ ಪ್ರಪಂಚವೂ, ಇಲ್ಲಿರುವ ಭೂತಗಳೂ ಯಾವವೂ ಕನಸಿನಲ್ಲಿರುವದಿಲ್ಲ. ಇಲ್ಲಿರುವ ನಾನು, ನೀನು - ಎಲ್ಲವೂ ಇಲ್ಲಿಯೇ ಉಳಿದುಬಿಡುತ್ತವೆ. ಈ "ವೈಶ್ವಾನರ"ನೆಂಬ ಸ್ವರೂಪವು ಬೇರ್ಪಟ್ಟು ಹೋಗುತ್ತದೆ. ಆಗ ಎಚ್ಚರದ ಪ್ರಪಂಚವು ಎಲ್ಲಿರುತ್ತದೆ? ಎಲ್ಲಿಯೂ ಇರುವ ಹಾಗಿಲ್ಲ. ಇದರಂತೆ ನಮಗೆ ಎಚ್ಚರವಾದಾಗ ಕನಸಿನ ಪ್ರಪಂಚವಾಗಲಿ ಅಲ್ಲಿ ತೋರುವ ಪ್ರಾಣಿಗಳಾಗಲಿ ಯಾವವೂ ಎಲ್ಲಿಯೂ ಇರುವದಿಲ್ಲ. ಜನಕಚಕ್ರವರ್ತಿಗೆ ಒಂದು ಸಲ ಕನಸಾಯಿತು. ಅಲ್ಲಿ ತಾನು ಹನ್ನೆರಡು ವರ್ಷದ ಕ್ಷಾಮಕ್ಕೆ ಸಿಕ್ಕಿಬಿದ್ದು ಗಂಜಿಯನ್ನು ಕುಡಿಯುವದಕ್ಕೆಂದು ಒಂದು ಬೊಕ್ಕರೆಯನ್ನು ಹಿಡಿದುಕೊಂಡಿದ್ದಂತೆಯೂ ಅದನ್ನು ಒಂದು ಎತ್ತು ಉರುಟಿ ಹಾಕಿದಂತೆಯೂ ತೋರಿತು! ಎಚ್ಚತ್ತಾಗ ಜನಕನು ಜನಕನೇ ಆಗಿದ್ದನು! ಹೀಗಿರು ವದರಿಂದ ಎಚ್ಚರಕನಸುಗಳ ಪ್ರಪಂಚಗಳು ಒಂದಕ್ಕೊಂದು ಸಂಬಂಧಪಟ್ಟಿರುವದಿಲ್ಲ.

ಈ ದೃಷ್ಟಿಯಿಂದ ನೋಡಿದರೆ ಎಚ್ಚರಕನಸುಗಳೂ ನಮ್ಮಲ್ಲಿ ನಿಜವಾಗಿರುವದಿಲ್ಲ. "ಸ್ವಪ್ನಾಂತಂ ಜಾಗರಿತಾಂತಂ ಚ ಉಭೌ ಯೇನಾನುಪಶ್ಯತಿ। ಮಹಾನ್ತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ" ಎಂದು ಶ್ರುತಿಯು ಸಾರಿರುವಂತೆ

ಸ್ವಪ್ನಾವಸ್ಥೆಯನ್ನೂ ಜಾಗರಿತಾವಸ್ಥೆಯನ್ನೂ ನೋಡುತ್ತಿರುವ ಆತ್ಮನು ಎರಡವಸ್ಥೆಗಳನ್ನೂ ಮೀರಿರುತ್ತಾನೆ. ಎರಡಕ್ಕಿಂತಲೂ ದೊಡ್ಡವನು, ಈ ಎರಡನ್ನೂ ವ್ಯಾಪಿಸಿರುವಾತನು. ಇದನ್ನು ಯಾವನು ಅರಿತುಕೊಳ್ಳುವನೋ ಆ ವಿವೇಕಿಗೆ ಯಾವ ಶೋಕವೂ ಇರುವದಿಲ್ಲ. ಎಚ್ಚರಕನಸುಗಳೂ ಅವುಗಳಲ್ಲಿರುವ ಪ್ರಪಂಚಗಳೂ ಒಂದಿದ್ದಾಗ ಒಂದಿರುವದಿಲ್ಲ; ಅವುಗಳು ಇರುವಾಗ ನಮ್ಮ ಆತ್ಮನಾದ ಪರಮಾತ್ಮನಲ್ಲಿಯೇ ಇರುತ್ತವೆ. ಈ ಆತ್ಮನು ಮಾತ್ರ ಯಾವದೊಂದು ಪ್ರಪಂಚಕ್ಕೂ ಕಟ್ಟುಬಿದ್ದಿರುವದಿಲ್ಲ. ಇಲ್ಲಿ ಆತ್ಮನೆಂದರೆ ಯಾರು? ಎಚ್ಚರದಲ್ಲಿ ಅಥವಾ ಕನಸಿನಲ್ಲಿ 'ನಾನು' ಎಂದು ಅಭಿಮಾನಪಡುತ್ತೇವಲ್ಲ, ಅದಲ್ಲ. ಆ ಅಹಂಕಾರವೂ ಆಯಾ ಅವಸ್ಥೆಗೇ ಕಟ್ಟುಬಿದ್ದಿರುತ್ತದೆ. ಎಚ್ಚರದಲ್ಲಿರುವದೆಲ್ಲ ಎಚ್ಚರದಲ್ಲಿದ್ದು ಕನಸಿನಲ್ಲಿರುವದೆಲ್ಲ ಕನಸಿನಲ್ಲಿಯೇ ಇದ್ದು, ಅವರೆಡನ್ನೂ ಬೇಕಾದಾಗ ತನ್ನಲ್ಲಿ ಅಡಗಿಸಿಕೊಂಡು, ತನಗೆ ಬೇಕಾದಂತೆ ಅವನ್ನು ಹೊರಕ್ಕೆ ಬಿಡುವ ಶಕ್ತಿ ಯಾವನದೋ ಅವನೇ ಈ ಆತ್ಮನು; ಇವನೇ ಪರಮಾತ್ಮನು.

ಈ ಆತ್ಮನಿಗೇ ಇಡಿಯ ಜಗತ್ತನ್ನೇ ತನ್ನಲ್ಲಿ ಸಂಪೂರ್ಣವಾಗಿ ಅಡಗಿಸಿಕೊಳ್ಳುವ ಶಕ್ತಿಯಿರುತ್ತದೆ ಎಂಬುದನ್ನು ಸುಷುಪ್ತಿಯ - ಎಂದರೆ ಕನಸಿಲ್ಲದ ತನಿನಿದ್ರೆಯ - ಅವಸ್ಥೆಯಲ್ಲಿ ನಾವೆಲ್ಲರೂ ಅನುಭವಿಸಿ ತಿಳಿಯುತ್ತೇವೆ. ಈ ಲೋಕ, ಪರಲೋಕ- ಎಲ್ಲವೂ ಪರಮಾತ್ಮನ ಉಸಿರು ಎಂದು ಶ್ರುತಿ ಸಾರುತ್ತಿದೆ. ಆತನು ಪ್ರಲಯಕಾಲದಲ್ಲಿ ಯಾವ ಆಯಾಸವೂ ಇಲ್ಲದೆ ಎಲ್ಲಾ ಜಗತ್ತನ್ನೂ ತನ್ನಲ್ಲಿ ಉಪಸಂಹಾರ ಮಾಡಿಕೊಳ್ಳುತ್ತಾನೆಂಬುದನ್ನು ನಮ್ಮಲ್ಲಿ ಪ್ರತಿಯೊಬ್ಬರ ಸುಷುಪ್ತಿಯಲ್ಲಿಯೂ ಲೀಲಾಮಾತ್ರದಿಂದ ನಟಿಸಿ ತೋರಿಸುತ್ತಾನೆ. ಆ ಮಹಾತ್ಮನು ಸ್ವಪ್ನವೂ ಬೇಡ, ಎಚ್ಚರವೂ ಬೇಡ - ಎಂದು ಎಲ್ಲಾ ಪ್ರಪಂಚವನ್ನೂ, ಅಂಗಡಿಯಿಟ್ಟುಕೊಂಡವನು ಮುಚ್ಚಿಬಿಡುವಂತೆ - ಸುಷುಪ್ತಿಯಲ್ಲಿ ಮುಚ್ಚಿಬಿಡುತ್ತಾನೆ. ಅಲ್ಲಿ ಪರಮಾತ್ಮನು ಇಡಿಯ ಬ್ರಹ್ಮಾಂಡವನ್ನೇ ನುಂಗಿರುತ್ತಾನೆ. ಅಲ್ಲಿ ಯಾವ ಪ್ರಪಂಚದ ಗುರುತೂ ಲೇಶಮಾತ್ರವೂ ಇರುವದಿಲ್ಲ.

ಈ ಲೀಲೆಯು ಒಂದೊಂದು ಪ್ರಾಣಿಯಲ್ಲಿಯೂ ಕಾಣಿಸುತ್ತಿರುತ್ತದೆ. ಒಂದೊಂದು ಪ್ರಾಣಿಯೂ, ಅದು ಎಷ್ಟೇ ಕೀಳಾಗಿರಲಿ, ಆ ಪರಮಾತ್ಮನ ಲೀಲೆಗೆ ಆವಾಸಸ್ಥಾನವಾಗಿರುತ್ತದೆ. ಪರಮಾತ್ಮನ ಲೀಲೆಯನ್ನು ಯಾರು ನಿಶ್ಚಯಿಸಬಲ್ಲವರು? ಪೃಥ್ವಿಯಲ್ಲಿರುವ ಮರಳಿನ ರೇಣುಗಳನ್ನು ಯಾರು ಎಣಿಸಬಲ್ಲರೋ ಅವರಿಗೆ ಮಾತ್ರ ವಿಷ್ಣುವಿನ ವೀರ್ಯಗಳು ಇಂತಿಷ್ಟೆಂದು ತಿಳಿದಾವು - ಎಂದು ವಿಷ್ಣುಸೂಕ್ತದಲ್ಲಿದೆ. ಆದರೆ ಅಷ್ಟೇ ಅಲ್ಲ; ಒಂದೊಂದು ಮರಳಿನ ರೇಣುವಿನಲ್ಲಿಯೂ ಆತನು

ಬ್ರಹ್ಮಾಂಡಗಳನ್ನು ಸೃಷ್ಟಿಸಿ ತನ್ನ ಮಹಿಮೆಯನ್ನು ತೋರಿಸಬಲ್ಲನು. ಆತನ ಮಹತ್ತ್ವಕ್ಕೆ ಜೀವರ ತಾರತಮ್ಯವೇನೂ ತಡೆಯಲ್ಲ. ರುದ್ರನಮಕದಲ್ಲಿ ಹೇಳಿರುವಂತೆ "ನಮಸ್ತಕ್ಷಭ್ಯಃ, ರಥಕಾರೇಭ್ಯಃ" ಬಡಗಿಯವರು, ತೇರುಮಾಡುವವರು, ನಾಯಿಗಳು, ನಾಯಿಯನ್ನು ಸಾಕುವವರು - ಮುಂತಾದ ಎಲ್ಲಾ ಜೀವರುಗಳಲ್ಲಿಯೂ ಪರಮಾತ್ಮನು ಒಂದೇ ಸಮನಾಗಿದ್ದುಕೊಂಡು ತನ್ನ ಲೀಲೆಯನ್ನು ತೋರಿಸುತ್ತಿರುತ್ತಾನೆ. ಎಲ್ಲೆಲ್ಲಿಯೂ ಪರಮಾತ್ಮನೇ, ಎಲ್ಲೆಲ್ಲಿಯೂ ಆತನ ಲೀಲೆಯೇ. ಆದ್ದರಿಂದ ಆತನು ನಮ್ಮಲ್ಲಿಯೂ ಇರುತ್ತಾನೆ. ಆತನೇ ನಮ್ಮ ಆತ್ಮನಾಗಿರುತ್ತಾನೆ. ಆತನು ಮಹಾತ್ಮನು, ವಿಭು, ಎಲ್ಲರಿಗೂ ಆತ್ಮನು. ಅವನು ಸ್ವತಂತ್ರನು, ಪ್ರಪಂಚವು ಹೀಗಲ್ಲ. ಅದು ಅಲ್ಪ, ಪರಿಚ್ಛಿನ್ನ, ಅನಾತ್ಮ; ಅದು ಎಂದೆಂದಿಗೂ ಆತನ ವಶದಲ್ಲಿರುತ್ತದೆ. ಆದ್ದರಿಂದ ಅದು ಇರು ಎಂದರೆ ಇರುತ್ತದೆ, ಹೋಗೆಂದರೆ ಹೋಗಿಬಿಡುತ್ತದೆ. "ನ ಚ ಮತ್ಸ್ಥಾನಿ ಭೂತಾನಿ" ಎಂಬುದಕ್ಕೆ ಇದೇ ಅರ್ಥ.

ಹೀಗೆ ಪರಮಾತ್ಮನನ್ನೇ ತಮ್ಮ ಆತ್ಮನನ್ನಾಗಿ ಕಂಡುಕೊಂಡು, ಆತನಲ್ಲಿಯೇ ಇದ್ದುಕೊಂಡಿರುವದೇ ದೊಡ್ಡವರಿಗೆ ಬೇಕು. ಈ ಪರಮಾತ್ಮನೇ ನಮ್ಮಗಳ ಆತ್ಮನು, ಈತನೇ ಸರ್ವಾತ್ಮನು. ಮೂರುಕಾಲಕ್ಕೂ ನಮ್ಮ ಆತ್ಮನಾಗಿ ಪರಮಾರ್ಥವಾಗಿ ಇದ್ದುಕೊಂಡಿರುವವನು ಈತನೊಬ್ಬನೇ. ನಮ್ಮ ಈ ರೂಪದಿಂದ ನಮಗೆ ಯಾವ ಬೆಲೆಯೂ ಇಲ್ಲ. ಆದ್ದರಿಂದ ಯಾವ ದುರಭಿಮಾನವೂ ಬೇಡ. ಆತನು ಒಂದು ವೇಳೆ ದಯಮಾಡಿ "ನಿಮಗೆ ಬ್ರಹ್ಮಾಂಡಸೃಷ್ಟಿಯ ಅಧಿಕಾರವೂ ಬೇಕೊ, ನನ್ನ ಸೇವೆಯು ಬೇಕೊ?" ಎಂದು ಕೇಳಿದರೆ ನಮಗೆ ಪ್ರಪಂಚದ ಗೊಡವೆ ಏಕೆ? ಅದರಲ್ಲಿ ಹುರುಳೇನಿದೆ? ಯಾವಾಗಲೂ ನಿನ್ನ ಪಾದಕಮಲದ ಸ್ಮರಣೆಯನ್ನು ಕೊಡು, ನಿನ್ನಲ್ಲಿ ಅಚಲವಾದ ಭಕ್ತಿಯಿರುವಂತೆ ಮಾಡು, ನಿನ್ನನ್ನು ಅರೆಗಳಿಗೆಯೂ ಬಿಟ್ಟಗಲದಂತೆ ಮಾಡು!" ಎಂದು ಮಹಾತ್ಮರಾದವರು ಪ್ರಾರ್ಥಿಸಿಕೊಳ್ಳುವರು. ಇಂಥ ಮಹಾತ್ಮರನ್ನೇ ಭಗವಂತನು ಮುಂದೆ "ಸರ್ಗೇಽಪಿ ನೋಪಜಾಯನ್ತೇ ಪ್ರಲಯೇ ನ ವ್ಯಥನ್ತಿ ಚ" (೧೪-೨) ಸೃಷ್ಟಿಯಾದರೆ ಅವರು ಹುಟ್ಟುವದಿಲ್ಲ, ಪ್ರಲಯವಾದರೆ ವ್ಯಥೆಪಡುವದೂ ಇಲ್ಲ - ಎಂದು ಹೊಗಳಿರುವದು. ಅವರೇ ಧನ್ಯರು.

ನಮ್ಮ ಇರವು, ಜ್ಞಾನ ಸುಖ ಎಲ್ಲಕ್ಕೂ ಪರಮಾತ್ಮನೇ ಬುಡ. ಯಾವದನ್ನು ಅಲ್ಲಗಳೆದರೂ ಯಾವದನ್ನು ಕೈಬಿಟ್ಟರೂ ಈ ನಮ್ಮ ಆತ್ಮನನ್ನು ಬಿಡುವದಕ್ಕೆ ಆಗುವ ಹಾಗಿಲ್ಲ. ನಮ್ಮಲ್ಲಿರುವ ನಾನು ಎಂಬ ಅಹಂತೆಯನ್ನು ಕಳೆದರೆ ಉಳಿಯುವದೇ ಈ ಪರಿಶುದ್ಧನಾದ ಪರಮಾತ್ಮನು. ಯಾವಾಗ ನಮ್ಮ ವ್ಯಕ್ತಿತ್ವವು, ನನ್ನತನವು,

ಬಿದ್ದುಹೋಗುವದೋ ಆಗಲೇ ನಮಗೆ ಬಲವೂ ವೀರ್ಯವೂ ತೇಜಸ್ಸೂ ಅಪರಿಮಿತವಾಗಿ ಬರುವದು. ಆಗಲೇ ನಮ್ಮ ಆತ್ಮಜ್ಞಾನವು ವಿಜ್ಞಾನವಾಗುವದು. ಸುಮ್ಮನೆ ಶಾಸ್ತ್ರವಾಕ್ಯಗಳಿಂದ ಅಂತೆ ಕಂತೆ ಎಂದು ತಿಳಿದುಕೊಳ್ಳುವದು ನಿಜವಾದ ಜ್ಞಾನವಲ್ಲ. ನಮ್ಮ ಅವಸ್ಥಾತ್ರಯದ ಅನುಭವವನ್ನು ಪರೀಕ್ಷಿಸಿ, ಅಹಂಮತಿಯನ್ನು ಕಳಚಿಕೊಂಡು, ವಿಶೇಷರೂಪದಿಂದ ಆತ್ಮಾನುಭವವನ್ನು ಪಡೆದುಕೊಂಡರೆ ವಿಜ್ಞಾನವಾಗುವದು, ಮನಸ್ಸೆಂಬ ಉಪಾಧಿಯ ಸಂಬಂಧದಿಂದಲೇ ನಮಗೆ ಎಚ್ಚರಕನಸುತನಿನಿದ್ರೆಗಳು ಆಗುತ್ತಿರುವವು; ಅದರ ಸಂಬಂಧವಿರುವವರೆಗೂ ನಮಗೆ ಅಹಂಮತಿಯು ತಪ್ಪಿದ್ದಲ್ಲ. ಅಹಂಮತಿ ಎಂಬುದೊಂದು ರೋಗ, ಒಂದು ಸನ್ನಿ, ಒಂದು ಹುಚ್ಚು. ಶ್ರೀರಾಮಕೃಷ್ಣಪರಮಹಂಸರು ಹೇಳಿರುವಂತೆ 'ಹಮ್' ಎನ್ನುವದೋ ಏಟುಗಳನ್ನು ತಿನ್ನುತ್ತಿರುವದು; 'ತುಮ್' ಎಂಬ ತಂತಿಯು ಮಧುರಗಾನವನ್ನು ಮಾಡಿ ಎಲ್ಲರನ್ನೂ ಸುಖದಲ್ಲಿ ಅದ್ದುತ್ತದೆ. ಅಹಂತೆಯು ಹೋದರೆ ಎಲ್ಲವೂ ಪರಮಾತ್ಮನೇ; ಆಗ 'ಈಶಾವಾಸ್ಯಮಿದಂ ಸರ್ವಮ್' - ಎಂಬ ಶ್ರುತಿಯ ಅರ್ಥವು ಮನದಟ್ಟಾಗುತ್ತದೆ. ನಾನು, ನನ್ನದು - ಎಂಬ ಬಂಧಕವಾದ ಎರಡು ಪದಗಳನ್ನು ಯಾರು ಬಿಟ್ಟಿರುವರೋ ಯಾರಿಗೆ ಪರಮಾತ್ಮನೇ ಸರ್ವವೆಂಬ ತೀರ್ಮಾನವು ಮನಸ್ಸಿನಲ್ಲಿ ಆಗಿಬಿಟ್ಟಿರುವದೋ ಅವರೇ ಧನ್ಯರು, ಅವರು ಪರಮಾತ್ಮಸ್ವರೂಪರೇ ಆಗಿರುತ್ತಾರೆ. ಅಹಂತೆಯನ್ನು ಬಿಟ್ಟು ಪರಮಾತ್ಮನಲ್ಲಿ ಒಂದಾಗಬೇಕು; ಇದೇ ಭಕ್ತಿಶಾಸ್ತ್ರ, ಇದೇ ತತ್ತ್ವಶಾಸ್ತ್ರ, ಇದೇ ಗೀತೆಯ ಸಾರವು. ಆದ್ದರಿಂದ ಅಹಂಕಾರವನ್ನು ಬಿಟ್ಟು ಪರಮಾತ್ಮನ ಮಡಿಲಲ್ಲಿ ಬಿದ್ದು ಹಾಯಾಗಿರಬೇಕು. ನಾನು ಎಂದರೆ ದುಃಖವು, ಸಂಸಾರವು; ನಾನಲ್ಲ ಎಂದರೆ ಸುಖವು, ಮೋಕ್ಷವು. ಈ ರಹಸ್ಯವನ್ನರಿತುಕೊಂಡು ನಮ್ಮ ಜ್ಞಾನವನ್ನು ವಿಜ್ಞಾನವಾಗಿ ಮಾಡಿಕೊಳ್ಳಬೇಕು.

## ೬೩. ಪರಮಾತ್ಮತತ್ತ್ವ ೯-(೯-೧೧)

(೨೬-೧೦-೪೭)

ಈವರೆಗೆ ಪರಮಾತ್ಮನಿಂದ ಜಗತ್ತಿನ ಸೃಷ್ಟಿಸ್ಥಿತಿಲಯವಾಗುವ ಬಗೆಯನ್ನೂ ಜಗತ್ತಿನಲ್ಲಿರುವ ಸಕಲಭೂತಗಳೂ ಪರವಶವಾಗಿ ಕಲ್ಪಾದಿಯಲ್ಲಿ ಸೃಷ್ಟಿಯಾಗುವದು, ಮತ್ತೆ ಕಲ್ಪದ ಅಂತ್ಯದಲ್ಲಿ ಪರಮಾತ್ಮನ ಪ್ರಕೃತಿಯಲ್ಲಿ ಅಡಗುವದು - ಹೀಗೆ ಮತ್ತೆ ಮತ್ತೆ ತಿರುಗುತ್ತಿರುವ ಪರಿಯನ್ನೂ ತಿಳಿಸಿದ್ದಾಯಿತು. ಈ ಸೃಷ್ಟಿಸ್ಥಿತಿಲಯಗಳು

ಪ್ರತಿಯೊಬ್ಬ ಜೀವನ ಅವಸ್ಥಾತ್ರಯದಲ್ಲಿ ಅನುಭವಕ್ಕೆ ಬರುತ್ತಿರುವ ರೀತಿಯನ್ನು ತಿಳಿಸಿ ಆತ್ಮಾನಾತ್ಮವಿವೇಕವನ್ನು ಮಾಡಿಕೊಳ್ಳುವದು ಹೇಗೆಂಬುದನ್ನೂ ಹೇಳಿದ್ದಾಯಿತು.

ಹೀಗೆ ಪರಮಾತ್ಮನಿಂದ ಜಗತ್ತಿನ ಸೃಷ್ಟಿಸ್ಥಿತಿಲಯಗಳು ಉಂಟಾಗುತ್ತಿರುವಲ್ಲಿ ಆ ಕರ್ಮಗಳಿಂದಾಗುವ ಫಲವು ಅವನಿಗೆ ಅಗುವದಿಲ್ಲವೆ? ರಾಜನು ಸೈನ್ಯದ ಮೂಲಕವಾಗಿ ಯುದ್ಧವನ್ನು ಮಾಡಿದರೂ ರಾಜನಿಗೇ ಸೋಲುಗೆಲವುಗಳು ಉಂಟಾಗುವವಷ್ಟೆ. ಇದರಂತೆ ಪ್ರಕೃತಿಯ ಮೂಲಕವಾಗಿ ಸೃಷ್ಟಿಸ್ಥಿತಿಲಯಗಳನ್ನು ಮಾಡುತ್ತಿರುವ ಪರಮಾತ್ಮನಿಗೆ ಅವುಗಳ ಫಲವು ಉಂಟಾಗಬೇಕಲ್ಲವೆ? - ಎಂಬ ಶಂಕೆಯು ಯಾರಿಗಾದರೂ ಬಂದೀತು. ಈ ಶಂಕೆಗೆ ಪರಿಹಾರವನ್ನು ಭಗವಂತನು ಹೀಗೆ ಹೇಳಿರುತ್ತಾನೆ:

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನನ್ತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ (೯-೯)**
**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾನೇನ ಕೌನ್ತೇಯ ಜಗದ್ವಿಪರಿವರ್ತತೇ ॥ (೯-೧೦)**

ಜಗತ್ತಿನ ಸೃಷ್ಟ್ಯಾದಿಗಳು ಪರಮಾತ್ಮನಿಗೆ ಬಂಧಕವಲ್ಲ. ರಾಜನು ತಾನೇ ಯುದ್ಧಕ್ಕೆ ಹೋಗದಿದ್ದರೂ ಮನಸ್ಸಿನಲ್ಲಿ ಯುದ್ಧದ ಅಭಿಮಾನವನ್ನು ಪೂರ್ಣವಾಗಿಟ್ಟು ಕೊಂಡಿರುತ್ತಾನೆ. ಅವನು ಪ್ರಯೋಜಕಕರ್ತೃವಾಗಿರುತ್ತಾನೆ; ಅವನಿಂದ ಪ್ರೇರಿತರಾಗಿ ಅವನ ಭೃತ್ಯರು ಯುದ್ಧ ಮಾಡುತ್ತಾರೆ. ಸರಿಯಾಗಿ ನೋಡಿದರೆ ಭೃತ್ಯರಿಗೆ ಸಂಬಳದ ಹಂಗೇ ಹೊರತು ಯುದ್ಧದ ಸೋಲುಗೆಲವುಗಳೇನೂ ಅಂಟುವದಿಲ್ಲ; ಅವೆರಡೂ ಅವುಗಳಲ್ಲಿ ಸಕ್ತನಾಗಿರುವ ರಾಜನಿಗೇ ಸಲ್ಲತಕ್ಕವುಗಳಾಗಿರುತ್ತವೆ. ಪ್ರಕೃತದಲ್ಲಿ ಪರಮಾತ್ಮನಿಗೆ ಸೃಷ್ಟ್ಯಾದಿಗಳಿಂದ ಯಾವ ಬಂಧವೂ ಆಗುವಹಾಗಿರುವದಿಲ್ಲ. ಏಕೆಂದರೆ ಆತನು ಅಸಂಗನಾಗಿರುತ್ತಾನೆ. ಅಸಂಗವಾದ ತನ್ನ ಚೈತನ್ಯದ ಬೆಳಕಿನಿಂದ ಎಲ್ಲವನ್ನೂ ಬೆಳಗುತ್ತಿರುವದರಿಂದ ಅವನಿಗೆ ಯಾವ ಹೊಣೆಗಾರಿಕೆಯೂ ಇರುವ ಹಾಗಿಲ್ಲ. ಸೂರ್ಯನ ಅಥವಾ ದೀಪದ ಬೆಳಕಿನಲ್ಲಿ ಜನರು ತಮ್ಮತಮ್ಮ ವ್ಯವಹಾರಗಳನ್ನು ಮಾಡಿಕೊಂಡರೆ ಆ ವ್ಯವಹಾರಗಳ ಫಲವು ಅವರಿಗೆ ಅಂಟಿಕೊಳ್ಳುವ ಹಾಗೆ ಬೆಳಕಿಗೆ ಅಂಟಿಕೊಂಡೀತೇನು? ಹೀಗೆಯೇ ಆತ್ಮನ ಚೈತನ್ಯಜ್ಯೋತಿಯ ಸನ್ನಿಧಿಯಿಂದಲೇ ಎಲ್ಲಾ ಸೃಷ್ಟಿಸ್ಥಿತಿಲಯಗಳೂ ಆಗುತ್ತಿದ್ದರೂ ಅವನಿಗೆ ಆ ಕ್ರಿಯೆಗಳ ಫಲವೇನೂ ಅಂಟುವಹಾಗಿಲ್ಲ. ಏಕೆಂದರೆ ಅವನು ಅವಿಕ್ರಿಯನಾಗಿರುತ್ತಾನೆ.

ಮನಸ್ಸು ಇಂದ್ರಿಯಗಳ ಮೂಲಕವಾಗಿ ಹೋಗಿ ವಿಷಯಗಳನ್ನು ಅರಿಯುವಾಗ ಅದು ವಿಷಯಗಳ ಆಕಾರವನ್ನು ಪಡೆಯಬೇಕು. ಆದ್ದರಿಂದ ಅದು ಒಂದೇ

ಕಾಲದಲ್ಲಿ ಎರಡು ವಸ್ತುಗಳನ್ನು ನೋಡುವದಕ್ಕೆ ಆಗುವದಿಲ್ಲ. ಅದು ಯಾವ ವಸ್ತುವನ್ನು ನೋಡುವದೋ ಅದರ ಆಕಾರವಾಗಿ ತನ್ನ ಸ್ವರೂಪವನ್ನೆಲ್ಲ ತಿರುಗಿಸಿ ಕೊಳ್ಳಬೇಕು. ಒಂದು ಸೂಜಿಯನ್ನು ನೋಡುವದಕ್ಕೆ ಇಡಿಯ ಮನಸ್ಸೇ ಸೂಜಿಯ ಆಕಾರವಾಗುವದು; ಒಂದು ಗುಡ್ಡವನ್ನು ನೋಡುವದಕ್ಕೂ ಹಾಗೆಯೇ. ಆದರೆ ಆತ್ಮನು ಮಾತ್ರ ಹೀಗಲ್ಲ. ಅವನು ಸೂರ್ಯನಂತೆ ಎಲ್ಲವನ್ನೂ ಒಂದೇ ಕಾಲಕ್ಕೆ ತಾನು ಯಾವ ಮಾರ್ಪಾಡನ್ನೂ ಪಡೆಯದೆಯೇ, ಬೆಳಗುತ್ತಾನೆ. ಜಗತ್ತಿನ ಸೃಷ್ಟಿಸ್ಥಿತಿಲಯಗಳು ಆತನ ಸನ್ನಿಧಿಯಿಂದಲೇ ಆಗುತ್ತಿದ್ದರೂ ಪ್ರಕೃತಿಯು ಎಲ್ಲಾ ರೂಪವನ್ನೂ ಪಡೆಯುವ ದನ್ನು ಆತನು ಬೆಳಗುತ್ತಲೇ ಇದ್ದರೂ ಅವನಲ್ಲಿ ಯಾವ ಮಾರ್ಪಾಡೂ ಆಗಿರುವದಿಲ್ಲ. ಆದ್ದರಿಂದಲೇ ಭಗವಂತನು ಹಿಂದೆ "ನಾನು ಚಾತುರ್ವರ್ಣ್ಯಕ್ಕೆ ಕರ್ತೃವಾಗಿದ್ದರೂ ಕರ್ತೃವಲ್ಲ" ಎಂದು ಹೇಳಿಕೊಂಡಿರುತ್ತಾನೆ. ಇದರಂತೆ ಸೃಷ್ಟಿಸ್ಥಿತಿಲಯಗಳಿಗೂ ಸನ್ನಿಧಿಯಲ್ಲಿದ್ದು ಬೆಳಗುವ ಚೈತನ್ಯರೂಪದ ಕರ್ತೃವಾಗಿದ್ದರೂ ಯಾವ ವಿಕಾರವನ್ನೂ ಹೊಂದದೆ ಇರುವದರಿಂದ ನಿಜವಾದ ಕರ್ತೃವಲ್ಲ. ಆದ್ದರಿಂದ ಆ ಸೃಷ್ಟ್ಯಾದಿಗಳಿಂದ ಅವನಿಗೆ ಬಂಧವಾಗುವದಿಲ್ಲ.

ಇದರಿಂದ ಒಂದು ತತ್ತ್ವವು ಏರ್ಪಡುತ್ತದೆ. ಯಾರು ನಿಜವಾಗಿ ಕರ್ತೃಗಳೋ ಅವರಿಗೆ ಕರ್ಮದ ಫಲವು ತಪ್ಪದೆ ಅಂಟಿಕೊಳ್ಳುತ್ತದೆ. ನಮ್ಮಗಳಿಗೆ ಕರ್ಮದ ಫಲವು ಅಂಟುವದಕ್ಕೆ ಕಾರಣವೇನು? ಎಂದರೆ ನಾವು ಮನಸ್ಸನ್ನು ನಮ್ಮ ನಿಜವಾದ ಆವರಣವೆಂದು ಮಾಡಿಕೊಂಡುಬಿಟ್ಟಿರುತ್ತೇವೆ. ಹೊರಗಿನ ವಿಷದ ಗಾಳಿಯು ತಾಕದಂತೆ ಹಿಂದಿನ ಯುದ್ಧದಲ್ಲಿ ಜನರು "ಗ್ಯಾಸ್ ಮಾಸ್ಕ್" ಎಂಬ ಮುಖವಾಡವನ್ನು ಹಾಕಿಕೊಂಡಿರುತ್ತಿದ್ದರಂತೆ. ಅದರಂತೆ ನಾವುಗಳೆಲ್ಲರೂ ಮನಸ್ಸೆಂಬ ಮುಖವಾಡವನ್ನು ಹಾಕಿಕೊಂಡು ಒಬ್ಬೊಬ್ಬ ವ್ಯಕ್ತಿಗಳಾಗಿರುತ್ತೇವೆ. ಮನಸ್ಸು ಮುಖ್ಯವಾಗಿ ಮನುಷ್ಯನಿಗೆ ಲಿಂಗವಾಗಿರುತ್ತದೆ; ಎಂದರೆ ಗುರುತಾಗಿರುತ್ತದೆ. ಇಂಥವನು ಹೀಗಿರುತ್ತಾನೆ - ಎಂದು ಒಬ್ಬೊಬ್ಬನ ಸ್ವಭಾವವನ್ನು ನಾವು ಅವನ ಮನಸ್ಸಿನ ಸ್ವಭಾವದಿಂದ ಗೊತ್ತು ಪಡಿಸುತ್ತಿರುತ್ತೇವೆ. ಜೀವರುಗಳೆಲ್ಲರೂ ಮನಸ್ಸನ್ನು ತಾವೆಂದೇ ಅಧ್ಯಾಸಮಾಡಿಕೊಂಡು ಬಿಟ್ಟಿರುತ್ತಾರೆ. ಮನಸ್ಸು ವಿಷಯಗಳನ್ನು ಅನುಭವಿಸುವಾಗ ಅದರ ಆಕಾರವಾಗಿರುತ್ತದೆ; ಆ ಬಳಿಕ ಅದರ ಸಂಸ್ಕಾರವು ಮನಸ್ಸಿನಲ್ಲಿ ಉಳಿದುಕೊಂಡಿರುತ್ತದೆ. ಸಮಯದಲ್ಲಿ ಆ ಸಂಸ್ಕಾರವನ್ನು ಎಚ್ಚರಿಸುವ ಸಾಮಗ್ರಿ ದೊರಕಿದ ಕೂಡಲೆ ಮತ್ತೆ ಅದೇ ವೃತ್ತಿಯು ಎದ್ದುಕೊಳ್ಳುತ್ತದೆ. ಹೀಗಿರುವದರಿಂದ ಮನಸ್ಸೆಂಬ ಉಪಾಧಿಗೆ ಕಟ್ಟುಬಿದ್ದಿರುವ ಜೀವರುಗಳೆಲ್ಲರೂ ವಿಷಯದಲ್ಲಿ ಸಕ್ತರಾಗಿರುತ್ತಾರೆ. ನಿದ್ರಿಸಿದರೂ, ಒಂದು ಜನ್ಮವು ಕಳೆದು ಮರಣವು ಪ್ರಾಪ್ತವಾದರೂ, ಸಂಸ್ಕಾರರೂಪವಾಗಿ ಈ ಶಕ್ತಿಯು ಇದ್ದುಕೊಂಡೇ

ಇರುತ್ತದೆ. ಆದ್ದರಿಂದಲೇ ಎಚ್ಚೆತ್ತ ಬಳಿಕ ಅಥವಾ ಮತ್ತೊಂದು ಜನ್ಮವನ್ನು ಪಡೆದ ಬಳಿಕ ಮತ್ತೂ ವಿಷಯದ ಸಕ್ತಿಯು ಹೋಗುವದಿಲ್ಲ. ಈ ಸಕ್ತಿಯೇ ಅಥವಾ ಸಂಗವೇ ಜೀವರುಗಳಿಗೆ ಆಗಿರುವ **ಸಂಸಾರಬಂಧವು.**

ಈ ಸಕ್ತಿಯನ್ನು ಕಳೆದುಕೊಳ್ಳುವ ಉಪಾಯವನ್ನು ತಿಳಿಸುವದಕ್ಕೆ ಗೀತಾಶಾಸ್ತ್ರವು ಹೊರಟಿರುತ್ತದೆ. ಆದ್ದರಿಂದಲೇ ಗೀತೆಯಲ್ಲಿ "ಅನಾಸಕ್ತಿಯೋಗ"ವನ್ನು ಹೇಳಿದೆ ಎಂದು ಮಹಾತ್ಮಗಾಂಧಿಯವರು ಹೇಳಿರುತ್ತಾರೆ. ಯಾರು ಪರೋಪಕಾರದಲ್ಲಿ ನಿರತರಾಗಿರುತ್ತಾರೋ ಅವರಿಗೂ ಮತ್ತೊಬ್ಬರಿಗೆ ಉಪಕಾರವನ್ನು ಮಾಡಬೇಕು ಎಂಬ ಒಂದು ಸಕ್ತಿಯಿರುತ್ತದೆ. ಆದರೆ ಮಿಕ್ಕವರಿಗೆ ಇರುವಂತೆ ಈ ಕರ್ಮವು ನನ್ನದು, ಇದರ ಫಲವು ನನಗೇ ಆಗಬೇಕು ಎಂಬ ಸಂಕುಚಿತವಾದ ಆಸಕ್ತಿಯು ಅವರಿಗೆ ಇರುವದಿಲ್ಲ. ಅಂಥ ಪರೋಪಕಾರನಿರತರಿಗೇ ಕರ್ಮಬಂಧವು ಸಡಿಲವಾಗಿ ಒಂದು ವಿಲಕ್ಷಣವಾದ ಆನಂದವು ದೊರೆಯುತ್ತದೆ. ಹೀಗಿರುವಲ್ಲಿ ಯಾವ ಆಸಕ್ತಿಯೂ ಇಲ್ಲದೆ, ತನ್ನ ಸೃಷ್ಟ್ಯಾದಿಕರ್ಮಗಳಲ್ಲಿ ಉದಾಸೀನನಂತೆ ಇರುವ ಪರಮಾತ್ಮನಿಗೆ ಎಂಥ ಆನಂದವಿರಬೇಕು! ಲೋಕದಲ್ಲಿ ಯಾರುಯಾರು ಯಾವಯಾವ ಕರ್ಮದಲ್ಲಿ ಎಷ್ಟೆಷ್ಟರಮಟ್ಟಿಗೆ ಅನಾಸಕ್ತರಾಗಿರುವರೋ, ಅವರವರಿಗೆ ಅಷ್ಟಷ್ಟು ಕರ್ಮಬಂಧದಿಂದ ಬಿಡುಗಡೆಯಾಗಿರುತ್ತದೆ. ಅವರಿಗೆ ಆ ಕರ್ಮಗಳು ಯಾವ ಫಲವನ್ನು ಕೊಡಲಿ, ಅದರಿಂದ ಎಳ್ಳಷ್ಟೂ ಮನಸ್ಸಿನಲ್ಲಿ ಏರುಪೇರು ಆಗುವದಿಲ್ಲ. ಹೀಗಿರುವಲ್ಲಿ ಯಾವ ಮನಸ್ಸಿನ ಸಂಬಂಧವೂ ಇಲ್ಲದ ಕೂಟಸ್ಥಚೈತನ್ಯಸ್ವರೂಪನಾದ ನಿರುಪಾಧಿಕನಾದ ಆತ್ಮನಿಗೆ ಸೃಷ್ಟ್ಯಾದಿಕರ್ಮಗಳಿಂದ ಯಾವ ಬಂಧವೂ ಆಗುವದಿಲ್ಲ ವೆಂಬುದನ್ನು ಹೇಳುವದೇನಿದೆ? ಪರಮಾತ್ಮನು ಕರ್ತೃತ್ವವನ್ನು ಮೇಲೆ ಹಾಕಿಕೊಂಡು ಸೃಷ್ಟ್ಯಾದಿಗಳನ್ನು ಮಾಡುತ್ತಿರುವದಿಲ್ಲ. ಬೆಂಕಿಗೆ ಸುಡುವದು ಸ್ವಭಾವವೇ ಆಗಿರುವದರಿಂದ ಸುಡುವದೆಂಬ ಕ್ರಿಯೆಯಲ್ಲಿ ಹೇಗೆ ನಿಜವಾದ ಕರ್ತೃತ್ವವಿಲ್ಲವೋ ಹಾಗೆ ಪರಮಾತ್ಮನಿಗೂ ಅವನ ಸ್ವಭಾವದಿಂದಲೇ ಆಗುವ ಸೃಷ್ಟ್ಯಾದಿಗಳಲ್ಲಿ ಕರ್ತೃತ್ವವಿರುವದಿಲ್ಲ; ಆದ್ದರಿಂದ ಅವುಗಳಿಂದ ಅವನಿಗೆ ಯಾವ ಬಂಧವೂ ಇಲ್ಲ. ಇಡಿಯ ಜಗತ್ತು ಸೃಷ್ಟಿಸ್ಥಿತಿ ಪ್ರಲಯಗಳನ್ನು ಅನುಭವಿಸುತ್ತಿದ್ದರೂ ಅದೆಲ್ಲವೂ ಜಗತ್ತಿನ ಜೀವರುಗಳ ಕರ್ಮಾನು ಗುಣವಾಗಿ ನಡೆಯುತ್ತಿರುವದು. ಆದರ ಲೇಪವು ಒಂದಿಷ್ಟೂ ಪರಮಾತ್ಮನಿಗೆ ಇರುವದಿಲ್ಲ. ಮನೆಯೊಳಗೆ ಇರುವದನ್ನೆಲ್ಲ ಬೆಳಗುವ ದೀಪದಂತೆ ಪರಮಾತ್ಮನ ಸಾಕ್ಷಿಚೈತನ್ಯವು ಎಲ್ಲವನ್ನೂ ಬೆಳಗುತ್ತಿರುವದು. ಆತನ ಪ್ರಕೃತಿಯು ಮಾತ್ರ ಸ್ಥಾವರ ಜಂಗಮಾತ್ಮಕವಾದ ಈ ಜಗತ್ತನ್ನು ಹಡೆದು ಪೋಷಿಸಿ ಎಲ್ಲವನ್ನೂ ಪ್ರಲಯದಲ್ಲಿ ತನ್ನೊಳಗೇ ಅಡಗಿಸಿಕೊಳ್ಳುತ್ತಿರುವದು. ಎಲ್ಲಕ್ಕೂ ಕಾರಣವಾಗಿರುವದರಿಂದ ಇದಕ್ಕೆ

ಪ್ರಕೃತಿಯೆಂದೂ, ಪ್ರಲಯದಲ್ಲಿದ್ದುಕೊಂಡಿದ್ದರೂ ಯಾವ ನಾಮರೂಪಗಳಿಂದಲೂ ಬಿಡಿಬಿಡಿಯಾಗಿ ಇಂದ್ರಿಯಗೋಚರವಾಗುವಂತೆ ಇರುವದಿಲ್ಲವಾದ್ದರಿಂದ **ಅವ್ಯಕ್ತ** ವೆಂದೂ ಹೆಸರಾಗಿರುವದು. ಇದಕ್ಕೆ **ಮಾಯೆ**, ಎಂಬ ಇನ್ನೊಂದು ಹೆಸರೂ ಇರುತ್ತದೆ. ಈ ಮಾಯೆ ಎಂಬ ಹೆಸರು ಇದರ ನಿಜವನ್ನು ಚೆನ್ನಾಗಿ ಹೊರಗೆಡಹುತ್ತದೆ. ನಿಜವಾಗಿ ನೋಡಿದರೆ ಪ್ರಕೃತಿಯೆಂಬುದು ಪರಮಾತ್ಮನಿಗಿಂತ ಬೇರೆಯಲ್ಲದಿದ್ದರೂ ಅವಿದ್ಯಾದೃಷ್ಟಿಯಿಂದ ನೋಡುವವರಿಗೆ ಅದು ಎಲ್ಲಾ ಸೃಷ್ಟಿಸ್ಥಿತಿಲಯಗಳನ್ನೂ ಮಾಡುವಂತೆ ಕಾಣುತ್ತಿರುವದರಿಂದ ಇದಕ್ಕೆ **ಮಾಯೆ**, ಹುಸಿತೋರಿಕೆ, ಎಂಬ ಹೆಸರನ್ನು ಕೊಟ್ಟಿರುತ್ತಾರೆ. ಶ್ರೀಗೌಡಪಾದಾಚಾರ್ಯರು ಅಲಾತಶಾಂತಿಪ್ರಕರಣದಲ್ಲಿ ಈ ವಿಷಯವನ್ನು ಚೆನ್ನಾಗಿ ಸ್ಪಷ್ಟಪಡಿಸಿರುತ್ತಾರೆ. ಒಂದು ಅಲಾತವನ್ನು ಎಂದರೆ ಕೊಳ್ಳಿಯನ್ನು ಗಿರ್ರನೆ ತಿರುಗಿಸಿದರೆ ಬಗೆಬಗೆಯ ಆಕಾರಗಳು ಕಾಣಿಸಿಕೊಂಡು ಕೊಳ್ಳಿಯನ್ನು ತಿರುಗಿಸುವದನ್ನು ನಿಲ್ಲಿಸಿದ ಕೂಡಲೆ ಆ ಆಕಾರಗಳ ತೋರಿಕೆಯೂ ಶಾಂತವಾಗುವದಷ್ಟೆ. ಆ ಸಂದರ್ಭದಲ್ಲಿ ಆಕಾರಗಳು ಎಲ್ಲಿಂದ ಬಂದಿರುತ್ತವೆ? ಅವು ತೋರುವಾಗ ಎಲ್ಲಿರುತ್ತವೆ? ಆಮೇಲೆ ಕಣ್ಮರೆಯಾದಾಗ ಎಲ್ಲಿಗೆ ಹೋಗುತ್ತವೆ? ಈ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವದಕ್ಕೆ ಬಹಳ ಹೊತ್ತು ಹಿಡಿಯುವದಿಲ್ಲ. ಇರುವದೆಲ್ಲ ಕೊಳ್ಳಿಯೊಂದೇ. ಆಕಾರಗಳು ಅದರಿಂದ ಅಥವಾ ಮತ್ತೆಲ್ಲಿಂದಲಾದರೂ ಬರಲೂ ಇಲ್ಲ. ಅದರಲ್ಲಿ ಇರಲೂ ಇಲ್ಲ, ಆಮೇಲೆ ಅದರೊಳಕ್ಕೆ ಅಥವಾ ಮತ್ತೆಲ್ಲಿಗಾದರೂ ಹೋಗಲೂ ಇಲ್ಲ. ಅದೆಲ್ಲ ದೃಷ್ಟಿದೋಷದಿಂದ ಕಾಣಿಸಿದ ಬರಿಯ ಹುಸಿತೋರಿಕೆ. ಇಷ್ಟೆ ಅಲ್ಲವೆ? ಇದರಂತೆಯೇ ಅವಿದ್ಯಾದೃಷ್ಟಿಯಿಂದ ಜಗತ್ತು ಪರಮಾತ್ಮನಿಂದ ಬರುತ್ತದೆ, ಇರುತ್ತದೆ, ಅಡಗುತ್ತದೆ; ಆದರೆ ವಿದ್ಯಾದೃಷ್ಟಿಯಿಂದ ನೋಡಿದರೆ ಇರುವದೆಲ್ಲ ಆತ್ಮವಸ್ತುವೇ. ಅದು ಉದಾಸೀನವಾಗಿರುತ್ತದೆ. ಯಾವ ಕ್ರಿಯೆಯನ್ನೂ ಮಾಡಿರುವದಿಲ್ಲ. ನಾಟಕದವನು ತಾನೂ ಅಭಿನಯದಿಂದ ಅತ್ತು ಎಂದರೆ ಅತ್ತಂತೆ ಮಾಡಿ, ನಮ್ಮನ್ನೂ ಅಳಿಸುವನು. ನಿಜವಾಗಿ ತಾನು ಅಳುವದಿಲ್ಲ, ಇದ್ದಂತೆಯೇ ಇರುವನು. ಅಲ್ಲವೆ? ಇದರಂತೆ ಭಗವಂತನು ಹೇಳುತ್ತಾನೇನೆಂದರೆ "ನಾನು ಅಧ್ಯಕ್ಷನು, ಸಾಕ್ಷಿಯು, ಸುಮ್ಮನಿರುವ ಸಾಕ್ಷಿಯು. ಪ್ರಕೃತಿಯು ಮಾತ್ರ ಕೆಲಸ ಮಾಡುತ್ತಿರುತ್ತದೆ." ಜೂಲಿಯಸ್ ಸೀಸರ್ ಎಂಬಾತನಿಗೆ ನೀನೇ ನಮ್ಮನ್ನು ಆಳಬೇಕು ಎಂದು ಜನರು ಕಿರೀಟವನ್ನು ಅರ್ಪಿಸಿದರು. ಆದರೆ ಅವನು ಬೇಡ, ಬೇಡ - ಎಂದು ಅದನ್ನು ತಿರಸ್ಕರಿಸಿದನು. ಆದರೆ ಅಲ್ಲಿ ನಿಜವೇನೆಂದರೆ ಆ ಸೀಸರನೇ ಈ ನಾಟಕವನ್ನು ಹೂಡಿದ್ದನು. ಅವನಿಗೆ ನಿಜವಾಗಿ ರಾಜ್ಯದ ಆಶೆಯಿದ್ದರೂ ಇಲ್ಲದವನಂತೆ ನಟಿಸುವದಕ್ಕಾಗಿ ಈ ಪ್ರದರ್ಶನವನ್ನು ಏರ್ಪಡಿಸಿದ್ದನು. ಹಾಗೆ

ಭಗವಂತನು ತನ್ನ ಕರ್ಮವನ್ನು ಪ್ರಕೃತಿಯ ಮೇಲೆ ಹೂಡುತ್ತಿಲ್ಲ; ಆತನು ಸರ್ವಥಾ ಯಾವಾಗಲೂ ಯಾವ ಕರ್ಮಕ್ಕೂ ಸಂಬಂಧಪಟ್ಟವನೇ ಅಲ್ಲ. ಅವನು ಯಾವಾಗಲೂ ಎಲ್ಲಕ್ಕೂ ಸಾಕ್ಷಿಯಾಗಿರುತ್ತಾನೆ. ಅವನು ಸಾಕ್ಷಿಯೇ ಹೊರತು ಏನನ್ನೂ ಮಾಡುವವನಲ್ಲ.

ನಮ್ಮ ಆತ್ಮನು ಎಲ್ಲಕ್ಕೂ ಸಾಕ್ಷಿಯಾಗಿರುತ್ತಾನೆ ಎಂಬುದನ್ನು ನಾವು ಚೆನ್ನಾಗಿ ಅರಿತುಕೊಳ್ಳಬೇಕು. ಲೋಕದಲ್ಲಿ ಸಾಕ್ಷಿ, ಅಧ್ಯಕ್ಷ - ಎಂಬ ಮಾತುಗಳಿಗೆ ಈಗ ವಿಪರೀತಾರ್ಥವು ಬಂದಿರುತ್ತದೆ. ಸಾಕ್ಷಿಯು ಕೋರ್ಟಿನಲ್ಲಿ ಯಾವನಾದರೊಬ್ಬನ ಪರವಾಗಿ ಏನಾದರೂ ಕಂಡವನಂತೆ ಹೇಳುವದಕ್ಕೆ ಬರುತ್ತಾನೆ; ಅಧ್ಯಕ್ಷನು ಒಂದಾನೊಂದು ಸಭೆಯಲ್ಲಿ ಎಲ್ಲರಮೇಲೂ ಅಧಿಕಾರವನ್ನು ನಡೆಯಿಸುವದಕ್ಕೆ ಹೋಗುತ್ತಾನೆ. ಆದರೆ ಮೂಲದಲ್ಲಿ ನೋಡಿದರೆ ಸಾಕ್ಷಿ, ಅಧ್ಯಕ್ಷ - ಎಂಬ ಶಬ್ದಗಳಿಗೆ ಅರ್ಥವೇನು? ನೇರಾಗಿ ನೋಡುವವನು ಸಾಕ್ಷಿಯು; ಎಲ್ಲವನ್ನೂ ಸುಮ್ಮನೆ ನೋಡುವವನು, ತಾನು ಕಾರ್ಯವನ್ನು ವಹಿಸದೆ ಇರುವವನು ಅಧ್ಯಕ್ಷನು. ಆತ್ಮನು ಇಂಥವನು. ಅವನಿಗೆ ಯಾವದೊಂದರಲ್ಲಿಯೂ ಸಂಗವಿಲ್ಲ. ಅವನು ಯಾವದೊಂದು ಕಾರ್ಯದಲ್ಲಿಯೂ ಕರ್ತೃತ್ವವನ್ನು ವಹಿಸದೆ ಇರುವ ನಿರ್ವಿಕಾರಿಯು. ನಮ್ಮ ಪರಮಾರ್ಥವಾದ ಆತ್ಮ ಸ್ವರೂಪವು ಇಂಥದ್ದು ಎಂಬುದನ್ನು ನಾವು ತಿಳಿಯುವದಕ್ಕೆ ಪ್ರಕೃತಿಯ ರೂಪಾಂತರವಾದ 'ಅಹಂ' 'ನಾನು' ಎಂಬುದೊಂದು ಅಡ್ಡಿಯಾಗಿರುತ್ತದೆ. ನಮ್ಮ ಶರೀರದೊಳಗೆ ಆತ್ಮನೂ, ಈ 'ನಾನೂ' ಎರಡೂ ಇರುತ್ತವೆ; ಇವುಗಳಲ್ಲಿ ನಾನು ಎಂಬುದು ಆತ್ಮನ ಸನ್ನಿಧಿಯಿಂದ ಅದರ ಬೆಂಬಲವನ್ನು ಪಡೆದುಕೊಂಡು ಹಾರಾಡುತ್ತಿರುವದು. ಆದರೆ ನಿಜವೇನು? ಈ 'ನಾನು' ಎಂಬುದಕ್ಕೆ, ಈ ಪ್ರಕೃತಿಗೆ ಅಥವಾ ಅದರ ವಿಕೃತಿಯಾದ ಜಗತ್ತಿಗೆ, ಯಾವ ಇರವೂ ಇಲ್ಲ. ಅದೆಲ್ಲ ಮಿಥ್ಯೆ, ಅವಿದ್ಯಾಕೃತ, ಮಾಯೆ! ಯಾರು ಈ ಪ್ರಕೃತಿಯ ಮಾಯಾವಿಲಾಸದಲ್ಲಿ ಸಕ್ತರಾಗಿರುವರೋ ಅವರು ಕೆಡುವರು; ಯಾರು ಇದೆಲ್ಲಕ್ಕೂ ಸಾಕ್ಷಿಯಾಗಿರುವ ಪರಮಾತ್ಮನಲ್ಲಿ ನಿಲ್ಲುವರೋ ಅವರು ಮುಕ್ತರಾಗುವರು, ನಿತ್ಯಾನಂದವನ್ನು ಪಡೆದುಕೊಳ್ಳುವರು.

ಇದುವರೆಗೆ ನಿರುಪಾಧಿಕವಾದ ಪರಮಾತ್ಮತತ್ತ್ವವನ್ನು ತಿಳಿಸಿದ್ದಾಯಿತು. ಈಗ ಇದೇ ತತ್ತ್ವವು, ತಾನು ಇದ್ದಂತೆಯೇ ಇದ್ದು, ಸಾಕಾರರೂಪವನ್ನೂ ಸಗುಣರೂಪವನ್ನೂ ಪಡೆಯುವ ವಿಷಯವನ್ನು ಪ್ರಸ್ತಾಪಿಸಲಾಗುತ್ತದೆ.

**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನನ್ತೋ ಮಮ ಭೂತಮಹೇಶ್ವರಮ್ ॥** (೯-೧೧)

ಭಗವಂತನಾದ ನಾರಾಯಣನೇ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ಮಾಡುತ್ತಾನಷ್ಟೆ. ಆತನು ತನ್ನ ಪ್ರಕೃತಿಯಾದ ವೈಷ್ಣವೀಮಾಯೆಯನ್ನು ವಶಪಡಿಸಿಕೊಂಡು ಲೋಕೋ

ಪಕಾರಕ್ಕಾಗಿ ಶ್ರೀಕೃಷ್ಣಾದಿರೂಪವನ್ನು ತೆಗೆದುಕೊಂಡು ಮನುಷ್ಯನಂತೆ ಕಾಣಿಸಿಕೊಳ್ಳುತ್ತಾನೆ. ಆಗಲೂ ಅವನಿಗೆ ಶರೀರದಲ್ಲಿ ನಾನು ಎಂಬ ಬುದ್ಧಿಯು ಇರುವದಿಲ್ಲ; ಶರೀರಾದಿಗಳಿಗೆಲ್ಲ ಸಾಕ್ಷಿಯಾದ ಪರಮಾತ್ಮಸ್ವರೂಪವನ್ನೇ ಅವನು 'ನಾನು' ಎಂದುಕೊಳ್ಳುವನು. ಆ ಪರಭಾವವನ್ನು ಶರೀರವನ್ನೇ ನಾನೆಂದು ತಿಳಿಯುವ, ಅಥವಾ ಬಹಳ ಹೆಚ್ಚೆಂದರೆ ಇದರಲ್ಲಿರುವ ನಾನು ಎಂದು ಕುಣಿಯುತ್ತಿರುವ ಅಹಂಭಾವವನ್ನೇ ನಮ್ಮ ಸ್ವರೂಪವೆಂದು ಅರಿಯುವ, ನಮ್ಮಂಥವರು ಹೇಗೆ ಅರಿತಾರು? ಮೂಢರಾದ ದುರ್ಯೋಧನ, ಕಂಸ - ಮುಂತಾದವರು ಶ್ರೀಕೃಷ್ಣನನ್ನು ತಮ್ಮಂತೆಯೇ ಒಬ್ಬ ಮನುಷ್ಯನೆಂದೇ ಬಗೆದರು. ಅವನನ್ನು ಶರೀರದ ದೃಷ್ಟಿಯಿಂದಲೇ ಅಳೆದುನೋಡಿದರು, ಅವನನ್ನು ವಿಧವಿಧವಾಗಿ ಹಳಿದರು. ಆ ಪರಮಾತ್ಮನು ಜನರಿಗೆ ಉಪಕಾರವನ್ನು ಮಾಡುವಾಗಲೂ ತನ್ನ ಮಹಿಮೆಯನ್ನು ಮುಂದೆ ತಂದು ಪ್ರದರ್ಶನಮಾಡಿಕೊಳ್ಳದೆ, ತಂದೆಯು ಮಗುವಿನೊಡನೆ ವಿನೋದವಾಡುವಾಗ ತಾನೂ ಅದರ ಅಧೀನವಾಗಿರುವಂತೆಯೇ ತೋರ್ಪಡಿಸಿಕೊಂಡು, "ಎಲ್ಲಿ ಮಗು, ನನಗೆ ಸ್ವಲ್ಪ ತಿಂಡಿ ಕೊಡು, ನೋಡೋಣ" ಎಂದು ಕೇಳುವಂತೆ, ದ್ರೌಪದಿಯನ್ನು 'ನನಗೆ ಹಸಿವಾಗಿದೆ ಏನಾದರೂ ಕೊಡು' ಎಂದನು; ಬಳಿಕ ದೂರ್ವಾಸಾದಿಗಳಿಗೆ ಆದ ತೃಪ್ತಿಯು ದ್ರೌಪದಿಯ ಅನ್ನದಾನಮಹಾತ್ಮ್ಯ ಎನ್ನುವಂತೆ ಪ್ರಕಟಿಸಿದನು. ದೊಡ್ಡವರಾದವರೆಲ್ಲ ಹೀಗೆಯೇ. ಅವರು ತಾವು ಮತ್ತೊಬ್ಬರಿಗೆ ಮಾಡುವ ಉಪಕಾರವನ್ನು ತಾವು ಮಾಡಿದಂತೆ ಎಂದಿಗೂ ತೋರಿಕೊಳ್ಳುವದಿಲ್ಲ. ಅವರು ತಾವು ಯಾರಿಗೆ ಅನುಗ್ರಹವನ್ನು ಮಾಡುವರೋ ಅವರ ಮಹಿಮೆಯನ್ನೇ ಹೆಚ್ಚಾಗಿ ಮುಂದಕ್ಕೆ ಹಿಡಿಯುವರು. ಭಗವಂತನಾದರೂ ಶ್ರೀಕೃಷ್ಣನು ಪ್ರತಿದಿನವೂ ತಂದೆತಾಯಿಗಳಿಗೆ ನಮಸ್ಕರಿಸಿ ಅವರಿಂದ ಆಶೀರ್ವಾದವನ್ನು ಪಡೆಯುತ್ತಿದ್ದನು. ಹೀಗಿರುವ ಆತನನ್ನು ಮೂಢರು ಹೇಗೆ ಸರಿಯಾಗಿ ಅರಿತುಕೊಂಡಾರು?

ಇಡಿಯ ಜಗತ್ತೇ ಪರಮಾತ್ಮನ ರೂಪವು. ಆದರೂ ಅವನು ಎಲ್ಲಿದ್ದಾನೋ ಜನರಿಗೆ ತಿಳಿಯುವದೇ ಇಲ್ಲ. ಅಂಥ ಅಸಕ್ತನು, ಆತನು! ಪರಮಾತ್ಮನು ಸರ್ವವ್ಯಾಪಕನಾದರೂ ಪರಿಚ್ಛಿನ್ನವಾದ ಮಾನುಷಶರೀರವನ್ನು ತೆಗೆದುಕೊಂಡು ಬಂದು ಜನರನ್ನು ಅನುಗ್ರಹಿಸಬಲ್ಲನು. ಆತನು ಒಬ್ಬ ತಿರುಕನ ವೇಷದಿಂದ ಕಾಣಿಸಿಕೊಳ್ಳಬಹುದು; ಅಥವಾ ಒಬ್ಬ ಧನಿಕನ ರೂಪದಲ್ಲಿ, ಇಲ್ಲವೆ ಒಬ್ಬ ಮಹಾತ್ಮನ ರೂಪದಲ್ಲಿ ಕಾಣಿಸಿಕೊಳ್ಳಬಹುದು. ಹೇಗಾದರೂ ಆತನನ್ನು ಮೂಢರು ಗುರುತು ಹಿಡಿಯಲಾರರು. ಆತನ ಪರಭಾವವು, ಸರ್ವಭೂತಗಳಿಗೂ ಒಡೆಯನಾದ ಆತನ ಸ್ವರೂಪವು, ಈ ಶರೀರಕ್ಕಿಂತ ಹೆಚ್ಚಿನದಾಗಿರುತ್ತದೆ ಎಂಬುದು ಅವರಿಗೆ ಗೊತ್ತಾಗುವದೇ ಇಲ್ಲ. ಇದಕ್ಕೆ ಅವರಿಗಿರುವ ಶರೀರಾಭಿಮಾನವೇ ಕಾರಣವು. ಪರಮಾತ್ಮನು

ಶರೀರಿಯಾಗಿ ಬಂದರೆ ತಮ್ಮಂತೆಯೇ ಒಬ್ಬ ಎಂದು ಭಾವಿಸುವರು, ನಿರಾಕಾರನಾಗಿದ್ದರೆ ಅವನೇ ಇಲ್ಲ ಎನ್ನುವರು. ಇದೇ ಮೂಢರ ಮೌಢ್ಯವು.

## ೭೪. ಯಾರಿಗೆ ಆಗುವದು? ೯-(೧೨-೧೪)

(೧೭-೧೧-೪೭)

ಉಪನ್ಯಾಸಗಳು ನಿಂತು ನಡುವೆ ಎರಡು ವಾರವಾಯಿತು. ಆದ್ದರಿಂದ ಹಿಂದಿನ ವಿಚಾರಗಳನ್ನು ಸ್ವಲ್ಪ ನೆನಪಿಗೆ ತಂದುಕೊಂಡು ಮುಂದಕ್ಕೆ ಸಾಗೋಣ. ಜ್ಞಾನಕ್ಕೂ ಅಜ್ಞಾನಕ್ಕೂ ಇರುವ ತಾರತಮ್ಯವನ್ನು ತಿಳಿದುಕೊಂಡದ್ದಾಗಿದೆ. ಅನುಭವಕ್ಕೆ ತತ್ತ್ವವನ್ನು ಹೊಂದಿಸಿಕೊಳ್ಳುವದು ಹೇಗೆ? —ಎಂಬುದನ್ನು ಸ್ವಲ್ಪ ವಿವರಿಸಿದ್ದಾಗಿದೆ. ಪರಮಾರ್ಥತತ್ತ್ವವಾಗಿರುವ ಭಗವಂತನು ತನ್ನ ಪರಸ್ವರೂಪವು ಅಚ್ಚಳಿಯದಂತೆ ಹಾಗೆಯೇ ಇದ್ದುಕೊಂಡು ಜಗದ್ರೂಪವಾಗಿ ಕಾಣಿಸಿಕೊಳ್ಳುತ್ತಾನೆ; ತನ್ನ ಪರಸ್ವರೂಪ ದಲ್ಲಿಯೇ ಇದ್ದುಕೊಂಡು ಮನುಷ್ಯರೂಪವನ್ನು ಧರಿಸಿ ಅವತರಿಸುತ್ತಾನೆ.

ರತ್ನವು ಎಲ್ಲಿದ್ದರೂ ರತ್ನವೇ. ಇದರಂತೆ ತತ್ತ್ವವು ಯಾವ ರೂಪದಿಂದ ಎಲ್ಲಿ ಕಾಣಿಸಿಕೊಂಡರೂ ತತ್ತ್ವವೇ. ಪರಮಾತ್ಮನು ಮನುಷ್ಯರ, ಅಥವಾ ಮತ್ತೆ ಯಾವ ಪ್ರಾಣಿಗಳ ರೂಪವನ್ನು ಧರಿಸಿದರೂ ಅದೇ ಪರಮಾತ್ಮನೇ ಆಗಿರುತ್ತಾನೆ. ಡಾಕ್ಟರು ಎನ್ನಿಸಿಕೊಳ್ಳುವವನು ಹೇಗಿರಬೇಕು? ರೋಗಿಗಳ ಗುಂಪಿನಲ್ಲಿ ಸೇರಿದ್ದರೂ ತನಗೆ ರೋಗದ ಅಂಟು ಬರಬಾರದು, ರೋಗಿಗಳಿಗೆ ತನ್ನಿಂದ ಉಪಯೋಗವಾಗಬೇಕು. ಇದರಂತೆ ಪರಮಾತ್ಮನು ಶರೀರಧಾರಿಯಾದರೂ, ಮತ್ಸ್ಯಕೂರ್ಮಾದಿಶರೀರಗಳನ್ನು ಧರಿಸುವಾಗಲೂ ಯಾವ ಶರೀರದ ಅಂಟೂ ಅವನಿಗೆ ಆಗುವದಿಲ್ಲ; ಯಾವ ಶರೀರ ವನ್ನು ಧರಿಸಿದರೂ ಲೋಕಕ್ಕೆ ಆತನ ಅನುಗ್ರಹವಾಗುತ್ತದೆ. ನಾವು ನಮ್ಮ ಶರೀರೇಂದ್ರಿಯಗಳ ವಶರಾಗಿರುತ್ತೇವೆ; ಅವು ಹೇಳಿದಂತೆ ನಾವು ಕೇಳಬೇಕಾಗಿದೆಯೇ ಹೊರತು ಅವು ನಮ್ಮ ಇಷ್ಟದಂತೆ ನಡೆಯುವುದಿಲ್ಲ. ನಮ್ಮ ಶರೀರಾದಿಗಳೆಲ್ಲ ನಮ್ಮ ಕರ್ಮದ ಫಲವೇ; ಆದರೂ ಅವು ಯಾವವೂ ನಮ್ಮ ಮಾತು ಕೇಳುವಂತಿಲ್ಲ. ನಮ್ಮ ಈಗಿನ ಮನಸ್ಸಿನ ವೃತ್ತಿಗಳು ನಮ್ಮ ಹಿಂದಿನ ಕರ್ಮಕ್ಕೆ ಅನುಗುಣವಾಗಿ ಉಂಟಾಗಿರುತ್ತವೆ; ಆದರೂ ನಾವು ಅವುಗಳು ಕುಣಿಸಿದಂತೆ ಕುಣಿಯಬೇಕು. ಆದರೆ ಭಗವಂತನು ಹೀಗಲ್ಲ. ಆತನು ಯಾವ ಶರೀರವನ್ನು ಧರಿಸಿದರೂ ಆತನ ಇಷ್ಟದಂತೆ ಅವುಗಳನ್ನು ಸೃಷ್ಟಿಮಾಡಿಕೊಂಡಿರುತ್ತಾನೆ; ಆಧ್ಯಾತ್ಮಿಕಸಂಪತ್ತೆಲ್ಲವೂ ಅವನ ವಶವಾಗಿ ಅವನ ಇಚ್ಛೆಯನ್ನು ನೆರವೇರಿಸುವದಕ್ಕೆ ಯಾವಾಗಲೂ ಸಿದ್ಧವಾಗಿರುತ್ತದೆ. ತನ್ನ ಕಾರ್ಯವು

ನೆರವೇರುವದಕ್ಕೆ ಎಂಥ ರೂಪವು ಬೇಕೋ ಅಂಥ ವೇಷವನ್ನು ಸ್ವತಂತ್ರವಾಗಿ ಆತನು ಧರಿಸುತ್ತಾನೆ. ಆತನು ಸರ್ವವ್ಯಾಪಕನಾದರೂ ಯಾವ ಶರೀರದಲ್ಲಿಯಾದರೂ ಅಡಗಿಕೊಂಡಂತೆ ತೋರಿಸಿಕೊಳ್ಳಬಲ್ಲನು; ಒಂದೇ ಕಾಲಕ್ಕೆ ಬೇಕಾದರೂ ಅನೇಕ ಪ್ರಾಣಿಗಳ ರೂಪವನ್ನು ತಾಳಬಲ್ಲನು. ಆಕಾಶವು ತಾನು ಇರುವಂತೆಯೇ ಇದ್ದು ಘಟಾಕಾಶ, ಮಠಾಕಾಶ - ಎಂದು ಮುಂತಾಗಿ ತೋರಿಕೊಳ್ಳುವಂತೆ ಆ ಭಗವಂತನು ತಾನು ಇರುವಂತೆಯೇ ಇದ್ದು ಯಾವ ರೂಪಗಳನ್ನು ಎಷ್ಟು ರೂಪಗಳನ್ನು ಬೇಕಾದರೂ ಆಗಿಂದಾಗಲೆ ತೆಗೆದುಕೊಳ್ಳಬಲ್ಲನು. ವತ್ಸಾಪರಹರಣಕಾಲದಲ್ಲಿ ಹಸುಗಳು, ಕರುಗಳು, ಗೋಪಾಲಕರು - ಎಲ್ಲವೂ ಆಗಿ ಶ್ರೀಕೃಷ್ಣನೂ ಆಗಿ ತೋರಿಕೊಂಡ ಅದ್ಭುತಲೀಲೆಯು ಈ ಬಗೆಯದು. ಆ ಮಹಾತ್ಮನು ಭೂತಮಹೇಶ್ವರನು, ಎಂದರೆ ಪಂಚಭೂತಗಳಿಗೂ ಬ್ರಹ್ಮಾದಿಸ್ತಂಬಪರ್ಯಂತವಾದ ಭೂತಗಳಿಗೂ ಒಡೆಯನು; ಆದ್ದರಿಂದ ಇಂಥ ಅದ್ಭುತಲೀಲೆಯು ಆತನಿಗೆ ಲೀಲಾಮಾತ್ರವಾಗಿರುತ್ತದೆ.

ಆದರೂ ಮೂಢರು ಆ ಮಹಾನುಭಾವನನ್ನು ತಿರಸ್ಕರಿಸುವರು. ಏಕೆಂದರೆ ಅವರಿಗೆ ಆತನ ಪರಭಾವವು ತಿಳಿಯದು. ಅವರು ಶರೀರದಲ್ಲಿ ನೆಟ್ಟ ಬುದ್ಧಿಯುಳ್ಳವ ರಾಗಿರುವರು; ಅವರಿಗೆ ಪರಮಾತ್ಮನ ಹೆಚ್ಚಿನ ಸ್ವರೂಪದ ಅರಿವು ಹೇಗೆ ಆಗಬೇಕು?

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥** (೯-೧೨)

ಆ ಮೂಢರಿಗೆ ಆಶೆಗಳು ಹೆಚ್ಚಾಗಿ ಉಂಟಾಗುತ್ತಿರುವವು; ಆದರೆ ಅವುಗಳು ನೆರವೇರುವದೇ ಕಡಿಮೆ. ಹೀಗಿರುವಲ್ಲಿ ಅವರಿಗೆ ಪರಮಾತ್ಮನು ಸತ್ಯಸಂಕಲ್ಪನು, ಇಚ್ಛಾಮಾತ್ರದಿಂದ ಸೃಷ್ಟ್ಯಾದಿಗಳನ್ನು ಮಾಡಬಲ್ಲನು, ಇಚ್ಛಾಮಾತ್ರದಿಂದ ಬೇಕಾದ ಶರೀರವನ್ನು ನಿರ್ಮಿಸಿಕೊಳ್ಳಬಲ್ಲನು - ಎಂಬುದು ಹೇಗೆ ಮನಸ್ಸಿಗೆ ಹೊಳೆಯಬೇಕು? ಮೋಘಕರ್ಮರು ಅವರು. ಅವರು ಮಾಡುವ ಕರ್ಮಗಳು ಅವಿವೇಕಿಗಳಿಗೆ ಭಾರಿಯ ಕೆಲಸಗಳಾಗಿ ಕಾಣಿಸಬಹುದು; ಆದರೆ ಫಲತಃ ನೋಡಿದರೆ ಆ ಕರ್ಮಗಳಿಗೆ ಯಾವದೊಂದು ಪ್ರಯೋಜನವೂ ಆಗಿರುವದಿಲ್ಲ. ಅವರು ಕರ್ಮವನ್ನು ಮಾಡುತ್ತಲೇ ಇರುವರು, ಫಲವು ಆಗುವದೇ ಇಲ್ಲ. ಒಬ್ಬನನ್ನು ಹಗ್ಗದಿಂದ ಕಟ್ಟಿ, ಎಲ್ಲರೂ ಎಲ್ಲಾ ಕಡೆಗೂ ಸಮಬಲದಿಂದ ಎಳೆದರೆ ಆ ವ್ಯಕ್ತಿಯು ಇದ್ದಲ್ಲಿಯೇ ಇರುವನಲ್ಲವೆ? ಹೀಗಿದೆ, ಆ ಮೂಢರು ಮಾಡುವ ಕರ್ಮಗಳ ಫಲವು! ಇಷ್ಟೇ ಅಲ್ಲ; ಅವರ ಜ್ಞಾನವು ಮೋಘವಾಗಿರುತ್ತದೆ. ಅವರಿಗೆ ತಿಳಿವಳಿಕೆ ಹೆಚ್ಚು. ಅವರು ಮಾತಾಡುವದನ್ನು ನೋಡಿದರೆ ಸರ್ವಜ್ಞರೋ ಎಂಬಂತೆ ಕಾಣಿಸಿಕೊಳ್ಳುವರು. ಆದರೆ ಆ ಜ್ಞಾನಕ್ಕೆ ಫಲವೇನು? ತಿನ್ನುವದಕ್ಕೆ ರಾಗಿಯ ಕಾಳಿಲ್ಲ - ಎಂಬಂತಿರುವದು,

ಅವರ ಪಾಡು. ಜ್ಞಾನವೆಂದರೇನು? "ಸಾ ವಿದ್ಯಾ ಯಾ ವಿಮುಕ್ತಯೇ" ಯಾವದು ಮುಕ್ತಿಗೆ ಕಾರಣವಾಗುವದೋ ಅದೇ ನಿಜವಾದ ವಿದ್ಯೆ; ಆದರೆ ಲೌಕಿಕರ ವಿದ್ಯೆ ಎಂಬುದು ಇದಕ್ಕೆ ವಿರುದ್ಧವಾಗಿರುತ್ತದೆ. ಅವರಿಗೆ ವ್ಯವಹಾರದ ಜ್ಞಾನವು ದಿನದಿನಕ್ಕೆ ಹೆಚ್ಚುತ್ತಲೇ ಇರುತ್ತದೆ. ಆದರೆ ಆ ತಿಳಿವಳಿಕೆ ಹೆಚ್ಚಿದಷ್ಟೂ ದುಃಖವು, ಬಂಧವು, ಹೆಚ್ಚುತ್ತಲೇ ಇದೆ. ರಾಗದ್ವೇಷಗಳು ಹೆಚ್ಚುತ್ತಲೇ ಇವೆ. ಪರಸ್ಪರಾನುರಾಗವು ಕಡಿಮೆ ಯಾಗುತ್ತಲೇ ಇದೆ; ಒಬ್ಬನು ಮನಃಶ್ಶಾಸ್ತ್ರವನ್ನು ಓದುತ್ತಾನೆ. ಗಂಧವನ್ನು ಹಚ್ಚಿದರೆ ಸುಖವನ್ನು ತರುವದೂ ಮುಳ್ಳುಚುಚ್ಚಿದರೆ ದುಃಖವನ್ನು ತರುವದೂ ಒಂದೇ ನರ- ಎಂದು ಶಾರೀರಶಾಸ್ತ್ರದ ವಿಜ್ಞಾನದಿಂದ ಕಂಡುಕೊಳ್ಳುತ್ತಾನೆ. ಈ ಜ್ಞಾನದಿಂದ ಯಾವ ಉಪಯೋಗವಾದೀತು? ಮನುಷ್ಯನ ದುಃಖವನ್ನು ಕಡಿಮೆಮಾಡುವದಕ್ಕೂ ಸುಖವನ್ನು ಹೆಚ್ಚಿಸುವದಕ್ಕೂ ಅದರಿಂದಾಗುವದೆ? ಎಂದಿಗೂ ಇಲ್ಲ. ಯಾರು ಮೂಢರೋ ಅವರು ವಿಚೇತಸ್ಕರು; ಅವರ ಮನಸ್ಸು ಹರಿದಾಡುತ್ತಿರುವದರಿಂದ ಯಾವ ವಿವೇಕವೂ ಅವರಿಗಿರುವದಿಲ್ಲ.

ಅವರ ಆಶೆಗಳೂ ಕರ್ಮಗಳೂ ಜ್ಞಾನವೂ ಹೀಗೆ ವ್ಯರ್ಥವಾಗಿರುವದಕ್ಕೆ ಕಾರಣವೇನು? ಅವರು ಏತಕ್ಕೆ ಹೀಗೆ ಮೂಢರಾಗಿರುವರು? ಎಂದರೆ ಅವರು ಆಶ್ರಯಿಸಿರುವ ರಾಕ್ಷಸೀಪ್ರಕೃತಿಯೇ, ಆಸುರೀಪ್ರಕೃತಿಯೇ ಇದಕ್ಕೆಲ್ಲ ಮೂಲವು. ಆಸುರೀಪ್ರಕೃತಿಯು ಯಾರನ್ನು ಆವರಿಸಿಕೊಂಡಿರುವದೋ ಅವರಿಗೆ ಅದು ದಿಕ್ಕು ತೋಚದಂಥ ಅವಿವೇಕವನ್ನುಂಟುಮಾಡಿಬಿಡುತ್ತದೆ. ಯಾರು ಈ ಪ್ರಕೃತಿಯ ಫಲವಾದ ಮೋಹಕ್ಕೆ ಒಳಗಾಗಿರುವರೋ ಅವರು ತಾವೂ ಕೆಟ್ಟು ಉಳಿದವರನ್ನೂ ಕೆಡಿಸುತ್ತಾರೆ. ನಾವು ಮಾಡುವ ತಪ್ಪು ನಮಗೆ ತಿಳಿಯದಿರುವದೇ ಮೋಹದ ಕಾರ್ಯವು. ಈ ಆಸುರೀಸಂಪತ್ತನ್ನು ಹದಿನಾರನೆಯ ಅಧ್ಯಾಯದಲ್ಲಿ ಭಗವಂತನು ವಿಸ್ತಾರವಾಗಿ ವರ್ಣಿಸುವನು. ಆಸುರಪ್ರಕೃತಿಯವರು ಯಾವಾಗಲೂ ಈ ಮೋಹ ದೃಷ್ಟಿಯಿಂದಲೇ ನೋಡುತ್ತಿರುವದರಿಂದ ಭಗವಂತನ ಪರಭಾವವು ಅವರಿಗೆ ತಿಳಿಯುವಂತಿರುವದಿಲ್ಲ. ಶ್ರೀಕೃಷ್ಣನು ಗೊಲ್ಲನ ಮಗನು, ವಸುದೇವನ ಮಗನಲ್ಲ- ಎಂದೇ ಶಿಶುಪಾಲಾದಿಗಳ ಭಾವನೆಯಿತ್ತು. ಕಂಸನ ಸಭೆಯಲ್ಲಿದ್ದ ಮಂತ್ರಿಗಳು "ಧರ್ಮ, ಯಜ್ಞಯಾಗಗಳು, ಬ್ರಾಹ್ಮಣರು - ಇವೆಲ್ಲ ಶ್ರೀಹರಿಯ ಶರೀರವಂತೆ; ಇವುಗಳೆಲ್ಲ ಎಲ್ಲಿರುವವೋ ಅಲ್ಲಿ ಭಗವಂತನು ಅವತರಿಸುವನಂತೆ. ಆದ್ದರಿಂದ ಯಜ್ಞಾದಿಗಳನ್ನು ಕೆಡಿಸೋಣ, ಬ್ರಾಹ್ಮಣರನ್ನು ಹಿಂಸಿಸೋಣ"- ಎಂದು ಸಲಹೆಯನ್ನು ಕೊಡುತ್ತಿದ್ದರಂತೆ! ಹಿರಣ್ಯಕಶಿಪುವು ಬ್ರಹ್ಮನನ್ನು ಕುರಿತು ಘೋರವಾದ ತಪಸ್ಸುಮಾಡಿ ಅವನಿಂದ ವರವನ್ನು ಪಡೆಯುವವರೆಗೆ ನಮ್ರನಂತೆ ಇದ್ದರೂ ಆಮೇಲೆ ಲೋಕಪಾಲಕ

ರನ್ನು ಕೂಡ ಹಿಂಸಿಸುವದಕ್ಕೆ ಮೊದಲುಮಾಡಿದನಂತೆ! ಇದೆಲ್ಲ ಆಸುರಸಂಪತ್ತಿನ ಮೋಹದ ವಿಲಾಸವಲ್ಲದೆ ಮತ್ತೇನು? ಈಗಲೂ ಯಾರು ಯಾರಿಗೆ ಆಸುರಭಾವವು ಸ್ವಾರ್ಥಬುದ್ಧಿಯು ಬಲಿತುಕೊಂಡಿರುವದೋ ಅವರಿಗೆ ಈ ಮೋಹವು ಕವಿದು ಕೊಂಡಿರುತ್ತದೆ; ಅವರಿಗೆ ಭಗವಂತನ ಭೂತಮಹೇಶ್ವರವಾದ ಪರಭಾವವನ್ನು ಕಾಣದಂತೆ ಅದು ಅಡ್ಡಿಮಾಡುತ್ತಿರುತ್ತದೆ.

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜನ್ತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥** (೯-೧೩)

ಆದರೆ ಯಾರು ಇದಕ್ಕೆ ವಿಪರೀತವಾದ ಭಾವವುಳ್ಳವರಾಗಿರುವರೋ ಯಾರು ದೈವಪ್ರಕೃತಿಯನ್ನು ಅವಲಂಬಿಸಿದವರಾಗಿರುವರೋ ಅವರು ಮಾತ್ರ ಭಗವಂತನ ಸ್ವರೂಪವನ್ನು ಕಂಡುಕೊಳ್ಳುವರು. ಈ ದೈವಪ್ರಕೃತಿಯು ಅವರಿಗೆ ಅನೇಕಜನ್ಮಗಳಲ್ಲಿ ಮಾಡಿರುವ ಪುಣ್ಯಕರ್ಮದ ಫಲವಾಗಿ ಬಂದಿರುತ್ತದೆ. ಅವರು ಪರಮಾತ್ಮನು ಯಾವ ರೂಪದಲ್ಲಿದ್ದಾನೆಂಬುದನ್ನು ಗಣಿಸುವದಿಲ್ಲ. "ಋಷಿಗಳೆಲ್ಲರೂ ವೇದದಲ್ಲಿ ಹುಡುಕುತ್ತಿರುವ ಪರತತ್ತ್ವವು ನಂದನ ಮನೆಯ ಅಂಗಳದಲ್ಲಿ ಓಡಾಡುತ್ತಿದೆ" ಎನ್ನುವರು, ಆ ಮಹನೀಯರು! ಸತ್ಪುರುಷರನ್ನೂ ನಾವು ಹೀಗೆಯೇ ಕಂಡುಹಿಡಿಯ ಬೇಕು; ಅದೂ ಪುಣ್ಯದ ಫಲದಿಂದಲೇ ಗೊತ್ತಾಗುವದು. ಅವರ ರೂಪು, ಸಂಪತ್ತು, ಜಾತಿ, ಕುಲ, ವಿದ್ಯೆ - ಮುಂತಾದವುಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳತಕ್ಕದ್ದಲ್ಲ; ಅವರ ಯೋಗ್ಯತೆಯೇ ಮುಖ್ಯವಾಗಿರಬೇಕು. ದೈವಪ್ರಕೃತಿಯವರು ಪರಮಾತ್ಮನು ಧರಿಸಿರುವ ಶರೀರವನ್ನು ಲಕ್ಷ್ಯದಲ್ಲಿಡದೆ, ಒಳಗಿನ ಪರತತ್ತ್ವಕ್ಕೇ ಹೆಚ್ಚಿನ ಬೆಲೆಯನ್ನು ಕೊಡುವರು. ಈತನೇ ಸಕಲಭೂತಗಳಿಗೂ ಆದಿಯು, ಈತನೇ ಅವ್ಯಯನು - ಎಂದು ಅನನ್ಯ ಮನಸ್ಕರಾಗಿ ಆತನನ್ನೇ ಭಜಿಸುವರು.

ದೈವಪ್ರಕೃತಿಯ ಮಹಾತ್ಮರು ಆ ಭಗವಂತನನ್ನು ಹೇಗೆ ಭಜಿಸುತ್ತಾರೆ? ಎಂದರೆ-

**ಸತತಂ ಕೀರ್ತಯನ್ತೋ ಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥** (೯-೧೪)

ಆತನನ್ನು ಯಾವಾಗಲೂ ಕೀರ್ತನಮಾಡುತ್ತಿರುವರು; ದೃಢವ್ರತದಿಂದ ಸಾಧನ ವನ್ನು ಮಾಡುತ್ತಿರುವರು; ಆತನನ್ನೇ ಭಕ್ತಿಯಿಂದ ನಮಸ್ಕರಿಸುತ್ತಿರುವರು. ಹೀಗೆ ನಿತ್ಯಯುಕ್ತರಾಗಿ ಉಪಾಸನೆಮಾಡುತ್ತಿರುವರು. ವೇದದಲ್ಲಿ ಪರಮಾರ್ಥವನ್ನು ಇದ್ದದ್ದು ಇದ್ದಂತೆ ಅರಿಯುವ ತತ್ತ್ವಜ್ಞಾನವೆಂದೂ ಅದೇ ಪರಮಾರ್ಥವಾದ ಪರಮಾತ್ಮನೇ,

ಭೂತಗಳಿಗೆ ಆದಿಯೂ ಅವ್ಯಯನೂ ಆಗಿರುವ ಅದೇ ಭಗವಂತನೇ, ಸಗುಣಸಾಕಾರ ರೂಪವನ್ನು ಧರಿಸಿಕೊಂಡು ಭಕ್ತರಮೇಲೆ ಅನುಗ್ರಹವನ್ನು ಮಾಡುತ್ತಿರುವವನು ಎಂದು ನಂಬಿ ಸತತವಾಗಿ ಆದರದಿಂದ ಆರಾಧನೆಮಾಡುತ್ತಿರುವ ಉಪಾಸನೆಯೆಂದೂ ಎರಡು ಬಗೆಯ ಜ್ಞಾನವನ್ನು ಉಪದೇಶಮಾಡಿರುತ್ತದೆ. ಇಲ್ಲಿ ಈಗ ಉಪಾಸನೆಯ ಕ್ರಮವನ್ನು ತಿಳಿಸುವದಕ್ಕಾಗಿ ಭಗವಂತನ ಸಗುಣಸಾಕಾರ ರೂಪವನ್ನು ಪ್ರಸ್ತಾಪಿಸಿರುತ್ತದೆ.

ಸಗುಣಭಕ್ತರಾದ ಮಹಾತ್ಮರು, ಆ ಭಗವಂತನನ್ನು ಎಡೆಬಿಡದೆ ಕೀರ್ತನ ಮಾಡುತ್ತಿರುವರು. ಭಗವಂತನ ವೀರ್ಯ, ತೇಜಸ್ಸು, ಕೀರ್ತಿ, ಔದಾರ್ಯ, ಸಂಪತ್ತು - ಮುಂತಾದವುಗಳನ್ನು ಹಾಡಿಹೊಗಳುವದು ಯಾರಿಗೆ ತಾನೆ ಆನಂದ ಕರವಲ್ಲ? ಆಸುರಪ್ರಕೃತಿಯವರನ್ನು ಬಿಟ್ಟರೆ ಮಿಕ್ಕೆಲ್ಲರಿಗೂ ಇದು ಸುಖಕರವಾಗಿಯೇ ಇರುತ್ತದೆ. ಆದರೆ ವಿಶೇಷವಾಗಿ ದೈವಪ್ರಕೃತಿಯವರಾಗಿರುವ ಮಹಾತ್ಮರಿಗೆ ಇದು ನಿತ್ಯಜೀವನವಾಗಿರುತ್ತದೆ. ಅವರು ತಮ್ಮ ಆಯುಸ್ಸನ್ನೆಲ್ಲ ಈ ಕೀರ್ತನೆಗೆ ಹಾಕುತ್ತಾರೆನ್ನ ಬಹುದು. ಅವರು ದೃಢವ್ರತರಾಗಿ ಇದೊಂದನ್ನೇ ತಮ್ಮ ನಿಯಮವಾಗಿಟ್ಟುಕೊಂಡು - ಇಂದ್ರಿಯಗಳನ್ನು ಎಳೆದುಕೊಳ್ಳುವದು, ಅವುಗಳನ್ನು ಬಿಗಿಹಿಡಿದುಕೊಂಡಿರುವದು, ಇದಕ್ಕೂ ಮೂಲವಾಗಿರುವ ಮನಸ್ಸನ್ನು ಸ್ವಾಧೀನವಾಗಿಟ್ಟುಕೊಂಡಿರುವದು, ಯಾರೊಬ್ಬರನ್ನೂ ನೋಯಿಸದಿರುವದು, ಎಲ್ಲರಲ್ಲಿಯೂ ದಯೆಯನ್ನು ತೋರಿಸು ತ್ತಿರುವದು - ಮುಂತಾದ ವ್ರತಗಳನ್ನು ಕಲ್ಪಿಸಿಕೊಂಡು ಪರಮಾತ್ಮನ ಉಪಾಸನೆಯನ್ನು ಬಿಟ್ಟು ಅತ್ತಿತ್ತ ಕದಲದೆ, ಆತನನ್ನೇ ಭಜಿಸುತ್ತಿರುವರು. ಇಂಥ ಭಕ್ತರು ನಿತ್ಯಯುಕ್ತ ರಾಗಿರುವರು; ತಮ್ಮ ಹೃದಯದಲ್ಲಿಯೇ ಇದ್ದುಕೊಂಡಿರುವ ಆ ಪರಮಾತ್ಮನಲ್ಲಿ ಎಂದೆಂದಿಗೂ ಯುಕ್ತರಾಗಿ, ಆತನಿಗೇ ಸೇರಿಕೊಂಡವರಾಗಿ, ಆತನನ್ನು ಬಿಟ್ಟು ಒಂದು ಕ್ಷಣಹೊತ್ತೂ ಅಗಲಿರಲಾರದೆ ಇರುವರು.

ಪರಮಾತ್ಮನಿಗೆ ನಮಸ್ಕಾರವನ್ನು ಮಾಡುವದೆಂದರೆ ಅವರಿಗೆ ಬಹಳ ಪ್ರೀತಿ. ಹಣ್ಣಿನ ಭಾರದಿಂದ ಮರವು ಬಾಗುವಂತೆ ಅವರು ನಮ್ರರಾಗಿರುವರು. ತಾವು ತಗ್ಗಿದಷ್ಟೂ ಪರಮಾತ್ಮನ ಔನ್ನತ್ಯವು ಹೆಚ್ಚಾಗಿ ಕಾಣುತ್ತದೆಯೆಂದೂ ಆದರಿಂದ ತಮಗೆ ಅಭೂತಪೂರ್ವವಾದ ಆನಂದವು ಸಿಕ್ಕುವದೆಂದೂ ಅವರು ಬಲ್ಲರು. ಆಸುರಪ್ರಕೃತಿಯವರು ಪರಮಾತ್ಮನು ಇಲ್ಲದಿದ್ದರೆ ಏನೇನು ಮಾಡಬಹುದೋ ಅದನ್ನೆಲ್ಲ ಮಾಡುವರು; ಆದರೆ ಪರಮಾತ್ಮನು ಇದಾನೆಂದು ಅರಿತಿರುವ ಈ ಮಹಾತ್ಮರು ತಮ್ಮ ಜ್ಞಾನವನ್ನು ಪ್ರದರ್ಶಿಸಲು ಹೋಗುವದಿಲ್ಲ. ಒಂದು ಸಲ ಇಬ್ಬರು ಚಿತ್ರಗಾರರು ಒಬ್ಬರೊಡನೊಬ್ಬರು ಪೈಪೋಟಿಯಿಂದ ಚಿತ್ರವನ್ನು ಬರೆದರು. ಅವರಲ್ಲೊಬ್ಬನು ಒಂದು ದ್ರಾಕ್ಷಿಯ ಹಣ್ಣಿನ ಗೊಂಚಲನ್ನು ಬರೆದನು; ಹಕ್ಕಿಗಳು

ಅದನ್ನು ನಿಜವಾದ ದ್ರಾಕ್ಷಿಯೆಂದೇ ಭ್ರಮಿಸಿ ಹಾರಿ ಬಂದು ಕೊಕ್ಕಿನಿಂದ ಕುಕ್ಕುತ್ತಿದ್ದವು! ಬಳಿಕ ಇನ್ನೊಬ್ಬ ಚಿತ್ರಗಾರನು ಬರೆದಿರುವ ಘರದೆಯ ಹಿಂದಿರುವ ಚಿತ್ರವನ್ನು ನೋಡುವುದಕ್ಕಾಗಿ ಅದನ್ನು ಸರಿಯಿಸುವದಕ್ಕೆ ಹೋದನು. ಆದರೆ ಹೇಳುವದೇನು? ಆ ಘರದೆಯೇ ಚಿತ್ರವಾಗಿತ್ತು! ಗೋಡೆಯಮೇಲೆ ಬರೆದಿದ್ದ ಘರದೆಯ ಚಿತ್ರವನ್ನೇ ಆ ಕುಶಲನಾದ ಚಿತ್ರಗಾರನು ಕೂಡ ನಿಜವಾದ ಘರದೆಯೆಂದು ಭ್ರಮಿಸುವಂತಿತ್ತು, ಆ ಚಿತ್ರ! ಈಗ ಪರಮಾತ್ಮನು ಬರೆದಿರುವ ಚಿತ್ರವನ್ನು ನೋಡಿರಿ! ಆಕಾಶದ ಬಣ್ಣವೇನು, ಅದರಲ್ಲಿರುವ ನಕ್ಷತ್ರಗಳ ಥಳುಕೇನು, ಸೂರ್ಯಚಂದ್ರರ ಬೆಳಕೇನು! ವನದಲ್ಲಿ ಕಾಣುವ ಗಿಡಮರಬಳ್ಳಿಗಳ ಸೊಬಗೇನು, ಅವುಗಳಲ್ಲಿ ಹೂಹಣ್ಣುಗಳ ಸೊಂಪೇನು, ಅಲ್ಲಲ್ಲಿ ಹಾರಾಡುತ್ತಾ ಕಾಣಿಸಿಕೊಳ್ಳುವ, ಬಗೆಬಗೆಯ ಹಕ್ಕಿಗಳ, ಕಲರವದ ಧ್ವನಿಯ ಇಂಪೇನು! ಈ ಪ್ರಕೃತಿಯನ್ನು ಯಾವ ಚಿತ್ರಗಾರನು ತಾನೆ ಅನುಕರಣೆಮಾಡಲಾಪನು? ಪ್ರಜ್ಞಾವಂತರಾದ ಶಿಲ್ಪಿಗಳು ಕೂಡ ಮನಸ್ಸಿನಲ್ಲಿಯೂ ಕಲ್ಪಿಸುವದಕ್ಕಾಗದ ರಚನೆಯ ಈ ಜಗತ್ತನ್ನು ಸಂಕಲ್ಪ ಮಾತ್ರದಿಂದ ಉಂಟುಮಾಡಿರುವ ಆತನ ಪ್ರತಿಭೆಯನ್ನೂ ಶಕ್ತಿಯನ್ನೂ ಯುಕ್ತಿಯನ್ನೂ ಏನೆಂದು ಕೊಂಡಾಡುವದು! ಶಕ್ತರಿಗೆಲ್ಲ ಶಕ್ತ, ಜ್ಞಾನಿಗಳಿಗೆ ಜ್ಞಾನಿ, ಸಿರಿವಂತರಿಗೆಲ್ಲ ಸಿರಿವಂತ! ಆತನ ಶೌರ್ಯದಯಾದಾಕ್ಷಿಣ್ಯಾದಿಗಳನ್ನು ನಾವು ಹೇಗೆತಾನೆ ಸರಿಗಟ್ಟಬಲ್ಲೆವು? ಅವನ ಮುಂದೆ ನಮ್ಮ ಆಟವೆ? ಸರ್ವಕಲ್ಯಾಣಗುಣಗಳೂ ನಿತ್ಯವಾಗಿ ಆತನ ಸ್ವರೂಪವೇ ಆಗಿ ನಿತ್ಯವೂ ನೆಲಸಿರುವ ಆ ಭಗವಂತನು ನಮ್ಮವನು ಎಂದು ನಾವು ಯಾರೂ ಬೇರೆಯಾಗಿ ಇಟ್ಟುಕೊಳ್ಳುವ ಹಾಗಿಲ್ಲ. ಆತನು ನಮ್ಮನ್ನು ನನ್ನವರು ಎಂದು ಚಿತ್ತಕ್ಕೆ ತಂದುಕೊಂಡರೆ, ಅದೇ ನಮ್ಮ ಭಾಗ್ಯ! ನಾವು ಆತನವರಾಗುವದಕ್ಕೆ ಏನುತಾನೆ ಮಾಡಲಾಪೆವು? ಆತನದಲ್ಲದ ಯಾವ ವಸ್ತು ತಾನೆ ನಮ್ಮಲ್ಲಿದೆ? ಏನನ್ನು ಕೊಟ್ಟು ನಾವು ಆ ನಿತ್ಯೈಶ್ವರ್ಯಸಂಪನ್ನನನ್ನು ಒಲಿಸಿಕೊಂಡೇವು? ಇದೆಲ್ಲ ಆತನ ದಯೆ - ಎಂದು ಅನನ್ಯಭಕ್ತರಾಗಿ ಈ ದೈವಪ್ರಕೃತಿಯ ಜನರು ಆತನನ್ನು ಬಾರಿಬಾರಿಗೂ ನಮಸ್ಕರಿಸುತ್ತಿರುವರು.

ಪರಮಾತ್ಮನ ಮಹಿಮೆಯ ಅರಿವು ಉಂಟಾದದ್ದಕ್ಕೆ ಇದೇ ಗುರುತು. ಆಸುರಸಂಪತ್ತಿನ ಜನರು ಇದಕ್ಕೆ ವಿರುದ್ಧವಾಗಿ ಹೆಮ್ಮೆಯಿಂದ ಮೆರೆಯುವರು. ತಮ್ಮ ಶಕ್ತಿಯನ್ನೂ ಯುಕ್ತಿಯನ್ನೂ ಜ್ಞಾನವನ್ನೂ ಹೊಗಳಿಕೊಳ್ಳುತ್ತಾ ತಮ್ಮ ದೊಡ್ಡಸ್ತಿಕೆಯನ್ನು ಯಾರು ಪ್ರದರ್ಶನಮಾಡುವದಕ್ಕೆ ಹವಣಿಸುತ್ತಿರುವರೋ ಅವರು ಅಜ್ಞರು ಎಂದು ಖಂಡಿತವಾಗಿ ನಂಬಬಹುದು. ಯಾರು 'ನಾನು', 'ನಾನು' ಎಂದು ಹೆಮ್ಮೆಯಿಂದ ನನ್ನತನವನ್ನು ಮುಂದಕ್ಕೊಡ್ಡುತ್ತಿರುವರೋ ಅವರೆಲ್ಲರೂ ಅಸುರರು. ಯಾರು

ಅಹಂಕಾರದಿಂದ ಎಲ್ಲರನ್ನೂ ಕಡೆಗಣಿಸುತ್ತಾ ಹಿಂಸೆ, ಅನೃತ-ಮುಂತಾದ ಲೋಕಕಂಟಕವಾದ ಕ್ರೌರ್ಯಸ್ವಭಾವವನ್ನು ಪ್ರಧಾನವಾಗಿ ಮಾಡಿಕೊಂಡು, ಸೆಟೆದುಕೊಂಡು ನಡೆಯುವರೋ ಅವರಿಗೆ ಭಗವಂತನು ಬಹುದೂರವಾಗಿರುವನು. ಆದರೆ ಯಾರು ಅಮಾನಿತ್ವದಿಂದ ನಮ್ರರಾಗಿ ಅಹಂಕಾರವನ್ನು ಮೆಟ್ಟಿಕೊಂಡು ಭಗವಂತನ ಭಜನೆಯಲ್ಲಿಯೇ ಕಾಲವನ್ನು ಕಳೆಯುತ್ತಿರುವರೋ, ಅಂಥ ಮಹಾತ್ಮರ ಹೃದಯದಲ್ಲಿಯೇ ಆ ಭಗವಂತನು ಮನೆಮಾಡಿಕೊಳ್ಳುವನು. ಅಂಥ ಮಹನೀಯರು ಮಾತ್ರವೇ ಆ ಭಗವಂತನ ಸಗುಣರೂಪದ ಮಹಿಮೆಯನ್ನೂ ಪರಭಾವದ ತತ್ತ್ವವನ್ನೂ ಬಲ್ಲವರಾಗಿರುವರು.

## ೬೫. ಭಗವಂತನ ಉಪಾಸನೆಯ ಪ್ರಕಾರಗಳು ೯-(೧೩-೧೯)

(೭-೧೨-೪೭)

ಪರಮಾತ್ಮನು ಲೋಕಾನುಗ್ರಹಕ್ಕಾಗಿ ಅವತಾರಮಾಡಿದರೆ, ಮನುಷ್ಯಾದಿ ರೂಪದಲ್ಲಿ ತೋರಿಕೊಂಡರೆ, ಆತನನ್ನು ಅದೇ ದೇಹವೆಂದು ತಿಳಿಯುವವರು ಅಸುರರು. ಆದರೆ ಮಹಾತ್ಮರಾದವರು, ದೈವಪ್ರಕೃತಿಯಿಂದ ಕೂಡಿದವರು, ಆತನನ್ನು ಸಕಲಭೂತಗಳಿಗೂ ಆದಿಯಾದವನು, ಅವ್ಯಯನಾದವನು-ಎಂಬುದನ್ನು ಅರಿತು ಆತನನ್ನೇ ಭಜಿಸುವರು. ಪರಮಾತ್ಮನು ಹೇಗೆ ಅವ್ಯಯನು? ಆತನೇ ಸಕಲಭೂತಗಳಿಗೂ ಆದಿ ಎಂಬುದು ಹೇಗೆ? —ಎಂಬುದನ್ನು ತಿಳಿಸುವದಕ್ಕಾಗಿಯೇ ಮುಖ್ಯವಾಗಿ ಈ ಒಂಬತ್ತನೆಯ ಅಧ್ಯಾಯವು ಹೊರಟಿರುತ್ತದೆ. ದೈವಪ್ರಕೃತಿಯ ಜನರು ಈ ಸ್ವರೂಪವನ್ನು ಅರಿತುಕೊಂಡು ಆ ಭಗವಂತನನ್ನೇ ಭಜಿಸುತ್ತಿರುವರು.

ಅವರು ಹೇಗೆ ಭಜಿಸುವರು? ಭಜಿಸುವದೆಂದರೆ ಆತನ ಸೇವೆಯನ್ನೇ ಮಾಡುತ್ತಿರುವದು. ಅವರು ನಾನಾ ಪ್ರಕಾರಗಳಿಂದ ಆತನನ್ನು ಸೇವಿಸುತ್ತಾರೆ. ಆತನ ಗುಣಗಳನ್ನು ವರ್ಣನೆಮಾಡುತ್ತಿರುತ್ತಾರೆ! ಭಗವಂತನು ತನ್ನ ಅವತಾರವಿಶೇಷಗಳಲ್ಲಿ ಹೊರಪಡಿಸಿರುವ ಗುಣಗಳನ್ನು ಒಬ್ಬರಿಗೊಬ್ಬರು ಹೇಳಿಕೊಂಡು ಆನಂದಿಸುತ್ತಾರೆ; ದೃಢವ್ರತರಾಗಿ ಪ್ರಯತ್ನಮಾಡುತ್ತಿರುತ್ತಾರೆ. ನಾವು ಮಾಡುವ ವ್ರತಗಳೆಂಬಿವು ನಮಗೆ ಯಾತನೆಯ ಸಾಧನೆಗಳಾಗಿವೆ. ನಿಜವಾದ ವ್ರತವೆಂದರೆ ಪೂಜೆಗೆ ಬೇಕಾದ ಹೂಗಂಧವಸ್ತ್ರಾದಿಗಳನ್ನು ದೊರಕಿಸಿಕೊಳ್ಳುತ್ತಾ ಮನಸ್ಸಿಗೆ ಕಿರಿಕಿರಿಯನ್ನುಂಟುಮಾಡಿಕೊಳ್ಳುವದಲ್ಲ; ಭಕ್ತರು ದೃಢವ್ರತರಾಗಿರುತ್ತಾರೆ ಎಂದರೆ ಭಗವಂತನಲ್ಲಿಯೇ ಅಚಲವಾದ

ಭಕ್ತಿಯಿಂದ ಮನಸ್ಸನ್ನು ನಿಲ್ಲಿಸಿಕೊಂಡಿರುತ್ತಾರೆಂದು ಅರ್ಥ. ಭಗವಂತನ ಗುಣಗಳನ್ನು ಮತ್ತೊಬ್ಬರಿಗೆ ಹೇಳುವದು, ತಾವು ನಡತೆಯಲ್ಲಿ ಭಗವಂತನ ಸಂಬಂಧವಿಲ್ಲದೆ ಇರುವದು - ಹೀಗಿದ್ದರೆ ನಿಜವಾದ ಭಕ್ತರಾದಾರೆ? "ಭೂತದಯಾಪಶ್ಚಾತ್ತಾಪಗಳ ವಿಷಯದಲ್ಲಿ ಉಪನ್ಯಾಸವನ್ನು ಮಾಡುವದಕ್ಕೆ ಹೋಗಬೇಕಾಗಿದೆ, ಸುಮ್ಮನೆ ತಂಟೆ ಮಾಡಬೇಡಿರಿ" ಎಂದು ದೀನಾಂಧರನ್ನು ಧಿಕ್ಕರಿಸಿ ಓಡಿಹೋಗುತ್ತಿರುವ ಉಪನ್ಯಾಸಕ ನಂತೆ ಭಕ್ತರು ಬರಿಯ ಹರಟೆಯವರಲ್ಲ. ಅವರು ತಾವು ಸ್ವತಃ 'ದೃಢವ್ರತರಾಗಿ ಯತ್ನಮಾಡುತ್ತಿರುವರು.' ಅವರು ಬರಿಯ ಮಾತಿನವರಲ್ಲ, ಮಾಡುವವರು, ಅನುಭವಿಗಳು. ಅಂಥವರು ಸ್ವಲ್ಪ ಮಾತಾಡಿದರೂ ಸಾಕು, ಕೇಳಿದವರ ಮನಸ್ಸಿನ ಮೇಲೆ ಪರಿಣಾಮವಾಗುವದು. ಮತ್ತು ಅವರು ಭಗವಂತನಿಗೆ ನಮಸ್ಕಾರವನ್ನು ಮಾಡುತ್ತಿರುವರು. ನಮಸ್ಕಾರವೆಂದರೆ ಅಹಂಕಾರವನ್ನು ತುಳಿದಿಡುವದು. ನಾನೆಂಬ ಹೆಮ್ಮೆಯನ್ನು ಮೆಟ್ಟಿಹಾಕಿ ಭಗವಂತನನ್ನೇ ಎಲ್ಲಾ ಭಾವನೆಗಳಿಂದಲೂ ಭಜಿಸುತ್ತಾ ಅವರು ನಿತ್ಯಯುಕ್ತರಾಗಿ, ಭಗವಂತನಲ್ಲಿಯೇ ಸಮಾಹಿತಚಿತ್ತರಾಗಿ ಆತನನ್ನೇ ಸೇರಿಕೊಂಡು ಉಪಾಸನೆಮಾಡುತ್ತಿರುವರು; ತಮ್ಮ ಸರ್ವಸ್ವವನ್ನೂ, ತಮ್ಮನ್ನು ಕೂಡ, ಆತನಿಗೇ ಅರ್ಪಿಸಿ, ಸಕಲವೂ ಆ ವಾಸುದೇವನೇ ಎಂಬ ಭಾವದಿಂದ ಭಜಿಸುತ್ತಿರುವರು.

ಅವರು ಹೇಗೆ ಹೇಗೆ ಉಪಾಸನೆ ಮಾಡುತ್ತಾರೆ? ಎಂದರೆ—

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜನ್ತೋ ಮಾಮುಪಾಸತೇ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥** (೯-೧೫)

ಕೆಲವರು ಜ್ಞಾನಯಜ್ಞದಿಂದ ಆತನನ್ನು ಏಕನೆಂದು ಅರಿತು ಉಪಾಸನೆ ಮಾಡುವರು. ಒಬ್ಬ ಭಗವಂತನೇ ಪರಮಾರ್ಥವು ಎಂಬ ಸಮ್ಯಗ್ದರ್ಶನರೂಪವಾದ ಜ್ಞಾನವೇ ಒಂದು ಯಜ್ಞವು. ಭಗವಂತನಿಗೆ ದ್ರವ್ಯಯಜ್ಞಗಳಿಗಿಂತಲೂ ಈ ಜ್ಞಾನ ಯಜ್ಞದಲ್ಲಿ ಪ್ರೀತಿ ಹೆಚ್ಚು. ಇನ್ನು ಕೆಲವರು ಅದೇ ಭಗವಂತನೇ ಸೂರ್ಯ, ಚಂದ್ರ, ಅಗ್ನಿ - ಮುಂತಾದ ದೇವತೆಗಳ ರೂಪದಲ್ಲಿರುವನೆಂದು ತಿಳಿದು ಪೃಥಕ್ತ್ವದಿಂದ ಆತನ ಬಗೆಬಗೆಯ ರೂಪಗಳನ್ನು ಆರಾಧಿಸುವ ಮೂಲಕ - ಆತನನ್ನು ಉಪಾಸನೆ ಮಾಡುತ್ತಿರುವರು.

ಭಗವಂತನ ಪರಮಾರ್ಥರೂಪವನ್ನು ತಿಳಿದು ಏಕತ್ವದಿಂದಲೂ ಪೃಥಕ್ತ್ವ ದಿಂದಲೂ ಉಪಾಸನೆಮಾಡುವದಕ್ಕೆ ದೈವಪ್ರಕೃತಿಯೇ ಬೇಕೆಂಬುದನ್ನು ತಿಳಿಸಿದ್ದಾಯಿತು. ಈಗ ಭಗವಂತನು ತನ್ನ ಸ್ವರೂಪವನ್ನು ಬಗೆಬಗೆಯಾಗಿ ವರ್ಣಿಸಿ ತಿಳಿಸುತ್ತಾನೆ.

**ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ ।**
**ಮನ್ತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥** (೯-೧೬)

ಕಾಣುವದೆಲ್ಲ ಪರಮಾತ್ಮನ ವಿಭೂತಿಯೇ, ಮಾಡುವದೆಲ್ಲ ಪರಮಾತ್ಮನ ಸೇವೆಯೇ ಎಂಬ ಭಾವನೆಯು ಬಲುದೊಡ್ಡದು. ಜ್ಞಾನಿಗಳಿಗೆ ಈ ಭಾವನೆಯು ಸಹಜವಾಗಿರುತ್ತದೆ. ಪರಮಾತ್ಮನು ಎಲ್ಲಕ್ಕೂ ಕಾರಣನಾಗಿರುವದರಿಂದ ಸರ್ವಾತ್ಮ ನಾಗಿರುತ್ತಾನೆ. ಪರಮಾತ್ಮನೇ ಯಜ್ಞಯಾಗಗಳ ಸ್ವರೂಪದಲ್ಲಿರುವವನು; ಯಜ್ಞದಲ್ಲಿ ಉಪಯೋಗಿಸುವ ದ್ರವ್ಯಗಳು, ಉಚ್ಚರಿಸುವ ಮಂತ್ರಗಳು, ಆಜ್ಯಾದಿ ಹೋಮದ್ರವ್ಯ ಗಳು, ಹವನಕ್ರಿಯೆ; ಹೀಗೆಯೇ ಪಿತೃಕರ್ಮಗಳಲ್ಲಿ ಕಾಣುವ ಬೇರೆಬೇರೆಯ ಮಂತ್ರಾದಿಗಳು ಎಲ್ಲವೂ ಆತನೇ. ನಾವು ಆತನನ್ನು ಪೂಜಿಸುತ್ತಿರುವಾಗ ಉಪ ಯೋಗಿಸುವ ದ್ರವ್ಯಗಳೆಲ್ಲ ಗಂಧ, ಹೂ, ಹಣ್ಣು, ಕಾಯಿ, ಧೂಪ, ದೀಪ, ನೈವೇದ್ಯ, ಕಲಶ, ಮಂಟಪ - ಎಲ್ಲವೂ ಆ ಪರಮಾತ್ಮನೇ; "ಸರ್ವಂ ವಿಷ್ಣುಮಯಂ ಜಗತ್" ಎಂಬ ಭಾವನೆಯು ನಮ್ಮ ಹೃದಯದಲ್ಲಿ ಮೂಡಿದರೆ, ಅಹಂಕಾರಕ್ಕೆ ಎಡೆಯೆಲ್ಲಿರುವದು? ಮಕ್ಕಳು ಆಟದಲ್ಲಿ ಮಗ್ನರಾಗಿರುವಂತೆ ನಾವು ಪರಮಾತ್ಮನ ಚಿಂತನೆಯಲ್ಲಿ ಮುಳುಗಿದ್ದರೆ ಅದೇ ನಿಜವಾದ ಉಪಾಸನೆ. ಜ್ಞಾನಿಗಳಿಗೆ ವಿವೇಕದಿಂದ ಬರುವ ಈ ಭಾವನೆಯನ್ನು ನಾವು ಹೃದಯದಲ್ಲಿ ಹೇಗಾದರೂ ಮಾಡಿ ಪ್ರಯತ್ನ ಪೂರ್ವಕವಾಗಿ ತಂದುಕೊಳ್ಳಬೇಕು.

**ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ಸಾಮ ಯಜುರೇವ ಚ ॥** (೯-೧೭)

ಆ ಭಗವಂತನೇ **ತಂದೆ**ಯು, ಎಂದರೆ ಜಗತ್ತಿಗೆಲ್ಲ ಜನ್ಮವನ್ನು ಇತ್ತಿರುವಾತನು. ಆತನೇ **ತಾಯಿ**ಯು, ನಿಃಸ್ವಾರ್ಥಪ್ರೇಮದ ಮುದ್ದೆಯಾಗಿ ನಮ್ಮನ್ನೆಲ್ಲ ಕಾಪಾಡುತ್ತಿರು ವವನು ಆತನೇ; ಕುಪುತ್ರರಿರಬಹುದು, ಆದರೆ ಅವರನ್ನು ಕಡೆಗಣಿಸುವ ತಾಯಿ ಇರುತ್ತಾಳೆಯೆ? ಅಂಥ ನಿರವಧಿಕ ನಿರ್ಹೇತುಕ ಪ್ರೇಮಸಾಗರನು, ಆ ದೇವನು! ಎಲ್ಲವನ್ನೂ ಗೊತ್ತುಪಡಿಸಿ ಅವರವರ ಕರ್ಮಕ್ಕೆ ತಪ್ಪದೆ ಫಲವನ್ನು ವಿಧಾನಮಾಡುತ್ತಿರುವ **ಧಾತ**ನಾದ ಸರ್ವಜ್ಞನು ಆತನೇ. ಆತನೇ **ಪಿತಾಮಹ**ನು. ತಂದೆಗೆ ಮನೆಯ ಯಜಮಾನಿಕೆಯಿರುತ್ತದೆ; ಆದರೆ ಮಿಕ್ಕದ್ದೆಲ್ಲವನ್ನೂ ಬಿಟ್ಟು ಮಕ್ಕಳಿಗೆ ಹಿತಾನುಶಾಸನವನ್ನು ಮಾಡುವವನು ಅಜ್ಜನು. ಹೀಗೆ ಲೋಕಕ್ಕೆಲ್ಲ ಹಿತವನ್ನು ತಿಳಿಸಿರುವ ದಯಾಳು, ಆ ಭಗವಂತನು! ಆತನೇ **ವೇದ್ಯ**ವು. ಲೋಕದಲ್ಲಿ ಅದನ್ನು ತಿಳಿಯಬೇಕು, ಇದನ್ನು ತಿಳಿಯಬೇಕು ಎಂದು ಕುಮತಿಗಳು ಭಾವಿಸುತ್ತಿರುವರು; ಆದರೆ ಯಾವದನ್ನು

ತಿಳಿದರೆತಾನೆ ಎಲ್ಲವನ್ನೂ ತಿಳಿದಂತೆ ಆಗುತ್ತದೆ, ಅಜ್ಞಾನವು ನಿಃಶೇಷವಾಗಿ ಹೋಗುತ್ತದೆ? ಅಂಥ ನಿಜವಾದ ಜ್ಞೇಯವು ಆತನೊಬ್ಬನೇ; "ನಾರಾಯಣಂ ಮಹಾಜ್ಞೇಯಂ" ಎಂದು ಶ್ರುತಿಯು ಹೇಳುವದು ಆತನನ್ನೇ. ಲೋಕದಲ್ಲಿ ಪವಿತ್ರವಾದ ತೀರ್ಥಾದಿಗಳುಂಟು. ಪಾಪಿಗಳನ್ನು ಪರಿಶುದ್ಧಗೊಳಿಸುವ ಪ್ರಾಯಶ್ಚಿತ್ತಗಳುಂಟು; ಆದರೆ ಆತನು ಅಂಥ ಪವಿತ್ರಗಳಿಗೆಲ್ಲ **ಪವಿತ್ರ**ರೂಪನು! ತಾನು ಅಪವಿತ್ರನಾಗಿರಲಿ ಪವಿತ್ರನಾಗಿರಲಿ, ಯಾವ ಅವಸ್ಥೆಯಲ್ಲಿ ಆ ಮಹಾತ್ಮನನ್ನು ಸ್ಮರಿಸಿದರೂ ಮನುಷ್ಯನು ಒಳಗೂ ಹೊರಗೂ ಶುಚಿಯಾಗಿ ಪರಮಪವಿತ್ರನಾಗುವನು. ಅಂಥ ಪವಿತ್ರಸ್ವರೂಪನು, ಆ ಭಗವಂತನು! ವೇದದ ಸಾರವಾಗಿರುವ **ಓಂಕಾರವು** ಆತನೇ, ಲೋಕಕ್ಕೆಲ್ಲ ತಿಳಿವಳಿಕೆಯನ್ನು ಕೊಡುವ ವೇದದ **ಋಕ್ಕು**ಗಳೂ **ಸಾಮ**ಗಳೂ **ಯಜುಸ್ಸು**ಗಳೂ ಆತನ ವಿಭೂತಿಗಳೇ.

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥** (೯-೧೮)

ಕೊನೆಗೆ ನಾವು ಎಲ್ಲರೂ ಹೋಗಿ ಸೇರುವ ಗತಿಯು ಆತನೇ; ಎಲ್ಲರನ್ನೂ ಕಾಪಾಡುವ **ಭರ್ತನು**, ಧಣಿ, ಆತನೇ; ಎಲ್ಲವನ್ನೂ ಆಳುವ **ಪ್ರಭು** ಆತನೇ. ಕಷ್ಟದಲ್ಲಿ ಸಿಕ್ಕಿರುವಾಗ ಮಿಕ್ಕ ಪ್ರಭುಗಳು ಕೈಬಿಟ್ಟುಬಿಡಬಹುದು; ಆದರೆ ಈತನು ಮಾತ್ರ ನಮ್ಮ ತಪ್ಪುಗಳಿಗೆ ಕಷ್ಟವನ್ನು ಅನುಭವಿಸುವ ಮೂಲಕ ಪ್ರಾಯಶ್ಚಿತ್ತವನ್ನು ಮಾಡಿಸಿ ಶುದ್ಧರನ್ನಾಗಿ ಮಾಡಿ ಕೊನೆಗೂ ನಮಗೆ ಪರಮಪುರುಷಾರ್ಥವನ್ನು ಕೊಡಬಲ್ಲವನು. ಆದ್ದರಿಂದ ನಿಜವಾದ ಪ್ರಭು ಈತನೇ.

**ಸಾಕ್ಷಿಯು ಈತನೇ**. ಇದು ಬಹು ದೊಡ್ಡ ಭಾವನೆ. ಸಾಕ್ಷಿ ಎಂದರೆ ನೇರಾಗಿ ನೋಡುವಾತನು. ಈ ಭಾವವನ್ನು ಚೆನ್ನಾಗಿ ಅರಿತುಕೊಂಡರೆ ನಮ್ಮ ಎಷ್ಟೋ ತಪ್ಪು ಕಲ್ಪನೆಗಳು ಹಾರಿಹೋಗುವವು, ನಮಗೆ ಮಂಗಲವಾಗುವದು. ಪರಮಾತ್ಮನು ನಮ್ಮಲ್ಲಿರುವ ಸಾಕ್ಷಿಸ್ವರೂಪವು, ಮಿಕ್ಕದ್ದೆಲ್ಲ ಸಾಕ್ಷ್ಯವಾಗಿರುತ್ತದೆ. ನಮ್ಮ ಚಕ್ಷುಸ್ಸೇ ಮುಂತಾದ ಕರಣಗಳಿಗೆ ಚೈತನ್ಯಶಕ್ತಿಯು ಈತನಿಂದಲೇ ಬಂದಿರುತ್ತದೆ. ಆದ್ದರಿಂದ ಆ ಕರಣಗಳನ್ನು ಇವನು ತನ್ನ ಚೈತನ್ಯರೂಪದಿಂದ ಬೆಳಗುತ್ತಿರುವನು. ಸಾಕ್ಷ್ಯವು ಬದಲಾಯಿಸುತ್ತಿದ್ದರೂ ಈ ಸಾಕ್ಷಿಸ್ವರೂಪವು ಮಾರ್ಪಡುವದಿಲ್ಲ; ಇಂಥ ಕೂಟಸ್ಥ ಚೈತನ್ಯವೇ ನಮ್ಮಲ್ಲಿ ಸಾಕ್ಷಿಯಾಗಿರುವ ಪರಮಾತ್ಮನು. ಬಾಲ್ಯವು ಹೋಯಿತು, ಯೌವನವು ಬಂದಿತು; ಇಂದ್ರಿಯಗಳ ದೋಷವು ಹೋಯಿತು, ಅವುಗಳ ಸ್ವಾಭಾವಿಕವಾದ ಶಕ್ತಿ ಬಂತು; ಅಥವಾ ಕರಣಗಳು ಶಕ್ತಿಗುಂದಿದವು, ಮುಪ್ಪು ಬಂತು ಎಂಬುದೆಲ್ಲವನ್ನೂ ನೋಡುತ್ತಿರುವವನು, ಯಾವ ಕರಣವನ್ನೂ ಬಯಸದೆ ಚೈತನ್ಯ

ರೂಪದಿಂದಲೇ ಎಲ್ಲವನ್ನೂ ಕಾಣುತ್ತಿರುವವನು. ನನ್ನ ಮತ್ತು ನಿಮ್ಮೆಲ್ಲರ ಸಾಕ್ಷಿಯಾದ ಈ ಪರಮಾತ್ಮನೇ, ಇಡಿಯ ಸಂಸಾರದ ಕೆಸರಿನಲ್ಲಿ ಅದ್ದಿ ತೆಗೆದರೂ ಅದರ ಕಶ್ಮಲವು ಅಂಟದ, ಎಲ್ಲವನ್ನೂ ತನ್ನ ಚೈತನ್ಯದ ಬೆಳಕಿಗೆ ಹೊರಚ್ಚುಮಾಡಿಕೊಂಡೇ ನೋಡುತ್ತಿರುವ ಈ ನಿತ್ಯಶುದ್ಧಸಾಕ್ಷಿಚೈತನ್ಯಸ್ವರೂಪನಾದ ಪರಮಾತ್ಮನೇ, ನಮ್ಮೆಲ್ಲರ-ಯಾವ ತಾರತಮ್ಯವೂ ಇಲ್ಲದೆ ಎಲ್ಲರಿಗೂ - ಆತ್ಮನಾಗಿರುವವನು ಎಂಬ ಕಲ್ಪನೆಯು ಎಂಥ ಧೈರ್ಯವನ್ನು, ಎಂಥ ಉತ್ಸಾಹವನ್ನು, ಎಂಥ ಆನಂದವನ್ನು ಕೊಡಬಲ್ಲದು! ಈ ದೇವನು ಗುಡಿಯಲ್ಲಿರುವ ದೇವರಂತೆ ಅಲ್ಲ! ಯಾರಾದರೂ ಮೈಲಿಗೆಯವರು ಮುಟ್ಟಿದರೆ ಮತ್ತೆ ಸಂಸ್ಕಾರವಾಗಬೇಕು, ಆ ದೇವರಿಗೆ! ಆ ದೇವರು ನಮ್ಮ ಭಾವನೆಯಿಂದ ಮಡಿಯಾಗುವನು, ಅಥವಾ ಮೈಲಿಗೆಯಾಗುವನು. ಅಂಥ ಅದುರಾಟದ ದೇವರಲ್ಲ, ಈ ನನ್ನ ನಿಮ್ಮ ಹೃದಯದಲ್ಲಿ ಸಾಕ್ಷಿಯಾಗಿರುವ ಪರಮಾತ್ಮನು! ಕೂಟಸ್ಥನಾಗಿ, ನಿತ್ಯಶುದ್ಧಬುದ್ಧಮುಕ್ತಸ್ವಭಾವ ನಾಗಿರುವಾತನು. ಆ ಸ್ವರೂಪವನ್ನು ಜ್ಞಾನಿಗಳಂತೆ ನಾವು ತಿಳಿದುಕೊಳ್ಳುವದು ಹಾಗಿರಲಿ, ಸುಮ್ಮನೆ ಆ ಭಾವನೆ ನಮ್ಮ ಹೃದಯದಲ್ಲಿ ಮೂಡಿದರೂ ಸಾಕು, ಆ ಭಗವಂತನ ದಯೆಯಿಂದ, ಕೂಡಲೆ ಅಲ್ಲಿಂದ ಮುಂದಕ್ಕೆ ನಮ್ಮ ಜೀವನಕ್ರಮವೇ ಬದಲಾಯಿಸಿಬಿಡುತ್ತದೆ. ಇಂಥ ಸಾಕ್ಷಿಯು, ಆ ಭಗವಂತನು!

**ಆತನೇ ನಿವಾಸನು**. ಇಡಿಯ ಜಗತ್ತು ಆತನಲ್ಲಿಯೇ ಇದ್ದುಕೊಂಡಿದೆ. ನಮಗೆ ವಾಸಕ್ಕೆ ಯೋಗ್ಯನು ಆತನೊಬ್ಬನೇ. ಇನ್ನು ಯಾವ ಸ್ಥಳವನ್ನು ನಮ್ಮ ವಾಸಸ್ಥಳವಾಗಿ ಮಾಡಿಕೊಂಡರೂ ಅದು ನಮಗೆ ನಿತ್ಯವಾಗಿ ಇದ್ದಂತೆ ಇರುವದಿಲ್ಲ; ಯಾವಾಗಲೂ ಪ್ರಿಯವಾಗಿಯೂ ಇರುವದಿಲ್ಲ. ಆತನೇ **ಶರಣನು**, ನಮ್ಮನ್ನು ಆಪತ್ಕಾಲದಲ್ಲಿ ಕಾಪಾಡುವದಕ್ಕೆ ತಕ್ಕ ಆಶ್ರಯವು. ಶತ್ರುಗಳ ಭೀತಿ, ರೋಗಗಳ ಉಪಟಳ, ಮುಪ್ಪಿನ ಮರುಳು, ಸಾವಿನ ಸಂಕಟ - ಯಾವದರಿಂದ ನಾವು ತಪ್ಪಿಸಿಕೊಂಡು ಹಾಯಾಗಿರಬೇಕೆಂದು ಬಯಸಿದರೂ ನಮಗೆ **ಸುಹೃತ್ತು**, ನೆಚ್ಚಿನ ಗೆಳೆಯನು. ನಾವು ಕೊಟ್ಟಿದ್ದನ್ನು ಪ್ರೀತಿಯಿಂದ ತೆಗೆದುಕೊಂಡು, ನಾವು ಕೇಳಿದ್ದನ್ನು ಕೊಟ್ಟು, ನಮ್ಮ ಗುಣಗಳನ್ನು ಹೊರಗೆಡಹಿ, ನಮ್ಮ ಗುಟ್ಟುಗಳನ್ನು ರಹಸ್ಯವಾಗಿಟ್ಟು ಎಂದೆಂದಿಗೂ ನಮ್ಮಲ್ಲಿ ಒಂದೇ ಸಮವಾದ ಸ್ನೇಹವನ್ನು ಕೋರುವ ಪರಮಮಿತ್ರನು ಆತನನ್ನು ಬಿಟ್ಟರೆ ಯಾರಿರುವನು?

ಆತನೇ ಜಗತ್ತಿಗೆಲ್ಲ **ಪ್ರಭವನು**, ಉತ್ಪತ್ತಿಸ್ಥಾನವು! ಜಗತ್ತಿನಲ್ಲಿ ಮತ್ತೆಲ್ಲವೂ ಕಾರ್ಯವೇ ಹೊರತು, ನಿಜವಾದ ಕಾರಣವಲ್ಲ. ಆತನೇ ಎಲ್ಲಕ್ಕೂ **ಪ್ರಲಯವು**, ಜಗತ್ತೆಲ್ಲವೂ ಪ್ರಲಯವಾದರೆ ಅವನಲ್ಲಿಯೇ ನಿಂತುಕೊಳ್ಳುವದು, ಜಗತ್ತಿಗೆ ಆತನೇ

**ಸ್ಥಾನವು**; ಸ್ಥಿತಿಕಾಲದಲ್ಲಿ ಆತನನ್ನೇ ಆಶ್ರಯಿಸಿ ಜಗತ್ತು ನಿಂತಿರುತ್ತದೆ. ಆತನೇ **ನಿಧಾನವು**; ಬ್ಯಾಂಕಿನಲ್ಲಿ ನ್ಯಾಸವಾಗಿ ನಮ್ಮ ಒಡವೆಗಳನ್ನು ಇಡುವಂತೆ ನಮ್ಮ ಕರ್ಮಗಳನ್ನು ಇಡುವ ಸ್ಥಾನವು ಆತನೇ, ನಮ್ಮ ಪಾಪಪುಣ್ಯಗಳನ್ನು ಸ್ವಲ್ಪವೂ ತಪ್ಪದಂತೆ ಲೆಕ್ಕವಿಟ್ಟು ಅವುಗಳಿಗೆ ತಕ್ಕ ಫಲವನ್ನು ಕೊಡುವ ಮಹಾಕರಣಿಕನು, ಆತನು, ಜಗತ್ತಿಗೆ **ಅವ್ಯಯವಾದ ಬೀಜವು** ಆತನೇ; ಬಿತ್ತುವ ಬೀಜವು ಹುಳಿಯುವಂತೆ ಹುಳಿಯುವ ಬೀಜವಲ್ಲ, ಪ್ರಲಯದಲ್ಲಿಯೂ ನಾಶವಾಗದ ಒಂದೇ ಸಮವಾಗಿರುವ, ಉತ್ತಮವಾದ ಫಲವನ್ನು ಕೊಡುವ, ಎಂದಿಗೂ ನಾಶವಾಗದ ಬೀಜರೂಪವಾದ ಸ್ಥಿತಿಯ ಅವ್ಯಕ್ತನೂ ಆತನೇ.

ಹೀಗೆ ಆತ್ಮನನ್ನು ಏಕತ್ವದಿಂದಲೂ ಪೃಥಕ್ತ್ವದಿಂದಲೂ ಭಕ್ತರು ಉಪಾಸನೆ ಮಾಡುತ್ತಿರುವರು. ಒಂದೇ ರವೆಯಲ್ಲಿ ಬಗೆಬಗೆಯ ಅಡಿಗೆಗಳನ್ನು ಜನರು ಮಾಡುವಂತೆ, ಒಬ್ಬ ಪರಮಾತ್ಮನನ್ನೇ ಬಗೆಬಗೆಯಲ್ಲಿ ಉಪಾಸನೆಮಾಡಿ ಆನಂದಿಸುವರು, ಆ ಮಹಾತ್ಮರು.

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥** (೯-೧೯)

ವೈದಿಕವಾಙ್ಮಯದಲ್ಲಿ ಸೂರ್ಯನಿಗೆ ಬಹು ಹೆಚ್ಚಿನ ಸ್ಥಾನವಿದೆ. ಸೂರ್ಯಮಂಡಲದಲ್ಲಿ ಪರಮಾತ್ಮನು ಹಿರಣ್ಯಗರ್ಭರೂಪದಿಂದ ಇರುತ್ತಾನೆಂಬ ಭಾವನೆಯನ್ನು ಆಗಲೆ ತಿಳಿಸಿರುತ್ತೇನೆ. ಭೌತಿಕಶಾಸ್ತ್ರದೃಷ್ಟಿಯಿಂದಲೂ ಸೂರ್ಯನಿಗೆ ಹೆಚ್ಚಿನ ಬೆಲೆಯಿದೆ. ಏಕೆಂದರೆ ನಮ್ಮ ಬಾಳೆಲ್ಲವೂ ಸೂರ್ಯನನ್ನೇ ಅವಲಂಬಿಸಿರುತ್ತದೆ, ನಮ್ಮ ಪೃಥಿವಿಗೆ ಬರುವ ಸೆಕೆಯೂ ಬೆಳಕೂ ಆತನಿಂದಲೇ ಬರುತ್ತದೆ, ಭೂಮಿಯಲ್ಲಿ ಬೆಳೆಯುವ ಹೂ, ಹಣ್ಣು - ಮುಂತಾದವುಗಳೆಲ್ಲವೂ ಸೂರ್ಯನ ಬಿಸಿಲಿನ ತಾಪದಿಂದಲೇ ಬೆಳೆದು ಮಾಗಬೇಕಾಗಿದೆ. ನಮ್ಮ ಶರೀರದ ರಕ್ತದ ಔಷ್ಣ್ಯವು ಸೂರ್ಯನನ್ನು ಆಶ್ರಯಿಸಿರುತ್ತದೆ. ನಮ್ಮೆಲ್ಲರಿಗೂ ಬಿಸಿಲು ಕೊಟ್ಟು ಕಾಯಿಸುವ ಸೂರ್ಯನು ನಿಜವಾಗಿ ಭಗವಂತನೇ. ಸಮುದ್ರಾದಿಗಳಲ್ಲಿರುವ ನೀರನ್ನು ಆವಿಯ ರೂಪದಲ್ಲಿ ಮಾರ್ಪಡಿಸಿ ತೆಗೆದುಕೊಂಡು ಮತ್ತೆ ಕಾಲಾನುಕಾಲಕ್ಕೆ ಮೋಡಗಳನ್ನು ಮಾಡಿ ಮಳೆಗರೆಯುವ ಸೂರ್ಯಶಕ್ತಿಯು ಆ ಭಗವಂತನದೇ.

ಇಷ್ಟೇ ಅಲ್ಲ. ದೇವತೆಗಳಿಗೆ ಅಮೃತವಾಗಿರುವಾತನೂ ಮನುಷ್ಯರಿಗೆ ಮೃತ್ಯುವಾಗಿರುವಾತನೂ ಅವನೇ. ಆ ಅಮೃತದ ಬಲದಿಂದ ದೇವತೆಗಳು ತಾವು ಇರುವಷ್ಟು ಕಾಲವೂ ವಿವಿಧ ಸಿದ್ಧಿಗಳಿಂದ ಕೂಡಿ ಶಕ್ತಿವಂತರಾಗಿರುವರು. ಮನುಷ್ಯರಿಗೆ ಕಾಲದಲ್ಲಿ ಆಯಸ್ಸು ಮುಗಿಯುತ್ತಲೂ ಅವರನ್ನು ಈ ದೇಹದಿಂದ ಅಗಲಿಸಿ ಬೇರೆ

ಜನ್ಮಕ್ಕೆ ಒಯ್ಯುವ ಮೃತ್ಯುವೂ ಪರಮಾತ್ಮನೇ. ಪರಮಾತ್ಮನು ಮೃತ್ಯುರೂಪದಲ್ಲಿರುವನೆಂದು ತಿಳಿದರೆ ಯಾವ ಪ್ರಯೋಜನವಿದೆ? - ಎಂದು ಕೆಲವರು ಕೇಳಬಹುದು. ಆದರೆ ಸ್ವಲ್ಪ ಲಕ್ಷ್ಯವಿಟ್ಟು ನೋಡಿರಿ. ಮನುಷ್ಯನು ಮಾಡಬಾರದ ಕರ್ಮಗಳನ್ನು ಮಾಡಿ, ಈ ಜನ್ಮದಲ್ಲಿ ಈ ಶರೀರದಿಂದ ಪುಣ್ಯವನ್ನಾಗಲಿ ಸುಖವನ್ನಾಗಲಿ ಗಳಿಸುವದಕ್ಕೆ ಅನರ್ಹನಾಗಿರುವಾಗ, ದಯಾವಂತನಾದ ಆ ದೇವನು ಸ್ವಲ್ಪವೂ ತಳುವದೆ, ಮೃತ್ಯುರೂಪದಿಂದ ಬಂದು ನಮ್ಮನ್ನು ಈ ದೇಹದಿಂದ ಬಿಡುಗಡೆ ಮಾಡುವನು. ಅಸಹ್ಯವಾದ ವೇದನೆಯನ್ನು ಕೊಡುತ್ತಿರುವ ಹುಣ್ಣನ್ನು ಕೊಯ್ದು ನಮಗೆ ದುಃಖನಿವಾರಣೆಯನ್ನು ಮಾಡುವ ಶಸ್ತ್ರವೈದ್ಯನಂತೆಯೂ, ತಡೆದುಕೊಳ್ಳುವದಕ್ಕೆ ಆಗದಂಥ ವ್ಯಥೆಯನ್ನು ಕೊಡುತ್ತಿರುವ ಅಜೀರ್ಣಾಹಾರವನ್ನು ಭೇದಿಯ ಮದ್ದಿನಿಂದ ತೊಲಗಿಸುವ ಔಷಧವೈದ್ಯನಂತೆಯೂ ಆ ದಯಾಮಯನು ನಮ್ಮ ಹಿತಕ್ಕಾಗಿಯೇ ಕಾಲಕ್ಕೆ ಸರಿಯಾಗಿ ಮೃತ್ಯುರೂಪದಿಂದ ಬರುವನೆಂದರೆ ಮನಸ್ಸಿಗೆ ಎಷ್ಟು ಸಮಾಧಾನ! ಮೃತ್ಯುವು ನಿಜವಾಗಿ ಭಗವಂತನೇ ಎಂದೂ ಭಗವಂತನು ನಮ್ಮ ಆತ್ಮನೇ ಎಂದೂ ಯಾವ ಮಹಾತ್ಮರು ಅರಿತುಕೊಂಡಿರುವರೋ ಅವರಿಗೆ ಮೃತ್ಯುವು ಸಮೀಪಿಸಿದರೆ ನಗುನಗುತ್ತಾ ಬರಮಾಡಿಕೊಳ್ಳುವರು. ಮೃತ್ಯುವು ತಮ್ಮ ಆತ್ಮನೇ ಎಂದು ಯಾರು ಉಪಾಸನೆಮಾಡುವರೋ ಅವರಿಗೆ ಮರಣ ಭಯವೆಲ್ಲಿಯದು? ಮಿಕ್ಕದ್ದೆಲ್ಲಕ್ಕೂ ಮೃತ್ಯುವು ಭಯಂಕರನಾಗಿರುತ್ತಾನೆ; ಆದರೆ ಮೃತ್ಯುವಿನ ಆತ್ಮನೇ ಆ ಭಗವಂತನು, ಆತನೇ ನಮ್ಮಗಳೆಲ್ಲರ ಆತ್ಮನು ಎಂದು ಭಾವನೆಮಾಡುವವರಿಗೆ ಕೂಡ ಧೈರ್ಯವು ಹೆಚ್ಚಿ ಆಯಸ್ಸೂ ವೃದ್ಧಿಯಾಗುವದು.

ಆ ಪರಮಾತ್ಮನೇ ಸತ್ತು ಮತ್ತು ಅಸತ್ತು. ಕಾರ್ಯರೂಪವಾಗಿರುವದು, ಕಾರಣರೂಪವಾಗಿರುವದು, ಸ್ಥೂಲವಾಗಿರುವದು, ಸೂಕ್ಷ್ಮರೂಪವಾಗಿರುವದು, ಎಲ್ಲವೂ ಆತನೇ. ಆ ಪರಮಾತ್ಮನು ಇಂಥ ರೂಪದಲ್ಲಿರುತ್ತಾನೆ, ಇಂಥ ರೂಪದಲ್ಲಿಲ್ಲ - ಎನ್ನುವದಕ್ಕಾಗುವದಿಲ್ಲ. ಪ್ರಪಂಚದಲ್ಲಿ ಯಾವದು ಯಾವ ರೂಪದಲ್ಲಿ ಕಂಡರೂ ಅದು ಪರಮಾತ್ಮನೇ. ಸಿರಿತನ, ಬಡತನ; ಬಲ, ದೌರ್ಬಲ್ಯ; ಆರೋಗ್ಯ, ಅಸ್ವಾಸ್ಥ್ಯ; ಯೌವನ, ಮುಪ್ಪು; ಬಹುಜನಮಧ್ಯ, ಏಕಾಂತವಾಸ; ವಿಷಯಭೋಗ, ವೈರಾಗ್ಯ - ಯಾವ ಅವಸ್ಥೆಯಲ್ಲಿದ್ದರೂ ಇದೆಲ್ಲವೂ ಆ ಪರಮಾತ್ಮನೇ, ಆತನನ್ನು ಬಿಟ್ಟರೆ ಈ ಜಗತ್ತಿನಲ್ಲಿ ಯಾವದೊಂದೂ ಇಲ್ಲ - ಎಂದು ಯಾರು ಅರಿತಿರುವರೋ ಅವರ ಆನಂದಕ್ಕೆ ಪಾರವಿಲ್ಲ. ಹೀಗೆ ಪರಮಾತ್ಮನ ವಿಭೂತಿಗಳನ್ನು ಅರಿತು ನಾನಾಪ್ರಕಾರವಾಗಿ ಉಪಾಸನೆಮಾಡುವ ಮಹಾತ್ಮರು, ದೈವೀಪ್ರಕೃತಿಯನ್ನವಲಂಬಿಸಿದವರು.

# ೬೬. ಪರಮಾತ್ಮನ ಸೌಲಭ್ಯ ೯-(೨೦-೨೬)
## (೧೪-೧೨-೪೭)

ಆಸುರಸಂಪತ್ತಿನವರು ಪರಮಾರ್ಥತತ್ತ್ವವನ್ನು ತಿಳಿಯಲಾರರು, ಆದರೆ ದೈವಸಂಪತ್ತುಳ್ಳ ಮಹಾತ್ಮರು ಮಾತ್ರ ಭಗವಂತನನ್ನು ಮಾಹಾತ್ಮ್ಯಜ್ಞಾನಪೂರ್ವಕವಾಗಿ ಅನನ್ಯಮನಸ್ಕರಾಗಿ ಭಜಿಸುತ್ತಾರೆ ಎಂದು ಪ್ರಾರಂಭಿಸಿ ಆ ಮಹಾತ್ಮರು ಭಜಿಸುವ ಪ್ರಕಾರಗಳನ್ನು ಹೇಳುವ ಪ್ರಸಂಗದಿಂದ ಭಗವಂತನು ತನ್ನ ವಿಭೂತಿಗಳನ್ನು ಸಂಕ್ಷೇಪವಾಗಿ ತಿಳಿಸಿರುತ್ತಾನೆ. ಅಮೃತವೂ ಮೃತ್ಯುವೂ ಕಾರ್ಯರೂಪವಾಗಿರುವ ಜಗತ್ತೂ ಅದರ ಕಾರಣರೂಪವಾಗಿರುವ ಜಗದ್ಬೀಜವೂ ತಾನೇ ಎಂದು ತನ್ನ ಸರ್ವಾತ್ಮತೆಯನ್ನು ವರ್ಣಿಸಿರುತ್ತಾನೆ.

ಹೀಗಿರುವದರಿಂದ ಯಾರು ಭಗವಂತನನ್ನು ಹೇಗೆ ಉಪಾಸನೆಮಾಡುವರೋ ಅವರಿಗೆ ಅಂಥ ಫಲವಾಗುತ್ತದೆ. ಯಾರಿಗೆ ಫಲವಾದರೂ ಸರ್ವಾತ್ಮನಾದ ಭಗವಂತನಿಂದಲೇ ಆಗುತ್ತದೆ. ವೇದದಲ್ಲಿ ಹೇಳಿರುವ ಕಾಮ್ಯಕರ್ಮಗಳು ಕೆಲವಿವೆ. ಅವನ್ನು ಮಾಡುವವರಿಗೆ ಆಯಾ ಕಾಮಗಳು ಆ ಭಗವಂತನಿಂದಲೇ ದೊರೆಯುತ್ತವೆ.

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾಃ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯನ್ತೇ ।**
**ತೇ ಪುಣ್ಯಮಾಸಾದ್ಯ ಸುರೇನ್ದ್ರಲೋಕ-**
**ಮಶ್ನನ್ತಿ ದಿವ್ಯಾನ್ ದಿವಿ ದೇವಭೋಗಾನ್ ॥** (೯-೨೦)

ಕರ್ಮವೆಂದರೆ ಕೆಲಸವು. ಆ ಕರ್ಮವು ಲೌಕಿಕವಾಗಲಿ ವೈದಿಕವಾಗಲಿ ಅದಕ್ಕೆ ತಕ್ಕ ಫಲವು ಅವಶ್ಯವಾಗಿ ಆಗಿಯೇ ತೀರುತ್ತದೆ. ಯಾವ ಕರ್ಮವನ್ನು ಯಾವ ಸಂದರ್ಭದಲ್ಲಿ ಹೇಗೆ ಮಾಡಿರುವೆವೋ ಅದಕ್ಕೆ ಅನುಗುಣವಾಗಿಯೇ ಫಲವು ತಪ್ಪದೆ ಆಗುತ್ತದೆ; ಆ ಫಲವನ್ನು ಅನುಭವಿಸಿಯೇ ತೀರಬೇಕು. ಇದು ಕರ್ಮದ ನಿಯಮ. ಆದರೆ ಲೋಕದಲ್ಲಿ ನಮ್ಮ ಅಲ್ಪಬುದ್ಧಿಗೆ ತಿಳಿದ ಕರ್ಮಗಳಿಗೂ ವೇದದಲ್ಲಿ ಹೇಳಿರುವ ಕರ್ಮಗಳಿಗೂ ಬಹಳ ಹೆಚ್ಚು ಕಡಿಮೆಯುಂಟು. ಸ್ವೇಚ್ಛಾಕರ್ಮದಿಂದಾಗುವ ಅನಿಷ್ಟ ಫಲವು ಮೃತ್ಯುರೂಪವಾಗಿರುತ್ತದೆ. ಶಾಸ್ತ್ರೀಯಕರ್ಮದಿಂದ ಆ ಮೃತ್ಯುವನ್ನು ದಾಟಿಕೊಂಡು ಅಮೃತಕಲ್ಪವಾದ ಸ್ವರ್ಗಫಲವನ್ನು ಪಡೆದುಕೊಳ್ಳಬಹುದು. ಯಾರು ವೇದದಲ್ಲಿ ಹೇಳಿರುವ ಕರ್ಮಗಳನ್ನು ಶ್ರದ್ಧೆಯಿಂದ ಮಾಡುವರೋ ಅವರಿಗೆ ಅವರ ಇಚ್ಛೆಯ ಪ್ರಕಾರ ದಿವ್ಯವಾದ ಭೋಗಗಳು ಸಿಕ್ಕುವವು. ಯಜ್ಞದಲ್ಲಿ ಸೋಮಪಾನವನ್ನು ಮಾಡಿ ಲೌಕಿಕಕರ್ಮಗಳಿಂದಾಗಿದ್ದ ಪಾಪವನ್ನು ಕಳೆದುಕೊಂಡು ಪರಿಶುದ್ಧರಾಗಿರು

ವವರಿಗೆ ಮಾತ್ರ ಸ್ವರ್ಗವು ಸಿಕ್ಕುತ್ತದೆ. ಯಜ್ಞದಲ್ಲಿ ಬಗೆಬಗೆಯ ದೇವತೆಗಳಿಗೆಂದು ಹೋಮವನ್ನು ಮಾಡುತ್ತಾರಾದರೂ ಆ ದೇವತೆಗಳೆಲ್ಲರಲ್ಲಿಯೂ ಭಗವಂತನಾದ ವಿಷ್ಣುವೇ ಅಂತರ್ಯಾಮಿಯಾಗಿರುತ್ತಾನೆ. ಆದ್ದರಿಂದ ಯಜ್ಞಗಳಿಂದ ಜನರು ಆರಾಧನೆಮಾಡುವದು ಆ ಭಗವಂತನನ್ನೇ. ಈ ಆರಾಧನೆಯಿಂದ ಅವರಿಗೆ ಹೆಚ್ಚಿನ ಪುಣ್ಯವು ಉಂಟಾಗುವದು. ಪುಣ್ಯವು ಅತೀಂದ್ರಿಯವಾಗಿರುತ್ತದೆ; ಆ ಪುಣ್ಯದಿಂದ ದೊರೆಯುವ ಸ್ವರ್ಗಲೋಕದ ಸುಖವೂ ಅತೀಂದ್ರಿಯವಾಗಿರುತ್ತದೆ. ಸ್ವರ್ಗದಲ್ಲಿ ಯಜ್ಞಗಳಿಗೆ ಫಲವಾಗಿ ದಿವ್ಯವಾದ ದೇವಭೋಗಗಳು ದೊರೆಯುವವೆಂದು ಶಾಸ್ತ್ರ ಪ್ರಮಾಣದಿಂದ ನಂಬಬೇಕೇ ಹೊರತು ಪ್ರತ್ಯಕ್ಷದಿಂದಾಗಲಿ ಅನುಮಾನದಿಂದಾಗಲಿ ಆ ಪುಣ್ಯವನ್ನು ಅಥವಾ ಆ ಭೋಗಗಳನ್ನು ಕಾಣುವದಕ್ಕೆ ಆಗಲಾರದು.

ಆದರೂ ಒಂದು ವಿಷಯವು ಖಂಡಿತ. ಪ್ರತ್ಯಕ್ಷವಾಗಿ ಇಲ್ಲಿ ಅನುಭವಿಸುವ ಮನುಷ್ಯಭೋಗವಾಗಲಿ ಸ್ವರ್ಗದಲ್ಲಿ ಅನುಭವಿಸುವ ಅತೀಂದ್ರಿಯಭೋಗಗಳಾಗಲಿ ಎರಡೂ ಭೋಗಗಳೇ, ಎರಡೂ ಕರ್ಮಫಲಗಳೇ. ಈ ಲೋಕದಲ್ಲಿ ಹೇಗೆ ಕೃಷ್ಯಾದಿಕರ್ಮಗಳ ಫಲವು ಕೆಲವು ಕಾಲದವರೆಗೆ ಮಾತ್ರ ಭೋಗವನ್ನು ಕೊಡಬಲ್ಲದೋ ಅದರಂತೆಯೇ ಯಜ್ಞರೂಪವಾದ ವೈದಿಕಕರ್ಮಗಳ ಫಲವಾದ ಪುಣ್ಯವೂ ಕರ್ಮಕ್ಕೆ ತಕ್ಕಷ್ಟು ಕಾಲದ ಭೋಗವನ್ನು ಮಾತ್ರ ಕೊಡಬಲ್ಲದು. ತ್ರೈವಿದ್ಯರು ಎಂದರೆ ಋಗ್ಯಜುಸ್ಸಾಮರೂಪವಾಗಿರುವ ವೇದವಿದ್ಯೆಯನ್ನು ಬಲ್ಲ ದ್ವಿಜರು ತಾವು ಮಾಡಿದ ಕರ್ಮದ ಫಲವಾಗಿ ಪುಣ್ಯವನ್ನು ಪಡೆದುಕೊಂಡು ದೇವೇಂದ್ರಲೋಕವನ್ನು ಸೇರಿ-

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ**
**ಗತಾಗತಂ ಕಾಮಕಾಮಾ ಲಭನ್ತೇ ॥** (೯-೨೧)

ವಿಶಾಲವಾದ ಆ ಲೋಕದಲ್ಲಿ ಬಗೆಬಗೆಯಾದ ಭೋಗಗಳನ್ನು ಅನುಭವಿಸಿದ ಬಳಿಕ ತಮ್ಮ ಪುಣ್ಯವು ಸವೆಯಲು ಕೂಡಲೆ ಇದೇ ಮರ್ತ್ಯಲೋಕವನ್ನು ಹೊಗುವರು. ಈ ಲೋಕದಲ್ಲಿರುವವರು ಸಾಯಲೇಬೇಕು; ಲೌಕಿಕಕರ್ಮಗಳಿಂದಾದ ಫಲಗಳು ಸಾಯುವವಾದ್ದರಿಂದಲೂ ಇದು ಮರ್ತ್ಯಲೋಕವು. ಸ್ವರ್ಗಲೋಕವು ಇದಕ್ಕೆ ಹೋಲಿಸಿದರೆ ಅಮೃತಲೋಕವು; ಅಲ್ಲಿರುವ ದೇವತೆಗಳು ಅಮರರು. ಆದ್ದರಿಂದಲೇ ವೇದವಿದ್ಯೆಯ ಧರ್ಮವನ್ನು ಅನುಸರಿಸುವವರು ಸ್ವರ್ಗಗತಿಯನ್ನು ಪ್ರಾರ್ಥಿಸುವರು. ಆದರೇನು? ಈ ಸ್ವರ್ಗಲೋಕವು ಕೂಡ ಪರಮಪುರುಷಾರ್ಥಕ್ಕೆ ಹೋಲಿಸಿದರೆ ಮರ್ತ್ಯವೇ ಆಗಿರುತ್ತದೆ. ಕರ್ಮವನ್ನು ಮಾಡುವದು, ಅವುಗಳ ಫಲವನ್ನು ಸ್ವರ್ಗದಲ್ಲಿ

ಅನುಭವಿಸುವದು, ಪುಣ್ಯವು ಸವೆಯಲು ಮತ್ತೆ ಈ ಲೋಕದಲ್ಲಿ ಹುಟ್ಟುವದು - ಹೀಗೆ ರಾಟೆಯಲ್ಲಿ ಸುತ್ತಿದಂತೆ ತಿರುಗುತ್ತಿರುವ 'ಗತಾಗತದ' ಹೋಗೀಬಂದೂ ಮಾಡುತ್ತಿರುವ ಈ ಸ್ವರ್ಗಗತಿಯನ್ನು ವಿವೇಕಿಗಳಾದವರು ಯಾರುತಾನೆ ಬಯಸಿ ಯಾರು? ಕಾಮ್ಯಕರ್ಮಗಳನ್ನು ಮಾಡುವವರ ಪಾಡೇ ಹೀಗೆ!

ಕಾಮಗಳನ್ನು ಬಯಸಿಬಯಸಿ ಕರ್ಮಗಳನ್ನು ಮಾಡಿಮಾಡಿ ಪ್ರತಿಫಲವನ್ನು ಬೇಡುವವರನ್ನು ಹಿಂದೆ ಆಗಲೆ ಒಂದು ಸಲ (೨.೪೨ ರಿಂದ ೪೫ರವರೆಗಿನ ಶ್ಲೋಕಗಳಲ್ಲಿ) ಹೇಳಿದ್ದಾಗಿದೆ. ಆದರೆ ಅಲ್ಲಿ ಕರ್ಮಯೋಗವನ್ನು ಹೊಗಳುವ ಪ್ರಸಂಗದಿಂದ ಕಾಮ್ಯಕರ್ಮವನ್ನು ನಿಂದಿಸಿತ್ತು; ಈಗ ಅದನ್ನೇ ಅನುವಾದಮಾಡಿ ಕೊಂಡು ಪರಮೇಶ್ವರನ ಭಜನೆಯನ್ನು ಹೊಗಳುವದಕ್ಕೆ ಹೊರಟಿರುತ್ತದೆ. ಯಾವ ಪರಮಾತ್ಮನ ಅನುಗ್ರಹದಿಂದಲೇ ಕಾಮ್ಯಕರ್ಮಗಳಿಗೂ ಫಲವು ದೊರೆಯಬೇಕಾಗಿರು ವದೋ, ಆ ಸರ್ವೇಷ್ಟಪ್ರದನಾದ ಪರಮೇಶ್ವರನನ್ನೇ ಅನವರತವೂ ನಂಬಿ ನಿತ್ಯಾ ನಂದವನ್ನೇ ಏತಕ್ಕೆ ಪಡೆದುಕೊಂಡುಬಿಡಬಾರದು? ಆ ಭಗವಂತನು ಯಾವಾಗಲೂ ನಮ್ಮನ್ನು ನೋಡಿಕೊಂಡು ನಮ್ಮ ಹಿತಕ್ಕೆ ಯಾವಯಾವ ಕಾಲಕ್ಕೆ ಏನೇನು ಆಗಬೇಕೋ ಅದನ್ನೆಲ್ಲ ತನ್ನ ಸಂಕಲ್ಪಮಾತ್ರದಿಂದ ಒದಗಿಸಿಕೊಡುವದಕ್ಕೆ ಸಿದ್ಧನಾಗಿರುವಲ್ಲಿ ನಾವು ನಮ್ಮ ಅಲ್ಪಬುದ್ಧಿಯಿಂದ ಮಾಡುವ ಅಲ್ಪಕರ್ಮಗಳಿಗೆ ಸಿಕ್ಕಬಹುದಾದ ಮರ್ತ್ಯವಾದ ಭೋಗಗಳಿಗೆ ಏತಕ್ಕೆ ಬಾಯಿನೀರು ಕರೆಯಬೇಕು? ಆ ದಯಾನಿಧಿಯ ಅಭಿವಚನವನ್ನು ಕೇಳಿರಿ:

**ಅನನ್ಯಾಶ್ಚಿನ್ತಯನ್ತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥** (೯-೨೨)

"ಅನನ್ಯರಾಗಿ ನನ್ನನ್ನೇ ಚಿಂತಿಸುತ್ತಾ ಯಾವ ಜನರು ಉಪಾಸನೆಮಾಡುತ್ತಿರು ವರೋ ನಿತ್ಯಾಭಿಯುಕ್ತರಾಗಿರುವ ಅವರ ಯೋಗಕ್ಷೇಮವನ್ನು ನಾನು ಹೊತ್ತಿರುವೆನು." ಪರಮಾತ್ಮತತ್ತ್ವಜ್ಞಾನವನ್ನು ಹೇಳುವದಕ್ಕೆ ಆರಂಭಿಸಿ ನಾನು ನನ್ನದೆಂಬ ಭಾವವುಳ್ಳ ಅಸುರರಿಗೆ ಇದು ತಿಳಿಯುವದಕ್ಕೆ ಆಗುವದಿಲ್ಲ ಎಂಬುದನ್ನು ಹೇಳುವ ಪ್ರಸಂಗದಿಂದ ಮಹಾತ್ಮರಾದವರು ಭಗವಂತನನ್ನೇ ಯಾವಾಗಲೂ ಭಜಿಸುತ್ತಿರುವರೆಂದು ತಿಳಿಸಿ, ನಡುವೆ ಕಾಮ್ಯಕರ್ಮವನ್ನು ಹಳಿದು ಈಗ ಅನನ್ಯಭಕ್ತಿಯನ್ನು ಹೊಗಳುವದಕ್ಕೆಂದು ಈ ಶ್ಲೋಕವನ್ನು ಹೇಳಲಾಗಿದೆ— ಎಂಬುದನ್ನು ನಾವು ಮನಸ್ಸಿಗೆ ತಂದುಕೊಳ್ಳಬೇಕು. ಆಗಲೇ ನಮಗೆ ಇದರ ಪೂರ್ಣಾಭಿಪ್ರಾಯವು ಗೊತ್ತಾಗುವದು. ಈ ಶ್ಲೋಕವನ್ನು ಕೆಲವರು ತಪ್ಪಾಗಿ ಅರ್ಥಮಾಡಿಕೊಂಡಿರುತ್ತಾರೆ. ಭಗವಂತನನ್ನು ನಂಬಿರುವ ಭಕ್ತರು ಏನೂ ಮಾಡಬೇಕಾದದ್ದಿಲ್ಲ; ಆತನು ಕಾಲಕಾಲಕ್ಕೆ ಅವರಿಗೆ ಬೇಕಾದದ್ದನ್ನು

ಒದಗಿಸುತ್ತಾ ಇರುವನು - ಎಂದು ಅವರೆನ್ನುವರು. ಸಾಹುಕಾರರು ಬೈರಾಗಿಗಳಿಗೆ ಸದಾಬರ್ತು ಒದಗಿಸುವಂತೆ ಪರಮಾತ್ಮನು ತನ್ನ ಭಕ್ತರಿಗೆ ಪಡಿಯನ್ನು ಅಳೆಯುತ್ತಿರುವನೆಂದೂ ಅವರು ಸುಮ್ಮನೆ ಉಂಡುಂಡು ಕುಳಿತಿರುವರೆಂದೂ ಭಾವವುಂಟಾಗುವ ಹಾಗೆ ಅವರು ಈ ಶ್ಲೋಕಕ್ಕೆ ವ್ಯಾಖ್ಯಾನವನ್ನು ಮಾಡುತ್ತಾರೆ. ಆದರೆ ಸರಿಯಾಗಿ ನೋಡಿದರೆ ಅನನ್ಯವಾಗಿ ನಂಬುವದೆಂದರೆ, ಭಗವಂತನನ್ನು ಅನನ್ಯತೆಯಿಂದ ಚಿಂತಿಸುತ್ತಿರುವದೆಂದರೆ, ಮಿಕ್ಕದೆಲ್ಲವನ್ನೂ ಬಿಟ್ಟು ಸೋಮಾರಿಗಳಾಗಿ ಕೂತುಕೊಳ್ಳುವದಲ್ಲ. ಭಗವಂತನ ಭಕ್ತರು ಒಂದು ಕ್ಷಣವೂ ಸುಮ್ಮನೆ ಕುಳಿತಿರಲಾರರು. ಭಗವಂತನು ಹೇಗೆ ಯಾವಾಗಲೂ ತನ್ನ ಕರ್ಮವನ್ನು ಮಾಡುತ್ತಲೇ ಇರುವನೋ ಹಾಗೆಯೇ ಅವರು ಯಾವಾಗಲೂ ದುಡಿಯುತ್ತಲೇ ಇರುವರು. ಆದರೆ ಅವರು ಶ್ರಮಪಡುತ್ತಿರುವದು ತಮಗಾಗಿ ಅಲ್ಲ, ಲೋಕದ ಕಲ್ಯಾಣಕ್ಕಾಗಿ. ತಮ್ಮ ಸರ್ವಸ್ವವನ್ನೂ ಜನೋಪಕಾರಕ್ಕಾಗಿ ತ್ಯಾಗಮಾಡಿ ಸಾಯುವವರೆಗೂ ಜನರ ಹಿತಕ್ಕೇ ದುಡಿಯುತ್ತಿದ್ದ ಮಹಾತ್ಮಗಾಂಧಿಯವರಂಥ ಸಜ್ಜನರನ್ನು ಮನಸ್ಸಿಗೆ ತಂದುಕೊಂಡರೆ ಭಕ್ತರು ಹೇಗೆ ನಡೆಯುತ್ತಿರುವರೆಂಬುದರ ಅರಿವು ಸ್ವಲ್ಪಮಟ್ಟಿಗಾದರೂ ಆದೀತು.

ಶ್ರೀ ಶಂಕರಾಚಾರ್ಯರವರು ಈ ಶ್ಲೋಕಕ್ಕೆ ತಮ್ಮ ಭಾಷ್ಯದಲ್ಲಿ ಈ ಅವತರಣಿಕೆಯನ್ನು ಬರೆದಿರುತ್ತಾರೆ: ಭಗವಂತನು ಮಿಕ್ಕ ಭಕ್ತರ ಯೋಗಕ್ಷೇಮಗಳನ್ನೂ ನೋಡುತ್ತಲೇ ಇರುವನಲ್ಲವೆ? ಇವರ ಯೋಗಕ್ಷೇಮವನ್ನು ನಾನು ವಹಿಸುವೆನು ಎಂಬುದರಲ್ಲಿ ವಿಶೇಷವೇನು? -ಎಂದರೆ ಒಂದು ವಿಶೇಷವಿದೆ. ಭಗವಂತನು ಮಿಕ್ಕವರ ಯೋಗಕ್ಷೇಮವನ್ನೂ ನೋಡಿಕೊಳ್ಳುತ್ತಾನಾದರೂ ಅವರು ತಾವೂ ತಮ್ಮ ತಮ್ಮ ಯೋಗಕ್ಷೇಮಕ್ಕಾಗಿ ದುಡಿಯುತ್ತಿರುತ್ತಾರೆ. ಆದರೆ ಈ ಅನನ್ಯಚಿಂತಕರು ಹೀಗಲ್ಲ. ಅವರು ಪರಮಾತ್ಮನ ಚಿಂತನೆಯನ್ನು ಒಂದು ಕ್ಷಣವೂ ಬಿಟ್ಟಿರುವದಿಲ್ಲ. ಅವರು "ನನಗೆ ಇದಾಗಬೇಕು" ಎಂದು ಎಂದಿಗೂ ಪ್ರಯತ್ನಿಸುವದಿಲ್ಲ. "ನನ್ನದೆಂಬುದೇನಿದೆ? ಎಲ್ಲವೂ ಆತನದೇ. ಈ ಶರೀರ, ಕರಣಗಳು, ಪ್ರಾಣ, ಎಲ್ಲವೂ ಆತನ ಅನುಗ್ರಹವೇ. ನಮ್ಮಲ್ಲಿರುವ ವಿಚಾರ, ಶಕ್ತಿ, ಪ್ರೀತಿ, ದಯೆ, ಪರೋಪಕಾರಬುದ್ಧಿ- ಎಲ್ಲವೂ ಆತನ ಕೊಡುಗೈತನದ ಫಲವೇ" ಎಂದು ಅವರು ಎನ್ನುತ್ತಿರುವರು. ಅವರಿಗೆ ನಾನು, ನನ್ನದು ಎಂಬುದು ಯಾವದೂ ಇಲ್ಲ. ಅವರಿಗೆ ಬದುಕಿರಬೇಕು ಅಥವಾ ಸಾಯಬೇಕು - ಎಂಬ ಹಂಬಲುಕೂಡ ಇರುವದಿಲ್ಲ. 'ಅಹಂ ಬ್ರಹ್ಮಾಸ್ಮಿ' (ನಾನು ಬ್ರಹ್ಮವು) ಎಂದು ಅವರು ಚಿಂತಿಸುವದಿಲ್ಲವೆ? ಎಂದರೆ ಇಲ್ಲ; ನಾನು ಎಂಬುದನ್ನು ಸಂಪೂರ್ಣವಾಗಿ ಕೈಬಿಟ್ಟು ಅವರು ಆ ಪರಮಾತ್ಮನಲ್ಲಿಯೇ ನೆಲೆನಿಂತುಬಿಟ್ಟಿರುವರು. ಅವರಿಗೂ ಪರಮಾತ್ಮನಿಗೂ ಯಾವ ಭೇದವೂ ಇರುವದೇ ಇಲ್ಲ.

ಇಂಥ ಅನನ್ಯಭಕ್ತರು ಮಿಕ್ಕವರಂತೆ ಆಗಾಗ್ಗೆ ಪರಮಾತ್ಮನ ಸಂಬಂಧವನ್ನು ಮಾಡಿಕೊಳ್ಳುತ್ತಿರುವದಿಲ್ಲ. ನಲ್ಲಿ, ದೀಪ ಇವುಗಳಿಗೆ ಕಂದಾಯವನ್ನು ತಿಂಗಳು ತಿಂಗಳಿಗೆ ಕಟ್ಟದೆ ಇರುವವರ ಮನೆಗೆ ನೀರಿನ ಇಲಾಖೆಯವರೂ ವಿದ್ಯುದ್ದೀಪದ ಇಲಾಖೆಯವರೂ ನೀರಿನ ಅಥವಾ ವಿದ್ಯುದ್ದೀಪದ ಮೂಲಸ್ಥಾನದ ಸಂಬಂಧವನ್ನು ವಿಚ್ಛಿತ್ತಿಗೊಳಿಸುವಂತೆ ಮಿಕ್ಕಜನರು ತಮ್ಮ ಅಂತಃಕರಣಕ್ಕೆ ಪರಮಾತ್ಮನ ಸಂಬಂಧವನ್ನು ಆಗಿಂದಾಗ್ಗೆ ಕಡಿದುಹಾಕಿಕೊಳ್ಳುತ್ತಲೇ ಇರುವರು. ಈಗ ಪರಮಾತ್ಮನ ಚಿಂತೆ, ಆಮೇಲೆ ಮನೆವಾರ್ತೆಯ ಚಿಂತೆ, ಬಳಿಕ ಆಹಾರಸಾಮಗ್ರಿಯ ಚಿಂತೆ - ಹೀಗಿರುವದು, ಅವರ ಅಂತಃಕರಣದಲ್ಲಿ! ಆದರೆ ಈ ಅನನ್ಯಚಿಂತಕರು ಪರಮಾತ್ಮನಿಗೂ ತಮಗೂ ನಿತ್ಯಸಂಬಂಧವನ್ನು ಮಾಡಿಕೊಂಡುಬಿಟ್ಟಿರುವದರಿಂದ ಇವರು ನಿತ್ಯಾಭಿಯುಕ್ತ ರೆನಿಸುವರು. ಎಂದಿಗೂ ಬತ್ತದಿರುವ ಉಕ್ಕಂದದಿಂದ ಹರಿಯುವ ಅಮೃತದ ಝರಿಯಂತೆ ಪರಮಾತ್ಮನಿಂದ ಕರುಣಾಝರಿಯು ಯಾವಾಗಲೂ ಅವರ ಕಡೆಗೇ ಹರಿಯುತ್ತಿರುವದು.

ರಾವಣನ ಪ್ರಣಯಪ್ರಾರ್ಥನೆಗೆ ಉತ್ತರವನ್ನು ಕೊಡುವಾಗ ಸೀತಾದೇವಿಯು ಹೇಳಿದ ಉತ್ತರವನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. 'ಶಕ್ಯಾ ಲೋಭಯಿತುಂ ನಾಹಮೈಶ್ವರ್ಯೇಣ ಧನೇನ ವಾ। ಅನನ್ಯಾ ರಾಘವೇಣಾಹಂ ಭಾಸ್ಕರೇಣ ಪ್ರಭಾ ಯಥಾ'॥ (ನಾನು ಶ್ರೀರಾಮನವಳೇ, ಶ್ರೀರಾಮನಿಗಿಂತ ನಾನು ಬೇರೆಯಿರುವೆನೆಂದೂ ನಿನ್ನ ಐಶ್ವರ್ಯದಿಂದಾಗಲಿ ಧನದಿಂದಲಾಗಲಿ ಸೆಳೆಯುವದಕ್ಕೆ ಬರುವಂಥವಳೆಂದೂ ತಿಳಿಯಬೇಡ. ಏಕೆಂದರೆ ಸೂರ್ಯನಿಗೆ ಅವನ ಪ್ರಭೆಯು ಹೇಗೆ ಸೇರಿಹೋಗಿರು ವದೋ, ಅವನಿಂದ ಹೇಗೂ ಅದನ್ನು ಬೇರ್ಪಡಿಸುವದಕ್ಕೆ ಶಕ್ಯವಲ್ಲವೋ ಹಾಗೆ ನಾನು ರಾಮನಲ್ಲಿ ಸೇರಿಹೋಗಿರುತ್ತೇನೆ) "ನಿತ್ಯವಾಗಿ ನಾನು ರಾಮನಲ್ಲಿ ಐಕ್ಯವನ್ನು ಪಡೆದವಳಾಗಿರುತ್ತೇನೆ. ರಾಮನೇ ನಾನೆಂದು ತಿಳಿ. ಹೀಗೆ ಅವನವಳಾಗಿರುವ ನನ್ನನ್ನು ನೀನು ಹೇಗೆ ತಾನೆ ಆಶೆಯನ್ನು ತೋರಿಸಿ ಬೇರ್ಪಡಿಸಬಲ್ಲೆ?" ಎಂದು ಆ ಲೋಕಮಾತೆಯು ಅಪ್ಪಣೆಕೊಡಿಸಿರುತ್ತಾಳೆ. ಜ್ಞಾನಿಭಕ್ತರು ಹೀಗೆ ಪರಮಾತ್ಮನಲ್ಲಿ ನಿತ್ಯಾಭಿಯುಕ್ತರಾಗಿ ಅನನ್ಯರಾಗಿರುತ್ತಾರೆ. ಭಗವಂತನು "ಜ್ಞಾನಿಯು ನನ್ನ ಆತ್ಮನೇ" (೭-೧೮) ಎಂದು ಹೇಳಿಬಿಟ್ಟಿರುತ್ತಾನೆ. ಇಂಥವರ ಯೋಗಕ್ಷೇಮವನ್ನು ಭಗವಂತನಲ್ಲದೆ ಮತ್ತೆ ಯಾರು ನೋಡಿಕೊಳ್ಳಬೇಕು?

ಹಾಗಾದರೆ ಮಿಕ್ಕ ಭಕ್ತರ ವಿಚಾರವೇನು? ಅವರು ಯಾವ ದೇವತೆಗಳನ್ನು ಪೂಜೆಮಾಡಿದರೂ ಪರಮಾತ್ಮನು ಸರ್ವಾತ್ಮನಲ್ಲವೆ? ಆದ್ದರಿಂದ ಅವರಿಗೂ ಪರ ಮಾತ್ಮನನ್ನು ಪೂಜೆಮಾಡಿದ ಫಲವು ಬರಬೇಕಲ್ಲ! - ಎಂದು ಯಾರಾದರೂ

ಕೇಳಬಹುದು. ಇದಕ್ಕೆ ಉತ್ತರವೇನೆಂದರೆ: ಇರುವದೆಲ್ಲ ಪರಮಾತ್ಮನೇ ಆಗಿರುವದರಿಂದ ಯಾರು ಯಾವ ದೇವತೆಯನ್ನು ಪೂಜಿಸಿದರೂ ಪರಮಾತ್ಮನನ್ನೇ ಪೂಜಿಸಿದಂತೆ ಎಂಬುದು ನಿಶ್ಚಯ; ಆದರೇನು? ಪೂಜಾಫಲಕ್ಕೆ ಧ್ಯೇಯದ ಮಾಹಾತ್ಮ್ಯಜ್ಞಾನವೇ ಕಾರಣವಾಗಿರುತ್ತದೆ. ನಮ್ಮ ಮನೆಯ ಅಟ್ಟದ ಮೇಲೆ ಗುಡಾಣದಲ್ಲಿ ಗೋಧಿ ತುಂಬಿದೆ ಎಂದು ಇಟ್ಟುಕೊಳ್ಳಿರಿ. ಆದರೆ ಅದು ಮನೆಯಲ್ಲಿದೆ ಎಂಬ ಅರಿವು ನಮಗೆ ಇಲ್ಲದಿದ್ದರೆ ಅದನ್ನು ಹಬ್ಬದ ಅಡಿಗೆಗೆ ಉಪಯೋಗಿಸಿಕೊಳ್ಳುವದಾದೀತೆ? ಇಲ್ಲ. ಇದರಂತೆ ಯಾರು ಯಾರನ್ನು ಆರಾಧಿಸಿದರೂ ಭಗವಂತನನ್ನೇ ಆರಾಧಿಸಿದಂತೆ ಎಂಬುದು ಪರಮಾರ್ಥದೃಷ್ಟಿಯಿಂದ ಆಡುವ ಮಾತು. ಆದರೆ ಆರಾಧಕರ ದೃಷ್ಟಿಯಿಂದ ಅವರು ಆಯಾ ದೇವತೆಯನ್ನೇ ಪೂಜಿಸಿದಂತೆ ಆದೀತೇ ಹೊರತು ಭಗವಂತನನ್ನು ಪೂಜಿಸಿದಂತೆ ಆಗುವದಿಲ್ಲ. ಆದ್ದರಿಂದಲೇ ಭಗವಂತನು-

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನನ್ತಿ ತತ್ತ್ವೇನಾತಶ್ಚ್ಯವನ್ತಿ ತೇ ॥** (೯-೨೪)

"ನಾನೇ ಎಲ್ಲಾ ಯಜ್ಞಗಳ ಹವಿಸ್ಸನ್ನೂ ಭೋಗಿಸುವಾತನು, ಎಲ್ಲಾ ಯಜ್ಞಗಳಿಗೂ ಒಡೆಯನು. ಆದರೂ ತಾವು ಪೂಜಿಸುತ್ತಿರುವ ದೇವತೆಯ ಆತ್ಮನು ನಾನೇ ಎಂಬುದನ್ನು ಅವರು ನಿಜವಾಗಿ ಅರಿಯರು; ಆದ್ದರಿಂದ ಅವರಿಗೆ ಫಲವು ಕೈಸೇರುವದಿಲ್ಲ" - ಎಂದು ಅಪ್ಪಣೆ ಕೊಡಿಸಿರುತ್ತಾನೆ. "ಮಹಾತ್ಮರಾದವರು ಅನನ್ಯಮನಸ್ಕರಾಗಿ ನಾನು ಭೂತಗಳಿಗೆಲ್ಲ ಆದಿಯೆಂದೂ ಅವ್ಯಯನೆಂದೂ ಅರಿತುಕೊಂಡು ಭಜಿಸುತ್ತಾರೆ" ಎಂದು ಹಿಂದೆ (೯-೧೩) ಹೇಳಿರುವುದರ ರಹಸ್ಯವೇ ಇದು.

ನಮ್ಮ ನಮ್ಮ ಧ್ಯೇಯದಂತೆ ನಮಗೆ ಫಲವಾಗುವದು; ನಮ್ಮ ನಮ್ಮ ಸ್ವಭಾವಕ್ಕೆ ತಕ್ಕಂತೆ ನಮ್ಮನಮ್ಮ ಕರ್ಮಗಳಿರುವವು, ಸಾತ್ತ್ವಿಕರಾದವರು ಸಾತ್ತ್ವಿಕಪೂಜೆಯನ್ನು ಮಾಡಿ, ಸಾತ್ತ್ವಿಕಫಲಗಳನ್ನು ಪಡೆಯುವರು; ರಾಜಸರು ರಾಜಸಪೂಜೆಯನ್ನು ಮಾಡಿ ರಾಜಸಫಲಗಳನ್ನು ಪಡೆಯುವರು; ತಾಮಸರು ತಾಮಸಪೂಜೆಮಾಡಿ ತಾಮಸಫಲಗಳನ್ನು ಪಡೆಯುವರು. ಇದರ ವಿವರವು ಮುಂದೆ ಗೀತೆಯಲ್ಲಿಯೇ ಗೊತ್ತಾಗುವದು. ಪ್ರಕೃತದಲ್ಲಿ ಮಿಕ್ಕವರಿಗೆ ಯಾರಿಗೂ ಸಿಕ್ಕದೆ ಇರುವ ಭಗವಂತನು ಅನನ್ಯಭಕ್ತರಿಗೆ ಮಾತ್ರ ಸಿಕ್ಕುವದಕ್ಕೆ ಕಾರಣವೇನು? ಎಂಬುದನ್ನು ನಾವು ತಿಳಿಯುವದಕ್ಕೆ ಈ ತತ್ತ್ವವು ಸಾಧಕವಾಗಿರುತ್ತದೆ. ಸಾತ್ತ್ವಿಕರು ದೇವತೆಗಳನ್ನು ನಿಯಮದಿಂದ ಪೂಜೆಮಾಡಿ ಆಯಾ ದೇವತೆಯ ಸಾಯುಜ್ಯವನ್ನು ಪಡೆಯುವರು. ರಾಜಸರು ಪಿತೃಗಳ ಅರ್ಚನೆಯಿಂದ ಪಿತೃಲೋಕವನ್ನು ಪಡೆದುಕೊಳ್ಳುವರು; ತಾಮಸರು ಭೂತಗಳನ್ನು ಸೇವಿಸುತ್ತಿದ್ದು ಅದರಿಂದ ಭೂತಗಳನ್ನೇ ಪಡೆದುಕೊಳ್ಳುವರು.

ಇದರಂತೆ ಯಾರು ಭಗವಂತನ ಅನನ್ಯಭಕ್ತರೋ ಅವರು ಎಲ್ಲಾ ಗುಣಗಳನ್ನೂ ಮೀರಿ ಭಗವಂತನನ್ನೇ ಸೇರುವರೆಂಬುದು ಯುಕ್ತವಾಗಿರುತ್ತದೆ. ಪೂಜೆಯ ಆಯಾಸವು ಎಲ್ಲರಿಗೂ ಸಮಾನವಾಗಿರುತ್ತದೆಯಾದರೂ, ಅಜ್ಞರು ಭಗವಂತನನ್ನೇ ಶರಣುಹೊಂದಿ ಭಗವಂತನ ಭಕ್ತಿಯನ್ನು ಸಂಪಾದಿಸಿಕೊಳ್ಳದೆ ಇರುತ್ತಾರೆ; ಆದ್ದರಿಂದ ಅವರಿಗೆ ಅಲ್ಪವಾದ ಫಲವಾಗುತ್ತದೆ.

ಭಗವಂತನ ಭಕ್ತರಾದವರಿಗೆ ಹೀಗೆ ಅನಂತವಾದ ಫಲವುಂಟಾಗುತ್ತದೆ ಎಂಬುದು ಮಾತ್ರವಲ್ಲ. ಭಗವಂತನನ್ನು ಆರಾಧನೆಮಾಡುವದು ಕೂಡ ಬಹು ಸುಲಭ. ಆದರೂ ಅಜ್ಞರು ಇದರ ಮರ್ಮವನ್ನು ಅರಿತುಕೊಳ್ಳದೆ ಇರುತ್ತಾರೆ. ಪರಮಾತ್ಮನು ತನ್ನನ್ನು ಎಷ್ಟು ಪರಿಮಾಣದ ದ್ರವ್ಯತ್ಯಾಗದಿಂದ ಪೂಜಿಸುತ್ತಾರೆಂಬುದನ್ನು ಲೆಕ್ಕಕ್ಕೆ ತರುವದಿಲ್ಲ. ಅವರು ಹೇಗೆ ಪೂಜಿಸುತ್ತಾರೆ? ಎಂಬುದನ್ನೇ ಮುಖ್ಯವಾಗಿಟ್ಟುಕೊಳ್ಳುತ್ತಾನೆ. ಐಶ್ವರ್ಯವಂತರಾಗಲಿ ಬಡವರಾಗಲಿ ಸಿಕ್ಕಿದಷ್ಟು ಸಾಮಗ್ರಿಗಳಿಂದ ಆದಷ್ಟು ಉಪಚಾರಗಳಿಂದ ಪೂಜಿಸಿದರೂ ಸಾಕು; ಪ್ರೇಮದಿಂದ ಪೂಜಿಸಿದರೆ ಸರಿ, ಭಗವಂತನು ಒಲಿದುಬಿಡುವನು. ಭಗವಂತನ ಈ ವಾಕ್ಯದಲ್ಲಿ ಎಲ್ಲರಿಗೂ ಆತನ ಪೂಜೆಯು ದಕ್ಕಬಹುದೆಂಬ ಭರವಸೆಯು ಅಡಗಿರುತ್ತದೆ:

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥** (೯-೨೬)

ಪರಮಾತ್ಮನ ಭಕ್ತರು ಒಂದು ದೃಷ್ಟಿಯಿಂದ ಹಡಗಿನ ವ್ಯಾಪಾರವನ್ನು ಮಾಡುವವರಂತೆ ಇರುತ್ತಾರೆ. ನೋಡುವವರಿಗೆ ಅವರು ಇದ್ದ ಬಳಿಯಲ್ಲಿದ್ದು ಹೆಚ್ಚು ಆಯಾಸವೇನೂ ಇಲ್ಲದೆ, ಬಹಳ ದ್ರವ್ಯವ್ಯಯವನ್ನೂ ಮಾಡದೆ ಏಜೆಂಟರ ಮೂಲಕವೇ ದೊಡ್ಡ ಲಾಭವನ್ನು ಸಂಪಾದಿಸುವ ಜಾಣರಂತೆ ಕಾಣಿಸುತ್ತಾರೆ. ಒಂದು ಎಲೆ, ಒಂದು ಹೂವು, ಒಂದು ಹಣ್ಣು - ಹೀಗೆ ಸಾಮಾನ್ಯವಾದ ವಸ್ತುಗಳನ್ನು ಭಕ್ತಿಯ ಮೂಲಕವಾಗಿ ಭಗವಂತನಿಗೆ ಅವರು ಅರ್ಪಿಸುತ್ತಾರೆ. ಭಗವಂತನು ಅವರ ಅರ್ಪಣೆಯಲ್ಲಿರುವ ಭಕ್ತಿಯನ್ನೇ ಪರಮಾಣುವನ್ನು ಮೇರು ಪರ್ವತದಂತೆ ಎಣಿಸಿ ಅದನ್ನೇ ಸ್ವೀಕರಿಸಿ ಅವರಲ್ಲಿ ಪ್ರಸನ್ನನಾಗಿಬಿಡುತ್ತಾನೆ !

ಸರಿಯಾಗಿ ನೋಡಿದರೆ ಎಲ್ಲವೂ ಪರಮಾತ್ಮನದೇ ಆಗಿರುವಾಗ ಪತ್ರಪುಷ್ಪಗಳನ್ನಾದರೂ ನಾವು ಆತನಿಗೆ ಕೊಡುವದೆಂದರೇನರ್ಥ? ಈ ಜಗತ್ತೆಲ್ಲವೂ ಪರಮಾತ್ಮನಿಂದಲೇ ಬಂದಿರುತ್ತದೆ, ಆತನಿಂದಲೇ ವ್ಯಾಪ್ತವಾಗಿ ನಿಂತಿರುತ್ತದೆ. ಈ ಜಗತ್ತಿನ ವ್ಯಾಪಾರಗಳೆಲ್ಲವೂ ಆ ಭಗವಂತನ ಅಧೀನವಾಗಿರುತ್ತವೆ; ಇದು ಮತ್ತೆ ಯಾರಿಗೂ ಸೇರಿದ್ದಲ್ಲ - ಎಂಬ ಭಾವನೆಯೇ ಇಲ್ಲಿ ಮುಖ್ಯವಾದದ್ದು. ಮಕ್ಕಳಿಗೆ

ತಮ್ಮ ಅಂಗಿಯನ್ನು ತಂದೆಯು ಕೊಟ್ಟಿದ್ದರೂ ಇದು ನನ್ನದು ಎಂಬ ಅಭಿಮಾನವು ಬಲವಾಗಿರುತ್ತದೆ, ಹೀಗೆಯೇ ಅಜ್ಞರಿಗೆ ಪ್ರಪಂಚವೆಲ್ಲವೂ ಪರಮಾತ್ಮನಿಂದಲೇ ಸೃಷ್ಟವಾಗಿದ್ದರೂ, ತಮ್ಮ ಶರೀರಕರಣಾದಿಗಳು ಕೂಡ ಆತನು ಅನುಗ್ರಹಿಸಿಕೊಟ್ಟಿರುವದೇ ಆದರೂ, ಈ ಶರೀರವು ನನ್ನದು ಎಂಬ ಅಭಿಮಾನವೇ ತುಂಬಿತುಳುಕುತ್ತಿರುವದು. ಆದರೆ ಪ್ರಯತಾತ್ಮರಾದ, ಪರಿಶುದ್ಧಾಂತಃಕರಣರಾಗಿರುವ ಭಕ್ತರಿಗೆ ಇಂಥ ಅಭಿಮಾನ ವಿರುವದಿಲ್ಲ. ಈ ಲೋಕದಲ್ಲಿ ನನ್ನದೆಂಬುದು ಯಾವದಿದೆ? ಎಲ್ಲವೂ ಆತನದೇ - ಎಂಬ ಭಾವನೆಯು ಅವರ ಹೃದಯದಲ್ಲಿ ತುಂಬಿರುತ್ತದೆ. ಆದ್ದರಿಂದ ಅವರು ಭಕ್ತಿಯಿಂದ ಪರಮಾತ್ಮನಿಗೆ ಹೀಗೆ ಅರ್ಪಿಸುವದರಿಂದ ಸರ್ವಸ್ವವನ್ನೂ ಕೊಟ್ಟಂತೆ ಆಗುವದು.

ಬೈಬಲಿನಲ್ಲಿರುವ ಒಂದು ಕಥೆಯನ್ನು ನೀವು ಕೇಳಿರಬಹುದು; ಯಹೋದಿಗಳ ದೇವಾಲಯದಲ್ಲಿ ಜನರು ಗುಂಪು ಕಟ್ಟಿಕೊಂಡು ಬಂದು ತಮ್ಮ ತಮ್ಮ ಕಾಣಿಕೆಗಳನ್ನು ಒಪ್ಪಿಸುತ್ತಿದ್ದರಂತೆ. ಆ ಜನರೊಳಗೆ ಒಬ್ಬ ಮದುಕಿಯಿದ್ದಳು. ಅವಳಿಗೆ ಬಹಳ ವಯಸ್ಸಾಗಿದ್ದದ್ದರಿಂದ ಬಲುಕಷ್ಟದಿಂದ ಜನರ ನಡುವೆ ಹೇಗೋ ಅವಕಾಶವನ್ನು ಮಾಡಿಕೊಂಡು ಬಂದು ಡಬ್ಬಿಯ ಗಡಿಗೆಯಲ್ಲಿ ತನ್ನಲ್ಲಿದ್ದ ಒಂದು ಮೈಟ್ ಎಂಬ ಒಂದು ಕವಡೆಯ ಬೆಲೆಯ ನಾಣ್ಯವನ್ನು ಹಾಕಿದಳು. ಇದನ್ನು ನೋಡುತ್ತಿದ್ದ ಕ್ರೈಸ್ತನು "ಆಕೆಯ ಅರ್ಪಣೆಗೆ ಮಿಕ್ಕವರು ಕೊಟ್ಟಿರುವದೆಲ್ಲಕ್ಕಿಂತಲೂ ಹೆಚ್ಚಿನ ಬೆಲೆಯುಂಟು; ಏಕೆಂದರೆ ಆಕೆಯು ತನ್ನ ಸರ್ವಸ್ವವನ್ನೂ ಒಪ್ಪಿಸಿರುತ್ತಾಳೆ!" ಎಂದನಂತೆ. ಇದೀಗ ಭಕ್ತಿಯ ಬೆಲೆ. ನಾವು ಭಗವಂತನಿಗೆ ಅರ್ಪಿಸುವ ಪದಾರ್ಥದಲ್ಲಿ ನಮಗೆ ಒಂದಿಷ್ಟೂ ಮಮತೆಯಿರಬಾರದು; ಇದು ಪರಮೇಶ್ವರನಿಗೆ ಅರ್ಪಿತವಾಗಲಿ ಎಂಬ ಭಕ್ತಿಯ ಭಾವವು ಅದಕ್ಕೆ ಸೇರಿಕೊಂಡಿರಬೇಕು. ಹೀಗಾದರೆ ಅದು ಅವಶ್ಯವಾಗಿ ಭಗವಂತನಿಗೆ ಅರ್ಪಿತವಾಗುವದು. ಭಗವಂತನು ಅದನ್ನು ಪ್ರೇಮದಿಂದ ಸ್ವೀಕರಿಸಿ ಭಕ್ತನನ್ನು ಅನುಗ್ರಹಿಸುವನು. ನಾವು ಒಪ್ಪಿಸುವ ಪದಾರ್ಥದ ಹೊರಗಿನ ಬೆಲೆ ಮುಖ್ಯವಲ್ಲ; ಅದರ ಮಮತೆಯನ್ನು ನಾವು ಬಿಟ್ಟೆವೆ? - ಎಂಬುದೇ ಮುಖ್ಯ. "ಇದೆಲ್ಲ ಭಗವಂತನದೇ, ನನ್ನದೇನಿದೆ?" ಎಂಬ ಹೊರಗಿನ ಬೂಟಾಟಿಕೆಯ ಮಾತು ಮುಖ್ಯವಲ್ಲ, ಭಾಷೆಗಿಂತಲೂ ಭಾವನೆಯೇ ಮುಖ್ಯ. ಆದ್ದರಿಂದಲೇ ಈ ಶ್ಲೋಕದಲ್ಲಿ "ಭಕ್ತ್ಯಾ ಪ್ರಯಚ್ಛತಿ" (ಭಕ್ತಿಯಿಂದ ಕೊಡುತ್ತಾನೋ), "ಭಕ್ತ್ಯುಪಹೃತಂ" (ಭಕ್ತಿಯಿಂದ ತಂದಿರುವ) ಎಂಬ ವಿಶೇಷಣಗಳಲ್ಲಿ ಭಕ್ತಿಯೆಂಬ ಶಬ್ದವನ್ನು ಎರಡು ಸಲ ಪ್ರಯೋಗಿಸಿರುವದು.

'ಪ್ರಯತಾತ್ಮನಃ' ಶುದ್ಧಾಂತಃಕರಣನಾದ ಆತನು ಕೊಟ್ಟದ್ದನ್ನು ತೆಗೆದುಕೊಳ್ಳುವೆನು ಎಂಬ ವಿಶೇಷಣವನ್ನು ನಾವು ಗಮನಿಸಬೇಕು. ಮನಸ್ಸಿನಲ್ಲಿ ಮಮತೆಯ ಮೈಲಿಗೆಯಿಲ್ಲದ

ಶುದ್ಧಭಕ್ತರಿಂದ ಅರ್ಪಿಸಿದ್ದರಲ್ಲಿ ಭಗವಂತನಿಗೆ ಬಹಳ ಪ್ರೇಮವಿರುತ್ತದೆ. ಹಿಂದೆ ಒಂದು ಸಲ ಶ್ರೀಸಚ್ಚಿದಾನಂದಶಿವಾಭಿನವನೃಸಿಂಹಭಾರತೀಸ್ವಾಮಿಗಳವರು ಕಾಲಟಿಯಿಂದ ಹಿಂತಿರುಗಿ ಬಂದಾಗ ಶಿವಮೊಗ್ಗೆಯಲ್ಲಿ ಒಂದೆರಡು ದಿನ ಇಳಿದಿದ್ದರು. ಅವರ ಉಪದೇಶವನ್ನು ಕೇಳುವದಕ್ಕೆಂದು ಸಾವಿರಾರು ಜನರು ಸಾಯಂಕಾಲದಲ್ಲಿ ಸೇರಿದ್ದರು. ದೊಡ್ಡದೊಡ್ಡ ಅಧಿಕಾರಿಗಳೂ ಸಾಹುಕಾರರೂ ತಟ್ಟೆಗಳ ತುಂಬ ಬಾದಾಮಿ, ದ್ರಾಕ್ಷಿ, ಕಲ್ಲುಸಕ್ಕರೆ, ಹಣ್ಣುಗಳು - ಮುಂತಾದ ಪದಾರ್ಥಗಳನ್ನು ಹಾಕಿ ಸ್ವಾಮಿಗಳವರ ಮುಂದೆ ಇಟ್ಟಿದ್ದರು. ಶ್ರೀಶ್ರೀಗಳು ಉಪನ್ಯಾಸವನ್ನು ಪ್ರಾರಂಭಿಸುವ ಮುಂಚೆ ಪೀಠಿಕೆಯಾಗಿ ಒಂದು ಮಾತನ್ನಾಡಿದರು. "ಗುರುವೆಂದರೆ ಯಾರು? ಯಾವನು ಹಿತವನ್ನು ಉಪದೇಶಮಾಡುತ್ತಾನೋ ಅವನು. ಶಿಷ್ಯನೆಂದರೆ ಯಾರು? ಗುರುಗಳ ಉಪದೇಶವನ್ನು ಶ್ರದ್ಧೆಯಿಂದ ಕೇಳಿ ಅದರಂತೆ ನಡೆಯುವವನು. ಶಿಷ್ಯನು ಗುರುಗಳಿಗೆ ಯಾವ ಉತ್ತಮಪದಾರ್ಥಗಳನ್ನು, ಹಣ್ಣುಹಂಪಲುಗಳನ್ನು, ಅಥವಾ ಧನವನ್ನು ಒಪ್ಪಿಸಿರುತ್ತಾನೆ ಎಂಬುದನ್ನು ನೋಡಿ ಅವನ ಶಿಷ್ಯತ್ವದ ಬೆಲೆಯನ್ನು ಕಟ್ಟುವದಕ್ಕೆ ಬರುವದಿಲ್ಲ; ಗುರುವಿನ ವಾಗ್ವೈಖರಿ, ರೂಪ, ಕಂಠಧ್ವನಿಯ ಇಂಪು - ಇವುಗಳನ್ನು ನೋಡಿ ಅವನ ಗುರುತ್ವದ ಬೆಲೆಯನ್ನೂ ಕಟ್ಟುವದಕ್ಕೆ ಬರುವದಿಲ್ಲ" ಎಂದು ಅವರು ಅಪ್ಪಣೆಕೊಡಿಸಿದರು. ಯಾರು ಹೀಗೆ ಪವಿತ್ರಾಂತಃಕರಣದಿಂದ ಪರಮಾತ್ಮನ ಕಡೆಗೆ ತಿರುಗಿರುವರೋ ಯಾರು ಭಕ್ತಿಯಿಂದ ತಮ್ಮ ತನುಮನಧನಗಳನ್ನು ಭಗವಂತನಿಗೆ ಅರ್ಪಿಸುವರೋ ಅವರ ಅರ್ಪಣೆಗೆ ಬಹಳ ಬೆಲೆಯಿರುತ್ತದೆ.

ಇನ್ನು "ಅಶ್ನಾಮಿ" ಆ ಭಕ್ತನು ಕೊಟ್ಟದ್ದನ್ನು ನಾನು ತಿನ್ನುವೆನು - ಎಂದು ಭಗವಂತನು ಹೇಳಿದ್ದಾನಲ್ಲ, ಈ ಮಾತಿನ ಸ್ವಾರಸ್ಯವನ್ನು ನಾವು ಈಗ ಚಿಂತಿಸಬೇಕು. ಭಕ್ತಿಯುಂಟಾಗುವ ಮುಂಚೆ ನಾವು ವಸ್ತುಗಳಲ್ಲಿ ನನ್ನದು ಎಂಬ ಅಭಿಮಾನವನ್ನು ಮಾಡಿದ್ದರಿಂದ ಅದನ್ನು ಪರಮಾತ್ಮನಿಂದ ಕದ್ದುಕೊಂಡಂತೆ ಆಗಿರುತ್ತದೆ. ಆದರೆ ಯಾವಾಗ ನಾವು ಈ ನನ್ನತನವನ್ನು ಬಿಟ್ಟುಬಿಡುವೆವೋ, ಪರಮಾತ್ಮನಲ್ಲಿಯೇ ಅನನ್ಯಭಕ್ತಿಯಿಂದ ನೆಲೆಸಿರುವದಕ್ಕೆ ಹವಣಿಸುತ್ತಾ ಬರುವೆವೋ ಆಗ ಆ ವಸ್ತುವನ್ನು ಮಾತ್ರವಲ್ಲ, ನಮ್ಮ ಸರ್ವಸ್ವವನ್ನೂ ಆತನಿಗೆ ಒಪ್ಪಿಸಿ ಆತ್ಮನಿವೇದನವನ್ನು ಮಾಡಿಕೊಂಡಂತೆ ಆಗುವದು. ಅಲ್ಲಿಂದ ಮುಂದಕ್ಕೆ ನಮ್ಮ ಆರಾಧನೆಯಲ್ಲಿ ಯಾವ ಕಲಂಕವೂ ಇರುವದಿಲ್ಲ. ಹೇರನ್ನೊಪ್ಪಿಸಿದವರಿಗೆ ಸುಂಕವೆಲ್ಲಿಯದು? ಹೀಗೆ ಭಗವಂತನಿಗೆ ನಮ್ಮ ಅಹಂತೆಯನ್ನೂ ಮಮತೆಯನ್ನೂ ಪೂರ್ಣವಾಗಿ ಒಪ್ಪಿಸುವದೇ ಭಕ್ತಿಯ ಕೊನೆಯ ಮೆಟ್ಟಿಲು; ಇದೇ ಅನನ್ಯಭಕ್ತಿಯು. ಇದನ್ನೇ ಈ ಅಧ್ಯಾಯದಲ್ಲಿ ವಿಜ್ಞಾನಸಹಿತವಾದ ಜ್ಞಾನವೆಂದು ಕರೆದಿರುವದು.

# ೬೭. ಕರ್ಮಗಳನ್ನು ಭಗವಂತನಿಗೆ ಅರ್ಪಿಸುವದು ೯-(೨೭-೩೩)

(೨೧-೧೨-೪೭)

ವಿದ್ಯುದ್ದೀಪಗಳಿಗೆಲ್ಲ ಮೂಲವೊಂದೇ ಆಗಿರುವಂತೆ, ಬೇರೆಬೇರೆಯಾಗಿ ಕಾಣುವ ದೀಪಗಳೂ ನಿಜವಾಗಿ ಒಂದೇ ಶಕ್ತಿಯ ರೂಪಗಳಾಗಿರುವಂತೆ, ಪರಮಾತ್ಮನೊಬ್ಬನೇ ಎಲ್ಲಕ್ಕೂ ಕೇಂದ್ರವು, ಆತನೇ ಮಿಕ್ಕೆಲ್ಲದರ ರೂಪದಿಂದ ಬೇರೆಬೇರೆಯಾಗಿ ಕಾಣುತ್ತಿರುವವನು. ಇದನ್ನು ಜ್ಞಾನಿಗಳು ತಿಳಿದಿರುತ್ತಾರೆ, ಭಕ್ತರು ಭಾವಿಸುತ್ತಾರೆ. ಈ ಲೋಕವೂ ಪರಲೋಕವೂ ಎಲ್ಲವೂ ಪರಮಾತ್ಮನ ಉಸಿರೇ. ಆದ್ದರಿಂದ ಏಕತ್ವದಿಂದಲೂ ಬಹುತ್ವದಿಂದಲೂ ಆ ಪರಮಾತ್ಮನೊಬ್ಬನನ್ನೇ ಜ್ಞಾನಿಗಳೂ ಭಕ್ತರೂ ಉಪಾಸನೆಮಾಡುತ್ತಿರುವರು.

ದೇವತೆಗಳೆಂಬುವರು ಭಗವಂತನಿಗಿಂತ ಬೇರೆಯಲ್ಲ. ಅವರೆಲ್ಲರೂ ಭಗವತ್ಸ್ವರೂಪರೇ. ಆದರೂ ಬೇರೆಬೇರೆಯಾಗಿ ತೋರುತ್ತಿರುವದರಿಂದ ಅವರನ್ನು ಬೇರೆ ಬೇರೆಯಾಗಿ ಆಯಾ ದೇವತೆಯೆಂದೇ ಭಾವಿಸಿ ಪೂಜಿಸುವವರು ಅನ್ಯದೇವತಾಭಕ್ತರು. ಅನ್ಯದೇವತಾಭಕ್ತರು ಮಾಡುವ ಪೂಜೆಗೂ ಭಗವಂತನೇ ವಿಷಯನು; ಅವರಿಗೆ ಫಲವನ್ನು ಕೊಡುವವನೂ ಭಗವಂತನೇ. ಆದರೆ ಒಂದು ವಿಶೇಷ. ಯಾರು ಅನನ್ಯಭಕ್ತಿಯಿಂದ ಪರಮಾತ್ಮನನ್ನೇ ಆರಾಧಿಸುವರೋ ಅವರನ್ನು ಭಗವಂತನು ತಾನೇ ನೇರಾಗಿ ನೋಡಿಕೊಳ್ಳುತ್ತಾನೆ; ಇಂದ್ರಾದಿದೇವತೆಗಳ ಮೂಲಕವಾಗಿ ತನ್ನನ್ನು ಪೂಜಿಸುವವರನ್ನು ಇಂದ್ರಾದಿಗಳ ಮೂಲಕವಾಗಿಯೇ ನೋಡಿಕೊಳ್ಳುತ್ತಾನೆ. ಇವನು ಇಂದ್ರನು, ಬಲವನ್ನು ಕೊಡುವ ದೇವತೆ; ಇವನು ಆದಿತ್ಯನು, ಆರೋಗ್ಯವನ್ನು ಕೊಡುವ ದೇವತೆ - ಎಂದು ಮುಂತಾಗಿ ಪರಿಚ್ಛಿನ್ನಬುದ್ಧಿಯಿಂದ ಅನ್ಯದೇವತಾಭಕ್ತರು ಆರಾಧಿಸುತ್ತಾರೆ. ಆದ್ದರಿಂದ ಅವರಿಗೆ ಪರಿಚ್ಛಿನ್ನವಾದ ಫಲವೇ ಆಗುತ್ತದೆ. ಅವರಿಗೆ ಭಗವಂತನನ್ನೇ ಪೂಜಿಸುವ ಅಭಿಪ್ರಾಯವೂ ಇರುವದಿಲ್ಲ, ಇಂದ್ರಾದಿದೇವತೆಗಳ ಮೂಲಕವಾಗಿ ಭಗವಂತನನ್ನೇ ಪೂಜಿಸುತ್ತಿರುವೆವೆಂಬ ಅರಿವೂ ಇರುವದಿಲ್ಲ. ಆದ್ದರಿಂದ ಅವರಿಗೆ ಭಗವಂತನ ಪೂಜೆಯಿಂದಾಗಬೇಕಾದ ಅನಂತಫಲವು ಸಿಕ್ಕದೆ ಇರುತ್ತದೆ. ಇನ್ನೊಂದು ವಿಷಯ. ಇಂದ್ರನು ಬಲವನ್ನು ತಮಗೆ ಕೊಡುತ್ತಾನೆಂದು ಅವರ ನಂಬಿಕೆಯಿರುವದಷ್ಟೆ; ಪರಮಾತ್ಮನು ತನಗೆ ಅನುಗ್ರಹಿಸಿರುವ ಬಲದಲ್ಲಿಯೇ ಒಂದಂಶವನ್ನು ನಮಗೆ ಇಂದ್ರನು ಕೊಡುತ್ತಾನೆ ಅಥವಾ ಇಂದ್ರನ ಮೂಲಕ ಭಗವಂತನೇ ನಮಗೆ ಕೊಡುತ್ತಾನೆ. ಇಂದ್ರನೇ ಕೊಡುವ ಬೇರೆ ಬಲವೆಂಬುದೇ ಇಲ್ಲ, ಇದೇ ಪರಮಾರ್ಥವು. ಹೀಗೆಯೇ ಮಿಕ್ಕ ದೇವತೆಗಳಿಂದ ಸಿಕ್ಕುವ ಫಲವನ್ನೂ ಅರಿಯಬೇಕು.

ಯಾರುಯಾರು ಹೇಗೆಹೇಗೆ ಭಗವಂತನನ್ನು ಆರಾಧಿಸುತ್ತಾರೋ ಅವರವರಿಗೆ ಅಂತ್ಯದಲ್ಲಿ ಅಂಥಂಥ ಫಲವು ಆಗುತ್ತದೆ. ಇಂದ್ರನನ್ನು ಆರಾಧಿಸುವವರಿಗೆ ಇಂದ್ರ ಸಾಯುಜ್ಯವೂ, ಆದಿತ್ಯನನ್ನು ಆರಾಧಿಸುವವರಿಗೆ ಆದಿತ್ಯಸಾಯುಜ್ಯವೂ ಆಗುತ್ತದೆ. ಭಗವಂತನನ್ನೇ ನೇರಾಗಿ ಆರಾಧಿಸುವವರಿಗೆ ಭಗವತ್ಸಾಯುಜ್ಯವೇ ದೊರೆಯುತ್ತದೆ. ಕಣ್ಣಿಗೆ ಸೂಜಿಯನ್ನು ನೋಡುವದಕ್ಕೆ ಎಷ್ಟು ಆಯಾಸವು ಬೇಕೋ ಬೆಟ್ಟವನ್ನು ನೋಡುವದಕ್ಕೂ ಅಷ್ಟೇ ಆಯಾಸವು ಬೇಕು. ಉಪಾಸಕರಿಗೆ ದೇವತೆಗಳನ್ನು ಬೇರೆಬೇರೆಯಾಗಿ ಆರಾಧಿಸುವದಕ್ಕೆ ಬೇಕಾದಷ್ಟು ಆಯಾಸವೇ ಭಗವಂತನನ್ನು ಆರಾಧಿಸುವದಕ್ಕೂ ಸಾಕು. ಹೀಗಿರುವಲ್ಲಿ ಅನ್ಯದೇವತಾಭಕ್ತರಾಗಿ ಅಲ್ಪಫಲವನ್ನು ಪಡೆಯುವದಕ್ಕಿಂತ ಭಗವಂತನನ್ನೇ ಆರಾಧಿಸಿ ಅನಂತಫಲವನ್ನೇಕೆ ಪಡೆದು ಕೊಳ್ಳಬಾರದು? ಇನ್ನೂ ಸರಿಯಾಗಿ ನೋಡಿದರೆ ಭಗವಂತನ ಆರಾಧನೆಯಲ್ಲಿ ಸೌಲಭ್ಯವು ಹೆಚ್ಚು. ಏಕೆಂದರೆ ಭಗವಂತನು ನಾವು ಅರ್ಪಿಸುವ ಪದಾರ್ಥಗಳ ಬೆಲೆಯನ್ನೇನೂ ನೋಡುವದಿಲ್ಲ; ಭಕ್ತಿಯಿಂದ ಎಂಥ ಅಲ್ಪಪದಾರ್ಥವನ್ನು ಆತನಿಗೆ ಅರ್ಪಿಸಿದರೂ ತೃಪ್ತನಾಗುತ್ತಾನೆ. ದೇವತೆಗಳಿಗೆ ಪರಿಚ್ಛಿನ್ನಾಭಿಮಾನವಿರುತ್ತದೆ; ಅವರಿಗೆ ವಿಧಿಬದ್ಧವಾದ ಕರ್ಮಗಳಿಂದ ಮಾಡಿದ ಹೋಮಾದಿಗಳಿಂದಲೇ ಪ್ರೀತಿಯಾಗುತ್ತದೆ. ಭಗವಂತನಿಗೆ ಹಾಗಲ್ಲ, ಅವನಿಗೆ ಹೃದಯದ ಭಾವವು ಮುಖ್ಯ. ಫ್ರಾನ್ಸ್ ದೇಶದ ಒಬ್ಬ ದೊರೆಗೆ ಬಾಲ್ಯಸ್ನೇಹಿತನಾಗಿದ್ದ ಗೌಡನೊಬ್ಬನು ಪಟ್ಟಾಭಿಷೇಕಸಮಯದಲ್ಲಿ ಒಂದು ಕುಂಬಳಕಾಯಿಯನ್ನು ಅರ್ಪಿಸಿದನಂತೆ; ಆಗ ಆ ರಾಜನು ಅವನ ಅಕೃತ್ರಿಮ ಪ್ರೇಮಕ್ಕೆ ಮೆಚ್ಚಿ ಇನ್ನೂರು ನಾಣ್ಯಗಳನ್ನು ಕೊಟ್ಟು ಸನ್ಮಾನದಿಂದ ಕಳುಹಿಸಿಕೊಟ್ಟನಂತೆ. ಇದನ್ನು ಕೇಳಿ ಒಬ್ಬ ಸರದಾರನು ಒಂದು ಒಳ್ಳೆಯ ಜಾತ್ಯಶ್ವವನ್ನು ತಂದುಕೊಟ್ಟನಂತೆ; ಅವನ ದುರಾಶೆಯನ್ನು ತಿಳಿದ ಅರಸು ಮೊದಲು ತನಗೆ ಗೌಡನು ಕೊಟ್ಟಿದ್ದ ಕುಂಬಳಕಾಯಿಯನ್ನು ಕೊಟ್ಟು "ಇದಕ್ಕೆ ನನಗೆ ಇನ್ನೂರು ಸುವರ್ಣಗಳು ಖರ್ಚಾಗಿದ್ದವು; ಇದನ್ನು ನಿನಗೆ ಕೊಟ್ಟಿರುತ್ತೇನೆ" ಎಂದನಂತೆ! ಭಗವಂತನಿಗೂ ಹೀಗೆಯೇ. ಅವನಿಗೆ ನೀವು ಏನು ಕೊಡುತ್ತೀರೆಂಬುದು ಮುಖ್ಯವಲ್ಲ, ಹೇಗೆ ಕೊಡುತ್ತೀರೆಂಬುದೇ ಮುಖ್ಯ.

ಆದ್ದರಿಂದ ಭಗವಂತನು ಅರ್ಜುನನಿಗೆ ಮಾಡಿರುವ ಉಪದೇಶವೇನೆಂದರೆ ನನಗಾಗಿ ಯಾವದೊಂದನ್ನೂ ಮಾಡಬೇಕಾದದ್ದು ಇಲ್ಲ. ಆದರೆ ನೀನು

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌನ್ತೇಯ ತತ್ಕುರುಷ್ವ ಮದರ್ಪಣಮ್ ॥** (೯-೨೭)

"ಯಾವ ಕರ್ಮವನ್ನು ಮಾಡುವೆಯೋ ಯಾವ ಫಲವನ್ನು ಅನುಭವಿಸು ವೆಯೋ, ಯಾವ ಹೋಮವನ್ನು ಮಾಡುವೆಯೋ ಯಾವ ದಾನವನ್ನು ಮಾಡುವೆಯೋ ಅದನ್ನು ನನಗೆ ಅರ್ಪಣೆಮಾಡು". ಲೌಕಿಕಕರ್ಮ, ವೈದಿಕಕರ್ಮ ಎಲ್ಲವೂ ಆತನ ಪ್ರೇರಣೆಯಿಂದ ಮಾಡತಕ್ಕದ್ದು, ನನಗೆ ಯಾವ ವಿಧದಿಂದಲೂ ಸೇರಿದ್ದಲ್ಲ; ಕರ್ಮಫಲವೆಂದು ಆತನು ಕೊಟ್ಟಿರುವದೂ ಆತನದೇ, ನನಗೆ ಸೇರಿದ್ದಲ್ಲ - ಎಂಬ ಭಾವನೆ ಬಂದರೆ ಸಾಕು - ಭಗವಂತನ ಭಕ್ತಿಯು ಬಲಿತುಕೊಂಡು ಭಗವ ದಾರಾಧನೆಯನ್ನು ಮಾಡಿಸಿಬಿಡುತ್ತದೆ. ಯಾವದೇ ಆಗಲಿ 'ನನ್ನದು' ಎಂದರೆ ಭಗವಂತನಿಗೆ ಅಪಚಾರವಾದಂತೆ, ಎಡ್ವರ್ಡ್‌ಕಾರ್ಪೆಂಟರ್ ಎಂಬಾತನು "ನಾಗರಿ ಕತೆಯೂ, ಅದರ ನಿದಾನವೂ ಚಿಕಿತ್ಸೆಯೂ" ಎಂಬ ಹೆಸರಿನಿಂದ ಒಂದು ಗ್ರಂಥವನ್ನು ಬರೆದಿರುತ್ತಾನೆ. ಅವನ ಗ್ರಂಥದ ಹೆಸರಿನಿಂದಲೇ ಅವನಿಗೆ ನಾಗರಿಕತೆ ಎಂಬುದು ಒಂದು ಬಗೆಯ ರೋಗವೆಂಬ ಭಾವನೆ ಇತ್ತೆಂದು ನಿಮಗೆ ಹೊಳೆದಿರ ಬಹುದು. ಆ ಗ್ರಂಥಕಾರನು ಹೇಳಿರುವದೇನೆಂದರೆ ಮಕ್ಕಳಿಗೆ ನಾಯಿಕೆಮ್ಮು, ಸಿಡುಬು ಮುಂತಾದ ರೋಗಗಳು ತಪ್ಪದೆ ಬರುವಂತೆ ಜನಾಂಗಗಳಿಗೆ ಬಾಲ್ಯದಶೆಯಲ್ಲಿ ನಾಗರಿಕತೆ ಎಂಬ ಒಂದಾನೊಂದು ರೋಗವು ಬರುತ್ತದೆ. ನಾಯಿಕೆಮ್ಮು ಮುಂತಾದ ರೋಗಗಳಲ್ಲಿ ಸಾಯುವ ಮಕ್ಕಳು ಬಹಳ; ಕೆಲವು ಬದುಕಿಕೊಳ್ಳುವದೂ ಉಂಟು. ಇದರಂತೆ ನಾಗರಿಕತೆಯ ರೋಗವು ಜನಾಂಗಗಳಿಗೆಲ್ಲ ತಪ್ಪದೆ ಒಂದಾನೊಂದು ಕಾಲದಲ್ಲಿ ಬಂದೇಬರುತ್ತದೆ. ಆ ರೋಗವನ್ನು ದಾಟಿ ಬದುಕಿದ ಜನಾಂಗಗಳು ಬಹುಕಾಲ ಬದುಕುತ್ತವೆ. ನಾಗರಿಕತೆಯ ರೋಗದ ಗುರುತೇನೆಂದರೆ "ನನ್ನದು" (ಆಸ್ತಿ) ಎಂಬ ಭಾವನೆ. ಕೆಲವು ಕಾಡುಜನರಿಗೆ ಈ ರೋಗವು ಇನ್ನೂ ಬಂದಿಲ್ಲ; ಅದು ಅವಶ್ಯವಾಗಿ ಅವರಿಗೂ ಬಂದೇ ತೀರುವದು. ಕೆಲವರಿಗೆ, ಉದಾಹರಣೆಗೆ ಭರತಖಂಡ ನಿವಾಸಿಗಳು, ಚೀನದೇಶದವರು - ಮುಂತಾದವರಿಗೆ, ಬಂದು ಹೋಗಿದೆ; ಅವರು ಬದುಕಿಕೊಂಡಿದ್ದಾರೆ. ಆದರೆ ಯೂರೋಪುಖಂಡದವರಿಗೆ ಈ ರೋಗವು ಈಗ ಸಾಂಕ್ರಾಮಿಕವಾಗಿ ತಗಲಿಕೊಂಡಿದೆ. ಅವರು ಇದರಿಂದ ಪಾರಾಗುವರೋ ಇಲ್ಲವೋ ನೋಡಬೇಕು - ಎಂಬುದು ಗ್ರಂಥದ ಸಾರಾಂಶವು. ಆ ಗ್ರಂಥವಿರಲಿ; ನನ್ನದು ಎಂಬುದು ರೋಗವೆಂದೂ, ಭೋಗವನ್ನು ಬಿಟ್ಟು ತ್ಯಾಗದಿಂದ ಈ ಲೋಕದ ಆನಂದವನ್ನು ಅನುಭವಿಸಬೇಕೆಂದೂ ಎಲ್ಲೆಲ್ಲಿಯೂ ಈಶ್ವರಭಾವನೆಯನ್ನು ಮಾಡುತ್ತಿರಬೇಕೆಂದೂ ಉಪನಿಷತ್ತಿನಲ್ಲಿ ಸಾರಿಹೇಳಿರುತ್ತದೆ. ನನ್ನದು ಎಂಬ ರೋಗವು ಪಾಪದ ಫಲವು; ರೋಗಕ್ಕೆ ಶಾಂತಿಯಾಗಿ ಔಷಧ, ದಾನ, ಜಪ, ಹೋಮ, ದೇವತಾರ್ಚನ - ಇವುಗಳನ್ನು ಮಾಡಬೇಕೆಂದು

ಬಲ್ಲವರು ಹೇಳಿರುತ್ತಾರೆ. ನನ್ನದು ಎಂಬ ರೋಗಕ್ಕೆ "ತತ್ಕುರುಷ್ವ ಮದರ್ಪಣಮ್" ಎಂಬುದೇ ಚಿಕಿತ್ಸೆ.

ಯಾವ ಕರ್ಮವನ್ನು ಮಾಡಿದರೂ ನಮ್ಮ ದೇಶದಲ್ಲಿ 'ಶ್ರೀಕೃಷ್ಣಾರ್ಪಣಮಸ್ತು' ಎಂದು ನೀರುಬಿಡಿಸುವ ವಾಡಿಕೆಯಿದೆ. ನೀರುಬಿಡುವದು ಹೊರಗಿನ ಸಂಕೇತವು. ನಿಜವಾಗಿ ಬಿಡತಕ್ಕದ್ದು ಕರ್ತೃತ್ವಭೋಕ್ತೃತ್ವಬುದ್ಧಿ. ನಾನು ಇಂಥ ಕರ್ಮವನ್ನು ಮಾಡಿರುತ್ತೇನೆ, ಇದಕ್ಕೆ ಇಂಥ ಫಲವು ಬೇಕು-ಎಂಬ ಭಾವನೆ ಹೋಗಿ "ಎಲ್ಲವೂ ನೀನು ಅನುಗ್ರಹಿಸಿರುವದು, ನನ್ನದೆಂಬ ಭಾವನೆಯನ್ನು ಬಿಟ್ಟಿದ್ದೇನೆ" ಎಂಬ ಭಾವವು ಹೃದಯದಲ್ಲಿ ಮೂಡಬೇಕು. ನಮ್ಮ ಮನೆಗೆ ಯಾರಾದರೂ ದೊಡ್ಡವರು ಬಂದಾಗ "ಎಲ್ಲವೂ ತಮ್ಮದೇ" ಎಂದು ಬಾಯಿಯಿಂದ ಹೊರಡುವ ಉಪಚಾರದ ಮಾತಿನ ನಿಜವಾದ ಅಭಿಪ್ರಾಯವು ಪರಮೇಶ್ವರನ ವಿಷಯಕ್ಕೆ ನಮ್ಮ ಹೃದಯದಲ್ಲಿ ನೆಲಸಬೇಕು. ಭಗವಂತನೇ ಕರ್ತೃತ್ವಕ್ಕೂ ಭೋಕ್ತೃತ್ವಕ್ಕೂ ಮೂಲವು, ಆತನಿಲ್ಲದೆ ಯಾವದೊಂದೂ ಆಗುವದಿಲ್ಲ - ಎಂಬ ಭಾವನೆಯಿಂದ ಮಾಡುವ ಕರ್ಮವೇ ನಿಜವಾಗಿ ಭಗವಂತನಿಗೆ ಅರ್ಪಣೆಯಾಗುವದು. ಇದರಿಂದಾಗುವ ಫಲವೇನು? - ಎಂದರೆ

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬನ್ಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥** (೯-೨೮)

ಒಳ್ಳೆಯ ಫಲವನ್ನಾಗಲಿ ಕೆಟ್ಟಫಲವನ್ನಾಗಲಿ ಕೊಟ್ಟು ನಮ್ಮಗಳನ್ನು ಆ ಫಲದ ಅನುಭವಕ್ಕಾಗಿ ಈ ಜನ್ಮದಲ್ಲಿಯೂ ಮುಂದಿನ ಜನ್ಮದಲ್ಲಿಯೂ ಬಿಡದೆ ಶರೀರಾದಿಗಳಿಗೆ ಕಟ್ಟಿಹಾಕುತ್ತಿರುವ ಕರ್ಮಗಳಿಂದ ಆಗ ಬಿಡುಗಡೆಯಾಗುವದು. ಕರ್ಮಗಳ ಬಂಧದಿಂದ ಬಿಡುಗಡೆಯಾಗುವದೆಂದರೆ ಕರ್ಮಗಳನ್ನೇ ಬಿಡುವದಲ್ಲ; ಬೆಳಗಿನಿಂದ ಸಾಯಂಕಾಲ ದವರೆಗೂ ಸರಕಾರಿ ಖಜಾನೆಗಳಲ್ಲಿ ಜಮಾಖರ್ಚು ನಡೆಯಿಸುತ್ತಿದ್ದರೂ ಮನೆಗೆ ಬರುವಾಗ ಬರಿಯ ಜೇಬಿನಲ್ಲಿಯೇ ಇರುವ ಸರಾಫನ ಹಾಗೆ ಯಾವ ಕರ್ಮವನ್ನು ಮಾಡಿದರೂ ಅದರ ಫಲವನ್ನು ಮಾತ್ರ ಗಂಟುಹಾಕಿಕೊಳ್ಳದೆ ಇರುವ ಉಪಾಯ. ಪರಮೇಶ್ವರನಿಗೇ ಅರ್ಪಣೆಮಾಡುವದರ ಮೂಲಕ ಕರ್ಮಫಲವನ್ನು ಸಂನ್ಯಾಸಮಾಡಿ ಆ ಭಗವಂತನ ಆರಾಧನಾರೂಪವಾಗಿ ಮಾಡುವ ಕರ್ಮಯೋಗಕ್ಕೆ **'ಸಂನ್ಯಾಸಯೋಗ'** ವೆಂದು ಹೆಸರು. ಯೋಗವು ಯಾರ ಅಂತಃಕರಣದಲ್ಲಿ ನೆಲಸಿರುವದೋ ಅವರಿಗೆ ಬದುಕಿರುವಾಗಲೇ ಕರ್ಮಬಂಧಗಳಿಂದ ಬಿಡುಗಡೆಯಾಗಿರುತ್ತದೆ. ಸತ್ತಬಳಿಕ ಅವರು ಆ ಭಗವಂತನನ್ನೇ ಸೇರಿಕೊಳ್ಳುತ್ತಾರೆ. ಇದಕ್ಕೊಂದು ಲೌಕಿಕದೃಷ್ಟಾಂತವನ್ನು

ಕೊಡಬಹುದು. ಮಹಾತ್ಮಗಾಂಧೀಜಿಯವರು ಭಾರತಯೂನಿಯನ್‌ಗೆ ಸೇರಿದ ಪ್ರಜೆ ಹೌದೆ, ಅಲ್ಲವೆ? - ಎಂದರೆ ಒಂದು ದೃಷ್ಟಿಯಿಂದ ಅವರು ಪ್ರಜೆಗಳಲ್ಲ, ಅವರಿಗೆ ಯಾವ ಆಸ್ತಿಯೂ ಸ್ವಂತವಾದದ್ದು ಇಲ್ಲ, ಅವರು ಯಾವ ಕಂದಾಯವನ್ನೂ ಕೊಡುತ್ತಿಲ್ಲ. ಸರ್ಕಾರದಿಂದ ಯಾವ ಸಹಾಯವನ್ನೂ ಕೋರುತ್ತಿಲ್ಲ. ಇದಕ್ಕೆ ಬದಲು ಅವರನ್ನೇ ಸರ್ಕಾರದವರು ಸಲಹೆಕೇಳುವರು. ಅವರು ಎಲ್ಲರ ಪರವಾಗಿಯೂ ಮಾತನಾಡುವರು, ಯಾವ ಪಕ್ಷಕ್ಕೂ ಸೇರಿದವರಾಗಿಲ್ಲ. ಎಲ್ಲದರಿಂದಲೂ ಮುಕ್ತರಾಗಿರುತ್ತಾರೆ, ಅವರಿಗೆ ನಿತ್ಯಸ್ವಾತಂತ್ರ್ಯವಿದೆ. ಯಾವಾಗಲೂ ಏನಾದರೊಂದು ಒಳ್ಳೆಯ ಕೆಲಸವನ್ನು ಮಾಡುತ್ತಲೇ ಇರುವರು; ಆದರೆ ನಾನು ಮಾಡುತ್ತೇನೆಂದು ಹೆಸರು ಪಡೆಯುವದಕ್ಕೆ ಹವಣಿಸುತ್ತಿಲ್ಲ. ಆದರೂ ಅವರೇ ಭಾರತಸ್ವಾತಂತ್ರ್ಯದ ನಿರ್ಮಾಣ ಕರ್ತರು ಎಂದು ಭೂಮಂಡಲವೇ ಅವರನ್ನು ಹೊಗಳುತ್ತಿರುವದು! ಜ್ಞಾನಿಗಳು ಹೀಗೆಯೇ ಇರುವರು; ಅವರಿಗೆ ಯಾವ ಕರ್ತೃತ್ವಬುದ್ಧಿಯೂ ಇಲ್ಲದ್ದರಿಂದ ಅವರಿಗೆ ಯಾವ ಫಲವೂ ಆಗುವದಿಲ್ಲ. ಅವರು ಲೋಕಕಲ್ಯಾಣಕ್ಕಾಗಿ ದುಡಿಯುತ್ತಲೇ ಇರುವರು. ಇದರಂತೆ ಕರ್ತೃತ್ವಬುದ್ಧಿಯನ್ನು ಇಟ್ಟುಕೊಂಡಿರುವ ಸಾಮಾನ್ಯರು ಕೂಡ ತಾವು ಮಾಡುವ ಕರ್ಮಗಳನ್ನೆಲ್ಲ ಭಗವಂತನಿಗೆ ಅರ್ಪಿಸಿ ಸಂನ್ಯಾಸಯೋಗಿಗಳಾಗಿ ಭಗವಂತನನ್ನೇ ಸೇರುವರು.

ಹಾಗಾದರೆ ಭಗವಂತನಿಗೇ ತಾವು ಮಾಡುವ ಕರ್ಮದ ಫಲವನ್ನೆಲ್ಲ ಬಿಟ್ಟು ಕೊಟ್ಟು, ಅವನಿಗೇ ದಮ್ಮಯ್ಯಗುಡ್ಡೆ ಹಾಕುತ್ತಿರುವವರನ್ನು ಮಾತ್ರ ಆತನು ಕಾಪಾಡುತ್ತಾನೆಂದಾಯಿತು. ಮಿಕ್ಕವರಂತೆಯೇ ಅವನಿಗೂ ರಾಗದ್ವೇಷಗಳುಂಟೆಂದಾಯಿತು! - ಎಂದರೆ ಹಾಗಲ್ಲ. ಈ ಶಂಕೆಗೆ ಭಗವಂತನೇ ಹೇಳಿರುವ ಪರಿಹಾರವನ್ನು ಕೇಳಿ :

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜನ್ತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಮ್॥**(೯-೨೯)

ಬೆಂಕಿಯು ತನ್ನ ಹತ್ತಿರಕ್ಕೆ ಬಂದವರ ಚಳಿಯನ್ನು ಮಾತ್ರ ಕಳೆಯುತ್ತದೆ, ಅದರ ಹತ್ತಿರಕ್ಕೆ ಬಂದಷ್ಟೂ ಚಳಿಯು ಹೋಗುತ್ತದೆ. ಆದರೆ ದೂರಕ್ಕೆ ಇರುವವರ ಚಳಿಯನ್ನು ಅದು ಕಳೆಯುವದಿಲ್ಲ. ಆದ ಮಾತ್ರದಿಂದ ಬೆಂಕಿಗೆ ರಾಗದ್ವೇಷವಿದೆ ಎನ್ನಬಹುದೇನು? ಇಲ್ಲ, ಇದರಂತೆ ಭಗವಂತನಿಗೂ ಯಾರೂ ಬೇಕಾದವರಿಲ್ಲ. ಯಾರೂ ಬೇಡದವರಿಲ್ಲ. ಆದರೂ ಯಾರುಯಾರು ಭಗವಂತನನ್ನು ಪ್ರೇಮದಿಂದ ಭಜಿಸುವರೋ ಅವರೆಲ್ಲ ತಮ್ಮ ಭಕ್ತಿಯ ನಿಮಿತ್ತದಿಂದ ಭಗವಂತನಿಗೆ ಹತ್ತಿರ ಹತ್ತಿರವಾಗುತ್ತಾ ಹೋಗುವರು; ಅಷ್ಟಷ್ಟು ಭಗವಂತನ ಅನುಗ್ರಹಕ್ಕೆ ಪಾತ್ರರಾಗುವರು. ಅವರು ಪರಮಾತ್ಮನಲ್ಲಿಯೇ ಇರುವರು, ಪರಮಾತ್ಮನೂ ಅವರಲ್ಲಿರುವನು. ಇದು

ಭಕ್ತಿಯ ಮಹಿಮೆಯೇ ಹೊರತು ಭಗವಂತನ ರಾಗದ್ವೇಷನಿಮಿತ್ತದಿಂದಾಗುವ ಫಲವಲ್ಲ. ಪರಮಾತ್ಮನು ನಮ್ಮೆಲ್ಲರಿಗೂ ಆತ್ಮನು. ಇದು ನಮ್ಮೆಲ್ಲರ ಹಕ್ಕು. ಆದರೆ ಇದು ನಮಗೆ ತಿಳಿಯಬೇಕು, ಇಲ್ಲದಿದ್ದರೆ ಉಪಯೋಗವಿಲ್ಲ. ನಾನು ಒಬ್ಬರಿಗೆ ಹತ್ತು ರೂಪಾಯಿಗಳನ್ನು ಕೊಡಬೇಕಾಗಿತ್ತು; ಅವರು ಒಂದು ದಿನ ಎರಡು ಸಲ ಬಂದು ಕೇಳಿದರು. ನನ್ನಲ್ಲಿ ದುಡ್ಡಿಲ್ಲದ್ದರಿಂದ ಬಹಳ ಪೇಚಾಟಕ್ಕಿಟ್ಟುಕೊಂಡಿತು. ಆದರೆ ಯಾವದೋ ಕಾರಣದಿಂದ ನನ್ನ ಸಂಸ್ಕೃತನಿಘಂಟುವನ್ನು ತೆಗೆದು ನೋಡುವಾಗ ಅದರಲ್ಲಿ ಯಾವಾಗಲೋ ನಾನೇ ಇಟ್ಟು ಮರೆತಿದ್ದ ಹತ್ತುರೂಪಾಯಿನ ನೋಟು ಕಣ್ಣಿಗೆ ಬಿತ್ತು! ಕೂಡಲೆ ನನ್ನ ಸಾಲವನ್ನು ತೀರಿಸಿಕೊಂಡೆನು; ಮನಸ್ಸಿಗೆ ತೃಪ್ತಿಯಾಯಿತು. ಇದರಂತೆ ಭಗವಂತನು ನಮ್ಮ ಆತ್ಮನೇ ಆಗಿದ್ದರೂ ಅದು ತಿಳಿಯದ್ದರಿಂದ ನಮಗೆ ಆತನು ದೂರವಾಗಿರುತ್ತಾನೆ. ನಮಗೆ ಪರಮಾತ್ಮನೇ ಬೇಕು, ಆತನೇ ನಮಗೆ ಆತ್ಮನಾಗಬೇಕು ಎಂಬ ಹಂಬಲು ಬಂತೆಂದರೆ, ಅದಕ್ಕಾಗಿ ಪ್ರಯತ್ನಮಾಡಿದರೆ, ಕೂಡಲೆ ಆತನ ದರ್ಶನವಾಗುವದು. ಆದರೆ ಪರಮಾತ್ಮನ ಅನುಗ್ರಹವಾದರೆ ಆಗಲಿ, ಎಂದು ಸುಮ್ಮನೆ ಕುಳಿತವರಿಗೆ, ಅಥವಾ ಬೇರೊಂದು ಪ್ರಯೋಜನಕ್ಕಾಗಿ ಕೆಲಸಮಾಡುತ್ತಿರುವವರಿಗೆ ಪರಮಾತ್ಮನು ಆಗಲೂ ಅವರ ಆತ್ಮನೇ ಆಗಿದ್ದರೂ ಬಹುದೂರದಲ್ಲಿರುತ್ತಾನೆ.

ಭಗವಂತನು ಪುಣ್ಯವಂತರನ್ನು ತನ್ನ ಹತ್ತಿರಕ್ಕೆ ಕರೆಯುತ್ತಾನೆ, ಪಾಪಿಗಳನ್ನು ದೂಡುತ್ತಾನೆ - ಎಂದು ತಿಳಿಯಬಾರದು. ಪಾಪಿಗಳ ದುಃಖವೆಂಬುದು ಭಗವಂತನಿಂದ ಹಿಂದಿರುಗಿದ್ದರ ಫಲವು; ಆದರೆ ಪಾಪಿಗಳಿಗೆ ತಮ್ಮ ತಪ್ಪನ್ನು ಸರಿಪಡಿಸಿಕೊಳ್ಳುವದಕ್ಕೆ ಯಾವ ಸಂದರ್ಭವನ್ನೂ ಭಗವಂತನು ಕೊಟ್ಟೇ ಇಲ್ಲವೆಂದಾಗಲಿ ಅವರಿಗೆ ನಿತ್ಯನರಕವನ್ನೇ ಏರ್ಪಡಿಸಿರುತ್ತಾನೆಂದಾಗಲಿ ಭಾವಿಸಬಾರದು. ಎಂಥವರಿಗಾದರೂ ಪರಮೇಶ್ವರನ ಕಡೆಗೆ ತಿರುಗುವದಕ್ಕೆ ಯಾವಾಗಲೂ ಅವಕಾಶವಿರುತ್ತದೆ. ಭಗವಂತನ ವಾಗ್ದಾನವನ್ನು ಕೇಳಿರಿ :

**ಅಪಿ ಚೇತ್ ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮನ್ತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ (೯-೩೦)**
**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾನ್ತಿಂ ನಿಗಚ್ಛತಿ ।**
**ಕೌನ್ತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ (೯-೩೧)**

ಪಾಪಿಗಳಾಗಿರುವವರು “ನಾವು ಪಾಪಕರ್ಮಗಳನ್ನು ಮಾಡಿಬಿಟ್ಟಿರುತ್ತೇವೆ; ಭಗವಂತನಿಗೆ ಹೇಗೂ ನಮ್ಮ ಮೇಲೆ ಕರುಣವಿಲ್ಲ” ಎಂದು ಭಾವಿಸುವದು

ಅಥವಾ ತಾವು ಪುಣ್ಯವನ್ನು ಮಾಡಿರುತ್ತೇವೆಂದು ತಿಳಿದುಕೊಂಡಿರುವವರು "ಇವರೆಲ್ಲ ಪಾಪಿಗಳು, ಇವರನ್ನು ಹತ್ತಿರ ಸೇರಿಸಬಾರದು; ಇವರು ಭಗವಂತನ ಕೃಪೆಗೆ ದೂರವಾಗಿರುವವರು" ಎಂದು ಯಾರನ್ನೂ ಹಳಿಯಬಾರದು. ಭಗವಂತನು ಇಷ್ಟು ಜನರು ಪಾಪಿಗಳು, ಅವರು ಎಂದೆಂದಿಗೂ ದುಃಖಿಗಳೇ ಆಗಿರಬೇಕು; ಇಷ್ಟು ಜನರು ಪುಣ್ಯವಂತರು, ಅವರು ಎಂದೆಂದಿಗೂ ಸುಖಿಗಳೇ ಆಗಿರಬೇಕು - ಎಂದು ಜೀವರನ್ನು ವಿಂಗಡಿಸಿಟ್ಟುಕೊಂಡಿರುವದಿಲ್ಲ. ಯಾವನು ಎಷ್ಟೇ ಪಾಪವನ್ನು ಮಾಡಿರಲಿ, ನೀನೇ ಶರಣು ಎಂದು ಭಗವಂತನ ಕಡೆಗೆ ತಿರುಗಿದರೆ ಸಾಕು, ಅವನು ಸಾಧುವಾದ ನೆಂದೇ ತಿಳಿಯಬೇಕು; ಏಕೆಂದರೆ ಅವನು ಉತ್ತಮವಾದ ಸಂಕಲ್ಪವನ್ನು ಮಾಡಿರುತ್ತಾನೆ. ಪಾಪಿಯಾದವನು ಪಶ್ಚಾತ್ತಾಪದಿಂದ ಭಗವಂತನಲ್ಲಿ ಭಕ್ತಿಯನ್ನು ಮಾಡುವದಕ್ಕೆ ಪ್ರಯತ್ನಿಸಿದ ಮಾತ್ರದಿಂದ ಬೇಗಬೇಗನೆ ಧರ್ಮಾತ್ಮನಾಗುವನು, ಕೊನೆಗೆ ಶಾಶ್ವತವಾದ ಶಾಂತಿಯನ್ನೇ ಹೊಂದುವನು. ಆದ್ದರಿಂದ "ಎಲೈ ಕುಂತೀಕುಮಾರನೆ, ನನ್ನ ಭಕ್ತನು ಯಾವನೂ ಹಾಳಾಗುವದಿಲ್ಲ, ಎಂಬುದನ್ನು ನೀನು ಎಲ್ಲಿ ಬೇಕಾದರೂ ಶಪಥ ಪೂರ್ವಕವಾಗಿ ಸಾರಬಹುದು" ಎಂದು ಭಗವಂತನು ಅಪ್ಪಣೆಕೊಡಿಸಿರುತ್ತಾನೆ.

ಇದಕ್ಕೊಂದು ಪುರಾಣದ ಉದಾಹರಣೆಯನ್ನು ಮನಸ್ಸಿಗೆ ತಂದುಕೊಳ್ಳಬಹುದು. ಮಹಾಪಾತಕಿಯೊಬ್ಬನು ನರಕದಲ್ಲಿ ವ್ಯಥೆಪಡುತ್ತಿರುವಲ್ಲಿ ಅಲ್ಲಿಗೆ ಶತಾನಂದನೆಂಬ ಪರಮೇಶ್ವರಭಕ್ತನು ಬಂದು ಅವನ ಮೇಲೆ ಕನಿಕರವುಂಟಾದ್ದರಿಂದ ಪಂಚಾಕ್ಷರೀ ಮಂತ್ರವನ್ನು ಉಚ್ಚರಿಸಿದನಂತೆ. ಆ ಪಾಪಿಯು ಪರಮೇಶ್ವರನ ಸ್ಮರಣೆಯನ್ನು ತಂದು ಕೊಡುವ ಆ ಮಹಾಮಂತ್ರದ ಶ್ರವಣಮಾತ್ರದಿಂದಲೇ ಪರಮಾನಂದವನ್ನು ಪಡೆದುಕೊಂಡನಂತೆ. ಕೂಡಲೆ ನರಕವು ಸ್ವರ್ಗವಾಯಿತಂತೆ! ಯಾವ ಪಾಪವು ತಾನೆ ಭಕ್ತಿಗೆ ಅಡ್ಡಲಾದೀತು? ಭಗವಂತನನ್ನು ಸ್ಮರಿಸಿಕೊಂಡರೆ ಸಾಕು, ಪಾಪಗಳೆಲ್ಲವೂ ಭಸ್ಮವಾಗುವವು, ಭಗವದ್ಭಕ್ತಿಯಿಂದ ಧರ್ಮಮಾರ್ಗವು ಕಣ್ಣಮುಂದೆ ನಲಿದಾಡುವದು, ಭಗವಂತನ ಅನುಗ್ರಹದಿಂದ ನಿತ್ಯಶಾಂತಿಯೂ ದೊರೆಯುವದು. ಭಗವಂತನ ಕಡೆಗೆ ತಿರುಗುವದು ಕಷ್ಟವೆಂದು ಭಾವಿಸಬಾರದು. ಸ್ವಲ್ಪ ಪ್ರಯತ್ನವನ್ನು ಮಾಡಿದರೂ ಸಾಕು, ಭಗವಂತನೇ ಅದಕ್ಕೆ ಬೆಂಬಲವಾಗುವನು. ನಮ್ಮೂರಿನಲ್ಲಿ ಒಬ್ಬರಿಗೆ ಕತ್ತು ಉಳುಕಿತು. ನೋವಿನಿಂದ ಒಂದು ಕಡೆಗೆ ಕತ್ತನ್ನು ವಾಲಿಸಿಕೊಂಡು ಅವರು ಬೇರೂರಿಗೆ ಹೋಗಿ ಪಂಡಿತರನ್ನು ಕಂಡರು. ಅವರು ನೂರು ರೂಪಾಯಿ ಕೊಟ್ಟರೆ ಚಿಕಿತ್ಸೆ ಮಾಡುತ್ತೇನೆ ಎಂದರು. ಅಷ್ಟೊಂದು ಹಣವನ್ನು ಕೊಡುವದಕ್ಕೆ ಮನಸ್ಸಾಗಲಿ ಶಕ್ತಿಯಾಗಲಿ ಇಲ್ಲದ್ದರಿಂದ ಇವರು ಊರಿಗೆ ಹಿಂತಿರುಗಿ ಬಂದರು. ದಾರಿಯಲ್ಲಿ ಯಾರೋ ಒಬ್ಬರು ಚಿಕಿತ್ಸೆಯಾಯಿತೆ? ಎಂದು ಕೇಳಿದರು. ಅದಕ್ಕೆ ಇವರು

"ಇಲ್ಲಪ್ಪ, ಈ ಕತ್ತು ಹೀಗಿರುವದು ಹೀಗೆ ತಿರುಗಿಸುವದಕ್ಕೆ ನೂರು ರೂಪಾಯಿ ಕೊಡಬೇಕಂತೆ, ನೋಡು!" ಎಂದು ಅಭಿನಯಕ್ಕಾಗಿ ಕತ್ತನ್ನು ಒಂದಿಷ್ಟು ಎಡದಿಂದ ಬಲಕ್ಕೆ ತಿರುಗಿಸುವದಕ್ಕೆ ಹೋದರು. ಕತ್ತು ಸಲೀಸಾಗಿ ತಿರುಗಿಬಿಟ್ಟಿತು! ಇಷ್ಟೇ ಸುಲಭವಾಗಿದೆ, ಭಗವಂತನ ಕಡೆಗೆ ತಿರುಗುವದು! ದುರಾಚಾರಿಗಳಿಗೆ ಕೂಡ ಭಗವಂತನ ಭಕ್ತಿಯಿಂದ ಹೀಗೆ ಧರ್ಮಮಾರ್ಗವು ದೊರಕಿ ನಿತ್ಯಶಾಂತಿಯು ದೊರಕುವದೆಂದಮೇಲೆ ಇನ್ನು ಭಕ್ತರ ಮತ್ತು ಜ್ಞಾನಿಗಳ ವಿಷಯವನ್ನು ಹೇಳುವದೇನಿದೆ?

ಈ ಅಧ್ಯಾಯದಲ್ಲಿ ಜ್ಞಾನವಿಜ್ಞಾನಗಳ ವಿಷಯವನ್ನು ಹೇಳುವದಕ್ಕೆ ಪ್ರಾರಂಭಿಸಿದೆ. ಇಲ್ಲಿ ದುರಾಚಾರದ ಫಲವನ್ನೇನೂ ಹೇಳುವದಕ್ಕೆ ಹೊರಟಿಲ್ಲ. ಜ್ಞಾನಿಗಳು ಅರಿತುಕೊಳ್ಳುವ ಪರಮಾತ್ಮತತ್ತ್ವವಾದ ಭಗವಂತನು ಸಾಧಕರಿಗೆ ಸುಲಭಸಾಧ್ಯನೆಂದು ತಿಳಿಸುವದಕ್ಕಾಗಿ ಭಕ್ತಿಯನ್ನು ಕೊಂಡಾಡುವದಕ್ಕೆ ಇಲ್ಲಿ ದುರಾಚಾರಿಗಳಾದವರು ಕೂಡ ಭಕ್ತಿಪಂಥಕ್ಕೆ ಕಾಲಿಟ್ಟು ಅಷ್ಟರಿಂದಲೇ ಧರ್ಮಾತ್ಮರಾಗುವರು ಎಂದು ಹೇಳಿರುತ್ತದೆ. ಭಗವಂತನು ಈ ಉದ್ದೇಶದಿಂದಲೇ ಈ ಕೆಳಗಿನ ಮಾತನ್ನು ಆಡಿರುತ್ತಾನೆ :

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾನ್ತಿ ಪರಾಂ ಗತಿಮ್ ॥** (೯-೩೨)
**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ॥**

"ಪಾಪಯೋನಿಗಳಾದ ಸ್ತ್ರೀಯರೂ ವೈಶ್ಯರೂ ಶೂದ್ರರೂ ಕೂಡ ನನ್ನನ್ನು ಆಶ್ರಯಿಸಿದರೆ ಪರಮಗತಿಯನ್ನು ಹೊಂದುವರು. ಇನ್ನು ಪುಣ್ಯಕರ್ಮಿಗಳಾದ ಬ್ರಾಹ್ಮಣರೂ ಭಕ್ತರಾದ ರಾಜರ್ಷಿಗಳೂ ಪರಗತಿಯನ್ನು ಪಡೆಯುವರೆಂಬುದನ್ನು ಹೇಳುವದೇನಿದೆ?" ಇಲ್ಲಿ ಸ್ತ್ರೀಯರನ್ನು ವೈಶ್ಯರನ್ನೂ ಶೂದ್ರರನ್ನೂ ಪಾಪಯೋನಿಗಳು ಎಂದು ಕರೆದಿದೆ. ಇದರ ತತ್ತ್ವವೇನು? ಎಂಬುದನ್ನು ನಾವು ಸರಿಯಾಗಿ ವಿಚಾರಮಾಡಿಕೊಂಡು ತಿಳಿದುಕೊಳ್ಳಬೇಕು. ಸ್ತ್ರೀಯರೆಲ್ಲರೂ ವೈಶ್ಯರೆಲ್ಲರೂ ಶೂದ್ರರೆಲ್ಲರೂ ಪಾಪಿಗಳು ಎಂದೇನೂ ಇಲ್ಲಿ ಅಭಿಪ್ರಾಯವಲ್ಲ. 'ಪೊಲೀಸಿನವರ ಕೆಲಸ ಬಹಳ ಕೆಟ್ಟದ್ದು' ಎಂದು ಜನರು ಆಡಿಕೊಳ್ಳುವದುಂಟು; ಪೊಲೀಸಿನವರೆಲ್ಲ ಕೆಟ್ಟವರು ಎಂದೆಂದೂ ಅವರ ಅಭಿಪ್ರಾಯವಿರುವದಿಲ್ಲವಲ್ಲವೆ? ಇಲ್ಲಿ ರಹಸ್ಯವೇನೆಂದರೆ ಇವರಿಗೆ ಪಾಪವನ್ನು ಮಾಡಲು ಹೆಚ್ಚಿನ ಅವಕಾಶವಿದೆ. ಸ್ತ್ರೀಯರು ಸಾಮಾನ್ಯವಾಗಿ ಮತ್ತೊಬ್ಬರಿಂದ ತತ್ತ್ವವನ್ನು ತಿಳಿದುಕೊಂಡು ಅನುಷ್ಠಾನವನ್ನು ಮಾಡಬೇಕು. ವೈಶ್ಯ ಶೂದ್ರರೂ ಅಷ್ಟೇ, ಅವರಿಗೆ ತಮ್ಮತಮ್ಮ ಕೆಲಸದಲ್ಲಿ ಜ್ಞಾನಾರ್ಜನೆಗೆ ಬಿಡುವು

ಸಿಕ್ಕುವದು ಬಹಳ ಕಷ್ಟ. ಇವರಲ್ಲಿ ಯಾರೂ ಜ್ಞಾನಿಗಳೇ ಇಲ್ಲವೆನ್ನುವದು ಸರಿಯಲ್ಲ. ಈಗಿನ ಕಾಲದಲ್ಲಿಯೇ ಉತ್ತಮವಾದ ತಿಳಿವಳಿಕೆಯೂ ಉದಾತ್ತವಾದ ಸ್ವಭಾವವೂ ಇರುವ ಸ್ತ್ರೀಯರೂ ವೈಶ್ಯರೂ ಶೂದ್ರರೂ ಸಿಕ್ಕುತ್ತಾರೆ. ಹಿಂದಿನ ಕಾಲದಲ್ಲಿಯಂತೂ ಸ್ತ್ರೀಯರಲ್ಲಿ ಋಷಿಗಳು ಕೂಡ ಇದ್ದರು, ವೈಶ್ಯರಲ್ಲಿ ತುಲಾಧಾರನಂಥ ಜ್ಞಾನಿಗಳಿದ್ದರು; ಅಷ್ಟೇಕೆ? ಕಟುಕರ ವೃತ್ತಿಯನ್ನು ಆಶ್ರಯಿಸಿದ್ದ ಧರ್ಮವ್ಯಾಧನಂಥ ಜ್ಞಾನಿಗಳೂ ಧರ್ಮತತ್ಪರರೂ ಇರುತ್ತಿದ್ದರು. ಯಾವ ಕಾಲದಲ್ಲಿಯೇ ಆಗಲಿ, ಎಲ್ಲಾ ಜಾತಿಯವರಲ್ಲಿಯೂ ತಿಳಿವಳಿಕೆಯಲ್ಲಿಯೂ ನೀತಿಯಲ್ಲಿಯೂ ಅತ್ಯುತ್ತಮಶ್ರೇಣಿಗೆ ಸೇರಿದ ವ್ಯಕ್ತಿಗಳೂ ತೀರ ಕೀಳಂತಸ್ತಿನಲ್ಲಿರುವ ವ್ಯಕ್ತಿಗಳೂ ಇದ್ದೇ ಇರುತ್ತಾರೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಭಗವಂತನು ಧರ್ಮವನ್ನು ಸೃಷ್ಟಿಸಿದನೆಂದೂ ಬ್ರಾಹ್ಮಣನನ್ನು ಸೃಷ್ಟಿಸಿದರೂ ಧರ್ಮವನ್ನು ಕಾಪಾಡುವದಕ್ಕೆ ಸಾಲದೆ ಇದ್ದದ್ದರಿಂದ, ಕ್ಷತ್ರಿಯನನ್ನು ಸೃಷ್ಟಿಸಿದನೆಂದೂ ಅದೂ ಸಾಲದೆ ವೈಶ್ಯನನ್ನೂ ಶೂದ್ರನನ್ನೂ ಸೃಷ್ಟಿಸಿದನೆಂದೂ ಹೇಳಿದೆ. ಆ ಶ್ರುತಿಯ ದೃಷ್ಟಿಯಿಂದ ನೋಡಿದರೆ ಯಾವದೊಂದು ವರ್ಣಕ್ಕೂ ಹೆಚ್ಚಿನ ಅಥವಾ ಕಡಿಮೆಯ ಸ್ಥಾನವಿಲ್ಲ. ಎಲ್ಲಾ ವರ್ಣಗಳಿಗೂ ಧರ್ಮವೇ ಜೀವಕಳೆ. ಅದನ್ನು ತೆಗೆದುಹಾಕಿದರೆ ಯಾವ ವರ್ಣಕ್ಕೂ ಯಾವ ಬೆಲೆಯೂ ಇರುವದಿಲ್ಲ. ಆದ್ದರಿಂದ ಧರ್ಮವನ್ನು ಮುಂದು ಮಾಡಿಕೊಂಡಿದ್ದರೆ ಎಲ್ಲರೂ ಜಗತ್ತಿಗೆ ಬೇಕು.

ಹೀಗಿದ್ದರೂ ಇಲ್ಲಿ ಸ್ತ್ರೀಯರನ್ನೂ ವೈಶ್ಯರನ್ನೂ ಶೂದ್ರರನ್ನೂ ಪಾಪಯೋನಿಗಳೆಂದಿರುವದೇತಕ್ಕೆ? ಸ್ತ್ರೀಯರು ಇಡಿಯ ಭೂಲೋಕಕ್ಕೆ ತಾಯಿಯರಾಗಿ ಧರ್ಮದೇವಿಯಾಗಿ ಪೂಜ್ಯತೆಯನ್ನು ಸಂಪಾದಿಸಿಕೊಳ್ಳಬಹುದಾದರೂ ಅವರಿಗೆ ಪಾಪವನ್ನು ಮಾಡುವದಕ್ಕೆ ಎಷ್ಟೊಂದು ಅವಕಾಶವಿದೆ! ವಾಣಿಜ್ಯಪ್ರಧಾನರಾದ ವೈಶ್ಯರಿಗಂತೂ ಪಾಪವನ್ನು ಮಾಡುವ ಸಂದರ್ಭಗಳು ಎಷ್ಟು ಬರುತ್ತವೆ! ಲಾಭವನ್ನೂ ಬಿಡದೆ ಧರ್ಮವನ್ನೂ ಬಿಡದೆ ಜನರಿಗೆ ಉಪಕಾರಿಗಳಾಗಿರುವ ವೈಶ್ಯರಾಗಿರಬೇಕಾದರೆ ಎಷ್ಟು ಕಷ್ಟ! ಇನ್ನು ಶೂದ್ರರ ವಿಷಯವಂತೂ ಹೇಳಬೇಕಾಗಿಯೇ ಇಲ್ಲ. ಈಗಿನ ಕಾಲದಲ್ಲಿ ಜನರು ಶೂದ್ರ ಎಂಬ ಶಬ್ದವನ್ನು ಅಪಮಾನದ ಗುರುತೆಂದು ಭಾವಿಸುವರು. ಅದಕ್ಕೆ ಕಾರಣವೇನೂ ಇಲ್ಲ. ಮಿಕ್ಕ ಮೂರು ವರ್ಣದವರಿಗೆ ಅವರವರಿಗೆ ಮೀಸಲಾಗಿರುವ ಕರ್ಮಗಳಿರುವಂತೆಯೇ ಶೂದ್ರರಿಗೆ ಪರಿಚರ್ಯೆ ಎಂಬ ಕರ್ಮವು ಮೀಸಲಾಗಿರುತ್ತದೆ. ಪರಿಚರ್ಯೆ ಎಂದರೇನು? ಸುತ್ತುಕೆಲಸ ಎಂದು ಆ ಮಾತಿನ ಅಕ್ಷರಾರ್ಥವು. ಇತರ ವರ್ಣದವರು ಮಾಡುವ ಕೆಲಸಕ್ಕೆ ಬೇಕಾದ ಹೊರಗಿನ ಸಾಮಗ್ರಿಗಳನ್ನು ಒದಗಿಸುವದೇ ಶೂದ್ರನ ಸುತ್ತುಕೆಲಸ.

ಬ್ರಾಹ್ಮಣನು ವೇದವನ್ನು ಅಧ್ಯಯನಮಾಡಿ ಧರ್ಮಾಚರಣೆಗೆ ಮೇಲುಪಙ್ಕ್ತಿ ಯಾಗಿರಬೇಕು. ಕ್ಷತ್ರಿಯನು ಧರ್ಮಕ್ಕೆ ಧಕ್ಕೆ ತಗಲದಂತೆ ತನ್ನ ಭುಜಬಲದಿಂದ ಅದನ್ನು ಕಾಪಾಡಿಕೊಂಡುಬರಬೇಕು. ವೈಶ್ಯನು ಐಹಿಕಸುಖಕ್ಕೆ ಕುಂದುಕೊರತೆಯುಂಟಾಗಿ ಜನರು ಅಧರ್ಮಕ್ಕೆ ಬೀಳದಂತೆ ಭೋಗಸಾಮಗ್ರಿಗಳನ್ನು ಕೂಡಿಸಿಟ್ಟು ಹಂಚಬೇಕು. ಶೂದ್ರನು ಆ ಸಾಮಗ್ರಿಗಳನ್ನು ಉತ್ಪತ್ತಿಮಾಡಿ ಒದಗಿಸಿಕೊಡಬೇಕು. ಎಲ್ಲಕ್ಕೂ ಬುಡದಲ್ಲಿ ಇಹಜೀವನಕ್ಕೆ ಆಧಾರನಾಗಿ ಶೂದ್ರನಿರುತ್ತಾನೆ. ಶೂದ್ರನು ವಿರಾಟ್ಪುರುಷನ ಪಾದವೆಂದು ಶ್ರುತಿಯಲ್ಲಿ ವರ್ಣಿಸಿರುತ್ತದೆ. ಪಾದವು ಕಡಿದುಹೋದರೆ ಮನುಷ್ಯನು ಹೇಗೆ ನಿಲ್ಲಲಾರನೋ ಹಾಗೆ ಶೂದ್ರನು ಸ್ವಕರ್ಮಚ್ಯುತನಾದರೆ ಇಡಿಯ ಜನಾಂಗವೇ ತಟ್ಟಾಡುತ್ತಿರಬೇಕಾಗುವದು. ಇನ್ನು ಧರ್ಮದ ಆಶೆಯೆಲ್ಲಿ? ಆದರೂ ಶೂದ್ರನು ಪಾಪಯೋನಿಯು ಎಂದು ಭಗವಂತನು ಹೇಳಿರುವದರ ಅಭಿಪ್ರಾಯವೇನು? ಅವನಿಗೆ ಪಾರತ್ರಿಕಜ್ಞಾನದ ಸಂಪಾದನೆಗೆ ಅವಕಾಶವೇ ಇಲ್ಲದ್ದರಿಂದ ಪಾಪವನ್ನು ಮಾಡುವ ಅವಕಾಶವು ಬಹಳ ಹೆಚ್ಚಾಗಿರುತ್ತದೆ.

ಯಾರುಯಾರಿಗೆ ಪಾಪವನ್ನು ಮಾಡುವ ಅವಕಾಶವು ಹೆಚ್ಚಾಗಿರುವದೋ, ಪಾಪವು ಬಂದು ಗಂಟುಬೀಳುವ ಸಂಭವವು ಹೆಚ್ಚಾಗಿರುವದೋ ಅಂಥ ಪಾಪ ಯೋನಿಗಳಾದವರು ಬಹಳ ಎಚ್ಚರಿಕೆಯಿಂದಿರಬೇಕು. ಅವರು ಯಾವ ಕರ್ಮವನ್ನೇ ಮಾಡುತ್ತಿರಲಿ, ಭಗವಂತನ ಆಶ್ರಯವನ್ನು ಬಿಡಬಾರದು. ಆಗ ಅವರಿಗೆ ಯಾವ ಭಯವೂ ಇರುವದಿಲ್ಲ; ಇಹದಲ್ಲಿ ಸುಖವೂ ಪರದಲ್ಲಿ ಗತಿಯೂ ಕಟ್ಟಿಟ್ಟ ಬುತ್ತಿಯಾಗುವದು. ಪಾಪಯೋನಿಗಳಿಗೇ ಇಂಥ ಸದ್ಗತಿಯು ಸಿಕ್ಕುವದಕ್ಕೆ ಅವಕಾಶ ವಿದೆಯೆನ್ನುವಲ್ಲಿ ಹೇಳುವದೇನಿದೆ? ಬ್ರಾಹ್ಮಣಕ್ಷತ್ರಿಯರಿಗೆ ಪಾಪದ ಅವಕಾಶವಿಲ್ಲ ಎಂಬುದೇಕೆ? ಎಂದರೆ ಅವರಿಗೆ ವೈಶ್ಯಶೂದ್ರರಂತೆ ನೇರಾಗಿ ಮಾಡುವ ಹೊಣೆಗಾರಿಕೆ ಕೆಲಸವಿರುವದಿಲ್ಲ. ಕ್ಷತ್ರಿಯನು ಧರ್ಮಕ್ಕೆ ಏನಾದರೂ ಎಡರು ಬಂದಿರುವಾಗ ಅದನ್ನು ರಕ್ಷಿಸುವದಕ್ಕೆ ಪ್ರಾಣದ ಹಂಗಿಲ್ಲದೆ ಧರ್ಮರಕ್ಷಣೆಗೆ ಸಿದ್ಧನಾದರೆ ಆಯಿತು. ಬ್ರಾಹ್ಮಣನಿಗಂತೂ ನನ್ನದು ಎಂಬ ಪದಾರ್ಥವೇ ಇರುವದಿಲ್ಲ. ಅವನು ಯಾವಾಗಲೂ ಧರ್ಮವನ್ನೇ ಮಾಡುತ್ತಾ ಮಿಕ್ಕವರ ಹಿತವನ್ನೇ ಕೋರುತ್ತಾ ಅವರು ಮಾಡುವಷ್ಟು ಉಪಕಾರದಿಂದ ತೃಪ್ತನಾಗಿ ಕಾಲವನ್ನು ಹಾಕಿದರೆ ಆಯಿತು. ಹೀಗೆಂದ ಮಾತ್ರಕ್ಕೆ ಬ್ರಾಹ್ಮಣ ಕ್ಷತ್ರಿಯಜಾತಿಯಲ್ಲಿ ಹುಟ್ಟಿದವರು ಯಾರಿಗೂ ಪಾಪಕ್ಕೆ ಅವಕಾಶವಿಲ್ಲವೆಂದು ತಿಳಿಯಬಾರದು. ಧರ್ಮಪರಿಪಾಲನೆಗೆ ಅವರಿಗೆ ಇಷ್ಟು ಅವಕಾಶವಿದ್ದರೂ ಕಾಮ ಪ್ರೇರಿತರಾಗಿ ಅವರೂ ಅಧರ್ಮಕ್ಕೆ ಬೀಳಬಹುದು; ಆಗ ಅವರಿಬ್ಬರಿಗೂ ಮಿಕ್ಕ ಎರಡು ಜಾತಿಗಳವರಿಗಿಂತಲೂ ಹೆಚ್ಚಿನ ಅಧೋಗತಿಯಾಗುವದರಲ್ಲಿ ಸಂಶಯವಿಲ್ಲ.

ಈಗಿನ ಕಾಲದಲ್ಲಂತೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ - ಎಲ್ಲಾ ವರ್ಣದವರೂ ಪಾಪಯೋನಿಗಳೇ ಆಗಿರುತ್ತಾರೆ. ಇವರಲ್ಲಿ ಯಾರೊಬ್ಬರೂ ತಮ್ಮ ವರ್ಣದ ಅಥವಾ ಆಶ್ರಮದ ಧರ್ಮವನ್ನು ಕಾಪಾಡಿಕೊಂಡು ಬರುವದಕ್ಕೆ ಅವಕಾಶವಿಲ್ಲವಾಗಿದೆ; ಪಾಪವನ್ನು ಮಾಡಿಯೇ ಜೀವಿಸಬೇಕಾದ ಸಂದರ್ಭಗಳು ಹೇರಳವಾಗಿವೆ.

ಇದಂತಿರಲಿ. ಪ್ರಕೃತದಲ್ಲಿ ಭಗವಂತನ ಉಪದೇಶವೇನೆಂದರೆ ಪಾಪಯೋನಿಗಳು ಕೂಡ ಈಶ್ವರಶರಣರಾದರೆ ಅವರಿಗೂ ಪರಗತಿಯುಂಟು. ಇನ್ನು ಪುಣ್ಯಕರ್ಮವನ್ನೇ ಮಾಡುತ್ತಾ ಭಕ್ತರೂ ಆಗಿರುವ ಮಹನೀಯರಿಗೆ ಪರಗತಿಯಾಗುವದೆಂದು ನಂಬುವದಕ್ಕೆ ಅಡ್ಡಿ ಏನಿದೆ? ಆದ್ದರಿಂದ ಭಗವಂತನು ಜ್ಞಾನವಿಜ್ಞಾನಗಳಿಗೆ ಭಗವದಾಶ್ರಯಣವೇ ಮೂಲಸಾಧನವೆಂಬುದನ್ನು ಮತ್ತೊಮ್ಮೆ ನೆನಪು ಕೊಡುವದಕ್ಕಾಗಿ ಈ ಉಪದೇಶವನ್ನು ಮಾಡಿರುತ್ತಾನೆ.

## ೭೮. ಭಗವದ್ಭಕ್ತಿಯ ಹೆಚ್ಚುಗಾರಿಕೆ ೯-(೩೩-೩೪)೧೦-(೧-೭) (೪-೧-೪೮)

'ನನ್ನನ್ನು ಶರಣುಹೊಕ್ಕ ಪಾಪಿಗಳನ್ನು ನಾನು ರಕ್ಷಿಸುತ್ತೇನೆ. ಹೀಗಿರುವಲ್ಲಿ ನನ್ನ ಭಕ್ತರಾದ ರಾಜರ್ಷಿಗಳೂ ಪುಣ್ಯಕರ್ಮಿಗಳಾದ ಬ್ರಾಹ್ಮಣರೂ ಸದ್ಗತಿಯನ್ನೇ ಪಡೆಯುತ್ತಾರೆಂಬುದನ್ನು ಹೇಳುವದೇನು?' - ಎಂದು ಭಗವಂತನು ಅಪ್ಪಣೆ ಕೊಡಿಸಿರುತ್ತಾನೆ. ಪಾಪವನ್ನು ಮಾಡುವದಕ್ಕೆ ಅವಕಾಶವು ಹೆಚ್ಚಾಗಿರುವವರು ಕೂಡ ಭಗವಂತನ ಕಡೆಗೆ ತಿರುಗಿದರೆ ಅವರಿಗೂ ಪರಗತಿಯಾಗುವದೆಂಬುದು ಈಗಿನ ಕಾಲದಲ್ಲಿ ನಮ್ಮೆಲ್ಲರಿಗೂ ಭರವಸೆಯನ್ನು ಕೊಡುವ ವಾಗ್ದಾನವಾಗಿರುತ್ತದೆ. ಏಕೆಂದರೆ ಹಿಂದಿನ ಕಾಲದಲ್ಲಿ ಸನಾತನಧರ್ಮವು ಉಚ್ಚಸ್ಥಿತಿಯಲ್ಲಿತ್ತು. ಆಗ್ಗೆ ಧರ್ಮವನ್ನು ಕಾಪಾಡುವದಕ್ಕೆಂದು ಕಂಕಣಬದ್ಧರಾಗಿದ್ದ ಭಕ್ತಶ್ರೇಷ್ಠರಾದ ರಾಜರ್ಷಿಗಳು ಇರುತ್ತಿದ್ದರು; ಅವರ ಆಶ್ರಯದಲ್ಲಿದ್ದುಕೊಂಡು ಸತ್ಕರ್ಮಾನುಷ್ಠಾನವನ್ನು ಮಾಡುತ್ತಿದ್ದ ಬ್ರಾಹ್ಮಣ ವರ್ಯರೂ ಇರುತ್ತಿದ್ದರು. ಸನಾತನಧರ್ಮಿಗಳು ಮಾತ್ರವೇ ಇದ್ದ ಆ ಕಾಲದಲ್ಲಿ ವರ್ಣಾಶ್ರಮಧರ್ಮಗಳೂ ಭಗವಂತನ ಆರಾಧನೆಯೂ ಸಲೀಸಾಗಿ ನೆಡೆಯುತ್ತಿತ್ತು. ಆದರೆ ಈಗ ಕಾಲವು ತೀರ ವ್ಯತ್ಯಸ್ತವಾಗಿರುತ್ತದೆ. ವಿಧರ್ಮೀಯರೂ ಅಧರ್ಮಿಗಳೂ ಹೆಚ್ಚುತ್ತಿರುವ ಈ ಕಾಲದಲ್ಲಿ ರಾಜರುಗಳಿಗೆ ನಮ್ಮ ಧರ್ಮವನ್ನು ಕಾಪಾಡಿಕೊಂಡು

ಬರುವದರಲ್ಲಿ ಅಸಾಧಾರಣವಾದ ಆಸಕ್ತಿಯುಂಟಾಗಲು ಕಾರಣವಿಲ್ಲ. ಕರ್ಮಾನುಷ್ಠಾನವನ್ನೇ ಮಾಡಿಕೊಂಡಿದ್ದರೂ ಜೀವನವು ಸಾಗುವದೆಂಬ ಭರವಸೆಯು ಹಾರಿಹೋಗಿರುವದರಿಂದ ಧರ್ಮಪರಾಯಣರಾಗಿರುವ ಬ್ರಾಹ್ಮಣರ ಸಂಖ್ಯೆಯೂ ತೀರ ಇಲ್ಲವೇನೋ ಎಂಬಷ್ಟು ಕಡಿಮೆಯಾಗಿರುತ್ತದೆ. ಕಲಿಯ ಅಭಿವೃದ್ಧಿಯಿಂದ ಧರ್ಮವು ಬಹಳ ಹ್ರಾಸವಾಗಿರುತ್ತದೆ; ಈಗ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ - ಎಲ್ಲರಿಗೂ ಧರ್ಮವನ್ನು ಕಾಪಾಡಿಕೊಳ್ಳುವದು ಕಷ್ಟವಾಗಿರುತ್ತದೆ. ಹೀಗಿರುವದರಿಂದ ಈಗ ಎಲ್ಲರಿಗೂ ಇಹಜೀವನವು ಹೇಗೆ ಸಾಗೀತೋ ಹಾಗೆ ಬುದ್ಧಿಯನ್ನು ಓಡಿಸುವ ಸನ್ನಿವೇಶವು ಒದಗಿರುತ್ತದೆ. ಆದ್ದರಿಂದ ಈಗ ಪಾಪವನ್ನು ಮಾಡದೆ ವ್ಯವಹಾರವನ್ನು ಮಾಡುತ್ತೇವೆಂದು ಯಾರೂ ಎದೆ ತಟ್ಟಿಕೊಳ್ಳುವಹಾಗಿಲ್ಲ. ಆದ್ದರಿಂದ ನಾವೆಲ್ಲರೂ "ಪಾಪೋಽಹಂ ಪಾಪಕರ್ಮಾಹಂ" ಎಂದು ಭಗವಂತನಿಗೆ ಶರಣುಹೋಗಬೇಕಾಗಿರುತ್ತದೆ. ಹಾಗಾದರೆ ಮಾತ್ರ ನಾವು ಉದ್ಧಾರವಾಗಬಹುದು.

ಇನ್ನೂ ಒಳಹೊಕ್ಕು ನೋಡಿದರೆ ಭಗವಂತನ ಚಿಂತನೆಯನ್ನು ಬಿಟ್ಟು ವಿಮುಖರಾಗಿರುವದಕ್ಕಿಂತ ಬೇರೆಯ ಪಾಪವೇ ಇಲ್ಲ. ನಾವು ಮಾಡುವ ಪಾಪ ಕೃತ್ಯಗಳಿಗೆಲ್ಲ ಅದೇ ಮೂಲವು. ಒಂದು ಮುಹೂರ್ತವು, ಅಥವಾ ಮುಹೂರ್ತವೇಕೆ ಕ್ಷಣವಾದರೂ, ಭಗವಂತನ ಚಿಂತೆಯಿಲ್ಲದಿದ್ದರೆ ಮನಸ್ಸಿನ ವಿಕ್ರಿಯೆಯಾಗುವದಕ್ಕೂ ಪಾಪಕರ್ಮದ ಕಡೆಗೆ ಮನಸ್ಸು ಒಲಿಯುವದಕ್ಕೂ ಅದೇ ಕಾರಣವಾಗುವದು ಎಂದು ದೊಡ್ಡವರು ಹೇಳುತ್ತಾರೆ. ಪಾಪದಿಂದಲೇ ಸರ್ವಾನರ್ಥಗಳೂ ಸರ್ವ ದುಃಖಗಳೂ ಉಂಟಾಗುವವು, ಆದ್ದರಿಂದ ಭಗವಂತನು ಮಾಡಿರುವ ಈ ಉಪದೇಶವು ನಮಗೆ ಬಹಳ ಹಿತಕರವಾದದ್ದು.

**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ।** (೯-೩೩)

"ಈ ಲೋಕವು ಅನಿತ್ಯವಾದದ್ದು, ಅಸುಖವಾದದ್ದು; ಆದ್ದರಿಂದ ನನ್ನನ್ನೇ ಭಜಿಸು" - ಎಂದು ಭಗವಂತನು ಹೇಳಿರುತ್ತಾನೆ. ಸಂಸಾರವು ಅನಿತ್ಯವು, ದುಃಖಮಯವಾದದ್ದು - ಎಂದು ಅಶುಭದೃಷ್ಟಿಯನ್ನೇ ಹಿಂದುಗಳು ಅವಲಂಬಿಸಿರುತ್ತಾರೆ ಎಂದು ಪಶ್ಚಿಮದೇಶದವರು ನಮ್ಮನ್ನು ಹಳಿಯುತ್ತಾರೆ. ಆದರೆ ಅವರಿಗೆ ನಮ್ಮ ದೃಷ್ಟಿಕೋನದ ಪ್ರಯೋಜನವು ತಿಳಿಯದು; ನಮ್ಮ ಋಷಿಗಳು ಮಾಡಿರುವ ಘನವಾದ ಉಪದೇಶದ ಆಳವನ್ನು ಅವರು ಅರಿಯರು. ನಮ್ಮ ಶರೀರವು ಅನಿತ್ಯವೆಂಬುದನ್ನು ಯಾರಿಗೂ ಹೇಳಿಕೊಡಬೇಕಾದದ್ದಿರುವದಿಲ್ಲ. ಕೆಲವು ವರ್ಷಗಳ ಹಿಂದೆ ನಮ್ಮ ಕಣ್ಣಮುಂದೆ ಇದ್ದವರು ತಮ್ಮ ಹಿರಿಯರು ಬಾಳಿ ಬದುಕಿ ಸುಖದುಃಖಗಳನ್ನು ಅನುಭವಿಸಿ ಅದೃಶ್ಯರಾದರೆಂದು ಹೇಳುತ್ತಿದ್ದರು; ಈಗ ಅವರೇ

ಇಲ್ಲ. ಮುಂದೆ ನಾವೂ ಈ ಲೋಕವನ್ನು ಬಿಡಬೇಕಾಗುವದೆಂಬುದು ಅಷ್ಟೇ ನಿಶ್ಚಯವಾಗಿರುತ್ತದೆ. ಎಲ್ಲವೂ ಮಾರ್ಪಡುತ್ತಿದ್ದು ಕೊನೆಗೆ ಒಂದಿಲ್ಲದಿದ್ದರೆ ಒಂದು ದಿನದಲ್ಲಿ ಕಣ್ಮರೆಯಾಗುವದು ಕಡು ಖಂಡಿತ. ಆದರೆ ಈ ಲೋಕವೆಲ್ಲವೂ ಅಸುಖವಾದದ್ದೆ? ಇದರಲ್ಲಿ ಸುಖವೂ ನಮಗೆ ಕಾಣುತ್ತಿಲ್ಲವೆ? ಅದನ್ನು ಅಲ್ಲಗಳೆಯುವದು ಹೇಗೆ? ಎಂದು ಯಾರಿಗಾದರೂ ಶಂಕೆಯು ಬರುವದು ಸ್ವಾಭಾವಿಕವಾಗಿದೆ. ನಿಜ, ಇಲ್ಲಿ ಸುಖವೂ ಇದೆ. ಆದರೆ ಇಲ್ಲಿರುವ ದುಃಖಗಳು ಆ ಸುಖವನ್ನು ಲೆಕ್ಕಕ್ಕೆ ತರುವದಕ್ಕೆ ಅವಕಾಶವನ್ನು ಕೊಡುವಂತಿಲ್ಲ. ಈಗ ಸುಖಸಾಧನವೆಂದು ತೋರುತ್ತಿರುವ ಭೋಗಗಳೇ ಮುಂದೆ ದುಃಖಕ್ಕೂ ಸಾಧನವಾಗುವವೆಂಬುದನ್ನು ಮನದಂದರೆ ಈ ತೋರಿಹಾರುವ ಸುಖವನ್ನು ನೆಚ್ಚಿರುವದಕ್ಕೆ ಯಾರಿಗೂ ಮನಸ್ಸು ಬರುವದಿಲ್ಲ. ಒಂದು ವೇಳೆ ಇದು ನಿಜವಾದ ಸುಖವೇ ಆಗಿರಲಿ; ಆದರೆ ಜ್ಞಾನಿಗಳು ಉಪದೇಶಿಸುವ ದುಃಖದ ಸಂಪರ್ಕವಿಲ್ಲದ ನಿತ್ಯಾನಂದರೂಪವಾದ ಪರಮ ಪುರುಷಾರ್ಥಕ್ಕೆ ಹೋಲಿಸಿದರೆ ಇದು ದುಃಖವಲ್ಲದೆ ಮತ್ತೇನಾಗುವದು?

ಆದ್ದರಿಂದ ಈ ತತ್ತ್ವವನ್ನು ಅರಿತುಕೊಂಡಿರುವ ವಿವೇಕಿಗಳೂ ಈ ಅನಿತ್ಯವಾದ ಅಸುಖವಾದ ಲೋಕವನ್ನು, ಈ ಮನುಷ್ಯಜನ್ಮವನ್ನು ಹೊಂದಿರುವ ಕಾರಣದಿಂದ ಬೇಗನೆ ಭಗವಂತನಿಗೆ ಶರಣುಹೋಗಬೇಕು. ಆತನನ್ನೇ ಸತತವಾಗಿ ಭಜಿಸಿ ನಿತ್ಯಾನಂದರೂಪವಾದ ಪರಮಪುರುಷಾರ್ಥವನ್ನು ಪಡೆಯುವದಕ್ಕೆ ಹವಣಿಸಬೇಕು. ಇದು ಎಲ್ಲರಿಗೂ ಸಾಧ್ಯ. ಆದ್ದರಿಂದ ಎಷ್ಟು ಬೇಗನೆ ಆ ಕಾರ್ಯವನ್ನು ಕೈಗೊಂಡರೆ ಅಷ್ಟು ಒಳ್ಳೆಯದು. ಒಂದು ದೋಣಿಯಲ್ಲಿ ಕುಳಿತು ಪೂರ್ಣಪ್ರವಾಹದ ಒಂದು ನದಿಯನ್ನು ದಾಟುವದಕ್ಕೆ ನಾವು ಹೊರಟಿರುತ್ತೇವೆಂದು ಇಟ್ಟುಕೊಳ್ಳಿರಿ. ಗಾಳಿಯು ಬಲವಾಗಿ ಬೀಸುತ್ತಿದೆ; ನದಿಯ ಸೆಳವು ಜೋರಾಗಿದೆ, ಪ್ರವಾಹವು ಇನ್ನೂ ಹೆಚ್ಚಾಗುವ ಸಂಭವವಿದೆ, ದೋಣಿಯಲ್ಲಿ ಒಂದು ರಂಧ್ರವೂ ಇದೆ; ಅದಕ್ಕೆ ಮೇಣವನ್ನೋ ಅಥವಾ ಮತ್ತೇನನ್ನೋ ಹಾಕಿ ಬಲವಾಗಿ ಮುಚ್ಚಿರುತ್ತಾರೆ. ಇಂಥ ಸಂದರ್ಭದಲ್ಲಿ ನಾವು ದೋಣಿಯ ಮೇಲು ಮೈಯಲ್ಲಿ ಬರೆದಿರಬಹುದಾದ ಬಣ್ಣದ ಚಿತ್ರಗಳನ್ನು ನೋಡಿ ತಲೆದೂಗುತ್ತಾ ಕುಳಿತಿರುವದು ಒಳ್ಳೆಯದೊ, ಅಥವಾ ದೋಣಿಯವನನ್ನು ಬೇಗಬೇಗನೆ ಕಡೆಹಾಯಿಸೆಂದು ಕೇಳಿಕೊಳ್ಳುವದು ಒಳ್ಳೆಯದೊ? ಈ ಪ್ರಶ್ನೆಗೆ ಉತ್ತರವನ್ನು ಹೇಳುವದಕ್ಕೆ ಯಾರಿಗೂ ತಡವಾಗುವದಿಲ್ಲ. ಮೊದಲು ನದಿಯನ್ನು ದಾಟಬೇಕು; ಚಿತ್ರವನ್ನು ಮೆಚ್ಚಿಕೊಂಡಾಡುತ್ತಾ ಕೂಡುವದು ಈ ಸಮಯದಲ್ಲಿ ಎಂದಿಗೂ ತರವಲ್ಲ - ಎಂದು ಯಾರಾದರೂ ತಟ್ಟನೆ ಹೇಳಿಬಿಡುತ್ತಾರೆ ಅಲ್ಲವೆ? ಇದರಂತೆ ಈ ನಮ್ಮ ಶರೀರವು ಸಂಸಾರನದಿಯನ್ನು ದಾಟುವದಕ್ಕೆ

ಸಿಕ್ಕಿರುವ ಒಂದು ದೊಡ್ಡ ದೋಣಿಯು. ದೋಣಿಯಲ್ಲಿ ಕುಳಿತಿರುವಾಗ ನಮಗೆ ಕೆಲವು ವಿಷಯಸುಖಗಳೂ ಸಿಕ್ಕುವದು ನಿಜ; ಆದರೆ ಅನಿತ್ಯವಾದ ಈ ಶರೀರವನ್ನು ನೆಚ್ಚಿಕೊಂಡು ಆ ಸುಖದ ಚೂರುಗಳಿಗೆ ಬಾಯಿನೀರು ಕರೆಯುತ್ತಾ ಕುಳಿತುಕೊಳ್ಳುವದು ಸರಿಯಾದೀತೆ? ಎಂದಿಗೂ ಇಲ್ಲ. ಇದು ಭಗವಂತನನ್ನು ಮುಟ್ಟುವದಕ್ಕೆ ಒಂದು ಸಾಧನವೆಂಬುದನ್ನು ನೆನಪಿಗೆ ತಂದು ಕೂಡಲೇ ಭಗವಂತನನ್ನು ಭಜಿಸುವದಕ್ಕೆ ಮೊದಲು ಮಾಡಬೇಕು. ವ್ಯಾಸರು ಹೇಳಿರುವಂತೆ ಮೃತ್ಯುವು ಹೆಡತಲೆಯಲ್ಲಿ ಕಾದಿರುವನೆಂದು ತಿಳಿದು ಈಗಲೆ ಈ ಕೆಲಸಕ್ಕೆ ಕೈಹಾಕಿಬಿಡಬೇಕು. ಮನುಷ್ಯಜನ್ಮವು ಮತ್ತೆ ದೊರೆಯುವದೆಂಬ ಭರವಸೆಯು ಎಲ್ಲರಿಗೂ ಇಲ್ಲ.

ಹೇಗೆ ಭಜಿಸಬೇಕು? ಎಂದರೆ:

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥** (೯-೩೪)

"ಹಾಗೆ ಯೋಗವನ್ನು ಮಾಡಿದರೆ" (ಯುಕ್ತ್ವೈವಂ) ಎಂಬ ಮಾತು ಹಿಂದೆ ಏಳನೆಯ ಅಧ್ಯಾಯದಲ್ಲಿ "ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ ಮದಾಶ್ರಯಃ" ನನ್ನಲ್ಲಿಯೇ ಆಸಕ್ತನಾಗಿದ್ದುಕೊಂಡು, ನನ್ನನ್ನೇ ಆಶ್ರಯಿಸಿ ಯೋಗವನ್ನು ಅಭ್ಯಾಸಮಾಡುತ್ತಿದ್ದರೆ ನನ್ನನ್ನು ಹೇಗೆ ಅರಿತುಕೊಳ್ಳುವೆಯೋ ಅದನ್ನು ಹೇಳುವೆನು ಕೇಳು - ಎಂದು ಹೇಳಿತ್ತಷ್ಟೆ, ಅದರ ವಿವರವನ್ನು ಸೂಚಿಸುತ್ತದೆ.

ಹೇಗೆ ಯೋಗವನ್ನು ಮಾಡಬೇಕು?- ಎಂದರೆ 'ಮನ್ಮನಾ ಭವ' ನನ್ನಲ್ಲಿಯೇ ಮನಸ್ಸುಳ್ಳವನಾಗು ಎಂದರ್ಥ. ಮನ್ಮನಾಃ, ಮದ್ಭಕ್ತಃ, ಮದ್ಯಾಜೀ - ಎಂದು ನಾನು ಎಂಬರ್ಥದ ಮಾತನ್ನು ಒಂದೊಂದು ವಿಶೇಷಣದಲ್ಲಿಯೂ ಉಚ್ಚರಿಸಿರುವದರಿಂದ ಈ ಅವಧಾರಣೆಯ ಅರ್ಥವು ಹೊರಡುತ್ತದೆ. ನನ್ನಲ್ಲಿಯೇ ನಿನ್ನ ಮನಸ್ಸಿರಲಿ; 'ನನ್ನಲ್ಲಿಯೂ ಇರಲಿ' ಎಂದರೆ ಸಾಲದು. ಸಂಸಾರದಲ್ಲಿ ಕಾಣಬರುವ ಪದಾರ್ಥಗಳಲ್ಲಿಯೂ ಮನಸ್ಸನ್ನಿಟ್ಟು, ನಡುನಡುವೆ ಒಂದಿಷ್ಟು ಪರಮೇಶ್ವರನಲ್ಲಿಯೂ ಇಟ್ಟರೆ, ಅಂಥವನನ್ನು ಪರಮೇಶ್ವರಭಕ್ತನೆಂದು ಹೇಳುವದಕ್ಕೆ ಆಗುವದಿಲ್ಲ. ಹೀಗೆಯೇ ಪರಮೇಶ್ವರನಲ್ಲಿಯೇ ಭಕ್ತಿಯುಳ್ಳವನಾಗಿರಬೇಕು. ಪರಮೇಶ್ವರನಿಗಾಗಿಯೇ ಯಾಗವನ್ನು ಮಾಡಬೇಕು. ಅಸಾರವಾದ ಈ ಸಂಸಾರದಲ್ಲಿ ಈಶ್ವರಪಾದಕಮಲ ಸೇವೆಯೇ ಸಾರವು ಎಂದು ಬಲ್ಲವರು ಹೇಳುವರು. ಲೂಟಿಮಾಡುವವರು ಮನೆಯೊಳಕ್ಕೆ ನುಗ್ಗಿದರೆ ನಾವು ಏನು ಮಾಡುತ್ತೇವೆ? ಸ್ವಲ್ಪವೇ ಕಾಲವಿರುವದರಿಂದ ಆ ಪರಿಸ್ಥಿತಿಯಲ್ಲಿ ನಮಗೆ ಯಾವದು ಎಲ್ಲಕ್ಕಿಂತಲೂ ಬೆಲೆಯುಳ್ಳದ್ದಾಗಿ ಕಾಣುವದೋ ಅದನ್ನು

ತೆಗೆದುಕೊಂಡು ಸುರಕ್ಷಿತವಾದ ಸ್ಥಳಕ್ಕೆ ಓಡಿಹೋಗುವೆವು. ಅಲ್ಲವೆ? ಅದರಂತೆ ಈ ಸಂಸಾರವು ಅನಿತ್ಯವು, ದುಃಖಮಯವು, ಅಸಾರವು ಎಂದು ಗೊತ್ತಾದಕೂಡಲೇ ಇದರಲ್ಲಿ ಸಾರತರವಾಗಿರುವ ಪರಮೇಶ್ವರಸೇವೆಯನ್ನು ಕೈಕೊಂಡು ಬೇಗನೆ ಆತನಲ್ಲಿಗೆ ಹೋಗುವ ಪ್ರಯತ್ನವನ್ನು ಮಾಡಬೇಕು.

ಆಗ ಲೋಕದ ಕೆಲಸವು ಕೆಡುವದಿಲ್ಲವೆ? - ಎಂದರೆ ಇಲ್ಲ. ಎಲ್ಲದರಲ್ಲಿಯೂ ಭಗವಂತನು ಇದಾನೆ. ಭಗವಂತನಲ್ಲಿ ಭಕ್ತಿಯನ್ನಿಟ್ಟವನು ಸಮಸ್ತಪ್ರಾಣಿಗಳನ್ನೂ ಈಶ್ವರರೂಪದಿಂದ ಕಾಣುವನು. ಲೋಕವೆಂಬುದು ಒಂದು ಕಡೆ, ಈಶ್ವರನು ಒಂದು ಕಡೆ - ಹೀಗಿಲ್ಲ, ಜಗತ್ತೆಲ್ಲವೂ ಪರಮಾತ್ಮನೇ ಎಂಬ ಭಾವನೆಯು ಅವನಿಗೆ ಬರುವದು. ಪೆಟ್ಟಿಗೆಯೊಳಗಿನ ರತ್ನದಂತೆ ಪರಮಾತ್ಮನು ಜಗತ್ತಿನಲ್ಲಿರುತ್ತಾನೆ. ರತ್ನಕ್ಕೋಸ್ಕರವಾಗಿ ಪೆಟ್ಟಿಗೆಯು ಬೇಕಾಗಿರುವಂತೆ ಪರಮಾತ್ಮನಿಗಾಗಿ ಜಗತ್ತು ಬೇಕು. ಆದ್ದರಿಂದ ಪರಮಾತ್ಮನನ್ನು ಹಿಡಿದರೆ ಎಲ್ಲರನ್ನೂ ಹಿಡಿದಂತೆ. ಅದರಿಂದ ಭಗವದ್ಭಕ್ತನಿಗೆ ಇಹಪರಸುಖಗಳು ಕಟ್ಟಿಟ್ಟ ಬುತ್ತಿಯಾಗಿರುವವು. ಭಕ್ತಿಯಿಂದ ಜ್ಞಾನವು ಅದರಿಂದ ಮುಕ್ತಿಯೂ ಅನಾಯಾಸವಾಗಿ ದೊರೆಯುವದು. ಭಗವಂತನ ಭಕ್ತನು ಭಗವಂತನನ್ನೇ ಸೇರುವನು.

ಆದ್ದರಿಂದ ಭಗವತ್ಪರಾಯಣನಾಗಿರಬೇಕು. ಬಡಗಿಗೆ ಮರದ ಕೆಲಸವೇ ಮುಖ್ಯ, ಉಪಾಧ್ಯಾಯನಿಗೆ ಸ್ಕೂಲುಗಳ ಮಾತೇ ಮುಖ್ಯ, ವಕೀಲನಿಗೆ ಕೋರ್ಟು ವಿಚಾರವೇ ಮುಖ್ಯ, ವೈದಿಕಬ್ರಾಹ್ಮಣನಿಗೆ ಅಧ್ಯಯನಕರ್ಮಾದಿಗಳೇ ಮುಖ್ಯ, ಅಂಗಡಿಯವನಿಗೆ ವ್ಯಾಪಾರವೇ ಮುಖ್ಯ. ಹೀಗೆ ಆಯಾ ಉದ್ಯೋಗದವರು ತಮ್ಮ ತಮ್ಮ ಕೆಲಸವು ಎಲ್ಲಕ್ಕಿಂತಲೂ ಹೆಚ್ಚಿನದೆಂದು ಭಾವಿಸಿಕೊಂಡು ಅದದರಲ್ಲಿ ತತ್ಪರಾಯಣರಾಗಿರುವರು. ಭಗವದ್ಭಕರಿಗೆ ಭಗವಂತನೇ ಮುಖ್ಯ: ಅವರು ಭಗವತ್ಪರಾಯಣರಾಗಿರುವರು. "ಉದ್ಯೋಗದ ಗೌರವ"(Dignity of Labour) ಎಂಬ ಮಂತ್ರಾಕ್ಷರವನ್ನು ಜಪಿಸುತ್ತಾ ಈಗಿನವರನೇಕರು ಕಾಲವನ್ನು ಹಾಕುತ್ತಿದ್ದಾರೆ. ಆದರೆ ತಮಗಿರುವ ಉದ್ಯೋಗಪ್ರೇಮದಿಂದ ಅಂಥವರು ಭಗವದ್ಭಕ್ತರನ್ನು ಸೋಮಾರಿಗಳೆಂದು ನಿಂದಿಸುವರು. ಜೀವಿಸುವದಕ್ಕೆ ತಿನ್ನಬೇಕು. ಆದರೆ ತಿನ್ನುವದಕ್ಕಾಗಿ ಜೀವಿಸಬಾರದು. (Eat to live but live not to eat) ಎಂಬ ಇಂಗ್ಲೀಷು ಗಾದೆಯನ್ನು ಈ ನಿಂದಕರು ಭಕ್ತರಿಗೇ ಉಪದೇಶಿಸುವರು. ಆದರೆ ಭಕ್ತರು ಸೋಮಾರಿಗಳೆಂದು ತಿಳಿಯುವದು ತಪ್ಪು. ಲೋಕದಲ್ಲಿ ಕಳ್ಳಭಕ್ತರಾಗಿರುವ ಸೋಮಾರಿಗಳು ಕೆಲವರಿರಬಹುದು; ಆದರೇನು? ಉದ್ಯೋಗಿಗಳೆಂದು ಕೊಚ್ಚಿಕೊಳ್ಳುವ ಸೋಮಾರಿಗಳಿಲ್ಲವೆ? ಬಡವರಿಗೆ "ಆಹಾರವನ್ನು ಹೆಚ್ಚು ಬೆಳೆಯಿರಿ!" ಎಂಬ ಉಪದೇಶವು ಯಾರೋ ಒಬ್ಬರಿಂದ

ಮೊದಲಾಯಿತು. ಆದರೆ ಈ ಕೂಗನ್ನು ಒಬ್ಬರಿಂದೊಬ್ಬರಿಗೆ ಮುಟ್ಟಿಸುತ್ತಿದ್ದರೆ ಅಷ್ಟು ಮಾತ್ರದಿಂದ ಆಹಾರವು ಹೆಚ್ಚಾಗಿ ಬೆಳೆದೀತೆ? ಇದು ಬರಿಯ ಗಾಬರಿಯ ಗುಲ್ಲೆಬ್ಬಿಸುವ ವಿಧಾನವೇ ಹೊರತು ಈ ಕೂಗಿನ ಉಪಾಸನೆಯಿಂದ ಯಾವ ಕಷ್ಟವೂ ನಿವಾರಣೆಯಾಗಲಾರದು. ಹಸುವಿಗೆ ಇಷ್ಟು ಆಹಾರವನ್ನು ಹಾಕಿದರೆ ಇಷ್ಟು ಹಾಲುಕೊಡುವದೆಂದು ಲೆಕ್ಕಹಾಕಿಕೊಂಡರೆ, ಅದು ಅಷ್ಟೇ ಕೊಡುವದೆಂಬ ಭರವಸೆ ಇಲ್ಲ. 'ಇದು ಹೊಸ ಸ್ಥಳವಾದ್ದರಿಂದ ಕೊಡಲಿಲ್ಲ' ಎಂದು ಮನಸ್ಸಮಾಧಾನ ಮಾಡಿಕೊಳ್ಳುವೆವು. ಹಸುಗಳನ್ನು ಪೋಷಿಸುವ ವಿಧಾನವನ್ನೂ ಅವುಗಳನ್ನು ಸಂಖ್ಯೆಯಲ್ಲಿ ಹೆಚ್ಚಿಸುವ ವಿಧಾನವನ್ನೂ ಉತ್ತಮವಾದ ಕ್ರಮಗಳನ್ನೂ ಶಾಸ್ತ್ರೀಯವಾಗಿ ಜನರಿಗೆ ಉಪದೇಶಿಸುತ್ತಿರುವದು ಈಚೆಗೆ ಹೆಚ್ಚಾಗುತ್ತಿದೆ; ಆದರೆ ದೇಶದಲ್ಲಿ ಹಾಲಿನ ಸರಬರಾಯಿ ಮಾತ್ರ ತಕ್ಕಷ್ಟು ಆಗುತ್ತಿಲ್ಲ. ಇದರಂತೆ ನೆಲವನ್ನು ಹೊಸ ನೇಗಿಲುಗಳಿಂದ ಆಳವಾಗಿ ಉತ್ತು ಸೀಮೆಗೊಬ್ಬರವನ್ನು ಹಾಕಿದರೆ ಪೈರು ಹುಲುಸಾಗಿ ಬೆಳೆಯುವದೆಂದು ಲೆಕ್ಕಹಾಕುವದೇನೂ ಕಡಿಮೆಯಾಗಿಲ್ಲ; ಆದರೆ ಜನಸಂಖ್ಯೆಗೆ ತಕ್ಕಂತೆ ಪೈರೇನೂ ಹೆಚ್ಚಾಗಿರುವದಿಲ್ಲ. ಮನುಷ್ಯಬುದ್ಧಿಯಲ್ಲಿ ಬಂದ ಯೋಚನೆಗಳಿಗೆ ಮೀರಿದ ಘಟನೆಗಳು ದೈವಿಕವಾಗಿ ನಡೆಯುತ್ತಿರುವವೆಂಬುದು ದಿನದಿನವೂ ನಮ್ಮ ಅನುಭವಕ್ಕೆ ಬರುತ್ತಿರುವದು. ಮನುಷ್ಯನ ಪ್ರಯತ್ನಕ್ಕೆ ದೈವಾನುಗ್ರಹವೂ ಸಹಾಯವಾದರೇ ವ್ಯವಹಾರವು ಯಶಸ್ವಿಯಾಗುವದೆಂಬ ತತ್ತ್ವವನ್ನು ಕಡೆಗಣಿಸುವದೂ ಬರಿಯ ಲೆಕ್ಕ ಗುಣಿಸಿ ಅಷ್ಟರಿಂದಲೇ ತೃಪ್ತರಾಗುವದೂ ಸರಿಯೆಂದು ಯಾರುತಾನೆ ಹೇಳಲಾಪರು?

ಆದ್ದರಿಂದ ಭಗವದ್ಭಕ್ತರು ಭಗವಂತನನ್ನೇ ಅನನ್ಯಭಕ್ತಿಯಿಂದ ಸೇವಿಸುತ್ತಿದ್ದರೆ ಅವರನ್ನೇ ನಿರ್ವ್ಯಾಪಾರಿಗಳೆಂದು ಹೇಳುವದು ಎಂದಿಗೂ ಸಮನಲ್ಲ. ಜೀವನಕ್ಕಾಗಿ ಆಹಾರವನ್ನು ತೆಗೆದುಕೊಳ್ಳುವದು ಯುಕ್ತವಾದರೆ, ಭಗವದ್ಭಕ್ತರು ತಾವು ತೆಗೆದು ಕೊಳ್ಳುತ್ತಿರುವ ಆಹಾರವನ್ನು ಭಗವದ್ಭಕ್ತಿಯ ದಿವ್ಯಜೀವನಕ್ಕಾಗಿ ವಿನಿಯೋಗಿಸುತ್ತಿರುವ ರೆಂಬುದನ್ನು ನಾವು ಮರೆಯದೆ ಇರಬೇಕು. ಬದುಕಿರುವ ಪ್ರತಿಯೊಬ್ಬ ಮನುಷ್ಯನೂ ಯಾವದಾದರೊಂದು ಉದ್ಯೋಗವನ್ನು ಕೈಕೊಳ್ಳಬೇಕೆಂಬುದು ಯುಕ್ತವೇ ಸರಿ. ಆದರೆ ಉದ್ಯೋಗವು ಉದ್ಯೋಗಕ್ಕಾಗಿಬಾರದು. ಭಗವಂತನ ಅನುಗ್ರಹದಿಂದ ಸುಖಜೀವನವನ್ನು ನಡೆಯಿಸುವದಕ್ಕೆ ಅದು ಸಹಾಯಕವಾಗಬೇಕು. ಆದ್ದರಿಂದ ಈ ಒಂಬತ್ತನೆಯ ಅಧ್ಯಾಯದ ಕೊನೆಯಲ್ಲಿ ಭಗವಂತನು ಉಪದೇಶಿಸಿರುವ ಈ ಜೀವನಸೂತ್ರವನ್ನು ನಾವೆಲ್ಲರೂ ನಿರಂತರವಾಗಿ ಮನಸ್ಸಿನಲ್ಲಿ ಇಟ್ಟುಕೊಂಡಿರಬೇಕು.

ಈಗ ಹತ್ತನೆಯ ಅಧ್ಯಾಯವು ಪ್ರಾರಂಭವಾಗುತ್ತದೆ. ಪರಮಾತ್ಮನನ್ನು ಎಲ್ಲೆಲ್ಲಿಯೂ ಕಾಣವದು, ಪರಮಾತ್ಮನಲ್ಲಿಯೇ ಮನಸ್ಸಿಟ್ಟು ಪರಮಾತ್ಮನ ಭಕ್ತನಾಗಿರು

ವದು - ಎಂಬ ಜೀವನಕ್ರಮವು ದಕ್ಕಬೇಕಾದರೆ ಮೊದಲು ಎಲ್ಲೆಲ್ಲಿ ಭಗವಂತನ ಕಳೆಯು ಹೆಚ್ಚಾಗಿ ಕಾಣುವದೋ ಅದನ್ನು ಮೆಚ್ಚುವ, ಗೌರವಿಸುವ, ಅಭ್ಯಾಸವನ್ನು ಪ್ರಾರಂಭಿಸಬೇಕು. ಆದ್ದರಿಂದ ಭಗವಂತನು ಅದನ್ನು ಹೇಳುವದಕ್ಕೆ ಪ್ರಾರಂಭಿಸಿರುತ್ತಾನೆ.

ಗೀತೆಯಲ್ಲಿ ಅಲ್ಲಲ್ಲಿ "ಶ್ರೀಭಗವಾನುವಾಚ"—(ಶ್ರೀಭಗವಂತನಿಂತೆಂದನು) ಎಂಬ ವಾಕ್ಯವು ಕಂಗೊಳಿಸುತ್ತಿರುವದು. ಇದರ ಉದ್ದೇಶವೇನು? - ಎಂದರೆ ಗೀತೆಯಲ್ಲಿರುವದು ಭಗವಂತನ ವಾಕ್ಯವು ಎಂದು ಮತ್ತೆಮತ್ತೆ ನೆನಪುಕೊಡುವದಕ್ಕೆ. ಗೀತೋಕ್ತಿಯನ್ನು ಕೇಳುವಾಗ ಭಗವಂತನೇ ನೇರಾಗಿ ನಮ್ಮೊಡನೆ ಮಾತಾಡುತ್ತಿರುವನೆಂಬ ಭಾವನೆ ಬರಬೇಕು. ಹಾಗಾದರೆ ಶ್ರದ್ಧೆಯುಂಟಾಗುವದು. ನಾವೂ ಈ ಉಪದೇಶವನ್ನು ಅನುಷ್ಠಾನಕ್ಕೆ ತರಬೇಕೆಂಬ ಉತ್ಸಾಹವುಂಟಾಗುವದು. ಭಗವಂತನು ಇಲ್ಲಿ ತನ್ನ ಉಪದೇಶವನ್ನು ಪ್ರಾರಂಭಿಸಿರುವ ರೀತಿಯು ಬಹಳ ಮುಖ್ಯವಾದದ್ದು. ಏಕೆಂದರೆ "ಎಲೈ ಮಹಾಬಾಹುವಾದ ಅರ್ಜುನನೆ, ನನ್ನ ಪರಮವಚನವನ್ನು ಮತ್ತೆ ಹೇಳುವೆನು; ಕೇಳು. ಪ್ರೀತಿಯುಳ್ಳ ನಿನಗೋಸ್ಕರವಾಗಿ ಹಿತವಾಗಲೆಂಬ ಇಚ್ಛೆಯಿಂದ ಈ ಮಾತನ್ನಾಡಿರುವೆನು" ಎಂದು ಆತನು ಹೇಳಿರುತ್ತಾನೆ.

ಭಗವಂತನು ಆಡುತ್ತಿರುವದು ಪರಮತತ್ತ್ವದ ವಿಷಯವಾದ ಮಾತು. ಆದ್ದರಿಂದ ಇದಕ್ಕಿಂತ ಹೆಚ್ಚಿನ ವಚನವಿಲ್ಲ. ಎಷ್ಟೋ ಸಲ ಇದನ್ನು ಭಗವಂತನು ಹೇಳಿಯೇ ಇರುತ್ತಾನೆ; ಆದರೂ ಇದು ಪರಮತತ್ತ್ವವಿಚಾರವಾದ್ದರಿಂದ ಇದನ್ನು ಮತ್ತೆಮತ್ತೆ ಹೇಳುವದು ಅವಶ್ಯವಾಗಿರುತ್ತದೆ. ಅರ್ಜುನನು ಈ ಮಾತನ್ನು ಕೇಳಿದಷ್ಟೂ ಸಂತೋಷವನ್ನು ತೋರಿಸಿರುತ್ತಾನೆ. ಇದಲ್ಲದೆ ಅವನಿಗೆ ಹಿತವಾಗಲೆಂಬ ಇಚ್ಛೆಯಿಂದಲೇ ಭಗವಂತನು ಹೇಳಿರುತ್ತಾನೆ. ಇಷ್ಟನ್ನೂ ಮನದಂದರೆ ಈಗ ನಮಗೂ ಈ ಮಾತಿನಲ್ಲಿ ಆದರವುಂಟಾಗುತ್ತದೆ; ಇದರಿಂದ ಸಂತೋಷವೂ ಆಗುತ್ತದೆ. ಪ್ರಿಯವೂ ಹಿತವೂ ಆದ ಭಗವಂತನ ಉಪದೇಶವನ್ನು ಈಗಲೇ ಅನುಷ್ಠಾನಕ್ಕೆ ತರಬೇಕೆಂಬ ಸಂಕಲ್ಪವೂ ಉಂಟಾಗುತ್ತದೆ.

ಭಗವಂತನು ಮಾಡುತ್ತಿರುವ ಈ ಉಪದೇಶಕ್ಕೆ ಕಿವಿಗೊಡಬೇಕೆಂಬುದಕ್ಕೆ ಮತ್ತೂ ಒಂದು ಕಾರಣವಿದೆ. ಅದೇನೆಂದರೆ:

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥** (೧೦-೨)

ಭಗವಂತನ ಈ ಪರಮಾರ್ಥತತ್ತ್ವವನ್ನು ದೇವತೆಗಳೂ ಅರಿಯರು. ಮಹರ್ಷಿಗಳೂ ಅರಿಯರು, ದೇವತಾಜನ್ಮವು ಬಹಳ ಅಮೂಲ್ಯವಾದದ್ದೆಂದು

ಶಾಸ್ತ್ರದಲ್ಲಿ ವರ್ಣಿಸಿದೆ. ದೇವತೆಗಳಿಗೆ ಹೆಚ್ಚಿನ ಐಶ್ವರ್ಯವೂ ವೀರ್ಯವೂ ಸಿದ್ಧಿಗಳೂ ತಿಳಿವಳಿಕೆಯೂ ವಶವಾಗಿರುವವು. ಅವರಿಗೆ ಸಾಮಾನ್ಯವಾದ ಮನುಷ್ಯರಿಗೆ ತಿಳಿಯದ ಎಷ್ಟೋ ತತ್ತ್ವಗಳು ಸುಲಭವಾಗಿ ತಿಳಿಯುವವು. ಅವರ ಸಂಕಲ್ಪಸಿದ್ಧಿಯೂ ಮನುಷ್ಯರಿಗೆ ಹೋಲಿಸಿದರೆ ಅಪರಿಮಿತವಾಗಿರುವದು. ಆದರೇನು? ಅವರಿಗೂ ಮತ್ತೊಬ್ಬರ ಉಪದೇಶವಿಲ್ಲದೆ ಈ ಭಗವಂತನ ತತ್ತ್ವವನ್ನು ತಿಳಿದುಕೊಳ್ಳುವದಕ್ಕೆ ತಕ್ಕಷ್ಟು ಸಾಮರ್ಥ್ಯವಿರುವದಿಲ್ಲ. ಹೀಗೆಯೇ ಮಹರ್ಷಿಗಳು ತಪಸ್ಸಿನಿಂದ ವೇದ ಮಂತ್ರಗಳನ್ನು ಕಂಡುಹಿಡಿದಿರುತ್ತಾರೆ; ಅವರಿಗಿರುವ ತಪಃಸಿದ್ಧಿಯಿಂದ ವಿಚಿತ್ರತರವಾದ ಹೊಸ ಸೃಷ್ಟಿಯೊಂದನ್ನು ಕೂಡ ಮಾಡಬಲ್ಲರು. ಆದರೂ ಅವರಿಗೂ ಭಗವಂತನ ತತ್ತ್ವವು ಉಪದೇಶವಿಲ್ಲದೆ ತಿಳಿಯುವದಿಲ್ಲ. ಋಷಿಗಳಿಗಾಗಲಿ ದೇವತೆಗಳಿಗಾಗಲಿ ಭಗವಂತನ ಪ್ರಭಾವವು ತಿಳಿಯದೆಂಬುದು ಏಕೆ? ಎಂದರೆ ಎಲ್ಲಾ ದೇವತೆಗಳಿಗೂ ಎಲ್ಲಾ ಮಹರ್ಷಿಗಳಿಗೂ ಆ ಭಗವಂತನೇ ಆದಿಯು. ಆತನ ಉಪದೇಶದಿಂದಲೇ ಅವರಿಗೆ ಜ್ಞಾನವುಂಟಾಗಿರುತ್ತದೆ; ಆತನ ಅನುಗ್ರಹದಿಂದ ಅವರಿಗೆ ಸಿದ್ಧಿಗಳು ಫಲಿಸಿರುತ್ತವೆ. ಹೀಗಿರುವದರಿಂದ ಆ ಭಗವಂತನು ತಾನೇ ತನ್ನ ಮಹಿಮೆಯನ್ನು ಹೇಳಿಕೊಳ್ಳಬೇಕಾಗಿದೆ. ಆದ್ದರಿಂದ ಆತನೇ ಉಪದೇಶಿಸಿರುವ ಈ ಮಾತಿಗೆ ನಾವು ಭಕ್ತಿಯಿಂದ ಕಿವಿಗೊಡೋಣ.

ಭಗವಂತನು ಹೇಳಿರುವ ಆ ತತ್ತ್ವವು ಯಾವದು ?

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।**
**ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥** (೧೦-೩)

"ಯಾವನು ನನ್ನನ್ನು ಅಜನೆಂದೂ ಅನಾದಿಯೆಂದೂ ಲೋಕಮಹೇಶ್ವರನೆಂದೂ ತಿಳಿದುಕೊಳ್ಳುವನೋ ಆತನು ಮನುಷ್ಯರಲ್ಲಿ ಅಸಂಮೂಢನಾಗಿ ಸರ್ವಪಾಪಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ." ಭಗವಂತನು ಜನ್ಮವಿಲ್ಲದವನು, ಆದ್ದರಿಂದ ಅನಾದಿಯು ಎಂದರೆ ಕಾರಣರಹಿತನು; ತಾನೇ ದೇವತೆಗಳು, ಮಹರ್ಷಿಗಳು - ಮುಂತಾದವರೆಲ್ಲರಿಗೂ ಆದಿಯು ಮತ್ತು ಮಹೇಶ್ವರನು, ಈಶ್ವರರಾಗಿ ಸಿದ್ಧಸಂಕಲ್ಪ ರಾಗಿರುವ ದೇವತೆಗಳಿಗೂ ಋಷಿಗಳಿಗೂ ಕೂಡ ಈಶ್ವರನಾದವನು. ಲೋಕಕ್ಕೆಲ್ಲ ಆತನೊಬ್ಬನೇ ಮಹೇಶ್ವರನು, ಆತನ ವಶದಲ್ಲಿಯೇ ಎಲ್ಲವೂ ಇರುವದು; ಆತನು ಮತ್ತೊಬ್ಬರ ಶಾಸನಕ್ಕೆ ಒಳಪಟ್ಟವನಲ್ಲ - ಎಂಬೀ ತತ್ತ್ವವನ್ನು ಯಾವ ಮನುಷ್ಯನು ಅರಿತುಕೊಳ್ಳುವನೋ ಆತನೊಬ್ಬನೇ ಅಸಮ್ಮೂಢನು. ಅವನಿಗೆ ಈ ಸಂಸಾರ ದಿಂದಾಗುವ ವಿಷಯಮೋಹವು ಉಂಟಾಗುವದಿಲ್ಲ; ಆದ್ದರಿಂದ ಅವನು ವಿಷಯಗಳ

ಕಾಮದಿಂದಲೂ ಕರ್ಮಗಳಿಂದಲೂ ಆಗುವ ಜ್ಞಾತಾಜ್ಞಾತವಾದ ಸರ್ವಪಾಪ ಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ. ಭಗವಂತನೇ ಎಲ್ಲಕ್ಕೂ ಆದಿಯು, ಎಲ್ಲವನ್ನೂ ಆಳುತ್ತಿರುವವನು; ಆತನೇ ನನ್ನ ಆತ್ಮನು - ಎಂದು ಯಾವನಿಗೆ ಅರಿವು ಉಂಟಾಗಿರುವದೋ ಅವನಿಗೆ ಅಜ್ಞಾನವಾಗಲಿ ಅದರ ಕಾರ್ಯವಾದ ಪಾಪವಾಗಲಿ ಇನ್ನು ಮುಂದೆ ಎಂದಿಗೂ ಅಂಟಿಕೊಳ್ಳುವದಿಲ್ಲ. ಭಗವಂತನು ಎಲ್ಲಕ್ಕೂ ಮಹೇಶ್ವರ ನೆಂಬುದಕ್ಕೆ ಮತ್ತೊಂದು ಕಾರಣವೇನೆಂದರೆ :

> **ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾ ಸತ್ಯಂ ದಮಃ ಶಮಃ ।**
> **ಸುಖಂ ದುಃಖಂ ಭವೋऽಭಾವೋ ಭಯಂ ಚಾಭಯಮೇವ ಚ ॥**(೧೦-೪)
> **ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋऽಯಶಃ।**
> **ಭವನ್ತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ॥** (೧೦-೫)

ಬುದ್ಧಿ, ಅಬುದ್ಧಿ, ಜ್ಞಾನ, ಅಜ್ಞಾನ, ಸಮ್ಮೋಹ, ಅಸಮ್ಮೋಹ - ಮುಂತಾದ ಭಾವಗಳೆಲ್ಲ ಆ ಪರಮಾತ್ಮನಿಂದಲೇ ಪ್ರಾಣಿಗಳಿಗೆ ಉಂಟಾಗುವವು. ಕೆಲವರಿಗೆ ಬುದ್ಧಿಯು ಬಹಳ ಚುರುಕಾಗಿರುತ್ತದೆ, ಸೂಕ್ಷ್ಮವಾದ ವಸ್ತುಗಳನ್ನೂ ಅರಿಯುವ ಸಾಮರ್ಥ್ಯವಿರುತ್ತದೆ. ಮತ್ತೆ ಕೆಲವರಿಗೆ ಬುದ್ಧಿಯು ಮೊಂಡಾಗಿರುತ್ತದೆ, ಸ್ಥೂಲವಾಗಿರುವ ವಸ್ತುಗಳನ್ನೂ ಸರಿಯಾಗಿ ತಿಳಿಯುವದಕ್ಕೆ ಅವರಿಂದಾಗುವದಿಲ್ಲ. ಕೆಲವರಿಗೆ ಆತ್ಮಾದಿ ಪದಾರ್ಥಗಳ ಅರಿವು ಸುಲಭವಾಗಿ ಉಂಟಾಗುತ್ತದೆ, ಇನ್ನು ಕೆಲವರಿಗೆ ದಟ್ಟವಾದ ಅಜ್ಞಾನವು ಕವಿದುಕೊಂಡಿರುತ್ತದೆ. ಕೆಲವರು ವಿಷಯಗಳನ್ನು ತಿಳಿದುಕೊಳ್ಳಬೇಕಾಗಿರು ವಲ್ಲಿ ವಿವೇಕದಿಂದ ಸಲೀಸಾಗಿ ತೊಡಗುವರು; ಮತ್ತೆ ಕೆಲವರಿಗೆ ವಿವೇಚನಾಶಕ್ತಿಯೇ ಇರುವದಿಲ್ಲ. ಕೆಲವರಿಗೆ ತಮ್ಮನ್ನು ಯಾರಾದರೂ ಬಯ್ಯಲಿ ಹೊಡೆಯಲಿ, ಚಿತ್ತದಲ್ಲಿ ಯಾವ ವಿಕಾರವೂ ಆಗುವದಿಲ್ಲ; ಇನ್ನು ಕೆಲವರಿಗೆ ಕಾರಣವಿಲ್ಲದೆಯೇ ಚಿತ್ತವು ವಿಕೃತವಾಗಿ ರೇಗಿಕೊಳ್ಳುತ್ತಿರುವದು. ಒಬ್ಬರು ತಾವು ಕಂಡದ್ದನ್ನೂ ಕೇಳಿದ್ದನ್ನೂ ಹಾಗೆಯೇ ಮುಚ್ಚು ಮರೆಯಿಲ್ಲದೆ ಆಡುತ್ತಾರೆ; ಆದರೆ ಮತ್ತೊಬ್ಬರು ಕಾರಣವಿಲ್ಲದೆ ಸುಳ್ಳನ್ನೇ ಆಡುತ್ತಿರುತ್ತಾರೆ. ಒಬ್ಬರಿಗೆ ಇಂದ್ರಿಯಗಳು ಯಾವಾಗಲೂ ಹಿಡಿತದಲ್ಲಿರುತ್ತವೆ; ಇನ್ನೊಬ್ಬರಿಗೆ ಅವು ಸಡಿಲವಾಗಿಯೇ ಇದ್ದು ಮುಂದುವರಿಯುತ್ತಿರುತ್ತವೆ. ಹೀಗೆಯೇ ಕೆಲವರು ಅಂತಃಕರಣವನ್ನು ಬಿಗಿಹಿಡಿದುಕೊಂಡು ಶಾಂತರಾಗಿರುವರು, ಇನ್ನು ಕೆಲವರು ಅದನ್ನು ಹರಿಯಬಿಟ್ಟಿರುವರು. ಕೆಲವರಿಗೆ ಯಾವ ಪರಿಸ್ಥಿತಿಯೊದಗಿದರೂ ಸುಖವು ತಪ್ಪುವದಿಲ್ಲ; ಮತ್ತೆ ಕೆಲವರಿಗೆ ಎಂಥ ಅನುಕೂಲ್ಯಗಳು ಒದಗಿದರೂ ದುಃಖವು ಸುತ್ತಿಕೊಂಡೇ ಇರುತ್ತದೆ. ಕೆಲವರಿಗೆ ಆಯಾ ವಿಷಯಗಳನ್ನು ಅನುಭವಿಸು

ವದಕ್ಕೆ ಅನುಕೂಲವಾಗಿ ಜನ್ಮವುಂಟಾಗಿರುವದು, ಮತ್ತೆ ಕೆಲವರಿಗೆ ಆಗಿರುವದಿಲ್ಲ. ಒಬ್ಬೊಬ್ಬರು ಯಾವಾಗಲೂ ಏನಾದರೂ ಒಂದು ಕಾರಣದಿಂದ ಹೆದರಿಕೊಂಡಿರುತ್ತಾರೆ; ಮತ್ತೊಬ್ಬರು ಎಂಥ ಎದೆಗೆಡುವ ಪರಿಸ್ಥಿತಿಯುಂಟಾದರೂ ಸ್ವಲ್ಪವೂ ಅಂಜುವದಿಲ್ಲ. ಒಬ್ಬರಿಗೆ ಯಾವ ಪ್ರಾಣಿಗಳಿಗೂ ತೊಂದರೆಯನ್ನುಂಟುಮಾಡದೆ ಇರುವ ಅಹಿಂಸೆಯೇ ಬೇಕು; ಇನ್ನೊಬ್ಬರಿಗೆ ಯಾವದೊಂದು ನಿಮಿತ್ತವೂ ಇಲ್ಲದಿದ್ದರೂ ಪ್ರಾಣಿಹಿಂಸೆಯಲ್ಲಿಯೇ ಅಭಿರುಚಿ. ಕೆಲವರು ಮನಸ್ಸನ್ನು ಯಾವಾಗಲೂ ಏರುಪೇರಿಲ್ಲದೆ ಇಟ್ಟುಕೊಂಡಿರುವರು; ಕೆಲವರು ಮಾತ್ರ ಜಿಂಕೆಯ ಮರಿಗಳಂತೆ ಹಾರಾಡಿಸಿಕೊಂಡಿರುವರು. ಒಬ್ಬರಿಗೆ ಅಲ್ಪದಿಂದಲೇ ತುಷ್ಟಿಯಾಗುವದು; ಇನ್ನೊಬ್ಬರಿಗೆ ಹಿಡಿಸಲಾರದ ಆಶೆಯಿರುವದು. ಒಬ್ಬರಿಗೆ ಶರೀರವನ್ನೂ ಇಂದ್ರಿಯಗಳನ್ನೂ ದಂಡಿಸುವ ತಪಸ್ಸಿನಲ್ಲಿ ರುಚಿಯಿರುತ್ತದೆ; ಒಬ್ಬರಿಗೆ ಭೋಗಲಾಲಸೆಯು ಎದ್ದುಕೊಂಡಿರುತ್ತದೆ. ಒಬ್ಬರಿಗೆ ಧಾರ್ಮಿಕತನದಿಂದ ಕೀರ್ತಿಯನ್ನು ಸಂಪಾದಿಸಿಕೊಳ್ಳಬೇಕೆಂಬ ಆಸೆಯಿರುತ್ತದೆ; ಅವರಿಗೆ ಅವೆರಡೂ ಅನಾಯಾಸವಾಗಿ ದೊರಕಿಯೂ ದೊರಕುತ್ತವೆ. ಆದರೆ ಮತ್ತೊಬ್ಬರಿಗೆ ಅಧರ್ಮವನ್ನು ಮಾಡುತ್ತಾ ಕೆಟ್ಟ ಹೆಸರನ್ನು ಸಂಪಾದಿಸುವದರಲ್ಲಿಯೇ ರುಚಿಯು ಕಾಣುತ್ತದೆ. ಹೀಗೆಲ್ಲ ಪ್ರಾಣಿಗಳಲ್ಲಿ ಭಾವವೈಚಿತ್ರ್ಯವುಂಟಾಗಿರುವದಕ್ಕೆ ಕಾರಣವೇನು? ಪ್ರಾಣಿಗಳು ಮಾಡಿರುವ ಕರ್ಮಗಳಿಗೆ ಅನುಗುಣವಾಗಿ ಫಲವನ್ನು ಕೊಡಬಲ್ಲ ಸರ್ವಜ್ಞನೂ ಸರ್ವಶಕ್ತಿಯುತನೂ ಆದ ಈ ಮಹೇಶ್ವರನ ಮಹಿಮೆಯದು.

ಭಗವಂತನು ಯಾರೊಬ್ಬರಲ್ಲಿಯೂ ಪಕ್ಷಪಾತವಿರುವವನಲ್ಲ. ಬೆಂಕಿಯು ಕೆಲವರಿಗೆ ಚಳಿಯನ್ನು ಹೋಗಲಾಡಿಸುವದು, ಮತ್ತೆ ಕೆಲವರಿಗೆ ಹೋಗಲಾಡಿಸುವದಿಲ್ಲ - ಎಂಬ ಭೇದವೇನೂ ಇಲ್ಲ. ಯಾರುಯಾರು ಅದರ ಬಳಿಗೆ ಬರುವರೋ ಅವರಿಗೆಲ್ಲ ಚಳಿಯು ಹೋಗುತ್ತದೆ. ಅಲ್ಲವೆ? ಅದರಂತೆ ಯಾರು ಯಾರು ಪರಮೇಶ್ವರನನ್ನು ತಿರಸ್ಕಾರಮಾಡುವರೋ, ಸ್ವೇಚ್ಛೆಯಿಂದ ನಡೆಯುವರೋ, ಅವರಿಗೆಲ್ಲ ದುರ್ಬುದ್ಧಿ, ಅಜ್ಞಾನ, ಸಮ್ಮೋಹ - ಮುಂತಾದ ಭಾವಗಳು ಉಂಟಾಗುವವು; ಆದರೆ ಯಾರುಯಾರು ಆತನ ಕಡೆಗೆ ಲಕ್ಷ್ಯವನ್ನು ತಿರುಗಿಸುವರೋ ಅವರಿಗೆಲ್ಲ ಬುದ್ಧಿ, ಜ್ಞಾನ, ಅಸಂಮೋಹ - ಮುಂತಾದ ಭಾವಗಳುಂಟಾಗುವವು. ವಾಲ್ಮೀಕಿಯು ಮೊದಲು ಘಾತಕವೃತ್ತಿಯಿಂದ ಜೀವಿಸುತ್ತಿದ್ದನು; ಎಲ್ಲಿಯವರೆಗೆ ಅವನ ಪ್ರವೃತ್ತಿಯು ಆ ಕೆಲಸದಲ್ಲಿರುತ್ತಿತ್ತೋ ಅಲ್ಲಿಯವರೆಗೂ ಅದಕ್ಕೆ ಅನುಗುಣವಾದ ಮನೋಭಾವಗಳೇ ಉಂಟಾಗಿ ಪಾಪದ ವಾಸನೆಯೇ ಬಲಿತುಕೊಳ್ಳುತ್ತಿತ್ತು. ಆದರೆ ನಾರದರ ಉಪದೇಶದಿಂದ ಭಗವಂತನ ಕಡೆಗೆ ತಿರುಗಿ ರಾಮನಾಮವನ್ನು ಜಪಿಸು

ವದಕ್ಕೆ ಮೊದಲುಮಾಡಿದನೋ ಇಲ್ಲವೊ, ಆತನ ಅಂತಃಕರಣದಲ್ಲಿ ಸಾತ್ತ್ವಿಕಭಾವಗಳು ಮೂಡಿಕೊಳ್ಳುವದಕ್ಕೆ ಮೊದಲು ಮಾಡಿದವು. ಕೊನೆಗೆ ಋಷಿಯೇ ಆಗಿಬಿಟ್ಟನು! ಭಗವಂತನು ಬುದ್ಧಿಯನ್ನೊಬ್ಬರಿಗೆ, ಅಬುದ್ಧಿಯನ್ನೊಬ್ಬರಿಗೆ, ಶಾಂತಿಯನ್ನೊಬ್ಬರಿಗೆ-ಹೀಗೆ ತಾನೇ ಅವರಲ್ಲಿಗೆ ಬಂದುಬಂದು ಹಂಚಿಕೊಡುವದಿಲ್ಲ. ಅವರವರಿಗೆ ಕರ್ಮಕ್ಕೆ ತಕ್ಕ ಫಲವಾಗುವಂತೆ ಆತನ ಸಂಕಲ್ಪವಾಗಿರುತ್ತದೆ; ಅದರಿಂದ ಅವರವರಿಗೆ ಒಳ್ಳೆಯದೋ ಕೆಟ್ಟದ್ದೋ ಆಗುತ್ತದೆ.

ಈ ಕಾರಣದಿಂದ ಭಗವಂತನನ್ನೇ ಹಿಡಿದರೆ ಉತ್ಕೃಷ್ಟವಾದ ಭಾವಗಳೂ ಆನಂದವೂ ನಮಗೆ ಸೂರೆಯಾಗುವವು. ಸರ್ವಗತನಾಗಿರುವ ಆ ಭಗವಂತನನ್ನೇ ನಾವು ಕೈಬಿಟ್ಟು ಅನವಶ್ಯವಾಗಿ ದುರ್ಭಾವನೆಗಳನ್ನು ಮಾಡಿಕೊಂಡು ಅವುಗಳ ದುಷ್ಫಲವನ್ನು ಅನುಭವಿಸುತ್ತಿರುವೆವು. ನಮ್ಮಲ್ಲಿ ಕೆಲವರು ಭಗವಂತನೇ ಇಲ್ಲವೆನ್ನುವರು; ಇನ್ನು ಕೆಲವರು ಅವನು ಇರಬಹುದೆಂದು ನಂಬಿದ್ದರೂ ಆತನ ಭಕ್ತಿಯೇ ಮುಂತಾದದ್ದು ನಮ್ಮಂಥವರಿಗೆಲ್ಲ ಸಾಧ್ಯವಿಲ್ಲವೆಂದು ನಿರಾಶೆಯಿಂದ ಆ ವಿಚಾರವನ್ನು ಬಿಟ್ಟು ಕೇವಲ ಪ್ರಾಪಂಚಿಕವ್ಯವಹಾರದಲ್ಲಿ ತೊಡಗಿರುವರು. ಆದರೆ ನಿಜವು ಹಾಗಿಲ್ಲ. ಪರಮಾತ್ಮನು ನಮ್ಮಗಳೆಲ್ಲರ ಆತ್ಮನು, ಆತನು ಇಲ್ಲವೆನ್ನುವದು ಸರಿಯಲ್ಲ. ಇದಲ್ಲದೆ ಆತನ ಓಲಗವು ಕಷ್ಟವಲ್ಲ; ಬಹಳ ಸುಲಭ. ಸ್ವಲ್ಪ ಮಾಡಿನೋಡಿದರೆ ತಿಳಿಯುತ್ತದೆ. ಆಲಸರಾಗಿ 'ಇದೆಲ್ಲ ಮೂಢನಂಬಿಕೆ' ಎನ್ನುತ್ತಾ ಕೂಡಬಾರದು. ಸಾಮಾನ್ಯವಾಗಿ ನೀತಿನಿಯಮಗಳನ್ನು ಅನುಸರಿಸಿ ಪುಣ್ಯಕರ್ಮಗಳನ್ನು ಮಾಡಿದರೂ ಸಾಕು, ಭಗವಂತನು ಅವಶ್ಯವಾಗಿ ಅವುಗಳಿಗೆ ಫಲವನ್ನು ಕೊಡುವನು. ಹೀಗಿರುವಲ್ಲಿ ಆ ಭಗವಂತನನ್ನೇ ಲೆಕ್ಕದಲ್ಲಿಟ್ಟುಕೊಂಡು ಪುಣ್ಯಕರ್ಮಗಳನ್ನು ಮಾಡಿದರೆ ಕೇಳುವದೇನು? ಬುದ್ಧ್ಯಾದಿಶುಭಭಾವಗಳುಂಟಾಗುವದಕ್ಕೆ ಆ ಮಹಾನುಭಾವನೇ ಗತಿ.

**ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥**(೧೦-೬)

ಭೃಗ್ವಾದಿಮಹರ್ಷಿಗಳು, ನಾಲ್ಕು ಜನ ಸಾವರ್ಣಮನುಗಳು - ಇವರೆಲ್ಲರೂ ಭಗವದ್ಭಾವನೆಯಿಂದಲೇ ಕೂಡಿಕೊಂಡು ವೈಷ್ಣವಸಾಮರ್ಥ್ಯದಿಂದ ಕೂಡಿ ಆತನ ಮನಸ್ಸಿನಿಂದಲೇ ಉತ್ಪನ್ನರಾದರು. ಆ ಮಹರ್ಷಿಗಳೂ ಮನುಗಳೂ ಈ ಸ್ಥಾವರ ಜಂಗಮಪ್ರಾಣಿಗಳನ್ನೆಲ್ಲ ಸೃಷ್ಟಿಮಾಡಿರುವರು. ಹೀಗೆ ನೋಡಿದರೆ ನಾವೆಲ್ಲರೂ ಆ ಪರಮಾತ್ಮನ ವಂಶದವರೇ. ಗಂಗಾನದಿಯು ಹುಟ್ಟುವಾಗ ಅತ್ಯಂತ ಶುದ್ಧವಾಗಿದ್ದರೂ

ನಡುನಡುವೆ ಊರುಗಳ ಕಶ್ಮಲಗಳು ಅದಕ್ಕೆ ಸೇರಿರುವಂತೆ ನಮಗೆ ವಿಷಯ ಸಂಪರ್ಕದಿಂದ ಚಿತ್ತಪ್ರವಾಹವು ಮಲಿನವಾಗಿರುತ್ತದೆ. ಅದರಲ್ಲಿ ಮಹರ್ಷಿಗಳಲ್ಲಿಯೂ ದೇವತೆಗಳಲ್ಲಿಯೂ ಇರುವಂತೆ ನಮ್ಮಲ್ಲಿಯೂ ಆತನ ಅಂಶವು ಇದ್ದೇ ಇದೆ. ಆ ಪರಮಾತ್ಮನು ನಮ್ಮೆಲ್ಲರನ್ನೂ - ಅತ್ಯಂತ ಕೀಳುಜನರನ್ನು ಕೂಡ - ನನ್ನ ಮಕ್ಕಳೇ ಎಂದು ಭಾವಿಸಿರುತ್ತಾನೆ. ಒಂದಲ್ಲ ಒಂದು ದಿನ, "ಎಲಾ, ನಾನು ಪರಮಾತ್ಮನ ಮಗನು; ಆತನಂತೆ ಶುದ್ಧನಾಗಿರಬೇಕು" ಎಂದು ದುರಾಚಾರವನ್ನು ಬಿಟ್ಟು ಸನ್ಮಾರ್ಗವನ್ನು ಹಿಡಿಯಲಿ! ಎಂಬುದೇ ಆತನ ಇಷ್ಟವು. ಆದ್ದರಿಂದ ಆತನು ಅಪ್ಪಣೆಕೊಡಿಸಿರುವದು ಏನೆಂದರೆ :

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋಽವಿಕಮ್ಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ॥** (೧೦-೭)

ಪರಮಾತ್ಮನು ನಾನಾಬಗೆಯಲ್ಲಿ ಹರಡಿಕೊಂಡು ತೋರುತ್ತಿರುವದೇ **ವಿಭೂತಿ**ಯು. ವಿವಿಧಾ, ಭೂತಿಃ, ಆತನ ಬಗೆಬಗೆಯ ತೋರಿಕೆಯೇ ವಿಭೂತಿಯು. ಇನ್ನು ಯೋಗವೆಂದರೆ ಆತನು ಗುಣತ್ರಯವನ್ನು ಜೋಡಿಸಿರುವ ಘಟನೆ. ಗುಣತ್ರಯಗಳನ್ನು ಬಗೆಬಗೆಯಿಂದ ಜೋಡಿಸಿರುವದೇ ಭಗವಂತನ ಸೃಷ್ಟಿಯು. ನಮ್ಮಲ್ಲಿ ಪ್ರತಿಯೊಬ್ಬನ ಶರೀರವೂ ಈ ಯೋಗದ ಫಲವು. ಪಂಚಭೂತಗಳೂ ಭೌತಿಕವಾಗಿರುವ ಸಕಲಲೋಕಗಳೂ ಅವುಗಳಲ್ಲಿ ಕಾಣುವ ಸಕಲಪದಾರ್ಥಗಳೂ ಈ ಯೋಗದ ಫಲವು. ಭಗವಂತನೇ ತನ್ನ ಯೋಗದಿಂದ ಬಗೆಬಗೆಯ ವಿಭೂತಿಗಳಾಗಿ ತೋರಿಕೊಳ್ಳುತ್ತಿದ್ದಾನೆ ಎಂಬುದನ್ನು ಇದ್ದದ್ದು ಇದ್ದಂತೆಯೇ ಯಾವನು ಅರಿತು ಕೊಳ್ಳುವನೋ ಆ ಪುರುಷನಿಗೆ ಅವಿಕಂಪಿತವಾದ ಸ್ವಲ್ಪವೂ ಅಲುಗಾಡದ ಸಮ್ಯಗ್ಜ್ಞಾನದ ನಿಲುಗಡೆಯೆಂಬ ಪರಮಾರ್ಥಯೋಗವು ಸಿಕ್ಕಿದಂತಾಗುವದು. ಆದ್ದರಿಂದ ಭಗವಂತನ ಆ ಯೋಗಮಹಿಮೆಯನ್ನೂ ಅದರಿಂದ ಆತನು ಬೇರೆ ಬೇರೆಯಾಗಿ ತೋರಿ ಕೊಳ್ಳುತ್ತಿರುವ ವಿಭೂತಿಗಳನ್ನೂ ಅರಿತುಕೊಳ್ಳುವದಕ್ಕೆ ನಾವು ಪ್ರಯತ್ನಿಸಬೇಕು. ಮೊಟ್ಟಮೊದಲು ಶ್ರದ್ಧೆಯಿಂದ ಭಗವಂತನ ವಿಭೂತಿಗಳೆಂದು ಹೇಳಿರುವ ವಸ್ತುಗಳಲ್ಲಿ ಆತನ ಸನ್ನಿಧಿಯನ್ನು ಭಾವಿಸಿಕೊಂಡು ಭಕ್ತಿಯಿಂದ ಆರಾಧನೆಮಾಡುವದನ್ನಾದರೂ ಕಲಿತುಕೊಳ್ಳಬೇಕು. ಆಗ ನಾವು ಕ್ರಮಕ್ರಮವಾಗಿ ನಮ್ಮ ಈಗಿನ ಅಲ್ಪತ್ವವನ್ನು ಕಳೆದುಕೊಂಡು ಆ ಅವಿಕಂಪಯೋಗವನ್ನು ಪಡೆದುಕೊಳ್ಳುವದಕ್ಕೆ ಅರ್ಹರಾಗುವೆವು.

## ೬೯. ಅವಿಕಂಪಯೋಗ ೧೦-(೮-೧೧-೧೫)
## (೧೧-೧-೪೮)

ಪರಮಾತ್ಮನು ತಾನು ಇರುವಂತೆಯೇ ಇದ್ದು ತನ್ನ ಮಹಿಮೆಯನ್ನು ಬೀರುವ ಬಗೆಬಗೆಯ ವಿಭೂತಿಯಾಗಿ ತೋರಿಕೊಳ್ಳುತ್ತಿರುತ್ತಾನೆ. ತನ್ನ ಸರ್ವಜ್ಞತೆಯಿಂದ ಮೂರು ಗುಣಗಳನ್ನು ಬಗೆಬಗೆಯಾಗಿ ಜೋಡಿಸಿ ಜಗತ್ತೆಲ್ಲವನ್ನೂ ಸೃಷ್ಟಿಸಿರುತ್ತಾನೆ. ತನ್ನ ಈ ವಿಭೂತಿಯನ್ನೂ ಯೋಗವನ್ನೂ ಇದ್ದದ್ದು ಇದ್ದಂತೆ ಅರಿತುಕೊಂಡವನಿಗೆ ಅವಿಕಂಪವಾದ ಯೋಗವು ದೊರಕುವದು ಎಂದು ಭಗವಂತನು ಉಪದೇಶಿಸಿರು ತ್ತಾನಷ್ಟೆ - ಆ ಅವಿಕಂಪಯೋಗವು ಯಾವದು? ಅದನ್ನು ಈಗ ವಿವರವಾಗಿ ತಿಳಿದುಕೊಳ್ಳಬೇಕು.

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜನ್ತೇ ಮಾಂ ಬುಧಾ ಭಾವಸಮನ್ವಿತಾಃ ॥** (೧೦-೮)

ಭಗವಂತನೇ ಎಲ್ಲಾ ಜಗತ್ತಿಗೂ ಉತ್ಪತ್ತಿಕಾರಣನು. ಆತನೇ ಈ ಜಗತ್ತಿನ ಸ್ಥಿತಿ, ನಾಶ, ಕ್ರಿಯೆಗಳು, ಅವುಗಳ ಫಲಗಳು ಆ ಫಲಗಳ ಉಪಭೋಗ - ಇವೆಲ್ಲಕ್ಕೂ ಕಾರಣನು. ಹೀಗೆಂಬ ಭಾವದಿಂದ ಕೂಡಿದವರಾಗಿ ಪರಮಾರ್ಥ ತತ್ತ್ವದಲ್ಲಿ ಅಭಿನಿವೇಶವುಳ್ಳವರಾಗಿ ಜ್ಞಾನಿಗಳು ಭಗವಂತನನ್ನು ಭಜಿಸುತ್ತಿರುವರು. ಪರಮಾತ್ಮನೇ ಜಗತ್ತಿನ ಆಗುಹೋಗುಗಳಿಗೆ ಆಧಾರವೆಂಬ ಅರಿವು ಆದಮೇಲೆ ಆತನಲ್ಲಿಯೇ ಅವರ ಮನಸ್ಸು ನಿಂತುಬಿಡುತ್ತದೆಯಲ್ಲವೆ? ಇದೇ ಅವಿಕಂಪಯೋಗವು.

ನಮಗೆ ಇಷ್ಟವಾದ ಪದಾರ್ಥವನ್ನು ನಿರೀಕ್ಷಿಸುವಾಗ ಬಹಳ ಕುತೂಹಲವಿರುತ್ತದೆ. ಹಳ್ಳಿಯವರಿಗೆ ಸಂತೆಯ ಗಾಡಿಗಳು ಸಾಮಾನು ತುಂಬಿಕೊಂಡು ಬರುವುದನ್ನು ನೋಡುವದಕ್ಕೆ ಬಹಳ ಕುತೂಹಲವಾಗಿರುತ್ತದೆ. ಊರಿನ ಹತ್ತಿರ ಗಾಡಿಗಳನ್ನು ಹೊಡೆಯುವಾಗ ಗಾಡಿಯುವರು ತೋರಿಸುವ ಉತ್ಸಾಹವನ್ನು ನೋಡಿದರೆ ಅವರು ಯಾವದೋ ಒಂದು ಯುದ್ಧದಲ್ಲಿ ಜಯಶೀಲರಾಗಿ ಬಂದಂತೆ ಕಾಣಿಸುತ್ತಿರುವದು. ಹೀಗೆಯೇ ಹೊಸ ಅಳಿಯನನ್ನು ಎದುರುಗೊಳ್ಳುವಾಗ ಅತ್ತೆಮಾವಂದಿರಿಗೆ ಎಂಥ ಸಂಭ್ರಮ! ಇದರಂತೆ ಭಗವದ್ಭಕ್ತರಿಗೆ ಭಗವಂತನ ವಿಷಯದಲ್ಲಿ ಕುತೂಹಲವೂ ಆದರವೂ ಸಂತೋಷವೂ ಉಲ್ಲಾಸವೂ ಒಂದರಹಿಂದೊಂದು ಎದ್ದುಕೊಳ್ಳುತ್ತಿರುವವು.

**ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯನ್ತಃ ಪರಸ್ಪರಮ್ ।**
**ಕಥಯನ್ತಶ್ಚ ಮಾಂ ನಿತ್ಯಂ ತುಷ್ಯನ್ತಿ ಚ ರಮನ್ತಿ ಚ ॥**

ಆ ಮಹನೀಯರಿಗೆ ಭಗವಂತನಲ್ಲಿಯೇ ಚಿತ್ತವು ನೆಟ್ಟುಕೊಂಡುಬಿಟ್ಟಿರುತ್ತದೆ. ಆ ಭಕ್ತರು ಭಗವಂತನಲ್ಲಿಯೇ ತಮ್ಮ ಪ್ರಾಣಗಳನ್ನು, ಎಂದರೆ ಚಕ್ಷುರಾದಿಕರಣಗಳನ್ನು ಭಗವಂತನಲ್ಲಿಯೇ ಉಪಸಂಹಾರಮಾಡಿಕೊಂಡಿರುತ್ತಾರೆ; ಯಾವ ಇಂದ್ರಿಯಗಳಿಂದ ಏನನ್ನು ನೋಡಿದರೂ ಅದೆಲ್ಲ ಭಗವಂತನ ವಿಭೂತಿಯೇ ಆಗಿರುತ್ತದೆ, ಅವರಿಗೆ! ಅಥವಾ ಅವರು ಭಗವಂತನಲ್ಲಿಯೇ ತಮ್ಮ ಪ್ರಾಣವನ್ನಿಟ್ಟುಕೊಂಡಿರುತ್ತಾರೆ ಎಂದಾದರೂ 'ಮದ್ಗತಪ್ರಾಣಾಃ' ಎಂಬ ಮಾತಿಗೆ ಅರ್ಥವನ್ನು ಮಾಡಬಹುದು. ಬದುಕಿರುವದು ಏತಕ್ಕೆ ಬೇಕು? ಆ ಭಗವಂತನ ಸ್ಮರಣೆ, ಆ ಭಗವಂತನ ಪ್ರೀತಿಯನ್ನು ಸಂಪಾದಿಸುವ ಕರ್ಮಗಳು, ಆ ಭಗವಂತನ ವಿಚಾರದ ಸಂಭಾಷಣೆ - ಇವುಗಳಿಗಾಗಿ ಬಾಳಬೇಕು, ಮನುಷ್ಯನಾದವನು. ಹಾಗಿಲ್ಲದವನ ಬಾಳು ವ್ಯರ್ಥ ಎಂದು ಅವರು ತಿಳಿದು ಕೊಂಡಿರುವರು.

ಅವರು ಭಗವತ್ತತ್ತ್ವವನ್ನು ಒಬ್ಬರಿಗೊಬ್ಬರು ತಿಳಿಯಹೇಳುವರು, ಜ್ಞಾನ, ಬಲ, ವೀರ್ಯ, ತೇಜಸ್ಸು - ಮುಂತಾದ ಭಗವಂತನ ಉತ್ತಮಗುಣಗಳನ್ನೂ ಆತನ ಲೀಲೆಗಳನ್ನೂ ಕುರಿತು ಒಬ್ಬರಿಗೊಬ್ಬರು ಹೇಳುತ್ತಲೇ ಸಂತೋಷಪಡುತ್ತಿರುವರು. ಭಗವಂತನ ಗುಣಕರ್ಮಗಳನ್ನು ಒಬ್ಬರಿಗೊಬ್ಬರು ಹೇಳುವದೆಂದರೆ ಭಕ್ತರಿಗೆ ಪರಮಾನಂದ! ಆತನ ತತ್ತ್ವವನ್ನು ವಿಚಾರಮಾಡುವದೆಂದರೆ ಅವರಿಗೆ ಹಿಡಿಸಲಾರ ದಷ್ಟು ಸಂತೋಷ! ಋಷಿಗಳೆಲ್ಲರೂ ಮೇರುಪರ್ವತದ ತಪ್ಪಲಲ್ಲಿ ಸಭೆಸೇರಿ ಪರಬ್ರಹ್ಮತತ್ತ್ವವನ್ನು ಕುರಿತು ವಿಚಾರಮಾಡುತ್ತಿದ್ದರೆಂದೂ ಎಲ್ಲರೂ ಸರ್ವಜ್ಞ ಕಲ್ಪರಾದರೂ ಒಂದೊಂದು ಸಂದರ್ಭದಲ್ಲಿ ಒಬ್ಬೊಬ್ಬರು ವಿಷಯವನ್ನು ವಿವರಿಸುವಂತೆ ಮಿಕ್ಕವರು ಕೇಳಿಕೊಳ್ಳುತ್ತಿದ್ದರೆಂದೂ ಪುರಾಣಗಳಲ್ಲಿ ವರ್ಣನೆಯಿದೆ. ಈಗಲೂ ಸಾಧುಗಳೂ ಬೈರಾಗಿಗಳೂ ಸಂನ್ಯಾಸಿಗಳೂ ಸೇರಿದಾಗ ತಮ್ಮತಮ್ಮೊಳಗೆ ತತ್ತ್ವವಿಚಾರ ವನ್ನು ಮಾಡುವದುಂಟು. ಅಂಥ ಸಭೆಯಲ್ಲಿ ಭಾಗವನ್ನು ವಹಿಸುವ ಮಹನೀಯರಿಗೆ ಭಗವಂತನ ಮಾತನ್ನು ಆಡಿದಂತೆಲ್ಲ ಹೃದಯವು ಸಂತೋಷದಿಂದ ಉಕ್ಕುವದು; ಕೇಳುವವರೂ ಹೇಳುವವರೂ ಆತ್ಮರತಿಯೆಂಬ ಅವಿಕಂಪಯೋಗವನ್ನು ಅನುಭವಿಸು ತ್ತಿರುವರು. ನಾನು ನೋಡಿದ್ದಂತೆ ಬೆಂಗಳೂರಿನಲ್ಲಿ ದಿವಂಗತ ಕೆ. ಎ. ಕೃಷ್ಣಸ್ವಾಮಿ ಅಯ್ಯರ್‌ರವರ ಮನೆಯಲ್ಲಿ ಆಗಾಗ್ಗೆ ಸಾಯಂಕಾಲ ಸಂಗೀತಗಾರರೂ ಸಂಗೀತ ವಿದ್ವಾಂಸರೂ ಸೇರುತ್ತಿದ್ದರು. ಅದೇನೂ ಮೊದಲು ಗೊತ್ತುಪಡಿಸಿದ್ದ ಸಂಗೀತಕಚೇರಿ ಯಾಗಿರಲಿಲ್ಲ. ಸಂಗೀತದಲ್ಲಿರುವ ಅಭಿರುಚಿಯಿಂದ ಪಿಟೀಲನ್ನು ಬಾರಿಸುವವರು, ವೀಣೆಯನ್ನು ನುಡಿಸುವವರು, ತಬಲವನ್ನು ಬಾರಿಸುವವರು, ತಾಳವನ್ನು ಹಾಕುವವರು, ರಾಗವನ್ನು ಆಲಾಪನಮಾಡುವವರು - ಹೇಗೋ ಒಂದೊಂದು ಸಲ ಒಟ್ಟುಗೂಡು

ತ್ತಿದ್ದರು. ಅವರುಗಳು ಉತ್ಸಾಹದಿಂದಲೂ ಉಲ್ಲಾಸದಿಂದಲೂ ಒಬ್ಬರನ್ನೊಬ್ಬರು ಮೆಚ್ಚುವದು, ತಾವೂ ಆಗಾಗ್ಗೆ ತಕ್ಕಂತೆ ಭಾಗವನ್ನು ವಹಿಸುವದು, ಒಂದೇ ಹೊಂದಿಕೆಯಿಂದ ಎಲ್ಲರೂ ಸಂಗೀತದ ಆನಂದವನ್ನು ಅನುಭವಿಸುವದು, ಆ ಸಂದರ್ಭದಲ್ಲಿ ಅಲ್ಲಿ ಕುಳಿತಿದ್ದ ಇತರರಿಗೂ ಸಂಗೀತದ ಸವಿಯನ್ನು ಸೂರೆಕೊಡುವದು —ಹೀಗೆ ಆನಂದದಲ್ಲಿ ಓಲಾಡುತ್ತಿದ್ದರು. ಆಗ ಆ ಸ್ಥಳವೇ ಗಂಧರ್ವರ ಸಭೆಯಾಗುತ್ತಿತ್ತು! ಶ್ರುತಿಯಲ್ಲಿ ಹೇಳಿರುವ ಆತ್ಮರತಿ, ಆತ್ಮಕ್ರೀಡೆ - ಎಂಬಿವು ಈ ಬಗೆಯ ಮೇಲುಮಟ್ಟದ ಚಿತ್ತಭೂಮಿಕೆಗಳು. ಸಾಧುಗಳಾದ ಭಗವದ್ಭಕ್ತರು ಭಗವಂತನ ವಿಚಾರದ ಆನಂದಸಂಭಾಷಣೆಯನ್ನು ನಡೆಯಿಸುತ್ತಾ ನಲಿದಾಡುತ್ತಿರುವದನ್ನು ನೋಡುವವರು ಕೂಡ ಧನ್ಯರು! ಅದೇ ವೈಕುಂಠ, ಅದೇ ಕೈಲಾಸ!

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾನ್ತಿ ತೇ ॥**(೧೦-೧೦)
**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥** (೧೦-೧೧)

ಇದೇ ಅವಿಕಂಪಯೋಗವು; ಏಕೆಂದರೆ ಈ ಭಕ್ತರು ಸತತಯುಕ್ತರಾಗಿರುವರು. ಯಾವಾಗಲೂ ನೊಗಕ್ಕೆ ಕೊರಳುಕೊಟ್ಟು ಅಭ್ಯಾಸವಾಗಿರುವ ಎತ್ತುಗಳಂತೆ ಅವರಿಗೆ ಭಗವಂತನ ಭಜನೆಯಲ್ಲಿ ನಲಿದುನಲಿದು ಆನಂದವಾಗಿರುವದು. ಹೊಸ ಎತ್ತುಗಳನ್ನು ಗಾಡಿಗೆ ಹೂಡಿದರೆ ಅವು ಗಾಬರಿಯಿಂದ ಎತ್ತೆತ್ತಲೋ ಎಳೆಯುತ್ತವೆ; ಅವಕ್ಕೂ ಸುಖವಿಲ್ಲ, ಗಾಡಿಯಲ್ಲಿ ಕುಳಿತಿರುವವರಿಗಂತೂ ಚಿತ್ರಹಿಂಸೆ! ವಿಷಯಗಳ ವಿಚಾರ ಮಾಡಿ ಕಶ್ಮಲವಾಗಿರುವ ನಮ್ಮ ಮನಸ್ಸಿಗೆ ಭಗವಂತನ ವಿಚಾರವು ಒಗ್ಗುವದೇ ಇಲ್ಲ. ಅಥವಾ ಒಗ್ಗಿದರೂ ಅದರ ಆನಂದವೇನೂ ನಮಗೆ ಸಿಕ್ಕುವ ಹಾಗಿರುವದಿಲ್ಲ. ಹೊಸ ಎತ್ತುಗಳಂತೆ ನಾವು; ಇನ್ನೂ ಪಳಗಬೇಕು, ದೊಡ್ಡವರ ಶಿಕ್ಷಣವನ್ನು ಪಡೆಯಬೇಕು. ಆದರೆ ಎತ್ತಿನ ದೃಷ್ಟಾಂತವನ್ನು ನಾನು ಕೊಟ್ಟಿರುವದರಿಂದ ಭಜನೆಯೆಂಬುದೊಂದು ದಾಸ್ಯವೃತ್ತಿಯೆಂದು ಭಾವಿಸಬೇಡಿರಿ. ನಿಜವಾಗಿ ವಿಷಯಾಭಿಮುಖರಾಗಿರುವ ನಾವೆಲ್ಲರೂ ಈಗ ದಾಸ್ಯವೃತ್ತಿಯಲ್ಲಿಯೇ ಇರುತ್ತೇವೆ. ದಾಸಿಯಾದವಳು ಅರಮನೆಯಲ್ಲಿ ಸುಗಂಧದ್ರವ್ಯವನ್ನು ಅರೆಯುವ ಕೆಲಸಕ್ಕೆ ಇದ್ದರೂ ಅವಳಿಗೆ ಬೇಸರ! ಪತಿವ್ರತಾ ಶಿರೋಮಣಿಯಾದ ರಾಣಿಯು ತಾನೇ ಆ ಗಂಧವನ್ನು ಅರೆಯುತ್ತಿದ್ದರೂ ಘಮ ಘಮಿಸುವ ಆ ಪರಿಮಳವನ್ನು ಆನಂದದಿಂದ ಅನುಭವಿಸುವಳು; ಇದನ್ನು ತನ್ನ ಪತಿಗಾಗಿ ಸಿದ್ಧಪಡಿಸುತ್ತಿರುವೆನೆಂಬ ಅರಿವು ಆ ಆನಂದವನ್ನು ಇಮ್ಮಡಿಸುವಂತೆ

ಮಾಡುತ್ತಿರುವದು. ರಾಜನಿಗಂತೂ ಆ ಪರಿಮಳದ್ರವ್ಯವು ಸಜ್ಜಾಗುತ್ತಿರುವದನ್ನು ನೋಡಿದ ಹಾಗೆಲ್ಲ ಔತ್ಕಂಠ್ಯವೂ ಆನಂದವೂ ಏರುತ್ತಿರುವವು! ಭಕ್ತರ ಭಜನೆಯೆಂಬುದೂ ಇಂಥದ್ದು. ಅದು ಭಕ್ತರಿಗೂ ಆನಂದವನ್ನು ಕೊಡತಕ್ಕದ್ದು, ಭಗವಂತನಿಗೂ ಪ್ರೀತಿಯನ್ನುಂಟುಮಾಡತಕ್ಕದ್ದು.

ಭಗವದ್ಭಕ್ತರು ಎಲ್ಲೆಲ್ಲಿಯೂ ಭಗವದ್ಭಾವನೆಯಿಂದ, ಕಂಡದ್ದೆಲ್ಲವೂ ಕೇಳಿದ್ದೆಲ್ಲವೂ ಭಗವಂತನೇ ಎಂಬ ಭಾವನೆಯಿಂದ, ಆತನ ಗುಣಗಾನವನ್ನು ಮಾಡುತ್ತಿರುವರು, ಕುಣಿಯುತ್ತಿರುವರು, ಹರ್ಷಾಶ್ರುಗಳನ್ನು ಸುರಿಸುತ್ತಿರುವರು, ಮೈಯೆಲ್ಲ ರೋಮಾಂಚ ವಾಗಲು ಭಕ್ತಿಯು ಆವೇಶದಿಂದ ಮೈಮರೆಯುತ್ತಿರುವರು! ಈ ರೀತಿಯಲ್ಲಿ ಪ್ರೇಮಪೂರಿತರಾಗಿ ಭಜಿಸುತ್ತಿರುವ ಅವರಿಗೆ ಪ್ರಸನ್ನನಾಗಿ ಬುದ್ಧಿಯೋಗವನ್ನು ಭಗವಂತನು ಅನುಗ್ರಹಿಸುವನು; ಅವರ ಬುದ್ಧಿಯು ತನ್ನ ಕಡೆಗೇ ಇರುವಂತೆ ಮಾಡುವನು. ಅವರು ಭಕ್ತಿಯಿಂದ ಭಗವಂತನ ಬಳಿಯಲ್ಲಿಯೇ ಇರುತ್ತಾರಾದರೂ ಇನ್ನೂ ಹತ್ತಿರಕ್ಕೆ ಬರುವಂಥ ಬುದ್ಧಿಯೋಗವನ್ನು ಅವರಿಗೆ ಕೊಡುವನು. ಭಗವಂತನ ಪ್ರಾಪ್ತಿಗೆ ಯಾವದು ದ್ವಾರ? ವೈರಾಗ್ಯವೇ. ವಿಷಯಗಳಲ್ಲಿ ನಿರತರಾಗಿರುವವರಿಗೆ ಹತ್ತಿರವೇ ಇರುವ ಭಗವಂತನು ಎಷ್ಟೋ ದೂರವಾಗಿರುವನು. ಆದರೆ ವಿಷಯ ವಿರಕ್ತಿಯೊಂದನ್ನು ಭಗವಂತನು ಅನುಗ್ರಹಿಸಿದರೆ ಸಾಕು, ನಮ್ಮ ಬುದ್ಧಿಗೆ ಕೀಲುಕೊಟ್ಟಂತಾಗುವದು. ಅದು ಗಿರಕ್ಕನೆ ಭಗವಂತನ ಕಡೆಗೆ ತಿರುಗಿಕೊಳ್ಳುವದು. ನಿಜವಾಗಿ ಭಗವಂತನು ನಮಗೆಲ್ಲ ತೀರಹತ್ತಿರವಿರುತ್ತಾನೆ. ಆತನು ನಮ್ಮ ಶರೀರ, ನಮ್ಮ ಕೈಕಾಲು, ನಮ್ಮ ಉಸಿರು - ಎಲ್ಲವುಗಳಿಗಿಂತಲೂ ಹತ್ತಿರ; ಇವೆಲ್ಲವೂ ಆತನ ಅಧೀನದಲ್ಲಿಯೇ ಇದ್ದುಕೊಂಡು ವ್ಯಾಪಾರವನ್ನು ಮಾಡುತ್ತಿರುವವು. ಆದರೆ ಭಗ ವದ್ಭಾವನೆಯಿಂದಲೇ ಈ ವಿಷಯವು ನಮಗೆ ಗೊತ್ತಾಗಬೇಕು. ಭಗವದ್ಭಾವನೆಯುಳ್ಳ ವರೇ ಭಗವಂತನ ಹತ್ತಿರಕ್ಕೆ ಬಂದು ಸೇರುವವರು.

ಭಗವಂತನು ಹೀಗೆ ನಮ್ಮ ಹತ್ತಿರವೇ, ನಮ್ಮ ಆತ್ಮನೇ ಆಗಿರುತ್ತಾನೆಂಬ ಜ್ಞಾನವು ಭಗವಂತನ ಅಪಾರಕರುಣೆಯಿಂದ ನಮಗೆ ದೊರಕತಕ್ಕದ್ದಾಗಿರುವದು. ಅದರಿಂದಲೇ ನಮ್ಮ ಅಜ್ಞಾನದ ಕಗ್ಗತ್ತಲೆಯು ಕಳೆದುಹೋಗಬೇಕಾಗಿರುತ್ತದೆ. ಭಕ್ತರಲ್ಲಿ ಭಗವಂತನ ಕರುಣೆಯು ಸಹಜವಾಗಿಯೇ ಇರುತ್ತದೆ. ಮಗುವಿಗೆ ಮೆತ್ತನೆಯ ಹಾಸಿಗೆಯನ್ನು ಹಾಸಿ ಅದನ್ನು ಮಲಗಿಸಿದರೂ ಯಾವದೋ ಕಾರಣದಿಂದ ಮಗುವು ಅತ್ತರೆ, ಹಾಸಿಗೆಯು ಸುಕ್ಕಾಗಿದೆಯೋ ಏನು? - ಎಂದು ಮತ್ತೂ ನೋಡುವಂತೆ, ಭಕ್ತರಮೇಲಿನ ಪ್ರೇಮಾತಿಶಯದಿಂದ ಅವರಿಗೆ ತತ್ತ್ವಜ್ಞಾನವನ್ನು ಅನುಗ್ರಹಿಸುತ್ತಾನೆ ಎಂಬುದನ್ನು 'ಅನುಕಂಪಾರ್ಥಮ್' ಎಂಬ ಮಾತು ಸೂಚಿಸುತ್ತದೆ.

ಅವರನ್ನು ಎಷ್ಟು ಪ್ರೀತಿಸಿದರೂ ಭಗವಂತನಿಗೆ ಸಾಕೆನಿಸುವದಿಲ್ಲ. ಆದ್ದರಿಂದ ಆತನು ಅವರ ಹೃದಯದಲ್ಲಿರುವ ಅಂತಃಕರಣಾಶಯದಲ್ಲಿದ್ದುಕೊಂಡು ಜ್ಞಾನದೀಪದಿಂದ ಅವರ ಅಜ್ಞಾನದಿಂದಾಗಿದ್ದ ಕತ್ತಲೆಯನ್ನು ಹೋಗಲಾಡಿಸುವೆನು—ಎಂದಿರುತ್ತಾನೆ. ಈ ಜ್ಞಾನದೀಪವು ಎಂಥದ್ದೆಂಬುದನ್ನು ಶ್ರೀಶಂಕರಾಚಾರ್ಯರವರು ಮನಮೋಹಕ ವಾದ ಭಾಷೆಯಲ್ಲಿ ಹೀಗೆ ವರ್ಣಿಸಿರುತ್ತಾರೆ.

**... ಜ್ಞಾನದೀಪೇನ ವಿವೇಕಪ್ರತ್ಯಯರೂಪೇಣ ಭಕ್ತಿಪ್ರಸಾದಸ್ನೇಹಾಭಿಷಿಕ್ತೇನ ಮದ್ಭಾವನಾಭಿನಿವೇಶ ವಾತೇರಿತೇನ ಬ್ರಹ್ಮಚರ್ಯಾದಿಸಾಧನಸಂಸ್ಕಾರವತ್ಪ್ರಜ್ಞಾವರ್ತಿನಾ ವಿರಕ್ತಾನ್ತಃಕರಣಾ ಧಾರೇಣ ವಿಷಯವ್ಯಾವೃತ್ತಚಿತ್ತರಾಗದ್ವೇಷಾಕಲುಷಿತ ನಿವಾತಾಪವರಕಸ್ಥೇನ ನಿತ್ಯ ಪ್ರವೃತ್ತೈಕಾಗ್ರ್ಯಧ್ಯಾನಜನಿತಸಮ್ಯಗ್ದರ್ಶನಭಾಸ್ವತಾ ಜ್ಞಾನದೀಪೇನ ಇತ್ಯರ್ಥಃ॥**

ಇಲ್ಲಿರುವ ಜ್ಞಾನವಿಶೇಷಣಗಳನ್ನು ಒಂದೊಂದಾಗಿ ಸ್ವಲ್ಪ ಮನಸ್ಸಿನಲ್ಲಿ ಹೊರಳಾಡಿ ಸುವದು ಒಳ್ಳೆಯದು. ತತ್ತ್ವಜ್ಞಾನಕ್ಕೆ ಯಾವ ಸ್ಥಾನವನ್ನು ಆಚಾರ್ಯರು ಕೊಟ್ಟಿರು ವರೆಂಬುದೂ ಭಗವಂತನು ಭಕ್ತರಿಗೆ ತೋರಿಸುವ ಕರುಣೆಯೆಂಬುದು ಎಷ್ಟು ಬೆಲೆಯುಳ್ಳದ್ದೆಂಬುದೂ ಇದರಿಂದ ವ್ಯಕ್ತವಾಗುವದು.

ಜ್ಞಾನವೆಂಬುದು ವಿವೇಕಪ್ರತ್ಯಯಸ್ವರೂಪವಾಗಿರುವದು; ಎಂದರೆ ಅನಾತ್ಮದಿಂದ ಬಿಡಿಸಿಕೊಂಡು ಪರಮಾತ್ಮನನ್ನೇ ಎಲ್ಲೆಲ್ಲಿಯೂ ಕಾಣುವ ಅರಿವಿನ ರೂಪವಾಗಿರುವದು. ಆ ಜ್ಞಾನದೀಪವು ಉರಿಯುವದಕ್ಕೆ ಭಕ್ತಿ ಎಂಬ ತಿಳಿಯಾದ ಎಣ್ಣೆಯನ್ನು ಸುರಿಯ ಬೇಕು, ಎಣ್ಣೆಯು ಬಗ್ಗಡವಾಗಿದ್ದರೆ ದೀಪವು ಪ್ರಕಾಶವಾಗಿ ಉರಿಯದು. ಅದರಂತೆ ಅಂತಃಕರಣವು ಭಕ್ತಿಯಿಂದ ತಿಳಿಯಾಗಿದ್ದ ಹೊರತು ಜ್ಞಾನದೀಪವು ಬೆಳಗದು. ಭಗವಂತನ ಭಾವನೆಯ ಅಭಿನಿವೇಶವೆಂಬ ಗಾಳಿಯು ಮೆಲ್ಲಮೆಲ್ಲಗೆ ಆ ದೀಪವನ್ನು ಉರಿಯುವಂತೆ ಮಾಡುತ್ತಿರಬೇಕು. ಗಾಳಿಯೇ ಇಲ್ಲದ ಕಡೆಯಲ್ಲಿ ದೀಪವು ಉರಿಯದಂತೆ ಭಗವದ್ಭಾವನೆಯು ಸ್ಥಿರವಾಗಿಲ್ಲದ ಕಡೆಯಲ್ಲಿ ಜ್ಞಾನವು ನಿಲ್ಲುವದಿಲ್ಲ. ಆ ದೀಪಕ್ಕೆ ಬ್ರಹ್ಮಚರ್ಯವೇ ಮುಂತಾದ ಸಾಧನಗಳ ಸಂಸ್ಕಾರವುಳ್ಳ ಪ್ರಜ್ಞೆ ಎಂಬ ಬತ್ತಿಯು ಇರಬೇಕು. ಎಣ್ಣೆಯು ತಿಳಿಯಾಗಿದ್ದರೂ ತಕ್ಕಮಟ್ಟಿನ ವಾಯುಸಂಚಾರವೂ ಇದ್ದರೂ ಬತ್ತಿಯು ನೆಟ್ಟಗಿಲ್ಲದಿದ್ದರೆ ದೀಪವು ಹೇಗೆ ಉರಿದೀತು? ಬತ್ತಿಯನ್ನು ಚೆನ್ನಾಗಿ ಹಿಂಜಿ, ಕಶ್ಮಲವನ್ನು ತೆಗೆದುಹಾಕಿ, ಎಣ್ಣೆಯು ಸಿಗುವದಕ್ಕೆ ಅವಕಾಶವಿರುವ ಬತ್ತಿಯು ದೀಪಕ್ಕೆ ಬೇಕಾಗಿರುವಂತೆ ಬ್ರಹ್ಮಚರ್ಯೆ, ಸತ್ಯ, ಅಹಿಂಸೆ, ಕರ್ಮಫಲ ಸಂನ್ಯಾಸ, ಏಷಣಾತ್ಯಾಗ - ಇವೇ ಮುಂತಾದ ಸಾಧನಗಳ ಸಂಸ್ಕಾರದಿಂದ ಕೂಡಿದ ಪ್ರಜ್ಞೆಯು ಈ ಜ್ಞಾನದೀಪಕ್ಕೆ ಬೇಕಾಗುವದು. ದೀಪಕ್ಕೆ ಎಣ್ಣೆಯೂ ಬತ್ತಿಯೂ ಅಲ್ಲದೆ

ಅದು ನಿಲ್ಲುವ ಆಧಾರವೊಂದು ಬೇಕಷ್ಟೆ; ವೈರಾಗ್ಯಯುಕ್ತವಾದ ಅಂತಃಕರಣವೇ ಈ ದೀಪಕ್ಕೆ ಕಂಬದಂತಿರುವ ಆಧಾರ. ಕಂಬವನ್ನಿಡುವದಕ್ಕೆ ಬಿರುಗಾಳಿಯ ಹೊಡೆತವಿಲ್ಲದಂತೆ ಮರೆಯಾಗಿರುವ ಕೋಣೆಯೊಂದು ದೀಪಕ್ಕೆ ಬೇಕಾಗಿರುತ್ತದೆ. ಈ ಜ್ಞಾನದೀಪಕ್ಕೆ ರಾಗದ್ವೇಷಗಳಿಲ್ಲದೆ ವಿಷಯದಿಂದ ಹಿಂದಕ್ಕೆ ತಿರುಗಿಸುವ ಚಿತ್ತವೇ ಅಂಥ ಕೋಣೆಯು. ಎಲ್ಲಾ ಸಾಮಗ್ರಿಗಳೂ ಸರಿಯಾಗಿದ್ದರೆ, ಒಂದೇ ಸಮನೆ ದೀಪವು ಪ್ರಜ್ವಲಿಸುವಂತೆ ಈ ಜ್ಞಾನದೀಪವು ಸಂತತವಾಗಿ ಏಕಾಗ್ರತೆಯ ಧ್ಯಾನದಿಂದುಂಟಾದ ಸಮ್ಯಗ್ದರ್ಶನದಿಂದ ಬೆಳಬೆಳಗುತ್ತಿರುವದು.

ಆದ್ದರಿಂದ ನಾವು ಅಂತಃಕರಣವೆಂಬ ಈ ದೀಪದ ಕಂಬವನ್ನು ಚೆನ್ನಾಗಿ ತೊಳೆದುಕೊಳ್ಳಬೇಕು. ಇದರಲ್ಲಿ ತಿಳಿಯಾದ ಭಕ್ತಿ ಎಂಬ ಎಣ್ಣೆಯನ್ನು ಸುರಿಯಬೇಕು; ಸಾಧನಸಂಯುಕ್ತವಾದ ಪ್ರಜ್ಞಾವರ್ತಿಯನ್ನು ಇಡಬೇಕು. ಏಕಾಗ್ರತೆಯಿಂದ ಪರಮಾತ್ಮನನ್ನೇ ಧ್ಯಾನಿಸಬೇಕು. ಆಗ ಪರಮಾತ್ಮನು ಜ್ಞಾನದೀಪವನ್ನು ನಮ್ಮೊಳಗೆ ಹತ್ತಿಸುವನು, ನಮ್ಮ ಅಜ್ಞಾನದಿಂದುಂಟಾಗಿರುವ ಗಾಢವಾದ ಕತ್ತಲೆಯನ್ನು ಕಳೆಯುವನು.

ತದ್ಗತಪ್ರಾಣರಾಗಿ ತತ್ತ್ವವನ್ನೇ ವಿಚಾರಿಸುವ ಭಕ್ತರಿಗೂ ಅದು ತಿಳಿಯುವದು ಕಷ್ಟವಾಗಿರುವಲ್ಲಿ ವಿಷಯದ ಕಡೆಗೇ ತಿರುಗಿಕೊಂಡಿರುವ ಬರ್ಹಿಮುಖರಾದ ನಮ್ಮಂಥವರಿಗೆ ಹೇಗೆ ತಿಳಿಯಬೇಕು? ಮೊಟ್ಟಮೊದಲು ನಾವು ಈ ಜ್ಞಾನಕ್ಕೆ ಅರ್ಹತೆಯನ್ನು ಪಡೆಯಬೇಕು. ಗೌರೀಹಬ್ಬದಲ್ಲಿ ನಾವು ಹೆಣ್ಣುಮಕ್ಕಳಿಗೆ ಸುಮಂಗಲದ್ರವ್ಯವನ್ನು ಕಳುಹಿಸುವಂತೆ ಕ್ರಿಸ್‌ಮಸ್ ಹಬ್ಬದಲ್ಲಿ ಕ್ರಿಸ್ತಿಯನ್ನರು ಒಬ್ಬರಿಗೊಬ್ಬರು ಏನಾದರೊಂದು ಹೊಸವಸ್ತುವನ್ನು ಸಂತೋಷಸೂಚಕವಾಗಿ ಕಳುಹಿಸಿಕೊಡುತ್ತಾರೆಂದು ನೀವು ಕೇಳಿರಬಹುದು. ಒಬ್ಬ ಬಡವಿಯು ಈ ವರ್ಷ ತಾನು ಯಾರಿಗೂ ಏನೂ ಕಳುಹಿಸುವದಕ್ಕಿಲ್ಲವಲ್ಲ! -ಎಂದು ಕಳವಳಪಡುತ್ತಿದ್ದಳಂತೆ ವಿವೇಕಿಯಾದ ಆಪ್ತನೊಬ್ಬನು, "ಅಮ್ಮ ಮೊದಲು ನೀನು ಮತ್ತೊಬ್ಬರಿಗೆ ಏನಾದರೂ ಕಳುಹಿಸುವೆನೆಂದು ಸಂಕಲ್ಪವನ್ನು ಮಾಡಿಕೊ; ಅದಕ್ಕೆ ನಿನ್ನ ಕೈಯಲ್ಲಾದ ಪ್ರಯತ್ನವನ್ನು ಮಾಡುವದಕ್ಕೆ ಮೊದಲು ಮಾಡು. ಹಾಗಾದರೆ ಸಂಭಾವನೆಯ ವಸ್ತು ತನಗೆತಾನೇ ಬರುವದು" ಎಂದು ಉಪದೇಶಿಸಿದನಂತೆ. ಕೂಡಲೆ ಆಕೆಯು ತನ್ನಲ್ಲಿದ್ದ ಭಾಂಗಿಕಟ್ಟುವ ಬಣ್ಣದ ಟೇಪುಗಳನ್ನು ಸಜ್ಜುಗೊಳಿಸಿಕೊಂಡಳಂತೆ. ಭಗವಂತನ ಲೀಲೆಯನ್ನು ಹೇಳುವದೇನು! ಅಷ್ಟುಹೊತ್ತಿಗೆ ಯಾರೋ ಆಕೆಯ ದೂರಬಂಧುಗಳೊಬ್ಬರು ಅವಳಿಗೊಂದು ಭಾಂಗಿಯನ್ನು ಕಳುಹಿಸಿಕೊಟ್ಟಿದ್ದರು! ಕುತೂಹಲದಿಂದ ಅದನ್ನು ಒಡೆದು ಒಳಗಿದ್ದ ಉತ್ತಮವಸ್ತುಗಳನ್ನು ತನ್ನ ಪರಿಚಿತರಾದವರಿಗೆ ಕಟ್ಟಿಕಳುಹಿಸಿದಳಂತೆ! ಪರಮಾತ್ಮನ ಅನುಗ್ರಹವಾದ ತತ್ತ್ವಜ್ಞಾನವು ಬರಲಿಲ್ಲವಲ್ಲ!-

ಎಂದು ನಾವು ಹಂಬಲಿಸುವ ಕಾರಣವಿಲ್ಲ. ಮೊಟ್ಟಮೊದಲು ನಾವು ಅಂತಃಕರಣ ಶುದ್ಧಿಯನ್ನೂ ಭಕ್ತಿಶ್ರದ್ಧಾದಿಸಾಧನಗಳನ್ನೂ ಸಂಪಾದಿಸಿಕೊಳ್ಳಬೇಕು. ಕಥೆಯಲ್ಲಿನ ಬಡವಿಯು ಭಾಂಗಿಕಟ್ಟುವ ಹುರಿಯನ್ನು ಸಜ್ಜುಗೊಳಿಸುವ ಹೊತ್ತಿಗೆ ಸರಿಯಾಗಿ ನೆಂಟರ ಮನೆಯಿಂದ ಭಾಂಗಿಯು ಬಂದಂತೆ, ನಾವು ಅಧ್ಯಾತ್ಮಸಾಧನಗಳನ್ನು ಅಳವಡಿಸಿಕೊಳ್ಳುತ್ತಿರುವ ಹೊತ್ತಿಗೆ ಸರಿಯಾಗಿ ದೀನಬಂಧುವಾದ ಭಗವಂತನು ಜ್ಞಾನದ ಭಾಂಗಿಯನ್ನು ನಮಗೆ ತಪ್ಪದೆ ಕಳುಹಿಸಿಕೊಡುವನು. ಆದ್ದರಿಂದ ನಾವು ಮೊಟ್ಟಮೊದಲು ಭಗವದ್ಭಾವನೆಯನ್ನು ಸಂಪಾದಿಸಿಕೊಳ್ಳಬೇಕು.

---

# ೭೦. ಪರಮಾತ್ಮನ ವಿಭೂತಿಗಳು ೧೦-(೧೬-೨೫)
## (೧೮-೧-೪೮)

ಭಗವಂತನು ಸಕಲಜಗತ್ಕಾರಣನೆಂದೂ ಎಲ್ಲದರ ಸ್ಥಿತಿಗೂ ಕಾರಣನೆಂದೂ ತಿಳಿದುಕೊಂಡು ಭಾವಸಮೇತರಾಗಿ ಸತತವೂ ಭಜಿಸುತ್ತಿರುವವರಿಗೆ ಅಜ್ಞಾನವೆಂಬ ಕತ್ತಲೆಯನ್ನು ಕಳೆಯುವ ಜ್ಞಾನದೀಪವನ್ನು ಅನುಗ್ರಹಿಸುತ್ತಾನೆ ಎಂಬುದನ್ನು ಕೇಳಿ ಅರ್ಜುನನು ಈಗ ಪ್ರಶ್ನೆಮಾಡುತ್ತಿದ್ದಾನೆ. ಈ ಪ್ರಶ್ನೆಯ ಭಾವವನ್ನು ನಾವು ಸಾವಧಾನವಾಗಿ ಅರಿತುಕೊಳ್ಳೋಣ.

"ಎಲೈ ಭಗವಂತನೆ, ನೀನೇ ಪರಬ್ರಹ್ಮವು, ಹೆಚ್ಚಿನ ಸ್ಥಾನವು, ಅತ್ಯಂತ ಪಾವನನಾದವನು. ಎಲ್ಲಾ ಋಷಿಗಳೂ ದೇವರ್ಷಿಯಾದ ನಾರದನೂ ಅಸಿತ ದೇವಲನೂ ವ್ಯಾಸನೂ - ಎಲ್ಲರೂ ನೀನೇ ಶಾಶ್ವತನಾದ ಪುರುಷನು, ಜನ್ಮರಹಿತನು, ಸರ್ವಗತನು - ಎಂದು ಹೇಳಿರುವರು. ನೀನೂ ಸ್ವತಃ ಹಾಗೆಂದು ಹೇಳುತ್ತಿರುವೆ. ಎಲೈ ಕೇಶವನೆ, ನೀನು ಹೇಳಿರುವದೆಲ್ಲ ನಿಜವೆಂದೇ ನಾನು ನಂಬಿರುತ್ತೇನೆ. ನೀನು ಹೇಗೆ ಯಾವಾಗ ಅಭಿವ್ಯಕ್ತನಾದೆ ಎಂಬುದನ್ನು ದೇವತೆಗಳಾಗಲಿ ದಾನವರಾಗಲಿ ಅರಿಯರು; ಏಕೆಂದರೆ ನೀನು ಎಲ್ಲಾ ಪ್ರಾಣಿಗಳನ್ನೂ ರಕ್ಷಿಸುವವನು, ದೇವತೆಗಳಿಗೆಲ್ಲ ದೇವನು, ಜಗತ್ತಿಗೆಲ್ಲ ಪತಿಯು. ಆದ್ದರಿಂದ ನಿನ್ನ ಸ್ವರೂಪವನ್ನು ನೀನೊಬ್ಬನೇ ಬಲ್ಲೆ. ಆದ್ದರಿಂದ -

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥** (೧೦-೧೬)
**ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿನ್ತಯನ್ ।**
**ಕೇಷು ಕೇಷು ಚ ಭಾವೇಷು ಚಿನ್ತ್ಯೋಽಸಿ ಭಗವನ್ ಮಯಾ ॥**(೧೦-೧೭)

ಎಲೈ ಯೋಗಿಯೆ, ನಿನ್ನ ದಿವ್ಯವಿಭೂತಿಗಳನ್ನೆಲ್ಲವನ್ನೂ ದಯವಿಟ್ಟು ನನಗಾಗಿ ತಿಳಿಸು. ಈ ಇಡಿಯ ಜಗತ್ತೇ ನಿನ್ನ ಸ್ವರೂಪವೆಂದು ನೀನೇ ಹೇಳಿರುತ್ತೀಯೆ. ಆದರೂ ಯಾವಯಾವ ವಿಭೂತಿಗಳಿಂದ ನೀನು ಜಗತ್ತನ್ನು ವ್ಯಾಪಿಸಿಕೊಂಡಿರುತ್ತೀಯೆ? ಎಲ್ಲೆಲ್ಲಿ ನಿನ್ನ ಕಳೆಯು ಎದ್ದು ಕಾಣುತ್ತಿರುವದೋ ಆ ನಿನ್ನ ವಿಭೂತಿಗಳನ್ನು ನನಗೆ ತಿಳಿಸಬೇಕು. ನಾನು ಯಾವಯಾವ ಭಾವಗಳಲ್ಲಿ ನಿನ್ನನ್ನು ಉಪಾಸನೆಮಾಡಬೇಕು? ಹೇಗೆ ಉಪಾಸನೆ ಮಾಡಬೇಕು? ನಿತ್ಯಚಿಂತನೆಗೆ ಯೋಗ್ಯವಾದ ನಿನ್ನ ವಿಭೂತಿಗಳು ಯಾವವು? ನೀನು ಆಗಲೆ ಸ್ವಲ್ಪಮಟ್ಟಿಗೆ ನಿನ್ನ ವಿಭೂತಿಗಳನ್ನು ತಿಳಿಸಿರುತ್ತೀಯಾದರೂ ಧ್ಯಾನಕ್ಕಾಗಿ ನಿನ್ನ ವಿಭೂತಿಗಳನ್ನು ಇನ್ನೂ ವಿಸ್ತಾರವಾಗಿ ಕೇಳಬೇಕೆಂದಿರುವೆನು. ನಿನ್ನ ಮಾಯಾಶಕ್ತಿಯಿಂದ ಯಾವ ಯಾವ ವಿಭೂತಿಗಳನ್ನು ಜಗತ್ತಿನಲ್ಲಿ ತೋರಿಸಿ ಕೊಳ್ಳುತ್ತಿರುವೆ? ಅವನ್ನು ಕೇಳಬೇಕೆಂದು ನನಗೆ ಇಚ್ಛೆಯಾಗಿದೆ. ಅಮೃತತುಲ್ಯವಾದ ನಿನ್ನ ವಾಕ್ಕುಗಳನ್ನು ಕಿವಿಯಿಂದ ಎಷ್ಟು ಈಂಟಿದರೂ ನನಗೆ ತೃಪ್ತಿಯಿಲ್ಲ."

ಜಗತ್ತೆಂಬುದು ನಮ್ಮಗಳ ಕಣ್ಣಿಗೆ ಜಡಪ್ರಕೃತಿಯ ವಿಲಾಸವಾಗಿ ಕಾಣುತ್ತಿದ್ದರೂ ಉಪಾಸಕರ ದೃಷ್ಟಿಯಿಂದ ಎಲ್ಲೆಲ್ಲಿಯೂ ಭಗವಂತನ ವಿಭೂತಿಗಳೇ ಇಲ್ಲಿ ಕಿಕ್ಕಿರಿದಿರುವಂತೆ ಕಾಣುತ್ತಿರುವದು. ಆದರೆ ಆ ವಿಭೂತಿಗಳನ್ನು ಕಾಣುವದಕ್ಕೆ ನಮ್ಮ ಚರ್ಮದ ಕಣ್ಣು ಸಾಲದು; ದಿವ್ಯಭಾವನಾಮಯವಾದ ಕಣ್ಣು ಬೇಕು. ಭಾವನೆಯ ಕಣ್ಣಿನಿಂದ ನೋಡುವವರಿಗೆ ಲೋಕವೆಲ್ಲವೂ ವೈಕುಂಠವಾಗುವದು; ಇಲ್ಲಿ ಕಾಣುವದೆಲ್ಲವೂ ಭಗವನ್ಮಯವಾಗುವದು. ನಮ್ಮ ಕ್ಷುದ್ರ ಭಾವನೆಗಳೂ ಅದರಿಂದಾಗುವ ದುಃಖಪರಂಪರೆಗಳೂ ಮಾಯವಾಗುವವು. ಆದ್ದರಿಂದ ಅರ್ಜುನನು ತನ್ನ ಭಾವನೆಯ ಕಣ್ಣು ತೆರೆಯುವಂತೆ ವಿಭೂತಿಗಳ ಉಪದೇಶವನ್ನು ಮಾಡೆಂದು ಬೇಡಿಕೊಂಡಿರುತ್ತಾನೆ. ಈಗ ಭಗವಂತನ ಉತ್ತರವನ್ನು ಲಾಲಿಸಿರಿ:

**ಹನ್ತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯನ್ತೋ ವಿಸ್ತರಸ್ಯ ಮೇ ॥** (೧೦-೧೯)

"ಕುರುಶ್ರೇಷ್ಠನಾದ ಅರ್ಜುನನೆ, ನನ್ನ ದಿವ್ಯವಾದ ವಿಭೂತಿಗಳನ್ನು ಪ್ರಾಧಾನ್ಯ ದಿಂದ ಹೇಳುವೆನು, ಕೇಳು, ವಿಸ್ತಾರವಾಗಿ ಹೇಳುವದಕ್ಕೆ ಹೊರಟರೆ ನನ್ನ ವಿಭೂತಿಗಳಿಗೆ ಅಂತವೇ ಇರುವದಿಲ್ಲ" ಮೊಟ್ಟಮೊದಲು ಭಗವಂತನ ವಾಣಿಯೂ ಆತನ ವಿಭೂತಿ ಎಂಬುದನ್ನು ನಾವು ಮನಸ್ಸಿಗೆ ತಂದುಕೊಳ್ಳಬೇಕು. ಭಗವಂತನು ಇಲ್ಲಿ ಹೇಳಿರುವದರ ಸಾರವಿದು. ಭಗವಂತನ ವಿಭೂತಿ ಎಂದರೆ ವಿಸ್ತಾರವು. ಇಡಿಯ ಬ್ರಹ್ಮಾಂಡವೇ ಅವನ ವಿಭೂತಿಗಳ ಭಂಡಾರವು; ಅವುಗಳನ್ನೆಲ್ಲ ಹೇಳಬೇಕೆಂದು

ಹೊರಟರೆ ಕೊನೆ ಮುಟ್ಟುವದೆಂದಿಗೆ? ಆದ್ದರಿಂದ ಈಗ ಹೇಳುವದು ಮುಖ್ಯವಾದ ವಿಭೂತಿಗಳನ್ನು; ಅವುಗಳನ್ನೂ ಇಲ್ಲಿ ಸಂಗ್ರಹವಾಗಿಯೇ ತಿಳಿಸಲಾಗುತ್ತದೆ!

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**

**ಅಹಮಾದಿಶ್ಚ ಮಧ್ಯಂ ಚ ಭೂತಾನಾಮನ್ತ ಏವ ಚ ॥** (೧೦-೨೦)

ಸರ್ವಭೂತಗಳಲ್ಲಿ 'ನಾನು', 'ನಾನು' ಎಂದು ತೋರುವ ರೂಪವೇ ಆತ್ಮನು; ಎಲ್ಲದರ ತಿರುಳೇ ಆ ಪರಮಾತ್ಮನು, ಆತ್ಮವಸ್ತು. ಇದು ಪರಮಾತ್ಮನ ವಿಭೂತಿಯೆನ್ನುವದು ಔಪಚಾರಿಕವು. ಸರ್ವಪ್ರಾಣಿಗಳ ಹೃದಯದಲ್ಲಿಯೂ ಪರಮಾತ್ಮನೇ ಇರುವನೆಂಬುದನ್ನು ಅರಿತುಕೊಳ್ಳುವದೇ **ಅಧ್ಯಾತ್ಮವಿದ್ಯೆ; ಇದನ್ನು ತಿಳಿಸುವದೇ ಗೀತೆಯ ಮುಖ್ಯೋದ್ದೇಶವು.** ಇದನ್ನು ಅರಿತುಕೊಳ್ಳುವದಕ್ಕೆ ಶಕ್ತಿಯಿಲ್ಲದವರು ಹೀಗೆಂದು ಭಾವನೆಮಾಡಿದರೂ ಸಾಕು, ಉತ್ತಮಫಲವಾಗುವದು. 'ಹತ್ತು ಕಟ್ಟುವದನ್ನು ಒಂದು ಮುತ್ತು ಕಟ್ಟಿ' ಎಂಬಂತೆ ಈ ವಿಭೂತಿಯನ್ನು ಉಪಾಸನೆಮಾಡಿದರೆ ವಿಭೂತಿಯೋಗವೇ ನಮ್ಮ ಕೈವಶವಾದಂತೆ. ಇದು ತಿಳಿಯದವರಿಗೇ ಮುಂದಿನ ವಿಭೂತಿಗಳನ್ನು ಹೇಳಿರುವದು. ಸಿಪಾಯಿದಂಗೆಯಲ್ಲಿ ಒಬ್ಬ ಸಂನ್ಯಾಸಿಯನ್ನು ಯಾರೋ ಗುಂಡುಹೊಡೆದು ಗಾಯಗೊಳಿಸಿದರಂತೆ. ಯತಿಗೆ ಪ್ರಜ್ಞೆ ತಪ್ಪಿತು. ಆತನನ್ನು ಕಂಡು ಜನರು ದೂರವಾಗಿ ಕರೆದುಕೊಂಡು ಹೋಗಿ ಉಪಚರಿಸುತ್ತಿದ್ದರು. ಒಬ್ಬನು ಸಂನ್ಯಾಸಿಯ ಬಾಯಿಗೆ ಹಾಲುಹಾಕಲು ಒಂದು ಗುಟುಕು ಗಂಟಲೊಳಕ್ಕೆ ಇಳಿಯುವ ಹೊತ್ತಿಗೆ ಆತನಿಗೆ ಎಚ್ಚರವಾಯಿತು. ಹಾಲುಹಾಕುವವನು "ಸ್ವಾಮಿ, ನಾನು ಯಾರು, ಪರಿಚಯವಾಯಿತೆ" ಎಂದು ಕೇಳಿದನಂತೆ. ಆಗ ಆ ಸಾಧು "ಅಪ್ಪ, ಗುಂಡಿಟ್ಟವನೂ ನೀನೇ, ಹಾಲುಹಾಕುತ್ತಿರುವವನೂ ನೀನೇ. ನೀನಲ್ಲದೆ ಈ ಲೋಕದಲ್ಲಿ ಮತ್ತೆ ಯಾರು ಇದಾರೆ?" ಎಂದನಂತೆ. ಎಂಥ ಭಾವನೆಯಿದು! ಸರ್ವಭೂತಗಳಲ್ಲಿಯೂ ನಿರ್ವೈರಭಾವನೆಯಿರುವದಕ್ಕೆ ಸರ್ವರಲ್ಲಿಯೂ ಭಗವಂತನು ಆತ್ಮನಾಗಿರುವನೆಂಬ ಭಾವನೆಗಿಂತ ಮತ್ತೆ ಯಾವದು ಹೆಚ್ಚು ಉಪಕಾರವಾದೀತು? ಈ ಭಾವನೆಯು ಮಹಾತ್ಮರಿಗೆ ಮಾತ್ರವೇ ಸಂಪೂರ್ಣವಾಗಿ ಬೇಗನೆ ದಕ್ಕುವದು. ನಮ್ಮಂಥವರಿಗೆ ಇದು ಅಳವಡುವದಕ್ಕಾಗಿಯೇ ಮುಂದಿನ ವಿಭೂತಿಗಳನ್ನು ಹೇಳಿದೆ.

ಆ ಪರಮಾತ್ಮನೇ ಎಲ್ಲರಿಗೂ ಆತ್ಮನು. ಆತನೇ ಎಲ್ಲಾ ಪ್ರಾಣಿಗಳಿಗೂ ಮೊದಲು, ಆತನೇ ಕೊನೆ, ಆತನೇ ನಡುವೆ; ಆತನಿತ್ತ ದೇಹವು ಪ್ರಾಣಿಗಳದು, ಆತನಿತ್ತಿರುವ ಜೀವನವು ಅವರದು. ಆತನಿಗಿಂತ ಬೇರೆಯಾದ ಸತ್ತ್ವವು ಯಾವ ಜೀವರಿಗೂ ಇಲ್ಲವೇ ಇಲ್ಲ.

"ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್" - ಎಂದು

ಮುಂತಾಗಿ ಹೇಳಿರುವವು ಪರಮಾತ್ಮನ ವಿಭೂತಿಗಳು. ದ್ವಾದಶಾದಿತ್ಯರಲ್ಲಿ ವಿಷ್ಣುವು, ಬೆಳಗುವವರಲ್ಲಿ ಸೂರ್ಯನು, ಮರುದ್ದೇವತೆಗಳಲ್ಲಿ ಮರೀಚಿಯು, ನಕ್ಷತ್ರಗಳಲ್ಲಿ ಚಂದ್ರನು, ವೇದಗಳಲ್ಲಿ ಸಾಮವೇದವು, ದೇವತೆಗಳಲ್ಲಿ ಇಂದ್ರನು, ಇಂದ್ರಿಯಗಳಲ್ಲಿ ಮನಸ್ಸು, ಭೂತಗಳಲ್ಲಿ ಚೇತನ, ರುದ್ರರಲ್ಲಿ ಶಂಕರನು, ಯಕ್ಷರಾಕ್ಷಸರಲ್ಲಿ ಕುಬೇರನು, ವಸುಗಳಲ್ಲಿ ಅಗ್ನಿಯು, ಶಿಖರವುಳ್ಳ ಪರ್ವತಗಳಲ್ಲಿ ಮೇರು - ಎಂದು ಭಗವಂತನ ವಿಭೂತಿಗಳನ್ನು ಚಿಂತಿಸಬೇಕು. ಪುರೋಹಿತರಲ್ಲಿ ಬೃಹಸ್ಪತಿ, ಸೇನಾನಿಗಳಲ್ಲಿ ಸ್ಕಂದನು, ಸರೋವರಗಳಲ್ಲಿ ಸಾಗರವು - ಎಂದು ಚಿಂತಿಸಬೇಕು.

ಸೂರ್ಯಚಂದ್ರಾದಿಗಳನ್ನು ಕಂಡಾಗ ನಮಗೆ ಪರಮಾತ್ಮನ ನೆನಪು ಬರಬೇಕು. ವೇದಗಳನ್ನು ಕೇಳಿದಾಗ, ಅದರಲ್ಲಿಯೂ ಸಾಮಗಾನವನ್ನು ಕೇಳಿದಾಗ, ವಿಶೇಷವಾಗಿ ಪರಮಾತ್ಮನ ಧ್ಯಾನವುಂಟಾಗಬೇಕು. ಪುರೋಹಿತನೆಂದರೆ ರಾಜರಿಗೆ ಸಲಹೆಕೊಡುವವನು; ಅಂಥವರಲ್ಲಿ ಬೃಹಸ್ಪತಿಯು ಮಿಗಿಲಿಲ್ಲದ ಬುದ್ಧಿಚಾತುರ್ಯವುಳ್ಳವನಾದ್ದರಿಂದ ಅವನನ್ನು ಭಗವಂತನ ವಿಭೂತಿಯೆಂದು ಧ್ಯಾನಿಸಬೇಕು.

ಇಂಥ ವಸ್ತುಗಳನ್ನು ನಾವು ನೋಡಿದಾಗ ಅಥವಾ ಅವುಗಳ ವಿಷಯವಾಗಿ ಕೇಳಿದಾಗ ಆಶ್ಚರ್ಯದಿಂದ ಚಮಕಿತರಾಗುವೆವು. ಅವು ಪರಮಾತ್ಮನ ವಿಭೂತಿಗಳಾದ್ದರಿಂದ ಒಂದು ಕ್ಷಣಹೊತ್ತು ಪರಮಾತ್ಮನ ಕಡೆಗೆ ನಮ್ಮ ಮನಸ್ಸು ನಮಗೆ ಅರಿವಿಲ್ಲದೆಯೇ ಹೋಗಿರುವದು. ಆದರೆ ಸ್ವಲ್ಪ ಹೊತ್ತಾಗುತ್ತಲೂ ಅದೆಲ್ಲ ಮರೆತುಹೋಗುವದು. ಇದೇಕೆ ಹೀಗಾಗುವದೆಂದರೆ ನಾವು ಎಲ್ಲವನ್ನೂ ನಾನು ಎಂಬ ಅಳತೆಯ ಕೋಲಿನಿಂದ ಅಳೆದು ಅದರ ಗುಣವು ಇಷ್ಟಿಷ್ಟು ಹೆಚ್ಚಾಗಿದೆ ಎಂದು ಲೆಕ್ಕಹಾಕುತ್ತಿರುವೆವು; ಆದ್ದರಿಂದ ಆಯಾ ವಸ್ತುವನ್ನು ಆಯಾ ವಸ್ತುವಿಗಾಗಿಯೇ ಹೊಗಳುತ್ತಿರುವೆವು. ಸೂರ್ಯನ ಬೆಳಕಿನಿಂದ ಹೊಳೆಯುವ ಕನ್ನಡಿಯ ಬೆಳಕಿನಿಂದ ಕತ್ತಲೆಯಲ್ಲಿರುವ ಯಾವದಾದರೊಂದು ವಸ್ತುವನ್ನು ಕಂಡುಕೊಂಡಾಗ ಮೂಲಪ್ರಕಾಶವು ಸೂರ್ಯನೆಂಬುದನ್ನು ಮರೆತು ಕನ್ನಡಿಯೇ ಬೆಳಕಿಗೆ ಉಗಮಸ್ಥಾನವೆಂದು ಬರೆಯುವ ಮೂಢರಂತೆ ಜನರು ಈ ಲೋಕದ ವಸ್ತುಗಳ ಗುಣಗಳನ್ನು ಹಾಡಿ ಹೊಗಳಿ ಆ ವಸ್ತುಗಳಿಗಿಲ್ಲದ ಬೆಲೆಯನ್ನು ಅವಕ್ಕೆ ಕಟ್ಟುತ್ತಿರುವರು. ವಸ್ತುಗಳ ಗುಣಾವಳಿಯನ್ನು ಚಿಂತನೆಮಾಡುವ ಚರ್ಚೆಯ ಫಲವೇ ಈಗ 'ವಿಜ್ಞಾನಶಾಸ್ತ್ರ'ವೆನಿಸಿಕೊಂಡಿರುತ್ತದೆ. ಆದರೆ ಇದನ್ನು ವಿಜ್ಞಾನವೆನ್ನುವದಕ್ಕಿಂತ ಅಜ್ಞಾನವೆಂದು ಕರೆಯುವದೇ ಸರಿಯಾದದ್ದು. ನಿಜವಾಗಿ ಆ ವಸ್ತುಗಳಲ್ಲಿ ಪ್ರತಿಬಿಂಬಿಸಿರುವ ಗುಣಗಳ ಮೂಲವಾದ ಪರಮಾತ್ಮನನ್ನು ತಿಳಿಯುವದೇ ವಿಜ್ಞಾನವು. ಯಾವ ವಸ್ತುವಿಗಾಗಲಿ, ಯಾವ ಪ್ರಾಣಿಗಾಗಲಿ, ಯಾವ ಮನುಷ್ಯನಿಗಾಗಲಿ, ಗುಣಗಳು, ಬುದ್ಧಿ, ಶಕ್ತಿ - ಮುಂತಾದದ್ದು ದೊರಕಿದ್ದರೆ

ಅದಕ್ಕೆಲ್ಲ ಮೂಲವು ಭಗವಂತನೇ. ಆತನ ಶಕ್ತಿಯ ಒಂದಂಶವೇ, ಆತನ ದಯೆಯಿಂದ, ಆತನ ಅನುಗ್ರಹದಿಂದ, ಆಯಾ ವಸ್ತುಗಳಲ್ಲಿ ಕಾಣಿಸಿಕೊಳ್ಳುತ್ತಿರುತ್ತದೆ. ಇದನ್ನು ನಾವು ಲಕ್ಷ್ಯದಲ್ಲಿಡಬೇಕು. ಮಾಯಾವಿಲಾಸಕ್ಕೆ ಮರುಳಾಗಬಾರದು. ಈ ಮಾಯಾವಿಲಾಸವು ಎಲ್ಲಿಂದ ಬಂದದ್ದು? ಪರಮಾತ್ಮನಿಂದ. ಇದನ್ನು ನೆನಪಿಡೋಣ. ಕನ್ನಂಬಾಡಿಯ ನೀರಿನ ವಿಲಾಸವನ್ನು ರಾತ್ರೆಯ ಬೆಳಕಿನಲ್ಲಿ ಕಾಣುವಾಗ, ನಮ್ಮ ಕಣ್ಣಿಗೆ ವಿಧವಿಧವಾದ ಬಣ್ಣಗಳೂ ಚಲನೆಗಳೂ ಹಬ್ಬವನ್ನುಂಟುಮಾಡುತ್ತಿರುವಾಗ, ಆ ಕಟ್ಟೆಯನ್ನೂ ಅಲ್ಲಿರುವ ಬೆಳಕುಗಳ ವಿಲಾಸವನ್ನೂ ರಚಿಸಿದ ಶಿಲ್ಪಿಯ ಬುದ್ಧಿಯ ನೆನಪು ನಮಗೆ ಬರಬೇಕು, ಆ ಬುದ್ಧಿಯ ಮಹಿಮೆಯು ಅವನಿಗೆ ಪರಮಾತ್ಮನಿಂದ ದೊರೆತದ್ದು ಎಂಬ ನೆನಪು ಬರಬೇಕು. ಆಗ ನಮಗೆ ಉತ್ತಮವಿಜ್ಞಾನವು ಬಂದಂತೆ ಆಗುವದು, ನಾವು ಧನ್ಯರಾಗುವೆವು. ಈ ಮಾಯಾವಿಲಾಸವನ್ನು ನೋಡುವದರಲ್ಲಿಯೇ ನಮ್ಮ ಆಯಸ್ಸು ಕಳೆದುಹೋಗುತ್ತಿರವಮು. ಈ ಮಾಯೆಯ ವೈಚಿತ್ರ್ಯವನ್ನು ಮೆಚ್ಚು ವದರಲ್ಲಿಯೇ ಕಾಲವನ್ನು ಕಳೆಯಬಾರದು. ಇದರ ಮೂಲವನ್ನು ನೋಡೋಣ.

ವೇದಾಂತಿಗಳು ಜಗತ್ತು ಅಶಾಶ್ವತವು, ಇದೆಲ್ಲ ಮಿಥ್ಯೆ, ಮಾಯಾವಿಲಾಸ ಎನ್ನುವರು. ಇನ್ನೊಂದು ಸಲ ಇದೆಲ್ಲ ಪರಮಾತ್ಮನ ವಿಭೂತಿ ಎನ್ನುವರು. ಇವುಗಳಲ್ಲಿ ಯಾವದು ಸರಿ? - ಎಂದು ಕೆಲವರ ಮನಸ್ಸಿಗೆ ತೊಡಕು ಹತ್ತಿಕೊಳ್ಳುವದುಂಟು. ಆದರೆ ಈ ಶಂಕೆಗೆ ಕಾರಣವಿಲ್ಲ. ಜಗತ್ತನ್ನು ನೋಡಿದಾಗ ನಮಗೆ ಕಲೆಬೆರಕೆಯಿಂದ ಎರಡು ಪದಾರ್ಥಗಳು ಕಾಣಿಸುವವು. ಒಂದು ಪರಮಾತ್ಮನ ಅಂಶ, ಇನ್ನೊಂದು ಮಾಯೆಯ ಅಂಶ. ಇದನ್ನು ತಿಳಿಸುವದಕ್ಕೆ ಒಂದು ದೃಷ್ಟಾಂತವನ್ನು ಉದಾಹರಿಸುವೆನು. ಸಿನಿಮಾದಲ್ಲಿ "ವೇಮನ" ಎಂಬ ಚಲನಚಿತ್ರದ ಆಟವನ್ನು ನೋಡುವದಕ್ಕೆಂದು ಒಮ್ಮೆ ನನ್ನ ಮಿತ್ರರೊಬ್ಬರು ನನ್ನನ್ನು ಕರೆದೊಯ್ದರು. ನಾನು ನೋಡಿರುವದು ಅದೊಂದೇ ಚಿತ್ರ. ಆ ಆಟದ ಕಥೆಯಲ್ಲಿ ವೇಮನನು ಮೊದಲು ಪೋಕರಿಯಾಗಿದ್ದು ಆಮೇಲೆ ಪಶ್ಚಾತ್ತಾಪದಿಂದ ಸತ್ಸಂಗವನ್ನು ಮಾಡಿ ವಿರಕ್ತನಾಗಿ ಭಕ್ತಾಗ್ರೇಸರನಾದನು ಎಂದು ವಿವರಿಸಿದೆ. ಸಿನಿಮದವರಿಗೆ ವೈರಾಗ್ಯವನ್ನೂ ಭಕ್ತಿಯನ್ನೂ ವರ್ಣಿಸಿ ತೋರಿಸುವದಕ್ಕಿಂತ ಪ್ರಾಕೃತಜನರ ಚಿತ್ತವನ್ನು ಸೆಳೆಯುವ ದೃಶ್ಯಗಳನ್ನು ತಯಾರಿಸುವದರಲ್ಲಿಯೇ ಆದರ ಹೆಚ್ಚಾಗಿದ್ದದ್ದರಿಂದ ಆ ಕಡೆಗೇ ಹೆಚ್ಚು ಲಕ್ಷ್ಯ ವನ್ನಿಟ್ಟಿದ್ದರು. ಒಂದು ದೃಶ್ಯದಲ್ಲಿ ವೇಮನನು ತನ್ನ ಸೂಳೆಯ ಮೇಲೆ ಕನಕ ವೃಷ್ಟಿಯನ್ನು ಕರೆಯಿಸಿದ ಚಿತ್ರವಿತ್ತು. ಸಾವಿರಾರು ನಾಣ್ಯಗಳು ಮೇಲಿನಿಂದ ಉದುರಿ ಬೀಳುತ್ತಿದ್ದವು; ಆ ವೇಶ್ಯೆಯೂ ಅವಳ ತಾಯಿಯೂ ನಾಣ್ಯಗಳನ್ನು ಬೇಗಬೇಗನೆ ಆರಿಸಿ ಬುಟ್ಟಿಗೆ ತುಂಬಿಕೊಳ್ಳುತ್ತಿದ್ದರು. ಜನರು ಕೇಕೆಹಾಕಿಕೊಂಡು ನಗುತ್ತಾ

ಹಿಗ್ಗುತ್ತಿದ್ದರು! ಚಿತ್ರಪ್ರದರ್ಶನದವರು ವೇಮನನ ಭಕ್ತಿಯನ್ನಾಗಲಿ, ವಿರಕ್ತಿಯನ್ನಾಗಲಿ, ಸದುಪದೇಶಗಳನ್ನಾಗಲಿ ಹೆಚ್ಚಿಸಿದ್ದರೆ ಆ ನೋಟಕರಿಗೆಲ್ಲ ಆಶಾಭಂಗವಾಗುತ್ತಿತ್ತೆಂಬುದರಲ್ಲಿ ಸಂಶಯವಿಲ್ಲ. ಅವರಿಗೆ ವೇಶ್ಯಾ ಸ್ತ್ರೀಯ ಮನೆಯ ಚಿತ್ರವೂ ಅವಳ ಮತ್ತು ಅವಳ ತಾಯಿಯ ದುರಾಶೆಯ ಚಿತ್ರವೂ ಮನಮೋಹಕವಾಗಿದ್ದವು! ಈ ಆನಂದದ ನಡುವೆ, ನಾಣ್ಯಗಳ ಸುರಿಮಳೆಯು ತಲೆಯಮೇಲೆ ಬಿದ್ದರೂ ಅವಳಿಗೆ ಪೆಟ್ಟಾದ ಸೊಲ್ಲೇ ಇಲ್ಲವಲ್ಲ, ಇದೆಂಥ ಅಸ್ವಾಭಾವಿಕ ವರ್ಣನೆ - ಎಂಬ ಯೋಚನೆಯು ಯಾರೊಬ್ಬರ ಬುದ್ಧಿಗೂ ಹತ್ತಲೇ ಇಲ್ಲ! ನಾವು ಜಗತ್ತನ್ನು ಕಾಣುತ್ತಿರುವ ಪರಿಯೂ ಹೀಗೆಯೇ ಇದೆ. ಅದರಲ್ಲಿ ನಾವು ನಗಬಾರದ ಕಡೆ ನಗುತ್ತಲೂ ಅಳಬಾರದ ಕಡೆ ಅಳುತ್ತಲೂ ಅಸ್ವಾಭಾವಿಕವಾದ ಅಸತ್ಯವಾದ ಮಾಯಾದೃಶ್ಯಗಳಿಗೆ ಬೆರಗಾಗಿರುವೆವು. ಆದರೆ ಅದೇ ದೃಶ್ಯಗಳಲ್ಲಿ ನಿಟ್ಟಿಸಿನೋಡಬೇಕಾದ ಆನಂದದಿಂದ ಹಿಗ್ಗಬೇಕಾದ ತತ್ತ್ವವೊಂದು ಇರುತ್ತದೆ; ಅದೇ ಪರಮಾತ್ಮನ ಮಹಿಮೆಯು. ಇದನ್ನು ನೋಡದೆಯೇ ಅಥವಾ ನೋಡಿದರೂ ಅದನ್ನು ಕಡೆಗಣಿಸಿಯೇ ಮುಂದುಮುಂದಕ್ಕೆ ಹೋಗುತ್ತಾ ಮತ್ತೂ ಮತ್ತೂ ಮಾಯೆಯ ಮಿಥ್ಯಾವಿಲಾಸಗಳನ್ನೇ ಹುಡುಕುತ್ತಿರುವೆವು! ಆದ್ದರಿಂದ ವೇದಾಂತಿಗಳು "ಮೇಲುಮೇಲೆ ನೋಡಿ ಈ ದುಃಖಕರವಾದ, ಅಶಾಶ್ವತವಾದ, ಮಿಥ್ಯವಾದ ಮಾಯಾವಿಲಾಸಗಳಿಗೆ ಬೆರಗಾಗದಿರಿ; ಒಳಹೊಕ್ಕು ಇವೇ ದೃಶ್ಯಗಳಿಗೆ ಆಧಾರವಾಗಿರುವ ಭಗವಂತನ ವಿಭೂತಿಯನ್ನು ಕಂಡುಕೊಳ್ಳಿರಿ" ಎಂದು ಉಪದೇಶಿಸು ತ್ತಿರುವರು. ಆದ್ದರಿಂದ ಅವರ ಉಪದೇಶದಲ್ಲಿ ಯಾವ ಪೂರ್ವಾಪರ ವಿರೋಧವೂ ಇರುವದಿಲ್ಲ.

ಇದನ್ನು ಸ್ಪಷ್ಟಪಡಿಸುವದಕ್ಕಾಗಿ **"ಇಂದ್ರಿಯಾಣಾಂ ಮನಶ್ಚಾಸ್ಮಿ"** 'ಇಂದ್ರಿಯಗಳಲ್ಲಿ ಮನಸ್ಸು ನಾನು'- ಎಂಬ ಭಗವಂತನ ಉಪದೇಶವನ್ನು ಬಿಡಿಸಿ ನೋಡೋಣ. ಮನಸ್ಸೆಂಬುದು ಮನುಷ್ಯನನ್ನು ಕಂಡಕಡೆಗೆ ಎಳೆಯುತ್ತಿರುತ್ತದೆ. ಕಾಮ, ಕ್ರೋಧ, ಲೋಭ, ಮೋಹ ಮುಂತಾದ ರೂಪಗಳನ್ನು ಧರಿಸಿ ಮನುಷ್ಯನು ಮಾಡಬಾರದ ಕೆಲಸಗಳನ್ನೆಲ್ಲ ಅವನಿಂದ ಮಾಡಿಸುತ್ತಿರುತ್ತದೆ. ಇದು ಭಗವಂತನ ವಿಭೂತಿ ಹೇಗಾದೀತು? ಎಂದು ಕೆಲವರಿಗೆ ಎನ್ನಿಸಬಹುದು. ಆದರೆ ಈಗ ನಾವು ವರ್ಣಿಸಿರುವದು ಮನಸ್ಸಿನ ಮಾಯಾರೂಪ; ಈ ರೂಪದಲ್ಲಿ ಅದನ್ನು ದೇವರ ವಿಭೂತಿ ಎನ್ನುವದಕ್ಕಿಂತ ದೆವ್ವದ ವಿಭೂತಿ ಎನ್ನುವದೇ ಸರಿಯಾಗಿರುತ್ತದೆ. ಆದರೆ "ಮನ ಏವ ಮನುಷ್ಯಾಣಾಂ ಕಾರಣಂ ಬನ್ಧಮೋಕ್ಷಯೋಃ" ಮನಸ್ಸೇ ಮನುಷ್ಯರ ಬಂಧಕ್ಕೂ ಮೋಕ್ಷಕ್ಕೂ ಕಾರಣವಾಗಿರುತ್ತದೆ ಎಂದು ಬಲ್ಲವರು ಹೇಳುವರು. ಮೋಕ್ಷಕ್ಕೆ ಕಾರಣವಾಗಿರುವ ಸಾತ್ತ್ವಿಕಮನಸ್ಸು ಅದರ ಅತ್ಯಂತ ಉತ್ತಮವಾದ

ರೂಪದಲ್ಲಿ ಭಗವಂತನು ನಮಗೆ ಅನುಗ್ರಹಿಸಿರುವ ಒಂದು ಹೆಚ್ಚಿನ ವರವಾಗಿರುತ್ತದೆ. ಮನುಷ್ಯನಲ್ಲಿರುವ ಅತ್ಯಂತ ದೊಡ್ಡವಸ್ತುವೆಂದರೆ ಮನಸ್ಸೇ; ಮನಸ್ಸಿನಿಂದಲೇ ಮನುಷ್ಯನು ಮನುಷ್ಯನೆನಿಸಿಕೊಂಡಿರುತ್ತಾನೆ. ಮನಸ್ಸನ್ನು ಸರಿಯಾಗಿ ಉಪಯೋಗಿಸಿ ಕೊಳ್ಳದೆ ಕೆಟ್ಟವರು ಹಲವರು ಇರುವರು ನಿಜ; ಆದರೆ ಆ ರೂಪವನ್ನಲ್ಲ, ಇಲ್ಲಿ ಭಗವಂತನ ವಿಭೂತಿ ಎಂದು ವರ್ಣಿಸಿರುವದು. ಅದೇ ಮನಸ್ಸನ್ನು ಉಪಯೋಗಿಸಿ 'ನಾನು ನಿತ್ಯಮುಕ್ತನಾದ ಸಚ್ಚಿದಾನಂದಸ್ವರೂಪನಾದ ಆತ್ಮನು' ಎಂಬ ದಿವ್ಯವಾದ ಜ್ಞಾನವನ್ನು ಈಗಲೇ ಇಲ್ಲಿಯೇ ಸಂಪಾದಿಸಿಕೊಳ್ಳುವದಕ್ಕೆ ಮನಸ್ಸೇ ನಮಗೆ ಸಾಧನ ವಾಗಿರುತ್ತದೆ. ಶಂಕರಾಚಾರ್ಯರು ತಮ್ಮ ಉಪನಿಷದ್ಭಾಷ್ಯದಲ್ಲಿ ಹೀಗೆಂದಿರುತ್ತಾರೆ; "ಹೊರಗಿನ ಆನಂದಸಾಧನಗಳು ಯಾವವೂ ಇಲ್ಲದ ವಿರಕ್ತರಾದ ಮಹನೀಯರು ಯಾವಾಗಲೂ ಆನಂದದಿಂದಿರುತ್ತಾರಲ್ಲ, ಅವರಿಗೆ ಯಾವದು ಆನಂದಹೇತುವು? ಆ ಆನಂದಕಾರಣವಾದ ಬ್ರಹ್ಮವು ಇಲ್ಲದಿದ್ದರೆ ಅವರಿಗೆ ಇಂಥ ಆನಂದವು ಹೇಗೆ ದೊರತೀತು?" ನಿಜ. ಆದರೆ ಈ ಆನಂದಸ್ವರೂಪವಾದ ಬ್ರಹ್ಮವನ್ನು ಅರಿಯುವದಕ್ಕೆ ಸಾಧನವಾದ ಮನಸ್ಸಿನ ಸಾಮರ್ಥ್ಯವು ಎಷ್ಟಾಯಿತು! ಅದು ಯಾವ ಸಾಮಗ್ರಿಯೂ ಇಲ್ಲದ ಆ ಆನಂದವನ್ನು ಮಾನವನಿಗೆ ತಂದುಕೊಡಬಲ್ಲದಲ್ಲ! ಆದ್ದರಿಂದ ಅದರಲ್ಲಿ ಭಗವಂತನ ವಿಭೂತಿಯು ಎಷ್ಟರಮಟ್ಟಿಗೆ ಇದ್ದಂತಾಯಿತು!

ಈ ಅಧ್ಯಾಯದಲ್ಲಿ ಹೇಳಿರುವ ಭಗವದ್ವಿಭೂತಿಗಳನ್ನೆಲ್ಲ ಹೀಗೆಯೇ ಪರೀಕ್ಷಿಸುತ್ತಾ ಹೋಗಬೇಕು. ಅವು ಯಾವದರಿಂದ ಭಗವಂತನ ವಿಭೂತಿಗಳೆನಿಸಿಕೊಂಡಿವೆ? - ಎಂಬುದೇ ಇಲ್ಲಿ ಮುಖ್ಯವಾದದ್ದು.

**"ವಿತ್ತೇಶೋ ಯಕ್ಷರಕ್ಷಸಾಮ್"**. ಇಲ್ಲಿ ವಿತ್ತೇಶನಾದ ಕುಬೇರನನ್ನು ಯಾವ ದೃಷ್ಟಿಯಿಂದ ಭಗವಂತನ ವಿಭೂತಿ ಎಂದು ಎಣಿಸಬೇಕು? ಎಷ್ಟೋ ಜನರು ಹಣವನ್ನು ಹಾಸಿಕೊಂಡು ಹೊದ್ದುಕೊಳ್ಳುವಷ್ಟು ಸಂಪಾದಿಸಿರುತ್ತಾರೆ. ಆದರೆ ಅದು ದುಃಖಕ್ಕೊ, ಸುಖಕ್ಕೊ? ಎಂದು ವಿಚಾರಿಸಬೇಕು. ಹಣವನ್ನು ದುಡಿದಷ್ಟೂ ನೆಂಟರಿಷ್ಟರು ದ್ವೇಷಿಗಳಾಗುವದಾದರೆ, ದುಡ್ಡಿನ ಲೋಭವು ಪಿಶಾಚಿಯ ಬೆನ್ನುಹತ್ತಿದಂತೆ ಹತ್ತಿಕೊಳ್ಳುವದಾದರೆ, ಹೊಲಮನೆಗಳು, ದನಕರುಗಳು, ಆಳುಕಾಳುಗಳು, ಹೆಂಡಿರು ಮಕ್ಕಳು - ಎಲ್ಲವೂ ಮನಸ್ಸಿನ ಕಿರಿಕಿರಿಗೇ ಕಾರಣವಾದರೆ ಅಂಥ ವಿತ್ತದಿಂದ ಆಗಬೇಕಾದದ್ದೇನು? **"ಯಾವದ್ವಿತ್ತೋಪಾರ್ಜನಸಕ್ತಃ ತಾವನ್ನಿಜಪರಿವಾರೋ ರಕ್ತಃ"** ಎಂಬ ಸೂಕ್ತಿಯನ್ನು ನೆನಪಿಗೆ ತರುವ ವಿತ್ತವು ವಿತ್ತವಲ್ಲ, ಅದು ಮೃತ್ಯು. ಆದರೆ ವಿತ್ತದಲ್ಲಿ ಆನಂದರೂಪನಾದ ಪರಮಾತ್ಮನನ್ನು ನೆನಪಿಗೆ ತರುವ ಅಂಶವೂ ಇದೆ. ವಿತ್ತವನ್ನು ಅರ್ಹರಾದ ಜನರಲ್ಲಿ ಹಂಚುವದೊಂದು ಆನಂದದ ಸೇವೆ. ಅದು

ಎಲ್ಲರಿಗೂ ಅಲ್ಪಪುಣ್ಯದಿಂದ ದೊರೆಯತಕ್ಕದಲ್ಲ. ಹಸಿದವರಿಗೆ ಅನ್ನವನ್ನೂ ಬೆತ್ತಲೆ ಮೈಯಿಂದ ನಡುಗುತ್ತಿರುವವರಿಗೆ ಬಟ್ಟೆಯನ್ನೂ ನಿರುದ್ಯೋಗಿಗಳಿಗೆ ಉದ್ಯೋಗವನ್ನೂ ಕಲ್ಪಿಸುವ ವಿತ್ತವು ಎಲ್ಲರಿಗೂ ಸುಮ್ಮನೆ ದೊರೆತೀತೆ? ತಾನೂ ಅನುಭವಿಸಿ ಇತರ ರಿಗೂ ಸರಿಯಾಗಿ ಧನವನ್ನು ಹಂಚುವದೆಂಬುದೇ ಒಂದು ಪರಮಾತ್ಮಸೇವೆ. ಹಾಗೆ ಮಾಡುವವನಲ್ಲಿ ಪರಮಾತ್ಮನ ವಿಭೂತಿಯು ಅವಶ್ಯವಾಗಿ ಇರುತ್ತದೆ. ಕುಬೇರನು ಪರಮೇಶ್ವರನ ಮಿತ್ರನೆನೆಸಿಕೊಂಡಿರುತ್ತಾನೆ. ವೈರಾಗ್ಯದ ನಿಧಿಯಾದ ಶಿವನು ಕುಬೇರನಿಂದ ಜನರಿಗೆ ಬೇಕಾದ ನಿಧಿಗಳನ್ನು ಕೊಡಿಸಿ ಸಲಹುತ್ತಿರುವನು. ಕುಬೇರನು ಉದಾರಹಸ್ತದಿಂದ, ಪರಮೇಶ್ವರನ ಇಚ್ಛೆಯಿಂದ, ಸಂತೋಷಪೂರ್ವಕವಾಗಿ ಕೊಡು ತ್ತಿರುವನು. ಭೂಮಿಯಲ್ಲಿರುವ ಅನರ್ಘ್ಯವಾದ ಪದಾರ್ಥಗಳು ಆಶಾಪೂರಿತರಾದವರಿಗೆ ಕಾಣಿಸುವದಿಲ್ಲ; ಅವುಗಳನ್ನು ಕುಬೇರನ ಸೇವಕರಾದ ಯಕ್ಷರು ಬಚ್ಚಿಟ್ಟಿರುವರು. ಆದರೆ ಯಾರು ನಿಃಸ್ಪೃಹರೋ, ಉದಾರರೋ, ಸರ್ವಭೂತಪ್ರೇಮವುಳ್ಳವರೋ, ಅಂಥವರಿಗೆ ಕುಬೇರನ ಅನುಗ್ರಹದಿಂದ ನವನಿಧಿಗಳೂ ಕಾಣಿಸಿಕೊಳ್ಳುವವಂತೆ. ಈ ದೃಷ್ಟಿಯಿಂದ ನೋಡಿದರೆ ಕುಬೇರನು ವಿತ್ತೇಶನಾಗಿ ಭಗವಂತನ ವಿಭೂತಿಯಾಗಿರುತ್ತಾನೆ.

"ಮೇರುಃ ಶಿಖರಿಣಾಮಹಮ್" ಎಂಬುದನ್ನು ಈಗ ತೆಗೆದುಕೊಳ್ಳೋಣ. ಮೇರು ಎಂಬುದು ಪುರಾಣಪ್ರಸಿದ್ಧವಾದ ಪರ್ವತ. ಇದರ ಶಿಖರಗಳು ಚಿನ್ನ, ರತ್ನ ಮುಂತಾದ ಅನರ್ಘ್ಯವಾದ ಪದಾರ್ಥಗಳಿಂದಾಗಿರುತ್ತವೆಯಂತೆ; ಅವು ಪುಣ್ಯವಂತರಿಗೆ ಮಾತ್ರ ಕಾಣುವವಂತೆ. ಅಲ್ಲಿ ದಿವ್ಯೌಷಧಗಳು ಇರುವವಂತೆ. ಆ ಪರ್ವತದ ಬಳಿಗೆ ನಿರತಿಶಯವಾಗಿ ಪುಣ್ಯವನ್ನು ಮಾಡಿದವರು ಮಾತ್ರ ಹೋಗಲು ಸಾಧ್ಯವಂತೆ. ದೇವತೆಗಳೂ ಮಹರ್ಷಿಗಳೂ ಅಲ್ಲಿಗೆ ಹೋಗಲು ಶಕ್ತರು. ಸದ್ಬುದ್ಧಿಯುಳ್ಳ ಸಜ್ಜನರು, (ಚಿನ್ನದ ಆಶೆಯಿಂದ ಹೋಗುವವರಲ್ಲ) ಪರಮಾತ್ಮನ ಚಿಂತೆಗಾಗಿ ಅಲ್ಲಿಗೆ ಹೋಗುವರಂತೆ. ನಮ್ಮ ದೇಶದಲ್ಲಿ ಧನಿಕರು ಗುಡಿಯನ್ನು ಕಟ್ಟಿ ದೇವರ ಸ್ಥಾಪನೆ ಮಾಡಿರುತ್ತಾರೆ. ಆ ಪರ್ವತಗಳಲ್ಲೆಲ್ಲ, ಬೆಟ್ಟಗಳಲ್ಲೆಲ್ಲ, ಗುಡ್ಡಗಳಲ್ಲೆಲ್ಲ ಪರಮಾತ್ಮನ ವಿಭೂತಿಯನ್ನು ಕಾಣಬೇಕು. ಇಲ್ಲಿ ಲೋಹ ಸಿಕ್ಕುತ್ತದೆ. ಅಲ್ಲಿ ಮರ ಸಿಕ್ಕುತ್ತದೆ, ಅದೆಲ್ಲವೂ ನಮಗೇ ಬೇಕು - ಎಂಬ ಬುದ್ಧಿಯಿಂದ ನೋಡುವವರಿಗೆ ಬೆಟ್ಟಗಳ ಹೊರಮೈ ಮಾತ್ರ ಕಾಣಿಸುತ್ತಿರುವದು. ಅವುಗಳ ಒಳಗೂ ಪರಮಾತ್ಮನೇ, ಜಗತ್ತೆಲ್ಲವೂ ಮಾಯಾಮಯವಾಗಿ ಕಾಣುತ್ತದೆ; ಅದಕ್ಕೆ ಸಿಕ್ಕಿಕೊಳ್ಳದೆ ಪರಮಾತ್ಮ ಭಾವನೆಯಿಂದ ಮಾಯೆಯನ್ನು ದಾಟಬೇಕು - ಎಂದು ನಾವು ಹೇಳಿದ್ದು ಈ

'ಮಹರ್ಷೀಣಾಂ ಭೃಗುರಹಮ್' ಎಂಬುದು ಇನ್ನೊಂದು ವಿಭೂತಿ. ಭೃಗುಮಹರ್ಷಿಗಳು ಭಗವಂತನ ಮಹಿಮೆಯನ್ನು ಬಲ್ಲವರು. ಅವರು ಜನರಿಗೆಲ್ಲ

ಒಂದಾನೊಂದು ಸಂದರ್ಭದಲ್ಲಿ ಇದನ್ನು ತೋರಿಸಿಕೊಟ್ಟರು. ತ್ರಿಮೂರ್ತಿಗಳಲ್ಲಿ ಯಾರು ದೊಡ್ಡವರು? ಎಂಬ ಪ್ರಶ್ನೆ ಬಂದಾಗ, ಶ್ರೀಮಹಾವಿಷ್ಣುವಿನ ಹೆಚ್ಚುಗಾರಿಕೆಯನ್ನು ಅವರು ಒಂದು ವಿಲಕ್ಷಣರೀತಿಯಿಂದ ಎಲ್ಲರಿಗೂ ಮನಗಾಣಿಸಿಕೊಟ್ಟರು. ಲಕ್ಷ್ಮೀಸಮೇತ ನಾಗಿ ಪವಡಿಸಿದ್ದ ಮಹಾವಿಷ್ಣುವನ್ನು ಅವರು ಕುಪಿತರಾದವರಂತೆ ಎಡಗಾಲಿನಿಂದ ಒದೆದರು. ಕೂಡಲೆ ಪರಮಾತ್ಮನು ತಟ್ಟನೆ ಎದ್ದು "ಮಹಾತ್ಮರೆ, ಕ್ಷಮಿಸಬೇಕು. ನಿಮ್ಮ ಕೋಮಲವಾದ ಈ ಪಾದಗಳಿಗೆ ಈಗ ಎಷ್ಟು ಪೆಟ್ಟಾಯಿತೊ?" ಎಂದು ಅವರ ಕಾಲನ್ನು ಒತ್ತುವದಕ್ಕೆ ಪ್ರಾರಂಭಿಸಿದನು! ಇದು ಭೃಗುವೆಂಬ ಬ್ರಾಹ್ಮಣನ ಹೆಮ್ಮೆ ಎಂದು ಭಾವಿಸುವ ಅವಿವೇಕಿಗಳೂ ಉಂಟು. ಆದರೆ ಅದು ಸರಿಯಲ್ಲ. ವಿಷ್ಣುವಿನ ತಿತಿಕ್ಷೆಯು ಎಲ್ಲಿಯವರೆಗೆ ಇದೆ ಎಂಬುದನ್ನು ಲೋಕಕ್ಕೆ ಪ್ರಖ್ಯಾತಿ ಗೊಳಿಸುವದಕ್ಕಾಗಿ ಭೃಗುಋಷಿಗಳು ಹೀಗೆ ಮಾಡಿರುವರು, ತಮ್ಮ ಹೆಮ್ಮೆಯಿಂದಲ್ಲ. ಅಂತಃಶುದ್ಧಿಯಿಂದಲೂ, ಭಗವಂತನಲ್ಲಿರುವ ನಿರತಿಶಯವಾದ ಭಕ್ತಿಯಿಂದಲೂ ಅವರು ಮಾಡಿದ ಈ ಕೆಲಸವನ್ನು ಭಗವಂತನು ತನ್ನ ಆರಾಧನೆಯೆಂದೇ ಭಾವಿಸಿದನು. ಬಾಹ್ಯಾಡಂಬರಕ್ಕಿಂತ ಹೃದಯದ ಭಾವವೇ ಮೇಲೆಂಬುದನ್ನು ಲೋಕಕ್ಕೆ ತೋರಿಸಿಕೊಟ್ಟನು. ಅಂಥ ಮಹನೀಯರಲ್ಲಿ ಭಗವಂತನ ಸಾನ್ನಿಧ್ಯವು ಬಹಳ ಹೆಚ್ಚಾಗಿರುತ್ತದೆ. ಆದ್ದರಿಂದ ಅವರನ್ನು ಭಗವಂತನ ವಿಭೂತಿಯೆಂದೇ ಭಾವಿಸಿ ಉಪಾಸನೆಮಾಡಬೇಕು.

## ೭೧. ಪರಮಾತ್ಮನ ವಿಭೂತಿಗಳು ೧೦-(೨೬)

(೨೫-೧-೪೮)

ಭಗವಂತನ ವಿಭೂತಿಗಳು ಅಲ್ಲೊಂದು, ಇಲ್ಲೊಂದು; ಅವುಗಳಲ್ಲಿ ಒಂದಕ್ಕಿಂತ ಮತ್ತೊಂದು ಹೆಚ್ಚು, ಇನ್ನೊಂದು ಕಡಿಮೆ - ಎನ್ನುವ ಹಾಗೆ ಕೆಲವರಿಗೆ ತೋರ ಬಹುದು. ಆದರೆ ನಿಜಸ್ಥಿತಿಯು ಹಾಗಿಲ್ಲ. ವಿಭೂತಿ ಎಂದರೆ ಭಗವಂತನ ಮಹಿಮೆಯು ಅಭಿವ್ಯಕ್ತವಾಗುವ ಒಂದು ಕೇಂದ್ರ. ಭಗವಂತನ ವಿಭೂತಿಗಳಲ್ಲಿ ಯಾವದೊಂದನ್ನು ನೋಡಿದರೂ ನಮಗೆ ಮೊದಲು ಆನಂದವಾಗುವದು, ತಾಪವು ಪರಿಹಾರವಾಗುವದು, ಆಮೇಲೆ ಅದರಲ್ಲಿ ಪರಮಾತ್ಮನ ಮಹಿಮೆಯು ಎದ್ದು ಕಾಣುವದು. ದೂರದಲ್ಲಿ ನೋಡುವ ಸಣ್ಣ ನಕ್ಷತ್ರವು ಕೂಡ ಮೊದಲು ಸಣ್ಣಗೆ ಕಾಣುತ್ತಿದ್ದು, ದಿನದಿನವೂ ಲಕ್ಷ್ಯವಿಟ್ಟು ನೋಡುತ್ತಿದ್ದರೆ ದೊಡ್ಡದಾಗಿ ತೋರುತ್ತದೆ.

ಕತ್ತಲಲ್ಲಿ ಕಂಗಾಣದೆ ಇದ್ದವನಿಗೆ ದೂರದ ಮನೆಯೊಳಗೆ ಮಿನುಗುಟ್ಟುತ್ತಿರುವ ದೀಪದ ಒಂದು ಕಿರಣವುಕೂಡ ಬಾಗಿಲ ಸಂದಿಯೊಳಗಿಂದ ತೋರಿಬಂದರೂ ಅವನ ಅಧೈರ್ಯವು ಇಲ್ಲವಾಗುವದು, ಊರು ಸಿಕ್ಕಿತೆಂಬ ಉತ್ಸಾಹವು ಉಕ್ಕುವದು. ಮನೆಯವರಿಗೆ ದೀಪದಿಂದ ಆಗಿರುವ ಧೈರ್ಯವು ಅವನಿಗೆ ದೀಪದ ಕಿರಣದಿಂದಲೇ ಆಗಿಬಿಡುತ್ತದೆ. ಅಲ್ಲವೆ? ಹೀಗೆ ಪರಮಾತ್ಮನ ವಿಭೂತಿಯಿಂದ ಪರಮಾತ್ಮನನ್ನು ಕಂಡ ಪ್ರಯೋಜನವೇ ಭಾವುಕರಿಗೆ ಆಗುತ್ತದೆ.

ಉದಾಹರಣೆಗೆ "ನಕ್ಷತ್ರಗಳಲ್ಲಿ ನಾನು ಚಂದ್ರನು" ಎಂದು ಭಗವಂತನು ಹೇಳಿರುತ್ತಾನಷ್ಟೆ. ಇಲ್ಲಿ ನಕ್ಷತ್ರಗಳು ಸಾಮಾನ್ಯವಾದವುಗಳೆಂದೂ ಚಂದ್ರನು ಅವುಗಳಿಗಿಂತ ದೊಡ್ಡವನೆಂದೂ ಭಾವಿಸಬಾರದು. ಚಂದ್ರನಲ್ಲಿ ತೋರುವಷ್ಟು ಮಟ್ಟಿಗೇ ಭಗವಂತನು ನಕ್ಷತ್ರಗಳಲ್ಲೂ ಇರುತ್ತಾನೆ. ಆದರೆ ಸಾಮಾನ್ಯವಾಗಿ ನಮಗೆ ಚಂದ್ರನಲ್ಲಿ ಕಾಣುವ ವಿಭೂತಿಯು ಹೆಚ್ಚಿನದಾಗಿ ಕಾಣುತ್ತಿರುತ್ತದೆ. ಸರಿಯಾಗಿ ನಿಟ್ಟಿಸಿ ನೋಡುವವರಿಗೆ ಪ್ರತಿಯೊಂದು ನಕ್ಷತ್ರವೂ ಪರಮಾತ್ಮನ ವಿಭೂತಿಯೇ ಆಗಿರುತ್ತದೆ. ಒಂದು ನಕ್ಷತ್ರದ ವಿಷಯದಲ್ಲಿ ನನಗೆ ಆದ ಅನುಭವವನ್ನು ತಮಗೆ ತಿಳಿಸುವೆನು. ನಾನು ಮಲಗುವ ಕೊಠಡಿಯ ಎದುರಿಗೆ ಎಣ್ಣೆಹೊಳೆರಂಗನಬೆಟ್ಟದಮೇಲೆ ಕೆಲವು ದಿವಸಗಳು ಒಂದು ದೀಪವಿರುವಂತೆ ಕಾಣಿಸುತ್ತಿತ್ತು. ಅಲ್ಲಿ ಕಾರ್ತಿಕಮಾಸವಾದ್ದರಿಂದ ಆಕಾಶದೀಪ ವನ್ನಿಡುವ ಏರ್ಪಾಡಾಗಿದೆ - ಎಂದು ಕೆಲವರು ಊಹಿಸಿದರು. ಆದರೆ ಆ ಬೆಳಕು ಇರುವ ಮಟ್ಟವು ಕೆಲವು ದಿವಸಗಳಲ್ಲಿ ಎತ್ತರ ಎತ್ತರವಾಗಿ ಕಾಣಿಸಹತ್ತಿದ್ದರಿಂದ ಅದು ದೀಪವಾಗಿರಲಾರದೆಂಬ ಸಂಶಯವು ನನಗೆ ಬಂತು. ಅದು ನಕ್ಷತ್ರವೆಂಬ ನಿಶ್ಚಯವಾಯಿತು. ಬಳಿಕ ಪ್ರತಿದಿನ ರಾತ್ರೆಯೂ ಅದನ್ನೇ ನಿಟ್ಟಿಸಿ ನೋಡುವದಕ್ಕೆ ಮೊದಲು ಮಾಡಿದೆನು. ಆಮೇಲೆ ನನಗೆ ಅದು ಮೊದಲಿಗಿಂತ ಸ್ವಲ್ಪ ದೊಡ್ಡದಾಗಿರು ವಂತೆ ಕಾಣಿಸಿತು. ಆ ಒಂದೇ ಕಡೆಗೆ ಕಣ್ಣಿಟ್ಟು ನೋಡುತ್ತಾ ನೋಡುತ್ತಾ ನನಗೆ ಅದು ಬಲುದೂರದಲ್ಲಿರುವ ಒಂದು ಚಂದ್ರಮಂಡಲವೆಂಬಂತೆಯೂ ಅದರಿಂದ ಕಿರಣಗಳು ಎಲ್ಲಾ ಕಡೆಗೂ ಹರಡಿರುವಂತೆಯೂ ಭಾಸವಾಗಹತ್ತಿತು. ಆ ನಕ್ಷತ್ರವು ಯಾವಾಗಲೂ ನನ್ನ ಕಡೆಗೇ ತಿರುಗಿಕೊಂಡು ಬೆಳಕು ಬೀರುತ್ತಿರುವದೆಂಬ ಭಾವನೆಯು ಕ್ರಮಕ್ರಮವಾಗಿ ನನ್ನನ್ನು ಹಿಡಿದುಕೊಂಡಿತು. ಇದುವರೆಗೂ ಅದರ ಕಡೆಗೆ ಲಕ್ಷ್ಯವೇ ಇಲ್ಲದಿದ್ದ ನನ್ನ ಮನಸ್ಸಿಗೆ ಅದರ ವಿಷಯಕ್ಕೆ ಈಗ ಏನೋ ಒಂದು ಪೂಜ್ಯಭಾವ ವುಂಟಾಯಿತು. ಈಚೆಗೆ ಅದರ ಕಡೆಗೆ ಒಂದು ಸಲ ತಿರುಗಿನೋಡಿದ ಹೊರತು ಸುಮ್ಮನಿರುವದು ಆಗುವ ಹಾಗೆಯೇ ಇಲ್ಲ. ಅದನ್ನು ನೋಡಿದಾಗಲೆಲ್ಲ ಭಗವಂತನ ಸೃಷ್ಟಿಯ ವೈಚಿತ್ರ್ಯವು ನನ್ನ ಮನಸ್ಸಿನ ವಿಚಾರಸರಣಿಯಲ್ಲಿ ಬಂದು ಸೇರಿಕೊಳ್ಳುತ್ತಿದೆ!

ಮಹಾತ್ಮರು, ಪುಣ್ಯಶಾಲಿಗಳಾದವರು, ನಕ್ಷತ್ರಸ್ಥಾನವನ್ನು ಪಡೆಯುತ್ತಾರೆಂದೂ ಅವರು ತಮ್ಮ ತಪಃಪ್ರಭಾವದಿಂದ ಜ್ಯೋತೀರೂಪದಿಂದ ಬೆಳಗುತ್ತಿರುವರೆಂದೂ ಆಪಸ್ತಂಬರ ಧರ್ಮಸೂತ್ರದಲ್ಲಿದೆ. ಬೈಬಲಿನಲ್ಲಿ ಒಂದಾನೊಂದು ನಕ್ಷತ್ರವು ಕ್ರೈಸ್ತನ ಜನ್ಮವನ್ನು ಪೂರ್ವದೇಶದ ಋಷಿಗಳಿಗೆ ಸೂಚಿಸಿಕೊಟ್ಟಿತು ಎಂಬ ಕಥೆಯನ್ನು ನಿಮ್ಮಲ್ಲಿ ಕೆಲವರಾದರೂ ಓದಿರಬಹುದು. ಹೀಗೆ ಪುರಾಣಪ್ರಸಿದ್ಧವಾಗಿರುವ ಭಾವನೆಯಿಂದ ನಕ್ಷತ್ರಗಳನ್ನು ನೋಡಿದವರಿಗೆಲ್ಲ ಪರಮಾತ್ಮನ ಭಾವನೆಯು ಬರುವದು. ನಕ್ಷತ್ರಗಳು ಒಂದೊಂದೂ ಸೂರ್ಯನು ಇದ್ದಂತೆ. ಅವು ಸೂರ್ಯನಿಗಿಂತ ಸಾವಿರಾರು ಯೋಜನಗಳ ದೂರದಲ್ಲಿರುವವೆಂದೂ ನಿಜವಾಗಿ ಅವು ಸೂರ್ಯನಿಗಿಂತ ದೊಡ್ಡವಾಗಿರುವವೆಂದೂ ಆಧುನಿಕಜ್ಯೋತಿಃಶಾಸ್ತ್ರಜ್ಞರು ಹೇಳುತ್ತಾರೆ. ಒಂದು ನಕ್ಷತ್ರದ ವಿಷಯವನ್ನು ಹೀಗೆ ಸ್ವಲ್ಪ ಬಿಡಿಸಿ ನೋಡಲು ಇಷ್ಟು ವಿಚಾರಗಳು ಮನಸ್ಸಿನಲ್ಲಿ ಹೊಳೆಯುವವು! ಇಂಥ ಪರಮಾತ್ಮನ ವಿಭೂತಿಗಳು ಅನಂತವಾಗಿರುವವು. ನಕ್ಷೆಯ ಮೇಲೆ ನಗರಗಳನ್ನು ಗುರುತಿಸಿದಂತೆ ಭಗವಂತನು ಅಲ್ಲೊಂದು ಇಲ್ಲೊಂದು ವಿಭೂತಿಯನ್ನು ಹೇಳಿದಾನೆಂದು ತೋರುವಾಗಲೂ ನೋಡುವವರ ದೃಷ್ಟಿಯಿಂದ, ಪ್ರಾಧಾನ್ಯತೆಯಿಂದ ಹಾಗೆ ಹೇಳಿರುತ್ತಾನೆ. ಯಾವದೊಂದು ವಿಭೂತಿಯೂ ಪರಮಾತ್ಮನ ಅಂಶವಲ್ಲ; ಪರಮಾತ್ಮನ ಪೂರ್ಣರೂಪವೇ ಅದರಲ್ಲಿದೆ, ಅಥವಾ ಅದೇ ಪರಮಾತ್ಮನಾಗಿರುತ್ತದೆ. ಗಣಪತಿಯ ವಿಗ್ರಹವು ನೋಡುವದಕ್ಕೆ ಸಣ್ಣದಾಗಿದ್ದರೂ ದೊಡ್ಡದಾಗಿದ್ದರೂ ಅದು ಗಣಪತಿಯೇ, ಪೂರ್ಣವಾಗಿ ಗಣಪತಿಯೇ ಆಗಿರುತ್ತದೆ; ಗಣಪತಿಗಳು ಅನೇಕವೆಂದಾಗಲಿ, ಅವುಗಳಲ್ಲಿ ತಾರತಮ್ಯವುಂಟೆಂದಾಗಲಿ ಭಾವಿಸು ವದಕ್ಕೆ ಬರುವದಿಲ್ಲ. ಪರಮಾತ್ಮನು ತನ್ನ ಅನುಗ್ರಹವನ್ನು ಎಲ್ಲಾ ಕಡೆಗೂ ಹರಡಿರು ತ್ತಾನೆ; ಎಲ್ಲವನ್ನೂ ಎಲ್ಲರೂ ಏಕಕಾಲದಲ್ಲಿ ಅನುಭವಹಿಸಬಹುದು. ಈ ವಿಭೂತಿಗಳನ್ನು ಯಾರೊಬ್ಬರೂ ತನ್ನವೆಂದು ಮತ್ತೊಬ್ಬರಿಗೆ ಸಿಕ್ಕದಂತೆ ಇಟ್ಟುಕೊಳ್ಳುವದಕ್ಕೆ ಬರುವದಿಲ್ಲ. ಇವು ಯಾವದೊಂದು ಕಾಲಕ್ಕೂ ಕಟ್ಟುಬಿದ್ದಿರುವದಿಲ್ಲ. ಶ್ರೀರಾಮನೂ ಶ್ರೀಕೃಷ್ಣನೂ ಮಗುವಾಗಿದ್ದಾಗ ನೋಡಿ ಆನಂದಿಸಿದ ಚಂದ್ರನೇ ಈಗಲೂ ಬಡವರ ಮಗುವಿಗೂ ಆನಂದವನ್ನು ಕೊಡುತ್ತಿದ್ದಾನೆ. ವಿಭೂತಿಗಳು ಎಲ್ಲರಿಗೂ ಸಮಾನವಾಗಿ ಆನಂದದಾಯಕ ವಾಗಿರುತ್ತವೆ. ಅರ್ಜುನನನ್ನು ನಿಮಿತ್ತವಾಗಿಟ್ಟುಕೊಂಡು ಭಗವಂತನು ಎಲ್ಲರೂ ಉದ್ಧಾರವಾಗಲಿ ಎಂದೇ ವಿಭೂತಿಗಳನ್ನು ಉಪದೇಶಿಸಿರುತ್ತಾನೆ. ನಾವು ಈ ವಿಭೂತಿಗಳನ್ನು ಇಂಥಿಂಥವೆಂಬ ಪಟ್ಟಿಯನ್ನು ಗಟ್ಟಿಮಾಡಿದರೆ ಸಾಲದು. ಇವುಗಳಲ್ಲಿರುವ ವಿಭೂತಿತ್ವವನ್ನು ಮನದಂದುಕೊಂಡು ಆನಂದಿಸುವ ಅಭ್ಯಾಸವನ್ನು ಮಾಡಬೇಕು.

ಈ ದಿನ "ಯಜ್ಞಾನಾಂ ಜಪಯಜ್ಞೋಽಸ್ಮಿ" ಎಂಬ ವಿಭೂತಿಯ ವಿಚಾರವನ್ನು ಮಾಡಬೇಕಾಗಿದೆ. ಯಜ್ಞ ಶಬ್ದವು ಯಜ್ ಧಾತುವಿನಿಂದ ಬಂದಿರುತ್ತದೆ; ದೇವತೆಗಳಿಗೆ ಪೂಜೆಮಾಡುವದು, ದೇವತೆಗಳನ್ನು ಉದ್ದೇಶಮಾಡಿ ವಸ್ತುವಿನಲ್ಲಿ ನನ್ನದೆಂಬ ಅಭಿಮಾನವನ್ನು ಬಿಡುವದೇ ಯಜ್ಞವು. ನಿಜವಾಗಿ ನೋಡಿದರೆ ಜಗತ್ತೆಲ್ಲವೂ ದೇವತೆಗಳದೇ. ನಾವು 'ಅದು ನನ್ನದು' ಎಂಬ ಅಭಿಮಾನವನ್ನು ಬಿಟ್ಟರೆ ಯಜ್ಞವಾಗುತ್ತದೆ. ಇನ್ನು ದೇವದೇವನಾದ ಪರಮಾತ್ಮನದೇ ಎಲ್ಲವೂ ಎಂದು ತಿಳಿದುಬಿಟ್ಟರೆ ಎಂಥ ಯಜ್ಞವಾದೀತು! ಇದನ್ನೂ ಗೀತೆಯಲ್ಲಿ ಹೇಳಿರುತ್ತದೆ. ಪರಮಾತ್ಮನೇ ಯಜ್ಞ ಶಬ್ದವಾಚ್ಯನು. ಯಜ್ಞವಾಗುವ ಸ್ಥಳವು ಪರಮಾತ್ಮನು ತಾಂಡವವಾಡುತ್ತಿರುವ ಸ್ಥಳವು. ಯಜಮಾನನು ಯಜ್ಞಕ್ಕಾಗಿ ದೀಕ್ಷೆವಹಿಸುತ್ತಾನೆ, ಪರಮಾತ್ಮನ ಸೇವೆ ಯೊಂದಲ್ಲದೆ ಮತ್ತೇನನ್ನೂ ನಾನು ಮಾಡುವದಿಲ್ಲ ಎಂಬ ಸಂಕಲ್ಪವನ್ನು ಮಾಡುತ್ತಾನೆ. ಯಜ್ಞಕ್ಕೆ ಬರಬೇಕೆಂದು ಕರೆಯದಿದ್ದರೂ ಎಲ್ಲರೂ ಹೋಗಿ ಯಜ್ಞೇಶ್ವರನನ್ನು ದರ್ಶನ ಮಾಡಿಕೊಂಡು ಕೃತಕೃತ್ಯರಾಗಬೇಕೆಂದು ಸ್ಮೃತಿ ಯಿದೆ. ಆ ಸ್ಥಲವೇ ಪವಿತ್ರವಾದದ್ದು, ಅಲ್ಲಿಯ ಜನರ ದರ್ಶನವೇ ಪಾಪಹರವಾದದ್ದು. ಅಂಥ ಶ್ರೇಷ್ಠವಾದದ್ದು ಯಜ್ಞ!

ಆದರೆ ಯಜ್ಞವನ್ನು ಸಾಂಗವಾಗಿ ನೆರವೇರಿಸುವದು ಬಲುಕಷ್ಟ. ಯಜ್ಞವು ವಿತ್ತಸಾಧ್ಯವಾದದ್ದು. ವಿತ್ತವನ್ನು ಕೂಡಿಸುವದು ಯಾವಾಗಲೂ ಸುಲಭಸಾಧ್ಯವಲ್ಲ. ಈಗಿನ ಕಾಲದಲ್ಲಂತೂ ಅದು ಅಸಾಧ್ಯವಾಗಿಬಿಟ್ಟಿರುತ್ತದೆ. ಯೋಗ್ಯರ ಹಣವನ್ನು ಯಾಚಿಸಿ ತಂದು ಯಜ್ಞವನ್ನು ಮಾಡುವದು ಯಜ್ಞವು ವೀರ್ಯವತ್ತರವಾಗುವದಕ್ಕೆ ಅತ್ಯವಶ್ಯ. ಆದರೆ ಈಗ ಹಣವು ಹಿಂಸೆಯಿಲ್ಲದೆ ಸಿಕ್ಕುವಂತೆಯೇ ಇಲ್ಲ. ಯಜ್ಞಗಳು ಎಷ್ಟೇ ಶುದ್ಧವಾದ ಪ್ರಕಾರಗಳಿಂದ ಆಗಲಿ, ಪಶುಹಿಂಸೆಯೇ ಮುಂತಾದವುಗಳಂತೂ ಅನಿವಾರ್ಯವಾಗಿರುತ್ತವೆ. ಆದರೆ ಜಪಯಜ್ಞದಲ್ಲಿ ಯಾವ ಹಿಂಸಾದಿದೋಷಗಳೂ ಇರುವದಿಲ್ಲ. ವಿಧಿಯಜ್ಞಕ್ಕಿಂತಲೂ ಜಪಯಜ್ಞವು ಹತ್ತರಷ್ಟು ಶ್ರೇಷ್ಠವು ಎಂದು ಸ್ಮೃತಿವಾಕ್ಯವಿದೆ. ಈ ಎಲ್ಲಾ ಕಾರಣಗಳಿಂದ ಭಗವಂತನು "ಯಜ್ಞಗಳಲ್ಲಿ ಜಪಯಜ್ಞವು ನಾನು" ಎಂದು ಒತ್ತಿ ಹೇಳಿರುತ್ತಾನೆ.

ಜಪವೆಂದರೇನು? 'ತಜ್ಜಪಸ್ತದರ್ಥಭಾವನಮ್' ಮಂತ್ರವನ್ನು ಜಪಿಸುವದು ಎಂದರೆ ಮಂತ್ರದ ಅರ್ಥವನ್ನು ಭಾವಿಸುತ್ತಿರುವದು. ಪರಮಾತ್ಮನನ್ನು ವೇದದ ಮಂತ್ರದಿಂದ ಭಾವನೆಮಾಡುತ್ತಿರುವದೂ, ಆತನ ನಾಮಸ್ಮರಣೆಯನ್ನು ಮಾಡುತ್ತಿರು ವದೂ ಜಪವು. ಇದೊಂದು ಬಗೆಯ ಯಜ್ಞವೆಂದು ಇಲ್ಲಿ ಹೇಳಿದೆ: ನಮ್ಮಗಳಿಗೆ ಸಾಮಾನ್ಯವಾಗಿ ಮಕ್ಕಳು, ಧನ, ಅಧಿಕಾರ, ನಮ್ಮ ಜನ - ಇವೇ ಅವಲಂಬನೆ

ಯಾಗಿರುತ್ತವೆ. ಆದ್ದರಿಂದಲೇ ನಮಗೆ ಕಷ್ಟವು ಬಂದಾಗ ಅವರ ನೆನಪು ನಮಗೆ ಬರುತ್ತದೆ. ಆದರೆ ಇವೆಲ್ಲ ಸಮಯದಲ್ಲಿ ಕೈಕೊಡುವಂಥವು. ಇವುಗಳನ್ನು ಊರುಗೋಲು ಮಾಡಿಕೊಂಡು ನಡೆಯುವದರಿಂದ ಪ್ರಯೋಜನವಿಲ್ಲ; ಇವುಗಳ ಭಾವನೆಯು ನಮ್ಮನ್ನು ಮಟ್ಟುಮಾಡುತ್ತಿರುವದು. ಇವುಗಳು ನಮ್ಮನ್ನು ಕಾಯುವದಿಲ್ಲ; ನಮ್ಮನ್ನೇ ಕಾಯಿಸುತ್ತವೆ, ತಾಪತ್ರಯವನ್ನು ಕೊಟ್ಟು ಬೇಯಿಸುತ್ತವೆ. ಆದರೆ ಪರಮಾತ್ಮನ ನಾಮಜಪವು ಇಂಥದ್ದಲ್ಲ. ಮಹರ್ಷಿಗಳು ಈ ತತ್ತ್ವವನ್ನು ಬಲ್ಲರು. ಆದ್ದರಿಂದಲೇ ಅವರು "ಒಂದು ಮುಹೂರ್ತವಾಗಲಿ ಒಂದು ಕ್ಷಣವಾಗಲಿ ವಾಸುದೇವನನ್ನು ಚಿಂತಿಸದಿದ್ದರೆ ಅದೇ ನಮ್ಮಲ್ಲಿ ಉಂಟಾದ ಛಿದ್ರವೆಂದು ತಿಳಿಯಬೇಕು, ಅದೇ ಮಹಾಹಾನಿಯು" ಎನ್ನುವರು. "ಭಗವಂತ, ನಿನ್ನ ಒಲವೇ ನನಗೆ ಬಲವು; ನೀನೇ ನನ್ನನ್ನು ಕಾಯುವವನು" ಎಂದು ಭಾವನೆಮಾಡಿಕೊಂಡು ಆತನ ನಾಮವನ್ನು ಸದಾ ಸ್ಮರಣೆಮಾಡುತ್ತಿರುವವನಿಗೆ ಯಾವಾಗಲೂ ಪರಮಾತ್ಮನು ರಕ್ಷಣೆಗೆ ಸಿದ್ಧನಾಗಿರುತ್ತಾನೆ. ಅವನು ಎಂದಿಗೂ ಕೈಬಿಡುವದಿಲ್ಲ.

ಜಪದಿಂದ ಭಗವಂತನ ಪ್ರಾಪ್ತಿಯಾಗುವದೆಂದೂ ಆಮೇಲೆ ಭಗವಂತನು ನಮ್ಮನ್ನು ಕಾಪಾಡುವನೆಂದೂ ಭಾವಿಸಿದರೆ ಸಾಲದು. ಭಗವಂತನು "ನಾನೇ ಜಪಯಜ್ಞವು" ಎಂದಿರುತ್ತಾನೆ. ಜಪವೇ ಪರಮಾತ್ಮನ ಸ್ವರೂಪವೆಂದು ಭಾವಿಸಬೇಕು. ಬಲ್ಲವರು ವೇದವನ್ನು "ಭಗವಾನ್ ಆಮ್ನಾಯಃ" (ವೇದಭಗವಂತನು) ಎಂದು ಕರೆಯುತ್ತಾರೆ. ಪರಮಾತ್ಮನು ವೇದವೇದ್ಯನೆಂದಲ್ಲ, ವೇದವೇ ಭಗವಂತನು; ಆ ಭಗವಂತನನ್ನೇ ಹೇಗೆ ಕಾಣಬೇಕಾಯಿತು! ನಮ್ಮ ಅಂಗಡಿಗೆ ಮೂಲವಾಗಿರುವ ಬಂಡವಾಳವನ್ನೇ ಒದಗಿಸಿಕೊಟ್ಟಿರುವ ಧಣಿಯನ್ನು ನಾವು ಹೇಗೆ ಕಾಣಬೇಕೋ ಹಾಗೆ ಕಾಣಬೇಕು. ಇದರಿಂದ ಮಂತ್ರ, ಪರಮಾತ್ಮನ ನಾಮ - ಎಲ್ಲವೂ ಪರಮಾತ್ಮನೇ ಎಂದು ನಾವು ಬಗೆಯಬೇಕು. ರಾಮ ಎಂಬುದು ಬರಿಯ ಶಬ್ದವಲ್ಲ, ಬಾಯಲ್ಲಿ ಹುಟ್ಟಿದ ಬರಿಯ ಧ್ವನಿಯಲ್ಲ; ಅವ್ಯಕ್ತನಾದ ರಾಮನೇ ಈ ನಾಮದ ಸ್ವರೂಪದಿಂದ ಪ್ರಕಟವಾಗುತ್ತಾನೆ. ಧ್ರುವ, ಪ್ರಹ್ಲಾದ - ಮುಂತಾದವರಿಗೆ ಭಗವಂತನು ಪ್ರಕಟವಾದನಲ್ಲವೆ? ಹಾಗೆಯೇ ಭಗವಂತನು ನಾಮಜಪವನ್ನು ಭಕ್ತಿಯಿಂದ ಮಾಡುವವರಿಗೆ ನಾಮದ ರೂಪದಿಂದ ಪ್ರಕಟವಾಗುತ್ತಾನೆ. ನಮ್ಮ ನಾಲಗೆಯು ಪರಮಾತ್ಮನು ಅಭಿವ್ಯಕ್ತನಾಗುವ ಸ್ಥಲ. ಅದು ಕಶ್ಮಲವಾಗಿರಬಾರದು. ಅಲ್ಲಿ ಕೆಟ್ಟಮಾತುಗಳು ಕಾಣಿಸಿಕೊಳ್ಳಬಾರದು, ಸ್ತ್ರೀ ಧನ ನಾಸ್ತಿಕರ ವಿಚಾರದ ನುಡಿಗಳು ಅಲ್ಲಿ ತೋರಿಕೊಳ್ಳಬಾರದು. ಇಂಥ ಭಾವನೆಯಿರಬೇಕು, ನಾಮಭಗವಂತನಲ್ಲಿ! ಜಪದಲ್ಲಿ ಮಂತ್ರದ ಲೆಕ್ಕವು ಮುಖ್ಯವಲ್ಲ; ಭಗವಂತನೇ ನಮ್ಮಲ್ಲಿ ಮನೆಮಾಡಿಕೊಂಡು

ನೆಲಸಿರುತ್ತಾನೆ, ಆತನೇ ನಾಮದ ಸ್ವರೂಪದಿಂದ ನನ್ನ ನಾಲಗೆಯ ಮೇಲೆ ನಲಿದಾಡುತ್ತಿರುತ್ತಾನೆ - ಎಂಬ ಭಾವನೆಯಿರುವದೇ ಮುಖ್ಯ. ನಾಮಸ್ಮರಣೆಯು ಕಾಶಿಯಲ್ಲಿರುವ ಮಗನನ್ನು ಸ್ಮರಿಸಿಕೊಂಡಂತೆ ಪರೋಕ್ಷವಲ್ಲ, ಇಲ್ಲಿರುವ ಮಗನ ಮುಖವನ್ನೇ ನೋಡಿನೋಡಿ ನಲಿಯುವಂತೆ ನಾಮವೇ ಭಗವಂತನು ಎಂಬ ಭಾವನೆಯಿಂದ ನಲಿಯುವದೇ ಯಜ್ಞವು, ಅದೇ ಭಗವಂತನ ಪೂಜೆಯು. ಈ ಯಜ್ಞವು ಸರ್ವಯಜ್ಞಗಳಲ್ಲಿಯೂ ಶ್ರೇಷ್ಠವೆನಿಸಿರುತ್ತದೆ; ಏಕೆಂದರೆ ಇದರಲ್ಲಿ ಸಂಪೂರ್ಣವಾಗಿ ಅಹಂಮಮತ್ವಗಳು ಬಿಟ್ಟುಹೋಗಿರುತ್ತವೆ. ಭಗವಂತನ ಸ್ವರೂಪಚಿಂತನೆಯೇ ನಿತ್ಯವಾಗಿರುತ್ತದೆ.

ಇನ್ನು **"ಸ್ಥಾವರಾಣಾಂ ಹಿಮಾಲಯಃ"** ಎಂಬ ಶ್ಲೋಕಪಾದವನ್ನು ಲಕ್ಷಿಸೋಣ. ಹಿಮಾಲಯಪರ್ವತದ ಬಾಹ್ಯರೂಪವನ್ನು ಮನದಂದರೂ ನಮ್ಮ ಮನಸ್ಸು ಉಬ್ಬುತ್ತದೆ. ಭರತಖಂಡವನ್ನು ಕಾದುಕೊಂಡಿರುವ ಉತ್ತರದಿಕ್ಕಿನ ಅಡ್ಡಗೋಡೆ ಅದು! ಆದರೆ ನಮ್ಮ ಭಾವನೆಯಲ್ಲಿ ಹಿಮಾಲಯವೆಂದರೆ ಒಬ್ಬ ದೇವತಾತ್ಮನು. ಕಾಳಿದಾಸನು ತನ್ನ ಸುಪ್ರಸಿದ್ಧವಾದ ಕುಮಾರಸಂಭವಕಾವ್ಯದಲ್ಲಿ ಹೇಳಿರುವದನ್ನು ನಿಮ್ಮಲ್ಲಿ ಕೆಲವರು ಕೇಳಿರಬಹುದು. "ಅಸ್ತ್ಯುತ್ತರಸ್ಯಾಂ ದಿಶಿ ದೇವತಾತ್ಮಾ ಹಿಮಾಲಯೋ ನಾಮ ನಗಾಧಿರಾಜಃ। ಪೂರ್ವಾಪರೌ ವಾರಿನಿಧೀ ವಗಾಹ್ಯ ಸ್ಥಿತಃ ಪೃಥಿವ್ಯಾ ಇವ ಮಾನದಣ್ಡಃ॥" 'ಉತ್ತರದಿಕ್ಕಿನಲ್ಲಿ ಹಿಮಾಲಯವೆಂಬ ದೇವತಾತ್ಮನಾದ ಪರ್ವತ ರಾಜನಿರುವನು. ಆತನು ಪೂರ್ವಪಶ್ಚಿಮಸಮುದ್ರಗಳನ್ನು ಎರಡು ಕಡೆಯಲ್ಲಿಯೂ ಹೊಕ್ಕು ಪೃಥ್ವಿಯನ್ನು ಅಳೆಯುವ ಕೋಲಿನಂತೆ ಕಾಣಿಸುತ್ತಿರುವನು' ಎಂದು ಆ ಮಹಾಕವಿಯು ವರ್ಣಿಸಿರುತ್ತಾನೆ. ಪೂರ್ವದಲ್ಲಿ ಭೂದೇವಿಯು ಗೋರೂಪಧರಳಾಗಿ ಸಂಚರಿಸುತ್ತಿದ್ದಳಂತೆ; ಆಗ ಎಲ್ಲರೂ ತಮತಮಗೆ ಬೇಕಾದ ಕರುವನ್ನು ಮಾಡಿಕೊಂಡು ತಮಗೆ ಬೇಕಾದ ವಸ್ತುಗಳನ್ನು ಹಾಲುಕರೆಯುವಂತೆ ಕರೆದುಕೊಂಡರಂತೆ. ಆ ಸಮಯದಲ್ಲಿ ಪರ್ವತಗಳು ತಮ್ಮ ಕಡೆಯವನಾಗಿ ಹಾಲುಕರೆಯುವದಕ್ಕೆ ದಕ್ಷನಾಗಿರುವ ಮೇರುಪರ್ವತನನ್ನು ಗೊತ್ತುಮಾಡಿಕೊಂಡವು. ಹಿಮಾಲಯಪರ್ವತರಾಜನನ್ನು ಕರುವಾಗಿ ಮಾಡಿಕೊಂಡವು. ಆಗ್ಗೆ ಅವು ಪ್ರಕಾಶಮಾನವಾದ ರತ್ನಗಳನ್ನೂ ಮಹೌಷಧಿಗಳನ್ನೂ ಕರೆದುಕೊಂಡವು - ಎಂದು ಕಾಳಿದಾಸನ ವರ್ಣನೆ. ಹಸುವು ತನ್ನ ಕರುವಿಗೆ ಸಾರವತ್ತಾದ ಹಾಲನ್ನು ಸೊರು ಇಳಿಸುತ್ತದೆ. ಅಲ್ಲವೆ? ಇದರಂತೆ ಭೂದೇವಿಯು ತನ್ನ ಕರುವಾದ ಹಿಮಾಲಯನಿಗೆ ಸಾರವತ್ತಾದ ರತ್ನಗಳನ್ನೂ ಉತ್ತಮವಾದ ಗಿಡಮೂಲಿಕೆಗಳನ್ನೂ ಕೊಟ್ಟಿರುತ್ತಾಳೆಂಬ ಅಭಿಪ್ರಾಯವು ಇದರಲ್ಲಿ ಅಡಗಿರುತ್ತದೆ. ಭೂಗರ್ಭಶಾಸ್ತ್ರಜ್ಞರೂ ಆಯುರ್ವೇದಶಾಸ್ತ್ರಜ್ಞರೂ ಹುಡುಕಿದರೆ

ಎಂಥೆಂಥ ಅನರ್ಘ್ಯವಾದ ಅದುರುಗಳೂ ಔಷಧಿಗಳ ಮೂಲಿಕೆಗಳೂ ಆ ಪರ್ವತದಲ್ಲಿ ಈಗಲೂ ಸಿಕ್ಕಬಹುದೋ ಅವನ್ನು ನಮ್ಮಂಥ ಪ್ರಾಕೃತರು ಊಹಿಸಿ ತಿಳಿಯುವದೂ ಕಷ್ಟ. ಅದಂತಿರಲಿ. ಆದರೆ ಹಿಮಾಲಯಪರ್ವತದಲ್ಲಿರುವ ಭಗವಂತನ ವಿಭೂತಿಯು ಎಂಥದ್ದು ಎಂಬುದು ಇಲ್ಲಿ ಪ್ರಕೃತವಾಗಿರುತ್ತದೆ. ಅಲ್ಲಿ ಎಂಥೆಂಥ ಸಿದ್ಧಪುರುಷರು ಈಗಲೂ ತಪಸ್ಸುಮಾಡಿಕೊಂಡಿರುವರೋ ಭಗವಂತನು ಅಲ್ಲಿ ಆಧ್ಯಾತ್ಮಸಾಧನವನ್ನು ಮಾಡುವ ಮಹನೀಯರಿಗೆ ಯಾವಯಾವ ಸಿದ್ಧಿಗಳನ್ನು ಅನುಗ್ರಹಿಸಬಲ್ಲನೋ ಅದನ್ನು ವಿರಕ್ತರಾದ ಭಗವದ್ಭಕ್ತರು ಮಾತ್ರ ಬಲ್ಲರು. ಒಂದು ಸಲ ಶ್ರೀ ಶೃಂಗೇರಿಜಗದ್ಗುರುಗಳಾಗಿದ್ದ ಶ್ರೀಸಚ್ಚಿದಾನಂದಶಿವಾಭಿನವನೃಸಿಂಹಭಾರತೀಸ್ವಾಮಿ ಗಳವರು ಶಿವಮೊಗ್ಗೆಯಲ್ಲಿ ಉಪನ್ಯಾಸಮಾಡಿದರು. ಆಗ ಅವರು ಹೀಗೆಂದು ಅಪ್ಪಣೆಕೊಡಿಸಿದ್ದರು: "ಕಾಡಿನಲ್ಲಿ ಗಿಡಮರಗಳನ್ನು ಎಣಿಸಿ ಗೊತ್ತುಮಾಡುವ ಪ್ರಯತ್ನವನ್ನು, ಅದರಲ್ಲಿ ಅರ್ಧಪ್ರಯತ್ನವನ್ನಾದರೂ, ಮಾಡಿದರೆ ಹಿಮಾಲಯದಲ್ಲಿ ಒಬ್ಬ ಸಾಧು ಸಿಕ್ಕಲಾರನೆ?" ಹಿಮಾಲಯದಲ್ಲಿ ಇಂಥ ಸಾಧುಗಳಾದ ಮಹನೀಯರು ಹೇರಳವಾಗಿ ಇರುವರೆಂದು ಸ್ವಾಮಿಗಳ ಅಭಿಪ್ರಾಯವಿತ್ತೆಂದು ಇದರಿಂದ ಸ್ಪಷ್ಟವಾಗು ತ್ತದೆ. ಈ ಕಡೆಗೆ ನಾವು ಲಕ್ಷ್ಯವನ್ನು ಕೊಡಬೇಕು. ಹಿಂದಕ್ಕೆ ಪಾಂಡವರು ಕೌರವರ ಕಪಟದ್ಯೂತದಿಂದ ರಾಜ್ಯವನ್ನು ಸೋತು ಅರಣ್ಯವಾಸಕ್ಕೆ ತೆರಳಿದರಷ್ಟೆ. ಆಗ ದ್ರೌಪದಿಯು ಧರ್ಮರಾಯನನ್ನು ಕುರಿತು "ರಾಜನೆ, ನಿನ್ನಷ್ಟು ಧರ್ಮವನ್ನು ಶ್ರದ್ಧೆಯಿಂದ ಮಾಡಿದವರು ಯಾರೂ ಕಾಣಿಸುವದಿಲ್ಲ; ಆದರೂ ಇಂಥ ನಿನಗೂ ವನವಾಸವಾಯಿತಲ್ಲ! ಇದರ ರಹಸ್ಯವೇನು?" ಎಂದು ಒಮ್ಮೆ ಪ್ರಶ್ನೆಮಾಡಿದಳಂತೆ. ಆಗ ಧರ್ಮರಾಯನು "ಪ್ರಿಯೆ, ನಾನೇನೂ ಧರ್ಮವಾಣಿಜ್ಯವನ್ನು ಮಾಡಿದವನಲ್ಲ; ಇಂತಿಷ್ಟು ಧರ್ಮಕ್ಕೆ ಇಂತಿಷ್ಟು ಸುಖವು ಬೇಕೆಂದೇನೂ ನಾನು ಧರ್ಮವನ್ನು ಎಸಗಿದವನಲ್ಲ, ಇದೊ, ಎದುರಿಗೆ ಕಾಣುತ್ತಿರುವ ಹಿಮಾಲಯವನ್ನು ನೋಡು! ಅದನ್ನು ನೋಡುವವರಿಗೆಲ್ಲ - ಬಲ್ಲಿದರಂತೆ ಬಡವರಿಗೆ ಕೂಡ ಹೇಗೆ ಒಂದೇ ಸಮವಾದ ಆನಂದವನ್ನು ಕೊಡುತ್ತಿದೆ! ಅದಕ್ಕೇನಾದರೂ ಈ ಔದಾರ್ಯಕ್ಕಾಗಿ ಪ್ರತ್ಯುಪಕಾರವು ಬೇಕಾಗಿರುವದೆ? ಇಲ್ಲ, ನಾನೂ ಹಾಗೆಯೇ ಧರ್ಮವನ್ನು ಧರ್ಮಕ್ಕಾಗಿ ಮಾಡುತ್ತಿರುವೆನು" ಎಂದನಂತೆ! ಧರ್ಮರಾಯನು ದ್ರೌಪದಿಗೆ ತೋರಿಸಿದ ಆ ಹಿಮಾಲಯವೇ ಇಂದೂ ಅನೇಕ ತಪೋಧನರಿಗೆ ಆನಂದವನ್ನುಂಟು ಮಾಡುತ್ತಲಿದೆ. ಇಂದಿಗೂ ಅದರ ಅನರ್ಘ್ಯವಾದ ಗುಣಗಳು ಜನರ ಕಣ್ಮನಗಳನ್ನು ಸೆಳೆಯುತ್ತಿವೆ! ಅದು ಒಂದು ಭಗವಂತನ ಮಹಾವಿಭೂತಿ ಎಂಬುದನ್ನು ಮನವರಿಕೆ ಮಾಡಿಕೊಳ್ಳುವ ಮನಸ್ಸು ಮಾತ್ರ ನಮಗೆ ಬೇಕು. ಅಷ್ಟೆ!

ಪರಮಾತ್ಮನ ವಿಭೂತಿಗಳ ಭಾವನೆಯಿಂದ ಪರಮಾತ್ಮನ ಜ್ಞಾನವೇ ಉಂಟಾಗುತ್ತದೆ. ಆ ವಿಜ್ಞಾನಕ್ಕೆ ಅನೇಕ ಮೆಟ್ಟಿಲುಗಳಿವೆ. "ಅರ್ಜುನನೆ, ಯೋಗದಿಂದ ನನ್ನನ್ನು ಹೇಗೆ ಅರಿತುಕೊಳ್ಳಬಹುದೋ ಅದನ್ನು ಹೇಳುವೆನು, ಕೇಳು" ಎಂದು ಏಳನೆಯ ಅಧ್ಯಾಯದ ಉಪಕ್ರಮದಲ್ಲಿ ಪ್ರತಿಜ್ಞೆ ಮಾಡಲಾಗಿತ್ತು. ಎಂಟನೆಯ ಅಧ್ಯಾಯದಲ್ಲಿ ಭಗವಂತನ ಉಪಾಸನೆಯ ಪ್ರಕಾರಗಳನ್ನೂ ಅವುಗಳಿಂದ ಆಗುವ ಕಾಲಾಂತರದ ಮುಕ್ತಿಯನ್ನೂ ತಿಳಿಸಿದ್ದಾಯಿತು. ಒಂಭತ್ತನೆಯ ಅಧ್ಯಾಯದಲ್ಲಿ ಪರಮಾತ್ಮನ ಜ್ಞಾನದ ವರ್ಣನೆಯನ್ನು ಮಾಡಲಾಯಿತು. ಎಲ್ಲೆಲ್ಲಿ ನೋಡಿದರೂ ಪರಮಾತ್ಮನೇ ಎಂಬುದನ್ನು ಆ ಅಧ್ಯಾಯದಲ್ಲಿ ಸಾರಿ ಡಂಗುರಹೊಡೆಯಲಾಗಿದೆ. ಈ ಪತ್ತನೆಯ ಅಧ್ಯಾಯದಲ್ಲಿ ಭಗವಂತನ ವಿಭೂತಿಗಳನ್ನು ವರ್ಣಿಸಿ, ಆತನು ಹರಡಿರುವ ಪ್ರೇಮಜಾಲವನ್ನು ವಿವರಿಸಿರುತ್ತದೆ. ಈ ಜಾಲದಲ್ಲಿ ಸಿಕ್ಕಿಕೊಂಡು ಆನಂದಿಸುವ ಪರಿಯನ್ನು ನಾವು ಕಲಿತುಕೊಳ್ಳಬೇಕು. ಕಣ್ಣುಬಿಟ್ಟು ನೋಡಿದರೆ ಭಗವಂತನ ಈ ಪ್ರೇಮಜಾಲವು ಹರಡಿಕೊಂಡಿರುವ ಬಗೆಯು ನಮಗೆ ಮನವರಿಕೆಯಾಗುತ್ತದೆ. ಆದರೆ ನಾವು ಮಾತ್ರ ಈ ಪ್ರೇಮದ ಸೆಳೆತಕ್ಕೆ ಸಿಕ್ಕದೆ ತಪ್ಪಿಸಿಕೊಳ್ಳುವದಕ್ಕೆ ಪ್ರಯತ್ನಿಸುತ್ತಿರುವೆವು! "ದೇವ, ಈ ನಿನ್ನ ದಿವ್ಯವಿಭೂತಿಗಳನ್ನು ಕಂಡುಕೊಂಡು ಪ್ರೇಮದಿಂದ ಆರಾಧಿಸುವಂತೆ ಕಣ್ಮನಗಳನ್ನು ಕೊಡು!" ಎಂದು ಆ ಭಗವಂತನನ್ನೇ ಬೇಡಿಕೊಳ್ಳೋಣ.

## ೭೨. ಭಗವಂತನ ವಿಭೂತಿಗಳು ೧೦-(೨೬-೨೮)

### (೮-೨-೪೮)

ಲೋಕದಲ್ಲಿ ಪ್ರಸಿದ್ಧರಾದವರನ್ನು ಏತಕ್ಕೆ ಹಾಗೆ ಪ್ರಸಿದ್ಧರಾದರು ಎಂಬುದು ಗೊತ್ತಿಲ್ಲದೆಯೇ ಎಲ್ಲರಂತೆ ತಾವೂ ಅವರನ್ನು ಹೊಗಳುವವರು ಬಹುಮಂದಿ. ಅಂಥ ಪ್ರಖ್ಯಾತರು ಏನು ಹೇಳಿದರೂ ಸರಿ ಎನ್ನುವರು, ಸಾಮಾನ್ಯಜನರು. ಇದರಂತೆ ಯಾರಾದರೊಬ್ಬರು ಕೆಟ್ಟಹೆಸರು ಪಡೆದರೆಂದರೆ ಸರಿ, ಅವರ ಒಳ್ಳೆಯ ಸ್ವಭಾವವನ್ನೂ ಜನರು ಹಳಿಯುವದಕ್ಕೆ ಮೊದಲುಮಾಡುವರು. ಈ ಅಧ್ಯಾಯದಲ್ಲಿ ಹೇಳಿರುವ ವಿಭೂತಿಗಳು ಯಾವ ಕಾರಣದಿಂದ ವಿಭೂತಿಗಳಾಗಿರುತ್ತವೆ ಎಂಬುದನ್ನು ನಾವು ತಿಳಿದುಕೊಳ್ಳುವದಕ್ಕೆ ಪ್ರಯತ್ನವನ್ನು ಮಾಡಬೇಕು; ಸುಮ್ಮನೆ ಭಗವಂತನು ಹೇಳಿದ್ದಾನೆಂಬ ಒಂದೇ ಕಾರಣದಿಂದ ಅವನ್ನು ವಿಭೂತಿಗಳೆಂದು ಕರೆದರೆ ಸಾಲದು.

ಇವುಗಳ ಬಾಹ್ಯವಾದ ಅಂಶಗಳನ್ನು ಬಿಟ್ಟು, ಒಳಗಿನ ಸರ್ವಸಮಾನವಾದ ಪರಮಾತ್ಮಭಾವವನ್ನು ತೆಗೆದುಕೊಳ್ಳಬೇಕು. ಇವುಗಳಲ್ಲಿ ಯಾವದರಿಂದ ಭಗವಂತನ ಸಾನ್ನಿಧ್ಯವು ಹೆಚ್ಚಾಗಿ ಎದ್ದು ಕಾಣುತ್ತದೆ ಎಂಬುದನ್ನು ಲಕ್ಷಿಸಬೇಕು.

**"ಅಶ್ವತ್ಥಃ ಸರ್ವವೃಕ್ಷಾಣಾಮ್"** ಎಂಬ ವಿಭೂತಿಯನ್ನು ಈಗ ವಿಮರ್ಶಿಸೋಣ. ಅಶ್ವತ್ಥಮರವನ್ನು ನಮ್ಮ ದೇಶದಲ್ಲಿ ಬಹಳ ಪವಿತ್ರವೆಂದು ಕಾಣುತ್ತಾರೆ. ಈ ಮರವು ಮುಖ್ಯವಾಗಿ ನಮ್ಮ ದೇಶದಲ್ಲಿಯೇ ಬೆಳೆಯುತ್ತದೆ. ಇದು ಬೇರುಬಿಟ್ಟುಕೊಳ್ಳು ವದರಲ್ಲಿಯೂ ಪಕ್ಷಿಗಳಿಗೆ ಆಸರೆಕೊಡುವದರಲ್ಲಿಯೂ ಪ್ರಸಿದ್ಧವಾದ ಮರವು. ಒಂದು ಕಡೆ ಒಂದು ಅಶ್ವತ್ಥದ ಸಸಿಯು ಕಾಣಿಸಿಕೊಂಡರೆ ಅದನ್ನು ಕಿತ್ತುಹಾಕುವದು ಬಲುಕಷ್ಟವಾಗುತ್ತದೆ. ಜ್ಞಾನಕ್ಕೂ ಅಶ್ವತ್ಥಕ್ಕೂ ಹೇಗೋ ಹೆಚ್ಚಿನ ಸಂಬಂಧವು ಬಂದಿರುತ್ತದೆ. ಬುದ್ಧನು ತನ್ನ ಭವಚಕ್ರವನ್ನು - ಅಥವಾ ದ್ವಾದಶನಿದಾನಗಳ ಸಾಲನ್ನು ಕಂಡುಹಿಡಿದದ್ದು ಈ ಮರದ ಕೆಳಗೆ; ಆದ್ದರಿಂದ ಬೌದ್ಧರು ಇದನ್ನು ಬೋಧಿವೃಕ್ಷವೆಂದು ಕರೆಯುತ್ತಾರೆ. ಅಶ್ವತ್ಥವೃಕ್ಷವು ಸನಾತನಧರ್ಮಕ್ಕೆ ಒಂದು ದೊಡ್ಡ ಸಂಕೇತವಾಗಿಬಿಟ್ಟಿದೆ. ಸಂಸಾರವೂ ಅದರ ಕಾರಣವಾದ ಪರಬ್ರಹ್ಮವೂ ಸೇರಿ ಅಶ್ವತ್ಥವೃಕ್ಷ ಎಂದು ಶ್ರುತಿಯಲ್ಲಿದೆ. ಅಶ್ವತ್ಥವೃಕ್ಷವನ್ನು ಕಡಿದುಹಾಕಿದರೆ ನಮ್ಮ ಧರ್ಮಕ್ಕೇ ಅಪಮಾನಮಾಡಿದಂತೆ ಎಂದು ಆಸ್ತಿಕರು ಭಾವಿಸುತ್ತಾರೆ. ಅಶ್ವತ್ಥವೃಕ್ಷವನ್ನು ನೆಡುವದು, ಅದಕ್ಕೆ ಉಪನಯನಾದಿಗಳನ್ನು ಮಾಡಿಸುವದು - ಒಂದು ಪುಣ್ಯಕೆಲಸ ವೆಂದು ಹಲವರ ನಂಬಿಕೆಯಿದೆ. ಅಶ್ವತ್ಥವೃಕ್ಷವನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿದರೆ ತ್ರಿಮೂರ್ತಿಗಳಿಗೂ ಪ್ರದಕ್ಷಿಣೆಮಾಡಿ ನಮಸ್ಕರಿಸಿದಂತೆ ಎಂದು ಸನಾತನಧರ್ಮದವರ ಭಾವನೆಯಿದೆ. ಆದ್ದರಿಂದ ಭಗವಂತನು ಅಶ್ವತ್ಥವೃಕ್ಷವನ್ನು ಒಂದು ಮಹಾವಿಭೂತಿ ಎಂದು ಉಪದೇಶಿಸಿರುತ್ತಾನೆ.

**"ದೇವರ್ಷೀಣಾಂ ಚ ನಾರದಃ"** ಎಂಬುದನ್ನು ವಿಚಾರಮಾಡೋಣ. ಸಾಮಾನ್ಯವಾಗಿ ನಾರದರು ಎಂಬ ಹೆಸರು ಈಗ ಪ್ರಾಕೃತಜನರಿಗೆ ನಿಂತಲ್ಲಿ ನಿಲ್ಲದೆ ಸಂಚರಿಸುವವರು, ಚಾಡಿಕೋರರು, ಜಗಳವನ್ನು ತಂದು ಹಾಕುವವರು - ಎಂಬ ಅರ್ಥವನ್ನು ಕೊಡುತ್ತದೆ. ಆದರೆ ವಸ್ತುತಃ ನಮ್ಮ ವೈದಿಕವಾಙ್ಮಯದಲ್ಲಿ ನಾರದರಿಗೆ ಬಹಳ ಹೆಚ್ಚಿನ ಸ್ಥಾನವಿದೆ. ಶ್ರೀಕೃಷ್ಣನು ನಾರದರ ಗುಣಗಾನವನ್ನು ಮಾಡಿ "ಆದ್ದರಿಂದ ನಾನು ನಾರದರನ್ನು ಗೌರವಿಸುತ್ತೇನೆ" ಎಂದು ಮತ್ತೆಮತ್ತೆ ಹೇಳುವ ಒಂದು ಅಧ್ಯಾಯವು ಭಾರತದಲ್ಲಿರುತ್ತದೆ. ನಾಟಕದಲ್ಲಿ ನಾರದರನ್ನು ಒಬ್ಬ ವಿದೂಷಕನೆಂಬಂತೆ ತೋರಿಸುತ್ತಾರೆ. ಆದರೆ ಅವರು ನಿಜವಾಗಿ ಪ್ರೇಮಮೂರ್ತಿ

ಯಾಗಿರುತ್ತಿದ್ದರು; ಭಗವಂತನಂತೆ ಎಲ್ಲರಲ್ಲಿಯೂ ಸರ್ವಸಮತೆಯಿಂದ ವರ್ತಿಸುತ್ತಿದ್ದರು. ಅವರವರ ಗುಣದೋಷಗಳನ್ನು ಅವರವರಿಗೆ ನಿರ್ಭೀತಿಯಿಂದ ತಿಳಿಸುತ್ತಿದ್ದರು; ಆದರೂ ಯಾರೊಬ್ಬರೂ ಅವರನ್ನು ದ್ವೇಷಿಸುತ್ತಿರಲಿಲ್ಲ, ಎಲ್ಲರೂ ಅವರನ್ನು ಗೌರವಿಸುತ್ತಿದ್ದರು. "ವೀಣಾಗಾನವನ್ನು ಮಾಡಿದವರಿಗೆ ಹಣವು ಸಿಕ್ಕುವದೇಕೆ?" ಎಂಬ ಪ್ರಶ್ನೆಗೆ ಛಾಂದೋಗ್ಯೋಪನಿಷತ್ತಿನಲ್ಲಿ ಒಂದು ಸುಂದರವಾದ ಉತ್ತರವಿದೆ. ವೀಣಾವಾದಕರು ನಿಜವಾಗಿ ಪರಮಾತ್ಮನ ಗುಣಗಾನವನ್ನು ಮಾಡುತ್ತಿರುವರು; ಆದ್ದರಿಂದ ಅವರಿಗೆ ಧನಪ್ರಾಪ್ತಿಯಾಗುತ್ತದೆ ಎಂಬುದೇ ಆ ಉತ್ತರ. ಆದರೆ ವೀಣಾವಾದನಮಾಡುವವರಿಗೆ ತಾವು ಪರಮಾತ್ಮನ ಗಾನವನ್ನು ಮಾಡುತ್ತಿದ್ದೇವೆಂಬುದು ತಿಳಿಯದು. ನಾರದರು ಈ ತತ್ತ್ವವನ್ನು ಅರಿತುಕೊಂಡು "ಮಹತೀ" ಎಂಬ ತಮ್ಮ ವೀಣೆಯನ್ನು ನುಡಿಸುತ್ತಲೂ ಭಗವಂತನ ಗುಣಗಾನವನ್ನು ಮಾಡುತ್ತಲೂ ತ್ರಿಲೋಕ ಸಂಚಾರಿಗಳಾಗಿರುತ್ತಿದ್ದರು. ಅವರು ತಮ್ಮ ಹೃದಯದಲ್ಲಿದ್ದ ಭಗವಂತನ ಪ್ರೇಮವನ್ನು ತಮ್ಮ ಭಜನೆಯ ಮೂಲಕ ಮೂರುಲೋಕಕ್ಕೂ ಹಂಚಿಕೊಡುತ್ತಿದ್ದರು! ಅವರ ಹೆಸರಿನಲ್ಲಿ ಒಂದು ಭಕ್ತಿಸೂತ್ರಗ್ರಂಥವಿದೆ. ಅದರಲ್ಲಿ ಭಕ್ತಿಯೆಂದರೇನು? -ಎಂಬುದಕ್ಕೆ ಉತ್ತರವಾಗಿ "ಸಾ ತ್ವಸ್ಮಿನ್ ಪರಮಪ್ರೇಮರೂಪಾ" ಭಕ್ತಿ ಎಂದರೆ ಈ ಪರಮಾತ್ಮನಲ್ಲಿಟ್ಟಿರುವ ಪರಮಪ್ರೇಮವು ಎಂದು ಲಕ್ಷಣವಾಕ್ಯವನ್ನು ಬರೆದಿರುತ್ತಾರೆ. ಇಂಥ ಪ್ರೇಮಮೂರ್ತಿಯಾದ ನಾರದರನ್ನು ಭಗವಂತನು ತನ್ನ ವಿಭೂತಿ ಎಂದು ಕರೆದಿರುವದರಲ್ಲಿ ಆಶ್ಚರ್ಯವೇನು? '**ಗಂಧರ್ವಾಣಾಂ ಚಿತ್ರರಥಃ**' ಎಂಬುದನ್ನೂ ಹೀಗೆಯೇ ತಿಳಿಯಬೇಕು. ಹಾಹಾ, ಹೂಹೂ, ವಿಶ್ವಾವಸು, ತುಂಬುರು - ಮುಂತಾದವರೆಲ್ಲರಿಗೂ ಅಧಿಪತಿಯಾದ ಚಿತ್ರರಥನು ದಿವ್ಯವಾದ ಸಂಗೀತವಿದ್ಯೆಯಲ್ಲಿ ಪಾರದರ್ಶಿಯು. ಗಂಧರ್ವರೆಲ್ಲರೂ ಗಾನ, ವಾದ್ಯ, ನಾಟ್ಯ - ಮುಂತಾದ ವಿದ್ಯೆಗಳಲ್ಲಿ ನಿಪುಣರೇ; ಆದರೆ ಚಿತ್ರರಥನು ಸಂಗೀತಕಲೆಯಲ್ಲಿ ಅತ್ಯಂತ ನಿಪುಣನು. ತನ್ನ ರೂಪದಿಂದಲೂ ಗಾನದಿಂದಲೂ ಜನರನ್ನು ಶರೀರಭಾವವಿಲ್ಲದಂತೆ ಮಾಡುವ ಗಾನಕಲಾವಿಶಾರದನಾದ ಚಿತ್ರರಥನನ್ನು ತನ್ನ ವಿಭೂತಿ ಎಂದು ಭಗವಂತನು ಕರೆದಿರುವದು ಯುಕ್ತವೇ ಆಗಿರುತ್ತದೆ.

"**ಸಿದ್ಧಾನಾಂ ಕಪಿಲೋ ಮುನಿಃ**" ಎಂಬ ವಿಭೂತಿಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು. ಇಬ್ಬರು ಕಪಿಲರು ಪ್ರಸಿದ್ಧರಾಗಿರುತ್ತಾರೆ. ಸಾಂಖ್ಯಸ್ಮೃತಿಗೆ ಪ್ರವರ್ತಕನಾದ ಈಶ್ವರಾಸ್ತಿತ್ವವನ್ನು ಒಪ್ಪದ ಕಪಿಲನನ್ನು ಇಲ್ಲಿ ಹೇಳಿರುವದಿಲ್ಲ; ಆತನಿಗೆ ಯೋಗಾಭ್ಯಾಸಬಲದಿಂದ ಬಂದಿರಬಹುದಾದ ಸಿದ್ಧಿಗಳನ್ನು ಮನದಂದು ಅವನನ್ನು ಸಿದ್ಧನೆಂದು ಇಲ್ಲಿ ಕರೆದಿದೆ ಎಂದು ಭಾವಿಸಿದರೂ ತಪ್ಪೇ ಆಗುವದು.

ಆದರೆ ಮತ್ತೊಬ್ಬ ವಾಸುದೇವನೆಂಬ ಹೆಸರಿನ ಕಪಿಲನು ಇದ್ದನು. ಧರ್ಮಜ್ಞಾನ ವೈರಾಗ್ಯಗಳು ಆತನಿಗೆ ಹುಟ್ಟುಗುಣಗಳಾಗಿದ್ದವು. ಕಲಿಯುಗದಲ್ಲಿ ದತ್ತಾತ್ರೇಯಾವತಾರವು ಹೇಗೆ ಜನರಿಗೆ ಕಲ್ಯಾಣಮಾಡುವದರಿಂದ ಸುಪ್ರಸಿದ್ಧವಾಗಿರುವದೋ ಅದರಂತೆ ಕಪಿಲಾವತಾರವೂ ಸುಪ್ರಸಿದ್ಧವಾಗಿರುತ್ತದೆ. ಭಗವಂತನಿಗೆ ಜ್ಞಾನ, ಆನಂದ, ವೈರಾಗ್ಯ, ದಯೆ, ಶೌರ್ಯ, ವೀರ್ಯ, ತೇಜಸ್ಸು - ಮುಂತಾದ ಗುಣಗಳು ಬೆಂಕಿಗೆ ಬಿಸಿಯಂತೆ ಸ್ವಾಭಾವಿಕವಾಗಿರುವವು. ಆತನ ಅಂಶದಿಂದ ಅವತರಿಸುವ ಮಹಾ ಪುರುಷರಿಗೂ ಆತನ ಅನುಗ್ರಹದಿಂದ ಈ ಗುಣಗಳು ಸಹಸಿದ್ಧವಾಗಿರುವವು. ಗೋಂದಾವಳಿಯ ಶ್ರೀ ಬ್ರಹ್ಮಚೈತನ್ಯಸದ್ಗುರುಮಹಾರಾಜರವರು ಮೂರುತಿಂಗಳ ಮಗುವಾಗಿರುವಾಗಲೇ ರಾಮಭಜನೆ ಮಾಡುತ್ತಿದ್ದರೆಂದು ಅವರ ಜೀವನಚರಿತ್ರೆಯಲ್ಲಿ ಬರೆದಿರುತ್ತದೆ. ಏಸುಕ್ರಿಸ್ತನು ಇನ್ನೂ ಚಿಕ್ಕವನಾಗಿರುವಾಗಲೇ ಧರ್ಮಸಭೆಯಲ್ಲಿ ನಿಂತು ಉಪದೇಶಮಾಡುತ್ತಿದ್ದನೆಂದು ಬೈಬಲಿನಲ್ಲಿ ಬರೆದಿರುತ್ತವೆ. ಹೀಗೆ ಮತ್ತೊಬ್ಬ ರಿಂದ ಕಲಿಯದೆಯೇ ಸಾಧನವನ್ನು ಮಾಡುವದಕ್ಕೆ ಮೊದಲೇ ಉಂಟಾಗುವ ಸಿದ್ಧಿಗಳು ಭಗವಂತನ ಅಪಾರಮಹಿಮೆಯನ್ನೂ ಅಪಾರಕರುಣೆಯನ್ನೂ ಸೂಚಿಸುವ ಗುರುತಾಗಿರುತ್ತವೆ. ಆದ್ದರಿಂದ ಯಾರಲ್ಲಿ ಯಾವ ಸದ್ಗುಣವನ್ನು ಕಂಡರೂ ಅದು ಭಗವಂತನ ಕಲೆ ಎಂದು ಭಾವಿಸುವ ಅಭ್ಯಾಸವನ್ನು ಮಾಡಬೇಕು. ಇದೇ ಹತ್ತನೆಯ ಅಧ್ಯಾಯದ ಉಪದೇಶದ ಗುರಿಯು. ಒಬ್ಬ ಮಹನೀಯರೂ ನಾನೂ ಒಮ್ಮೆ ಚಿಕ್ಕಬಳ್ಳಾಪುರಕ್ಕೆ ರೈಲಿನಲ್ಲಿ ಹೋಗುತ್ತಿದ್ದೆವು. ರೈಲಿನಲ್ಲಿ ಒಬ್ಬ ಆದಿಕರ್ನಾಟಕರ ಹುಡುಗನು ಕುಳಿತಿದ್ದನು. ಅವನು ಅಸ್ಪೃಶ್ಯನೆಂಬ ಕಾರಣದಿಂದ ಉಳಿದವರು ಸ್ವಲ್ಪ ಸಂಕೋಚದಿಂದ ಹಿಂಜರಿಯುತ್ತಿರುವಾಗ ಅವರು "ಆ ಹುಡುಗನ ಸುಂದರವಾದ ಕಣ್ಣುಗಳನ್ನು ನೋಡಿದಿರಾ? ಎಂಥ ಲೋಕೋತ್ತರಸೃಷ್ಟಿ!" ಎಂದು ಮೆಚ್ಚುತ್ತಿದ್ದರು. ನಾವುಗಳೆಲ್ಲರೂ ಆ ಮಹನೀಯರು ಹೇಳಿದ ಮೇಲೆಯೇ ಆ ಕಣ್ಣುಗಳಲ್ಲಿ ಸೌಂದರ್ಯವನ್ನು ಕಂಡೆವು. ಈ ಗುಣಗ್ರಹಣೆಯ ದೃಷ್ಟಿಯು ವಿಭೂತಿಯೋಗಕ್ಕೆ ಅತ್ಯಂತ ಅವಶ್ಯವಾಗಿರುತ್ತದೆ. ನಾವು ಪ್ರಪಂಚವನ್ನು ಕಾಣುತ್ತಿದ್ದೇವೆ, ನಮ್ಮ ದೃಷ್ಟಿಗೆ ಬ್ರಹ್ಮವಸ್ತುವು ಮುಳುಗಿಹೋಗಿರುತ್ತದೆ. ಭಾವುಕರಾದವರು ಪ್ರಪಂಚವನ್ನು ಮುಳುಗಿಸಿ ಬ್ರಹ್ಮವನ್ನು ಎಲ್ಲೆಲ್ಲಿಯೂ ಕಾಣುವರು. ಇದೇ ವಿಭೂತಿಯೋಗ.

**"ಉಚ್ಚೈಃಶ್ರವಸಮಶ್ವಾನಾಂ ವಿದ್ಧಿಮಾಮಮೃತೋದ್ಭವಮ್"** ಅಮೃತವನ್ನು ದೇವಾಸುರರು ಕಡೆದು ತೆಗೆಯುವ ಕಾಲಕ್ಕೆ ಸಮುದ್ರದಿಂದ ಹುಟ್ಟಿದ ಪವಿತ್ರವಾದ ಕುದುರೆ ಅದು. ಅದರ ಕಿವಿಯು ಯಾವಾಗಲೂ ನೆಟ್ಟಗೆ ಇದ್ದಿರಬಹುದು. ಅತ್ಯಂತ ಶುದ್ಧಬಣ್ಣದ ಅಶ್ವವದು. ಇಂದ್ರನು ಅದನ್ನು ಉಪಯೋಗಿಸಿಕೊಂಡನು. ವೇಗದಲ್ಲಿ

ನಿರುಪಮಾನವಾದದ್ದು. ಸಾಮಾನ್ಯವಾಗಿ ಜಾತ್ಯಶ್ವಗಳನ್ನು ನೋಡಿದರೂ ಸಾಕು, ನಮ್ಮಂಥವರಿಗೂ ಉತ್ಸಾಹವು ಬರುತ್ತದೆ. ಸವಾರರೂ ಯೋಧರೂ ಆದವರಿಗೆ ಎಂಥ ಉತ್ಸಾಹವು ಉಕ್ಕಬಹುದು? ಶುದ್ಧವಾದ ಜನ್ಮಸ್ಥಳವುಳ್ಳ ಇಂದ್ರನ ವಾಹನವಾದ ಕುದುರೆಯು ಮಂಗಳಸೂಚಕವಾದದ್ದು. ಈಗಲೂ ನಮ್ಮ ದೇಶದ ರಾಜರು ತಮ್ಮ ಗೌರವದ ಗುರುತಾಗಿ ಉತ್ತಮಾಶ್ವಗಳನ್ನು ಲಾಯಗಳಲ್ಲಿಟ್ಟಿರುವರು. ಆದರೆ ನಮ್ಮ ದೌರ್ಭಾಗ್ಯದಿಂದ ಈಗ ಮೋಟಾರುಕಾರುಗಳು ಹೆಚ್ಚಿ ಕುದುರೆಗಳನ್ನು ಸಾಕುವ ಜನರು ಕಡಿಮೆಯಾಗುತ್ತಿದ್ದಾರೆ. ಕುದುರೆಗಳನ್ನು ಜೂಜು ಮುಂತಾದವುಗಳಿಗೆ, ಉಪಯೋಗಿಸುವವರು ಮಾತ್ರ ಸಿಕ್ಕುತ್ತಾರೆ. ಇದರಂತೆ **"ಐರಾವತಂ ಗಜೇನ್ದ್ರಾಣಾಮ್"** ಎಂಬುದನ್ನೂ ತಿಳಿಯಬೇಕು. ಬಿಳಿಯ ಆನೆಗಳು ಈಗಲೂ ಅಲ್ಲಲ್ಲಿ ಸಿಕ್ಕುತ್ತವೆ; ಆದರೆ ಇಂಗ್ಲಿಷಿನಲ್ಲಿ ಬಿಳಿಯ ಆನೆ ಎಂದರೆ ಬಹಳ ತುಟ್ಟಿಯಾದ ಪದಾರ್ಥ ಎಂದು ಅರ್ಥವಾಗಿರುವದು ಮಾತ್ರ ಅದಕ್ಕೆ ಅನ್ವಯಿಸುತ್ತದೆ. ಇಂದ್ರನ ಪಟ್ಟದ ಆನೆಯಾದ ಐರಾವತವು ಅವನ ಐಶ್ವರ್ಯದ ಹೆಗ್ಗುರುತಾಗಿತ್ತು. ರಾಜರುಗಳು ಪಟ್ಟದ ಕದುರೆ, ಪಟ್ಟದ ಆನೆ - ಎಂದು ಸಾಕುವ ಪದ್ಧತಿಯು ಇಂದ್ರನ ಐಶ್ವರ್ಯವನ್ನು ಸೂಚಿಸುತ್ತಿರಬಹುದು. ಆದರೆ ಇಂದ್ರನಿಗೆ ಹೇಗೆ ಈ ವಾಹನಗಳು ಪರಮೇಶ್ವರನ ಅನುಗ್ರಹದಿಂದ ಬರುವವೋ ಹಾಗೆ ನಮ್ಮ ಸಕಲೈಶ್ವರ್ಯವೂ ಪರಮೇಶ್ವನ ಪ್ರಸಾದವೇ, ನಮ್ಮ ಧನಕನಕವಸ್ತುವಾಹನಾದಿಗಳೆಲ್ಲವೂ ಆತನ ಅನುಗ್ರಹವೇ ಎಂದು ರಾಜರುಗಳೂ ಸಿರಿವಂತರೂ ಭಾವಿಸಬೇಕು. ಕುದುರೆ, ಆನೆ - ಇವುಗಳನ್ನು ಪರಮೇಶ್ವರನು ಅನುಗ್ರಹಿಸಿರುವ ವೇಗ, ಬಲ - ಮುಂತಾದವುಗಳಿಗೆ ಗುರುತಾಗಿರುವ ವಿಭೂತಿ ಎಂದು ತಿಳಿದು ಆರಾಧಿಸಬೇಕು.

**"ನರಾಣಾಂ ಚ ನರಾಧಿಪಮ್"** ನಮ್ಮ ಕಾಲಕ್ಕೆ ಈ ನರಾಧಿಪಶಬ್ದವು ಸ್ವಲ್ಪ ಕಿವಿಗೆ ಕಟುವಾಗಿ ತೋರುತ್ತದೆ. ಎಲ್ಲೆಲ್ಲಿಯೂ ಪ್ರಜಾಸತ್ತಾತ್ಮಕರಾಜ್ಯವು ಆಚರಣೆಗೆ ಬರುತ್ತಿರುವ ಈ ಕಾಲದಲ್ಲಿ ಈ ವಿಭೂತಿಯನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ಸ್ವಲ್ಪ ವಿಶದವಾಗಿ ತಿಳಿದುಕೊಳ್ಳುವದು ಒಳ್ಳೆಯದು. ಹಿಂದಕ್ಕೆ ರಾಜನಿಗೆ ಪಟ್ಟಾಭಿಷೇಕವನ್ನು ಮಾಡಿಸಿದಾಗ ಅವನನ್ನು ಎಲ್ಲರೂ ವಿಷ್ಣುವಿನ ಅಂಶದಿಂದ ಕೂಡಿದವನೆಂದು ಮನ್ನಿಸುತ್ತಿದ್ದರು. ಅವನನ್ನು ಸಾಕ್ಷಾದ್ಧರ್ಮಪುರುಷನೆಂದೇ ಜನರು ಭಾವಿಸುತ್ತಿದ್ದರು; ಆತನ ಕೈಯಲ್ಲಿ ಧರ್ಮದ ಗುರುತಾಗಿ ಒಂದು ರಾಜದಂಡವನ್ನು ಅರ್ಪಿಸುತ್ತಿದ್ದರು. ಅವನ ಕೈಕೆಳಗಿನ ನ್ಯಾಯಾಧೀಶರೇ ಮುಂತಾದ ಅಧಿಕಾರಿಗಳಿಗೆ ಆತನು ಅನುಗ್ರಹಿಸಿದ ಶಕ್ತಿಯಿಂದ ಅವರೆಲ್ಲರೂ ರಾಜ್ಯಭಾರಕ್ಕೆ ಸಹಾಯಕರಾಗಿರುತ್ತಿದ್ದರು. ಇದೆಲ್ಲ ಪುರಾಣದ ಕಾಲದ ಮಾತಾಯಿತು. ಆದರೆ ಈಗ ಹೇಗೆ? 'ನರಾಧಿಪಃ' ಎಂದರೆ ರಾಜ್ಯವನ್ನು

ಆಳುವ ಪುರುಷನು, ಅಥವಾ ಪುರುಷರು - ಎಂದಿಟ್ಟುಕೊಳ್ಳಬಹುದು. ಅವರು ಅಧಿಕಾರಿಗಳಾಗಿರುವಾಗ ಅವರನ್ನು ಭಗವಂತನ ವಿಭೂತಿಯೆಂದೇ ಗೌರವಿಸಬೇಕು.

ಆದರೆ ಹಿಂದಿನ ಕಾಲದಲ್ಲಿ ಕೂಡ ರಾಜರುಗಳು ಪ್ರಜೆಗಳ ಮತವನ್ನು ಅನಾದರಮಾಡಿ ನಡೆಯುತ್ತಿದ್ದರೆಂದು ಹೇಳುವದಕ್ಕೆ ಆಧಾರವಿಲ್ಲ. ಉದಾಹರಣೆಗೆ ರಾಮಾಯಣದಲ್ಲಿ ದಶರಥನು ರಾಮನನ್ನು ಯುವರಾಜನನ್ನಾಗಿ ಮಾಡುವಾಗ ಪ್ರಜೆಗಳನ್ನೆಲ್ಲ ಕೇಳಿದನೆಂದು ಉಲ್ಲೇಖವಿದೆ. ಪ್ರಜೆಗಳು ತಮ್ಮ ಸಂಪೂರ್ಣ ಸಂತೋಷವನ್ನು ವ್ಯಕ್ತಪಡಿಸಿ ಅವಶ್ಯವಾಗಿ ಆಗಬಹುದು ಎಂದು ಸಮ್ಮತಿಯನ್ನಿತ್ತರು. ದಶರಥನು "ಹಾಗಾದರೆ ನನ್ನಲ್ಲಿ ನಿಮಗೆ ಅವಿಶ್ವಾಸವೆ?" ಎಂದು ಕೇಳಿದನು. ಪ್ರಜೆಗಳು 'ಹಾಗಲ್ಲ; ಸರ್ವಗುಣಗಳಿಂದ ಕೂಡಿದ ರಾಮನನ್ನು ಪಟ್ಟಕ್ಕೆ ತರುತ್ತಿರುವ ತಮ್ಮ ಪ್ರಯತ್ನವು ಸರ್ವಥಾ ಅಭಿನಂದನೀಯವಾಗಿದೆ' ಎಂದರು. ಇನ್ನೊಂದು ಉದಾಹರಣೆಯನ್ನು ತೆಗೆದುಕೊಳ್ಳಿ. ದಶರಥನು ಯಜ್ಞವನ್ನು ಮಾಡುವಾಗ ತನ್ನ ಮಂತ್ರಿಗಳನ್ನೆಲ್ಲ ಕರೆದು ಆಪ್ತಾಲೋಚನೆಯನ್ನು ಮಾಡಿದನು ಎಂದು ರಾಮಾಯಣದಲ್ಲಿ ಬರೆದಿರುತ್ತದೆ. ಮಂತ್ರಿಗಳು, ಪ್ರಧಾನಿ - ಮುಂತಾದ ಶಬ್ದಗಳೇ ರಾಜನು ಮಂತ್ರಾಲೋಚನೆಗೆ ಸಭೆಯನ್ನಿಟ್ಟುಕೊಂಡು ಸಮಯೋಚಿತವಾಗಿ ಅವರ ಅಭಿಪ್ರಾಯ ವನ್ನು ಉಪಯೋಗಿಸಿಕೊಳ್ಳುತ್ತಿದ್ದನೆಂದು ತಿಳಿಸುತ್ತವೆ. ರಾಜನು ಸ್ವೇಚ್ಛಾಪ್ರವೃತ್ತಿಯಿಂದ ನಡೆದಾಗ ಅದನ್ನು ಜನರು ಎಂದಿಗೂ ಸಹಿಸುತ್ತಿರಲಿಲ್ಲ. ಅಂಥವನಿಗೆ ತಕ್ಕ ಶಾಸನವನ್ನು ಮಾಡುವವರೂ ಆಗಾಗ್ಗೆ ಹುಟ್ಟಿಕೊಳ್ಳುತ್ತಲೇ ಇದ್ದರು ಎಂಬುದಕ್ಕೆ ವೇನ, ಕಾರ್ತವೀರ್ಯ, ರಾವಣ, ನಹುಷ - ಮುಂತಾದವರ ಚರಿತ್ರೆಗಳನ್ನು ನೆನಪಿಗೆ ತಂದುಕೊಳ್ಳಬೇಕು. ಇಂಥ ದೃಷ್ಟಾಂತಗಳೇನೂ ಪುರಾಣಗಳಲ್ಲಿ ಕಡಿಮೆಯಿಲ್ಲ. ಆದ್ದರಿಂದ ಹಿಂದೆ ನಿರಂಕುಶಪ್ರಭುತ್ವವೆಂದು ನಾವು ಕರೆಯುತ್ತಿದ್ದದ್ದೂ ಒಂದು ರೀತಿಯಿಂದ ಸಾಂಕುಶವಾಗಿಯೇ ಇತ್ತೆಂದು ಸ್ಪಷ್ಟವಾಗುತ್ತದೆ.

ಇದಂತಿರಲಿ. ಈ ಕಾಲದಲ್ಲಿ ಬಹು ದೇಶಗಳಲ್ಲಿ ರಾಜನ ಆಳ್ವಿಕೆಯು ಅಳಿಸಿಹೋಗಿರುತ್ತದೆ; ಅಥವಾ ನಾಮಮಾತ್ರವಾಗಿ ಉಳಿದುಕೊಂಡಿರುತ್ತದೆ. ಆದರೂ "ನರಾಣಾಂ ಚ ನರಾಧಿಪಃ" ಎಂಬ ವಿಭೂತಿಯು ಈಗಲೂ ಜನರಿಗೆ ಧ್ಯೇಯವಾಗಿ ಉಳಿದುಕೊಂಡೇ ಇರುತ್ತದೆ - ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ರಾಜನ ಅಧಿಕಾರ ಎಲ್ಲಿಂದ ಬಂದಿರುತ್ತದೆ? ಎಂದರೆ ಧರ್ಮದಿಂದ. ಯಾವ ಪ್ರಭುವನ್ನೇ ಆಗಲಿ, ಯಾವ ಸರ್ಕಾರದ ಪ್ರತಿನಿಧಿಯನ್ನೇ ಆಗಲಿ, ನಾವು ಧರ್ಮಕ್ಕೆ ಪ್ರತಿನಿಧಿಯೆಂದೇ ಭಾವಿಸುತ್ತೇವೆ. ಧರ್ಮವು ಹ್ರಾಸವಾಗದಂತೆಯೂ ಅಧರ್ಮವು ತಲೆಎತ್ತಿಕೊಳ್ಳ ದಂತೆಯೂ ನೋಡಿಕೊಳ್ಳುವದು ನರಾಧಿಪನ ಕರ್ತವ್ಯವು. ಧರ್ಮವೆಂದರೆ ಈಗಿನ

ಹಿಂದೂ ಮುಸಲ್ಮಾನ್ ಎಂದು ಹೆಸರಿಟ್ಟುಕೊಂಡಿರುವ ಮತಪಂಗಡಗಳ ಅಭಿಮತವು ಎಂದು ತಿಳಿಯಬಾರದು. ಲೋಕಕ್ಕೆ ಕಲ್ಯಾಣವು ಆಗುವದಕ್ಕಾಗಿ ಯಾವ ವರ್ತನೆಯು ಸಾಧಕವಾಗುವದೋ, ಯಾವದು ಇಹಪರಗತಿಗಳಿಗೆ ಸಾಧಕವಾಗಿ ಜಗತ್ತನ್ನು ಧರಿಸಬಲ್ಲದೋ ಅದೇ ಧರ್ಮವು. ಇಂಥ ಧರ್ಮವನ್ನು ಧರ್ಮಕಾಮರಾದ ಹಿಂದಿನ ಋಷಿಗಳು ಹೇಳಿಯೇ ಇರುತ್ತಾರೆ; ವೇದದಲ್ಲಿ ಇದನ್ನು ಪ್ರಭುಸಮ್ಮಿತವಾಗಿ ಹೇಳಿರುತ್ತದೆ. ಇಂಥ ಧರ್ಮವನ್ನು ಉದ್ಧಾರಮಾಡುವದೇ ಭಗವಂತನ ಸಂಕಲ್ಪವು; ಭಗವಂತನು ಧರ್ಮದ ನಿಧಿ, ರಾಜನು ಅದರ ಪ್ರತಿನಿಧಿ ಆದ್ದರಿಂದ ಅವನು ಭಗವಂತನ ವಿಭೂತಿಯಾಗಿರುತ್ತಾನೆ - ಎಂದು ಚಿಂತಿಸಬೇಕು.

**"ಆಯುಧಾನಾಮಹಂ ವಜ್ರಮ್"** ವಜ್ರವು ಇಂದ್ರನ ಆಯುಧವು, ವಜ್ರವು ಎಂಬುದು ಸಿಡಿಲನ್ನು ರೂಪಕವಾಗಿ ಹೇಳಿದ ಆಯುಧವೆಂದು ಕೆಲವರು ಊಹಿಸುತ್ತಾರೆ. ಇದು ಹೇಗಾದರೂ ಇರಲಿ. ವಜ್ರವು ಅಥವಾ ಸಿಡಿಲು ಎಲ್ಲಿ ನನ್ನ ಮೇಲೆ ಬೀಳುವದೋ ಎಂದು ಮರ್ತ್ಯರು ಅಂಜುತ್ತಿರುವಂತೆ ಪಾಪಿಷ್ಠರು ಎಂದಿಗೂ ಅಂಜಿಕೊಂಡೇ ನಡೆಯಬೇಕಾಗಿರುತ್ತದೆ. ಈಗ ಜನರಲ್ಲಿ ರಾಗದ್ವೇಷವು ಅತಿಯಾಗಿ ಬೆಳೆಯುತ್ತಿದೆ. ಕೆಲವರು ಮಹಾತ್ಮಗಾಂಧಿಯಂಥವರಿಗೂ ಪ್ರಾಣಕ್ಕೆ ಊನ ಬಂತಲ್ಲ, ನಮ್ಮಂಥವರ ಪಾಡೇನು? - ಎಂದು ಶಂಕಿಸುತ್ತಿರುವರು. ಇನ್ನು ಕೆಲವರು ಪ್ರತಿಪಕ್ಷದವರು ಭಯದಿಂದ ತಪ್ಪಿಸಿಕೊಳ್ಳುವದಕ್ಕೆ ನಮ್ಮದೊಂದು ಪಕ್ಷವಿರಬೇಕು - ಎನ್ನುತ್ತಿರುವರು. ಯಾವ ಪಕ್ಷದವರೇ ಆಗಲಿ, ಭಯವು ಹೇಗೆ ತಪ್ಪೀತು? ಭಗವಂತನ ಪಕ್ಷಕ್ಕೇ ಸೇರಬೇಕು, ಧರ್ಮದ ಕಡೆಗೆ ನಾವು ಇರಬೇಕು, ಆಗ ಭಯವು ತಪ್ಪಬೇಕು. ಅಧರ್ಮಕ್ಕೆ ಎಂದೆಂದಿಗೂ ಅಂಜಿಕೆಯಿದ್ದೇ ಇರುತ್ತದೆ. ಭಗವಂತನೇ ಭಯನಾಶನನು. ಆತನನ್ನು ಉಪಾಸನೆಮಾಡಿ ಎಲ್ಲರನ್ನೂ ಭಗವಂತನೆಂಬ ದೃಷ್ಟಿಯಿಂದ ನೋಡಿ, ಭಯದಿಂದ ಪಾರಾಗೋಣ. ಶ್ರುತಿಯಲ್ಲಿ ಭಗವಂತನನ್ನು "ಮಹದ್ಭಯಂ ವಜ್ರಮುದ್ಯತಮ್" ಎನ್ನುತ್ತಿರುವ, ದೊಡ್ಡ ಭಯಹೇತುವಾದ, ವಜ್ರಾಯುಧವು - ಎಂದು ವರ್ಣಿಸಿರುತ್ತದೆ. ಆತನನ್ನೇ ಶರಣುಹೊಕ್ಕರೆ ನಮ್ಮ ಪಾಲಿಗೆ ಆ ವಜ್ರಾಯುಧವೇ ಅಭಯಪ್ರದಾನದ ಗುರುತಾಗುವದು. ಪೊಲೀಸಿನವರಿಂದ ಪಾತಕಿಗಳಿಗೆ ಭಯ ವಿರಬಹುದು; ಆದರೆ ಧರ್ಮಿಷ್ಠರಿಗೆ ಅವರೇ ಅಭಯಕ್ಕೆ ಕಾರಣರಾಗಿರುತ್ತಾರೆ.

**"ಧೇನೂನಾಮಸ್ಮಿ ಕಾಮಧುಕ್"** ಕಾಮಧುಕ್ ಎಂದರೇನು? ಕೇಳಿದ್ದನ್ನು ಕರೆಯುವ ಹಸು. ಪರಮಾತ್ಮನ ಭಕ್ತರಿಗೆ ನಮಸ್ಕಾರಮಾಡಿದರೆ, ಅವರನ್ನು ಶ್ರದ್ಧೆಯಿಂದ ಅರ್ಚನೆಮಾಡಿದರೆ, ಜನರ ಇಷ್ಟಾರ್ಥಗಳೆಲ್ಲ ನೆರವೇರುವವೆಂದು ಶಾಸ್ತ್ರದಲ್ಲಿದೆ. ಇನ್ನು ಭಗವಂತನನ್ನೇ ಶರಣುಹೊಕ್ಕರೆ ಕೇಳಬೇಕೆ? ಕಾಮಧೇನು

ಸ್ವರ್ಗಲೋಕದಲ್ಲಿ ದೇವತೆಗಳಿಗೆ ಇಷ್ಟಾರ್ಥವನ್ನು ಕೊಡುವದೆಂದು ಪುರಾಣಪ್ರಸಿದ್ಧಿ. ವಸಿಷ್ಠರ ನಂದಿನೀಧೇನುವೂ ಭರದ್ವಾಜರ ಕಾಮಧೇನುವೂ ಸಾವಿರಾರು ಜನರಿಗೆ ಮಾಡಿದ ಆತಿಥ್ಯವನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು. ಸಾಧಾರಣವಾದ ಹಸುವಿಗೆ ಸಂಕುಚಿತಸ್ವಭಾವ. ಕರೆದವರಿಗೆ ಹಾಲನ್ನು ಪೂರ್ತಿಯಾಗಿ ಕೊಡದೆ ಸೇದಿಕೊಳ್ಳುವ ಹಸುಗಳೂ ಉಂಟು; ತನ್ನ ಕರುವಿಗೆ ಮಾತ್ರ ಹಸು ಸೊರು ಇಳಿಸುತ್ತದೆ. ಕಾಮಧೇನು ಹಾಗಲ್ಲ; ಅದನ್ನು ಒಲಿಸಿಕೊಂಡವರಿಗೆ ಬೇಕಾದಷ್ಟು, ಕಾಮಿತಾರ್ಥಗಳನ್ನೆಲ್ಲ ಕರೆಯುತ್ತದೆ. ಭಗವಂತನೂ ಹಾಗೆಯೇ; ಮಳೆ ಬಂದರೆ ಬಡವರು, ಬಲ್ಲಿದರು ಎಂಬ ತಾರತಮ್ಯವಿಲ್ಲದೆ ಎಲ್ಲರಿಗೂ ಒಂದೇ ಸಮನಾಗಿ ನೀರನ್ನು ಹೊಯ್ಯುವಂತೆ ಭಗವಂತನು ಭಕ್ತರಿಗೆಲ್ಲ ಇಷ್ಟಾರ್ಥಗಳನ್ನು ಕೊಡುತ್ತಿರುತ್ತಾನೆ. ಮಳೆನೀರು ಬಿದ್ದರೂ ಉಪಯೋಗಿಸಿಕೊಳ್ಳದೆ ಇರುವಂತೆ ಅಭಕ್ತರಾದವರು ಆತನ ಅನುಗ್ರಹವನ್ನು ಉಪಯೋಗಿಸಿಕೊಳ್ಳದೆ ಇರುತ್ತಾರೆ; ಅದು ಅವರ ಅಪರಾಧವೇ ಹೊರತು ಭಗವಂತನ ದಯೆಯಲ್ಲೇನೂ ಕೊರತೆಯಿರುವದಿಲ್ಲ. ಎಲ್ಲರಿಗೂ ಮನಶ್ಶಾಂತಿಯೂ ಸುಭಿಕ್ಷವೂ ಆಗಿರಲಿ ಎಂಬುದೇ ಆತನ ಸತ್ಸಂಕಲ್ಪವು. ಈಗ್ಗೆ ನಮಗೆ ಅಳತೆಯ ನೀರು, ಅಳತೆಯ ಬೆಳಕು, ಅಳತೆಯ ಗಾಳಿ - ಹೀಗೆ ಎಲ್ಲಾ ಪರಿಮಿತವಾಗಿರುದಕ್ಕೆ ನಮ್ಮ ಕೃತಕವಾದ ನಾಗರಿಕತೆಯೇ ಕಾರಣವಾಗಿರುತ್ತದೆ. ಭಗವಂತನು ತನ್ನನ್ನು ನಂಬಿದವರಿಗೆ ಯಾವಾಗ್ಗೆ ಏನು ಬೇಕೋ ಅದನ್ನು ಧಾರಾಳವಾಗಿ ಒದಗಿಸಿಕೊಡುತ್ತಾನೆ. ಭಗವಂತನಲ್ಲಿ ಯಾವ ಪರಿಚ್ಛೇದಕಾರಣವೂ ಇರುವದಿಲ್ಲ. ಆದ್ದರಿಂದ ಕಾಮಧುಕ್ ಎಂದು ಆತನನ್ನು ಕರೆಯುವದೂ ಕಾಮಧೇನುವನ್ನು ಆತನ ವಿಭೂತಿಯಾಗಿ ಎಣಿಸುವದೂ ಯುಕ್ತವಾಗಿರುತ್ತದೆ. ಬ್ರಿಸ್ಟೊಲ್‌ನಲ್ಲಿ ಒಂದು ಕ್ರಿಸ್ತಿಯನ್ ಅನಾಥಾಲಯವನ್ನು ಏರ್ಪಡಿಸಿದ ಜಾರ್ಜಮುಲ್ಲರ್ ಎಂಬಾತನ ಕಥೆಯನ್ನು ಕೆಲವು ದಿನಗಳ ಕೆಳಗೆ ಓದಿದೆನು. ಕೈಯಲ್ಲಿ ಒಂದು ಕಾಸೂ ಇಲ್ಲದೆ, ಯಾರೊಬ್ಬರನ್ನೂ ಇಂತಿಷ್ಟು ಸಹಾಯವು ತನಗೆ ಬೇಕೆಂಬುದನ್ನು ಪ್ರಾರ್ಥನೆಯಿಂದ ಪ್ರಕಟಿಸಿ ಪೀಡಿಸದೆ, ಆ ದೊಡ್ಡ ಅನಾಥಾಲಯವನ್ನು ಆತನು ಭಗವಂತನಲ್ಲಿರುವ ಅಚಲವಿಶ್ವಾಸದಿಂದಲೇ ನಡೆಯಿಸಿಕೊಂಡು ಬಂದ ಕಥೆಯು ಯಾರಿಗಾದರೂ ಭಗವಂತನ ಅಸೀಮಿತವಾದ ಔದಾರ್ಯವನ್ನು ನೆನಪಿಗೆ ತರುತ್ತದೆ. ಮುಲ್ಲರನಿಗೆ ಯಾವ ಯಾವ ಸಮಯಕ್ಕೆ ಎಷ್ಟು ಸಹಾಯವು ಬೇಕೋ ಅಷ್ಟನ್ನು ಅವನಿಗೆ ಅತ್ಯಂತ ಅಪರಿಚಿತರಾದವರು ಕೂಡ ಕಾಲಕ್ಕೆ ಸರಿಯಾಗಿ ಒದಗಿಸಿ ಕೊಡುತ್ತಿದ್ದರು. ಇದು ಭಗವಂತನ ಕಾಮಧೇನುತ್ವವನ್ನು ಸೂಚಿಸುವದೆಂದರೆ ಹೆಚ್ಚೆ?

# ೭೩. ಭಗವಂತನ ವಿಭೂತಿಗಳು ೧೦-(೨೮-೩೦)

(೧೫-೨-೪೮)

ವಿಭೂತಿಗಳನ್ನು ಹೇಳುವದು ಭಗವಂತನ ಸ್ಮರಣೆಯು ಬರುವದಕ್ಕೆ. ಅದರಿಂದ ಆನಂದವು ತಲೆದೋರುತ್ತದೆ. ಯಾವದನ್ನಾದರೂ ಎರಡೆರಡು ದೃಷ್ಟಿಯಿಂದ ನೋಡಬಹುದು. ಒಂದನೆಯದು ನಾನು ನನ್ನದೆಂಬ ದೃಷ್ಟಿ; ಎರಡನೆಯದು ಭಗವಂತನಿಗೆ ಸಂಬಂಧಿಸುವ ದೃಷ್ಟಿ. ಈ ಎರಡನೆಯದೇ ನಮಗೆ ಆನಂದವನ್ನು ಕೊಡುವದು. ದೃಷ್ಟಪದಾರ್ಥಗಳನ್ನು ಉದಾಹರಿಸುವಾಗ ಅವು ನಮಗೆ ಆಗಲೇ ವಿದಿತವಾಗಿರುತ್ತವೆ; ಆದರೆ ಅವುಗಳಲ್ಲಿ ಯಾವ ಅಂಶವು ವಿವಕ್ಷಿತವಾಗಿದೆ ಎಂಬುದು ಮುಖ್ಯ. ಅಧ್ಯಾತ್ಮವಿಚಾರಕ್ಕೆ ದೃಷ್ಟಾಂತವು ನೆಪಮಾತ್ರವಾಗಿರುತ್ತದೆ. ಏಣಿಯನ್ನು ನೆಪಮಾಡಿಕೊಂಡು ಅಟ್ಟಕ್ಕೆ ಏರುವಂತೆ ನಾವು ಆಯಾ ದೃಷ್ಟಾಂತವನ್ನು ನೆಪವಾಗಿ ಮಾಡಿಕೊಂಡು ಭಗವಂತನ ಚಿಂತನೆಗೆ ಏಣಿಯಾಗಿಸಿಕೊಳ್ಳಬೇಕು. ಆದರಿಂದ ಆನಂದವನ್ನು ತಂದುಕೊಂಡು ಅನುಭವಿಸಬೇಕು. ಭಗವಂತನು ನಮಗೆ ತಿಳಿದಿರುವ ದೃಷ್ಟಾಂತಗಳನ್ನೇ ಕೊಡುತ್ತಾನೆ. ಅವುಗಳು ಸುಖಕ್ಕೂ ದುಃಖಕ್ಕೂ ದಾರಿಯಾಗಿ ಉಪಯೋಗಿಸಿಕೊಳ್ಳುವದಕ್ಕೆ ಬರುತ್ತವೆ. ಆದರೆ ಆನಂದಕಾರಣವಾಗಿಯೇ ಅವು ವಿವಕ್ಷಿತವಾಗಿರುತ್ತವೆ. ಅದನ್ನೇ ನಾವು ನೋಡಬೇಕು. ಒಂದು ಈಸೋಪನ ಕಥೆಯಿದೆ: ಎರಡು ಏತದ ಗಡಿಗೆಗಳು ನೀರು ತುಂಬಿತುಂಬಿ ಹೊರಹುಯ್ಯುತ್ತಾ ಇದ್ದವು. ಅವುಗಳಲ್ಲಿ ಒಂದು ಇನ್ನೊಂದನ್ನು ಕುರಿತು "ಅಣ್ಣ, ನೋಡಿದೆಯ, ನಾವು ಎಷ್ಟೆಷ್ಟು ತುಂಬಿಕೊಂಡು ಮೇಲಕ್ಕೆ ಬಂದರೂ ಬರಿದಾಗುತ್ತಲೇ ಇರುವೆವೆಲ್ಲ!" ಎಂದು ಗೊಣಗಿಕೊಂಡಿತಂತೆ; ಆಗ ಆ ಇನ್ನೊಂದು ಗಡಿಗೆ "ತಮ್ಮ, ಹಾಗೆನ್ನಬೇಡ; ನಾವು ಎಷ್ಟೆಷ್ಟು ಮತ್ತೊಬ್ಬರಿಗೆ ಕೊಟ್ಟರೂ ಮತ್ತೆಮತ್ತೆ ತುಂಬಿಕೊಳ್ಳುತ್ತಲೇ ಇರುವೆವಲ್ಲವೆ?" ಎಂದಿತಂತೆ! ಮಹಾತ್ಮಗಾಂಧಿಯವರನ್ನು ದಕ್ಷಿಣಆಫ್ರಿಕದಲ್ಲಿ ಯಾರೋ ಕಲ್ಲಿನಿಂದ ಹೊಡೆದರು, ರಕ್ತವು ಕಾಣಿಸಿಕೊಂಡಿತು; ಆಗ ಅವರು "ಸರಿ, ಈ ರಕ್ತವು ನಮಗೂ ನಿಮಗೂ ಸಂಬಂಧವನ್ನುಂಟುಮಾಡಿತು" ಎಂದರಂತೆ! ಎಂಥ ವಿಶಾಲಹೃದಯ, ಮಹಾತ್ಮರದು! ಭಗವಂತನು ನಾವು ಕಂಡಿರುವ ಎಷ್ಟೋ ವಸ್ತುಗಳನ್ನು ಈಗ ಉದಾಹರಿಸುತ್ತಾನೆ; ಆದರೆ ಅವುಗಳಲ್ಲಿ ತನ್ನ ವಿಭೂತಿಯನ್ನು ಖ್ಯಾಪಿಸುವುದೇ ಮುಖ್ಯ ಉದ್ದೇಶ. ಕಾಗದದ ಮೇಲುವಿಳಾಸ ಅಂಚೆಯ ಮನೆಯವರಿಗೆ ಮಾತ್ರ; ಕಾಗದವನ್ನು ಓದಿಕೊಳ್ಳುವವರಿಗೆ ಒಳಗಿನ ವಿಷಯವೇ ಮುಖ್ಯ. ಅಲ್ಲವೆ? ಈಗ ನಾವು ವಿಚಾರಮಾಡುವ ವಿಭೂತಿಗಳ ಒಳತಿರುಳು ಯಾವದು - ಎಂಬುದನ್ನು ತಿಳಿದುಕೊಳ್ಳೋಣ.

"**ಪ್ರಜನಶ್ಚಾಸ್ಮಿ ಕಂದರ್ಪಃ**" ಪ್ರಜೋತ್ಪತ್ತಿಗೆ ಕಾರಣವಾದ ಕಾಮವು ನಾನು-ಎಂದು ಭಗವಂತನು ಅಪ್ಪಣೆಕೊಡಿಸಿರುತ್ತಾನೆ. ಕಾಮ ಎಂಬ ಶಬ್ದವನ್ನು ಕೇಳಿದೊಡನೆ ಸಾಧಾರಣಜನರಿಗೆ ಕೆಟ್ಟಕಲ್ಪನೆ ಬರುತ್ತದೆ. ಹೋಳಿಹುಣ್ಣಿಮೆಯನ್ನು ಉಪಯೋಗಿಸುವ ಬಗೆ ಎರಡು: ಕೆಲವರು ಭಂಡಪದಗಳ ನೆನಪುಮಾಡಿಕೊಂಡು ಹಾಳಾಗಬಹುದು; ಮತ್ತೆ ಕೆಲವರು ಭಕ್ತವರನಾದ ಪ್ರಹ್ಲಾದನ ಜನ್ಮದಿನವದು, ವೈಷ್ಣವಸಂಪ್ರದಾಯವನ್ನು ಬಂಗಾಲಕ್ಕೆಲ್ಲ ಅನುಗ್ರಹಿಸಿದ ಶ್ರೀಕೃಷ್ಣಚೈತನ್ಯ ಮಹಾಪ್ರಭುವಿನ ಅವತಾರದಿನವದು! ಎಂದು ನೆನಪಿಗೆ ತಂದುಕೊಂಡು ಭಕ್ತಿರಸದಿಂದ ಉಕ್ಕೇರಬಹುದು! ಆದ್ದರಿಂದ ಇಲ್ಲಿ ಕಾಮವೆಂಬ ಮಾತಿನಲ್ಲಿರುವ ಸ್ವಾರಸ್ಯವನ್ನು ಅರಿತುಕೊಳ್ಳಬೇಕಾದರೆ ಇಚ್ಛೆ ಬಂದಾಗಲೆಲ್ಲ ದಂಪತಿಗಳು ಕೂಡುವದು ಎಂಬರ್ಥವನ್ನು ಕೈಬಿಟ್ಟು ಪ್ರಜಾಸಂತತಿ ಗಾಗಿ ದಂಪತಿಗಳು ಕೂಡುವದು ಎಂಬ ಪವಿತ್ರವಾದ ಅರ್ಥವನ್ನು ಸ್ವೀಕರಿಸಬೇಕು. "ನಿಷೇಕದಿಂದ ಸ್ಮಶಾನದವರೆಗಿನ ಸಂಸ್ಕಾರಗಳನ್ನು ಪಡೆದ ಮಹಾತ್ಮರಿಗೆ ಈ ಶಾಸ್ತ್ರದಲ್ಲಿ ಅಧಿಕಾರವು" ಎಂದು ಮನುವು ತನ್ನ ಧರ್ಮಶಾಸ್ತ್ರದಲ್ಲಿ ಬರೆದುಕೊಂಡಿರುತ್ತಾನೆ. ನಿಷೇಕವೆಂಬುದೊಂದು ವೈದಿಕಸಂಸ್ಕಾರವು. ಪವಿತ್ರವಾದ ಪ್ರಜೋತ್ಪತ್ತಿಗೆ ಕಾರಣವಾದದ್ದು ಅದು - ಎಂಬ ಭಾವನೆ ನಮ್ಮ ಮನಸ್ಸಿನಲ್ಲಿ ಮೊದಲು ಬರಲಿ. ಆಗ ಶುದ್ಧವಾದ ಕಾಮದಲ್ಲಿ ಭಗವಂತನ ವಿಭೂತಿಯನ್ನು ನೋಡುವದಕ್ಕೆ ಬರುತ್ತದೆ. "ನಾನು ಬಹುವಾಗುವೆನು, ಪ್ರಜೆಗಳನ್ನು ಸೃಷ್ಟಿಮಾಡುವೆನು" ಎಂದು ಪರಮಾತ್ಮನು ಕಾಮಿಸಿದನು -ಎಂದು ಶ್ರುತಿಯಲ್ಲಿದೆ. ಭಗವಂತನ ಕಾಮಕ್ಕೂ ನಮ್ಮ ಕಾಮಕ್ಕೂ ಇರುವ ತಾರತಮ್ಯವೇನು? - ಎಂಬುದನ್ನು ಇಲ್ಲಿ ಮನದಂದುಕೊಳ್ಳಬೇಕು. ಭಗವಂತನು ಸ್ವತಂತ್ರವಾಗಿ ಕಾಮಿಸುತ್ತಾನೆ, ನಮ್ಮಂತೆ ಧರ್ಮಾಧರ್ಮಗಳಿಗೆ ವಶನಲ್ಲ. ನಮ್ಮಗಳ ಕಾಮವು ಮಾಡಬಾರದ್ದನ್ನೆಲ್ಲ ಮಾಡಿಸುತ್ತದೆ. ನಾವು ಧರ್ಮಾಧರ್ಮಗಳಿಗೆ ಅಡಿಯಾಳಾಗಿರುತ್ತೇವೆ. ಭಗವಂತನ ಕಾಮವು ಭಗವಂತನಂತೆಯೇ ಪವಿತ್ರವಾಗಿರುತ್ತದೆ; ಆದ್ದರಿಂದಲೇ ಆತನು ಸತ್ಯಕಾಮನು. ಕಾಮನನ್ನು ಭಗವಂತನು ಎಂದು ಭಾವಿಸುವ ಅಭ್ಯಾಸವನ್ನು ಮಾಡಿದರೆ ಸಂಯಮವುಂಟಾಗುತ್ತದೆ. ಆಗ ಕಾಮನ ಪೂಜೆ ಎಂಬ ಆಚಾರಕ್ಕೆ ಒಂದು ಬೆಲೆ ಬರುತ್ತದೆ. ಕಾಮನಪಾಡ್ಯದ ದಿನ ಎಷ್ಟೋ ಜನ ಮಕ್ಕಳಿಗೆ ಆರತಿಮಾಡುತ್ತಾರೆ. ಇದೊಂದು ಒಳ್ಳೆಯ ಆಚಾರವು. ಯಾರ ಕಾಮವು ಪವಿತ್ರವಾಗಿರುತ್ತದೆಯೋ ಅವರ ಮಕ್ಕಳು ಸದ್ಗುಣಿಗಳಾಗಿ ಹುಟ್ಟುತ್ತಾರೆ. ಪವಿತ್ರರಾದ ತಂದೆತಾಯಿಗಳಿಂದ ಜನಿಸಿ ಅವರಿಂದಲೂ ಗುರುಗಳಿಂದಲೂ ಶಿಕ್ಷೆಯನ್ನು ಹೊಂದಿರುವ ಮಕ್ಕಳು ಈ ಭೂಮಿಗೆ ಭೂಷಣ.

**"ಸರ್ಪಾಣಾಮಸ್ಮಿ ವಾಸುಕಿಃ"** ಸರ್ಪಗಳಲ್ಲಿ ವಾಸುಕಿಯು ಭಗವಂತನ ವಿಭೂತಿಯಾಗಿರುತ್ತಾನೆ. ಸರ್ಪವೆಂಬ ಹೆದರಿಕೆಯಿಂದ ಪೂಜೆಮಾಡುವ ಮೂಢಭಕ್ತಿಯನ್ನು ಇಲ್ಲಿ ಹೇಳಿಲ್ಲ. ವಾಸುಕಿಯೆಂಬ ಸರ್ಪರಾಜನನ್ನು ಮಂದರಪರ್ವತಕ್ಕೆ ಸುತ್ತಿ ದೇವತೆಗಳೂ, ಅಸುರರೂ ಸಮುದ್ರವನ್ನು ಕಡೆಯುವದಕ್ಕೆ ಪ್ರಯತ್ನಿಸಬೇಕಾಗಿತ್ತು. ಆಗ ವಾಸುಕಿಯು "ನನ್ನನ್ನು ಉಪಯೋಗಿಸುವಾಗ ನಿಮಗೆ ಆಗಬಹುದಾದ ತೊಂದರೆಗೆ ನೀವು ಸಿದ್ಧರಾಗಿರುತ್ತೀರಷ್ಟೆ?" ಎಂದು ಕೇಳಿದನು. ಇಬ್ಬರೂ ಒಪ್ಪಿದರು. ಕಡೆಯುತ್ತಿದ್ದಾಗ ಅಸುರರು ಹೆಮ್ಮೆಯಿಂದ ಬಾಲವನ್ನು ದೇವತೆಗಳಿಗೆ ಬಿಟ್ಟು ಬಾಯಿಯ ಕಡೆಯೇ ತಾವು ಹಿಡಿದುಕೊಂಡರು. ಅವನ ಮುಖದಿಂದ ಹೊರಟ ವಿಷದ ಜ್ವಾಲೆಯನ್ನು ತಡೆಯಲಾರದೆ ಸಂಕಟಪಡುತ್ತಿದ್ದರು. ಅಧ್ಯಾತ್ಮದೃಷ್ಟಿಯಿಂದ ನೋಡಿದರೆ ನಮ್ಮ ಮನಸ್ಸೇ ವಾಸುಕಿಯು; ಅಹಂಕಾರವೇ ಇವನ ಮುಖದ ಕಡೆ. ಅಮಾನಿತ್ವವೇ ಇವನ ಬಾಲದ ಕಡೆ. ಅಹಂಕಾರವು ಉತ್ಸಾಹದಿಂದ ಉಕ್ಕಬೇಕು. ಆಗ ಅಮೃತವು ಉತ್ಪತ್ತಿಯಾಗುವದು. ವಾಸುಕಿಯು ಭಗವದ್ಭಕ್ತರಲ್ಲಿ ಹೆಚ್ಚಿನವನಾದ್ದರಿಂದಲೂ ಅಮೃತೋತ್ಪತ್ತಿಗೆ ನೆರವಾದವನಾದ್ದರಿಂದಲೂ ಭಗವಂತನ ವಿಭೂತಿಯಾಗಿರುತ್ತಾನೆ.

ನಾಗರಲ್ಲಿ ಅನಂತನು ಒಬ್ಬ ಮಹಾವಿಭೂತಿಯು. ಅನಂತನು ಅಥವಾ ಶೇಷನು ಮಹಾವಿಷ್ಣುವಿನ ಶಯ್ಯಾರೂಪನು. ವಿಷ್ಣುವಿನ ಜೊತೆಯಲ್ಲಿ ಅನೇಕ ವೇಳೆ ಭೂಮಿಯಲ್ಲಿ ಅವತರಿಸಿ ಧರ್ಮೋದ್ಧಾರಕ್ಕೆ ನೆರವಾಗಿರುತ್ತಾನೆ. ಈತನು ಭೂಮಿಯನ್ನು ತನ್ನ ಮಹಾಶಕ್ತಿಯಿಂದ ಒಂದು ಗೊತ್ತಾದ ಸ್ಥಾನದಲ್ಲಿ ನಿಲ್ಲಿಸಿಕೊಂಡಿರುತ್ತಾನೆ. ಸಾವಿರ ಹೆಡೆಗಳುಳ್ಳವನೆಂದು ಪುರಾಣಗಳಲ್ಲಿ ವರ್ಣನೆಯಿದೆ; ವಸ್ತುಸ್ವರೂಪವನ್ನು ಬಗೆಬಗೆಯಾಗಿ ಬಣ್ಣಿಸುವದರಲ್ಲಿ ನಿಪುಣನು ಸರ್ವಜ್ಞಕಲ್ಪನು ಎಂದು ಕವಿಗಳು ಉತ್ಪ್ರೇಕ್ಷಿಸುತ್ತಾರೆ. ಈತನು ವಿಶ್ವರೂಪನಾದ್ದರಿಂದ ಅನಂತನೆನಿಸಿರುತ್ತಾನೆ.

"ವರುಣೋ ಯಾದಸಾಮಹಮ್" ಜಲಜಂತುಗಳಿಗೂ ಜಲದೇವತೆಗಳಿಗೂ ಅಧಿಪತಿಯು, ಮತ್ತು ಅಷ್ಟದಿಕ್ಪಾಲಕರಲ್ಲಿ ಒಬ್ಬನು ಎಂದು ವರುಣನನ್ನು ಪುರಾಣಗಳಲ್ಲಿ ವರ್ಣಿಸಿದೆ. ಅಥರ್ವವೇದದಲ್ಲಿ ವರುಣನೆಂಬುದು ಪರಮಾತ್ಮನಿಗೆ ಮತ್ತೊಂದು ಹೆಸರೆಂದು ಭಾವಿಸುವಷ್ಟು ಉತ್ತಮಸ್ಥಾನವನ್ನು ಇವನಿಗೆ ಕೊಟ್ಟಿರುತ್ತದೆ. ಈಗಲೂ ಸಂಧ್ಯಾವಂದನೆಯಲ್ಲಿ ವರುಣನ ಹೆಸರಿನಿಂದ ಪರಮಾತ್ಮನನ್ನು ಧ್ಯಾನಮಾಡುವ ಮಂತ್ರವನ್ನು ಕೆಲವರು ನಿತ್ಯವೂ ಪಠಿಸುತ್ತಾರೆ. ವರುಣನು ಮಹಾಜ್ಞಾನಿಯೆಂದೂ ಮಗನಾದ ಭೃಗುವಿಗೆ ಆನಂದಸ್ವರೂಪವಾದ ಪರಬ್ರಹ್ಮದ ತತ್ತ್ವವನ್ನು ಉಪದೇಶಿಸಿದನೆಂದೂ ತೈತ್ತಿರಿಯೋಪನಿಷತ್ತಿನಲ್ಲಿ ವರ್ಣಿಸಿರುತ್ತದೆ. ವರುಣನ ಅನುಗ್ರಹದಿಂದ

ಜಲವು ಶುದ್ಧಿಯಾಗುವದು. ಸ್ನಾನಾದಿಗಳನ್ನು ಮಾಡುವವರಿಗೆ ಆತನ ಪ್ರಸಾದದಿಂದ ಜಲಜಂತುಗಳ ಬಾಧೆಯು ತಪ್ಪುವದು. ದೇಹವೂ ಮನಸ್ಸೂ ಶುದ್ಧಿಯಾಗುವವು. ಈ ಕಾರಣದಿಂದ ಆತನು ಭಗವಂತನ ವಿಭೂತಿ ಎನಿಸಿರುತ್ತಾನೆ.

"ಪಿತೃಣಾಮರ್ಯಮಾ ಚಾಸ್ಮಿ" ಪಿತೃಗಳಲ್ಲಿ ಅರ್ಯಮನ ಹೆಚ್ಚುಗಾರಿಕೆ ಏನೆಂಬುದು ನನಗೆ ಈಗ ಹೊಳೆಯಲಿಲ್ಲ. ಪುರಾಣಗಳಿಂದ ತಿಳಿದುಕೊಳ್ಳತಕ್ಕದ್ದಾಗಿದೆ.

"ಯಮಃ ಸಂಯಮತಾಮಹಮ್" ಯಮನೆಂಬ ಹೆಸರನ್ನು ಕೇಳಿದರೇ ಜನರು ನಡುಗುತ್ತಾರೆ. ಏಕೆಂದರೆ ಬಹುಮಟ್ಟಿಗೆ ಜನರು ಪಾಪವನ್ನು ಮಾಡಿಯೇ ತೀರುತ್ತಾರೆ. ರಾತ್ರೆ ಹೊತ್ತು ಪೊಲೀಸಿನವರು ಬಂದರೆ ಕಳ್ಳನು ಅಂಜಿಕೊಳ್ಳುತ್ತಾನೆ, ಆದರೆ ಧರ್ಮಿಷ್ಠನಾದ ನಾಗರಿಕನು ಸಂತೋಷಪಡುತ್ತಾನೆ. ಗರುಡಪುರಾಣದಲ್ಲಿ ಸಾರೋದ್ಧಾರಭಾಗದಲ್ಲಿ ಸತ್ತವರು ಹೋಗುವ ಮಾರ್ಗವನ್ನು ವರ್ಣಿಸಿದೆ. ಪಾಪಿಗಳು ಹೋಗುವ ದಾರಿಯಲ್ಲಿ ಬಹಳ ಕಷ್ಟವನ್ನು ಅನುಭವಿಸಬೇಕಾಗುತ್ತದೆ; ಯಮನ ಅಪ್ಪಣೆಯಿಂದ ಅವರು ತಡೆಯಲಾಗದ ನರಕಯಾತನೆಯನ್ನು ಅನುಭವಿಸಬೇಕಾಗುತ್ತದೆ ಎಂದು ಹೇಳಿದೆ. ಆದರೆ ಯಾರು ಭಗವಂತನಾದ ವಿಷ್ಣುವಿನ ಭಕ್ತರಾಗಿರುವರೋ, ಯಾರು ದ್ವಾದಶಾಕ್ಷರಚಿಂತಕರಾಗಿರುವರೋ ಅವರು ಉತ್ತಮವಾದ ಆನಂದದಾಯಕ ವಾದ ದೇವಯಾನಮಾರ್ಗದಿಂದ ಬರುವರು. ಅವರು ಬಂದಕೂಡಲೆ ಯಮನು ಎದ್ದು ಅವರನ್ನು ಇದಿರುಗೊಳ್ಳುವನು. ಉತ್ತಮಭಕ್ತರನ್ನು ತನ್ನ ಅರ್ಧಾಸನದಲ್ಲಿ ಕುಳ್ಳಿರಿಸುವನು. ಪಾಪಿಗಳನ್ನು ಕುರಿತು "ಎಲಾ, ನೀವೂ ಕ್ಲೇಶನಾಶನನಾದ ಕೇಶವನನ್ನು ಏತಕ್ಕೆ ಈ ಮಹಾತ್ಮರಂತೆ ಚಿಂತಿಸಲಿಲ್ಲ?" ಎಂದು ಕೇಳುವನು - ಎಂದು ವರ್ಣಿಸಿದೆ. ಆದ್ದರಿಂದ ಯಮನನ್ನು 'ಧರ್ಮರಾಯ'ನೆಂದು ಕರೆಯುವದು ಅನ್ವರ್ಥವಾಗಿರುತ್ತದೆ. ಧರ್ಮಕ್ಕನುಗುಣವಾಗಿ ದಂಡಿಸುವವರಲ್ಲಿ ಸರ್ವಶ್ರೇಷ್ಠ ನಾಗಿರುವದರಿಂದ ಸಂಯಮಮಾಡುವವರಲ್ಲಿ ಯಮನು ಎಂದು ಭಗವಂತನು ಅಪ್ಪಣೆಕೊಡಿಸಿರುತ್ತಾನೆ. ಯಮನು ಮತ್ತೊಂದು ದೃಷ್ಟಿಯಿಂದಲೂ ಭಗವಂತನ ಹೆಚ್ಚಿನ ವಿಭೂತಿಯಾಗಿರುತ್ತಾನೆ. ಅದೇನೆಂದರೆ ಆತನು ಮಹಾಜ್ಞಾನಿಯಾಗಿರು ತ್ತಾನಾದ್ದರಿಂದ ಇಂದ್ರಿಯಸಂಯಮವನ್ನು ಮಾಡುವವರಲ್ಲಿ ಶ್ರೇಷ್ಠನೆನಿಸಿಕೊಂಡಿರುತ್ತಾನೆ. ನಚಿಕೇತನು ಅವನಿಂದ ಪಡೆದುಕೊಂಡ ವರಗಳಲ್ಲಿ ಮೃತ್ಯುವನ್ನು ಮೀರಿದ ಆತ್ಮಸ್ವರೂಪವನ್ನು ಕುರಿತ ಜ್ಞಾನವೂ ಒಂದು. ದುಶ್ಚರಿತವನ್ನು ಬಿಡದೆ, ಮನಸ್ಸನ್ನು ಶಾಂತಿಯಿಂದಿಟ್ಟುಕೊಳ್ಳುವದಕ್ಕೆ ಯತ್ನಿಸದೆ ಮನಸ್ಸನ್ನು ಪರಮಾತ್ಮನಲ್ಲಿ ನಿಲ್ಲಿಸಿಕೊಳ್ಳುವ ಸಾಧನವನ್ನು ಮಾಡದೆ ಇರುವವನಿಗೆ ಯಾವನಿಗೂ ಆತ್ಮಜ್ಞಾನವುಂಟಾಗಲಾರದೆಂದು ಯಮನು ನಚಿಕೇತನಿಗೆ ಉಪದೇಶಿಸಿದನು; ಆ ಉಪದೇಶಕ್ಕೆ ಆತನೇ ಉತ್ತಮ

ಉದಾಹರಣೆಯೆನ್ನಬಹುದು. ಶ್ರೇಷ್ಠವಾದ ತತ್ತ್ವಜ್ಞಾನದಿಂದ ಕೂಡಿರುವ ಆಧಿಕಾರಿಕ ಪುರುಷನಾದ ಯಮನನ್ನು ಭಗವಂತನು ತನ್ನ ವಿಭೂತಿ ಎಂದು ಗಣಿಸಿರುವದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

ಇನ್ನು "ದೈತ್ಯರಲ್ಲಿ ಪ್ರಹ್ಲಾದನು" ಎಂಬ ವಿಭೂತಿಯ ಕಡೆಗೆ ವಿಮರ್ಶೆಯ ಕಣ್ಣನ್ನು ಹೊರಳಿಸೋಣ. ಜೀವರಲ್ಲಿ ದೈತ್ಯರು, ದೇವತೆಗಳು - ಎಂದು ಎರಡು ಗೊತ್ತಾದ ಪಂಗಡಗಳಾಗಿ ಕೆಲವರು ವಿಂಗಡಿಸಿಕೊಂಡಿರುತ್ತಾರೆ. ಇದು ಸರಿಯಲ್ಲ. ದೈತ್ಯರು ಎಂದರೆ ಸಹಜವಾಗಿ ಹಿಂಸಾಪ್ರಧಾನರಾಗಿರುವವರು ಎಂದಿಷ್ಟೇ ತಿಳಿಯಬೇಕು. ದೈತ್ಯರು ರಜೋಗುಣಪ್ರಧಾನರಾಗಿರುತ್ತಾರೆ; ಆದರೆ ಅವರಲ್ಲಿ ಯಾರೂ ಎಂದಿಗೂ ಸಾತ್ತ್ವಿಕವೃತ್ತಿಗೆ ತಿರುಗಲೇ ಆರರು ಎಂದು ಭಾವಿಸುವದು ತಪ್ಪು. ಸರಿಯಾದ ಸಂದರ್ಭವು ದೊರೆತರೆ ಎಂಥ ದೈತ್ಯನೂ ಸತ್ಪುರುಷನಾಗಿ ಮಾರ್ಪಡಬಹುದು ಎಂಬುದನ್ನು ನೆನಪಿಟ್ಟರೆ ಎಂಥ ಪಾಪಿಗಳಿಗೂ ಉತ್ತಮಮಾರ್ಗಕ್ಕೆ ಹೋಗುವದಕ್ಕೆ ಅವಕಾಶವಿದೆ ಎಂಬ ಭರವಸೆಯುಂಟಾಗುತ್ತದೆ. ಸತ್ಸಂಗವಶದಿಂದ ದೈತ್ಯರ ವಂಶದಲ್ಲಿಯೇ ಸದ್ಗುಣಪೂರ್ಣನಾಗಿ ಹುಟ್ಟಿದ ಮಹಾತ್ಮನು, ಪ್ರಹ್ಲಾದನು. ಅವನು ಪಾಠಶಾಲೆಯಲ್ಲಿ ಹುಡುಗರಿಗೆ ಮಾಡಿದ ಬೋಧೆಯೇನು? ಪರಮಾತ್ಮವಿದ್ಯೆಯು ಮೊಟ್ಟಮೊದಲು ಎಲ್ಲರೂ ಸಂಪಾದಿಸಿಕೊಳ್ಳಬೇಕಾದ ವಿದ್ಯೆ; ಆಮೇಲೆ ಯಾವ ವಿದ್ಯೆಯನ್ನಾದರೂ ಕಲಿತುಕೊಳ್ಳಬಹುದು. ಪರಮಾತ್ಮನು ಎಲ್ಲರಲ್ಲಿಯೂ ಸಮನಾಗಿರುತ್ತಾನೆ; ಆತನಿಗೆ ಪ್ರಿಯರಾದವರು, ಅಪ್ರಿಯರಾದವರು ಎಂದು ಜೀವರಲ್ಲಿ ಭೇದಭಾವನೆಯಿರುವದಿಲ್ಲ. ಆತನು ಎಲ್ಲರನ್ನೂ ಒಂದೇ ಕಣ್ಣಿನಿಂದ ನೋಡುತ್ತಾನೆ; ಭಕ್ತಿಯಿಂದ ಭಜಿಸುವವರನ್ನು ಯಾರನ್ನಾದರೂ ಕಾಪಾಡುತ್ತಾನೆ - ಎಂಬುದೇ ಪ್ರಹ್ಲಾದನ ದರ್ಶನವು. ವಂಶದಿಂದ ದೈತ್ಯನಾದರೂ ಗುಣದಿಂದ ದೇವತೆ ಎನಿಸಿಕೊಂಡನು ಪ್ರಹ್ಲಾದನು. ಬ್ರಾಹ್ಮಣಾದಿವರ್ಣಗಳಲ್ಲಿಯೂ ಹೀಗೆಯೇ; ಜಾತಿಗಿಂತಲೂ ಗುಣಕ್ಕೆ ಹೆಚ್ಚಿನ ಬೆಲೆಯನ್ನು ಕೊಡಬೇಕು. ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವನು ಶೂದ್ರಗುಣಗಳಿಂದ ಕೂಡಿದ್ದರೆ ಅವನನ್ನು ಶೂದ್ರನೆಂದೇ ಭಾವಿಸಬೇಕೆಂದೂ ಶೂದ್ರಜಾತಿಯಲ್ಲಿ ಹುಟ್ಟಿದವನಾದರೂ ಬ್ರಾಹ್ಮಣಗುಣಗಳಿಂದ ಕೂಡಿದ್ದರೆ ಅವನನ್ನು ಬ್ರಾಹ್ಮಣನೆಂದೇ ಭಾವಿಸಬೇಕೆಂದೂ ಭಾರತದಲ್ಲಿ ಬರೆದಿದೆ. "ಅನ್ತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" ನಮ್ಮ ಸುತ್ತಲೂ ಏನೇನು ಕಾಣಿಸುತ್ತದೆಯೋ ಯಾವಯಾವದರ ವಿಷಯವಾಗಿ ನಾವು ಕೇಳಿರುವೆವೋ ಅದೆಲ್ಲವೂ ಒಳಗೂ ಹೊರಗೂ ನಾರಾಯಣನಿಂದಲೇ ವ್ಯಾಪ್ತವಾಗಿರುತ್ತದೆ ಎಂಬ ಶ್ರುತಿಯನ್ನು ಸುಮ್ಮನೆ ಕಿವಿಯಲ್ಲಿ ಕೇಳಿದವನಲ್ಲ, ಪ್ರಹ್ಲಾದನು; ಅದನ್ನು ಮನಗಂಡಿದ್ದವನು! ಬ್ರಹ್ಮವನ್ನು

ಅರಿತವನು ಬ್ರಹ್ಮವೇ ಎಂದು ಶ್ರುತಿಯಲ್ಲಿದೆ. ಆದ್ದರಿಂದ ಶಾಸ್ತ್ರದೃಷ್ಟಿಯಿಂದ ಭಗವತ್ ಸ್ವರೂಪನೇ ಆಗಿದ್ದ ಪ್ರಹ್ಲಾದನನ್ನು ಇಲ್ಲಿ ಭಗವಂತನ ವಿಭೂತಿ ಎಂದು ಕರೆದಿರುವದು ಬಹು ಸ್ವಲ್ಪವಾಗಿ ಹೇಳಿದಂತಾಗಿದೆ.

"ಕಾಲಃ ಕಲಯತಾಮಹಮ್" ಮನುಷ್ಯನು ಪುಣ್ಯವನ್ನು ಮಾಡಲಿ, ಪಾಪವನ್ನು ಮಾಡಲಿ, ಸುಖವನ್ನು ಅನುಭವಿಸಲಿ, ದುಃಖವನ್ನು ಅನುಭವಿಸಲಿ, ಹೇಗೂ ಕಾಲವೂ ಕಳೆಯುತ್ತಲೇ ಇರುವದು. ಕಾಲದಲ್ಲಿ ನಾವು ಮಾಡುವದನ್ನೆಲ್ಲ ಯಾರಾದರೂ ರಿಜಿಸ್ಟರುಮಾಡಿ ಬರೆದಿಟ್ಟರೆ ನಮ್ಮ ಯೋಗ್ಯತೆ ತಿಳಿದೀತು! ಕಾಲನಿಗೆ ಗೊತ್ತಿಲ್ಲದಂತೆ ಯಾವದನ್ನು ತಾನೆ ನಾವು ಮಾಡಲಾಪೆವು? ನಮ್ಮ ಒಳ್ಳೆಯ ಕೆಟ್ಟ ಆಲೋಚನೆಗಳೆಲ್ಲವೂ ನಮ್ಮ ಮೆದುಳಿನಲ್ಲಿ ಹೀಗೆ ರಿಜಿಸ್ಟರಾಗುತ್ತಿರುವವು. ತಟ್ಟೆಯಲ್ಲಿ ಹಾಕಿದ ಮರಳನ್ನು ಅಲುಗಾಡಿಸುತ್ತಿದ್ದರೆ ಮರಳಿನ ಕಣಗಳು ಎಷ್ಟು ಸ್ಥಾನದ ಬದಲಾವಣೆಯನ್ನು ಹೊಂದಬಹುದೋ ಅಷ್ಟೇ ಬದಲಾವಣೆಗಳನ್ನು ನಮ್ಮ ಮೆದುಳಿನ ಜೀವಕಣಗಳೂ (cells) ಹೊಂದುತ್ತಿರುವವು. ಚಿತ್ರಗುಪ್ತರು ನಮ್ಮ ಕರ್ಮಗಳೆಲ್ಲವನ್ನೂ ಲೆಕ್ಕದಲ್ಲಿ ಬರೆದಿಡುವರೆಂದು ಪುರಾಣಗಳಲ್ಲಿದೆ. ಕಾಲನು ಈ ದೇವತೆಗಳನ್ನು ಪ್ರತಿನಿಧಿಯಾಗಿ ಉಪಯೋಗಿಸಿಕೊಳ್ಳುವನೆಂದು ಹೇಳಬಹುದು. ನಮ್ಮ ಶರೀರದಲ್ಲಿಯೂ ಇಂದ್ರಿಯಗಳಲ್ಲಿಯೂ ಮನಸ್ಸಿನಲ್ಲಿಯೂ ಆಗಿಂದಾಗ್ಗೆ ನಮಗೆ ತಿಳಿಯದಂತೆಯೇ ಆಗುತ್ತಿರುವ ಮಾರ್ಪಾಡುಗಳು ಈ ಚಿತ್ರಗುಪ್ತರ, ಈ ಕಾಲನ, ರಿಕಾರ್ಡುಗಳೆಂತ ಭಾವಿಸಬಹುದು. ಕಾಲನ ಲೆಕ್ಕವು ಸ್ವಲ್ಪವೂ ಹೆಚ್ಚು ಕಡಿಮೆಯಾಗುವದಿಲ್ಲ. ಅಂಥ ಕರಾರುವಾಕ ಬರೆದಿಡುವ ಕರಣಿಕನವನು! 'ಕಾಲಃ ಪಚತಿ ಭೂತಾನಿ', 'ಕಾಲೋ ಹಿ ದುರತಿಕ್ರಮಃ' ಕಾಲನು ಪ್ರಾಣಿಗಳನ್ನು ಬೇಯಿಸುತ್ತಾನೆ, ಪಕ್ವ ಮಾಡುತ್ತಾನೆ; ಕಾಲನನ್ನು ಮೀರುವದು ಯಾರಿಗೂ ಆಗುವದಿಲ್ಲ - ಎಂದು ಭಾರತದಲ್ಲಿ ವರ್ಣಿತವಾಗಿರುತ್ತದೆ. ಇಂಥ ಕಾಲನನ್ನು ಭಗವಂತನೆಂದು ಉಪಾಸನೆಮಾಡಬೇಕು. ಆಗ ಭಗವಂತನು ವಿಶ್ವತಶ್ಚಕ್ಷು, ಎಲ್ಲೆಲ್ಲಿಯೂ ನಾವು ಮಾಡುತ್ತಿರುವ ಕರ್ಮಗಳನ್ನು ನೋಡುತ್ತಿರುವನು ಎಂಬುದು ನಮಗೆ ಮನದಟ್ಟಾಗುವದು.

"ಮೃಗಾಣಾಂ ಚ ಮೃಗೇಂದ್ರೋಽಹಮ್" ಮೃಗಗಳಲ್ಲಿ ಸಿಂಹವು. ಅದರ ನಡಿಗೆಯನ್ನೂ ಸೌಂದರ್ಯವನ್ನೂ ಜನರು ಮೆಚ್ಚುತ್ತಾರೆ, ಕವಿಗಳು ವರ್ಣಿಸುತ್ತಾರೆ. ಸಿಂಹಕ್ಕೆ ನಿತ್ಯವಾಗಿ ಕೋಪವಿರುವದಿಲ್ಲ; ಸಮಯಬಂದಾಗ ಮಾತ್ರವೇ ಬರುತ್ತದೆ. ಇಂಥ ಸದ್ಗುಣಗಳಿಂದ ಸಿಂಹವೂ ಒಂದು ವಿಭೂತಿಯೆನಿಸಿದೆ. ಯಾವದರಲ್ಲಿ ಯಾವ ಸದ್ಗುಣವಿದ್ದರೂ ಭಗವಂತನ ವಿಭೂತಿ ಎಂದು ಎಣಿಸಬೇಕೆಂಬುದೇ ಇಲ್ಲಿ ಅಭಿಪ್ರಾಯ.

"ಪಕ್ಷಿಗಳಲ್ಲಿ ವೈನತೇಯನು ನಾನು" ಎಂಬಲ್ಲಿ ಗರುಡನು ಧರ್ಮಕ್ಕೆ ಕಟ್ಟುಬಿದ್ದು ಕದ್ರುವಿನ ಮಕ್ಕಳ ಅಪೇಕ್ಷೆಯನ್ನು ಪೂರ್ತಿಗೊಳಿಸುವದಕ್ಕಾಗಿ ದೇವಲೋಕಕ್ಕೆ ಹೋಗಿ ಅಮೃತವನ್ನು ತಂದ ಕಥೆ; ಅವನ ಚರ್ಯೆಯಲ್ಲಿ ಯಾವಾಗಲೂ ಧರ್ಮವು ಪ್ರಧಾನವಾಗಿದ್ದದ್ದು - ಇವುಗಳನ್ನು ಮನಸ್ಸಿಗೆ ತಂದುಕೊಳ್ಳಬೇಕು. ಕೆಲವು ಯಜ್ಞಗಳಲ್ಲಿ ಗರುಡನ ಆಕೃತಿಯಲ್ಲಿ ವೇದಿಕೆಯನ್ನು ನಿರ್ಮಿಸಿ, ಒಂದೊಂದು ಅವಯವದಲ್ಲಿ ಇಂತಿಷ್ಟೆಂಬ ಲೆಕ್ಕದ ಋಕ್ಕುಗಳನ್ನು ವಿನ್ಯಾಸಮಾಡಿರುವ ಕ್ರಮವು ವೇದದಲ್ಲಿ ಕಂಡುಬರುತ್ತದೆ; ಈ ಆಧಾರದಿಂದಲೋ ಏನೋ, ಮಹಾವಿಷ್ಣುವಿನ ವಾಹನನಾದ ಗರುಡನು ಛಂದೋಮಯನೆಂದು ಭಾಗವತಾದಿಪುರಾಣಗಳಲ್ಲಿ ವರ್ಣಿತವಾಗಿದೆ. ಭಗವಂತನಿಗೆ ಇಷ್ಟು ಸಮೀಪವರ್ತಿಯಾಗಿ ಸೇವೆಮಾಡುವ ಭಕ್ತಾಗ್ರಣಿಯಾದ ಗರುಡನನ್ನು ಒಂದು ವಿಭೂತಿಯಾಗಿ ಗಣಿಸಿರುವದು ಯುಕ್ತವೇ ಆಗಿರುತ್ತದೆ.

ಗರುಡನು ದೇವತೆಗಳನ್ನು ಪರಾಭವಮಾಡಿ ಅಮೃತಕಲಶವನ್ನು ಪವಿತ್ರವಾದ ದರ್ಭಾಸ್ತರಣದಮೇಲೆ ಇಟ್ಟನಂತೆ. ಆಗ ಸರ್ಪಗಳು ತಾವು ವಾಗ್ದಾನಮಾಡಿದ್ದಂತೆ ಅವನ ತಾಯಿಯನ್ನು ದಾಸ್ಯದಿಂದ ವಿಮೋಚನೆಮಾಡಿದವಂತೆ. ಮೊದಲೇ ಇಂದ್ರನಿಗೂ ಗರುಡನಿಗೂ ಆಗಿದ್ದ ಒಪ್ಪಂದದಂತೆ ದೇವತೆಗಳು ಕೂಡಲೆ ಅಮೃತಕಲಶವನ್ನು ಒಯ್ದುಬಿಟ್ಟರು. ಸರ್ಪಗಳು ಮಾತ್ರ ಆ ದರ್ಭೆಗಳನ್ನೇ ನೆಕ್ಕಿನೆಕ್ಕಿ ನಾಲಗೆಯನ್ನು ಸೀಳಿಕೊಂಡವೆಂದು ಪುರಾಣದ ಕಥೆಯಿದೆ. ನಾವು ಪರಮಾತ್ಮನನ್ನು ಅಲ್ಲಿ ಇಲ್ಲಿ ಹುಡುಕಿ ಆ ಸರ್ಪಗಳಂತೆ ಬರಿಯ ಶ್ರಮವನ್ನು ವಹಿಸುತ್ತಿದ್ದೇವೆ. ಆದರೆ ಗರುಡನಿಗೆ ಇಡಿಯ ಪ್ರಪಂಚವೇ ಪರಮಾತ್ಮನೆಂಬ ಅಮೃತಕಲಶವಾಗಿ ಕಾಣುತ್ತದೆ. ಅವನ ಬೆನ್ನುಹಿಡಿದು ನಾವೂ ನಡೆದರೆ ಜಗತ್ತನ್ನೇ ಪರಮಾತ್ಮನ ವಿಭೂತಿ ಎಂದು ಕಾಲಕ್ರಮದಲ್ಲಿ ಕಂಡುಕೊಳ್ಳಬಹುದು.

---

## ೭೪. ಭಗವಂತನ ವಿಭೂತಿಗಳು ೧೦-(೩೧)

(೨೨-೨-೪೮)

"ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್" ಬೀಸುವವರಲ್ಲಿ ಗಾಳಿ ನಾನು, ಶಸ್ತ್ರಧಾರಿಗಳಲ್ಲಿ ರಾಮನು ನಾನು. ವಿಭೂತಿಗಳ ವಿಷಯವೇ ನಡೆದಿರುತ್ತದೆ. ಇಲ್ಲಿ ಶ್ಲೋಕಗಳ ಅರ್ಥವನ್ನು ವಿಸ್ತರಿಸಬೇಕಾದದ್ದೇನೂ ಇಲ್ಲ. ಸಾಮಾನ್ಯವಾಗಿ ಗೀತೆಯ ಶ್ಲೋಕಗಳು ಬಹು ಲಲಿತವಾದ ಭಾಷೆಯಲ್ಲಿರುತ್ತವೆ; ಆದರೆ ಅಭಿಪ್ರಾಯವು ವಿಚಾರಿಸಿದಷ್ಟೂ ಆಳವಾಗಿರುತ್ತದೆ. ಪ್ರಕೃತದಲ್ಲಿ ವಿಭೂತಿಗಳನ್ನೂ ಯಾವಯಾವ

ವಿಷಯದಲ್ಲಿ ವಿಭೂತಿಗಳಾಗಿ ಗಣಿಸಿದೆ ಎಂಬುದನ್ನೂ ನಾವು ಊಹಿಸಿ ತಿಳಿಯಬೇಕು. ಭಾವಚಿತ್ರಗಳಲ್ಲಿ ಕೆಲವು ಭಾಗಗಳು ಮಾತ್ರ ಕಾಣುತ್ತಿರುತ್ತವೆ; ಉಳಿದವು ಸೂಚಿತವಾಗಿರುತ್ತವೆ. ಚಿತ್ರಕಲೆಯನ್ನು ಚೆನ್ನಾಗಿ ಪರೀಕ್ಷಿಸಬಲ್ಲವರು ಅವನ್ನು ಕಲ್ಪಿಸಿಕೊಳ್ಳುತ್ತಾರೆ. ಈಗ ಪವನಃ ಎಂಬಲ್ಲಿ ಯಾವದನ್ನು ತಿಳಿಯಬೇಕು? ಸುಂಟರ ಗಾಳಿಯನ್ನಲ್ಲ. ವಾಯು ತಾನು ಶುದ್ಧವಾಗಿರುತ್ತದೆ; ಆಯಾ ಉಪಾಧಿಗಳ ವಾಸನೆಯನ್ನು ಕೊಂಡೊಯ್ಯುವದಾದರೂ ಬೀಸುವಿಕೆಯಿಂದ ಎಲ್ಲವನ್ನೂ ಪರಿಶುದ್ಧಿಗೊಳಿಸುತ್ತದೆ. ಅದು ಮತ್ತೊಂದರ ಸಂಪರ್ಕದಿಂದ ಬೇರ್ಪಟ್ಟಂತೆ ತೋರಿದರೂ ತನ್ನ ಪಾವಿತ್ರ್ಯವನ್ನು ಮತ್ತೆಮತ್ತೆ ಪಡೆದುಕೊಳ್ಳುತ್ತಲೇ ಇರುವದು. ಪರಮಾತ್ಮನು ಎಲ್ಲಾ ಪ್ರಾಣಿಗಳಲ್ಲಿಯೂ ಇದ್ದರೂ ತಾನು ಅಸಂಗನೇ ಆಗಿರುವದರಿಂದ ಅವುಗಳ ಶರೀರಾದಿಗಳ ಸಂಪರ್ಕದಿಂದ ತನ್ನ ಪಾವಿತ್ರ್ಯಕ್ಕೆ ಯಾವ ಹಾನಿಯನ್ನೂ ತಟ್ಟಗೊಡುವದಿಲ್ಲ. ಇದೇ ಇಲ್ಲಿ ವಿವಕ್ಷಿತಾಂಶವು. ಪರಮಾತ್ಮನು ಗಾಳಿಯಂತೆ ನಮ್ಮ ಹೃದಯದ ಮನೆಯ ಕದವನ್ನು ತಟ್ಟುತ್ತಲೇ ಇರುತ್ತಾನೆ. ಎಷ್ಟು ಯುಗಗಳಾದರೂ ಕಾದಿರುತ್ತಾನೆ; ಹೃದಯದಲ್ಲಿರುವ ಕಶ್ಮಲವಿಚಾರಗಳೂ ದುರ್ಭಾವನೆಗಳೂ ಹೋಗಿ ಅದು ಖಾಲಿಯಾದ ಕೂಡಲೆ ಅದರೊಳಕ್ಕೆ ಬಂದು ಶುದ್ಧವಾದ ಗಾಳಿಯಂತೆ ತುಂಬಿಕೊಳ್ಳುತ್ತಾನೆ!

ಈಗ "ಶಸ್ತ್ರಧಾರಿಗಳಲ್ಲಿ ರಾಮನು" ಎಂಬ ವಿಭೂತಿಯ ವಿಚಾರವನ್ನು ಮಾಡೋಣ. ಶಸ್ತ್ರವನ್ನು ಏತಕ್ಕೆ ಹಿಡಿಯಬೇಕು? ಇಡಿಯ ಜನಸಮಾಜವೇ ಅಹಿಂಸಾತತ್ತ್ವವನ್ನು ಅಂಗೀಕರಿಸಿದರೆ ಶಸ್ತ್ರಗಳ ಆವಶ್ಯಕತೆಯಿರುವುದಿಲ್ಲ. ಯಾರು ಏನು ಬೇಕಾದರೂ ಮಾಡಲಿ! ಎಂದು ಪ್ರತೀಕಾರವಿಲ್ಲದೆ ಇರುವ ಕ್ಷಮಾಗುಣ ಸಂಪನ್ನರಾದ ಸಂನ್ಯಾಸಿಗಳಿಗೂ ಅದರ ಅವಶ್ಯಕತೆಯಿರುವದಿಲ್ಲ. ಆದರೆ ಎಲ್ಲರೂ ಸರ್ವತ್ಯಾಗವನ್ನು ಮಾಡಿದ ಸಂನ್ಯಾಸಿಗಳಾಗಿರುವದಿಲ್ಲ. ರಾಗದ್ವೇಷಗಳಿಂದ ಪ್ರೇರಿತರಾಗಿ ತಾವು ಮಾಡುವ ಹಿಂಸೆಯಿಂದ ಜನರಿಗೆ ತೊಂದರೆಯಾದೀತೆಂಬ ಅಂಜಿಕೆಯೂ ಇಲ್ಲದ ಕ್ರೂರಿಗಳ ನಡುವೆಯಿರುವಾಗ ಅವಶ್ಯವಾಗಿ ಶಸ್ತ್ರಗಳು ಬೇಕಾಗುವವು. ಶಸ್ತ್ರಗಳೇ ಅಂಥ ಸನ್ನಿವೇಶದಲ್ಲಿ ರಕ್ಷಣಸಾಧನವಾಗಿರುತ್ತದೆ. ಶಸ್ತ್ರವನ್ನು ಅವಶ್ಯವಾಗಿ ಧರಿಸಬೇಕಾದಾಗ ಹೇಗೆ ಧರಿಸಿರಿಸಬೇಕು? ಎಂಬುದನ್ನು ಶ್ರೀರಾಮನಿಂದ ಕಲಿಯಬೇಕು.

ದಶರಥನ ವಚನವನ್ನು ಪರಿಪಾಲಿಸುವದಕ್ಕಾಗಿ ಅವನು ವನವಾಸಕ್ಕೆ ಹೊರಟ ನಷ್ಟೆ. ಆಗ ಒಂದು ಸಂದರ್ಭದಲ್ಲಿ ಸೀತಾದೇವಿಯು ಈ ಪ್ರಶ್ನೆಯನ್ನು ಕೇಳಿದಳು: ನಾವು ಈಗ ಋಷಿಗಳ ನಡುವೆ ಇರುತ್ತೇವೆ; ಸಾತ್ತ್ವಿಕರ ಸುತ್ತುವಳೆಯದಲ್ಲಿರುವವರಿಗೆ ಧನುರ್ಬಾಣಗಳೇತಕ್ಕೆ? ಶಸ್ತ್ರಧಾರಿಗಳಾಗಿರುವವರಿಗೆ ಶಸ್ತ್ರಗಳನ್ನುಪಯೋಗಿಸಬೇಕೆಂಬ ಇಚ್ಛೆಯು ಅವಶ್ಯವಾಗಿ ಉಂಟಾಗುವದು; ಅದರಿಂದ ಪ್ರಾಣಿಹಿಂಸೆಯೂ ತಪ್ಪದೆ

ಉಂಟಾಗುವದು. ಆದ್ದರಿಂದ ಪಾಪಕರವಾದ ಶಸ್ತ್ರಗಳನ್ನು ಸದ್ಯಕ್ಕೆ ಕೈಬಿಡುವದು ಮೇಲಲ್ಲವೆ? ಸೀತಾದೇವಿಯ ಈ ಪ್ರಶ್ನೆಗೆ ಶ್ರೀರಾಮಚಂದ್ರನು ಉತ್ತರವೇನಿತ್ತನೆಂಬುದನ್ನು ಈಗ ಯೋಚಿಸೋಣ. ದಶರಥನು ರಾಜ್ಯಭಾರವನ್ನು ಭರತನಿಗೆ ಒಪ್ಪಿಸಿ ನನ್ನನ್ನು ವನಕ್ಕೆ ಕಳುಹಿಸಿರುತ್ತಾನೆ. ರಾಷ್ಟ್ರವಾಗಲಿ, ವನವಾಗಲಿ, ಎಲ್ಲವೂ ಅರಸನದು. ತನ್ನ ರಾಜ್ಯದಲ್ಲಿ ಎಲ್ಲಿಯೂ ಅಧರ್ಮವು ಆಗದಂತೆ ನೋಡಿಕೊಳ್ಳತಕ್ಕದ್ದು ಅರಸನ ಕರ್ತವ್ಯವು. ನಾವು ರಾಜನ ಪ್ರತಿನಿಧಿಗಳು. ಈ ಋಷಿಗಳಿಗೆ ರಾಕ್ಷಸರು ಹಿಂಸೆಯನ್ನುಂಟುಮಾಡುತ್ತಿದ್ದಾರೆಂದು ನಮ್ಮಲ್ಲಿಗೆ ದೂರು ಬಂದಿರುತ್ತದೆ. ಈಗ ಇವರ ಕಷ್ಟವನ್ನು ನಿವಾರಿಸುವದು ನಮ್ಮ ಕರ್ತವ್ಯವಾಗುವದಿಲ್ಲವೆ? ಆದ್ದರಿಂದ ಧನುರ್ಬಾಣಗಳನ್ನು ನಾವು ಧರಿಸಿರುವದೇ ಈಗಿನ ಸಂದರ್ಭಕ್ಕೆ ಯುಕ್ತವಾಗಿರುತ್ತದೆ- ಎಂಬುದು ಶ್ರೀರಾಮನ ಉತ್ತರವು.

ಶ್ರೀರಾಮನ ಕೋದಂಡವು ಸತ್ಯಧರ್ಮಗಳ ರಕ್ಷಣೆಯ ಚಿಹ್ನೆಯು. ಸತ್ಯವಂತರ, ಧರ್ಮಿಷ್ಠರ, ಸಹಾಯಕ್ಕೆಂದು ದುಷ್ಟರನ್ನು ದಮನಮಾಡುವ ಸಂಕಲ್ಪದಿಂದ ಅವಶ್ಯವಿದ್ದಾಗ ಮಾತ್ರ ಶಸ್ತ್ರಗಳನ್ನುಪಯೋಗಿಸುವದು ಶ್ರೀರಾಮನ ಧನುರ್ಧಾರಣೆಯಿಂದ ನಾವು ಕಲಿಯಬಹುದಾದದ್ದು. ನಮ್ಮಲ್ಲಿ ಈಗ ಹೊರಗಿನ ಶಸ್ತ್ರಗಳಿಲ್ಲದೆ ಇರಬಹುದು. ಆದರೆ ಗುಪ್ತವಾದ ಕೆಲವು ಶಸ್ತ್ರಗಳಿವೆ. ವಾಗ್ರೂಪವಾದ ಶಸ್ತ್ರದಿಂದ ನಾವು ಅನೇಕರನ್ನು ಇರಿದಿದ್ದೇವೆ. ಲೇಖಿನಿ ಎಂಬುದು ಇನ್ನೊಂದು ಶಸ್ತ್ರ. "ಲೇಖಿನಿಯು ಕತ್ತಿಗಿಂತ ಪ್ರಬಲವಾದದ್ದು" ಎಂದು ಒಬ್ಬ ಪಾಶ್ಚಾತ್ಯಕವಿ ಎಂದಿರುತ್ತಾನೆ. ನಿಂದೆ, ಮೂಕರ್ಜಿ, ಮೋಸ - ಮುಂತಾದವುಗಳು ಲೇಖಿನಿಯಿಂದಾಗುವ ಹಿಂಸೆಗಳು. ಇಂಥ ಕ್ರೌರ್ಯವನ್ನು ನಾವು ತೋರ್ಪಡಿಸದಿದ್ದಾಗಲೂ ಅನವಶ್ಯವಾಗಿ ಹೆಚ್ಚು ಬರವಣಿಗೆಯನ್ನು ಬರೆಯುವದು, ಯಾರಿಗೂ ಓದುವದಕ್ಕೆ ಬಾರದ ರೀತಿಯಲ್ಲಿ ಮೋಡಿ ಅಕ್ಷರವನ್ನು ಬರೆಯುವದು - ಇವುಗಳಿಂದಲೂ ಲೇಖಿನಿಯು ಹಿಂಸೆಮಾಡಬಹುದು. ನಮ್ಮ ಆಲೋಚನೆಗಳೂ ಒಂದು ಬಗೆಯ ಶಸ್ತ್ರವೇ ಆಗಿರುತ್ತವೆ. ಅವುಗಳು ಅದೃಶ್ಯವಾಗಿಯೇ ಕೂಡಿಹಾಕಿಕೊಂಡು ಜನರಮೇಲೆ ದುಷ್ಟಪರಿಣಾಮವನ್ನು ಮಾಡುತ್ತವೆ. ನಾವು ಆಡುವ ನುಡಿಗಳು, ಮಾಡುವ ಕಾರ್ಯಗಳು, ಮಾಡುವ ಆಲೋಚನೆಗಳು - ಇವೆಲ್ಲವೂ ನಮ್ಮ ವಶದಲ್ಲಿರಬೇಕು. ಶ್ರೀರಾಮನಂತೆ ಬಿಟ್ಟ ಬಾಣವನ್ನು ಹಿಂದಕ್ಕೆ ತೆಗೆದುಕೊಳ್ಳುವ ಯೋಗ್ಯತೆಯಿರಬೇಕು. "ರಾಮಃ ಶಸ್ತ್ರಭೃತಾಮ್" ಎಂಬ ಮಾತಿನಲ್ಲಿ ಯಾವ ಅಭಿಪ್ರಾಯವು ಅಡಗಿರುವದೆಂಬುದು ಈಗ ಸ್ವಲ್ಪ ಮಟ್ಟಿಗೆ ಮನದಟ್ಟಾಗಿರಬೇಕೆಂದು ಊಹಿಸುತ್ತೇನೆ.

**"ನದಿಗಳಲ್ಲಿ ಜಾಹ್ನವಿ ನಾನು"**ಎಂಬ ವಿಭೂತಿವಾಕ್ಯವನ್ನು ಸ್ವಲ್ಪ ಪರಿಶೀಲಿಸಿರಿ.

ಈಗಿನ ಕಾಲಕ್ಕೆ ಸ್ವಲ್ಪ ಹೆಚ್ಚು ಕಡಿಮೆಯಾಗಿ ಕ್ಷೇತ್ರಗಳೆಲ್ಲವೂ ತಮ್ಮ ಕ್ಷೇತ್ರತ್ವವನ್ನು ಕಳೆದುಕೊಂಡಿರುತ್ತವೆ. ಅಥವಾ ಅವು ಕಳೆದುಕೊಂಡಿವೆ ಎನ್ನುವದಕ್ಕಿಂತ ಜನರು ತಮ್ಮ ಮೈಯಿನ, ಮನಸ್ಸಿನ ಕೊಳಕುಗಳನ್ನು ಸೇರಿಸಿಸೇರಿಸಿ ಅವುಗಳ ಪಾವಿತ್ರ್ಯವನ್ನು ಕಡಿಮೆಮಾಡಿರುತ್ತಾರೆ ಎನ್ನುವದು ಯುಕ್ತ. ಈಗ ಆಶೆಯುಳ್ಳವರೇ ಬಲುಮಂದಿ ಕಾಶಿಗೆ ಹೋಗುವವರು! ಗಂಗೆಯ ಮಹಿಮೆಯನ್ನು ಹೀಗೆ ನಾವು ನೆನಪಿಗೆ ತಂದುಕೊಳ್ಳುವದಕ್ಕೆ ಆಗುವಂತಿಲ್ಲ. ಪುರಾಣದಲ್ಲಿ ಭಗೀರಥನು ಗಂಗೆಯನ್ನು ಭೂಲೋಕಕ್ಕೆ ತರುವದಕ್ಕೆ ಮಾಡಿದ ಪ್ರಯತ್ನ, ಶಿವನ ಜಡೆಯಲ್ಲಿ ಅಡಗಿಕೊಂಡದ್ದು, ಜಹ್ನುಋಷಿಗಳ ಆಶ್ರಮದ ಮೇಲೆ ಹರಿದಾಗ ಅವರು ಕೋಪದಿಂದ ಕುಡಿದುಬಿಟ್ಟದ್ದು, ಮತ್ತೆ ಭಗೀರಥನ ಸ್ತೋತ್ರದಿಂದ ಪ್ರಸನ್ನರಾಗಿ ಕಿವಿಯ ಮೂಲಕವಾಗಿ ಬಿಟ್ಟದ್ದು - ಇವುಗಳನ್ನೆಲ್ಲ ಸ್ಮರಿಸಿಕೊಂಡರೆ ಗಂಗೆಯು ಹುಟ್ಟಿದಲ್ಲಿಂದ ಹಿಡಿದು ಸಮುದ್ರಕ್ಕೆ ಸೇರುವವರೆಗೂ ಪವಿತ್ರವೇ ಆಗಿರುವದೆಂಬುದು ಸ್ಪಷ್ಟವಾಗುತ್ತದೆ. ಈಗಲೂ ಗಂಗಾಶಬ್ದವು ಪರಮಾತ್ಮನ ಪಾದದಿಂದ ಬಂದದ್ದು ಎಂಬುದರ ಸ್ಮರಣೆಯನ್ನು ಕೊಡುತ್ತದೆ. ಅದರ ನೀರಿನಲ್ಲಿ ಯಾವದೋ ಒಂದು ದಿವ್ಯೌಷಧಗುಣವಿದೆ ಎಂದು ಡಾಕ್ಟರುಗಳೂ ಅಭಿಪ್ರಾಯಪಟ್ಟಿರುತ್ತಾರೆ. "ಗಂಗಾಯಮುನೆಗಳ ನಡುವೆ ಇರುವ ಮುನಿಗಳಿಗೆ ನಮಸ್ಕಾರ!" ಎಂದು ಸನಾತನಿಗಳು ಮಂತ್ರದಲ್ಲಿ ಹೇಳುವ ವಚನವು ಈಗಲೂ ಅನ್ವರ್ಥವಾಗಲಿ! ನೂರು ಯೋಜನಗಳ ದೂರದಿಂದ ಗಂಗಾಶಬ್ದವನ್ನು ಚ್ಚರಿಸಿದರೂ ಸಕಲಪಾಪಗಳೂ ನಾಶವಾಗುವವು - ಎಂಬ ಸೂಕ್ತಿಯು ಮನಸ್ಸಿನಲ್ಲಿ ಮೂಡುವಂತಾಗಲಿ! ಆಗ ಗಂಗೆಯು ವಿಭೂತಿಗಳಲ್ಲಿ ಒಂದೆಂಬ ವಾಕ್ಯದ ಪೂರ್ಣಾ ರ್ಥವು ನಮ್ಮ ಮನದಲ್ಲಿ ಮಿಂಚುವದು.

**"ಸರ್ಗಾಣಾಮಾದಿರನ್ತಶ್ಚ ಮಧ್ಯಂ ಚೈವಾಹಮರ್ಜುನ"** ಸೃಷ್ಟಿಗಳಿಗೆ ಮೊದಲೂ ಕೊನೆಯೂ ನಡುವೆಯೂ ನಾನು - ಎಂದು ಭಗವಂತನು ಹೇಳಿರುತ್ತಾನೆ. ಸೃಷ್ಟಿಗಳು ಎಂದು ಬಹುವಚನವನ್ನು ಪ್ರಯೋಗಿಸಿರುವದರಿಂದ ಅವು ಅನಂತವಾಗಿವೆ ಎಂದು ಸೂಚಿಸಿದ್ದಾಯಿತು. ಅದೇ ಭೂತಗ್ರಾಮವು ಮತ್ತೆ ಮತ್ತೆ ಹುಟ್ಟಿಹುಟ್ಟಿ ಪ್ರಲಯವಾಗು ತ್ತಿರುತ್ತದೆ ಎಂದು ಹಿಂದೆ ಹೇಳಿತ್ತು. "ಅಹಮಾದಿಶ್ಚ ಮಧ್ಯಂ ಚ ಭೂತಾನಾಮನ್ತ ಏವ ಚ" ಎಂದು ಈ ಅಧ್ಯಾಯದ ಮೊದಲಿನಲ್ಲಿ ಹೇಳಿರುವದು ಪರಮಾತ್ಮನನ್ನು ಬಿಟ್ಟು ಯಾವ ಪ್ರಾಣಿಗಳೂ ಸ್ವತಂತ್ರವಾಗಿಲ್ಲ, ಎಲ್ಲಾ ಜೀವರುಗಳಿಗೂ ಆತನು ಆತ್ಮನೇ ಎಂದು ತಿಳಿಸುವದಕ್ಕೆ. ಈಗ ಸೃಷ್ಟಿಗಳಿಗೆ ಆದಿಮಧ್ಯಾನ್ತಗಳು ನಾನೇ ಎಂದು ಹೇಳಿರುವದು ಭಗವಂತನು ಸರ್ವೇಶ್ವರನು, ಆತನ ಮಹಿಮೆಯನ್ನು ಈ ಸೃಷ್ಟಿಯಲ್ಲಿ ಯಾರೂ ಅರಿಯರು ಎಂಬುದನ್ನು ತಿಳಿಸುವದಕ್ಕೆ. ಭಗವಂತನು ಸೃಷ್ಟಿಯ ಆದಿಯಲ್ಲಿ

ಬ್ರಹ್ಮನನ್ನು ಸೃಷ್ಟಿಸಿ ವೇದಗಳನ್ನು ಅವನಿಗೆ ಸಹಾಯವಾಗಿ ಕೊಟ್ಟು ಜಗತ್ತನ್ನು ಸೃಷ್ಟಿಸಲು ಅಪ್ಪಣೆಮಾಡುತ್ತಾನೆಂದು ಶ್ರುತಿಯಲ್ಲಿದೆ. ಸರ್ವವನ್ನೂ ಸಂಕಲ್ಪ ಮಾತ್ರದಿಂದ ಸೃಷ್ಟಿಸಬಲ್ಲ ಆ ಬ್ರಹ್ಮನಿಗೆ ಕೂಡ ಸರ್ವಾತ್ಮನಾದ ಭಗವಂತನ ತತ್ತ್ವವು ತಿಳಿಯದು; ಆತನೂ ಆ ಸರ್ವೇಶ್ವರನ ವಶದಲ್ಲಿದ್ದುಕೊಂಡೇ ತನ್ನ ಸೃಷ್ಟಿಕಾರ್ಯವನ್ನು ಮಾಡುತ್ತಾನೆ. ಆದ್ದರಿಂದ ಮೂಲಸೃಷ್ಟಿಕರ್ತನು ಭಗವಂತನೇ ಎಂದು ತಿಳಿಯಬೇಕು. ಇದರಿಂದ ಇಡಿಯ ಸೃಷ್ಟಿಯೇ ಭಗವಂತನ ವಿಭೂತಿ ಎಂದು ಅರಿತುಕೊಳ್ಳುವದಕ್ಕೆ ಸಹಾಯ ವಾಗುತ್ತದೆ.

## ೭೫. ಭಗವಂತನ ವಿಭೂತಿಗಳು ೧೦-(೩೨)

### (೨೯-೨-೪೮)

ಸರ್ಗಗಳ ಆದಿ, ಮಧ್ಯ, ಅಂತ್ಯ - ಎಲ್ಲವೂ ನಾನೇ ಎಂದದ್ದರಿಂದ ಎಲ್ಲವೂ ನನ್ನ ವಿಭೂತಿಯೇ ಎಂದು ಸ್ಪಷ್ಟವಾಗಿ ಹೇಳಿದಂತೆ ಆಯಿತು. ಇಲ್ಲಿ ಹೇಳಿರುವಷ್ಟೇ ವಿಭೂತಿಗಳಲ್ಲವೆಂಬುದನ್ನು ಆದಿಯಲ್ಲಿ ಹೇಳಿದ್ದನ್ನು ಮತ್ತೆ ನೆನಪು ಕೊಡುವದಕ್ಕಾಗಿ ಇಲ್ಲಿ ಇನ್ನೊಂದು ಸಲ ಈ ವಿಷಯವನ್ನು ಹೇಳಿರುತ್ತದೆ.

'ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆಯು ನಾನು' ಎಂಬ ವಿಭೂತಿಯನ್ನು ಸ್ವಲ್ಪ ವಿವರವಾಗಿ ತಿಳಿದುಕೊಳ್ಳುವದು ಲಾಭದಾಯಕವಾಗಿರುತ್ತದೆ. ವಿದ್ಯೆಯೆಂದರೆ ಜ್ಞಾನವು; ಅಜ್ಞಾನವನ್ನು ಕಳೆಯುವದೇ ವಿದ್ಯೆ. ಲೋಕದ ಬೇರೆಬೇರೆಯ ವಿದ್ಯೆಗಳು ಆಯಾ ವಿಷಯದ ಅಜ್ಞಾನವನ್ನು ಮಾತ್ರ ಕಳೆಯುವವು; ಅಧ್ಯಾತ್ಮವಿದ್ಯೆಯಾದರೋ ಅಜ್ಞಾನದ ಜಾತಿಯನ್ನೇ ತೆಗೆದುಹಾಕುತ್ತದೆ. ಸಂಗೀತವಿದ್ಯೆಯನ್ನು ಕಲಿತವನಿಗೆ ವೇದಾಧ್ಯಯನವು ತಿಳಿದಿರಬೇಕೆಂಬ ನಿಯಮವಿಲ್ಲ. ಇದರಂತೆ ಅಧ್ಯಯನವನ್ನು ಬಲ್ಲವನು ಸಂಗೀತವನ್ನು ಬಲ್ಲವನಾಗಿರಬೇಕೆಂಬ ನಿಯಮವೂ ಇಲ್ಲ. ಆದರೆ ಅಧ್ಯಾತ್ಮವಿದ್ಯೆಯು ಹಾಗಲ್ಲ; ಯಾವ ಒಂದನ್ನು ತಿಳಿದರೆ ಎಲ್ಲವನ್ನೂ ತಿಳಿದಂತೆ ಆಗುವದೋ ಅದನ್ನು ತಿಳಿಸುವ ವಿದ್ಯೆಯು ಅಧ್ಯಾತ್ಮವಿದ್ಯೆ.

ಇನ್ನೊಂದು ದೃಷ್ಟಿಯಿಂದಲೂ ಅಧ್ಯಾತ್ಮವಿದ್ಯೆಯು ಮಿಕ್ಕ ವಿದ್ಯೆಗಳಿಗಿಂತ ಹೆಚ್ಚಿನದೆನಿಸುತ್ತದೆ. ಹೇಗೆಂದರೆ ಮಿಕ್ಕ ವಿದ್ಯೆಗಳನ್ನು ಜನರು ಒಬ್ಬರನ್ನೊಬ್ಬರು ಮೋಸಪಡಿಸುವದಕ್ಕೆ ಉಪಯೋಗಿಸುವರು. ಒಂದೂರಿನಲ್ಲಿ ಇಬ್ಬರು ಸ್ನೇಹಿತರು ಇದ್ದರು. ಅವರಲ್ಲಿ ಒಬ್ಬನು ವೈದ್ಯನು, ಮತ್ತೊಬ್ಬನು ವೈದಿಕನು. ಅವರಿಬ್ಬರೂ ತಮ್ಮತಮ್ಮ ವಿದ್ಯೆಯಲ್ಲಿ ಪ್ರಖ್ಯಾತರಾಗಿದ್ದರು. ಒಂದು ಸಲ ವೈದ್ಯನು ತಮ್ಮ

ತಂದೆಯವರ ಶ್ರಾದ್ಧವನ್ನು ಮಾಡಬೇಕಾಗಿಬಂತು. ವೈದಿಕಸ್ನೇಹಿತನನ್ನು ಕಂಡು 'ಉತ್ತಮವಾದ ಇಬ್ಬರು ಬ್ರಾಹ್ಮಣರನ್ನು ಕಳುಹಿಸಿಕೊಡು' ಎಂದು ಕೇಳಿಕೊಂಡನು. ಅವನು ಹಾಗೇ ಆಗಲೆಂದು ಒಪ್ಪಿದನು. ಅವರಿದ್ದದ್ದು ಒಂದು ನಗರ; ಒಬ್ಬರ ಮನೆಗೆ ಮತ್ತೊಬ್ಬರ ಮನೆಯು ಬಹುದೂರ. ಆದ್ದರಿಂದ ವೈದಿಕವಿದ್ಯಾವಂತನು "ಈ ಬ್ರಾಹ್ಮಣರು ಬಹಳ ಯೋಗ್ಯರು; ಇವರಿಗೆ ಒಂದೊಂದು ರೂಪಾಯಿಗೆ ಕಡಿಮೆಯಿಲ್ಲದೆ ದಕ್ಷಿಣೆ ಕೊಡಬೇಕು" ಎಂದು ಒಂದು ಚೀಟಿಯನ್ನು ಬರೆದು ಬ್ರಾಹ್ಮಣರನ್ನು ಕಳುಹಿಸಿಕೊಟ್ಟನು. ವೈದ್ಯನು ಚೀಟಿಯನ್ನು ನೋಡಿ ಆಶ್ಚರ್ಯಪಟ್ಟನು. ಆ ಕಾಲದಲ್ಲಿ ಶ್ರಾದ್ಧದ ಬ್ರಾಹ್ಮಣರಿಗೆ ನಾಲ್ಕಾಣೆಗಿಂತ ಹೆಚ್ಚಾಗಿ ಯಾರೂ ದಕ್ಷಿಣೆ ಕೊಡುತ್ತಿರಲಿಲ್ಲ. ಆದರೂ ಶ್ರಾದ್ಧವು ಸಾಗುವದು ಮುಖ್ಯವೆಂದು ಚೀಟಿಯಂತೆ ಒಂದೊಂದು ರೂಪಾಯಿ ದಕ್ಷಿಣೆ ಕೊಟ್ಟು ಬ್ರಾಹ್ಮಣರನ್ನು ಆದರಸತ್ಕಾರಪೂರ್ವಕವಾಗಿ ತೃಪ್ತಿಗೊಳಿಸಿ ಕಳುಹಿಸಿಕೊಟ್ಟನು. ಇದಾದ ಕೆಲವು ತಿಂಗಳುಗಳ ಬಳಿಕ ವೈದಿಕವಿದ್ವಾಂಸನು ವೈದ್ಯನನ್ನು ಒಂದಾನೊಂದು ತೈಲದ ಎರಡುಮೂರು ಸೀಸೆಗಳನ್ನು ಕಳುಹಿಸುವಂತೆ ಕೇಳಿಕೊಂಡನು. ಆತನು ಆದರಂತೆ ಮೂರು ಸೀಸೆಗಳನ್ನು ಕಳುಹಿಸಿ ಅದಕ್ಕೆ ಹದಿನೈದು ರೂಪಾಯಿನ ಒಂದು ಬಿಲ್ಲುಮಾಡಿ ವೈದಿಕಬ್ರಾಹ್ಮಣನಿಗೆ ಕಳುಹಿಸಿಕೊಟ್ಟನು. ವೈದ್ಯನು ಮಾಡಿದ ಮೋಸವು ಆ ಶ್ರೋತ್ರಿಯನನ್ನು ರೇಗಿಸಿತು. ಆತನು ಒಂದು ದಿನ ನಡುಪೇಟೆಯಲ್ಲಿ ಬರುತ್ತಿದ್ದ ವೈದ್ಯನನ್ನು ಕಂಡು "ಏನಯ್ಯ, ಘನವೈದ್ಯರೆ, ಮೂರು ಸೀಸೆ ತೈಲಕ್ಕೆ ಹದಿನೈದು ರೂಪಾಯಿಯೆ? ಎಲ್ಲಾದರೂ ಉಂಟೆ, ಈ ಅನ್ಯಾಯ?" ಎಂದು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಕೇಳಲು ವೈದ್ಯನು ಶಾಂತಮುಖಮುದ್ರೆಯಿಂದ "ಹೌದು ಘನಪಾಠಿಗಳೆ, ಒಬ್ಬ ಶ್ರಾದ್ಧದ ಬ್ರಾಹ್ಮಣನಿಗೆ ಒಂದು ರೂಪಾಯಿ ದಕ್ಷಿಣೆಯಿರುವ ಕಾಲದಲ್ಲಿ ಮೂರು ಸೀಸೆ ತೈಲಕ್ಕೆ ಹದಿನೈದು ರೂಪಾಯಿಗಳಾಗುವದೇನಾಶ್ಚರ್ಯ?" ಎಂದನಂತೆ! ಹೀಗೆ ಮೋಸದಲ್ಲಿ ಮುಯ್ಯಿಗೆ ಮುಯ್ಯಿಮಾಡುವ ಲೌಕಿಕವಿದ್ಯೆಗಳು ಅನೇಕವಿರುತ್ತವೆ. ಆದರೆ ಆಧ್ಯಾತ್ಮಿಕವಿದ್ಯೆಯಲ್ಲಿ ಯಾವ ರಾಗದ್ವೇಷಗಳಿಗೂ ಎಡೆಯಿಲ್ಲ; ಆ ವಿದ್ಯೆಯನ್ನರಿತ ಯಾರೂ ಯಾರೊಬ್ಬರಿಗೂ ಮೋಸಮಾಡುವಂತಿಲ್ಲ. ಅವರು ಸರ್ವಭೂತಗಳ ಹಿತದಲ್ಲಿಯೂ ನಿರತರಾಗಿರುತ್ತಾರೆ. **ಇದೊಂದು ಅಧ್ಯಾತ್ಮವಿದ್ಯೆಯ ಹೆಚ್ಚುಗಾರಿಕೆ.**

ಅಧ್ಯಾತ್ಮವಿದ್ಯೆಯು ಬಂದವರು ಎಲ್ಲವನ್ನೂ ತಿಳಿದುಕೊಂಡಹಾಗಾಯಿತು ಎಂಬುದಕ್ಕೆ ಅರ್ಥವನ್ನು ತಿಳಿದುಕೊಳ್ಳಲಾರದೆ ಕೆಲವರು ವೇದಾಂತದಿಂದ ಸರ್ವಜ್ಞತೆ ಬರುತ್ತದೆಯೆ? ಹಾಗಾದರೆ ಅವರಿಗೆ 'ರಾಗಿ ಪೈರು ಮಾಡುವದಕ್ಕೆ ಬರುತ್ತದೆಯೆ? ಜರ್ಮನ್ ಭಾಷೆಯೂ ಓದದೆ ಬರುತ್ತದೆಯೆ?' ಎಂದು ಮುಂತಾಗಿ ಕೇಳುವರು.

ಸರ್ವತಂತ್ರಸ್ವತಂತ್ರರೆಂದು ಪ್ರಖ್ಯಾತರಾಗಿದ್ದ ವೇದಾಂತದೇಶಿಕರನ್ನು ಒಬ್ಬ ಒಡ್ಡನು "ಸ್ವಾಮಿ, ತಮಗೆ ಭಾವಿ ತೋಡುವದಕ್ಕೆ ಬರುತ್ತದೆಯೆ? ಇಲ್ಲದಿದ್ದರೆ ತಾವು ಸರ್ವತಂತ್ರಸ್ವತಂತ್ರರು ಹೇಗೆ?" ಎಂದು ಕೇಳಿದನಂತೆ. ದೇಶಿಕರು ಅದಕ್ಕೆ ಪ್ರತ್ಯುತ್ತರವಾಗಿ ಒಂದೇ ದಿನದಲ್ಲಿ ಭಾವಿ ತೋಡಿದರೆಂದು ಹೇಳುತ್ತಾರೆ. ಆ ಕಥೆಯ ನಿಜವು ಹೇಗಾದರೂ ಇರಲಿ. ಅಧ್ಯಾತ್ಮವಿದ್ಯೆಯಿಂದ ಬರುವ ಸರ್ವಜ್ಞತೆಯು ಈ ಜಾತಿಯದಲ್ಲವೆಂಬುದನ್ನು ಮಾತ್ರ ಮೊದಲು ನಾವು ತಿಳಿದುಕೊಳ್ಳಬೇಕು.

ಈ ಬ್ರಹ್ಮಾಂಡದ ತತ್ತ್ವವು ಆತ್ಮನು. ಮಡಕೆಯನ್ನು ಮಣ್ಣು ವ್ಯಾಪಿಸಿ ಕೊಂಡಿರುವಂತೆ ಎಲ್ಲವನ್ನೂ ಯಾವದು ವ್ಯಾಪಿಸಿಕೊಂಡಿದೆಯೋ ಅದೇ ಈ ಜಗತ್ತಿನ ಆತ್ಮನು. ಆತ್ಮನೇ ಈ ಜಗತ್ತಿಗೆ ಉಪಾದಾನಕಾರಣವು. ಕಾರ್ಯವು ಕಾರಣಕ್ಕಿಂತ ಬೇರೆಯಾಗಿರುವದಿಲ್ಲವಾದ್ದರಿಂದ ಕಾರಣವನ್ನು ತಿಳಿದರೆ ಕಾರ್ಯದ ತತ್ತ್ವವನ್ನು ತಿಳಿದುಕೊಂಡಂತೆಯೇ ಆಯಿತು. ಈ ಅರ್ಥದಲ್ಲಿ ಆತ್ಮನನ್ನು ಅರಿತು ಕೊಂಡರೆ ಇಡಿಯ ಜಗತ್ತನ್ನೇ ಅರಿತುಕೊಂಡಂತೆ ಆಯಿತು ಎಂದು ಅಧ್ಯಾತ್ಮ ವಿದ್ಯಾವಂತರ ಅಭಿಪ್ರಾಯವಿರುತ್ತದೆ. ನಾವು ಹುಡುಗರಾಗಿದ್ದಾಗ ಒಂದು ಪದವನ್ನು ನಮಗೆ ಹೇಳಿಕೊಡುತ್ತಿದ್ದರು. "ಅಟ್ಟವೆಂಬುದು ಮರ, ಬೆಟ್ಟವೆಂಬುದು ಕಲ್ಲು, ರೊಟ್ಟಿಯೆಂಬುದು ಬರಿ ಹಿಟ್ಟು ಕಾಣೊ ರಂಗಯ್ಯ, ಜಾಜಿಯ ಹೂವು ಬೆಳ್ಳಗೆ" ಎಂಬುದು ಅದರ ಒಂದು ನುಡಿ. ಅಟ್ಟವು ಹೇಗೆ ಮರವನ್ನು ಬಿಟ್ಟು ಬೇರೆಯಿಲ್ಲವೋ, ಬೆಟ್ಟವು ಹೇಗೆ ಕಲ್ಲನ್ನು ಬಿಟ್ಟು ಬೇರೆಯಿಲ್ಲವೋ, ರೊಟ್ಟಿಯೆಂಬುದು ಹೇಗೆ ಹಿಟ್ಟನ್ನು ಬಿಟ್ಟು ಬೇರೆಯಿಲ್ಲವೋ ಹಾಗೆಯೇ ಈ ಜಗತ್ತು ತನ್ನ ತಿರುಳಾದ ಪರಮಾತ್ಮನನ್ನು ಬಿಟ್ಟು ಬೇರೆಯಿರುವದೇ ಇಲ್ಲ. ಆತ್ಮ ಬ್ರಹ್ಮ ವಿಷ್ಣು - ಇವೆಲ್ಲ ಪರ್ಯಾಯಶಬ್ದಗಳು. "ಭೂತಾನಿ ವಿಷ್ಣುರ್ಭುವನಾನಿ ವಿಷ್ಣುರ್ವನಾನಿ ವಿಷ್ಣುರ್ಗಿರಯಶ್ಚ ವಿಷ್ಣುಃ" ಎಂಬ ಪುರಾಣವಚನದಂತೆ ಒಬ್ಬ ಮಹಾವಿಷ್ಣುವನ್ನೇ ನಾವು ಭೂತಗಳೆಂದೂ ಭುವನ ಗಳೆಂದೂ ವನಗಳೆಂದೂ ಬೆಟ್ಟಗುಡ್ಡಗಳೆಂದೂ ಬೇರೆಬೇರೆಯಾಗಿ ವ್ಯವಹರಿಸುತ್ತಿರುವೆವು. "ಅವರವರಿಗವರ ಮನವೊಲಿದುದೇ ಬ್ರಹ್ಮ" ಎಂದು ಸಪ್ಪಣ್ಣನವರು ಹೇಳಿದ ಮಾತನ್ನೂ ಹಾಗೆಯೇ ಅರ್ಥಮಾಡಿಕೊಳ್ಳಬಹುದು. ಇರುವದೊಂದು ಬ್ರಹ್ಮ ಅಥವಾ ಆತ್ಮನು; ಅದನ್ನು ನಮ್ಮ ಮನಸ್ಸಿನ ಒಲವಿಗೆ ತಕ್ಕಂತೆ ಬೇರೆಬೇರೆಯ ವಸ್ತುಗಳಾಗಿ ನಾವು ಕಾಣುತ್ತಿರುವೆವು. ಈ ಯಾವ ತೋರಿಕೆಗಳೂ ಆತ್ಮನಿಗಿಂತ ಬೇರೆಯಾಗಿ ಇರುವದೇ ಇಲ್ಲವಾದ್ದರಿಂದ ಹಗ್ಗವನ್ನು ಅರಿತರೆ ಅದರಲ್ಲಿ ಕಲ್ಪಿತವಾಗಿದ್ದ ಹಾವು, ನೀರಿನ ಕೋಡಿ, ಕೋಲು - ಮುಂತಾದವುಗಳೆಲ್ಲವನ್ನೂ ಅರಿತಂತೆಯೇ ಆಯಿತೆಂಬ ಕಾರಣದಿಂದ ಅಧ್ಯಾತ್ಮವಿದ್ಯೆಯನ್ನು ಬಲ್ಲವರು ಸರ್ವಜ್ಞರೆಂದು ಹೇಳುತ್ತಾರೆ.

ಆತ್ಮನೇ ಈ ಜಗತ್ತಿನ ಸಾರವು. ಈ ಜಗತ್ತಿನ ಸಾರವಾದ ಆತ್ಮನನ್ನು ಕುರಿತು ಹೇಳುವ ವಿದ್ಯೆಯೇ ಅಧ್ಯಾತ್ಮವಿದ್ಯೆ. ಈ ವಿದ್ಯೆಯನ್ನು ತಿಳಿದರೆ ಜಗತ್ತಿನ ತಿರುಳನ್ನೇ ತಿಳಿದುಕೊಂಡಂತೆ ಆಯಿತು. ತೆಂಗಿನಕಾಯಿನ ತಿರುಳನ್ನು ಬಿಟ್ಟು ಮೇಲಿನ ಶಿಪ್ಪೆಗೆ ಜಗಳವಾಡುವ ಮೂರ್ಖರಂತೆ ನಾವು ತಿರುಳಾದ ಆತ್ಮನನ್ನು ಬಿಟ್ಟು ಮೇಲುಮೇಲೆ ಕಾಣುವ ಶಿಪ್ಪೆಯಂತಿರುವ ಹಣಕಾಸು, ಮನೆ ಮಠ - ಮುಂತಾದವುಗಳಿಗಾಗಿ ಗುದ್ದಾಡುತ್ತಿರುವೆವು. ಬರಿಯ ವ್ಯಕ್ತಿಗಳೇ ಅಲ್ಲ; ರಾಷ್ಟ್ರಗಳು ಕೂಡ ವಿಶ್ವಶಾಂತಿಗೆಂದು ಸೈನ್ಯಗಳನ್ನು ಹೆಚ್ಚಿಸುತ್ತಿವೆ! ಶಾಂತಸ್ವರೂಪನಾದ ಪರಮಾತ್ಮನನ್ನು ಕೈಬಿಟ್ಟವರಿಗೆ ಎಲ್ಲಿಯ ಶಾಂತಿ? ಏಕದೇಶವಿದ್ಯೆಗಳಿಂದ ರಾಗದ್ವೇಷಗಳು ಹೆಚ್ಚುವವೇ ಹೊರತು ಎಂದಿಗೂ ಮನಶ್ಶಾಂತಿ ದೊರೆಯದು. ಅಧ್ಯಾತ್ಮವಿದ್ಯೆಯನ್ನರಿತವರು ಈ ಶಿಪ್ಪೆಗಾಗಿ ಗುದ್ದಾಡುವ ಗೋಜಿಗೆ ಹೋಗುವದಿಲ್ಲ. 'ವೈರಾಗ್ಯವೇ ಅಭಯವು' ಎಂಬ ತತ್ತ್ವವು ಅವರಿಗೆ ಮನದಟ್ಟಾಗಿರುತ್ತದೆ.

ಈ ಅಧ್ಯಾತ್ಮವಿದ್ಯೆಯೆಂಬುದೊಂದು ಪರಮಾತ್ಮನ ಮಹಾವಿಭೂತಿಯು. ಗೀತೆಯಲ್ಲೆಲ್ಲ ಇದೇ ವಿದ್ಯೆಯನ್ನು ಹೇಳಿರುತ್ತದೆ. ಎಲ್ಲಾ ವಿದ್ಯೆಗಳ ಜೀವಾಳವೂ ಇದು. ಯಾವ ವಿದ್ಯೆಯನ್ನು ಕಲಿತರೂ 'ಬೇಕು' ಎಂಬುದು ಬಿಡುವದಿಲ್ಲ; ಅಧ್ಯಾತ್ಮ ವಿದ್ಯೆಯನ್ನು ಕಲಿತವರಿಗೆ ಮಾತ್ರ ಯಾವದೂ ಬೇಕೆನಿಸುವದಿಲ್ಲ. ಎಷ್ಟುಸಲ ಅನ್ನಹಾಕಿದರೂ ಅನ್ನಬೇಕು ಎನ್ನುವದು ತಪ್ಪುವದಿಲ್ಲವಷ್ಟೆ; ಆದರೆ ಹಸಿವನ್ನೇ ಎಂದೆಂದಿಗೂ ಅಡಗಿಸುವ ವಿದ್ಯೆಯನ್ನು ಯಾರಾದರೂ ಕಲಿಸಿದರೆ - ರೋಗದಿಂದ ಹಸಿವು ಕಾಣಿಸದೆ ಇರುವದನ್ನಲ್ಲ, ಹಸಿವಿನ ಬಾಧೆಯಿಲ್ಲದೆ ಎಂದೆಂದಿಗೂ ತೃಪ್ತ ರಾಗಿರುವ ವಿದ್ಯೆಯನ್ನು ಯಾರಾದರೂ ಹೇಳಿಕೊಟ್ಟರೆ - ನಾವು ಅವರಿಗೆ ಎಷ್ಟು ಕೃತಜ್ಞರಾಗಿದ್ದೇವು! ಅಂಥ ವಿದ್ಯೆಯನ್ನು - ಯಾವದೊಂದು ವಿಷಯದ ಹಸಿವೂ ಇಲ್ಲದ ಅಧ್ಯಾತ್ಮವಿದ್ಯೆಯನ್ನು - ಕಲಿತ ಮಹಾತ್ಮರೂ ಈ ಲೋಕದಲ್ಲಿ ಉಂಟು. ಒಮ್ಮೆ ಹರಿಹರಕ್ಕೆ ಒಬ್ಬ ಸಂನ್ಯಾಸಿಗಳು ಬಂದಿದ್ದರು. ಅವರು ದೇವಸ್ಥಾನದ ಹೆಬ್ಬಾಗಿಲಲ್ಲಿ ಕುಳಿತಿದ್ದರು. ನಾನು ಅವರಲ್ಲಿಗೆ ಹೋಗಿ ನಮ್ಮ ಮನೆಗೆ ಬರಬೇಕೆಂದು ಬೇಡಿಕೊಂಡೆ. "ಮನೆ ಏಕೆ? ಈ ಸ್ಥಳವೇ ನಮಗೆ ಸಾಕು!" ಎಂದರು. ನಮ್ಮ ಮನೆಗೆ ಊಟಕ್ಕೆ ದಯಮಾಡಿಸಬೇಕು ಎಂದು ಕೇಳಿಕೊಂಡೆ. 'ನಾವು ಊಟಮಾಡುವದಿಲ್ಲ' ಎಂದರು. ಹಾಗಾದರೆ ಸ್ವಲ್ಪ ಹಣ್ಣು ತಂದುಕೊಡಲೆ? ಎಂದು ಕೇಳಿದೆ, "ಹಣ್ಣುಬೇಡ" ಎಂದರು. ಆದರೂ ನನ್ನ ಚಾಪಲ್ಯದಿಂದ ಸ್ವಲ್ಪ ಹಣ್ಣನ್ನು ಅವರಿಗೆ ತಂದುಕೊಟ್ಟೆನು. ಸಾಯಂಕಾಲದವರೆಗೂ ಆ ಹಣ್ಣು ಅಲ್ಲಿಯೇ ಇರುತ್ತಿತ್ತು. ಅವರು ಯಾವ ಊರಿಗೆ ಹೋಗುತ್ತಾರೆಯೋ ಅಲ್ಲಿಗೆ ಒಂದು ರೈಲ್ವೆಟಿಕೆಟ್ಟನ್ನಾದರೂ ಕೊಡಿಸೋಣವೆಂದು

'ತಾವು ಎಲ್ಲಿಗೆ ಹೋಗಬೇಕು' ಎಂದು ಕೇಳಿದೆ. "ನಾವು ಎಲ್ಲಿಗೂ ಹೋಗಬೇಕಾದದ್ದಿಲ್ಲ" ಎಂದು ಉತ್ತರ ಬಂತು. ಇಂಥ ನಿಃಸ್ಪೃಹರಾದ ಮಹನೀಯರು ಯಾವ ವಸ್ತುವಿನ ಲಾಭಕ್ಕೆ ಒಳಗಾದಾರು? ಈ ಅಧ್ಯಾತ್ಮವಿದ್ಯೆಯನ್ನು ಹಿಡಿದವರು, ಅವರು!

ಅಧ್ಯಾತ್ಮವಿದ್ಯೆಯು ಗೀತೆಯ ಜೀವಾಳವು. ದೇಶಕಾಲವಸ್ತುಗಳೆಲ್ಲವನ್ನೂ ವ್ಯಾಪಿಸಿಕೊಂಡು ಕೂಟಸ್ಥವಾಗಿರುವದು ಆತ್ಮ, ಬ್ರಹ್ಮ. ಇದರ ತಿಳಿವಳಿಕೆಯೇ ಅಧ್ಯಾತ್ಮವಿದ್ಯೆ. ಈ ವಿದ್ಯೆಯನ್ನು ತಿಳಿದುಕೊಂಡವರಿಗೆ ಬೇಕುಬೇಡಗಳೇ ಇರುವದಿಲ್ಲ. ತನಗಿಂತ ಬೇರೆಯಾದ ವಸ್ತುವಲ್ಲವೆ, ಬೇಕು ಅಥವಾ ಬೇಡ ಎಂದಾಗುವದು! ಎಲ್ಲವೂ ತಾನೇ ಆಗಿದ್ದರೆ ಬೇಕುಬೇಡಗಳೆಲ್ಲಿ? ತಮ್ಮ ಸ್ವರೂಪವೇ ಎಲ್ಲವನ್ನೂ ವ್ಯಾಪಿಸಿರುವ ಬ್ರಹ್ಮವು ಎಂದು, ಬ್ರಹ್ಮವು ನಮ್ಮೆಲ್ಲರ ಆತ್ಮನು; ಆತನು ಎಲ್ಲರಲ್ಲಿಯೂ ಸಮನಾಗಿರುತ್ತಾನೆ. ಇಂಥ ಸರ್ವರ ಆತ್ಮನಾಗಿರುವ ಆತನಿಗೆ ಲೋಕದ ಸುಖದುಃಖಗಳು ಒಂದಿಷ್ಟೂ ಅಂಟುವದಿಲ್ಲ; ಅಂಥ ಪರಮಾತ್ಮನೇ ನಮ್ಮ ಆತ್ಮನು - ಎಂದು ತಿಳಿದವರಿಗೆ ಎಲ್ಲಿಯ ಶೋಕಮೋಹಗಳು? ಎಲ್ಲಿಯ ಸುಖದುಃಖಗಳು? ಎಲ್ಲಿಯ ಬೇಕುಬೇಡಗಳು? ಇಂಥದ್ದು ಈ ಅಧ್ಯಾತ್ಮವಿದ್ಯೆ. ಈ ವಿದ್ಯೆಯು ಇವರಿಗೆ ಬೇಕು, ಇವರಿಗೆ ಬೇಡ ಎಂಬ ವಿಭಾಗವಿಲ್ಲ. ಉಸಿರಾಡುವದು ಹೇಗೆ ಎಲ್ಲರಿಗೂ ಬೇಕಾಗಿರುವದೋ ಹಾಗೆ ಉಸಿರಿಗೂ ಉಸಿರಾಗಿರುವ ಈ ಆತ್ಮನ ವಿದ್ಯೆಯು ಎಲ್ಲರಿಗೂ ಬೇಕಾಗಿದೆ.

ಈ ಸರ್ವಜ್ಞನೂ ಸರ್ವಶಕ್ತನೂ ನಿತ್ಯಶುದ್ಧಬುದ್ಧಮುಕ್ತಸ್ವಭಾವನೂ ಆದ ಭಗವಂತನು ಈ ಜಗತ್ತಿಗೆಲ್ಲ ಮೂಲಕಾರಣನು; ಸರ್ವವೂ ಆತನ ಉಸಿರು, ಆನಂದಘನನಾಗಿರುವ ಆತನೇ ನಮ್ಮೆಲ್ಲರ ಆತ್ಮನು. ಆತನು ಉಸಿರಿನಂತೆ ಲೀಲಾಮಾತ್ರದಿಂದ ಈ ಜಗತ್ತನ್ನು ಸೃಷ್ಟಿಸಿರುತ್ತಾನೆ. 'ನಾನು ಬಹುವಾಗುವೆನು, ಎಲ್ಲರೂ ಆನಂದಮಯರಾಗಿರಬೇಕು' ಎಂಬುದು ಆತನ ಸೃಷ್ಟಿಯ ಸಂಕಲ್ಪವು. ಇದೇ ಪರಮಾತ್ಮನ ಹಾರೈಕೆ. ಎಲ್ಲಾ ಜನರೂ ಸುಖಿಯಾಗಿರಲಿ ಎಂದು ಆತನು ಹಾರೈಸಿದ. ಆದರೆ ನಾವು ಮಾತ್ರ ಹೊಟ್ಟೆಬಟ್ಟೆಗಳು, ಹೆಂಡಿರು ಮಕ್ಕಳು - ಎಂದು ಸಂಕಟಕ್ಕೆ ಸಿಕ್ಕಿಕೊಂಡಿರುತ್ತೇವೆ. ನಿಜವಾದ ದಾಂಪತ್ಯವು ಯಾವದು? ಹೆಂಡತಿ ಏತಕ್ಕೆ ಬೇಕು? ಜೀವನದಲ್ಲಿ ನಮಗೆ ಸಹಚಾರಿಣಿಯಾಗಿರಲಿ, ನಮ್ಮ ಮನೆಯಲ್ಲಿ ಸುಖವು ಸುಳಿದಾಡುತ್ತಿರಲಿ - ಎಂಬುದು ಉದ್ದೇಶ. ಆದರೆ ಆಕೆಯನ್ನು ಮನೆಗೆ ತಂದಬಳಿಕ ಮನೆಯನ್ನು ಮಸಣವನ್ನಾಗಿ ಮಾಡಿಕೊಂಡು ಅಳುವವರ ಪಾಡನ್ನು ಕಂಡು ಅಳಬೇಕೋ, ನಗಬೇಕೋ? ಆರೋಗ್ಯ, ನೀತಿ, ತಿಳಿವಳಿಕೆ, ಸರ್ವಪ್ರೇಮ- ಇವುಗಳ ಗುಟ್ಟನ್ನು ತಿಳಿದುಕೊಂಡಿದ್ದರಲ್ಲವೆ, ಸುಖಸಂಸಾರ? ನಗುನಗುತ ಇರಬೇಕು.

ಇತರರೂ ನಮ್ಮನ್ನು ನೋಡಿ ನಗುನಗುತ ನಲಿಯಬೇಕು. ಇದೇ ಜೀವನದ ಪರಮೋದ್ದೇಶ. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳನ್ನು ಹತ್ತಿಸಿಕೊಂಡು ಒದ್ದಾಡಬಾರದು. ಅದೆಲ್ಲ ಆಧ್ಯಾತ್ಮವಿದ್ಯೆಯ ಜೀವನಕ್ಕೆ ವಿರುದ್ಧ ವಾಗಿರತಕ್ಕದ್ದು.

**ಆದ್ದರಿಂದ ಅಧ್ಯಾತ್ಮವಿದ್ಯೆ ಎಲ್ಲರಿಗೂ ಅತ್ಯಂತ ಅವಶ್ಯವಾದದ್ದು. ಆನಂದ ವಾಗಿರುವದೇ ಜೀವನದ ಮರ್ಮ.** ಇದಕ್ಕೆ ಅಧ್ಯಾತ್ಮವಿದ್ಯೆ ಬೇಕು. ನಾನು ಮೊದಲು ಬ್ರಹ್ಮ ಆಮೇಲೆ ಮನುಷ್ಯ ಮುಂತಾದದ್ದು ಎಂಬ ಭಾವನೆ ಬರಲಿ. ಜನಕನ ವಿದೇಹರಾಜ್ಯದಲ್ಲಿ ಎಲ್ಲರೂ ಬ್ರಹ್ಮವಿಜ್ಞಾನಿಗಳಾಗಿರುತ್ತಿದ್ದರಂತೆ. ಅವರಿಗೆ ಬ್ರಹ್ಮವಿಚಾರವೇ ಜೀವನದ ಉಸಿರಾಗಿತ್ತಂತೆ, ಮಿಕ್ಕ ವಿಚಾರವು ಎರಡನೆಯದಾಗಿತ್ತಂತೆ! ಬ್ರಹ್ಮವಿದ್ಯೆ ಮೊದಲು, ಆಮೇಲೆ ರಾಜಕೀಯವಿಚಾರವೇ ಮುಂತಾದದ್ದು ಎಂಬ ಭಾವನೆಯು ನಮ್ಮೆಲ್ಲರ ಹೃದಯದಲ್ಲಿ ಮೂಡಬೇಕು. ನಮ್ಮ ಪೂರ್ವಿಕರು ಈ ಬ್ರಹ್ಮವಿದ್ಯೆಯನ್ನು, ಈ ಅಧ್ಯಾತ್ಮವಿದ್ಯೆಯನ್ನು, ಅರಿತುಕೊಂಡಿರುತ್ತಾರೆ. ಅಂತರ್ಮುಖಿ ಗಳಾಗಿರುವದು ನಮ್ಮ ಜನಾಂಗದ ಸಂಸ್ಕೃತಿಯಾಗಿಬಿಟ್ಟಿದೆ. ಉಳಿದವರು ಹೊರಮುಖದವರಾಗಿ ವಿಷಯಪ್ರವಣರಾಗಿಬಿಟ್ಟಿರುತ್ತಾರೆ. ಅವರು ಏರೋಪ್ಲೇನ್, ರೇಡಿಯೊ, ಆಟಂ ಬಾಂಬ್ - ಮುಂತಾದವುಗಳನ್ನು ಕಂಡುಹಿಡಿದುಕೊಂಡಿರುತ್ತಾರೆ. ಅದು ಅವರ ಸಂಸ್ಕೃತಿಗೆ ತಕ್ಕಂತೆ ಇದೆ. ಅಟಂಬಾಬಿಗಿಂತಲೂ ಆತ್ಮನಬಾಂಬು ಹೆಚ್ಚಿನದು; ಇದು ಸಿಡಿದರೆ ಎಲ್ಲರಮೇಲೂ ಪ್ರೇಮಸಂಜೀವಿನಿಯನ್ನು ಎರಚಿ ಸತ್ತವರನ್ನು ಕೂಡ ಬದುಕಿಸುವದು! ಈ ಗೀತೆಯನ್ನು ಶ್ರೀಕೃಷ್ಣಭಗವಂತನು ಯುದ್ಧಕಾಲದಲ್ಲಿಯೇ ಉಪದೇಶಿಸಿದ್ದಕ್ಕೆ ಇದೇ ಕಾರಣವಿರಬಹುದು! ಇಂಥ ಅಧ್ಯಾತ್ಮವಿದ್ಯೆಯನ್ನು ನಾವು ಬಿಡಬಾರದು. ಇದನ್ನು ಭಗವಂತನ ಮಹಾವಿಭೂತಿ ಎಂದು ನಾವು ಆದರದಿಂದ ಕಾಣಬೇಕು.

'ವಾದಃ ಪ್ರವದತಾಮಹಮ್' ಎಂಬುದು ಇನ್ನೊಂದು ವಿಭೂತಿ. ಪ್ರವದತಾಮ್ ಎಂದರೆ ಸರಿಯಾಗಿ ಚೆನ್ನಾಗಿ ವಾದವಾಡುವವರಿಗೆ ವಾದವೇ ಮುಖ್ಯ. ವಾದವೆಂದರೆ ತತ್ತ್ವವನ್ನು ಗೊತ್ತುಮಾಡುವದಕ್ಕಾಗಿ ಮಾಡುವ ಚರ್ಚೆ. ಜಲ್ಪವೆಂದರೆ ಹೇಗಾದರೂ ಮಾಡಿ ಎದುರುಪಕ್ಷವನ್ನು ಸೋಲಿಸುವದಕ್ಕೆ ಮಾಡುವ ಚರ್ಚೆ. ಕೋರ್ಟಿನಲ್ಲಿ ಲಾಯರುಗಳು ಹೇಗೆ ತಮ್ಮ ಪಕ್ಷದ ಯೋಗ್ಯತೆಯನ್ನೂ ಎದುರುಪಕ್ಷದ ದೋಷವನ್ನೂ ತೋರಿಸಿಕೊಡುವದಕ್ಕೆ ಪ್ರಯತ್ನಿಸುತ್ತಾರೋ ಹಾಗೆ ಪರಪಕ್ಷಖಂಡನೆಯೂ ತಮ್ಮ ಪಕ್ಷದ ಮಂಡನೆಯೂ ಆಗಬೇಕೆಂಬ ಸಂಕಲ್ಪದಿಂದ ಮಾಡುವ ಚರ್ಚೆಯು ಜಲ್ಪವು. ಇನ್ನೊಂದು ಬಗೆಯ ಚರ್ಚೆಯೂ ಉಂಟು. ಅದರಲ್ಲಿ ತನ್ನ ಪಕ್ಷವೆಂಬುದೇ ಇಲ್ಲ;

ಮತ್ತೊಬ್ಬರ ಪಕ್ಷವನ್ನು ಖಂಡಿಸಿದರೆ ಆಯಿತು. ಅದಕ್ಕೆ ವಿತಂಡಾ ಎಂದು ಹೆಸರು. ಈ ಮೂರು ಬಗೆಯ ಚರ್ಚೆಗಳಲ್ಲಿ ವಾದವೇ, ವೀತರಾಗಿಗಳು ತತ್ತ್ವನಿರ್ಣಯಕ್ಕಾಗಿ ಮಾಡುವ ಚರ್ಚೆಯೇ, ಹೆಚ್ಚಿನದು; ಅದರಲ್ಲಿ ಪರಮಾತ್ಮನು ಸನ್ನಿಹಿತನಾಗಿರುತ್ತಾನೆ. ಅದು ಪರಮಾತ್ಮನ ವಿಭೂತಿಯು. ಪೂರ್ವದಲ್ಲಿ ಪರಮಾರ್ಥವನ್ನು ನಿರ್ಣಯಿಸುವದಕ್ಕಾಗಿ ಬ್ರಹ್ಮಸಭೆ ಸೇರುತ್ತಿತ್ತು. ಅದರಲ್ಲಿ ಅಧ್ಯಯನಮಾಡಿದವರು, ಧರ್ಮಶಾಸ್ತ್ರವನ್ನು ಕಲಿತವರು, ವೇದಾರ್ಥವನ್ನು ತಿಳಿದವರು - ಇವರೆಲ್ಲ ಸೇರಿ ಆಯಾ ವಿಷಯದಲ್ಲಿ ನಿಷ್ಣಾತರಾದವರ ಅಭಿಪ್ರಾಯಕ್ಕೆ ತಲೆಬಾಗಿ ತತ್ತ್ವವನ್ನು ನಿರ್ಣಯಿಸುತ್ತಿದ್ದರು. ಎಲ್ಲರೂ ತತ್ತ್ವಕ್ಕೆ ಅಡಿಯಾಳಾಗಿರುತ್ತಿದ್ದರು. ಅಂಥ ಕಡೆಯಲ್ಲಿ ಶಾಸ್ತ್ರಾರ್ಥವು ನಿರ್ಣಯವಾಗುತ್ತಿತ್ತು. ಆದ್ದರಿಂದ ವಾದವು ಪರಮಾತ್ಮನ ವಿಭೂತಿಯಾಗಿದೆ.

ಉಪನಿಷತ್ತಿನಲ್ಲಿ ಜಲ್ಪಕಥೆಗೆ ಒಂದು ಉದಾಹರಣೆಯನ್ನು ಕಾಣಬಹುದು. ಒಂದು ಸಲ ಜನಕನು ಒಂದು ಮಹಾಯಜ್ಞವನ್ನು ಆರಂಭಿಸಿದನು. ಆ ಸಭೆಯಲ್ಲಿ ಕುರುಪಾಂಚಾಲದೇಶದಿಂದ ಅನೇಕರು ಬ್ರಾಹ್ಮಣರು ಬಂದು ಸೇರಿದ್ದರು. ಅವರಲ್ಲಿ ಬ್ರಹ್ಮಿಷ್ಠನು ಯಾರೆಂದು ತಿಳಿಯುವದಕ್ಕಾಗಿ ರಾಜನು ಒಂದು ಪಣವನ್ನು ಹೂಡಿದನು. ಯಜ್ಞಶಾಲೆಯಲ್ಲಿ ಒಂದು ಸಾವಿರ ಗೋಗಳನ್ನು ಕಟ್ಟಿಸಿ ಒಂದೊಂದರ ಕೋಡುಗಳಿಗೂ ಹತ್ತುಹತ್ತು ಪಾದ ಚಿನ್ನದ ಕೋಡಣಸುಗಳನ್ನು ಹಾಕಿಸಿಟ್ಟನು. ನಿಮ್ಮಲ್ಲಿ ಎಲ್ಲರಿಗಿಂತಲೂ ಬ್ರಹ್ಮಜ್ಞಾನಿಯಾದವನು ಈ ಗೋಗಳನ್ನು ತೆಗೆದುಕೊಳ್ಳಬಹುದು! -ಎಂದು ಘೋಷಣೆಮಾಡಿಸಿದನು. ಆ ಚರ್ಚೆಯಲ್ಲಿ ಯಾಜ್ಞವಲ್ಕ್ಯನು ಮಿಕ್ಕ ಬ್ರಾಹ್ಮಣರನ್ನೆಲ್ಲ ಜಯಿಸಿ ಗೋಗಳನ್ನು ತನ್ನ ಮನೆಗೆ ಹೊಡೆಯಿಸಿಕೊಂಡು ಹೋದನೆಂಬ ಕಥೆಯಿದೆ. ಉಪನಿಷತ್ತಿನಲ್ಲಿ ಜಲ್ಪರೀತಿಯಿಂದ ಬ್ರಾಹ್ಮಣರ ಸಂವಾದವನ್ನು ಹೇಳಿದ್ದರೂ ಅಲ್ಲಿಯೂ ತತ್ತ್ವವನ್ನೇ ಸಂವಾದದ ನೆಪದಿಂದ ಕ್ರಮಕ್ರಮವಾಗಿ ನಿರ್ಣಯಿಸಿರುತ್ತದೆ. ಯಾವ ಬಗೆಯ ಚರ್ಚೆಯೇ ಆಗಲಿ, ತತ್ತ್ವಕ್ಕೆ ಪ್ರಾಧಾನ್ಯವಿದ್ದರೆ ಅದನ್ನು ಅವಶ್ಯವಾಗಿ ಭಗವಂತನ ವಿಭೂತಿ ಎಂದು ಭಾವಿಸಬಹುದಾಗಿದೆ.

## ೭೬. ಭಗವಂತನ ವಿಭೂತಿಗಳು ೧೦-(೩೩-೩೪)
## (೧೪-೩-೪೮)

**"ಅಕ್ಷರಗಳಲ್ಲಿ ಅಕಾರವು ನಾನು"** ಎಂಬ ವಿಭೂತಿಯ ವಿಚಾರವನ್ನು ಈ ದಿನ ಮಾಡುವೆವು. ವಿಭೂತಿಗಳನ್ನು ಕ್ರಮವರಿತು ಹೇಳುತ್ತಿಲ್ಲ. ಅಲ್ಲಲ್ಲಿ ಪ್ರಾಧಾನ್ಯವನ್ನು ತೋರಿಸಿತೋರಿಸಿ ಉಪಾಸನೆಗೆಂದು ಹೇಳಿರುತ್ತದೆ. ಅಕಾರವೇ ಎಲ್ಲಾ ವಾಕ್ಕನ್ನೂ

ವ್ಯಾಪಿಸಿದೆ; ಅದೇ ಎಲ್ಲಾ ವರ್ಣಗಳ ರೂಪವನ್ನು ತೆಗೆದುಕೊಳ್ಳುತ್ತದೆ ಎಂದು ಶ್ರುತಿ ಹೇಳುತ್ತದೆ. ಗಂಟಲನ್ನು ತೆರೆದಕೂಡಲೇ ಅಕಾರವು ಹೊರಡುತ್ತದೆ; ಯಾವ ಭಾಷೆಯಲ್ಲಾಗಲಿ ವರ್ಣಮಾಲೆಯ ಮೊದಲನೆಯ ಅಕ್ಷರವು ಅಕಾರವಾಗಿರುತ್ತದೆ. ಅಕಾರವು ವಿಷ್ಣುತತ್ತ್ವವನ್ನು ಹೇಳುತ್ತದೆ. ವೇದದಲ್ಲಿ ಓಂಕಾರವು ಸರ್ವಶಬ್ದಗಳನ್ನೂ ವ್ಯಾಪಿಸಿರತಕ್ಕದ್ದೆಂದು ಹೇಳಿದೆ; ಅದರ ಆದಿಯು ಅಕಾರವು. ಇಲ್ಲಿ ಅಕ್ಷರವೆಂದರೆ ಕಾಗದವೇ ಮುಂತಾದವುಗಳ ಮೇಲೆ ಬರೆಯುವ ಗೆರೆಯಲ್ಲ; ಉಚ್ಚಾರಣೆ ಮಾಡುವಾಗ ಕಿವಿಗೆ ಬೀಳುವ ಸ್ವರವನ್ನು ತೆಗೆದುಕೊಳ್ಳಬೇಕು. ಅಕಾರವನ್ನು ಪರಮಾತ್ಮನು ನಾನು ಎಂದು ಹೇಳಿಕೊಂಡಿರುವುದರ ಸಾರವು ಇಷ್ಟು; ಅಕಾರವು ಎಲ್ಲಾ ವರ್ಣಗಳನ್ನು ವ್ಯಾಪಿಸಿಕೊಂಡಿರುವಂತೆ ಪರಮಾತ್ಮನು ತೋರುವ ಜಗತ್ತೆಲ್ಲವನ್ನೂ ವ್ಯಾಪಿಸಿಕೊಂಡಿರುತ್ತಾನೆ. ಅಕಾರವೇ ಸರ್ವರೂಪಗಳನ್ನೂ ಪಡೆದಿರುವಂತೆ ಪರಮಾತ್ಮನೇ ಎಲ್ಲದರ ರೂಪವನ್ನೂ ಪಡೆದಿರುತ್ತಾನೆ. ಈ ಗುಣಗಳನ್ನೆಲ್ಲ ಅಕಾರದಲ್ಲಿ ಆರೋಪಿಸಿಕೊಂಡು ಅದನ್ನು ಪರಮಾತ್ಮನ ವಿಭೂತಿ ಎಂದು ಧ್ಯಾನಿಸಬೇಕು.

**"ದ್ವಂದ್ವಃ ಸಾಮಾಸಿಕಸ್ಯ ಚ"** ಸಮಾಸಸಮೂಹಗಳಲ್ಲಿ ದ್ವಂದ್ವವು ನಾನು. ದ್ವಂದ್ವಸಮಾಸದಲ್ಲಿ ಉಭಯಪದಗಳ ಅರ್ಥಗಳೂ ಪ್ರಧಾನವಾಗಿರುತ್ತವೆ. ಪರಮಾತ್ಮನು ಎಲ್ಲರನ್ನೂ ಒಳಗೊಂಡಿರುತ್ತಾನೆ, ಎಲ್ಲರೂ ಅವನಿಗೆ ತನ್ನವರೇ - ಎಂಬುದನ್ನು ಈ ಸಮಾಸವು ಸೂಚಿಸುವದು. ಕೆಲವರು ಮಾತ್ರ ನಮ್ಮವರು, ಉಳಿದವರು ಪರಕೀಯರು- ಎಂಬ ಭೇದಭಾವನೆ ಜನರಲ್ಲಿರುವಂತೆ ಭಗವಂತನಲ್ಲಿರುವದಿಲ್ಲ. ಕರ್ಮಫಲದಿಂದ ತಾರತಮ್ಯವನ್ನು ಪಡೆದಿರುವ ಬ್ರಹ್ಮನು ಮೊದಲುಗೊಂಡು ಸ್ತಂಬದವರೆಗಿನ ಎಲ್ಲಾ ಪ್ರಾಣಿಗಳೂ ಭಗವಂತನ ದೃಷ್ಟಿಯಲ್ಲಿ ಸಮಾನರೇ ಆಗಿರುತ್ತಾರೆ. ಈ ಹೋಲಿಕೆಯನ್ನೂ ಮನದಂದು ದ್ವಂದ್ವವನ್ನು ಭಗವಂತನ ವಿಭೂತಿಯಾಗಿ ಭಾವಿಸಬೇಕು.

ನಾನೇ ಅಕ್ಷಯವಾದ ಕಾಲವು. ತಿಥ್ಯಾದಿರೂಪದ ಕಾಲವು ಕ್ಷಯವೃದ್ಧಿ ಗಳುಳ್ಳದ್ದಾದರೂ ಕಾಲಸಾಮಾನ್ಯವು, ಅಖಂಡಕಾಲವು, ಕ್ಷಯವಿಲ್ಲದ್ದು. ಕಾಲಕ್ಕೆ ನಾಶವನ್ನು ಕಲ್ಪಿಸುವದೇ ಆಗುವದಿಲ್ಲ; ಏಕೆಂದರೆ ಆ ನಾಶವನ್ನೂ ಕಾಲದಲ್ಲಿಯೇ ಕಲ್ಪಿಸಬೇಕಾಗುವದು. ಆದ್ದರಿಂದ ಕಾಲಕ್ಕೆ ನಾಶವಿಲ್ಲ; ಇದರಂತೆ ಪರಮಾತ್ಮನಿಗೆ ನಾಶವಿಲ್ಲ. ಕಾಲವು ಬಂದವರನ್ನೆಲ್ಲ ತನ್ನೊಳಗೆ ತೆಗೆದುಕೊಂಡು ಎಣಿಕೆಮಾಡಿ, ಅಳೆಯುವದು. ಭಗವಂತನೂ ಜಗತ್ತನ್ನು ಸೃಷ್ಟಿಸ್ಥಿತಿಲಯಗಳಲ್ಲಿ ಅಳೆದು ಗೊತ್ತುಪಡಿಸು ತ್ತಾನೆ. ಆದ್ದರಿಂದ ಕಾಲವನ್ನೇ ಭಗವಂತನ ವಿಭೂತಿ ಎಂದು ಎಣಿಸಬೇಕು. ಪರಮಾತ್ಮನೇ ನಿಜವಾಗಿ ಕಾಲನು, ಏಕೆಂದರೆ ಅವನು ಕಾಲವನ್ನು ಕೂಡ ತನ್ನೊಳಗೆ ಅಡಗಿಸಿಕೊಳ್ಳಬಲ್ಲನು. ಆದ್ದರಿಂದ ಅವನಿಗ ಕಾಲಂಜರನೆಂದು ಹೆಸರು ಬಂದಿದೆ.

ಆದರೂ ವ್ಯವಹಾರದಲ್ಲಿ ಕಾಲಕ್ಕಿಂತ ಹೆಚ್ಚಿನ ಅಕ್ಷಯಪದಾರ್ಥವನ್ನು ನಾವು ತೋರಿಸಲಾರೆವು. ಆದ್ದರಿಂದ ಅದನ್ನೇ ಇಲ್ಲಿ ಪರಮಾತ್ಮನ ವಿಭೂತಿ ಎಂದು ಗಣಿಸಲಾಗಿದೆ.

**"ಧಾತಾಹಂ ವಿಶ್ವತೋಮುಖಃ"** ಇಡಿಯ ಜಗತ್ತಿಗೂ ಕರ್ಮಫಲವನ್ನು ಗೊತ್ತುಪಡಿಸುವ ವಿಶ್ವತೋಮುಖನು ನಾನು. ವಿಶ್ವತೋಮುಖನೆಂದರೆ ಎಲ್ಲಾ ಕಡೆಗೂ ಮುಖವುಳ್ಳವನು. ಪರಮೇಶ್ವರನು ಎಲ್ಲಿಯೋ ಒಂದುಕಡೆ ದೂರವಾಗಿದ್ದು ಕೊಂಡು ಜಗತ್ತನ್ನು - ದೂರದೇಶದಲ್ಲಿ ಜಮೀನನ್ನು ಗುತ್ತಿಗೆಗೆ ಕೊಟ್ಟಿರುವ ಜಮೀನುದಾರನಂತೆ - ಆಳುತ್ತಿರುವದಿಲ್ಲ. ಆತನು ಎಲ್ಲಾ ಕಡೆಯಲ್ಲಿಯೂ ಎಲ್ಲರ ಕರ್ಮಗಳನ್ನೂ ನೋಡುತ್ತಿದ್ದು ಆಯಾ ಕರ್ಮಕ್ಕೆ ತಕ್ಕಂತೆ ಫಲವನ್ನು ಕೊಡುತ್ತಾನೆ ಎಂಬುದನ್ನು ಈ ವಿಶೇಷಣವು ತಿಳಿಸುತ್ತದೆ. ಎಲ್ಲಾ ಕಡೆಗೂ ಮುಖವುಳ್ಳ ಚತುರ್ವೇದನಾದ ಬ್ರಹ್ಮನನ್ನು ಭಗವಂತನು ಸೃಷ್ಟಿಸಿರುತ್ತಾನೆ. ಆ ಬ್ರಹ್ಮನನ್ನು ಭಗವಂತನೆಂದು ಧ್ಯಾನಿಸಬೇಕು ಎಂದಾದರೂ ಅರ್ಥವನ್ನು ಮಾಡಬಹುದು.

**"ಸರ್ವಹರನಾದ ಮೃತ್ಯುವು ನಾನು."** ಧನ, ಯೌವನ, ಆರೋಗ್ಯ, ಬಲ, ಉತ್ಸಾಹ - ಮುಂತಾದವುಗಳನ್ನು ಅಪಹರಿಸುವ ಮೃತ್ಯು ಒಬ್ಬನು; ಪ್ರಾಣವನ್ನೇ ಅಪಹರಿಸಿ ಎಲ್ಲವನ್ನೂ ಅಪಹರಿಸುವ ಮೃತ್ಯುವು ಸರ್ವಹರಮೃತ್ಯುವೆಂಬ ಮತ್ತೊಬ್ಬನು. 'ಸರ್ವಹರನಾದ ಮೃತ್ಯುವನ್ನು ನಾನೆಂದು ತಿಳಿ' ಎಂದು ಭಗವಂತನು ಹೇಳಿರುವದರಲ್ಲಿ ಸ್ವಾರಸ್ಯವಿದೆ. ಏಕೆಂದರೆ ಮೃತ್ಯು ಎಂದರೇ ಜನರು ಗಡಗಡನೆ ನಡುಗುತ್ತಾರೆ. ಹೀಗಿರುವಲ್ಲಿ ಮೃತ್ಯುವನ್ನು ಉಪಾಸನೆಮಾಡುವದೆಂದರೇನು? ಭಯಂಕರವಾಗಿ ಕಾಣುವದು ಪರಮೇಶ್ವರನೆಂದು ಉಪಾಸನೆಮಾಡುವದಕ್ಕೆ ಕೆಚ್ಚೆದೆಯು ಬೇಕು. 'ಕಾಳಿ', 'ನರಸಿಂಹ' - ಮೊದಲಾದ ಆಕಾರದಿಂದ ಪರಮೇಶ್ವರನನ್ನು ಉಪಾಸನೆ ಮಾಡುವದರಲ್ಲಿ ಈ ತತ್ತ್ವವು ಅಡಗಿರುತ್ತದೆ. ಸಾಮಾನ್ಯರಿಗೆ ಇವು ಭಯಂಕರವಾಗಿ ತೋರುವದು ಸ್ವಾಭಾವಿಕವಾಗಿರುತ್ತದೆ. ಆದರೆ ಭಕ್ತರಿಗೆ ಈ ರೂಪಗಳು ಎಂದಿಗೂ ಭಯಂಕರವಾಗಿರುವದಿಲ್ಲ. ಸಿಂಹದ ಮರಿಗಳು ಸಿಂಹಕ್ಕೆ ಹೆದರುವವೇನು? ಪರಮಾತ್ಮನು ಶಿವರಿಗೆ, ಪುಣ್ಯವಂತರಿಗೆ, ಶಿವನಾಗಿರುತ್ತಾನೆ, ಅಶಿವರಿಗೆ ಅಶಿವನಾಗಿರುತ್ತಾನೆ - ಎಂದು ಸ್ಮೃತಿಯುಂಟು. ಸಾಯುವ ಕಾಲದಲ್ಲಿ ಮೃತ್ಯುವಿಗೆ ಅಂಜಬೇಕೆಂದು ಜನರು ತಿಳಿದುಕೊಂಡಿರುತ್ತಾರೆ; ಆದರೆ ಸರಿಯಾಗಿ ನೋಡಿದರೆ ಜಗತ್ತು ಯಾವಾಗಲೂ ಮೃತ್ಯುವಿನ ದವಡೆಯೊಳಗೇ ಇರುತ್ತದೆ. ಈ ಜಗತ್ತಿನಲ್ಲಿ ನಾಶವಾಗದ್ದು ಯಾವದಿದೆ? ಪ್ರತಿಯೊಂದು ಪದಾರ್ಥವೂ ಮಾರ್ಪಡುತ್ತಲೇ ಇರುತ್ತದೆ; ಒಂದಲ್ಲ ಒಂದು ದಿನ ನಾಶವಾಗುತ್ತದೆ. ನಾವುಗಳೆಲ್ಲ ಭೋಗರೂಪವಾದ ಮೃತ್ಯುವಿನ ಕೋರೆದಾಡೆಗಳ

ಸಂದಿಯಲ್ಲಿ ಸಿಕ್ಕಿ ಒದ್ದಾಡುತ್ತಿರುತ್ತೇವೆ. ಇಂದ್ರಿಯಗಳೆಲ್ಲವೂ ಇಷ್ಟಿಷ್ಟಾಗಿ ಸವೆಯುತ್ತಲೇ ಇರುತ್ತವೆ, ಅಷ್ಟರಮಟ್ಟಿಗೆ ನಾವು ಪ್ರತಿದಿನವೂ ಮೃತ್ಯುವಿಗೆ ವಶವಾಗಿಯೇ ಇರುತ್ತೇವೆ. ಸರ್ವಹರಮೃತ್ಯುವು ಪ್ರಾಣವನ್ನು ಕೊಂಡೊಯ್ದರೆ ಹೇಗೆ? ಅದು ಭಗವಂತನ ವಿಭೂತಿಯೆನಿಸಿಕೊಳ್ಳುವದಕ್ಕೆ ಹೇಗೆ ತಕ್ಕದ್ದಾಗಿದೆ? ಎಂದರೆ ಮೃತ್ಯುವು ನಮಗೆ ಆಗಾಗಲೆ ಎಚ್ಚರಿಕೆ ಕೊಡುತ್ತಲೇ ಇರುತ್ತಾನೆ; ಭೋಗಗಳಿಗಾಗಿ ಹುಟ್ಟಿದವರಲ್ಲ, ನೀವು, ಇಂದ್ರಿಯಗಳನ್ನು ಜಯಿಸಿ ಪರಮಾತ್ಮನ ಪದವಿಯನ್ನು ಪಡೆಯತಕ್ಕವರು ನೀವು - ಎಂದು ಆಗಾಗ್ಗೆ ಮನಸ್ಸಿಗೆ ಹಿಡಿಯುವದಕ್ಕೆ ತಕ್ಕ ಅನುಭವಗಳನ್ನು ತಂದುತಂದು ಒಡ್ಡುತ್ತಲೇ ಇರುತ್ತಾನೆ. ಈ ಜನ್ಮವನ್ನು ನಾವು ವ್ಯರ್ಥಮಾಡಿಕೊಂಡರೂ ಮತ್ತೊಂದು ಜನ್ಮವನ್ನಾದರೂ ಸದುಪಯೋಗ ಮಾಡಿಕೊಳ್ಳಿರಿ ಎನ್ನುವಂತೆ, ಮತ್ತೊಂದು ಅವಕಾಶವನ್ನು ಕಲ್ಪಿಸುವದಕ್ಕಾಗಿ ಈ ಜನ್ಮದ ಶರೀರವನ್ನು ಕಿತ್ತೊಗೆಯುತ್ತಾನೆ. ಇದೆಲ್ಲ ಪರಮಾತ್ಮನ ದಯೆಯಲ್ಲದೆ ಮತ್ತೇನು?

'ಸರ್ವಹರಮೃತ್ಯು'ವೆಂಬುದು ಭಗವಂತನ ಕರುಣದ ಕುರುಹಲ್ಲ, ಆದರೂ ಅದು ನಮಗೆ ಅಷ್ಟೊಂದು ಭಯಂಕರವಾಗಿ ಕಾಣುವದಕ್ಕೆ ಕಾರಣವೇನೆಂದರೆ, ನಮಗೆ ಈ ಶರೀರ, ಇದಕ್ಕೆ ಸಂಬಂಧಪಟ್ಟ ಹೆಂಡಿರು, ಮಕ್ಕಳು, ನೆಂಟರಿಷ್ಟರು, ಧನಕನಕವಸ್ತುವಾಹನಗಳು, ಹೊಲಮನೆಗಳು, ಅಧಿಕಾರ, ಕೀರ್ತಿ - ಮುಂತಾದವುಗಳ ಅಭಿಮಾನವು ಮಿತಿಮೀರಿರುತ್ತದೆ. ಈ ಅಭಿಮಾನದಿಂದ ನಾವು ಎಷ್ಟು ದುಃಖವನ್ನು ಅನುಭವಿಸುತ್ತಿದ್ದರೂ ನಾವು ಈ ಸನ್ನಿವೇಶವನ್ನು ಬಿಟ್ಟುಹೋಗುವದಕ್ಕೆ ಸಿದ್ಧರಾಗಿರುವದಿಲ್ಲ. ದಯಾಳುವಾದ ಭಗವಂತನು ತನ್ನ ವಿಭೂತಿಯಾದ ಸರ್ವಹರಮೃತ್ಯುವಿನ ಮೂಲಕ ನಮ್ಮನ್ನು ಈ ಸಂಕಟದಿಂದ ಪಾರುಮಾಡಿ ಮತ್ತೊಂದು ಜನ್ಮವನ್ನು ಕೊಡುತ್ತಾನೆ. ಎಷ್ಟುಕೋಟಿ ಜನ್ಮಗಳಾದರೂ ನಾವು ತಪ್ಪನ್ನು ತಿದ್ದಿಕೊಳ್ಳದೆ ಇರಬಹುದು; ಅದರಿಂದ ಸಹಿಸುವದಕ್ಕಸದಳವಾದ ವ್ಯಥೆಯನ್ನು ಅನುಭವಿಸಲೂಬಹುದು; ಆದರೆ ಭಗವಂತನ ಕರುಣೆಯು ಅಪಾರವಾಗಿರುವದರಿಂದ ನಮಗೆ ಮತ್ತೆಮತ್ತೆ ತಿದ್ದಿಕೊಳ್ಳುವ ಅವಕಾಶವನ್ನು ಕೊಡುತ್ತಲೇ ಇರುವನು. ನಾವುಗಳೆಲ್ಲರೂ ಆತನ ಕೃಪಾಛತ್ರದ ನೆರಳಿನಲ್ಲಿಯೇ ಇರುತ್ತೇವೆ. ಆತನ ಈ ಕಲ್ಪದ ಪ್ರಾಣಿಗಳೆಲ್ಲರೂ ಇನ್ನು ಮುಂದಕ್ಕೆ ಸ್ವಲ್ಪವೂ ಸರಿಯಾಗಿ ನಡೆಯಲಾರರೆಂದು ತೋರಲು ಅವರೆಲ್ಲರನ್ನೂ ಪ್ರಲಯದಲ್ಲಿ ತನ್ನುದರದಲ್ಲಿಯೇ ಇಟ್ಟುಕೊಂಡು ಕಾಪಾಡಿ ಮತ್ತೆ ಕಲ್ಪಾದಿಯಲ್ಲಿ ಅವರಿಗೆ ಕರಣಕಳೇಬರಾದಿಗಳನ್ನು ಕೊಟ್ಟು ಅನುಗ್ರಹಿಸುವನು!

ಈ ದೃಷ್ಟಿಯಿಂದ ನೋಡಿದರೆ ಮೃತ್ಯುವನ್ನು ಸ್ವಾಗತೀಕರಿಸುವದನ್ನು ನಾವೆಲ್ಲರೂ ಕಲಿಯಬೇಕೆಂದು ಸ್ಪಷ್ಟವಾಗುತ್ತದೆ. ಮೃತ್ಯುವೆಂಬುದು ನಮ್ಮಿಂದ ಒಂದು ಬಗೆಯ

ತಪಸ್ಸನ್ನು ಮಾಡಿಸಿ ನಿರುಪಯೋಗಿಯಾದ ಹಳೆಯದನ್ನು ಬಿಡಿಸಿ ಹೊಸದನ್ನು ಕೊಡಿಸುವ ದ್ವಾರವಾಗಿರುತ್ತದೆ. ಭೀಷ್ಮಾಚಾರ್ಯರು ತಾವು ಸಾಯುವ ಕಾಲದಲ್ಲಿ ಭಗವಂತನನ್ನು ವಿಧವಿಧವಾಗಿ ಪ್ರಾರ್ಥಿಸಿದ ಬಳಿಕ, ನಾನು ಲೌಕಿಕೋಪಾಯಗಳಿಂದ ವಂಚಿಸಿರಬಹುದಾದ ಜ್ವರಾದಿಗಳೆಲ್ಲವೂ ಬಂದು ನನ್ನನ್ನು ಬಿಡುಗಡೆಮಾಡಲಿ! ಎಂದು ಪ್ರಾರ್ಥಿಸಿರುತ್ತಾರೆ. ನಾವು ಪಡಬೇಕಾದ ಕಷ್ಟಗಳನ್ನು ಅನುಭವಿಸಿ ಕಳೆದುಕೊಂಡು ಉತ್ತಮಗತಿಯನ್ನು ಪಡೆಯುವದಕ್ಕೆ ಹೊರಟಿರುತ್ತೇವೆಂಬ ಭಾವನೆಯು ಸಾಯುವ ಕಾಲಕ್ಕೆ ಮನಸ್ಸಿನಲ್ಲಿ ಬರಬೇಕು. ಈ ಜನ್ಮದಲ್ಲಿ ಜನನ, ರೋಗ, ಮುಪ್ಪು, ಸಾವು-ಇವೆಲ್ಲ ಕಷ್ಟಗಳೇ ಆದರೂ ಇವುಗಳನ್ನು ಕೆಚ್ಚೆದೆಯಿಂದ ಸಹಿಸಿಕೊಳ್ಳುವ ಮನಃಸ್ಥಿತಿಯು ಬರಬೇಕು. ಈ ಜನ್ಮಕ್ಕೆ ನಗುನಗುತ ಬರಬೇಕು, ಇಲ್ಲಿ ನಗುನಗುತ ಇರಬೇಕು, ಕೊನೆಗೆ ನಗುನಗುತ ಬರುವಾಗ ಸಂತೋಷ, ಆಮೇಲೆ ಬರುಬರುತ್ತಾ ಒದ್ದಾಟ, ಆಮೇಲೆ ರಿಟೈರ್ ಆದರೆ ಬಹಳ ದುಃಖ - ಹೀಗೆ ಆಗುವದು ಬಹುಜನರಲ್ಲಿ ಕಂಡು ಬರುತ್ತದೆ. ಇದು ಸರಿಯಲ್ಲ. ಮೃತ್ಯುವಿನ ವಿಷಯದಲ್ಲಿ ಹೀಗೆ ಆಗಬಾರದು. ಮೃತ್ಯುವನ್ನು ಸ್ವಾಗತಿಸಬೇಕು. ಅಷ್ಟೇ ಅಲ್ಲ, ಅದನ್ನು ಪೂಜಿಸಬೇಕು, ಭಗವಂತನ ಸ್ವರೂಪವೆಂದು ತಿಳಿಯಬೇಕು. ನಮಗೆ ತಿಳಿದ ಒಬ್ಬ ಮಹನೀಯ ಅಜ್ಜನವರು ದೇಹವನ್ನು ಬಿಟ್ಟು ತೆರಳುವ ಸಮಯದಲ್ಲಿ ಮನೆಯವರೆಲ್ಲರೂ ಸುತ್ತಲೂ ನಿಂತುಕೊಂಡು ಕಣ್ಣೀರಿಡುತ್ತಾ "ನಮಗೇನು ಗತಿ, ನಮಗೇನು ಹೇಳುತ್ತೀರಿ?" ಎಂದು ಕೇಳಿದರಂತೆ. ಅದಕ್ಕೆ ಅವರು ನಗುತ್ತಾ "ನನ್ನದೆಲ್ಲ ಇಲ್ಲಿಯೇ ಬಿಟ್ಟಿದೇನೆ; ಇದರಲ್ಲಿ ಯಾವದನ್ನೂ ಇಲ್ಲಿಂದ ಒಯ್ಯುವ ಹಾಗಿಲ್ಲ. ಆದ್ದರಿಂದ ನಿಮ್ಮದೇನೋ ಸರಿಯಾಯಿತು. ನನಗೇನು ಗತಿ! ನನಗೇನು ಹೇಳುತ್ತೀರಿ?" ಎಂದು ಕೇಳಿದರಂತೆ! ನಾವು ಸಾಯುವಾಗ "ಈ ಜನ್ಮದಲ್ಲೇನೋ ತಪ್ಪು ಮಾಡಿದ್ದು ಆಯಿತು; ಮುಂದಿನ ಜನ್ಮದಲ್ಲಿಯಾದರೂ ಸರಿಯಾದ ಬುದ್ಧಿಯನ್ನು ಕೊಡು, ದೇವ" ಎಂದಾದರೂ ಬೇಡಿಕೊಳ್ಳುವದಕ್ಕೆ ಸಿದ್ಧರಾಗಿರಬೇಡವೆ? ಮೃತ್ಯುವು ಭಗವಂತನ ವಿಭೂತಿ ಎಂದಿರುವದಕ್ಕೆ ಇಂಥ ವಿಚಾರಗಳು ಸಹಾಯಕವಾಗಿರುತ್ತವೆ.

**'ಉದ್ಭವಶ್ಚ ಭವಿಷ್ಯತಾಮ್'** ಉದ್ಭವವೆಂದರೆ ಹೊಸದಾಗಿ ಬರುವ ಅಭ್ಯುದಯವು. ಈ ಪ್ರಪಂಚದಲ್ಲಿ ಹೊಸದೆಂದರೇ ನಮ್ಮ ಮನಸ್ಸನ್ನು ಆಕರ್ಷಿಸುತ್ತದೆ. ಹೊಸದಾಗಿ ಹುಟ್ಟಿದ ಮಕ್ಕಳು, ಪ್ರಾಣಿಗಳ ಮರಿಗಳು, ಪೈರುಪಚ್ಚೆಗಳ ಅಂಕುರಗಳು, ನಕ್ಷತ್ರಗಳು - ಇವುಗಳು ಎಷ್ಟು ಸುಂದರವಾಗಿ ಎಷ್ಟು ಮನಮೋಹಕವಾಗಿ, ಎಷ್ಟು ಮುದ್ದಾಗಿ ಕಾಣಿಸುತ್ತಿರುವವು! ಇಂಗ್ಲಿಷಿನವರು ನಮ್ಮ ದೇಶಕ್ಕೆ ಹೊಸದಾಗಿ ಬಂದಾಗ ಅವರ ವೇಷ, ಭಾಷೆ, ನಡತೆ - ಎಲ್ಲವೂ ನಮಗೆ ಹೊಸದಾಗಿದ್ದದ್ದರಿಂದ ಎಲ್ಲವೂ

ನಮ್ಮ ಚಿತ್ತವನ್ನು ಸೆಳೆದವು. ಈಗ ಸ್ವರಾಜ್ಯ, ಖಾದಿ, ಹಿಂದಿಪ್ರಚಾರ - ಮುಂತಾದವು ಎಷ್ಟು ಮನಸ್ಸಿಗೆ ಮೆಚ್ಚಾಗಿವೆ! ನಮ್ಮ ದೇಶಕ್ಕೆ ಹೊಸದಾಗಿ ಪ್ಲೇಗು ಬಂದಾಗಲೊ? ಅದೂ ಮನಸ್ಸನ್ನು ಸೆಳೆಯಿತೆ? ಎಂದು ನೀವೆನ್ನಬಹುದು. ಅನೇಕರಿಗೆ ಅದು ಅಂಜಿಕೆಯನ್ನು ಮಾಡಿತೆಂಬುದು ನಿಜ. ಆದರೆ ಆಗಲೂ ಹೊಸದಾಗಿ ಬಂದ ಆ ರೋಗವನ್ನು ಸ್ವರೂಪ, ನಿದಾನ, ಚಿಕಿತ್ಸಾದಿಗಳ ರೂಪದಿಂದ ಚರ್ಚಿಸಲು ಡಾಕ್ಟರುಗಳು ಎಷ್ಟು ಚಿತ್ತೈಕಾಗ್ರತೆಯನ್ನು ವಹಿಸಿದರು! ಎಷ್ಟು ಜನಗಳು ಭಯದಿಂದ ದೇವರಿಗೆ ಹರಕೆ ಕಟ್ಟಿದರು, ಎಷ್ಟು ಜನರು ಜಪತಪಗಳನ್ನು ಆಚರಿಸಿದರು!

ಎಷ್ಟೋ ಜನರು ಚಾರ್ವಾಕರೆಂದು ಹೇಳಿಕೊಳ್ಳುತ್ತಾರೆ. ಆದರೆ ಅವರಿಗೆ ಅಪರಿಮಿತವಾದ ಸಹಿಸಲಶಕ್ಯವಾದ ಸಂಕಟವು ಬಂದೊದಗಿದರೆ ಕೂಡಲೆ ಈಶ್ವರನ ಅಸ್ತಿತ್ವವನ್ನು ನಂಬಿ ಶಾಂತಿ, ಮಂತ್ರಪುರಶ್ಚರಣೆ - ಮುಂತಾದವುಗಳನ್ನು ಕೈಕೊಳ್ಳುವರು! ಶುದ್ಧ ನಾಸ್ತಿಕರು ಕೂಡ ಈಶ್ವರನು ಇದಾನೆ, ಇಲ್ಲ - ಎಂಬ ಚರ್ಚೆಯಲ್ಲಿ ಭಾಗವನ್ನು ವಹಿಸುವದು ಆಗ ಹೆಚ್ಚು. ಜರ್ಮನರಿಗೂ ರಷ್ಯನರಿಗೂ ಯುದ್ಧವಾದಾಗ ಮಾಸ್ಕೊ ಪಟ್ಟಣದಲ್ಲಿ ನಾಸ್ತಿಕರಾದ ಸಾವಿರಾರು ಜನರು ಮೊಳಕಾಲೂರಿ ದೇವರ ಪ್ರಾರ್ಥನೆ ಮಾಡಿದರೆಂದು ವೃತ್ತಾಂತಪತ್ರಿಕೆಗಳಲ್ಲಿ ಸುದ್ದಿ ಬಂದಿತ್ತು! ಈ ದೃಷ್ಟಿಯಿಂದ ಯುದ್ಧದ ಬರುವಿಕೆಯೂ ಅವರಿಗೆ ಕುತೂಹಲ ಶ್ರದ್ಧಾಭಕ್ತಿಗಳನ್ನುಂಟುಮಾಡಿತೆಂದು ಹೇಳಬೇಕಾಗುತ್ತದೆ. ಅಂಥ ಸಂದರ್ಭಗಳಲ್ಲಿ ದೇವರು ನಮ್ಮ ಬಳಿಗೆ ಹೇಗೋ ನುಸಿದುಕೊಂಡು ಬರುತ್ತಾನೆ! ಹೀಗೆ ಹೊಸಹೊಸ ರೂಪಿನಿಂದ ನಮ್ಮಲ್ಲಿ ಕಾಣಿಸಿಕೊಳ್ಳುವವನಾದ್ದರಿಂದ ದೇವರು ಉದ್ಭವವೆನಿಸುವನು.

ಪದಾರ್ಥಗಳು ಯಾವವೇ ಆಗಲಿ ಹೊಸದಾಗಿ ಬಂದರೆ, ಆಗ ನಮ್ಮಲ್ಲಿ ಅನಿರೀಕ್ಷಿತವಾದ ಶ್ರದ್ಧಾದಿಭಾವಗಳನ್ನುಂಟುಮಾಡುವವು. ಅವುಗಳನ್ನೆಲ್ಲ ಭಗವಂತನ ವಿಭೂತಿಗಳೆಂದು ತಿಳಿಯುವವರಿಗೆ ಉತ್ತಮ ಕಲ್ಯಾಣವು ಆಗುವದು. ಸತತವಾಗಿರುವ ಬಿಂದುಗಳ ಸಾಲು ರೇಖೆಯಾಗುವಂತೆ, ಸತತವಾದ ಈ ವಿಭೂತಿಗಳು ಒಂದೊಂದೂ ಭಗವಂತನು ಎಂದು ಭಾವಿಸುವವರಿಗೆ ಎಲ್ಲವೂ ಪರಮಾತ್ಮನಾಗಿ ಬಿಡುವದು. ಸಾಕಾರವಾಗಿರುವ ಪ್ರತಿಮೆಯಲ್ಲಿ ಈಶ್ವರನನ್ನು ಪೂಜಿಸುವಾಗ ಪಾದಾದಿಯಾಗಿ ಅಂಗಪೂಜೆಯನ್ನು ಮಾಡುವರಷ್ಟೆ; ಆಗ ಒಂದೊಂದು ಅವಯವದಲ್ಲಿಯೂ ಅದು ಈಶ್ವರನೆಂಬ ಭಾವವು ಹೃದಯದಲ್ಲಿ ಮೂಡಿದಂತೆಲ್ಲ ಇಡಿಯ ವಿಗ್ರಹದಲ್ಲಿಯೇ ವಿಗ್ರಹತ್ವಬುದ್ಧಿಯು ಮರೆತುಹೋಗಿ ದೇವತ್ವಬುದ್ಧಿಯು ಅದರ ಸ್ಥಾನದಲ್ಲಿ ನಿಲ್ಲುವದು! ಒಂದೊಂದು ವಸ್ತುವನ್ನೂ ಪರಮಾತ್ಮನೆಂದು ಚಿಂತಿಸುತ್ತಿರುವ ಉಪಾಸಕನನ್ನು ಹೀಗೆಯೇ ಎಲ್ಲವೂ ಪರಮಾತ್ಮನೆಂಬ ಭಾವವು ಹಿಡಿದುಕೊಂಡುಬಿಡುವದು.

"ನಾರಿಯರಲ್ಲಿ ಕೀರ್ತಿ ಶ್ರೀ, ವಾಕ್, ಸ್ಮೃತಿ, ಮೇಧಾ, ಧೃತಿ, ಕ್ಷಮಾ"-ಎಂಬಿವೆಲ್ಲ ಭಗವಂತನ ವಿಭೂತಿಗಳೆಂದು ಭಾವಿಸಬೇಕು. ಇಲ್ಲಿ ಕೊಟ್ಟಿರುವ ಹೆಸರಿನವರೆಲ್ಲರೂ ದೇವತೆಗಳು. ಕೀರ್ತಿದೇವತೆಯಿಂದ ಒಳ್ಳೆಯ ಹೆಸರು, ಶ್ರೀದೇವತೆಯಿಂದ ಧನಸಂಪತ್ತು, ವಾಗ್ದೇವತೆಯಿಂದ ಶುದ್ಧವಾದ ಕಲ್ಯಾಣವಾಕ್ಕು, ಸ್ಮೃತಿದೇವತೆಯಿಂದ ಉತ್ತಮತತ್ತ್ವಗಳ ಸ್ಮೃತಿ, ಮೇಧಾದೇವಿಯ ಅನುಗ್ರಹದಿಂದ ಗ್ರಂಥಧಾರಣಶಕ್ತಿ, ಧೃತಿದೇವತೆಯ ಪ್ರಸಾದದಿಂದ ಶರೀರಕರಣಗಳು ಕುಸಿದು ಬೀಳುತ್ತಿರುವಾಗಲೂ ಎತ್ತಿಹಿಡಿದುಕೊಳ್ಳುವ ಧೈರ್ಯ, ಕ್ಷಮಾದೇವತೆಯ ಅನುಗ್ರಹದಿಂದ ತಮಗೆ ಎಂಥ ಅಪಕಾರವನ್ನು ಮಾಡಿದವರನ್ನೂ ಕ್ಷಮಿಸುವ ಮತ್ತು ಎಂಥ ಸಂಕಟವನ್ನಾದರೂ ತಡೆದುಕೊಳ್ಳುವ ತಾಳ್ಮೆ - ಇವುಗಳು ಬರುವವು. "ಈ ದೇವತೆಗಳ ಅನುಗ್ರಹವು ಒಂದಿಷ್ಟು ತೋರಿಕೆಯದಾಗಿ ಕಾಣಿಸಿಕೊಂಡರೂ ಸಾಕು, ಅಷ್ಟರಿಂದಲೇ ಜನರು ಕೃತಾರ್ಥರಾದೆವೆಂದು ಎಣಿಸಿಕೊಳ್ಳುವರು" ಎಂದು ಶಂಕರಾಚಾರ್ಯರು ಹೇಳಿರುತ್ತಾರೆ. ನಾರಿಯರಲ್ಲೆಲ್ಲ ಈ ದೇವತೆಗಳನ್ನು ಪರಮಾತ್ಮನ ವಿಭೂತಿಗಳು ಎಂದು ಭಾವಿಸಬೇಕು. ಈ ಕೀರ್ತಿಯೇ ಮುಂತಾದ ದೇವತೆಗಳಿಗೆ ಈ ಅನುಗ್ರಹಶಕ್ತಿಯು ಪರಮಾತ್ಮನಿಂದಲೇ ಬಂದಿರುತ್ತದೆ. ಪರಮಾತ್ಮನ ನಾಮವೂ ಮಹಾಕೀರ್ತಿಪ್ರದವಾಗಿರುತ್ತದೆ ಎಂದು ಶ್ರುತಿಯು ಸಾರುತ್ತಿದೆ; ಕೀರ್ತಿದೇವತೆಗೆ ಆ ಮಹಿಮೆಯನ್ನು ಅನುಗ್ರಹಿಸುವಾತನು ಪರಮಾತ್ಮನೇ. ಶ್ರೀದೇವಿಯು ಪರಮಾತ್ಮನ ಪಾದಸೇವೆಯನ್ನು ನಿರಂತರವೂ ಮಾಡುತ್ತಿರುವಳೆಂದು ಪುರಾಣಗಳು ವರ್ಣಿಸುತ್ತವೆ. ಅಂಥ ಲಕ್ಷ್ಮೀಪತಿಯು ಆತನು! ಇದರಂತೆ ವಾಗ್ದೇವತೆಯ ಅನುಗ್ರಹವೆಲ್ಲವೂ ಭಗವಂತನು ಕೊಟ್ಟಿರುವ ಅನುಗ್ರಹದಿಂದಲೇ ಬಂದದ್ದು. ಭಗವಂತನು ಪರವಾಕ್ಸ್ವರೂಪ ನಾಗಿರುತ್ತಾನೆ; ಆದ್ದರಿಂದಲೇ ಅವನು ವಾಕ್ಕಿಗೂ ವಾಕ್ ಎಂದು ಶ್ರುತಿ ಹೇಳುತ್ತದೆ. ಬ್ರಹ್ಮನನ್ನು ಸೃಷ್ಟಿಮಾಡಿ ವೇದರೂಪವಾದ ಅನಾದಿವಾಕ್ಕನ್ನು ಅವನಿಗೆ ಅನುಗ್ರಹಿಸಿ ರುವವನೂ ಭಗವಂತನೇ. ಇದರಂತೆಯೇ ಸ್ಮೃತಿ, ಧೃತಿ, ಮೇಧಾದೇವತೆಗಳೂ ಆಯಾ ಶಕ್ತಿಯನ್ನು ಪರಮಾತ್ಮನಿಂದಲೇ ಪಡೆದುಕೊಂಡಿರುತ್ತಾರೆ. ಈ ದೇವತೆಗಳನ್ನೆಲ್ಲ ಭಗವಂತನ ವಿಭೂತಿಗಳೆಂದು ಉಪಾಸನೆಮಾಡುವದು, ಭಗವತ್ಸ್ವರೂಪವನ್ನು ತಿಳಿದುಕೊಳ್ಳುವದಕ್ಕೂ ಧ್ಯಾನಿಸುವದಕ್ಕೂ ಬಹಳ ಸಹಾಯಕವಾಗಿರುತ್ತದೆ.

# ೭೭. ಭಗವಂತನ ವಿಭೂತಿಗಳು ೧೦-(೩೫-೩೬)

(೨೧-೩-೪೮)

"ಸಾಮಗಳಲ್ಲಿ ಬೃಹತ್ಸಾಮವು ನಾನು, ಛಂದಸ್ಸುಗಳಲ್ಲಿ ಗಾಯತ್ರಿಯು ನಾನು; ಮಾಸಗಳಲ್ಲಿ ಮಾರ್ಗಶೀರ್ಷವು ನಾನು, ಋತುಗಳಲ್ಲಿ ಕುಸುಮಾಕರನು."

ಸಾಮವೇದವು ದೇವತೆಗಳನ್ನು ಗಾನಮಾಡಿರುವದು; ಆ ವೇದದಲ್ಲಿರುವ ಸಾಮಗಳಲ್ಲಿ ಬೃಹತ್ಸಾಮವು ಭಗವಂತನು. ವೇದಗಳಲ್ಲಿ ಸಾಮವೇದವು ನಾನು ಎಂದು ಆಗಲೆ ಭಗವಂತನು ಹೇಳಿಕೊಂಡಿದ್ದಾನೆ; ಈಗ ಅದರಲ್ಲಿಯೂ ಬೃಹತ್ಸಾಮವು ನಾನು ಎಂದು ಹೇಳಿರುತ್ತಾನೆ. ಅತಿರಾತ್ರವೆಂಬ ಯಾಗದಲ್ಲಿ ಈ ಸಾಮವನ್ನು ಗಾನಮಾಡುತ್ತಾರೆ; ಇದರಲ್ಲಿ ಪರಮೇಶ್ವರನನ್ನು ಇಂದ್ರರೂಪದಿಂದ ಸ್ತುತಿಗೈದಿರುತ್ತದೆ.

'ಗಾಯತ್ರೀ ಛನ್ದಸಾಮಹಮ್' ಛಂದಸ್ಸುಗಳಲ್ಲಿ ಗಾಯತ್ರಿಯು ನಾನು. ಈಗಿನ ಕಾಲದಲ್ಲಿ ದ್ವಿಜತ್ವವು ಉಳಿದಿರುವದು ಗಾಯತ್ರಿಯಿಂದ. ಅಂದಮಾತ್ರದಿಂದ ದ್ವಿಜರು ತಿರಸ್ಕಾರ್ಯರೆಂದಲ್ಲ; ಪರಾಶರಸ್ಮೃತಿಯಲ್ಲಿ ಹೇಳಿರುವಂತೆ ಯುಗರೂಪವಾಗಿಯೇ, ಆಯಾ ಯುಗಕ್ಕೆ ತಕ್ಕಂತೆಯೇ, ದ್ವಿಜರೂ ಇರುತ್ತಾರೆ. ಗಾಯತ್ರಿಯನ್ನೇ ಸರಿಯಾಗಿ ಅನುಸರಿಸಿಕೊಂಡರೆ ಈ ಕಲಿಯುಗದಲ್ಲಿ ದ್ವಿಜಶ್ರೇಷ್ಠರಾಗಬಹುದು. ವೇದದಲ್ಲಿ ಗಾಯತ್ರಿಗೆ ಬಹಳ ಹೆಚ್ಚಿನ ಸ್ಥಾನವನ್ನು ಕೊಟ್ಟಿದೆ. ಗಾಯತ್ರಿಯು ಛಂದಸ್ಸುಗಳ ಮಾತೆಯು ಎಂದು ಗಾಯತ್ರಿಯ ಹೃದಯದಲ್ಲಿ ಹೇಳಿರುತ್ತದೆ. ಗಾಯತ್ರಿಗಿಂತ ಹೆಚ್ಚಿನ ಮಂತ್ರವೇ ಇಲ್ಲ ಎಂದು ಪುರಾಣದಲ್ಲಿ ಉಕ್ತವಾಗಿರುತ್ತದೆ. ಯಾರು ಇದನ್ನು ಉಚ್ಚರಿಸುವರೋ ಅವರನ್ನು ಕಾಪಾಡುತ್ತದೆಯಾದ್ದರಿಂದ ಇದಕ್ಕೆ ಗಾಯತ್ರೀ ಎಂದು ಹೆಸರು. ಅರ್ಥದೃಷ್ಟಿಯಿಂದಲೂ ಇದಕ್ಕೆ ಬಹಳ ಮಹತ್ತ್ವವಿರುತ್ತದೆ. ಸ್ವರವೇ ಮುಂತಾದವುಗಳ ವಿಚಾರವನ್ನು ಲಕ್ಷಣಶಾಸ್ತ್ರಜ್ಞರಿಂದ ತಿಳಿದುಕೊಳ್ಳಬೇಕು. ಗಾಯತ್ರಿಯ ಉಪದೇಶವಾದ ಮೇಲೆಯೇ ವೇದದ ಅಧ್ಯಯನಕ್ಕೆ ಆರಂಭಿಸುವದು ಬಹು ಪುರಾತನಕಾಲದಿಂದಲೂ ನಡೆದುಕೊಂಡುಬಂದಿರುವ ಪದ್ಧತಿಯಾಗಿದೆ. **ಗಾಯತ್ರಿಯ ಉಪದೇಶವು ಕೊನೆಯ ಪಕ್ಷ ಹದಿನೈದು ವರ್ಷದೊಳಗಾಗಿ ನಡೆಯಬೇಕು; ಬಳಿಕ ಕ್ರಮಕ್ರಮವಾಗಿ ವೇದಾಧ್ಯಯನವಾಗಬೇಕು** - ಎಂದು ಸ್ಮೃತಿಕಾರರು ವಿಧಿಸಿರುತ್ತಾರೆ. ಐವತ್ತುವರ್ಷ ವಯಸ್ಸಾದರೂ ಗಾಯತ್ರಿಯ ಮರ್ಮವು ತಿಳಿಯದೆ ಇರುವವರು ನಮ್ಮಲ್ಲಿ ಬಹಳಮಂದಿ ಇರುತ್ತೇವೆ. ಇದೆಂಥ ಶೋಚನೀಯ! ಗಾಯತ್ರಿಯನ್ನು ಜಪಿಸುತ್ತಾ ಇಂತಿಷ್ಟು ಮಂತ್ರಾವರ್ತಿಯಾಯಿತೆಂದು

ಬೆರಳು ಎಣಿಸಿಕೊಳ್ಳುವದನ್ನು ಬಿಟ್ಟರೆ ನಮಗೆ ಬೇರೆ ಯಾವ ಫಲವೂ ಅನುಭವಕ್ಕೆ ಬಂದಿಲ್ಲ. ಇದು ಸರಿಯಲ್ಲ. ಗಾಯತ್ರಿಯ ಅರ್ಥದ ಅನುಸಂಧಾನವಾಗಬೇಕು.

ಗಾಯತ್ರಿಯ ಸಾಮಾನ್ಯವಾದ ಅರ್ಥವು ಯಾವದು? ಜಗತ್ಕಾರಣನಾದ ಪರಮಾತ್ಮನ ತೇಜಸ್ಸನ್ನು ನಾವು ಧ್ಯಾನಮಾಡುತ್ತೇವೆ; ಆತನು ನಮ್ಮ ಬುದ್ಧಿಯನ್ನು ಪ್ರೇರಣೆಮಾಡಲಿ! ಎಂಬುದು ವಾಕ್ಯದ ಅರ್ಥವು. ಪರಮಾತ್ಮನ ಅನುಗ್ರಹದಿಂದ ನಮ್ಮ ಬುದ್ಧಿ ಸರಿಯಾದ ದಿಕ್ಕಿಗೆ ತಿರುಗುತ್ತದೆ. ದೇವರು ಗೈರುಹಾಜರಾಗಿರುತ್ತಾನೆಂದು ಭಾವಿಸುವವರೇ ಈಗ ಬಹಳ ಜನ; ನಾವುಗಳು ಬಾಯಲ್ಲಿ ಇಲ್ಲವೆಂದು ಹೇಳದಿದ್ದರೂ ದೇವರು ಇಲ್ಲದಿದ್ದರೆ ಹೇಗೆ ನಡೆದುಕೊಳ್ಳಬೇಕೋ ಹಾಗೆಯೇ ನಡೆದುಕೊಳ್ಳುತ್ತಿದ್ದೇವೆ. ಆದ್ದರಿಂದಲೇ ನಮಗೆ ತೃತೀಯ ವಿಶ್ವಯುದ್ಧದ ಭಯವು ಹಿಡಿದುಕೊಂಡುಬಿಟ್ಟಿದೆ. ನಾವೆಲ್ಲರೂ ಕಾಮಕ್ರೋಧಗಳಿಗೆ ವಶರಾಗಿರುತ್ತೇವೆ, ಪರಮಾತ್ಮನಿಗೆ ಸೊನ್ನೆಸುತ್ತಿರುತ್ತೇವೆ. ಅದರ ಫಲವೇ ನಮ್ಮ ಸದ್ಯದ ಸ್ಥಿತಿ. ಯೂರೋಪಿನಲ್ಲಿ ಒಬ್ಬ ಮಹಾಕವಿ. ಆತನು 'ದೇವರು ಸತ್ತಿದಾನೆ' ಎಂಬ ಒಂದು ಗ್ರಂಥವನ್ನು ಬರೆದನು. ಅವನ ಮತದಲ್ಲಿ ದಾನ, ಧರ್ಮ, ಸ್ವಾರ್ಥತ್ಯಾಗ, ಅಮಾನಿತ್ವ, ಅದಂಭಿತ್ವ, ಇಂಥವೆಲ್ಲ ಹೆಣ್ಣುಗುಣಗಳು; ಹೊಡಿ, ಕಡಿ, ಬಡಿ - ಇವೆಲ್ಲ ಗಂಡುಗುಣಗಳು. ಆತನ ಉಪದೇಶವು ಪಶ್ಚಿಮದೇಶದವರಿಗೆಲ್ಲ ರುಚಿಸಿತು. ಅವರು ಈ ಉಪದೇಶದಲ್ಲಿ ನಂಬಿಕೆಯನ್ನು ಇನ್ನೂ ಬಿಟ್ಟಂತೆ ಕಾಣುವದಿಲ್ಲ; ಹೊಸಹೊಸ ಮಾರಕವಾದ ಅಸ್ತ್ರಗಳನ್ನು ಸಿದ್ಧಗೊಳಿಸುತ್ತಾ ಒಬ್ಬರ ಮೇಲೊಬ್ಬರು ಬೀಳುವದಕ್ಕೆ ಕತ್ತಿಮಸೆಯುತ್ತಿದ್ದಾರೆ! ಆ ದೇಶದಲ್ಲಿ "ಯುಕ್ತಿಪ್ರಧಾನ"ರೆಂಬ (Rationalists) ಎಂಬ ಸಂಘದವರು ಭೌತಿಕವಿಜ್ಞಾನಶಾಸ್ತ್ರದ ಸಹಾಯದಿಂದ ಹೊಸಹೊಸ ಯುಕ್ತಿಗಳಿಂದ ದೇವರು ಇಲ್ಲವೆಂದು ಸಾಧಿಸುವದಕ್ಕೆ ಹೊರಟಿರುತ್ತಾರೆ. ಅವರ ಯುಕ್ತಿಗಳು ಎಲ್ಲರಿಗೂ ತಿಳಿಯದಿದ್ದರೂ ದೇವರು ಇಲ್ಲವೆಂಬ ನಂಬಿಕೆಯೇನೋ ಬಹುಜನರಿಗೆ ಆಗಿಬಿಟ್ಟಿರುತ್ತದೆ. ನಮ್ಮ ದೇಶದಲ್ಲಿಯೂ ಅವರ ಗಾಳಿಯು ಬಲುಮಟ್ಟಿಗೆ ಬೀಸುತ್ತಿದೆ!

ಪರಮೇಶ್ವರನ ಸ್ಮರಣೆಯನ್ನು ಮಾಡಬೇಕು; ಸ್ಮರಣೆಯಿಂದ ಆತನ ಅನುಗ್ರಹ ವಾಗುತ್ತದೆ, ಆ ಅನುಗ್ರಹದಿಂದ ನಮಗೆ ಇಷ್ಟಾರ್ಥಲಾಭವಾಗುತ್ತದೆ - ಎಂಬುದು ಯಾವದನ್ನೂ ಯುಕ್ತಿಯಿಂದ ಸಾಧಿಸುವದಕ್ಕೆ ಆಗುವದಿಲ್ಲ; ಅದನ್ನು ಯುಕ್ತಿಯಿಂದ ನಿಷೇಧಿಸುವದಕ್ಕೂ ಆಗುವದಿಲ್ಲ. ಧರ್ಮಾಧರ್ಮಾದಿಯಾದ ಆಧ್ಯಾತ್ಮಿಕವಿಷಯಗಳು ಯುಕ್ತಿಗೆ ಗೋಚರವಲ್ಲ. ಆದರೂ ನಾವು ಎಲ್ಲವನ್ನೂ ಯುಕ್ತಿಯಿಂದಲೇ ಸಾಧಿಸುವದಕ್ಕೆ ಹೊರಟಿರುತ್ತೇವೆ. ಎಂಥ ಮೂರ್ಖತನವಿದು! ಈಗ ನಾವು ಮಾತನಾಡುತ್ತಿರುವದು

ಭಾವನೆಯ ವಿಷಯ. ಭಾವನೆಗೂ ಯುಕ್ತಿಗೂ ಎಂದಿಗೂ ಸಮಾನವಿಷಯವಿರುವದಿಲ್ಲ. ಆದ ಮಾತ್ರಕ್ಕೆ ಭಾವನೆಯ ವಿಷಯವೇ ಇಲ್ಲವೆನ್ನಬಹುದೆ? ನಮ್ಮ ಅನುಭವದಲ್ಲಿಯೇ ನಿಸ್ಸಂಶಯವಾಗಿ ಇದ್ದುಕೊಂಡಿರುವ ಎಷ್ಟೋ ಪದಾರ್ಥಗಳು ಇಂದ್ರಿಯಕ್ಕೆ ಗೋಚರವಲ್ಲ. ಆದಮಾತ್ರಕ್ಕೆ ಅವು ಇಲ್ಲವೆನ್ನುವದು ಹೇಗೆ? ನಮ್ಮ ಒಳಗೆ ಇರುವ ವೇದನೆಗಳು ಯಾವವೂ ಇಂದ್ರಿಯಗೋಚರವಲ್ಲ. ದುಃಖವಾಗಿದೆ ಎಂದು ಒಬ್ಬನೆಂದರೆ ಅದರ ಬಣ್ಣವನ್ನೂ ತೂಕವನ್ನೂ ಹೇಳೆಂದು ಕೇಳಬಹುದೆ? ಶಬ್ದವು ಕಣ್ಣಿಗೆ ಗೋಚರವಲ್ಲವಾದ್ದರಿಂದ ಇಲ್ಲವೇ ಇಲ್ಲ ಎಂದು ವಾದಿಸಬಹುದೆ? ಮನುಷ್ಯನಿಗೆ ಯುಕ್ತಿಮಾತ್ರವೊಂದೇ ಈಶ್ವರದತ್ತವಾದ ಸಾಧನವಲ್ಲ; ಭಾವನೆ, ಸಂಕಲ್ಪ ಮುಂತಾದವುಗಳೂ ಇವೆ. ಧರ್ಮ, ಅಧರ್ಮ ಮುಂತಾದವು ಯುಕ್ತಿಯಿಂದ ಸಾಧಿಸುವದಕ್ಕಾಗಲಿ ಖಂಡಿಸುವದಕ್ಕಾಗಲಿ ಬರುವವಲ್ಲ. ಆದ್ದರಿಂದ ಶ್ರದ್ಧೆಯಿಂದಲೇ ಗಾಯತ್ರ್ಯಾದಿಗಳ ಸ್ವರೂಪವನ್ನು ತಿಳಿದುಕೊಳ್ಳಬೇಕು. ಈಗ ಗಾಯತ್ರಿಯ ಅರ್ಥವನ್ನು ಈ ದೃಷ್ಟಿಯಿಂದ ಪರಿಶೀಲಿಸೋಣ.

'ತತ್ಸವಿತುಃ' ಎಂಬ ಶಬ್ದಕ್ಕೆ ಅರ್ಥವೇನು? ಸವಿತೃ ಎಂದರೆ ಜಗತ್ಕಾರಣನಾದ ಪರಮೇಶ್ವರನು. 'ಸವಿತಃ' ಎಂಬ ಮಾತನ್ನುಚ್ಚರಿಸುವಾಗ ಜಗತ್ತನ್ನೆಲ್ಲ - ವೇದವನ್ನೂ ಧರ್ಮಾಧರ್ಮಗಳನ್ನೂ ಅವುಗಳ ಫಲಗಳನ್ನೂ ಉಂಟುಮಾಡಿರುವ ಪರಮೇಶ್ವರ ನೊಬ್ಬನಿದ್ದಾನೆ ಎಂಬ ಭಾವನೆಯನ್ನು ಮನಸ್ಸಿನಲ್ಲಿ ಹೊರಳಾಡಿಸಬೇಕು. ಧರ್ಮಾ ಧರ್ಮಗಳಿಗೊಬ್ಬ ಒಡೆಯನಿರುತ್ತಾನೆ. ನಾವು ಮಾಡುವ ಕರ್ಮಗಳಿಗೆ ಪ್ರೇರಕನೂ ಫಲದಾತನೂ ಒಬ್ಬನಿರುತ್ತಾನೆ - ಎಂದು ಮೂರು ಹೊತ್ತಿನಲ್ಲಿಯೂ ಮನಮುಟ್ಟಿ ಭಾವನೆಮಾಡುತ್ತಿರಬೇಕು.

"ಆ ದೇವನ ಸುಪ್ರಸಿದ್ಧವಾದ ವರಣೀಯವಾದ ತೇಜಸ್ಸನ್ನು ನಾವು ಧ್ಯಾನಿಸುತ್ತೇವೆ" ಎಂಬ ವಾಕ್ಯದರ್ಥವನ್ನು ಮನಸ್ಸಿನಲ್ಲಿ ಬಿಡಿಸಿನೋಡಿರಿ. ನಮಗೆ ಪರಮಾತ್ಮನ ಬೆಳಕು ಬೇಕು; ನಾವು ಕತ್ತಲಲ್ಲಿರುತ್ತೇವೆ. ಆದರೆ ಬೆಳಕು ಹೊಸದಾಗಿ ಬರಬೇಕಾದದ್ದೇನೂ ಇರುವದಿಲ್ಲ, ಸೂರ್ಯನ ಕಡೆಗೆ ಬೆನ್ನುಮಾಡಿ ಸೂರ್ಯನಿಲ್ಲವೆಂಬ ಅವಿವೇಕಿಯಂತೆ ನಾವು ಆ ದೇವದೇವನ ಬೆಳಕು ಎಲ್ಲೆಲ್ಲಿಯೂ ತುಂಬಿರುತ್ತಿದ್ದರೂ ಅದನ್ನು ಮನದಂದುಕೊಳ್ಳದೆ ಅದೇ ಇಲ್ಲವೆನ್ನುವಂತೆ ವರ್ತಿಸುತ್ತಿದ್ದೇವೆ. ಈಗ ನಾವು ಮಾತನಾಡುತ್ತಿರುವೆವಷ್ಟೆ; ಈಗ ನಾವು ಒಬ್ಬರನ್ನೊಬ್ಬರು ನೋಡುತ್ತಿರುವದಕ್ಕೆ ಸೂರ್ಯನ ಬೆಳಕೇ ಸಾಧನವಾಗಿರುತ್ತದೆ. ಅಲ್ಲವೆ? ಆದರೂ ವ್ಯವಹಾರದಲ್ಲಿ ಯಾವ ವಸ್ತುವನ್ನು ಕಂಡರೂ ನಾವು ಬೆಳಕನ್ನು ಲಕ್ಷ್ಯಕ್ಕೆ ತಂದುಕೊಳ್ಳದೆ ಬರಿಯ ವಸ್ತುವನ್ನೇ ನೋಡುತ್ತಿರುವಂತೆ ಭಾವಿಸುತ್ತಿರುವೆವು. ಯಾರಾದರೂ 'ಇಲ್ಲಿ ಬೆಳಕಿದೆ'

ಎಂದು ಹೇಳಿದರೆ ಆಗ ನಮ್ಮ ಲಕ್ಷ್ಯವು ಅದರ ಕಡೆಗೆ ಹೊರಳುತ್ತದೆ; ಅದೇನೂ ಹೊಸವಿಷಯವಲ್ಲವೆಂದೂ ಅದು ಅತ್ಯಂತಸುಪ್ರಸಿದ್ಧವಾದದ್ದೆಂದೂ ಹೇಳುತ್ತೇವೆ. ಅಲ್ಲವೆ? ಇದರಂತೆ ಪರಮೇಶ್ವರನು ಸರ್ವತ್ರ ವ್ಯಾಪಿಸಿಕೊಂಡಿರುತ್ತಾನೆ; ಅವನ ಬೆಳಕಿನಿಂದಲೇ ನಾವು ಸರ್ವವ್ಯವಹಾರವನ್ನೂ ಮಾಡುತ್ತಿರುತ್ತೇವೆ. ಆದರೂ ವ್ಯವಹಾರದಲ್ಲಿ ಮುಳುಗಿರುವದರಿಂದ ಪರಮಾತ್ಮನ ಬೆಳಕು ನಮ್ಮ ಮನಸ್ಸಿನಿಂದ ಅಳಿಸಿಹೋಗಿರುತ್ತದೆ. ನಮಗೆ ವ್ಯವಹಾರದಲ್ಲಿಯೂ ವ್ಯವಹಾರದ ವಸ್ತುಗಳಲ್ಲಿಯೂ ಪೂರ್ಣನಂಬಿಕೆಯಿರುತ್ತದೆ. ಆದ್ದರಿಂದ ಈಶ್ವರನ ಬೆಳಕು ಎಲ್ಲೆಲ್ಲಿಯೂ ಹರಡಿ ಕೊಂಡಿರುವದೆಂದೂ ಆ ಬೆಳಕಿನಲ್ಲಿಯೇ ನಮ್ಮ ವ್ಯವಹಾರವೆಲ್ಲವೂ ಸಾಗಿರುವದೆಂದೂ ಯಾರಾದರೂ ನಮಗೆ ಹೇಳಿದರೆ ಅದು ಹೊಸವಿಷಯವಾದ್ದರಿಂದ ಅದನ್ನು ಸಹಜವಾಗಿ ತರ್ಕಕ್ಕೆ ಹೊಂದಿಸಿ ನೋಡುವದಕ್ಕೆ ಹೋಗುತ್ತೇವೆ. ನಾವು ಪರಮೇಶ್ವರನಿಗೆ ವಿಮುಖರಾಗಿರುವದರಿಂದ ಆತನ ಬೆಳಕು ನಮಗೆ ತಿಳಿಯದೆ ಇದೆಯೇ ಹೊರತು ಅದು ಇಲ್ಲದ್ದರಿಂದ ಅಲ್ಲ. ಆದರೆ ಅದನ್ನು ಯುಕ್ತಿಯಿಂದ ತಿಳಿಯುವದಕ್ಕೆ ಆಗುವದಿಲ್ಲ; ಏಕೆಂದರೆ ಅದು ಯುಕ್ತಿಯ ಕ್ಷೇತ್ರಕ್ಕೆ ಸೇರಿದ್ದಲ್ಲ. ಚಿತ್ರವನ್ನು ನೋಡುವದಕ್ಕೆ ಮೂಗನ್ನು ಉಪಯೋಗಿಸಿದರೆ ತಿಳಿದೀತೆ? ಇಲ್ಲ.

ಆದ್ದರಿಂದ ನಾವು ಭಾವನೆಯಿಂದ ನಂಬಿ ಗಾಯತ್ರಿಯನ್ನು ಜಪಿಸುವದಕ್ಕೆ ಪ್ರಾರಂಭಿಸಬೇಕು, ಆ ಬಳಿಕ ಅದರ ಅರ್ಥವು ಅನುಭವಕ್ಕೆ ಬರುವದು. ವಿಜ್ಞಾನಶಾಸ್ತ್ರದಲ್ಲಿ 'ಪ್ರಯೋಗ' (Experiment) ಮಾಡಿ ನೋಡುವಂತೆ ಭಾವನೆ ಯಿಂದ ಜಪಿಸಿ ನೋಡೋಣ, ಅನುಭವಕ್ಕೆ ಬಂದರೆ ಸರಿ ಎನ್ನೋಣ; ಇಲ್ಲದಿದ್ದರೆ ಬೇಡ. ಮಹಾತ್ಮರಾದ ವಿಶ್ವಾಮಿತ್ರರು ಹೇಳಿರುವ ಮಂತ್ರವಿದು. ಈ ಮಂತ್ರಕ್ಕೆ ಪರಮಾತ್ಮನೇ ದೇವತೆ; ವಿಶ್ವಾಮಿತ್ರರೇ ಋಷಿಗಳು. "ನಾನು ಈ ಮಹಾಪುರುಷನನ್ನು ಬಲ್ಲೆನು; ಈತನು ಆದಿತ್ಯವರ್ಣನು, ಕತ್ತಲೆಗೆ ಆಚೆಯಿರುವವನು. ಆತನನ್ನೇ ಅರಿತುಕೊಂಡರೆ ಅತಿಮೃತ್ಯುವನ್ನು ಪಡೆಯುವನು" ಎಂದು ಒಬ್ಬ ಮಹರ್ಷಿ ಹೇಳಿರುತ್ತಾನೆ. ಅದು ಅನುಭವದ ಮಾತು. ನಾವೂ ಅನುಭವದಿಂದಲೇ ತಿಳಿದು ಕೊಳ್ಳುವದಕ್ಕೆ ಯತ್ನಿಸಬೇಕು. ಪರಮಾತ್ಮನ ಬೆಳಕು ಎಲ್ಲೆಲ್ಲಿಯೂ ವ್ಯಾಪಿಸಿರುತ್ತದೆ; ಅದನ್ನು ಧ್ಯಾನಿಸಿ ಸಾಕ್ಷಾತ್ಕರಿಸಿಕೊಳ್ಳಬೇಕು.

ಇನ್ನು ಈ ಗಾಯತ್ರಿಯ ಎರಡನೆಯ ವಾಕ್ಯ. ಈ ದೇವನನ್ನು ಧ್ಯಾನಿಸಿದರೆ, ಆತನು ನಮ್ಮ ಬುದ್ಧಿಗಳನ್ನು ಪ್ರಚೋದಿಸುವನು; ನಮಗೆ ಒಳ್ಳೆ ಬುದ್ಧಿ ಬರುತ್ತದೆ. ಇಲ್ಲಿ ಬುದ್ಧಿ ಎಂಬ ಶಬ್ದಕ್ಕೆ ಒಳ್ಳೆಯ ಬುದ್ಧಿ ಎಂದೇ ಅರ್ಥ. ಬುದ್ಧಿವಂತ ಎಂದರೆ ಒಳ್ಳೆಯ ಬುದ್ಧಿಯುಳ್ಳವನು ಎಂದಲ್ಲವೆ, ಅರ್ಥ? ಈಗ ನಮಗೆ ಕುಬುದ್ಧಿಯು

ಹೆಚ್ಚುತ್ತಿದೆ. ಈ ಬುದ್ಧಿಯು ಬೆಳೆದಹಾಗೆಲ್ಲ ಜನರಿಗೆ ಹುಚ್ಚು ಹಿಡಿಯುತ್ತದೆ. ಇದು ಹುಚ್ಚರ ಕಾಲವಾದ್ದರಿಂದ ಕಾಮಕ್ರೋಧಲೋಭಗಳ ಹುಚ್ಚು ಜನಾಂಗಗಳಲ್ಲೆಲ್ಲ ಪ್ರಬಲವಾಗುತ್ತಿದೆ. ಕಾಮಕ್ರೋಧಲೋಭಗಳು ನರಕಕ್ಕೇ ಬಾಗಿಲುಗಳು ಎಂಬುದು ಬುದ್ಧಿಯು ಸರಿಯಾಗಿಲ್ಲದವರಿಗೆ ಹೇಗೆ ತಿಳಿಯಬೇಕು? ಅಸುರರ ಬುದ್ಧಿಯು ಪ್ರಲಯಾಂತಕವಾಗಿರುತ್ತದೆ. ಅನರ್ಥಕರವಾದ ಈ ಬುದ್ಧಿಯು ಈಗ ನಮ್ಮನ್ನು ಪ್ರವೇಶಿಸಿರುತ್ತದೆ. ನಮಗೆ ಹಿತವಾಗುವಂಥ ಫಲವನ್ನು ಕೊಡುವ ಬುದ್ಧಿಯನ್ನು ಕೊಟ್ಟು ಪ್ರೇರಿಸುವವನು ಭಗವಂತನು. ಪರಮೇಶ್ವರನ ತತ್ತ್ವವು ವರಣೀಯವು, ನಮಗೆ ಬೇಕಾದದ್ದು, ಎಂಬುದು ನಮಗೆ ನೆನಪಿಗೆ ಬಂದರೆ ಮನಸ್ಸಿನಲ್ಲಿ ಶಾಂತಿಯು ನೆಲಸುತ್ತದೆ. ಮಂತ್ರವೆಂದರೇನು? ಮನನಮಾಡುವದಕ್ಕೆ ಯೋಗ್ಯವಾದದ್ದು, ಪರಮಾತ್ಮನು ಸದ್ರೂಪನು, ಜಗತ್ಕಾರಣ, ಸರ್ವವ್ಯಾಪಕನು, ಸದ್ಬುದ್ಧಿಪ್ರೇರಕನು - ಎಂಬುದಿಷ್ಟೂ ಗಾಯತ್ರಿಯಲ್ಲಿ ಅಡಕವಾಗಿರುತ್ತದೆ. ಈ ಮಂತ್ರವನ್ನೇ ನಾವು ಉಚ್ಚರಿಸದಿದ್ದರೂ ಚಿಂತೆಯಿಲ್ಲ; ಇದರ ಅಭಿಪ್ರಾಯವು ನಮ್ಮ ಮನನದಲ್ಲಿರಬೇಕು. "ಒಳ್ಳೆಯ ಬುದ್ಧಿ ಕೊಡಪ್ಪ" ಎಂದು ದಯಾನಿಧಿಯಾದ ಭಗವಂತನನ್ನು ಬೇಡಿಕೊಳ್ಳಬೇಕು. ಪ್ರಲಯಕ್ಕೆ ಹತ್ತಿರವಾಗುತ್ತಿರುವ ನಮ್ಮ ಬುದ್ಧಿಯು ಆಗ ಸದ್ಬುದ್ಧಿಯಾಗಿ ಪರಿಣಮಿಸುವದು, ನಮಗೂ ಲೋಕಕ್ಕೂ ಕಲ್ಯಾಣವಾಗುವದು. ಇದೇ ಗಾಯತ್ರಿಯ ಸಾರವು.

ಈ ಲೋಕೋತ್ತರವಾದ ಗಾಯತ್ರಿಯು ನಾನು ಎಂದು ಭಗವಂತನು ಹೇಳಿರುತ್ತಾನೆ. ಗಾಯತ್ರಿಯೇ ದೇವರು ಎಂದು ಭಾವಿಸಬೇಕು.

**"ಮಾಸಾನಾಂ ಮಾರ್ಗಶೀರ್ಷೋಽಹಮ್"** ಮಾರ್ಗಶೀರ್ಷಕ್ಕೆ ಇಲ್ಲಿ ಕೊಟ್ಟಿರುವ ಹೆಚ್ಚುಗಾರಿಕೆ ಯಾವದು? ಒಂದಾನೊಂದು ಕಾಲದಲ್ಲಿ ಮಾರ್ಗಶೀರ್ಷ ದಿಂದ ವರ್ಷವು ಆರಂಭವಾಗುತ್ತಿತ್ತು ಎಂದು ಕೆಲವರು ಜ್ಯೋತಿಃಸಿದ್ಧಾಂತವನ್ನು ತೆಗೆದಿದ್ದಾರೆ. ಅದರ ನಿಜವು ನನಗೆ ತಿಳಿಯದು. ಆದರೆ ಭಗವದ್ಗೀತೆಯು ಮಾರ್ಗಶೀರ್ಷದಲ್ಲಿ ಅವತಾರಮಾಡಿರುತ್ತದೆ. ಭಗವಂತನು ಈ ಗೀತೆಯನ್ನು ಅರ್ಜುನನಿಗೆ ಉಪದೇಶ ಮಾಡಿದ ಉತ್ತಮಮಾಸವಿದೆಂದು ನಾವು ಇದನ್ನು ಭಗವಂತನ ವಿಭೂತಿಯಾಗಿ ಭಾವಿಸೋಣ.

**"ಋತೂನಾಂ ಕುಸುಮಾಕರಃ"** ನರುಗಂಪಿನ ಹೂಗಳು ಅರಳುವದು, ಕೋಗಿಲೆಯೇ ಮುಂತಾದ ಹಕ್ಕಿಗಳ ಇಂಪಿನ ಗಾನವು ಜನರ ಮನಸ್ಸನ್ನು ಸೆಳೆಯುವದು - ಇವೇ ಮುಂತಾದ ಗುಣಗಳನ್ನು ಇಲ್ಲಿ ಮನಸ್ಸಿಗೆ ತಂದುಕೊಳ್ಳಬೇಕು. ವಸಂತಋತುವು ಲೋಕಕ್ಕೆಲ್ಲ ಸಮಾನವಾಗಿಯೇ ಸಂತೋಷವನ್ನುಂಟುಮಾಡುವದು.

ಭಗವಂತನೂ ಲೋಕಕ್ಕೆಲ್ಲ ಹಿತವನ್ನೇ ಕೋರುವವನು. ಅಹೇತುಕದಯಾಸಿಂಧುವಾದ ಭಗವಂತನಿಗೆ ವಸಂತಋತುವು ವಿಭೂತಿ ಎನ್ನುವದು ಯುಕ್ತವೇ ಆಗಿರುತ್ತದೆ.

'ದ್ಯೂತಂ ಛಲಯತಾಮಸ್ಮಿ' ಇಲ್ಲಿ ದ್ಯೂತವೆಂದರೆ ಪಗಡೆಯಾಟವೇ ಮುಂತಾದ ಜೂಜು. ಜೂಜು ಪುರಾತನಕಾಲದಿಂದಲೂ ಬಂದಿದೆ. ಛಾಂದೋಗ್ಯೋಪನಿಷತ್ತಿನಲ್ಲಿ ಒಂದು ಪಗಡೆಯಾಟದ ಪರಾಮರ್ಶವಿದೆ. ಅದರಲ್ಲಿ ಕೃತ, ತ್ರೇತ, ದ್ವಾಪರ, ಕಲಿ - ಎಂದು ನಾಲ್ಕು ಲೆತ್ತದ ಗರಗಳು. ಕೃತಕ್ಕೆ ನಾಲ್ಕು ಅಂಕೆ, ತ್ರೇತಗೆ ಮೂರು ಅಂಕೆ, ದ್ವಾಪರಕ್ಕೆ ಎರಡು, ಕಲಿಗೆ ಒಂದು; ಈ ನಾಲ್ಕರೊಳಗೆ ಕೃತ ಎಂಬ ಲೆತ್ತವು ಬಿದ್ದರೆ (4+3+2+1=10) ಹತ್ತು ಬಿದ್ದಂತೆ. ರಾವಣನ ಅಂತಃಪುರದ ದೀಪಗಳು ಮಂಕಾಗಿದ್ದವೆಂದು ತಿಳಿಸುವದಕ್ಕಾಗಿ ವಾಲ್ಮೀಕಿಗಳು ಜೂಜಿನಲ್ಲಿ ಸೋತವರ ಮುಖದಂತೆ ಇದ್ದವು ಎಂದು ವರ್ಣಿಸಿರುತ್ತಾರೆ. ಧರ್ಮರಾಯನು ಕೌರವರ ಕಪಟ ದ್ಯೂತದಿಂದ ಸೋತಾಗ ಅವನ ಮುಖವು ಸಪ್ಪೆಯಾಗಿ ಕಾಣುತ್ತಿತ್ತೆಂದು ಭಾರತದಲ್ಲಿ ವರ್ಣಿಸಿರುವದನ್ನು ನಾವು ನೆನಪಿಗೆ ತಂದುಕೊಳ್ಳಬಹುದು. ಈಗ ಇಡಿಯ ಭೂಲೋಕವೇ ಜೂಜಿನಲ್ಲಿ ಮುಳುಗಿರುತ್ತದೆ; ರಾಜಕಾರಣದ ದ್ಯೂತದಲ್ಲಿ ಒಬ್ಬರನ್ನೊಬ್ಬರು ಸೋಲಿಸಬೇಕೆಂದು ಬಗೆಬಗೆಯ ಭೇದೋಪಾಯವನ್ನು ಹೂಡುತ್ತಿದ್ದಾರೆ. ಯಾರ ಮುಖವು ಯಾವಾಗ ಪೆಚ್ಚಾಗುವದೋ ಯಾರು ಬಲ್ಲರು? ಭಗವಂತನು ನಾನೇ ದ್ಯೂತವು ಎಂದಿದ್ದಾನೆ; ಆತನು ಯಾರನ್ನು ದಮನಮಾಡ ಬೇಕೆಂದಿರುವನೋ ಅವರು ಈಗಿನ ದ್ಯೂತದಲ್ಲಿ ಸೋಲುವರು. ದೇವರಿಗೆ ದಯೆಯಿಲ್ಲವೆಂದು ಭಾವಿಸಬಾರದು. ಜನಾಂಗಗಳಿಗೆ ಬುದ್ಧಿಯನ್ನು ಕಲಿಸುವದಕ್ಕೆ ಅವನು ಆಗಿಂದಾಗ್ಗೆ ಇಂಥ ಸನ್ನಿವೇಶಗಳನ್ನು ತಂದಿಡುತ್ತಾನೆ. 'ನಾವು ಸೋತೆವು' ಎಂದು ಶರಣಾಗತರಾದರೆ ಆವರಿಗೆ ಅನುಗ್ರಹವನ್ನು ಮಾಡಲು ಸಿದ್ಧನಾಗಿರುತ್ತಾನೆ. ಆತನ ದಯೆ ಬಂದರೆ ಜಯವಾಗುವದು ಕಷ್ಟವೆ? ಜನರಿಗೆ ಆಗಾಗ್ಗೆ ಬುದ್ಧಿ ಕಲಿಸುವದೇ ಭಗವಂತನಿಗೆ ಇಷ್ಟ. ನಮ್ಮ ಹುಚ್ಚಾಟವನ್ನು ತಿದ್ದಿ ಒಳ್ಳೆಯ ಮಾರ್ಗಕ್ಕೆ ತರುವದೇ ಆತನ ದಯವು. ದಮನಕಾರಣ (Controlling Agency)ವಾದ ದ್ಯೂತವು ಈ ದೃಷ್ಟಿಯಿಂದ ಭಗವಂತನ ವಿಭೂತಿಯಾಗಿರುತ್ತದೆ.

ತೇಜಸ್ವಿಗಳ ತೇಜಸ್ಸು, ಜಯಶೀಲರಿಗಾಗುವ ಜಯ, ನಿಶ್ಚಯವನ್ನು ಮಾಡಿ ಕೊಳ್ಳುವವರ ನಿಶ್ಚಯಬುದ್ಧಿ - ಇವೆಲ್ಲ ಭಗವಂತನ ವಿಭೂತಿಗಳೇ. ತೇಜಸ್ಸೆಂದರೆ, ಶಕ್ತಿಯು; ಬರಿಯ ಕಾಂತಿಯಲ್ಲ. ಪರಮೇಶ್ವರನೇ ತೇಜಸ್ವಿಗೆಲ್ಲ ಮೂಲವು. ಜಯಿಸುವವರಿಗೆ ಜಯವನ್ನು ಕೊಡುವವನೂ ಆತನೇ. ಗೆದ್ದವರು ಗೆದ್ದ ಹರ್ಷದ ಉಬ್ಬಿನಲ್ಲಿ 'ನಾವೇ ಗೆದ್ದೆವು', 'ಹಾಗೆ ಗೆದ್ದೆವು' 'ಹೀಗೆ ಗೆದ್ದೆವು' ಎಂದು

ಹೇಳಿಕೊಳ್ಳುವದುಂಟು. ಆದರೆ ಗೆಲವೆಂಬುದು ಪರಮೇಶ್ವರನ ಅನುಗ್ರಹವು; ನಮ್ಮನ್ನು ನಿಮಿತ್ತವಾಗಿ ಮಾಡಿಕೊಂಡು ಆತನೇ ಗೆಲ್ಲುತ್ತಾನೆ. ಹಿಂದೆ ಒಮ್ಮೆ ದೇವತೆಗಳಿಗೂ ಅಸುರರಿಗೂ ಕಾಳಗವಾಯಿತಂತೆ. ಅದರಲ್ಲಿ ದೇವತೆಗಳು ಗೆದ್ದರು; ಅವರಿಗೆ ಪರಮೇಶ್ವರನ ಅನುಗ್ರಹದಿಂದ ಈ ವಿಜಯವು ತಮಗೆ ಆಯಿತೆಂದು ತಿಳಿಯದೆ ಹೋಯಿತು. ವಿಜಯವು ನಮ್ಮದು, ತಮ್ಮದು - ಎಂದು ಅವರು ಹೆಮ್ಮೆಯಿಂದ ಕೊಚ್ಚಿಕೊಳ್ಳುತ್ತಿದ್ದರು. ಆಗ ಪರಮೇಶ್ವರನು ಅವರಿಗೆ ಬುದ್ಧಿಕಲಿಸುವದಕ್ಕಾಗಿ ಒಂದು ಅಪೂರ್ವವಾದ ಯಕ್ಷರೂಪವನ್ನು ಧರಿಸಿಕೊಂಡು ನಿಂತನು. ಆ ಅದ್ಭುತ ರೂಪವನ್ನು ಕಂಡು ದೇವತೆಗಳು ಬೆಚ್ಚಿದರು. ಎಲ್ಲರೂ ಸುಮ್ಮನಾದರು. ಈ ಹೊಸಬರು ಯಾರೆಂಬುದನ್ನು ಗೊತ್ತುಪಡಿಸುವದಕ್ಕೆ ತಮ್ಮಲ್ಲೆಲ್ಲ ಮಹಾಪರಾಕ್ರಮಿಗಳಾದ ಅಗ್ನಿ, ವಾಯು, ಇಂದ್ರ- ಇವರನ್ನು ಕ್ರಮಕ್ರಮವಾಗಿ ಕಳುಹಿಸಿಕೊಟ್ಟರು. ಆದರೆ ಅಗ್ನ್ಯಾದಿಗಳಿಗೆ ಅಲ್ಲಿ ತೋರಿಕೊಂಡ ಯಕ್ಷಸ್ವರೂಪವು ಯಾವದು ಎಂಬುದು ತಿಳಿಯಲೇ ಇಲ್ಲ; ಆ ಮಹಾಭೂತದ ಮುಂದೆ ಅವರು ಧೈರ್ಯದಿಂದ ನಿಂತು ಕೊಳ್ಳುವದಾಗಲಿ ಮಾತನಾಡುವದಾಗಲಿ ಆಗಲಿಲ್ಲ. ಅಗ್ನಿಯು ಎಲ್ಲವನ್ನೂ ಸುಡುವ ಸಾಮರ್ಥ್ಯವುಳ್ಳವನಾದರೂ ಪರಮೇಶ್ವರನು ಮುಂದಿಟ್ಟ ಒಂದು ಕಡ್ಡಿಯನ್ನು ಸುಡುವದು ಕೂಡ ಅವನಿಂದಾಗಲಿಲ್ಲ; ಕಾಡುಕಾಡುಗಳನ್ನೇ ಎತ್ತಿ ಕೆಡಹಬಲ್ಲ ವಾಯುವಿಗೆ ಆ ಕಡ್ಡಿಯನ್ನು ಕೂಡ ಎತ್ತುವದಾಗಲಿಲ್ಲ, ಇಂದ್ರನಿಗಂತೂ ಈಶ್ವರನ ದರ್ಶನವೂ ಆಗಲಿಲ್ಲ. ಆದರೆ ಅವನು ವಿನಯದಿಂದ ಉಮಾದೇವಿಗೆ ಶರಣು ಬಂದದ್ದರಿಂದ ಆಕೆಯು ಈ ಜಯವೆಲ್ಲ ಪರಮೇಶ್ವರನದು ಎಂದು ಹೇಳಿಕೊಟ್ಟಳು. ಈ ತಿಳಿವಳಿಕೆಯಿಂದ ಇಂದ್ರನು ದೇವರಾಜನಾದನು; ಅವನ ತರುವಾಯ ಅಗ್ನಿಯೂ ವಾಯುವೂ ದೇವತೆಗಳಲ್ಲಿ ಹೆಚ್ಚಿನ ಸ್ಥಾನವನ್ನು ಪಡೆದರು. ಈ ಕಥೆಯು ಕೇನೋಪನಿಷತ್ತಿನಲ್ಲಿರುತ್ತದೆ. ನಮ್ಮ ಶರೀರವೂ ಕರಣಗಳೂ ಯಾವಾತನ ಅನುಗ್ರಹವೋ, ನಮ್ಮ ಪ್ರಾಣವೇ ಯಾವಾತನು ಕೊಟ್ಟ ಉಸಿರೋ, ಯಾವಾತನು ನಮ್ಮ ಆತ್ಮನೇ ಆಗಿರುವನೋ ಆತನ ಅನುಗ್ರಹವಿಲ್ಲದೆ ನಮಗೆ ಸ್ವತಂತ್ರವಾಗಿ ಯಾವ ವ್ಯವಹಾರದಲ್ಲಾದರೂ ಜಯವು ಹೇಗೆ ತಾನೆ ದೊರೆತೀತು? ಆದ್ದರಿಂದ ಜಯವೆಂಬುದು ಪರಮೇಶ್ವರನ ಒಂದು ವಿಭೂತಿಯು. ಭರತಖಂಡಕ್ಕೆ ಈಗ ಸ್ವಾತಂತ್ರ್ಯವು ಬಂದಿದೆಯಷ್ಟೆ; ಇದೂ ಪರಮೇಶ್ವರನ ವಿಭೂತಿಯೇ. ಇದನ್ನು ಅನಾದರಮಾಡದೆ ಗೌರವದಿಂದ ಕಾಣಬೇಕು. ಇದರಂತೆ ಸತ್ತ್ವವಂತರ ಸತ್ತ್ವವು ಎಂದರೆ ಕಾಮರಾಗವಿಲ್ಲದ ಬಲವು ಅಥವಾ ವಿಶುದ್ಧಾಂತಃಕರಣವು ಭಗವಂತನ ವಿಭೂತಿಯೆಂದೇ ಭಾವಿಸಬೇಕು. ಯಾವಯಾವದು ಉತ್ಕೃಷ್ಟವಾಗಿರುವದೋ ಅದೆಲ್ಲ ಭಗವಂತನ ವಿಭೂತಿಯೇ.

# ೭೮. ಭಗವಂತನ ವಿಭೂತಿಗಳು ೧೦-(೩೭-೩೮)

## (೨೮-೩-೪೮)

"ವೃಷ್ಣೀನಾಂ ವಾಸುದೇವೋಽಸ್ಮಿ" ವೃಷ್ಣಿಗಳೆಂಬುದು ಯಾದವರಲ್ಲಿ ಒಂದು ಉಪವಂಶದ ಹೆಸರು. ವಸುದೇವನ ಮಗನು ವಾಸುದೇವನು. ಪರಮಾತ್ಮನಿಗೆ ನಿಜವಾಗಿ ಜನ್ಮಗಳಿಲ್ಲವಾದರೂ ಭಕ್ತಾನುಗ್ರಹಕ್ಕಾಗಿ ವಾಸುದೇವನಾಗಿ ಅವತರಿಸುತ್ತಾನೆ. ಭಗವಂತನು ತಾನು ಅಜನೂ ಅವ್ಯಯಾತ್ಮನೂ ಆಗಿದ್ದರೂ ತನ್ನ ಮಾಯೆಯಿಂದ ಆಗಾಗ್ಗೆ ಹುಟ್ಟುವೆನು ಎಂದು ಆಗಲೇ ಅರ್ಜುನನಿಗೆ ಹೇಳಿರುತ್ತಾನೆ. ಶಂಕರಾಚಾರ್ಯರು 'ಪರಮಾತ್ಮನು ಜನ್ಮರಹಿತನಾದರೂ ದೇವಕಿಯಲ್ಲಿ ವಸುದೇವನಿಂದ ಒಂದಂಶದಿಂದ ಕೃಷ್ಣನಾದನು' ಎಂದೂ ಬರೆದಿರುತ್ತಾರೆ; 'ನಿತ್ಯಶುದ್ಧಬುದ್ಧಮುಕ್ತಸ್ವಭಾವನಾದರೂ ದೇಹವುಳ್ಳವನಂತೆಯೂ ಹುಟ್ಟಿರುವಂತೆಯೂ ಲೋಕಾನುಗ್ರಹವನ್ನು ಮಾಡುವವನಾಗಿ ಕಂಡುಬರುತ್ತಾನೆ' ಎಂದು ಬರೆದಿರುತ್ತಾರೆ. ವಾಸುದೇವನು ಹುಟ್ಟಿದನು ಎಂಬುದು ವ್ಯವಹಾರದದೃಷ್ಟಿ, ಜನ್ಮರಹಿತನು ಎಂಬುದು ಪರಮಾರ್ಥದೃಷ್ಟಿ.

ಇಲ್ಲಿ ಒಂದು ವಿಷಯವು ವಿಚಾರಮಾಡತಕ್ಕದ್ದಿದೆ. ಕೃಷ್ಣನೂ ಒಂದು ವಿಭೂತಿಯಾದರೆ, ಅವನು ಯಾರ ವಿಭೂತಿ? ಕೃಷ್ಣನೇ ಪರಮಾತ್ಮನಲ್ಲವೆ? ಈ ಪ್ರಶ್ನೆಗೆ ಬೇರೆಬೇರೆ ವ್ಯಾಖ್ಯಾನಕಾರರು ಬೇರೆಬೇರೆಯ ರೀತಿಯ ಉತ್ತರವನ್ನು ಕೊಟ್ಟಿರುತ್ತಾರೆ. ಶ್ರೀಕೃಷ್ಣಚೈತನ್ಯರ ಅನುಯಾಯಿಗಳು ಕೆಲವರು ಹೇಳುವದೇನೆಂದರೆ ಭಗವಂತನು ಗೋಲೋಕದಲ್ಲಿದ್ದ ತನ್ನ ಸಗುಣಸಾಕಾರರೂಪವನ್ನು ಕೃಷ್ಣಾವತಾರದಲ್ಲಿ ಹಾಗೆಯೇ ಇಳಿಸಿತೋರಿಸಿದನು. ಗೋಲೋಕದ ರೂಪವೇ ಇಲ್ಲಿಗೆ ಇಳಿದುಬಂದಿತ್ತು ಎಂದು ಅವರ ಅಭಿಪ್ರಾಯ. ಭಗವಂತನು ಹುಟ್ಟಲೇ ಇಲ್ಲ; ಅವನಿಗೆ ಜನನಮರಣಾದಿಗಳು ಯಾವವೂ ಇಲ್ಲ - ಎಂದು ಅವರ ಹೇಳಿಕೆ. ಮತ್ತೊಬ್ಬರು ಹೇಳುವದೇನೆಂದರೆ ಪರಮಾತ್ಮನ ಮೂಲರೂಪವು ಗೋಲೋಕದಲ್ಲಿಯೇ ಇತ್ತು; ಇಲ್ಲಿ ಲೀಲಾರೂಪವು- ದೇವರ ಉತ್ಸವಮೂರ್ತಿಯಂತೆ - ಬಂದು ತನ್ನ ಲೀಲೆಗಳನ್ನು ತೋರಿಸಿತು. ಈ ವಿಷಯದಲ್ಲಿ ಶ್ರೀಶಂಕರಾಚಾರ್ಯರ ಅಭಿಪ್ರಾಯವೇ ಬೇರೆಯಾಗಿದೆ. ಭಗವಂತನು ತನ್ನ ಒಂದಂಶದಿಂದ ಶ್ರೀಕೃಷ್ಣನಾಗಿಯೇ ಜನಿಸಿದನು; ಪರಮಾತ್ಮನು ಯಾವಾಗಲೂ ತನ್ನ ನಿತ್ಯಶುದ್ಧಬುದ್ಧಮುಕ್ತಸ್ವರೂಪದಿಂದ ಇದ್ದಂತೆಯೇ ಇದ್ದು ಹೀಗೆ ಮಾಯೆಯಿಂದ ಅವತರಿಸುತ್ತಾನೆ. ಅವತಾರದಿಂದ ಅವನ ಪರಮಾರ್ಥರೂಪಕ್ಕೆ ಹೆಚ್ಚಾಗಲಿ ಕುಂದಾಗಲಿ ಆಗಿರುವದೇ ಇಲ್ಲ.

ಶಂಕರಾಚಾರ್ಯರು ಶೈವರೆಂದು ಕೆಲವರ ಅಭಿಪ್ರಾಯವಿದೆ; ಮತ್ತೆ ಕೆಲವರು ಅವರು ಷಣ್ಮತಸ್ಥಾಪನಾಚಾರ್ಯರೆಂದು ಹೇಳುತ್ತಿದ್ದಾರೆ. ಜನರ ಭಿನ್ನಾಭಿಪ್ರಾಯಗಳು ಹೇಗಾದರೂ ಇರಲಿ, ಅವರು ಪರಮವೈಷ್ಣವರೆನ್ನುವದಕ್ಕೆ ಸಾಕಾದಷ್ಟು ಕಾರಣಗಳಿವೆ. ಆಚಾರ್ಯರ ಪರಂಪರೆಯ ಸಂನ್ಯಾಸಿಗಳು ಈಗಲೂ ನಾರಾಯಣಸ್ಮರಣೆಯನ್ನು ಮಾಡುತ್ತಾರೆ; ನಾರಾಯಣನೇ ತಮ್ಮ ಆದಿಗುರುವೆಂದು ಭಾವಿಸುತ್ತಾರೆ. ಪ್ರಸ್ಥಾನತ್ರಯ ಭಾಷ್ಯದಲ್ಲಿ ಪರಮಾತ್ಮನಿಗೆ ವಿಷ್ಣು, ನಾರಾಯಣ, ವಾಸುದೇವ - ಮುಂತಾದ ಹೆಸರುಗಳನ್ನೇ ಆಚಾರ್ಯರು ಕೊಟ್ಟಿರುತ್ತಾರೆ. ಸಾಲಿಗ್ರಾಮದಲ್ಲಿ ವಿಷ್ಣುವಿನಂತೆ ಎಂದು ಪ್ರತೀಕೋಪಾಸನೆಗೆ ಉದಾಹರಣೆಯನ್ನು ಅಲ್ಲಲ್ಲಿ ಬಹಳ ಸಲ ಕೊಟ್ಟಿರುತ್ತಾರೆ; ಆದರೆ ಅವರ ಗ್ರಂಥಗಳಲ್ಲಿ ಬಾಣಲಿಂಗವೇ ಮುಂತಾದವುಗಳ ಉದಾಹರಣೆಯು ಒಂದು ಕಡೆಯೂ ಕಂಡುಬರುವದಿಲ್ಲ. ಸೂತ್ರಭಾಷ್ಯದಲ್ಲಿ ಭಾಗವತಮತವು ವೈದಿಕಸಿದ್ಧಾಂತಕ್ಕೆ ವಿರುದ್ಧವಲ್ಲವೆಂದು ಬರೆದು ಕೇವಲನಿಮಿತ್ತಕಾರಣವಾದಿಗಳಾದ ಶೈವರ ಮತವನ್ನು ಖಂಡಿಸಿರುತ್ತಾರೆ. ಇಷ್ಟೇ ಅಲ್ಲ; ಅವರ ಗ್ರಂಥಗಳಲ್ಲಿ ಶೈವವೈಷ್ಣವಮತ ಭೇದಗಳ ಸೆಲೆಯೂ ಕಾಣುವದಿಲ್ಲ.

ಇದಿರಲಿ. ಆ ಆಚಾರ್ಯರು ವೈಷ್ಣವರೆಂದರೆ ಅರ್ಥವೇನು? ಪರಮಾತ್ಮನೊಬ್ಬನೇ ಸರ್ವಗತನಾಗಿರುವದರಿಂದ ವಿಷ್ಣುವಾಗಿರುತ್ತಾನೆ; ಆತನೇ ಪರಮಾರ್ಥಸತ್ಯಸ್ವರೂಪನು. ಅವನಿಗಿಂತ ವ್ಯತಿರಿಕ್ತವಾಗಿ ಯಾವದೊಂದೂ ಇರುವದೇ ಇಲ್ಲ. ಆತನು ಎಲ್ಲೆಲ್ಲಿಯೂ ಇರುವದರಿಂದ ವಾಸುದೇವನು. ಬೃಹದಾರಣ್ಯಕೋಪನಿಷತ್ತಿನಲ್ಲಿ ಒಂದು ಕಡೆ ಹಿರಣ್ಯಗರ್ಭನನ್ನು ಜೀವನೆಂದು ಎಣಿಸಬೇಕೊ, ಪರಮಾತ್ಮನೆಂದು ಎಣಿಸಬೇಕೊ? ಎಂಬ ಚರ್ಚೆಯನ್ನು ತೆಗೆದು ಅವನು ವಿಶುದ್ಧೋಪಾಧಿಯ ಸಂಬಂಧದಿಂದ ಪರಮೇಶ್ವರನೆಂದೇ ವೇದಗಳು ವ್ಯವಹರಿಸುತ್ತವೆ ಎಂದು ನಿರ್ಣಯಿಸಿರುತ್ತಾರೆ. ಆ ಸಂದರ್ಭದಲ್ಲಿ ಅವರು ಹೇಳಿರುವದೇನೆಂದರೆ ಪರಮಾರ್ಥದೃಷ್ಟಿಯಿಂದ ಎಲ್ಲರೂ ಪರಮೇಶ್ವರರೇ, ನಿತ್ಯಶುದ್ಧನಾದ ಪರಮೇಶ್ವರನಲ್ಲಿ ಯಾವ ಭೇದವೂ ಇರುವದೇ ಇಲ್ಲ.

ಹೀಗೆ ನೋಡಿದರೆ ಪರಮಾತ್ಮನು ವಸುದೇವನಿಂದ ದೇವಕಿಯಲ್ಲಿ ಹುಟ್ಟಿರುವದು ನಿಜವೆ, ಅಲ್ಲವೆ? ಎಂಬ ಪ್ರಶ್ನೆಗೆ ನಮಗೆ ಉತ್ತರವು ದೊರೆಯುತ್ತದೆ. ಶ್ರೀಕೃಷ್ಣನು ಹುಟ್ಟಿದ್ದು, ಅವನಿಗೆ ನಾಮಕರಣಮಾಡಿದ್ದು, ಅವನು ಬೇರೆ ಬೇರೆಯ ಲೀಲೆಗಳನ್ನು ತೋರಿಸಿದ್ದು - ಇವೆಲ್ಲವೂ ಅಕ್ಷರಶಃ ನಿಜವೇ. ಆದರೆ ಆತನು ತನ್ನ ಅವತಾರದ ಕಾಲದಲ್ಲೆಲ್ಲ ತನ್ನ ಪರಮಾರ್ಥಸ್ವರೂಪದ ನೆನಪನ್ನು ಜನರಿಗೆ ಆಗಿಂದಾಗ್ಗೆ ಕೊಡುತ್ತಲೇ ಇದ್ದನು. ನಿಜವಾಗಿ ಆಗಲೂ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿಯೇ ಇದ್ದನು.

ಆದ್ದರಿಂದ ವೃಷ್ಣಿ ಕುಲೋದ್ಭವನಾದ ವಾಸುದೇವನನ್ನು ಪರಮಾತ್ಮನೆಂದು ಪೂಜಿಸಿದರೆ ಪರಮಾತ್ಮನನ್ನೇ ಪೂಜಿಸಿದಂತೆ. ಜನರ ವ್ಯವಹಾರದೃಷ್ಟಿಯಲ್ಲಿ ದೇವಕೀಪುತ್ರನಾದ ಶ್ರೀಕೃಷ್ಣನು ಪರಮಾರ್ಥದೃಷ್ಟಿಯಲ್ಲಿ ಎಂದೆಂದಿಗೂ ಪರಮಾತ್ಮನೇ ಆಗಿರುತ್ತಾನೆ; ಹಾವೆಂದು ನೀವು ಕರೆಯುವದು ನಿಜವಾಗಿ ಹಗ್ಗವೇ ಎಂದಂತೆ ಶ್ರೀಕೃಷ್ಣರೂಪವು ನನ್ನದೇ ಎಂದು ಭಗವಂತನು ಹೇಳಿರುತ್ತಾನೆ. ಆದ್ದರಿಂದ ವಾಸುದೇವನನ್ನು ವಿಭೂತಿಗಳ ಪಟ್ಟಿಯಲ್ಲಿ ಸೇರಿಸಿದ್ದು ತಪ್ಪಲ್ಲ. ಇಷ್ಟೇ ಅಲ್ಲ, ವಾಸುದೇವನು ಒಂದು ಮಹಾವಿಭೂತಿಯೆಂದೂ ನಾವು ಮನಸ್ಸಿನಲ್ಲಿಡಬೇಕು.

**'ಪಾಂಡವಾನಾಂ ಧನಂಜಯಃ'** ಮಹಾವಿಷ್ಣುವು ಗಂಧಮಾದನಪರ್ವತದ ತಪ್ಪಲಲ್ಲಿ ನರನಾರಾಯಣರೂಪದಿಂದ ತಪಸ್ಸು ಮಾಡಿಕೊಂಡು ಇದ್ದನೆಂದೂ ಅಲ್ಲಿಗೆ ದಂಭೋದ್ಭವನೆಂಬ ರಾಜನು ಯುದ್ಧದಲ್ಲಿ ತನ್ನ ತೋಳತೀಟೆಯನ್ನು ಕಳೆದು ಕೊಳ್ಳುವದಕ್ಕಾಗಿ ಬಂದು ಯುದ್ಧಕ್ಕೆ ಬನ್ನಿರಿ ಎಂದು ಕರೆದನೆಂದೂ ಆಗ 'ನರನು' ಒಂದಾನೊಂದು ಇಷೀಕಾಮುಷ್ಟಿಯನ್ನು ಮಂತ್ರಿಸಿ ಅವನ ಮೇಲೆ ಬಿಡಲು ಅವನು ತಡೆದುಕೊಳ್ಳಲಾರದೆ ಶರಣಾಗತನಾಗಿ ಕ್ಷಮೆಯನ್ನು ಬೇಡಿದನೆಂದೂ ಭಾರತದಲ್ಲಿ ಒಂದು ಕಥೆಯಿದೆ. ಶ್ರೀಕೃಷ್ಣನು ಆ ನಾರಾಯಣನೇ, ಅರ್ಜುನನು ಆ ನರನೇ ಎಂದೂ ಅಲ್ಲಿ ಹೇಳಿರುತ್ತದೆ. ಒಬ್ಬನೇ ಪರಮಾತ್ಮನು ಹೀಗೆ ನರನಾರಾಯಣ ರೂಪನಾಗಿರುವದರಿಂದ ಅರ್ಜುನನೂ ಆ ಪರಮಾತ್ಮನ ಒಂದು ಮಹಾವಿಭೂತಿ ಯಾಗಿರುತ್ತಾನೆ.

ಇಲ್ಲಿ ಅರ್ಜುನನೂ ವಾಸುದೇವನೂ ಎರಡೂ ತನ್ನ ವಿಭೂತಿಗಳೆಂದು ಹೇಳಿರುವದರಲ್ಲಿ ಒಂದು ವಿಶೇಷವಿದೆ. ಶ್ರೀಕೃಷ್ಣಾರ್ಜುನರು ಯಾವಾಗಲೂ ಜೊತೆ ಜೊತೆಯಲ್ಲಿ ಅತ್ಯಂತ ನಿಕಟಸ್ನೇಹಸಂಬಂಧದಿಂದ ಇದ್ದಂತೆ ಭಾರತದಲ್ಲಿ ಹೇಳಿರುತ್ತದೆ. ಆರಾಧಕನಾದ ಅರ್ಜುನನೂ ತಾನೇ, ಆರಾಧ್ಯನಾದ ಕೃಷ್ಣನೂ ತಾನೇ ಎಂದು ಉಪದೇಶದಿಂದಲೂ ನಡತೆಯಿಂದಲೂ ತೋರಿಸಿರುತ್ತಾನೆ. ಶಿವವಿಷ್ಣುಗಳನ್ನು ಒಬ್ಬರನ್ನೊಬ್ಬರು ಪೂಜಿಸಿದಂತೆ ಒಬ್ಬರಿಂದೊಬ್ಬರು ವರಪಡೆದಂತೆ, ಪುರಾಣಗಳಲ್ಲಿ ವರ್ಣಿಸಿ ತೋರಿಸಿರುವದರ ಮರ್ಮವೇ ಇದು. ಶಿವ, ವಿಷ್ಣು - ಎರಡೂ ಒಂದೇ ತತ್ತ್ವವು; "ಏಕಂ ತತ್ತ್ವಂ ದ್ವಿಧಾ ಕೃತಮ್" ಎಂದು ಭಾರತದಲ್ಲಿ ಹೇಳಿರುವದರ ಅಭಿಪ್ರಾಯವೂ ಇದೇ. ಆರಾಧನೆಮಾಡುವವನು ತಾನು ಬೇರೆಯಾಗಿದ್ದು ಪರಮಾತ್ಮನಿಗೆ ಬೇಲಿಹಾಕಿರಬಾರದು; ಪರಮಾತ್ಮನ ವ್ಯಾಪಕತ್ವದಲ್ಲಿ ತನ್ನ 'ನಾನು' ನುಂಗಿಹೋಗಿ ಬಿಡಬೇಕು. ಧ್ಯಾತೃಧ್ಯೇಯಧ್ಯಾನ ಎಂಬ ಮಹಾತತ್ತ್ವವನ್ನು ಆ ಪರಮಾತ್ಮನೇ ನಮಗೆ ಶಿವವಿಷ್ಣುಗಳ ರೂಪದಿಂದ ಪರಸ್ಪರಾರಾಧ್ಯಾರಾಧಕಭಾವವನ್ನು ಪ್ರಕಟಮಾಡಿ

ತಿಳಿಸಿಕೊಟ್ಟಿರುತ್ತಾನೆ. ಇದೇ ತತ್ತ್ವವನ್ನು ಇಲ್ಲಿ ಭಗವಂತನು "ಅರ್ಜುನ, ನೀನು ಶಿಷ್ಯನೆಂದೂ ನಾನು ನಿನಗೆ ತತ್ತ್ವವನ್ನು ಬೋಧಿಸುವವನೆಂದೂ ಭೇದವನ್ನು ಕಲ್ಪಿಸಬೇಡ; ಪರಮಾರ್ಥವಾಗಿ ನೀನೂ ನಾನೂ ಎಲ್ಲವೂ ಒಂದೇ ಒಂದು ಪರಮಾರ್ಥವಾದ ಭಗವತ್ ಸ್ವರೂಪದಲ್ಲಿ ಅಡಕವಾಗಿರುತ್ತೇವೆ. ಅದರಲ್ಲಿ ಯಾವದೊಂದು ಭೇದವೂ ಎಳ್ಳಷ್ಟೂ ಇರುವದಿಲ್ಲ. ಒಬ್ಬ ಮನುಷ್ಯನಿಗೇ ಎಡದ ಕನ್ನಡಿಯಲ್ಲೊಂದು, ಬಲದ ಕನ್ನಡಿಯಲ್ಲೊಂದು - ಹೀಗೆ ಎರಡು ಪ್ರತಿಬಿಂಬಗಳು ಬಿದ್ದಮಾತ್ರಕ್ಕೆ ಅವನು ಇಬ್ಬರಾಗುವದಿಲ್ಲವಷ್ಟೆ. ಹಾಗೆ ನಾನು, ನೀನು ಎಂದು ವ್ಯವಹಾರದಲ್ಲಿ ತೋರಿದರೂ ಪರಮಾರ್ಥವಾಗಿ ಒಂದೇ ತತ್ತ್ವವಿದೆ ಎಂದು ತಿಳಿದುಕೊ" ಎಂದು ಹೇಳುವಂತೆ ವಾಸುದೇವನೂ ನನ್ನ ವಿಭೂತಿಯೇ ಧನಂಜಯನೂ ನನ್ನ ವಿಭೂತಿಯೇ - ಎಂದು ಅಲ್ಲಿ ಅಪ್ಪಣೆಕೊಡಿಸಿರುತ್ತಾನೆ.

ಇನ್ನು **"ಮುನೀನಾಮಪ್ಯಹಂ ವ್ಯಾಸಃ"**- ಎಂಬ ವಿಭೂತಿಯ ವಿಚಾರವನ್ನು ಮಾಡೋಣ. ಭಗವದ್ಗೀತೆಯನ್ನು ಭಾರತದಲ್ಲಿ ಸೇರಿಸಿ ಬರೆಸಿದವರೇ ವ್ಯಾಸರು. ಹೀಗಿರುವಲ್ಲಿ ತಮ್ಮನ್ನು ತಾವೇ ಭಗವಂತನ ವಿಭೂತಿ ಎಂದು ಹೇಗೆ ಹೇಳಿದರು? - ಎಂದು ಯಾರಾದರೂ ಕೇಳಬಹುದು. ಇಲ್ಲಿ ನಾನು, ನೀನು, ಅವನು - ಎಂಬ ಭೇದಭಾವಕ್ಕೆ ಅವಕಾಶವೇ ಇಲ್ಲ. ಭಗವಂತನ ವಿಭೂತಿಗಳನ್ನು ಒಂದೊಂದಾಗಿ ಹೇಳುತ್ತಿದ್ದಾರೆ; ಸರಿಯಾಗಿ ನೋಡಿದರೆ ಎಲ್ಲವೂ ಭಗವಂತನ ವಿಭೂತಿಯೇ. ಹೀಗಿರುವಲ್ಲಿ ವ್ಯಾಸರನ್ನು ವಿಭೂತಿ ಎಂದು ಎಣಿಸುವದಕ್ಕೆ ಅಡ್ಡಿ ಏನು? ವ್ಯಾಸರು ಈ ವಾಕ್ಯವನ್ನು ಆಡುವಾಗ ಅವರ ವ್ಯಾಸತ್ವವು ಹೋಗಿಬಿಟ್ಟಿತ್ತು. ಇದು ಶಾಸ್ತ್ರದೃಷ್ಟಿಯಿಂದ ಹೇಳಿದ ಮಾತು. ಹೇಗೆ ವಾಮದೇವನು ನಾನೇ ಮನುವೂ ಸೂರ್ಯನೂ ಆಗಿದ್ದವನು ಎಂದು 'ಅಹಂ ಬ್ರಹ್ಮಾಸ್ಮಿ' ಎಂಬ ಶಾಸ್ತ್ರದೃಷ್ಟಿಯಿಂದ ತನ್ನ ಸರ್ವಾತ್ಮಭಾವವನ್ನು ಹೇಳಿಕೊಂಡನೋ ಹಾಗೆಯೇ ವ್ಯಾಸರು ಪರಮಾತ್ಮನಲ್ಲಿಯೇ ಐಕ್ಯರಾಗಿ ಈ ಮಾತನ್ನು ಆಡಿರುತ್ತಾರೆ. ಪುರಾಣಗಳ ವರ್ಣನೆಯಂತೆ ವ್ಯಾಸಮಹರ್ಷಿಗಳೂ ವಿಷ್ಣುವಿನ ಅವತಾರವೇ. ಕೃಷ್ಣನು ಅರ್ಜುನನಿಗೆ ಹೇಳಿದ್ದನ್ನೂ ಅರ್ಜುನನು ಕೇಳಿದ್ದನ್ನೂ ಸಾಕ್ಷಾತ್ತಾಗಿ ಕಂಡವರು ವ್ಯಾಸರು; ಸಂಜಯನಿಗೆ ಇದೆಲ್ಲದರ ಅರಿವಾಗುವಂತೆ ಮಾಡಿದವರು ವ್ಯಾಸರು. ಇದನ್ನೇ ಭಾರತವಾಗಿ ರಚಿಸಿ ಬರೆಸಿಟ್ಟವರೂ ವ್ಯಾಸರೇ. ಇವರು ಯಾವಾಗಲೂ ಪರಮಾರ್ಥತತ್ತ್ವವನ್ನು ಮನನಮಾಡುತ್ತಿರುವವರಾದ್ದರಿಂದ ಮುನಿಗಳಲ್ಲೆಲ್ಲ ಶ್ರೇಷ್ಠರೆನಿಸಿಕೊಂಡಿರುತ್ತಾರೆ. ಬರಿಯ ಮೌನದಿಂದ ಮುನಿಯಾಗುವದಿಲ್ಲ, ಅರಣ್ಯವಾಸದಿಂದಲೂ ಮುನಿಯಾಗುವದಿಲ್ಲ, ಪರಮಾತ್ಮತತ್ತ್ವವನ್ನು ಮನನಮಾಡುವದರಿಂದಲೇ ಮುನಿ ಎನಿಸುತ್ತಾನೆ - ಎಂದು ಸ್ಮೃತಿಯುಂಟು. ಈ

ದೃಷ್ಟಿಯಿಂದ ವ್ಯಾಸರು ಮುನಿಗಳಲ್ಲೆಲ್ಲ ವರಿಷ್ಠರೆನ್ನುವದಕ್ಕೆ ತಕ್ಕವರೆಂದು ಹೇಳುವದಕ್ಕೆ ಯಾವ ಅಡ್ಡಿಯೂ ಇರುವದಿಲ್ಲ.

**'ಕವೀನಾಮುಶನಾ ಕವಿಃ'** ಕವಿ ಎಂಬ ಶಬ್ದಕ್ಕೆ ಸಾಮಾನ್ಯಜನರ ಬುದ್ಧಿಗೆ ಅತೀತವಾದದ್ದನ್ನೂ ಅರಿತಿರುವವನು ಎಂದು ಅರ್ಥ. ಪರಮಾತ್ಮನೇ ಈ ಅರ್ಥದಲ್ಲಿ ಅತ್ಯಂತ ಉತ್ಕೃಷ್ಟಕವಿಯು; ಏಕೆಂದರೆ ಸರ್ವಜ್ಞಸ್ವರೂಪವಾದ ನಿತ್ಯಜ್ಞಾನವು ಅವನಿಗೊಬ್ಬನಿಗೆ ಮಾತ್ರವೇ ಇರುತ್ತದೆ. ಆದರೆ ಆತನ ಅನುಗ್ರಹದಿಂದ ಇತರರೂ ತಾರತಮ್ಯದಿಂದ ಕವಿಗಳಾಗಿರಬಹುದು. ಅವರು ಜನರಿಗೆ ಹಿತಕರವಾದ ನೀತಿ ವಿದ್ಯೆಯನ್ನು ಅನುಗ್ರಹಿಸಿರುತ್ತಾರೆ. ಒಮ್ಮೆ ದೇವಾಸುರರಿಗೆ ಸಂಗ್ರಾಮವಾದಾಗ ಮಡಿದ ಅಸುರರನ್ನು ಶುಕ್ರಾಚಾರ್ಯರು ಸಂಜೀವಿನೀವಿದ್ಯೆಯಿಂದ ಎಬ್ಬಿಸುತ್ತಿದ್ದರು; ಇದನ್ನು ದೇವತೆಗಳು ತಿಳಿದು ಬೃಹಸ್ಪತ್ಯಾಚಾರ್ಯರನ್ನು ಮೊರೆಹೊಕ್ಕು ನಮಗೂ ಆ ಉಪಕಾರವನ್ನು ಮಾಡಿಕೊಡಬೇಕೆಂದು ಕೇಳಿಕೊಂಡರು. ಆದರೆ ಆ ಆಚಾರ್ಯರಿಗೆ ಸಂಜೀವಿನೀವಿದ್ಯೆ ತಿಳಿಯದು. ಶುಕ್ರಾಚಾರ್ಯರಲ್ಲಿ ಈ ವಿದ್ಯೆಯನ್ನು ಕಲಿತುಕೊಂಡು ಬರುವದಕ್ಕೆ ತಮ್ಮಲ್ಲಿ ಯಾರಾದರೊಬ್ಬರು ಹೋಗಿಬರಬೇಕೆಂದು ದೇವತೆಗಳು ಸೂಚಿಸಿದರು. ಶತ್ರುಗಳ ನಡುವೆಯಿದ್ದು ಆ ವಿದ್ಯೆಯನ್ನು ಸಂಪಾದಿಸಿಕೊಂಡು ಬರುವ ಧೈರ್ಯವನ್ನು ಯಾರೊಬ್ಬರೂ ಮಾಡಲಿಲ್ಲ. ಕೊನೆಗೆ ಬೃಹಸ್ಪತ್ಯಾಚಾರ್ಯರ ಮಗನಾದ ಕಚನು ತಾನು ಶುಕ್ರಾಚಾರ್ಯರಲ್ಲಿ ಈ ವಿದ್ಯೆಯನ್ನು ಕಲಿತುಕೊಂಡು ಬರುವೆನೆಂದು ಪ್ರತಿಜ್ಞೆಮಾಡಿ ಅವರ ಬಳಿಗೆ ಶಿಷ್ಯವೃತ್ತಿಗೆ ಬಂದನು. ಶುಕ್ರಾಚಾರ್ಯರು ಕಚನು ದೇವಪಕ್ಷಪಾತಿ ಎಂಬುದನ್ನು ತಿಳಿದರೂ ಸರ್ವತ್ರಸಮಬುದ್ಧಿಯುಳ್ಳವರಾದ್ದರಿಂದ ತಮ್ಮಲ್ಲಿ ಶಿಷ್ಯನಾಗಿರಬಹುದೆಂದು ಇಟ್ಟುಕೊಂಡರು. ತನ್ನ ಮಗಳಾದ ದೇವಯಾನಿಗೂ ಕಚನಿಗೂ ಸಮನಾಗಿಯೇ ವಿದ್ಯೆಯನ್ನು ಕಲಿಸುತ್ತಿದ್ದರು. ಇದನ್ನು ನೋಡಿ ಅಸುರರು ಸಹಿಸದೆ ಕಚನಿಗೆ ಬಹುವಿಧದಿಂದ ಕಷ್ಟಗಳನ್ನು ತಂದೊಡ್ಡುವದಕ್ಕೆ ಮೊದಲು ಮಾಡಿದರು. ಒಂದು ಸಲ ಅವನನ್ನು ಶಸ್ತ್ರಗಳಿಂದ ತುಂಡುತುಂಡುಮಾಡಿ ಅರಣ್ಯದ ಮೃಗಗಳಿಗೆ ಆಹಾರವಾಗಿ ಕೊಟ್ಟರು. ಆದರೆ ಶುಕ್ರಾಚಾರ್ಯರು ತಮ್ಮ ಮಗಳ ಪ್ರಾರ್ಥನೆಯಿಂದ ಆಕೆಯ ಸಹಪಾಠಿಯಾದ ಕಚನನ್ನು ಸಂಜೀವಿನೀವಿದ್ಯೆಯಿಂದ ಬದುಕಿಸಿದರು. ಇನ್ನೊಮ್ಮೆ ಅಸುರರು ಶುಕ್ರಾಚಾರ್ಯರಿಗೆ ಮದ್ಯಪಾನಮಾಡಿಸಿ ಅವರಿಗೆ ತಿಳಿಯದಂತೆ ಕಚನ ಮಾಂಸವನ್ನೇ ಅವರಿಗೆ ಉಣಬಡಿಸಿದರು. ದೇವಯಾನಿಯು ಮತ್ತೂ ಪ್ರಾರ್ಥಿಸಿದಾಗ ಸಂಜೀವಿನೀಪ್ರಯೋಗವನ್ನು ಮಾಡುವಲ್ಲಿ ಕಚನು ತಮ್ಮ ಹೊಟ್ಟೆಯಲ್ಲಿರುವದು ತಿಳಿದುಬಂತು. ಆಗ ಅವನಿಗೆ ಸಂಜೀವಿನೀ ವಿದ್ಯೆಯನ್ನು ಉಪದೇಶಿಸಿ ನನ್ನ ಹೊಟ್ಟೆಯನ್ನು ಸೀಳಿಕೊಂಡು ಬಾ; ಬಳಿಕ ನನ್ನನ್ನು

ನಿನ್ನ ವಿದ್ಯಾಬಲದಿಂದ ಬದುಕಿಸು ಎಂದು ಸೂಚನೆಕೊಟ್ಟರು. ಇನ್ನು ಮೇಲೆ ಮದ್ಯ ಪಾನವನ್ನು ಮಾಡುವ ಬ್ರಾಹ್ಮಣರು ಪತಿತರಾಗಲಿ! - ಎಂದು ಶಾಪವನ್ನು ಕೊಟ್ಟರು. ಇವೇ ಮುಂತಾದ ಅವರ ಚರಿತ್ರೆಯ ಕಥೆಗಳು ಇತಿಹಾಸಪುರಾಣಗಳಲ್ಲಿ ಕಂಡು ಬರುತ್ತವೆ. ಆ ಕಥೆಗಳಿಂದ ಅವರಿಗಿದ್ದ ಭೂತಭವಿಷ್ಯಜ್ಞಾನ, ಪ್ರತಿಭೆ, ದಯಾಗುಣ, ಕ್ಷಮಾಗುಣ, ನಿಷ್ಪಕ್ಷಪಾತಬುದ್ಧಿ, ಸರ್ವಲೋಕಹಿತೈಷಿತೆ - ಇವೇ ಮುಂತಾದ ಉತ್ತಮಗುಣಗಳು ಹೊರಬೀಳುತ್ತವೆ. ಇದೆಲ್ಲವನ್ನೂ ಮನದಂದರೆ 'ಕವಿ ಉಶನನು ನಾನು' ಎಂದು ಭಗವಂತನು ತನ್ನ ವಿಭೂತಿಗಳಲ್ಲಿ ಅವರನ್ನು ಸೇರಿಸಿರುವದರ ಔಚಿತ್ಯವು ಸ್ಪಷ್ಟವಾಗುತ್ತದೆ.

**'ದಣ್ಡೋ ದಮಯತಾಮಸ್ಮಿ'** ದಂಡವೆಂದರೇನು? ಎಲ್ಲವನ್ನೂ ವ್ಯವಸ್ಥೆ ಯಲ್ಲಿಟ್ಟುಕೊಳ್ಳುವ ನಿಯಮವಿಶೇಷವು. ರಾಜನು ಪಟ್ಟಾಭಿಷಿಕ್ತನಾಗುವ ಕಾಲಕ್ಕೆ ಅವನ ಕೈಯಲ್ಲಿ ಕೊಡುವ ರಾಜದಂಡವು ಧರ್ಮದ ಗುರುತಾಗಿರುತ್ತದೆ. 'ಧರ್ಮಕ್ಕೆ ಅನುಸಾರವಾಗಿ ಆಳುತ್ತೇನೆ' ಎಂದು ಪ್ರತಿಜ್ಞೆಮಾಡಿ ರಾಜನು ದಂಡವನ್ನು ಪರಿಗ್ರಹಿಸುತ್ತಾನೆ. ಪರಮಾತ್ಮನ ದಂಡವು ಎಲ್ಲಾ ವಿಷಯದಲ್ಲಿಯೂ ನಿಯತ ವಾಗಿರುತ್ತದೆ. ಪರಮಾತ್ಮನ ಶಾಸನವು ಸುಮ್ಮನೆ ಜೀವರನ್ನು ಹೆದರಿಸುವದಲ್ಲ, ಪ್ರತಿಯೊಬ್ಬರೂ ತಮ್ಮತಮ್ಮ ಕೆಲಸವನ್ನು ಸರಿಯಾಗಿ ಮಾಡಿಕೊಂಡು ಹೋಗುವಂತೆ ನಿಯಮಿಸಿ, ಅವರು ಅದನ್ನು ಎಷ್ಟರಮಟ್ಟಿಗೆ ಬಿಟ್ಟು ನಡೆಯುವರೋ ಅಷ್ಟೇ ಮಟ್ಟಿಗೆ ಅವರಿಗೆ ದುಃಖವಾಗುವಂತೆಯೂ ಅದನ್ನು ಅನುಸರಿಸುವಮಟ್ಟಿಗೆ ಸುಖವಾಗು ವಂತೆಯೂ ಜೀವರುಗಳನ್ನು ಪಳಗಿಸುವ ಶಕ್ತಿಯುಳ್ಳದ್ದು, ಆ ದಂಡವು. ಲೋಕದಲ್ಲಿರುವ ಧರ್ಮಪ್ರಧಾನವಾದ ದಂಡವು ಪರಮಾತ್ಮನ ವಿಭೂತಿಯೆಂದು ಸಾಧಕನು ಭಾವಿಸಬೇಕು.

**'ನೀತಿರಸ್ಮಿ ಜಿಗೀಷತಾಮ್'** ಇಲ್ಲಿ ನೀತಿ ಎಂದರೆ ರಾಜನೀತಿಯು. ರಾಜನು ಯಾವ ಕಪಟವೂ ಇಲ್ಲದೆ ಧರ್ಮಶಾಸ್ತ್ರದಂತೆಯೇ ನಡೆಯಬೇಕು. ಪ್ರಜೆಗಳನ್ನು ಧರ್ಮದಲ್ಲಿಯೇ ವರ್ತಿಸುವಂತೆ ಮಾಡಬೇಕು; ಅವರೆಲ್ಲರೂ ಧರ್ಮಭೀರು ಗಳಾಗಿರುವಂತೆ ಮಾಡಬೇಕು. ಪ್ರಜೆಗಳು ಧರ್ಮವನ್ನೂ ಮೀರಿ ನಡೆಯುವಾಗ, ಪ್ರತಿಯೊಬ್ಬನೂ ತನ್ನದೇ ಧರ್ಮವೆಂದು ಹಠಹಿಡಿಯುವಾಗ ಯತ್ನವಿಲ್ಲದೆ ವ್ಯವಹಾರಕ್ಕಾಗಿ ಕೋರ್ಟು, ಕಛೇರಿ - ಮುಂತಾದವುಗಳ ಮೂಲಕ ಪ್ರಜೆಗಳಿಗೆ ನ್ಯಾಯವನ್ನು ದೊರಕಿಸಬೇಕು. ಪರರಾಜರೊಡನೆ ಸಾಮ, ದಾನ, ಭೇದ, ದಂಡ- ಎಂಬ ನಾಲ್ಕು ಉಪಾಯಗಳನ್ನು ಯಥಾಸಂದರ್ಭವಾಗಿ ಉಪಯೋಗಿಸಿಕೊಂಡು ವರ್ತಿಸಬೇಕು. ಇವುಗಳಲ್ಲಿ ಮೊದಮೊದಲನೆಯದು ಮುಂದುಮುಂದಿನದಕ್ಕಿಂತ

ಉತ್ತಮವಾದದ್ದು; ಆದ್ದರಿಂದ ಭೇದವು ಸಾಮದಾನಗಳಿಗಿಂತಲೂ ದಂಡವು ಮಿಕ್ಕ ಮೂರಕ್ಕಿಂತಲೂ ಕಡಿಮೆಯ ಅಂತಸ್ತಿನ ನೀತಿಯು ಎಂಬುದು ಸಿದ್ಧವಾಗುತ್ತದೆ. ಇದರಂತೆ ಸಂಧಿ, ವಿಗ್ರಹ - ಮೊದಲಾದ ಆರು ಕ್ರಮಗಳನ್ನೂ ಅರಿಯಬೇಕು. ಧರ್ಮಕ್ಕೆ ಕಟ್ಟುಬಿದ್ದ ನೀತಿಯು ಪರಮಾತ್ಮನ ವಿಭೂತಿಯು ಎಂದು ಇಲ್ಲಿ ಹೇಳಿರುತ್ತದೆ. ಯುದ್ಧದಲ್ಲಿ ಕೂಡ ಧರ್ಮವನ್ನಾಶ್ರಯಿಸಿಯೇ ನೀತಿಯನ್ನು ಅವಲಂಬಿಸಬೇಕೆಂಬುದನ್ನು ಸುಪ್ರಸಿದ್ಧವಾದ ರಾಮಾಯಣದ ಲಕ್ಷ್ಮಣವಾಕ್ಯವು ನೆನಪಿಗೆ ಕೊಡುತ್ತದೆ. ಅವನು ಇಂದ್ರಜಿತುವನ್ನು ಕೊಲ್ಲುವದಕ್ಕೆ ಬಾಣವನ್ನು ಬಿಟ್ಟಾಗ ಹೀಗೆಂದಿದ್ದಾನೆ. "ದಾಶರಥಿಯಾದ ಶ್ರೀರಾಮನು ಧರ್ಮಾತ್ಮನೂ ಸತ್ಯಸಂಧನೂ ವೀರ್ಯದಲ್ಲಿ ಅಪ್ರತಿದ್ವಂದ್ವನೂ ಆಗಿದ್ದರೆ, ಎಲೈ ಬಾಣವೆ, ಈ ರಾವಣಿಯನ್ನು ಕೊಂದುಹಾಕು!" ರಾಮನ ಧರ್ಮಸತ್ಯಗಳೇ ಇಂದ್ರಜಿತುವನ್ನು ಕೊಲ್ಲುವವೆಂದು ಲಕ್ಷ್ಮಣನು ನಂಬಿದ್ದನೇ ಹೊರತು ತನ್ನ ಬಾಣದ ಮೇಲೆಯೇ ಮುಖ್ಯವಾಗಿ ಭರವಸೆಯನ್ನಿಟ್ಟಿರಲಿಲ್ಲ - ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಇಂಥ ನೀತಿಯು ಭಗವಂತನ ವಿಭೂತಿಯು.

## ೭೯. ವಿಭೂತಿಗಳ ವರ್ಣನೆಯ ಉಪಸಂಹಾರ ೧೦-(೩೮-೪೨)

## (೪-೪-೪೮)

**'ಮೌನಂ ಚೈವಾಸ್ಮಿ ಗುಹ್ಯಾನಾಮ್'** ರಹಸ್ಯಗಳಲ್ಲೆಲ್ಲ ಮೌನವು ನಾನು - ಎಂದು ಭಗವಂತನು ಹೇಳಿರುವದನ್ನು ಈಗ ವಿಮರ್ಶೆಗೆ ತೆಗೆದುಕೊಳ್ಳೋಣ. ಮೌನವು ಆಧ್ಯಾತ್ಮಿಕವಾದದ್ದು, ನಮ್ಮೊಳಗೆ ಇರತಕ್ಕದ್ದು. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ - ಈ ಮೂರು ಪ್ರಪಂಚಗಳಲ್ಲಿಯೂ ಭಗವಂತನ ವಿಭೂತಿಗಳುಂಟು. ಮೌನವು ಹೇಗೆ ರಹಸ್ಯವಾಗಿದೆ? ಎಂಬುದನ್ನು ಮೊದಲು ವಿಮರ್ಶಿಸೋಣ. ಇಲ್ಲಿ ಮೌನವೆಂದರೆ ಬರಿಯ ವಾಙ್ಮೌನವನ್ನು ಹೇಳಿರುವದಿಲ್ಲ. ಇದು ಮನಸ್ಸಿಗೂ ಸಂಬಂಧಪಟ್ಟಿರುತ್ತದೆ.

ರಹಸ್ಯವೆಂದರೆ ಸುಲಭವಾಗಿ ತಿಳಿಯುವದಕ್ಕೆ ಆಗದೆ ಇರುವದು; ತತ್ತ್ವವು ಅಂಥ ರಹಸ್ಯವಾಗಿರುತ್ತದೆ. ತತ್ತ್ವವನ್ನು ಬಲ್ಲವರು ಹೇಳಿದಮೇಲೂ ಜನರು ತಿಳಿಯಲಾರದೆ ಇರುತ್ತಾರೆ. ಆದ್ದರಿಂದ ರಹಸ್ಯವೆಂದರೆ ಹೇಳಬಾರದ್ದು ಎಂದರ್ಥವಲ್ಲ; ಅನಧಿಕಾರಿಗಳಿಗೆ ತತ್ತ್ವವನ್ನು ತಿಳಿಸಬಾರದು ಎಂದು ದೊಡ್ಡವರು ಹೇಳುವದುಂಟು. ಇದೇಕೆಂದರೆ ಅದನ್ನು ತಿಳಿಯದೆ ಇದ್ದರೂ ತಪ್ಪಾಗಿ ತಿಳಿದುಕೊಂಡು ವ್ಯವಹಾರದಲ್ಲಿ

ಉಪಯೋಗಿಸುವದರಿಂದ ಅಪಾಯವಾಗಬಹುದು. ಗಾಂಧಿಯವರ ಉಪದೇಶವನ್ನು ಅವರ ಅನುಯಾಯಿಗಳೆಂಬವರೂ ತಿಳಿದುಕೊಳ್ಳಲಾರದೆ ತಪ್ಪಾಗಿ ಜನರಿಗೆ ತಿಳಿಸಿದ್ದುಂಟು; ಅಂಥ ಸಂದರ್ಭಗಳಲ್ಲಿ ಮಹಾತ್ಮಗಾಂಧಿಯವರು "ನಾನು ಹಾಗೆ ಹೇಳಲಿಲ್ಲ ಜನರು ತಪ್ಪಾಗಿ ತಿಳಿದುಕೊಂಡಿರುತ್ತಾರೆ" ಎಂದು ಸ್ಪಷ್ಟೋಕ್ತಿಗಳಿಂದ ವಿವರಣೆಯನ್ನು ಕೊಡಬೇಕಾಗುತ್ತಿತ್ತು.

ಗುಹ್ಯವು, ರಹಸ್ಯವು - ಎಂದರೆ ಇನ್ನೊಂದು ದೃಷ್ಟಿಯಿಂದ, ಮತ್ತೊಬ್ಬರಲ್ಲಿ ಹೇಳಿಕೊಳ್ಳಬಾರದ ಸಾಧನಗಳು, 'ಧರ್ಮಃ ಕ್ಷರತಿ ಕೀರ್ತನಾತ್' ತಾನು ಮಾಡಿರುವ ಧರ್ಮವನ್ನು ಹಾಗೆ ಮಾಡಿರುತ್ತೇನೆ, ಹೀಗೆ ಮಾಡಿರುತ್ತೇನೆ - ಎಂದು ಕೊಚ್ಚಿಕೊಳ್ಳುವದರಿಂದ ಧರ್ಮವೇ ನಾಶವಾಗುತ್ತದೆ ಎಂದು ಸ್ಮೃತಿಕಾರರು ಹೇಳುತ್ತಾರೆ. ಆದ್ದರಿಂದ ಧರ್ಮವನ್ನು, ತಾನು ಮಾಡುತ್ತಿರುವ ಉಪಾಸನಾದಿಸಾಧನಗಳನ್ನು, ಸಂತೆಯಲ್ಲಿ ಬೀರತಕ್ಕದ್ದಲ್ಲ; ಈ ಅರ್ಥದಲ್ಲಿ ಅದು ರಹಸ್ಯವಾಗಿರುತ್ತದೆ. ಗುರು ಕೊಟ್ಟ ಮಂತ್ರವೂ ಪರಮಾತ್ಮನ ಧ್ಯಾನಾದಿಸಾಧನವೂ ಈ ಅರ್ಥದಲ್ಲಿ ರಹಸ್ಯವು, ಅದನ್ನು ತನ್ನ ಹೃದಯದಲ್ಲಿಯೇ ಮುಚ್ಚಿಟ್ಟುಕೊಂಡು ಸಾಧನಮಾಡುವದರಿಂದ ಅದಕ್ಕೆ ವೀರ್ಯವು ಬರುತ್ತದೆ.

ಇಂಥ ರಹಸ್ಯಗಳಲ್ಲಿ ಮೌನವು ಹೆಚ್ಚಿನ ರಹಸ್ಯವು. ಮೌನವೆಂದರೆ ಏನು? ಯಾವದರಿಂದ ಮಾನವನು 'ಮುನಿ' ಎನಿಸಿಕೊಳ್ಳುವನೋ ಅದು ಮೌನವು. "ಮೌನಾನ್ನ ಸ ಮುನಿರ್ಭವತಿ ನಾರಣ್ಯವಸನಾನ್ಮುನಿಃ। ಸ್ವಲಕ್ಷಣಂ ತು ಯೋ ವೇದ ಸ ಮುನಿಶ್ರೇಷ್ಠ ಉಚ್ಯತೇ॥" ಸುಮ್ಮನಿದ್ದರೆ ಮುನಿಯಾಗುವದಿಲ್ಲ, ವನದಲ್ಲಿದ್ದ ಮಾತ್ರದಿಂದಲೂ ಮುನಿಯಾಗುವದಿಲ್ಲ; ಯಾವನಿಗೆ ಆತ್ಮಲಕ್ಷಣವು ತಿಳಿದಿರುವದೋ ಅವನೇ ಮುನಿಶ್ರೇಷ್ಠನೆನಿಸುವನು - ಎಂದು ಭಾರತವಚನವಿದೆ. ಪರಮಾತ್ಮತತ್ತ್ವವನ್ನು ಮನನಮಾಡುತ್ತಿರುವದೇ ಮೌನವು. ಮನಸ್ಸಿನ ವೃತ್ತಿಗಳನ್ನೆಲ್ಲ ತಡೆಗಟ್ಟಿ ಹಿಮ್ಮೆಟ್ಟಿಸಿಕೊಂಡು ಒಳಒಳಕ್ಕೆ ಹೋಗುವದು ಮೌನವು; ಅಂದರೆ ಮನಸ್ಸನ್ನೇ ದಾಟಿ ಪರಮಾತ್ಮನಲ್ಲಿ ನಿಲ್ಲುವದು ಎಲ್ಲಕ್ಕೂ ಹೆಚ್ಚಿನ ಮೌನವು. "ಮನೋದೃಶ್ಯಮಿದಂ ದ್ವೈತಮ್" ಎಂದರೆ ಮನಸ್ಸಿನ ಅಲುಗಾಟವೇ ವ್ಯವಹಾರವೆನಿಸುವದು, ಈ ಅಲುಗಾಟವನ್ನು ಮೀರಿರುವದೇ ಮೌನವು. ಶ್ರುತಿಯಲ್ಲಿ ಪಾಂಡಿತ್ಯ, ಬಾಲ್ಯ, ಮೌನ- ಎಂಬ ಮೂರು ಸಾಧನಗಳನ್ನು ಜ್ಞಾನವನ್ನು ಪಕ್ವಮಾಡಿಕೊಳ್ಳುವದಕ್ಕೆ ಉಪಯೋಗಿಸಿಕೊಳ್ಳಬೇಕೆಂದು ಉಪದೇಶಿಸಿರುತ್ತದೆ. ಶಾಸ್ತ್ರಶ್ರವಣವನ್ನು ನಿಃಶ್ಶೇಷವಾಗಿ ಮಾಡಿಕೊಳ್ಳುವದು ಪಾಂಡಿತ್ಯವು. ಆ ಬಳಿಕ ಪರಮಾತ್ಮವಿದ್ಯೆಯ ಬಲದಿಂದ ಹುಡುಗರಂತೆ ಹೊರಗಿನ ಅರಿವಿಲ್ಲದೆ, ತಾನು ಇಂಥವನೆಂದು ಮತ್ತೊಬ್ಬರಲ್ಲಿ

ತೋರಿಸಿಕೊಳ್ಳದೆ ಇರುವದು ಬಾಲ್ಯವು. ಆಮೇಲೆ ಅನಾತ್ಮಚಿಂತನೆಯನ್ನು ಸಂಪೂರ್ಣವಾಗಿ ತೊಲಗಿಸಿಕೊಂಡು ಪರಮಾತ್ಮಚಿಂತೆಯಲ್ಲಿಯೇ ಮುಳುಗಿರುವದು ಮೌನವು. ಈ ಮೌನವು ನಿಶ್ಶೇಷವಾದರೆ ನಿಜವಾದ ಬ್ರಾಹ್ಮಣನಾದನು; ಏಕೆಂದರೆ ನಿತ್ಯವಾದ ಬ್ರಹ್ಮದಲ್ಲಿಯೇ ಆಗ ನೆಲೆನಿಂತಿರುತ್ತಾನೆ ಎಂದು ಶ್ರುತಿ ಹೇಳುತ್ತದೆ. 'ಈ ಮೌನವು ನಾನು' ಎಂದು ಭಗವಂತನು ಹೇಳಿಕೊಂಡಿರುತ್ತಾನೆ.

ಮೌನವೆಂಬುದೊಂದು ಪರಮಾತ್ಮನ ಮಹಾವಿಭೂತಿಯು. ಏಕೆಂದರೆ ಪರಮಾತ್ಮನು ಮೌನದಿಂದಲೇ ಉಪದೇಶಿಸುವದಕ್ಕೆ ತಕ್ಕವನು, ಹಿಂದಕ್ಕೆ ಬಾಷ್ಕಲಿ ಎಂಬವನು ಬಾಧ್ವನೆಂಬಾತನನ್ನು ಪರಮಾತ್ಮತತ್ತ್ವವನ್ನು ಹೇಳಿಕೊಡು ಎಂದು ಎರಡುಮೂರು ಸಲ ಕೇಳಿಕೊಂಡನಂತೆ; ಆದರೂ ಬಾಧ್ವನು ಸುಮ್ಮನೆ ಇದ್ದು ಕೊನೆಗೆ "ಅಪ್ಪ, ನಾವೇನೋ ತಿಳಿಸುತ್ತಲೇ ಇದೇವೆ; ನಿನಗೆ ಮಾತ್ರ ಇದರ ಅರಿವು ಆಗದೆ ಇರುತ್ತದೆ! ಈ ಆತ್ಮನು ಉಪಶಾಂತನಾಗಿರುತ್ತಾನೆ" ಎಂದು ಮೌನದಿಂದಲೇ ತಿಳಿಸಿಕೊಟ್ಟನೆಂದು ಶ್ರುತಿಯಲ್ಲಿರುತ್ತದೆ. ದಕ್ಷಿಣಾಮೂರ್ತಿಯು ಪರಬ್ರಹ್ಮತತ್ತ್ವವನ್ನು ಮೌನವ್ಯಾಖ್ಯಾನದಿಂದಲೇ ತಿಳಿಸಿಕೊಟ್ಟನೆಂಬುದರ ಅಭಿಪ್ರಾಯವೂ ಇದೇ. ಇನ್ನೇನು ಬೇಕಾದರೂ ಮಾಡಬಹುದು; ಆದರೆ ಈ ಮೌನದ ಬೆಲೆಯನ್ನು ಕಂಡುಹಿಡಿದು ಕೊಳ್ಳುವದು ಬಲುಕಷ್ಟ. ಪೂರ್ವದಲ್ಲಿ ಒಬ್ಬ ರಾಜನು ತನ್ನ ರಾಜ್ಯದಲ್ಲಿದ್ದ ಒಂದು ದೇವಸ್ಥಾನದಲ್ಲಿ ಇದ್ದ ವೃತ್ತಿಗಳನ್ನು ಪರಿಶೀಲಿಸುತ್ತಿರುವಲ್ಲಿ "ಸುಮ್ಮನಿರುವದಕ್ಕೆ ಇಂತಿಷ್ಟು ಪಡಿ ಅಕ್ಕಿ" ಎಂದು ಲೆಕ್ಕದಲ್ಲಿ ಬರೆದಿದ್ದದ್ದನ್ನು ಕಂಡನು. ಅವನಿಗೆ ಆಶ್ಚರ್ಯವಾಯಿತು. "ಇದೇನು? ಸುಮ್ಮನಿರುವದೂ ಒಂದು ವೃತ್ತಿಯೆ?" ಎಂದು ನಸುನಗುತ್ತಾ ಆ ವೃತ್ತಿಯನ್ನು ಹೊಡೆದುಹಾಕಿದನು. ಆದರೆ ಕೆಲವು ದಿನಗಳ ಮೇಲೆ ಆ ದೇವಸ್ಥಾನಕ್ಕೆ ಅವನು ಬರುವಾಗ ಆ 'ಸುಮ್ಮನಿರುವ ವೃತ್ತಿಯ' ಬ್ರಾಹ್ಮಣನು "ಮಹಾಸ್ವಾಮಿ, ನನ್ನ ವೃತ್ತಿಯನ್ನೇಕೆ ತೆಗೆದುಹಾಕಿಸೋಣವಾಗಿದೆ?" ಎಂದು ಕೇಳಿಕೊಂಡನು. ಅರಸನು ಅಸಡ್ಡೆಯಿಂದ, "ಸುಮ್ಮನಿರುವದಕ್ಕಾಗಿ ಅಕ್ಕಿಕೊಡಿಸುವದು ನಮಗೆ ಇಷ್ಟವಿಲ್ಲ; ಹಾಗಾದರೆ ರಾಜ್ಯದಲ್ಲಿ ಎಲ್ಲರೂ ಆ ವೃತ್ತಿಯನ್ನೇ ಅವಲಂಬಿಸಿ ಅರಸರಾಗಿಬಿಟ್ಟಾರು!" ಎಂದನು. ಬ್ರಾಹ್ಮಣನು "ಬುದ್ಧಿ, ಹಾಗಲ್ಲ, ಸುಮ್ಮನಿರುವದೇನೂ ಅಷ್ಟು ಸುಲಭವಲ್ಲ. ಇಲ್ಲಿರುವ ಯಾರೊಬ್ಬರೇ ಆಗಲಿ, ಕಾಲು ಗಂಟೆ ಸುಮ್ಮನಿದ್ದರೆ, ನಾನು ಈವರೆಗೆ ತೆಗೆದುಕೊಂಡಿರುವ ಅಕ್ಕಿಯನ್ನೆಲ್ಲ ಅವರಿಗೆ ಕೊಟ್ಟುಬಿಡುತ್ತೇನೆ" ಎಂದು ಪ್ರತಿಜ್ಞೆಮಾಡಿದನು. ರಾಜನು ಕೂಡಲೆ ಸ್ವಲ್ಪಹೊತ್ತು ಸುಮ್ಮನಿದ್ದು "ಅದೇನು ಕಷ್ಟ? ಈಗ ನಾನೇ ಸುಮ್ಮನಿರಲಿಲ್ಲವೆ? ಎಂದು ಕೇಳಲು "ಬ್ರಾಹ್ಮಣನು, ಬುದ್ಧಿಯವರಿಗೆ ಕೋಪವಿಲ್ಲದಿದ್ದರೆ ಅರಿಕೆಮಾಡಿಕೊಳ್ಳುತ್ತೇನೆ. ತಾವು ಈಗ

ಸುಮ್ಮನಿರಲಿಲ್ಲ; ಇಂಥ ರಾಜ್ಯದಮೇಲೆ ದಂಡೆತ್ತಿಹೋಗಿರುವ ಸೇನೆಯ ವಿಚಾರವನ್ನು ಮಾಡಿಕೊಳ್ಳುತ್ತಿದ್ದಿರಿ" ಎಂದನಂತೆ. ರಾಜನಿಗೆ ಆಗ ಸುಮ್ಮನಿರುವ ಮೌನವೆಂದ ರೇನೆಂಬುದರ ಅರಿವು ಆಗಿ ಬ್ರಾಹ್ಮಣನಿಗೆ ಮೊದಲಿಗಿಂತಲೂ ಹೆಚ್ಚಿನ ಪರಿಮಾಣದ ಅಕ್ಕಿಯನ್ನು ಕೊಡಬೇಕೆಂದು ಅಪ್ಪಣೆಮಾಡಿದನಂತೆ! ಇಂಥ ಹೆಚ್ಚಿನದು, ಈ ಮೌನವೆಂಬ ರಹಸ್ಯವು!

ಇನ್ನು "ಜ್ಞಾನಂ ಜ್ಞಾನವತಾಮಹಮ್" ಎಂಬ ವಿಭೂತಿಯ ಕಡೆಗೆ ತಿರುಗೋಣ. ಜ್ಞಾನಿಗಳ ಜ್ಞಾನವು ನಮ್ಮಗಳ ವ್ಯವಹಾರದ ಜ್ಞಾನಕ್ಕಿಂತ ಅತ್ಯಂತ ವಿಲಕ್ಷಣವಾಗಿರುತ್ತದೆ. ಆ ಜ್ಞಾನವನ್ನು ತಿಳಿಸಿಕೊಡುವದಕ್ಕೇ ಗೀತಾಶಾಸ್ತ್ರವು ಹೊರಟಿರುತ್ತದೆ. "ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ" ಎಂದು ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿ ಹೇಳಿರುವ ವಿದ್ಯೆಯೇ ಈ ಜ್ಞಾನವು. ಸಾಧಾರಣಜನರ ಜ್ಞಾನವು ವ್ಯಾಪಾರ, ಸರ್ಕಾರ, ಜ್ಯೋತಿಷ್ಯ, ವೈದ್ಯ, ಆಹಾರ, ಬಟ್ಟೆ, ಕೀರ್ತಿ - ಇಂಥ ವಿಷಯಗಳನ್ನು ಕುರಿತದ್ದಾಗಿರುತ್ತದೆ. ಇದು ಕಾಮಮಯವಾಗಿರುತ್ತದೆ. ಜ್ಞಾನಿಗಳ ಜ್ಞಾನವು ಇದಕ್ಕೆ ಅತ್ಯಂತವಿರುದ್ಧವಾಗಿರುತ್ತದೆ. ಅವರಿಗೆ 'ಸ್ಥಿತಪ್ರಜ್ಞರು' ಎಂದು ಹೆಸರು ಬರುವದಕ್ಕೆ ಇದೇ ಕಾರಣವು. ಈ ಜ್ಞಾನವು ಬಂದಾಗ ಸಕಲಕಾಮಗಳೂ ಸಂಪೂರ್ಣವಾಗಿ ಹೋಗಿಬಿಟ್ಟಿರುತ್ತವೆ. ಕಾಮದಲ್ಲಿ ಜ್ಞಾನವಿರುವವರು ನಾವು; ರಾಮನಲ್ಲಿ, ಭಗವಂತನಲ್ಲಿ, ಜ್ಞಾನವಿರುವವರು ಜ್ಞಾನಿಗಳು. ಯಾವದೊಂದನ್ನು ಅರಿತುಕೊಂಡರೆ ಅರಿತುಕೊಳ್ಳತಕ್ಕದ್ದನ್ನೆಲ್ಲ ಅರಿತಂತಾಗುವದೋ ಆ ಜ್ಞಾನವು ಜ್ಞಾನಿಗಳದು. ಆದ್ದರಿಂದ ಅವರನ್ನು 'ಜ್ಞಾತಜ್ಞೇಯರು' ಎನ್ನುತ್ತಾರೆ. ಪರಮಾತ್ಮನು ಏಕನು, ಅವನ ಜ್ಞಾನವೂ ಏಕಮುಖವಾಗಿರುತ್ತದೆ. ಬೆಳಗಿನಿಂದ ಸಾಯಂಕಾಲದವರೆಗೆ ಜೀವರುಗಳಿಗೆ ಉಂಟಾಗುವ ಜ್ಞಾನಗಳು ಎಷ್ಟು ಕವಲುಕವಲಾಗಿ ಹರಿಯುತ್ತಿರುವವು, ನೋಡಿರಿ! ಜ್ಞಾನಿಗಳಿಗೆ ಈ ಹರಿದಾಡುವ ಜ್ಞಾನದ ಹುಚ್ಚು ಹೋಗಿ ಅವರ ಅರಿವು ಪರಮಾತ್ಮನಲ್ಲಿ ನಿಂತುಕೊಂಡುಬಿಟ್ಟಿರುತ್ತದೆ. ಜ್ಞಾನಿಗಳನ್ನು ನೋಡಿದರೆ ಸಾಕು, ಅವರ ಪ್ರಭಾವವು ನಮ್ಮ ಮೇಲೆ ಬೀಳುವದು, ನಾವು ಪ್ರಶಾಂತರಾಗುವೆವು. ಅವರ ಜ್ಞಾನವನ್ನು ಭಗವಂತನೇ ಎಂದು ಉಪಾಸನೆ ಮಾಡಬೇಕು. ಅದು ನಮ್ಮ ಸ್ವಭಾವವನ್ನೇ ಮಾರ್ಪಡಿಸಿ, ನಮ್ಮನ್ನು ಉತ್ಕೃಷ್ಟಸ್ಥಿತಿಗೆ ಏರಿಸುತ್ತದೆ.

ಇನ್ನು **"ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ"** ಸರ್ವಭೂತಗಳಿಗೂ ಬೀಜವು ಯಾವದೋ ಅದು ನಾನು - ಎಂದು ಭಗವಂತನು ಹೇಳಿರುವದಕ್ಕೆ ಕಿವಿಗೊಡೋಣ. ಸ್ಥೂಲದೃಷ್ಟಿಯಿಂದ ತಾಯಿತಂದೆಗಳು ಪ್ರಾಣಿಗಳ

ಶರೀರಕ್ಕೆ ಕಾರಣರು. ಸ್ವಲ್ಪಹಿಂದಕ್ಕೆ ಹೋಗಿ ನೋಡಿದರೆ, ಅವರವರ ಕರ್ಮವು ಕಾರಣವಾಗಿರುತ್ತದೆ; ಕರ್ಮಕ್ಕೆ ಅವಿದ್ಯೆ ಕಾರಣವು. ಅವಿದ್ಯೆ ಎಂದರೆ ಪರಮಾತ್ಮನನ್ನು ಅರಿಯದಿರುವದು. ಅಜ್ಞಾತರಜ್ಜುವು ಸರ್ಪಕ್ಕೆ ಕಾರಣವಾಗಿರುವಂತೆ ಅಜ್ಞಾತ ಪರಮಾತ್ಮನೇ ಸೃಷ್ಟಿಗೆಲ್ಲ ಕಾರಣ. ಬಂಧಕ್ಕೆ ಅವನೇ ಕಾರಣವು. ಜ್ಞಾತಪರಮಾತ್ಮನು ಮೋಕ್ಷಕ್ಕೆ ಕಾರಣನು. **ಮೋಕ್ಷವೆಂದರೆ ಏನು? ಎಲ್ಲಾ ಕೋಟಲೆಗಳಿಂದಲೂ ಬಿಡುಗಡೆಯಾಗುವದು**, ಈ ರೀತಿಯಲ್ಲಿ ನೋಡಿದರೆ ಪರಮಾತ್ಮನ ಸಂಬಂಧವಿಲ್ಲದೆ ಯಾವ ಚರಾಚರವೂ ಇರುವದಿಲ್ಲ. ಚೇತನಾಚೇತನರೂಪವಾದ ಜಗತ್ತಿಗೆಲ್ಲ ಪರಮಾತ್ಮನೇ ಕಾರಣನೆಂದು ಶ್ರುತಿಯಲ್ಲಿ ಹೇಳಿರುತ್ತದೆ. ಎಲ್ಲಕ್ಕೂ ಪರಮಾತ್ಮನೇ ಮೂಲಬೀಜವಾದರೂ, ಎಲ್ಲಕ್ಕೂ ಪರಮಾತ್ಮನೇ ಕಾರಣವಾದರೂ ಆಯಾ ವಸ್ತುಗಳಲ್ಲಿ ಪರಮಾತ್ಮನ ಅಂಶವು ತಾರತಮ್ಯದಿಂದ ಪ್ರಕಟವಾಗಿರುತ್ತದೆ:

**ನಾನ್ತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ॥** (೧೦-೪೦)

ಭಗವಂತನು ಈ ರೀತಿಯ ಹಲವು ವಿಭೂತಿಗಳನ್ನು ವಿವರವಾಗಿ ಹೇಳಿದ ಬಳಿಕ, ಇಷ್ಟೇ ಪರಮಾತ್ಮನ ವಿಭೂತಿಯು ಎಂದು ಅರ್ಜುನನು ಅಥವಾ ಮತ್ತೆ ಯಾರಾದರೂ ತಿಳಿದಾರೆಂದು ಈ ಮಾತನ್ನು ಆಡಿರುತ್ತಾನೆ. "ಶತ್ರುತಾಪನನಾದ ಅರ್ಜುನನೆ, ನನ್ನ ದಿವ್ಯವಾದ ವಿಭೂತಿಗಳಿಗೆ ಅಂತವಿಲ್ಲ; ಇಲ್ಲಿಯವರೆಗೆ ಹೇಳಿದ ಈ ವಿಭೂತಿವರ್ಣನೆಯು ಸ್ವಲ್ಪಮಟ್ಟಿಗೆ ತಿಳಿಸುವದಕ್ಕಾಗಿ ಹೇಳಿದ್ದಾಗಿದೆ". ವಿಭೂತಿಗಳಿಗೆ ಅಂತವಿಲ್ಲವೆಂದರೇನು? ವಿಭೂತಿಗಳು ಇಂತಿಷ್ಟೆಂಬ ಸಂಖ್ಯೆಯ ಮಿತಿಯಿಲ್ಲ ಎಂದು ಒಂದು ಅರ್ಥ. ಒಂದೊಂದು ವಿಭೂತಿಯನ್ನು ತೆಗೆದುಕೊಂಡು ವರ್ಣಿಸಿದರೂ, ಅದಕ್ಕೆ ಅಂತವಿರುವದಿಲ್ಲ. ಯಾವದೊಂದು ವಿಭೂತಿಯನ್ನು ತೆಗೆದುಕೊಂಡರೂ ಅದಕ್ಕೆ ಜನ್ಮವನ್ನೆಲ್ಲ ಕಳೆಯಬಹುದು. ಅಷ್ಟು ಆಳವಾಗಿರುತ್ತದೆ, ಅದರ ಮಹಿಮೆ! ಶ್ರೀಕೃಷ್ಣನೊಬ್ಬನಲ್ಲಿ ಭಕ್ತಿಯನ್ನು ಇಟ್ಟುಕೊಂಡಿರುವವರನ್ನೇ ಉದಾಹರಣೆಯಾಗಿ ತೆಗೆದುಕೊಳ್ಳಿರಿ. ಆತನ ಶೈಶವ, ಬಾಲ್ಯ, ಗೋಪಾಲಲೀಲೆ - ಮುಂತಾದವುಗಳಲ್ಲಿ ಒಂದೊಂದನ್ನು ಕುರಿತು ಭಾವನೆಯಿಂದಲೇ ಎಷ್ಟೋ ಜನ್ಮಗಳನ್ನು ಆನಂದದಿಂದ ಕಳೆಯಬಹುದು. ಭಾವನೆಯಿಂದಲೇ ಒಂದು ವಿಗ್ರಹವನ್ನು ಆರಾಧಿಸುವವರಿಗೆ ಅದೇ ಸಾಕ್ಷಾತ್ತಾಗಿ ಕೃಷ್ಣನಾಗಿ ಕಾಣುವದು! ಮನಸ್ಸನ್ನು ಉಲ್ಲಾಸಗೊಳಿಸುವದು, ಸಂಸಾರದ ಸಂತಾಪವನ್ನು ಪರಿಹರಿಸುವದು! ಹೀಗಿರುವಲ್ಲಿ ಈವರೆಗೆ ಉದಾಹರಣೆಗಾಗಿ ಹೇಳಿರುವ ವಿಭೂತಿಗಳಲ್ಲಿ ಯಾವದನ್ನು ತಾನೆ ನಾವು ಕೊನೆಮುಟ್ಟುವವರೆಗೆ ಒಳಹೊಕ್ಕು ವಿಚಾರಿಸಿರುತ್ತೇವೆಂದು ಹೇಳಬಹುದು? ಆಯಾ ಭಾವುಕರ ಹೃದಯದ

ಪರಿಮಿತಿಯಿದ್ದಷ್ಟು ಆಯಾ ವಿಭೂತಿಯು ಭಗವಂತನ ಮಹಿಮೆಯನ್ನು ಪ್ರಕಟಗೊಳಿಸುತ್ತದೆ ಎನ್ನಬೇಕೇ ಹೊರತು, ಅಲ್ಲಿಗೇ ಆ ವಿಭೂತಿಯ ವಿಚಾರವೆಲ್ಲ ಮುಗಿಯಿತೆಂದು ಎಂದಿಗೂ ಭಾವಿಸುವಹಾಗಿಲ್ಲ.

ಈ ಅಧ್ಯಾಯದಲ್ಲಿ ಹೇಳಿರುವವಲ್ಲದೆ ಇನ್ನೂ ಬೇಕಾದಷ್ಟು ಭಗವಂತನ ವಿಭೂತಿಗಳಿರುತ್ತವೆ. ಭಗವಂತನ ವಿಭೂತಿಯನ್ನು ಹೇಗೆ ಆರಿಸಿಕೊಳ್ಳಬೇಕು? ಆ ವಿಭೂತಿಯನ್ನು ಭಗವಂತನೆಂದು ಉಪಾಸನೆಮಾಡುವದು ಹೇಗೆ? ಎಂಬುದು ತಿಳಿಯಲೆಂದು ಶ್ರೀಕೃಷ್ಣಭಗವಂತನು ಒಂದು ತತ್ತ್ವವನ್ನು ಈಗ ತಿಳಿಸಿಕೊಡುತ್ತಾನೆ:

**ಯದ್ಯತ್ ವಿಭೂತಿಮತ್ ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥** (೧೦-೪೧)

ಯಾವಯಾವದರಲ್ಲಿ ವೈಭವವಿರುವದೋ, ಯಾವಯಾವದರಲ್ಲಿ ಸಂಪತ್ತಿರುವದೋ, ಯಾವಯಾವದರಲ್ಲಿ ಉತ್ಸಾಹಶಕ್ತಿಯು ಕಾಣುತ್ತಿರುವದೋ ಅದದನ್ನೆಲ್ಲ ನನ್ನ ತೇಜಸ್ಸಿನ ಅಂಶದಿಂದ ಉಂಟಾಗಿರುವದೆಂದು ತಿಳಿ. ಹಿಮಾಲಯದಂಥ ಮೈಲುಗಟ್ಟಲೆ ಹಬ್ಬಿರುವ ಪರ್ವತಶ್ರೇಣಿಯನ್ನು ಕಂಡರೆ, ಗೇರುಸೊಪ್ಪೆಯಂಥ ಜಲಪಾತವನ್ನು ಕಂಡರೆ, ಗಂಗಾಯಮುನಾದಿ ಮಹಾನದಿಗಳು ಪೂರ್ಣಪ್ರವಾಹದಿಂದ ಹರಿಯುವದನ್ನು ಕಂಡರೆ, ಯಾವದಾದರೂ ಮರಗಿಡಬಳ್ಳಿಗಳ ವನರಾಜಿಯ ಸೌಂದರ್ಯವನ್ನು ಕಂಡರೆ, ಪರಮಾತ್ಮನ ಸನ್ನಿಧಿಯು ಎದ್ದು ಕಾಣುವದು! ವಸ್ತುಗಳಲ್ಲಿರುವ ನೀಚತ್ವವು ಮರೆತುಹೋಗುವದು; ಮಹನೀಯರಿಗಂತೂ ಅವುಗಳ ದರ್ಶನದಿಂದ ಭಾವಸಮಾಧಿಯೇ ಉಂಟಾಗುವದು. ಇಂಥ ಯಾವ ದೃಶ್ಯಗಳನ್ನು ನೋಡಿದರೂ ಭಗವಂತನನ್ನು ಸ್ಮರಿಸಿಕೊಳ್ಳಬೇಕು. ಅಕ್ಕಸಾಲಿಗರು ಚಿನ್ನದ ರವೆಗಳನ್ನು ಇದ್ದಲುಗಳ ನಡುವೆ ಶ್ರವಣದಿಂದ ಎತ್ತಿ ಆರಿಸಿಕೊಳ್ಳುವಂತೆ, ಯಾವಯಾವ ವಿಭೂತ್ಯಾದಿಯುಕ್ತವಸ್ತುಗಳ ವಿಚಾರವನ್ನು ಕೇಳಿದರೂ ಅವುಗಳ ಗುಣಗಳನ್ನು ಆರಿಸಿಕೊಳ್ಳುವ ಸ್ವಭಾವವು ನಮ್ಮ ಅಂತಃಕರಣಕ್ಕೆ ಬರಬೇಕು. ಆಮೇಲೆ ಸೂಜಿಗಲ್ಲು ಸೂಜಿಯನ್ನು ಎಳೆದುಕೊಳ್ಳುವಂತೆ ಆ ಗುಣಗಳು ನಮ್ಮ ಚಿತ್ತವನ್ನು ಎಳೆದುಕೊಳ್ಳುವವು. ಈ ಜಗತ್ತು ಈಗಲೇ ಇಲ್ಲಿಯೇ ಪರಮಾತ್ಮಮಯವಾಗಿರುತ್ತದೆ; ಆದರೆ ನಮ್ಮ ಭಾವನೆಯು ಅದನ್ನು ಅರಿತು ಆನಂದಿಸುವ ಸ್ಥಿತಿಗೆ ಏರಿರುವದಿಲ್ಲ. ದತ್ತೂರಿಗಿಡವೂ ತುಂಬೆಗಿಡವೂ ಬೆಳೆದಿರುವ ಹೊಲವನ್ನು ಕಂಡರೆ ಅಲ್ಲಿರುವ ಶಿಲೆಗಳೆಲ್ಲ ಶಿವಲಿಂಗಗಳೆಂಬ ಭಾವನೆ ಬರುತ್ತದೆ, ಪ್ರೇಮಯುತವಾದ ಹೃದಯದ ಭಕ್ತರಿಗೆ! ನಮ್ಮ ಭಾವನೆಯು ಎಷ್ಟರಮಟ್ಟಿಗೆ ಪಕ್ವವಾಗುವದೋ ಅಷ್ಟರಮಟ್ಟಿಗೆ ಜಗತ್ತೇ ಪರಮಾತ್ಮನ ರೂಪಕ್ಕೆ ತಿರುಗುವದು. ಸದಾಶಿವಬ್ರಹ್ಮೇಂದ್ರಸರಸ್ವತಿಗಳು ಹೀಗೆ ಎಂದಿರುವಂತೆ:

**ಸರ್ವಂ ಬ್ರಹ್ಮಮಯಂ ರೇ ರೇ**
**ಸರ್ವಂ ಬ್ರಹ್ಮಮಯಮ್ ॥ ಧ್ರುವ ॥**
**ಕಿಂ ವಚನೀಯಮ್ । ಕಿಮವಚನೀಯಮ್ ।**
**ಕಿಂ ರಚನೀಯಮ್ । ಕಿಮರಚನೀಯಮ್ ॥ ೧ ॥**

**ಕಿಂ ಪಠನೀಯಮ್ । ಕಿಮಪಠನೀಯಮ್ ।**
**ಕಿಂ ಭಜನೀಯಮ್ । ಕಿಮಭಜನೀಯಮ್ ॥ ೨ ॥**

**ಕಿಂ ಬೋದ್ಧವ್ಯಮ್ । ಕಿಮಬೋದ್ಧವ್ಯಮ್ ।**
**ಕಿಂ ಭೋಕ್ತವ್ಯಮ್ । ಕಿಮಭೋಕ್ತವ್ಯಮ್ ॥ ೩ ॥**
**ಸರ್ವತ್ರ ಸದಾ ಹಂಸಧ್ಯಾನಮ್ ।**
**ಕರ್ತವ್ಯಂ ಭೋ ಮುಕ್ತಿನಿದಾನಮ್ ॥ ೪ ॥**

ಈ ಇಡಿಯ ಜಗತ್ತೇ ಭಗವನ್ಮಯವಾಗಿರುತ್ತದೆ. ಇದರಲ್ಲಿ 'ಹೇಳತಕ್ಕದ್ದು, ಹೇಳತಕ್ಕದ್ದಲ್ಲ; ಮಾಡತಕ್ಕದ್ದು, ಮಾಡತಕ್ಕದ್ದಲ್ಲ; ಓದತಕ್ಕದ್ದು ಓದತಕ್ಕದ್ದಲ್ಲ; ಭಜಿಸತಕ್ಕದ್ದು, ಭಜಿಸತಕ್ಕದ್ದಲ್ಲ; ಅರಿತುಕೊಳ್ಳತಕ್ಕದ್ದು ಅರಿತುಕೊಳ್ಳತಕ್ಕದ್ದಲ್ಲ; ಭೋಗಿಸತಕ್ಕದ್ದು, ಭೋಗಿಸತಕ್ಕದ್ದಲ್ಲ; ಎಂದು ಮುಂತಾದ ವಿಭಾಗಕ್ಕೆ ಸ್ವಲ್ಪವೂ ಅವಕಾಶವಿಲ್ಲ. ಜಾಣರಾದವರು ಇಲ್ಲಿ ಯಾವಾಗಲೂ ಭಗವಂತನನ್ನೇ ಕಾಣುತ್ತಾ, ಭಗವಂತನನ್ನೇ ಧ್ಯಾನಿಸುತ್ತಿರುವರು. ಅವರಿಗೆ ಜಗತ್ತು ಕಾಣಿಸುವದೇ ಇಲ್ಲ.

ಇದೇ ಅರ್ಥವನ್ನೇ ಭಗವಂತನು ಈ ಉಪಸಂಹಾರಶ್ಲೋಕದಲ್ಲಿ ಅರ್ಜುನನಿಗೆ ಉಪದೇಶಿಸಿರುತ್ತಾನೆ:

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥** (೧೦-೪೨)

"ಅರ್ಜುನ, ಇದೇ ಮುಂತಾದ ಹೆಚ್ಚು ವಿಸ್ತಾರಮಾತುಗಳಿಂದ ನಿನಗೇನಾಗಬೇಕಾದದ್ದಿದೆ? ನನ್ನ ವಿಭೂತಿಗಳನ್ನು ಒಂದೊಂದಾಗಿ ಎಷ್ಟು ಹೇಳಿದರೂ ಎಂದಿಗೂ ಮುಗಿಯುವಂತಿಲ್ಲ. ಆದ್ದರಿಂದ ನೀನು ಇಷ್ಟು ಮಾತ್ರ ಚಿಂತಿಸುತ್ತಿರು, ಸಾಕು. ನನ್ನ ಒಂದಂಶದಿಂದ ಈ ಇಡಿಯ ಜಗತ್ತನ್ನೇ ನಾನು ಹಿಡಿದುನಿಲ್ಲಿಸಿಕೊಂಡಿರುವೆನು." ಇವೆಲ್ಲವೂ ಸೇರಿದರೂ ಭಗವಂತನ ಒಂದಂಶವು ಮಾತ್ರ. ಇದೆಲ್ಲ ಭಗವಂತನ ಹಾಗಪಾಲು; ಅಮೃತವಾಗಿರುವ ಮುಪ್ಪಾಗಪಾಲು ಇದನ್ನು ಮೀರಿರುತ್ತದೆ. ಇಡಿಯ ಜಗತ್ತೇ ಭಗವಂತನ ವಿಭೂತಿಯು, ಭಗವಂತನು ಈ ವಿಭೂತಿಯನ್ನು ಎಷ್ಟೋಪಾಲು ಮೀರಿರುವ ಪರಮಪುರುಷನಾಗಿರುತ್ತಾನೆ.

---

## ೮೦. ವಿಶ್ವರೂಪದರ್ಶನಕ್ಕೆ ಸಿದ್ಧತೆ ೧೧-(೧-೮)
(೨-೫-೪೮)

ಹಿಂದಿನ ಉಪನ್ಯಾಸಕ್ಕೂ ಇಂದಿನ ಉಪನ್ಯಾಸಕ್ಕೂ ನಡುವೆ ಮೂರು ಭಾನುವಾರಗಳು ಅನುಷ್ಠಾನಾದಿನಿಮಿತ್ತದಿಂದ ಗೀತೋಪನ್ಯಾಸವಿಲ್ಲದೆ ಕಳೆದಿವೆ. ಹತ್ತನೆಯ ಅಧ್ಯಾಯದಲ್ಲಿ ಮುಖ್ಯವಾಗಿ ಹೇಳಿರುವ ವಿಷಯಗಳನ್ನು ಮನಸ್ಸಿಗೆ ತಂದುಕೊಳ್ಳುವದು ಒಳ್ಳೆಯದು. ಭಗವಂತನ ವಿಭೂತಿಗಳನ್ನು ತಿಳಿಸಿದ್ದಾಯಿತು. ಭಗವಂತನು ಎಲ್ಲಾ ವಿಭೂತಿಗಳಲ್ಲಿಯೂ ಪ್ರಕಟವಾಗಿರುತ್ತಾನಾದರೂ ಯಾವ ಯಾವದರಲ್ಲಿ ಹೇಗೆಹೇಗೆ ಆತನನ್ನು ಉಪಾಸನೆಮಾಡಬೇಕು ಎಂಬುದನ್ನು ಅನೇಕ ಉದಾಹರಣೆಗಳಿಂದ ವಿವರಿಸಿದ್ದಾಯಿತು. ಎಷ್ಟೇ ವಿಭೂತಿಗಳನ್ನು ಹೇಳಿದರೂ ಅವು ನಿದರ್ಶನಾರ್ಥವಾಗಿ ಹೇಳಿದವುಗಳೇ ಹೊರತು ಇಷ್ಟೇ ವಿಭೂತಿಗಳೆಂದು ಎಣಿಕೆಮಾಡಿ ಹೇಳಿದವುಗಳಲ್ಲ. ವಿಭೂತಿಗಳಿಗೆ ಅಂತವೇ ಇಲ್ಲ. ಬೇರೆಬೇರೆಯ ವಿಭೂತಿಗಳನ್ನು ಒಂದೊಂದಾಗಿ ಹೇಳುವದಕ್ಕಿಂತಲೂ ವಿಭೂತಿಗಳನ್ನು ಗುರುತಿಸುವ ಲಕ್ಷಣವನ್ನು ತಿಳಿಸುವದೇ ಮೇಲೆಂದು ಭಗವಂತನು ಯಾವಯಾವದರಲ್ಲಿ ವಿಭೂತ್ಯಾದಿಗಳು ಹೆಚ್ಚಾಗಿರುವವೋ ಅದೆಲ್ಲ ಪರಮೇಶ್ವರನೆಂದು ಉಪಾಸನೆಮಾಡು ಎಂದು ಉಪಸಂಹಾರಮಾಡಿರುತ್ತಾನೆ. ಅಥವಾ ವಿಭೂತಿಗಳನ್ನು ಬಿಡಿಬಿಡಿಯಾಗಿ ಉಪಾಸನೆ ಮಾಡುವದಾದರೂ ಏತಕ್ಕೆ? ಇಡಿಯ ಜಗತ್ತೇ ಪರಮಾತ್ಮನ ವಿಭೂತಿಯು, ಇದೆಲ್ಲವೂ ಪರಮಾತ್ಮನ ಒಂದಂಶವೆಂದು ಉಪಾಸನೆಮಾಡು- ಎಂದು ಅಧ್ಯಾಯದ ಕೊನೆಯಲ್ಲಿ ಉಪದೇಶಿಸಿರುತ್ತಾನೆ. ಪ್ರಪಂಚವು ಪರಮಾತ್ಮನಿಂದಲೇ ಬಂದಿರುತ್ತದೆ ಎಂಬುದೊಂದು ಆತನ ಅದ್ಭುತಲೀಲೆಯು; ಜಗತ್ತು ಆತನಿಂದಲೇ ಬಂದು ಆತನಲ್ಲಿಯೇ ನಿಂತಿರುತ್ತದೆ, ಆತನಲ್ಲಿಯೇ ಲಯವಾಗುತ್ತದೆ. ಆದ್ದರಿಂದ ಆತನನ್ನು ಬಿಟ್ಟು ಜಗತ್ತೆಂಬುದಿಲ್ಲ. ಆದರೆ ಆತನು ಜಗತ್ತಿಗಿಂತ ವಿಲಕ್ಷಣನಾಗಿರುತ್ತಾನೆ, ಜಗತ್ತಿಗಿಂತ ಅಧಿಕಸ್ವಭಾವವುಳ್ಳವನಾಗಿರುತ್ತಾನೆ. ಇದನ್ನೆಲ್ಲ ಭಗವಂತನು ಅರ್ಜುನನಿಗೆ ಉಪದೇಶಮಾಡಿರುತ್ತಾನೆ.

ಈಗ. ಅರ್ಜುನನು ಪ್ರಶ್ನೆಮಾಡುತ್ತಾನೇನೆಂದರೆ :

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥** (೧೧-೧)
**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥** (೧೧-೨)

ಏವಮೇತದ್ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ ।
ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥ (೧೧-೩)
ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।
ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ॥(೧೧-೪)

"ಭಗವಂತನೆ, ನನ್ನ ಮೇಲಿನ ಅನುಗ್ರಹದಿಂದ ಅಧ್ಯಾತ್ಮವೆಂಬ ಪರಮಗುಹ್ಯವನ್ನು ನೀನು ಹೇಳಿರುತ್ತೀಯೆ." ಅಧ್ಯಾತ್ಮವೆಂದರೆ ಆತ್ಮಸ್ವರೂಪದ ತಿಳಿವಳಿಕೆ. ಇದು ಪರಮ ಗುಹ್ಯ. ಭರತಪುರದ ಕೋಟೆಯನ್ನು ಎಷ್ಟುಸಲ ಮುತ್ತಿದರೂ ಮೊಗಲುಚಕ್ರವರ್ತಿಯು ಅದನ್ನು ವಶಗೊಳಿಸಿಕೊಳ್ಳಲಾಗಲಿಲ್ಲ ಎಂದು ಚರಿತ್ರೆಯಲ್ಲಿ ಬರೆದಿದೆ; ಆದರೂ ಅವನು ಕೊನೆಗೆ ಅದನ್ನೂ ವಶಪಡಿಸಿಕೊಂಡೇ ಬಿಟ್ಟನು. ಇದರಂತೆ ಅಧ್ಯಾತ್ಮತತ್ತ್ವವನ್ನು ತಿಳಿಯುವವರೆಗೂ ಅದು ಪರಮಗುಹ್ಯವಾಗಿರುತ್ತದೆ. ಆದರೆ ಈ ದುರ್ಭೇದ್ಯವಾಗಿದ್ದ ತತ್ತ್ವವನ್ನು ಸುಲಿದ ಬಾಳೆಯ ಹಣ್ಣಿನಂತೆ ಸುಲಭವಾಗುವಂತೆ ಭಗವಂತನು ಉಪದೇಶಿಸಿರುತ್ತಾನೆ. ಅದರಿಂದ ನನ್ನ ಮೋಹವು ಹೋಯಿತು - ಎಂದು ಅರ್ಜುನನು ಹೇಳುತ್ತಿದ್ದಾನೆ.

ಗೀತಾಶಾಸ್ತ್ರವೇ ಶೋಕಮೋಹಗಳನ್ನು ಕಳೆಯುವದಕ್ಕೆ ಬಂದದ್ದು. "ಅಶೋಚ್ಯರಾದವರನ್ನು ಕುರಿತು ಶೋಕಿಸುತ್ತಿದ್ದೀಯೆ, ಪ್ರಜ್ಞಾವಂತರ ಮಾತನ್ನೂ ಆಡುತ್ತಿದ್ದೀಯೆ. ಇದೆಂಥ ಮೂಢತನವು!" ಎಂದು ಪ್ರಾರಂಭಿಸಿ ಭಗವಂತನು ಆತ್ಮತತ್ತ್ವವನ್ನು ಬಿಡಿಸಿಬಿಡಿಸಿ ಉಪದೇಶಿಸಿದನು. ಅರ್ಜುನನಿಗೆ ಆತ್ಮತತ್ತ್ವದ ಅರಿವು ಆದಂತೆಲ್ಲ ಶೋಕಮೋಹಗಳು ಕರಗುತ್ತಾ ಬಂದವು. ಆತ್ಮನನ್ನು ಎಲ್ಲಿಯೂ ಹುಡುಕಿಕೊಂಡುಹೋಗಿ ಅರಿಯತಕ್ಕದ್ದಿರುವದಿಲ್ಲ; ಏಕೆಂದರೆ ಹುಡುಕುವವನ ಸ್ವರೂಪವೇ ಆತ್ಮನು. ಹುಡುಕುತ್ತಾ ಹೋದಂತೆಲ್ಲ ಅನಾತ್ಮವಸ್ತುಗಳೇ ಸಿಕ್ಕುವವು, ಅನಾತ್ಮಾನ್ವೇಷಣೆಯಿಂದ ಹಿಂತಿರುಗುವದೇ ಆತ್ಮಾನ್ವೇಷಣೆಯ ಗುಟ್ಟು. ಇದನ್ನು ಭಗವಂತನು ತಿಳಿಸಿಕೊಟ್ಟಿರುತ್ತಾನೆ. ಅರ್ಜುನನಿಗೆ ದೇಹದೃಷ್ಟಿಯಿಂದ ಭೀಷ್ಮಾದಿಗಳು ಸಾಯುವರಲ್ಲ! -ಎಂಬ ಮೋಹವೂ ಅದರಿಂದ ಶೋಕವೂ ಉಂಟಾಗಿದ್ದವು. ಭಗವಂತನು ಆತ್ಮನು ಹುಟ್ಟುವವನಲ್ಲ, ಸಾಯುವವನಲ್ಲ, ನಿರ್ವಿಕಾರಿ - ಎಂಬ ತತ್ತ್ವವನ್ನು ಮನಗಾಣುವದಕ್ಕೆ ಕರ್ಮಯೋಗವನ್ನು ಅವಲಂಬಿಸು ಎಂದು ಹೇಳಿಕೊಟ್ಟನು; ಇದೇ ಅಧ್ಯಾತ್ಮಸಂಜ್ಞಿತವಾದ ಪರಮಗುಹ್ಯವು; ಇದನ್ನು ಶ್ರವಣಮಾಡಿದ ಅರ್ಜುನನ ಮೋಹವು ತೊಲಗಿತು.

ಹಾಗಾದರೆ ಮೋಹವು ಹೋದಮೇಲೆ ಮುಂದಕ್ಕೆ ಎಂಟು ಅಧ್ಯಾಯಗಳ ಗೀತಾಭಾಗವೇತಕ್ಕೆ? - ಎಂದು ಯಾರಾದರೂ ಕೇಳಬಹುದು. ಹಿಂದೆ ಹೇಳಿದ ವಿಷಯವನ್ನೇ ಗಟ್ಟಿಗೊಳಿಸುವದಕ್ಕೂ ನಡುನಡುವೆ ಉಂಟಾಗಬಹುದಾದ ಜಿಜ್ಞಾಸು

ಸಂಶಯಗಳನ್ನು ಬಗೆಹರಿಸುವದಕ್ಕೂ ಮುಂದಿನ ಭಾಗವು ಬಂದಿರುತ್ತದೆ. ಈವರೆಗಿನ ಗ್ರಂಥಭಾಗದಲ್ಲಿ ಬಂದಿರುವ ಬೋಧೆಗಳಿಗೇ ಖಿಲಕಾಂಡದಂತೆ ಕೆಲವು ವಿವರಗಳನ್ನು ಮುಂದಿನ ಭಾಗದಲ್ಲಿ ತಿಳಿಸಲಾಗುವದು. ಆತ್ಮನಲ್ಲಿ ಅನಾತ್ಮಾಧ್ಯಾಸಗಳು ಅನೇಕ ಪ್ರಕಾರವಾಗಿರುತ್ತವೆ. ಆದ್ದರಿಂದ ಸಂಶಯಗಳೂ ಅನೇಕಪ್ರಕಾರವಾಗಿ ಉಂಟಾಗ ಬಹುದು. ಉತ್ತಮಾಧಿಕಾರಿಗಳಿಗೆ ಒಂದು ಸಲ ಉಪದೇಶಮಾಡಿದರೇ ಸಂಶಯಗಳೆಲ್ಲ ತೊಲಗುವವಾದರೂ ಹಾಗೆ ತೊಲಗದೆ ಇರುವವರಿಗಾಗಿ ಮತ್ತೆ ಮತ್ತೆ ಪ್ರಕಾರಾಂತರ ದಿಂದ ಬೋಧಿಸಿ ಉಳಿದ ಸಂಶಯಗಳನ್ನು ತೊಲಗಿಸಬೇಕಾಗುವದು.

ಅರ್ಜುನನು ಈಗ ಕೇಳುವ ಪ್ರಶ್ನೆಯಿದು: ಭಗವಂತನೆ, ನೀನು ಅಧ್ಯಾತ್ಮ ತತ್ತ್ವವನ್ನು ನನಗೆ ಉಪದೇಶಿಸಿರುವೆ. ಅದಕ್ಕೆ ಉಪಾಯವಾಗಿ ಇಡಿಯ ಜಗತ್ತೇ ನಿನ್ನಿಂದ ಹುಟ್ಟಿ ನಿನ್ನಲ್ಲಿಯೇ ಅಡಗುವ ರೀತಿಯನ್ನೂ ಅವ್ಯಯವಾದ ನಿನ್ನ ವಿಭೂತಿ ರೂಪವಾದ ಮಾಹಾತ್ಮ್ಯವನ್ನೂ, ವಿವರಿಸಿ ಹೇಳಿರುತ್ತೀಯೆ. ಇಡಿಯ ವಿಶ್ವವು ನಿನ್ನ ಒಂದಂಶವೆಂದೂ ಅದೆಲ್ಲವನ್ನೂ ಧರಿಸಿಕೊಂಡು ನೀನು ಇರುವೆಯೆಂದೂ ಹೇಳಿದೆ ಯಲ್ಲ, ಇದೇ ನಿನ್ನ ವಿಶ್ವರೂಪವನ್ನು ನೀನು ಈಗ ವರ್ಣಿಸಿರುವಂತೆ ನಾನು ನೋಡ ಬೇಕೆಂಬ ಆಶೆಯು ಹಿಡಿದುಕೊಂಡಿರುತ್ತದೆ. ಈ ಸ್ವರೂಪವನ್ನು ಕಣ್ಣಿಗೆ ಕಟ್ಟಿದಂತೆ ನಾನು ನೋಡಬೇಕೆನಿಸುತ್ತದೆ. ಇದು ಸಾಧ್ಯವೆ? ನಿನಗೆ ಹಾಗೆಂದು ತೋರಿದರೆ, ದಯವಿಟ್ಟು ಆ ಅವ್ಯಯವಾದ ನಿನ್ನ ಐಶ್ವರರೂಪವನ್ನು ನನಗೆ ತೋರಿಸು.

ಅರ್ಜುನನಿಗೆ ಈ ವಿಷಯದಲ್ಲಿ ಸಂಶಯವೇನೂ ಇಲ್ಲ. ಭಗವಂತನು ಈ ವಿಶ್ವಕ್ಕೆ ಆದಿಯೆಂದು ಶಾಸ್ತ್ರಬಲದಿಂದಲೂ ಶ್ರೀಕೃಷ್ಣನ ಉಪದೇಶದಿಂದಲೂ ನಿಶ್ಚಯ ವಾಗಿಯೇ ತಿಳಿದುಕೊಂಡಿರುತ್ತಾನೆ. ಆದರೆ ಈ ವಿಷಯವನ್ನು ತಾನು ಪ್ರತ್ಯಕ್ಷವಾಗಿ ಕಂಡು ನಲಿಯಬೇಕೆಂಬ ಕುತೂಹಲವುಂಟಾಗಿದೆ. ಯಾವದಾದರೊಂದು ಚಿಕಿತ್ಸೆಯ ಫಲವನ್ನು ವೈದ್ಯಶಾಸ್ತ್ರದಲ್ಲಿ ಬಣ್ಣಿಸಿರುವದನ್ನು ಓದಿ ತಿಳಿಯುವದಕ್ಕೂ ನಾವೇ ಅದನ್ನು ಮನಸಾರೆ ಅನುಭವಿಸಿ ಗೊತ್ತುಪಡಿಸಿಕೊಳ್ಳುವದಕ್ಕೂ ಹೆಚ್ಚು ಕಡಿಮೆಯಿದೆಯಲ್ಲವೆ? ಇದರಂತೆ ಪರಮಾತ್ಮನ ಜಗದೈಶ್ವರ್ಯದ ವರ್ಣನೆಯನ್ನು ಆಲೈಸಿಕೊಳ್ಳುವದಕ್ಕೂ ಅದನ್ನು ಕಣ್ಣಾರೆ ಕಾಣುವದಕ್ಕೂ ಹೆಚ್ಚಿನ ಅಂತರವಿದೆ. ಈ ಸಾಕ್ಷಾತ್ಕಾರವನ್ನು ಮಾಡಿಕೊಡು—ಎಂದು ಅವನು ಶ್ರೀಕೃಷ್ಣನನ್ನು ಬೇಡಿಕೊಳ್ಳುತ್ತಲಿದ್ದಾನೆ.

"ಭಗವಂತನೆ, ಅದನ್ನು ನೋಡುವದು ನನ್ನಿಂದಾದೀತೆ? ನಿನಗೆ ತೋರಿಸುವ ಶಕ್ತಿಯಿದೆ ಎಂಬುದಕ್ಕೆ ಸಂಶಯವಿಲ್ಲ; ಆದರೆ ಅದನ್ನು ನೋಡುವ ಯೋಗ್ಯತೆ ನನಗೆ ಇರಬೇಕಲ್ಲ! ಇದ್ದರೆ ದಯವಿಟ್ಟು ಅನುಗ್ರಹಿಸು" ಎಂದು ಅರ್ಜುನನು ಪ್ರಾರ್ಥಿಸಿ ಕೊಂಡಿದ್ದಾನೆ. ದೊಡ್ಡವರ ಬಳಿಯಲ್ಲಿ ಹೋದಾಗ ಏನೇನೋ ಕೇಳಬಾರದು. ನಮ್ಮ

ಯೋಗ್ಯತೆಗೆ ತಕ್ಕ ಪ್ರಶ್ನೆ ಹಾಕಬೇಕು; ಅವರು ನಮಗೆ ಬೇಕಾದದ್ದನ್ನು ಎಂದಿಗೂ ಮರೆಮಾಚುವದಿಲ್ಲ. ನಮಗೆ ಬೇಕಾದದ್ದನ್ನು ಅನುಗ್ರಹಿಸುವದನ್ನು ಅವರಿಗೇ ಬಿಟ್ಟುಬಿಡಬೇಕು.

ಇಷ್ಟು ಅರ್ಜುನನು ಕೇಳಿದ್ದೇ ತಡ, ಭಗವಂತನು "ಅರ್ಜುನ, ನನ್ನ ರೂಪಗಳನ್ನು ನೂರುಗಟ್ಟಲೆ, ಸಾವಿರಗಟ್ಟಲೆ ತೋರಿಸುತ್ತೇನೆ, ನೋಡು. ಆ ರೂಪಗಳು ದಿವ್ಯವಾಗಿವೆ, ಬಗೆಬಗೆಯಾಗಿವೆ, ಬೇರೆಬೇರೆಯ ಬಣ್ಣದವುಗಳಾಗಿವೆ, ಬೇರೆಬೇರೆಯ ಆಕಾರವುಳ್ಳವುಗಳಾಗಿವೆ" ಎಂದು ಸಂಕಲ್ಪಮಾತ್ರದಿಂದ ಐಂದ್ರಜಾಲಿಕನ ಹಾಗೆ ತನ್ನ ವಿಶ್ವರೂಪವನ್ನು ತೋರಿಸುವದಕ್ಕೆ ಮೊದಲುಮಾಡಿದನು. ನಾಮರೂಪಾತ್ಮಕವಾದ ಇಡಿಯ ಜಗತ್ತು ಪರಮಾತ್ಮನ ಉಸಿರು - ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಆ ಶ್ರುತಿಯ ಅಭಿಪ್ರಾಯವನ್ನು ಅರ್ಜುನನಿಗೆ ಮನಗಾಣಿಸುವದಕ್ಕೋ ಎಂಬಂತೆ ಉಸಿರುಬಿಟ್ಟಂತೆ ಲೀಲಾನ್ಯಾಯದಿಂದ ಸಂಕಲ್ಪಮಾತ್ರದಿಂದ ಪರಮಾತ್ಮನು ಅರ್ಜುನನಿಗೆ ಈ ಅದ್ಭುತದೃಶ್ಯವನ್ನು ತೋರಿಸಿರುತ್ತಾನೆ.

ಆ ರೂಪದಲ್ಲಿ ಆದಿತ್ಯರು, ವಸುಗಳು, ರುದ್ರರು, ಅಶ್ವಿನೀದೇವತೆಗಳು, ಮರುತ್ತುಗಳು - ಮುಂತಾದ ದೇವತೆಗಳೆಲ್ಲರೂ ಕಾಣಿಸುವಂತೆ ಭಗವಂತನು ಅನುಗ್ರಹಿಸಿರುತ್ತಾನೆ. ಸರ್ವದೇವಮಯನಲ್ಲವೆ, ಭಗವಂತನು? ಅರ್ಜುನನು ಎಂದಿಗೂ ಕಾಣದೆ ಇದ್ದ ದೃಶ್ಯಗಳನ್ನು 'ಇಗೋ ಇಲ್ಲಿ ನೋಡು' ಎಂದು ಭಗವಂತನು ತೋರಿಸುವದಕ್ಕೆ ಹೊರಟಿರುತ್ತಾನೆ. ವಿಶಾಲವಾದ ಒಂದು ವಿಚಿತ್ರವಸ್ತುಸಂಗ್ರಹ ಶಾಲೆಯೊಳಕ್ಕೆ ಯಾವದೋ ಒಂದು ಮೂಲೆಯಲ್ಲಿದ್ದ ಹಳ್ಳಿಯವನು ಯಾರೋ ಒಬ್ಬ ದೊಡ್ಡ ಮನುಷ್ಯರ ಸಹಾಯದಿಂದ ಪ್ರವೇಶಿಸಿದಾಗ 'ಈ ಕಡೆಗೆ ನೋಡಯ್ಯ!' ಎಂದರೆ ಅವನು ಹೇಗೆ ಬೆರಗಾಗಿ ನೋಡಬಹುದೋ ಆ ಸ್ಥಿತಿಯಲ್ಲಿದ್ದಾನೆ, ಅರ್ಜುನನು. ತನ್ನ ಸಾರಥಿಯಾಗಿದ್ದ ಶ್ರೀಕೃಷ್ಣನೇ ಇಡಿಯ ವಿಶ್ವವನ್ನು ತನ್ನ ಹೊಟ್ಟೆಯೊಳಗಿಟ್ಟುಕೊಂಡಿರುವ ಭಗವಂತನು ಎಂಬುದನ್ನು ಕಣ್ಣಾರೆ ನೋಡುವ ಅಲಭ್ಯಲಾಭಕ್ಕೂ ಆ ದೃಶ್ಯವನ್ನು ನೋಡಲಾಗದ ತನ್ನ ಯೋಗ್ಯತೆಗೂ ಅದು ದಕ್ಕುವಂತೆ ಮಾಡಿದ ಶ್ರೀಕೃಷ್ಣಭಗವಂತನ ಪರಮಾನುಗ್ರಹಕ್ಕೂ ಎಷ್ಟು ಧನ್ಯವಾದಗಳನ್ನು ಅರ್ಪಿಸಿದರೂ ತೀರದು!

ಭಗವಂತನು "ಅರ್ಜುನ, ನನ್ನ ದಿವ್ಯವಾದ ವಿಶ್ವರೂಪವನ್ನು ತೋರಿಸುತ್ತೇನೆ, ನೋಡು. ದಿವ್ಯರೂಪವನ್ನು ನೋಡುವದಕ್ಕೆ ದಿವ್ಯಚಕ್ಷುಸ್ಸು ಅವಶ್ಯವಾಗಿರುತ್ತದೆ. ಆದ್ದರಿಂದ ನಿನ್ನ ಮನಸ್ಸನ್ನು ಈ ರೂಪದ ಅಂತಸ್ತಿಗೆ ಏರಿಸಿಕೊಂಡು ನೋಡು" ಎಂದು ಅನುಗ್ರಹಿಸಿದನು. ಇನ್ನು ವ್ಯಾಸರು ಆ ರೂಪವನ್ನು ಹೇಗೆ ವರ್ಣಿಸಿದ್ದಾರೆಯೋ ನೋಡೋಣ.

# ೮೧. ವಿಶ್ವರೂಪದರ್ಶನ ೧೧-(೯-೧೮)
## (೯-೫-೪೮)

ಭಗವಂತನು ತನ್ನ ಆದ್ಯವಾದ ಐಶ್ವರರೂಪವನ್ನು ತೋರಿಸಲು ಮೊದಲು ಮಾಡಿದನು. ಅದನ್ನು ನೋಡುವದಕ್ಕೆ ನಿನಗೆ ದಿವ್ಯಚಕ್ಷುಸ್ಸನ್ನು ಕೊಡುತ್ತೇನೆ - ಎಂದು ಹೊಸದೃಷ್ಟಿಯನ್ನು ಅನುಗ್ರಹಿಸಿದನು. ಭಗವಂತನ ಅನುಗ್ರಹದಿಂದ ಮಾತ್ರ ಆತನ ದಿವ್ಯರೂಪವನ್ನು ಕಾಣಲು ಸಾಧ್ಯ. ಕೆಲವು ವರ್ಷಗಳ ಹಿಂದೆ ಬೆಂಗಳೂರು ಸಂಸ್ಕೃತ ಪಾಠಶಾಲೆಯಲ್ಲಿ ಒಬ್ಬ ಯಕ್ಷಿಣೀವಿದ್ಯೆಯನ್ನು ಮಾಡುವವನು ಒಂದು ಪ್ರದರ್ಶನವನ್ನು ಮಾಡಿದನು. ಕೆಲವು ಚಿಕ್ಕ ಹುಡುಗರನ್ನು ಕರೆಯಿಸಿ ಅವನ ಎಡಗೈ ಹೆಬ್ಬೆರಳ ಉಗುರಿನ ನಡುವೆ ಒಂದು ತೊಟ್ಟು ಮಷಿಯನ್ನು ಇಟ್ಟನು. "ಅದರಲ್ಲಿ ಏನು ಕಾಣುತ್ತದೆ? ನೋಡಿ ಹೇಳಿರಿ" ಎಂದನು. ಆದರೆ ಹುಡುಗರು ನೋಡಿದಾಗ ಏನೂ ಕಾಣಿಸಲಿಲ್ಲ. ಆತನು ಹುಡುಗರ ಕಣ್ಣ ಮೇಲೆ ಕೈಬೀಸಿ "ಚೆನ್ನಾಗಿ ನೋಡಿರಿ. ಏನು ಕಾಣಿಸುತ್ತಿದೆ?" ಎಂದನು. ಒಬ್ಬ ಹುಡುಗನು "ನಮ್ಮಪ್ಪ ಕಾಣಿಸುತ್ತಾನೆ" ಎಂದನು; ಇನ್ನೊಬ್ಬನು "ನಮ್ಮೂರ ದೇವಾಲಯವು ಕಾಣಿಸುತ್ತಿದೆ" ಎಂದನು ಇತ್ಯಾದಿ. ಇದಕ್ಕಿಂತಲೂ ಹೆಚ್ಚಿನ ಕಣ್ಣುಕಟ್ಟು ಶ್ರೀಕೃಷ್ಣನ ಅನುಗ್ರಹವು. ಅಥವಾ ಅದನ್ನು ಕಣ್ಣುಕಟ್ಟು ಎನ್ನುವದಕ್ಕಿಂತಲೂ 'ಕಣ್ಣುತೆರಪು' ಎಂದು ಕರೆಯಬೇಕು; ಏಕೆಂದರೆ ಇರುವ ತನ್ನ ಐಶ್ವರರೂಪವನ್ನು ಪ್ರಾಕೃತಜನರು ತಮ್ಮ ಚರ್ಮಚಕ್ಷುಸ್ಸಿನಿಂದ ನೋಡ ಲಾರದೆ ಇರುತ್ತಾರೆ. ಭಗವಂತನ ಅನುಗ್ರಹವಾಯಿತೋ ಇಲ್ಲವೋ ಅರ್ಜುನನಿಗೆ ಹೊಸದೊಂದು ಬಗೆಯ ಕಣ್ಣೇ ಬಂದಂತಾಯಿತು. ಆಗ ಅವನು ಆ ದಿವ್ಯರೂಪವನ್ನು ಕಂಡನು.

**ಸಂಜಯ ಉವಾಚ :-**
**ಏವಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥** (೧೧-೯)

ಇಲ್ಲಿ 'ಸಂಜಯ ಉವಾಚ' (ಸಂಜಯನಿಂತೆಂದನು) ಎಂಬ ವಾಕ್ಯವು ಸಾಭಿಪ್ರಾಯವಾಗಿರುತ್ತದೆ. ವ್ಯಾಸರು ಸಂಜಯನಿಗೆ ದಿವ್ಯಚಕ್ಷುಸ್ಸನ್ನು ಕೊಟ್ಟು ನೀನು ಕೂತಕಡೆಯಲ್ಲಿಯೇ "ನಿನಗೆ ಯುದ್ಧರಂಗದಲ್ಲಿ ನಡೆಯುವದೆಲ್ಲ ವಿವರವಾಗಿ ತಿಳಿಯಲಿ!" ಎಂದು ಅನುಗ್ರಹಿಸಿ "ನೀನು ಕಂಡದ್ದನ್ನು ಕಂಡಂತೆ ಧೃತರಾಷ್ಟ್ರನಿಗೆ ಹೇಳು" ಎಂದು ಅಪ್ಪಣೆಮಾಡಿ ಹೊರಟುಹೋಗಿರುತ್ತಾರೆ. ಸಂಜಯನು ಮಹಾ

ಭಗವದ್ಭಕ್ತನು. ಅವನು ಈ ಸಂದರ್ಭವನ್ನು ಧೃತರಾಷ್ಟ್ರನ ಲಕ್ಷ್ಯಕ್ಕೆ ತರುವದಕ್ಕಾಗಿ "ರಾಜನೆ, ಕೇಳು, ಹೀಗೆಂದು ಮಹಾಯೋಗೀಶ್ವರನಾದ ಹರಿಯು ಪಾರ್ಥನಿಗೆ ತನ್ನ ಐಶ್ವರರೂಪವನ್ನು ತೋರಿಸಿದನು" ಎಂದಿರುತ್ತಾನೆ. ಶ್ರೀಕೃಷ್ಣನು ಭಗವಂತನೇ ಎಂಬುದು ಧೃತರಾಷ್ಟ್ರನ ಮನಸ್ಸಿಗೆ ಹತ್ತಲಿ! -ಎಂಬುದೇ ಸಂಜಯನ ಉದ್ದೇಶ.

ಶ್ರೀಕೃಷ್ಣಭಗವಂತನು ಮಹಾಯೋಗೀಶ್ವರನು. ಈ ಲೋಕದಲ್ಲಿ 'ನಾವು ಯೋಗಿಗಳು' ಎಂದು ಕೊಚ್ಚಿಕೊಳ್ಳುವ ದಾಂಭಿಕರು ಹಲವು ಜನರು ಅಲ್ಲಲ್ಲಿ ತೋರುತ್ತಿರುವರು. ಆದರೆ ಅನೇಕಸಂದರ್ಭಗಳಲ್ಲಿ ಅವರೆಲ್ಲ ಕೃತಕಯೋಗಿಗಳು. ಆದರೆ ಅವರು ಕೃತಕರೆಂಬ ಕಾರಣದಿಂದಲೇ ಸ್ವಾಭಾವಿಕವಾಗಿರುವ ಯೋಗಿಗಳೂ ಇರುತ್ತಾರೆಂದು ತಿಳಿಯಬೇಕು. ಯೋಗಿಗಳು ಪರಮೇಶ್ವರನ ಅನುಗ್ರಹದಿಂದ ದಿವ್ಯ ವಸ್ತುಗಳನ್ನು ಇಚ್ಛಾಮಾತ್ರದಿಂದ ಹೊರತೋರಿಸುತ್ತಾರೆ. ಆದರೆ ಪರಮೇಶ್ವರನು ನಿತ್ಯಸಿದ್ಧನು; ಆತನು ತಪಸ್ಸು ಮುಂತಾದವುಗಳನ್ನು ಮಾಡಿ ಸಿದ್ಧಿಗಳನ್ನು ಪಡೆದು ಕೊಂಡಿರುವದಿಲ್ಲ. ಅವನಿಗೆ ಸಹಜವಾಗಿಯೇ ಸತ್ಯಸಂಕಲ್ಪವಿರುತ್ತದೆ. ಆ ಸಂಕಲ್ಪ ಸಿದ್ಧಿಯಿಂದ ಅವನು ಮಹಾಯೋಗೀಶ್ವರನೆನಿಸಿಕೊಂಡಿರುತ್ತಾನೆ. ಯೋಗಿಗಳು ಧ್ಯಾನ ಚಕ್ಷುಸ್ಸಿನಿಂದ ನೋಡಿ ಅತೀತವಾದದ್ದನ್ನೂ ಅನಾಗತವಾದದ್ದನ್ನೂ ತಿಳಿಯುತ್ತಾರೆಂದು ಪುರಾಣಾದಿಗಳಲ್ಲಿ ವರ್ಣಿತವಾಗಿರುವದನ್ನು ನೀವು ಕೇಳಿರಬಹುದು. ಆದರೆ ಭಗವಂತನಿಗೆ ತ್ರಿಕಾಲದಲ್ಲಿ ನಡೆಯುವದೂ ನಿತ್ಯವಾಗಿ ತಿಳಿದಿರುತ್ತದೆ. ಇದರಂತೆ ಯೋಗಿಗಳು ಮತ್ತೊಬ್ಬರ ಮೇಲಿನ ಕರುಣೆಯಿಂದ ಸಂಕಲ್ಪಮಾತ್ರದಿಂದ ಬೇಕಾದದ್ದನ್ನು ಸೃಷ್ಟಿಸಿಕೊಡುತ್ತಾರಂತೆ. ವಿಶ್ವಾಮಿತ್ರರು 'ಅನ್ಯಮಿಂದ್ರಂ ಕರಿಷ್ಯಾಮಿ' ಎಂದು ಬೇರೊಂದು ಸ್ವರ್ಗವನ್ನೇ ತ್ರಿಶಂಕುವಿಗೆ ಸೃಷ್ಟಿಸಿಕೊಡಲು ಪ್ರವೃತ್ತರಾದ ಕಥೆಯನ್ನು ನೀವು ರಾಮಾಯಣಾದಿಗಳಲ್ಲಿ ಕೇಳಿರಬಹುದು. ಅದುಕೂಡ ಭಗವಂತನ ಅನುಗ್ರಹವೇ. ಆದರೆ ಭಗವಂತನು ಈಗ ತನ್ನ ವಿಶ್ವರೂಪವನ್ನು ಹೊರಗೆಡವಿರುವದು ಮತ್ತೊಬ್ಬರ ಸಹಾಯದಿಂದಲ್ಲ; ತನಗೆ ಸ್ವಾಭಾವಿಕವಾಗಿರುವ ಯೋಗಮಹಿಮೆಯಿಂದ, ಬೆಂಕಿಗೆ ಸುಡುವದು ಸ್ವಭಾವದಿಂದಲೇ ಇರುವಂತೆ ಸಂಕಲ್ಪಮಾತ್ರದಿಂದ ತನ್ನ ಆದ್ಯ ವಿಶ್ವರೂಪವನ್ನು ತೋರಿಸುವದೂ ಉಪಸಂಹರಿಸುವದೂ ಭಗವಂತನಿಗೆ ಸ್ವಭಾವಕ್ಕೇ ಸೇರಿಕೊಂಡಿರುತ್ತದೆ. ಭಗವಂತನ ವಿಶ್ವರೂಪವೆಂಬುದು ಯಾವದು? ಈ ಬಗ್ಗೆ ಜನರಲ್ಲಿ ಮತಭೇದವಿರುತ್ತದೆ. ವಿಶ್ವರೂಪವೆಂಬುದು ಎಲ್ಲವೂ ತನ್ನ ರೂಪವೇ ಎಂಬುದನ್ನು ಅರ್ಜುನನಿಗೆ ತೋರಿಸಿದ್ದು; ಒಂದು ಇರುವೆ ಒಬ್ಬ ಮನುಷ್ಯನನ್ನು ಕಂಡರೆ ಎಷ್ಟುಮಟ್ಟಿಗೆ ಅವನ ಸಂಪೂರ್ಣರೂಪವನ್ನು ತಿಳಿದುಕೊಳ್ಳಲಾರದೋ ಭಗವಂತನ ವಿಶ್ವರೂಪವನ್ನು ಪಾಮರರಾದ ಮನುಷ್ಯರು ಅರಿತುಕೊಳ್ಳಬಲ್ಲರೆಂಬುದೂ

ಅಷ್ಟುಮಟ್ಟಿಗೆ ಸಾಧ್ಯವು. ಭಕ್ತನಾದ ಅರ್ಜುನನಿಗೆ ಇಡಿಯ ವಿಶ್ವವೇ ತನ್ನ ರೂಪವು ಎಂದು ಮನಸ್ಸಿಗೆ ಹತ್ತುವಂತೆ ಮಾಡಿದ್ದೇ ಭಗವಂತನ ಅನುಗ್ರಹವು. ಆ ರೂಪವು ಹೇಗಿತ್ತು?-

**ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥** (೧೧-೧೦)
**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನನ್ತಂ ವಿಶ್ವತೋಮುಖಮ್ ॥**(೧೧-೧೧)

ಭಗವಂತನ ರೂಪವು ಅತಿಸ್ವಾಭಾವಿಕವಾಗಿತ್ತು. ಮನುಷ್ಯಲೋಕದಲ್ಲಿ ಯಾರೂ ಎಂದೂ ಅಂಥ ರೂಪವನ್ನು ಕಾಣುವ ಸಂಭವವಿಲ್ಲ. ಬಾಯಿಗಳು ಅನೇಕವಾಗಿದ್ದವು, ಕಣ್ಣುಗಳು ಅನೇಕವಾಗಿದ್ದವು. ಎಂಥವರನ್ನೂ ಬೆರಗುಗೊಳಿಸುವ ಅನೇಕ ಅದ್ಭುತವಾದ ನೋಟಗಳು ಅಲ್ಲಿದ್ದವು. ಅನೇಕವಕ್ತ್ರಗಳನ್ನೂ ಅನೇಕನಯನಗಳನ್ನೂ ನಾವು ಎಲ್ಲಿಯೂ ಒಂದು ರೂಪದಲ್ಲಿ ಒಟ್ಟಿಗೆ ನೋಡುವ ಸಂಭವವಿಲ್ಲ. ಆ ವಕ್ತ್ರಾದಿಗಳು ಒಂದೊಂದು ಘಳಿಗೆಘಳಿಗೆಗೂ ಮಾರ್ಪಡುತ್ತಿದ್ದವು. ಎಷ್ಟು ಬಗೆಯ ನೋಟಗಳನ್ನು ಕಾಣಬಹುದೋ ಅಷ್ಟೂ ಕಾಣುತ್ತಿದ್ದವು. ಈ ಜಗತ್ತಿನಲ್ಲಿ ಯಾವದೊಂದು ವಸ್ತುವೂ ಇದ್ದಂತೆ ಇರುವದಿಲ್ಲ. ಈಗ ಹೀಚಾಗಿದ್ದದ್ದು ಆಮೇಲೆ ದೋರೆಕಾಯಾಗಿ ಬಳಿಕ ಹಣ್ಣಾಗುವದಲ್ಲ, ಅಂಥ ಮಾವಿನಹಣ್ಣಿನ ಸ್ಪರ್ಶ, ರೂಪ, ರಸ, ಗಂಧ - ಎಲ್ಲವೂ ಬದಲಾಯಿಸುತ್ತಲೇ ಇರುವವು. ಇಂಥ ವಿವಿಧವಸ್ತುಗಳ ಒಟ್ಟು ಈ ಜಗತ್ತು. ಈ ಜಗತ್ತೇ ಪರಮಾತ್ಮನ ಶರೀರವೆಂದರೆ ಎಂಥ ಮಾಯಿಕಶರೀರವದು! ಎಂಥ ವಿಚಿತ್ರ ದರ್ಶನಗಳಿಂದ ಕೂಡಿದ್ದು! ಆ ಶರೀರದಲ್ಲಿ ದಿವ್ಯವಾದ ಆಭರಣಗಳು ಎಣಿಕೆಯಿಲ್ಲದಷ್ಟು ಕಾಣಿಸಿಕೊಳ್ಳುತ್ತಿದ್ದವು. ಲೆಕ್ಕವಿಲ್ಲದಷ್ಟು ಕೈಗಳಲ್ಲಿ ಲೆಕ್ಕವಿಲ್ಲದಷ್ಟು ಆಯುಧಗಳನ್ನು ಎತ್ತಿಕೊಂಡಿದ್ದಂತೆ ತೋರುತ್ತಿತ್ತು. ದಿವ್ಯವಾದ ವೈಜಯನ್ತೀಮಾಲೆಯನ್ನು ಧರಿಸಿ ಕೊಂಡಿದಾನೆ, ಪರಮಾತ್ಮನು. ಘಮಘಮಿಸುವ ಪರಿಮಳಗಂಧವು ಆತನ ದೇಹದಿಂದ ಎಲ್ಲಾ ಕಡೆಯಲ್ಲಿಯೂ ಬೀರುತ್ತಿದೆ. ಆ ದೇಹವು ಸರ್ವಾಶ್ಚರ್ಯಮಯವಾಗಿತ್ತು. ಇದು ಇಂಥದ್ದು ಎಂದು ನಿರ್ಣಯಿಸುವದರೊಳಗೆ ನೂರಾರು ಹೊಸ ರೂಪವನ್ನು ತಾಳುತ್ತಿತ್ತು! ನಾವು ನೋಡುತ್ತಿರುವ ಹೊರಗಿನ ಈ ಜಗತ್ತು ಹೀಗೆಯೇ ಘಳಿಗೆಗೊಂದು ರೂಪವನ್ನು ತಾಳುತ್ತಿದೆ. ಆದರೂ ನಾವು ಅದನ್ನು ನಿತ್ಯವೆಂದು ಭಾವಿಸುತ್ತಿದ್ದೇವೆ. ಇದೇಕೆಂದರೆ ಅಂತರ್ಯಾಮಿಯಾದ ಭಗವಂತನು ನಿತ್ಯನಾಗಿರುತ್ತಾನೆ. ಇದಂತಿರಲಿ. ಭಗವಂತನು ತೋರಿಸಿದ ದಿವ್ಯರೂಪವು ಹೀಗೆ ಅದ್ಭುತವಾಗಿ, ಆಶ್ಚರ್ಯಮಯವಾಗಿ,

ನವನವೋನ್ಮೇಷಣವಾದ ದರ್ಶನಗಳಿಂದ ಮನಸ್ಸನ್ನು ಸೆಳೆಯುತ್ತಾ ಇದೆ. ಅದು ಅನಂತವಾಗಿ ಕಾಣುತ್ತಿತ್ತು. ಎತ್ತ ನೋಡಿದರೂ ಭಗವಂತನ ಆ ದಿವ್ಯಸ್ವರೂಪವೇ. ಯಾವ ಕಾಲದಲ್ಲಿಯೂ ಅದು ನಾಶವಾಗುವ ಸ್ವರೂಪವಾಗಿ ಕಾಣಲಿಲ್ಲ. ಇದೆಲ್ಲ ವೈಚಿತ್ರ್ಯದೃಷ್ಟಿಯಿಂದ ವರ್ಣಿಸಿದ್ದು. ಇನ್ನು ಹೊಳಪಿನ ದೃಷ್ಟಿಯಿಂದ ನೋಡಿದರೆ:

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥** (೧೧-೧೨)

ಒಬ್ಬ ಸೂರ್ಯನನ್ನೇ ನಾವು ಸರಿಯಾಗಿ ನೋಡಲಾರೆವು. ಇನ್ನು ಸಾವಿರ ಸೂರ್ಯರೆಂದರೇನರ್ಥ? ವಿದ್ಯುದ್ದೀಪಗಳು ಐದುನೂರು ಕ್ಯಾಂಡಲ್ ಪವರ್ ಎಂದರೆ ಹೇಗೆ ಮನಸ್ಸಿಗೆ ಹೊಳೆಯುವದಿಲ್ಲವೋ, ಬೆಳಕು ಬಹಳ ಹೆಚ್ಚು ಎಂದುಮಾತ್ರ ಹೇಗೆ ಕಲ್ಪಿಸುವೆವೋ, ಹಾಗೆಯೇ ಇಲ್ಲಿಯೂ ನಾವು ಕಲ್ಪಿಸಿ ಕೊಳ್ಳಬೇಕಾಗಿದೆ. ಅಥವಾ ಅದು ನಮಗೆ ಕಲ್ಪನಾತೀತವಾಗಿದೆ ಎಂದೂ ಹೇಳಬಹುದು; ಏಕೆಂದರೆ ನಮ್ಮ ಕಣ್ಣಿನ ಪಾಟವಕ್ಕೆ ಮೀರಿದ ಪ್ರಮಾಣದಲ್ಲಿ ಬೆಳಕು ಬಂದರೆ ಕಣ್ಣು ಮಂಜಾಗಿಬಿಡುತ್ತದೆ. ಇನ್ನು ಬೆಳಕನ್ನು ನೋಡುವದಾಗಲಿ ಕಲ್ಪಿಸುವದಾಗಲಿ ಎಲ್ಲಿ ಬಂತು? ಆದರೆ ಅರ್ಜುನನಿಗೆ ದಿವ್ಯಚಕ್ಷಸ್ಸು ಬಂದಿತ್ತು; ಭಗವಂತನು ಅನುಗ್ರಹ ಬುದ್ಧಿಯಿಂದ ಅದರಿಂದ ನೋಡುವ ಶಕ್ತಿಯನ್ನು ಅವನಿಗೆ ಕೊಟ್ಟಿದ್ದನು. ಸಂಜಯನಿಗೂ ದಿವ್ಯದೃಷ್ಟಿಯನ್ನು ಅನುಗ್ರಹಿಸಿದ ವ್ಯಾಸರು ಈ ವರ್ಣನೆಯನ್ನು ಬರೆದವರು. ಮಿಣುಕುಹುಳುವಿನ ಕಲ್ಪನೆಗೂ ಅತೀತವಾದ ಬೆಳಕು ಸೂರ್ಯನಲ್ಲಿ ಸಹಜ ವಾಗಿರುವಂತೆ, ಮನುಷ್ಯನ ಕಲ್ಪನೆಗೆ ಅತೀತವಾದ ತೇಜಸ್ಸು ಭಗವಂತನ ದೇಹ ದಲ್ಲಿರುವದಾಗಲಿ ಅರ್ಜುನನಂಥ ಭಗವದ್ಭಕ್ತರ ದೃಷ್ಟಿಪಥಕ್ಕೆ ಅದು ಗೋಚರ ವಾಗುವದಾಗಲಿ ಅಸಂಭಾವಿತವಲ್ಲ. ನಾವು ಮಾತ್ರ ಅತ್ಯಂತವಾಗಿ ದಿವ್ಯವಾದ ತೇಜಃಪುಂಜವಾಗಿ ಭಗವಂತನ ಶರೀರವು ಅರ್ಜುನನಿಗೆ ಕಂಗೊಳಿಸಿತು ಎಂದಿಷ್ಟು ಕಲ್ಪನೆಯಿಂದಲೇ ತೃಪ್ತರಾಗಬೇಕಾಗಿದೆ.

ಇದೆಲ್ಲದರ ಜೊತೆಗೆ ಭಗವಂತನ ಉಪದೇಶಕ್ಕೆ ಅನುಗುಣವಾಗಿ ಮತ್ತೊಂದು ದೃಶ್ಯವೂ ಅರ್ಜುನನಿಗೆ ಗೋಚರವಾಯಿತು.

**ತತ್ರೈಕಸ್ಥಂ ಜಗತ್ ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಣ್ಡವಸ್ತದಾ ॥** (೧೧-೧೩)

ಇಂಥ ಅದ್ಭುತವಾದ ದಿವ್ಯರೂಪದ ದೇಹದಲ್ಲಿ ಇಡಿಯ ಜಗತ್ತೇ - ಬಗೆ ಬಗೆಯಾಗಿ ವಿಂಗಡಿಸಿರುವ ಈ ಜಗತ್ತೇ ಆ ದೇವದೇವನ ಶರೀರದಲ್ಲಿ ಒಂದು

ಕಡೆಯಲ್ಲಿ ವರಾಹನ ಕೋರದಾಡೆಯ ಮೇಲೆ ಭೂಮಿಯಿದ್ದಂತೆ ಕಾಣಿಸಿತು. ಭೂಮಕ್ಕೆ ಬಡಿಸಿದ ಅಡುಗೆಗಳನ್ನೆಲ್ಲ ಅಳಿಯನು ತಿನ್ನುವದಕ್ಕಾದೀತೆ? ಹಾಗೆ ಭಗವಂತನು ತೋರಿಸಿದ ದಿವ್ಯವಾದ ಅನಂತವಾದ ಆ ಜಗದ್ದೇಹವನ್ನು ಸಂಪೂರ್ಣವಾಗಿ ನೋಡುವದು ಅರ್ಜುನನಿಂದ ಆಗಲಾರದು - ಎಂದು ಭಗವಂತನು "ಇಡಿಯ ಜಗತ್ತನ್ನೇ ನನ್ನ ಏಕಾಂಶದಿಂದ ಎತ್ತಿಹಿಡಿದುಕೊಂಡಿರುವೆನು" ಎಂದು ಹಿಂದೆ ಉಪ ದೇಶಿಸಿದ್ದು ಪ್ರತ್ಯಕ್ಷಾನುಭವಕ್ಕೆ ಬರುವಂತೆ ಈ ದೃಶ್ಯವನ್ನು ಅರ್ಜುನನಿಗೆ ಕಾಣಿಸಿದನು.

ಆಗ ಅರ್ಜುನನು ಆ ದಿವ್ಯರೂಪವನ್ನು ನೋಡಿ ಬೆಪ್ಪಾದನು. ಅವನಿಗೆ ಮೈಯೆಲ್ಲ ರೋಮಾಂಚವಾಯಿತು. ತನ್ನ ಗೆಳೆಯನೆಂದುಕೊಂಡಿದ್ದ, ಸಾರಥಿಯಾಗಿ ತಾನು ವರಿಸಿದ್ದ, ಆ ಕೃಷ್ಣನೇ ಈ ದೇವದೇವನೆಂಬ ಅರಿವು ಹೃದಯದೊಳಗೆ ಆವರಿಸಿಕೊಂಡಂತೆಲ್ಲ ಅವನಲ್ಲಿ ಆಶ್ಚರ್ಯವೂ ಅಂಜಿಕೆಯೂ ಗೌರವಬುದ್ಧಿಯೂ ಒಂದರ ಹಿಂದೊಂದು ಎದ್ದುಕೊಂಡವು. ಆದ್ದರಿಂದ ತಲೆಬಾಗಿ ಆ ದೇವನಿಗೆ ನಮಸ್ಕರಿಸಿದನು. ಅವನ ಅಹಂಕಾರವೆಲ್ಲವೂ ಅಳಿಸಿಹೋಯಿತು. ಹೀಗೆಯೇ ನಮಗೆ ನಮ್ಮ ಅಲ್ಪತ್ವವೂ ಭಗವಂತನ ಪೂರ್ಣತ್ವವೂ ಮನವರಿಕೆಯಾಗಬೇಕು. ಆಗ ನಮ್ಮ ಭಕ್ತಿಯು ಕಾರ್ಯಕಾರಿಯಾಗುವದು, ಭಗವಂತನ ಅನುಗ್ರಹವು ನಮ್ಮ ಮೇಲೆ ಸರಿಯಾಗಿ ಆಗುವದು. 'ಅವಿನಯಮಪನಯ ವಿಷ್ಣೋ' ಎಂದು ಸ್ತೋತ್ರವನ್ನು ಒಪ್ಪಿಸುವದಕ್ಕೂ ಭಕ್ತಿನಮ್ರರಾಗಿ ಕೈ ಮುಗಿದುಕೊಂಡು ಭಗವಂತನ ಮುಂದೆ ನಾವು ತೃಣಕ್ಕೂ ಕಡೆ ಎಂಬುದನ್ನು ಮನವರಿಕೆಮಾಡಿಕೊಂಡು ನಿಲ್ಲುವದಕ್ಕೂ ಇರುವ ಅಂತರವನ್ನು ನಾವು ಅರ್ಜುನನಿಗೆ ಈಗ ಒದಗಿರುವ ಭಕ್ತಿಭಾವದಿಂದ ಕಂಡು ಕೊಳ್ಳಬೇಕು. "ಅಚ್ಯುತನೆ, ಎರಡೂ ಸೇನೆಗಳ ನಡುವೆ ನನ್ನ ರಥವನ್ನು ನಿಲ್ಲಿಸು" ಎಂದು ಮೊದಲು ಹೇಳುತ್ತಿದ್ದ ಆ ಕ್ಷತ್ರಿಯ ತೇಜಸ್ಸಿನ ಅಹಂಭಾವವೆಲ್ಲಿ? ತಲೆಬಾಗಿ ಕೈಮುಗಿದು ಭಗವಂತನನ್ನು ಸ್ತುತಿಗೈಯುತ್ತಿರುವ ಈಗಿನ ಭಕ್ತಿಭಾವವೆಲ್ಲಿ!

ಅರ್ಜುನನು ಭಗವಂತನ ಅನುಗ್ರಹದಿಂದ ತಾನು ಕಂಡ ದಿವ್ಯದೃಶ್ಯವನ್ನು ವರ್ಣಿಸುತ್ತಿದ್ದಾನೆ. "ಹೇ ದೇವ, ನಿನ್ನ ದೇಹದಲ್ಲಿ ದೇವತೆಗಳೆಲ್ಲರೂ ಕಾಣಿಸುತ್ತಿದ್ದಾರೆ, ಬ್ರಹ್ಮಾದಿಭೂತಸಂಘಗಳೆಲ್ಲವೂ ಕಾಣುತ್ತಿವೆ. ಕಮಲಾಸನನಾದ ಬ್ರಹ್ಮದೇವನು, ಋಷಿಗಳು, ದಿವ್ಯರಾದ ಉರಗರು - ಎಲ್ಲರೂ ಕಾಣಿಸುತ್ತಿದ್ದಾರೆ." ಇದೇನೂ ಮೃಷಾಸ್ತುತಿಯಲ್ಲ. ಏಕೆಂದರೆ ಭಗವಂತನು ಸರ್ವದೇವಮಯನಾಗಿರುತ್ತಾನೆ. ಭೂಮಿಯೆಂಬ ಕಮಲಾಸನದಲ್ಲಿ ಕುಳಿತಿರುವ ಬ್ರಹ್ಮನು, ತತ್ತ್ವವನ್ನು ಕಂಡುಕೊಂಡಿರುವ ತಪೋಧನರಾದ ಋಷಿಗಳು - ಇವರೆಲ್ಲರನ್ನೂ ಭಗವಂತನ ದೇಹದಲ್ಲಿ ಅರ್ಜುನನು

ಕಂಡನು. ಈಗಲೂ ಈ ಜಗತ್ತೇ ಭಗವಂತನ ಶರೀರವಾದ್ದರಿಂದ ಇವರೆಲ್ಲರೂ ಭಗವಂತನ ಶರೀರದಲ್ಲಿಯೇ ಇರುತ್ತಾರೆ. ನಮಗೆ ಮಾತ್ರ ಆ ಭಾವನೆ ಬರಬೇಕು.

**ಅನೇಕಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾಂ ಸರ್ವತೋಽನನ್ತರೂಪಮ್ ।**
**ನಾನ್ತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥** (೧೧-೧೬)

"ನಿನ್ನ ಬಾಹುಗಳು ಅನೇಕವಾಗಿವೆ, ವಕ್ತ್ರಗಳು ಅನೇಕವಾಗಿವೆ, ನೇತ್ರಗಳು ಅನೇಕವಾಗಿವೆ. ಈ ನಿನ್ನ ರೂಪವು ಅನಂತವಾಗಿ ಎಲ್ಲೆಲ್ಲಿಯೂ ಕಾಣಿಸುತ್ತಿದೆ. ಇದಕ್ಕೆ ಆದಿಯಾಗಲಿ ಮಧ್ಯವಾಗಲಿ ಅಂತವಾಗಲಿ ನನಗೆ ಕಾಣಿಸುತ್ತಿಲ್ಲ. ಎಲೈ ವಿಶ್ವೇಶ್ವರನೆ, ವಿಶ್ವರೂಪನೆ, ಇದೆಲ್ಲ ನಿನ್ನ ಅನುಗ್ರಹವು" ಎಂದು ಅರ್ಜುನನು ತಾನು ಕಂಡದ್ದನ್ನು ಮೆಚ್ಚಿಕೆಯಿಂದಲೂ ಸಂತೋಷದಿಂದಲೂ ತಿಳಿಸಿ ತನ್ನ ಧನ್ಯತೆಯನ್ನು ತಿಳಿಸುತ್ತಿದ್ದಾನೆ.

**ಕಿರೀಟಿನಂ ಗದಿನಂ ಚಕ್ರಿಣಂ ಚ**
**ತೇಜೋರಾಶಿಂ ಸರ್ವತೋ ದೀಪ್ತಿಮಂತಮ್ ।**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾ-**
**ದ್ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥** (೧೧-೧೭)

ಭಗವಂತನ ಕಿರೀಟ, ಗದೆ, ಚಕ್ರ - ಮುಂತಾದವುಗಳು ಒಂದೊಂದು ಸಲಕ್ಕೆ ಒಂದೊಂದು ಅರ್ಜುನನ ಚಿತ್ತವನ್ನು ಸೆಳೆಯುತ್ತಿವೆ. ಒಂದು ಸಲ ಎಲ್ಲೆಲ್ಲಿಯೂ ಥಳಥಳಿಸುವ ಕಾಂತಿಯಿಂದ ಕೂಡಿದ ತೇಜಃಪುಂಜವಾಗಿ ಕಾಣಿಸುತ್ತಿದ್ದಾನೆ. ಹೊತ್ತಿಕೊಂಡು ಉರಿಯುವ ಬೆಂಕಿಯಂತೆ, ನಿಗಿನಿಗಿಸುವ ಸೂರ್ಯನಂತೆ, ಅಳತೆಗೆ ಸಿಕ್ಕದ ಮಹಾಕಾಂತಿಯ ರಾಶಿಯಾಗಿ ಕಾಣಿಸುತ್ತಿದ್ದಾನೆ. ಅರ್ಜುನನಿಗೆ ಒಂದು ಸಲ ಗೌರವದಿಂದ ಕೂಡಿದ ಭಕ್ತಿಯುಕ್ತವಾದ ಭಯವುಂಟಾಗಿದೆ, ಭಗವಂತನ ತೇಜಸ್ಸನ್ನು ನೋಡಿ ಅವನು ಬೆರಗಾಗಿರುತ್ತಾನೆ.

**ತ್ವಮಕ್ಷರಂ ಪರಮಂ ವೇದಿತವ್ಯಂ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ**
**ಸನಾತನಸ್ತ್ವಂ ಪುರುಷೋ ಮತೋ ಮೇ ॥** (೧೧-೧೮)

"ನೀನೇ ಶ್ರೇಷ್ಠವಾದ ಅಕ್ಷರವೆಂದು ತಿಳಿಯಬೇಕು. ಅಸ್ಥೂಲವು, ಅನಣು, ನೇತಿನೇತಿ - ಎಂದೂ ವಾಙ್ಮನಸುಗಳಿಗೆ ಅಗೋಚರನೆಂದೂ ಶ್ರುತಿಯು ಕೊಂಡಾಡುವ ಪರತತ್ತ್ವವೇ ನೀನು. ಇಡಿಯ ಜಗತ್ತಿಗೆ ನಿಧಾನವು ಎಂದರೆ ಆಶ್ರಯವು ನೀನೇ; ನಿನ್ನಲ್ಲಿಯೇ ಈ ಜಗತ್ತು ಇರುತ್ತದೆ. ನೀನು ಸ್ವರೂಪದಿಂದಲಾಗಲಿ ಗುಣಗಳ ಮೂಲಕವಾಗಲಿ ಮತ್ತೊಂದು ಪದಾರ್ಥದಿಂದಲಾಗಲಿ ನಾಶವಾಗದ ಸ್ವರೂಪವುಳ್ಳವನು. ಶಾಶ್ವತವಾಗಿರುವ ಧರ್ಮರಕ್ಷಕನು ನೀನೇ. ಎಂದೆಂದಿಗೂ ಇರುವ ಪುರಾಣಪುರುಷನು ನೀನು."

ಭಗವಂತನು ತೋರಿಸಿದ ಈ ರೂಪವು ಐಶ್ವರವು, ಅರ್ಜುನನ ಮೇಲೆ ಕರುಣೆಯಿಂದ ತನ್ನ ಇಚ್ಛಾಮಾತ್ರದಿಂದ ಆತನು ಧರಿಸಿದ್ದು. ಆದರೆ ನಾವು ಧರಿಸಿರುವ ದೇಹಗಳು ಪರತಂತ್ರವಾಗಿ ಕರ್ಮಕ್ಕೆ ತಕ್ಕಂತೆ ಬಂದವು. ಪರಮಾತ್ಮನ ರೂಪವು ಅನಂತವಾದದ್ದು; ನಮ್ಮ ದೇಹಗಳು ಪರಿಮಿತವಾದವುಗಳು. ಪರಮಾತ್ಮನ ರೂಪವು ನೋಡುವವರಿಗೆ ಆನಂದಕಾರಕವಾಗಿರುತ್ತದೆ, ನಮ್ಮ ಶರೀರಗಳು ದುಃಖದ ಆಗರವಾಗಿರುತ್ತವೆ. ಭಗವಂತನಿಗೂ ನಮ್ಮಗಳಿಗೂ ಈ ವಿಷಯದಲ್ಲಿ ಎಂಥ ತಾರತಮ್ಯವಿದೆ! ಅರ್ಜುನನ ಪುಣ್ಯದಿಂದ ಭಗವಂತನು ತನ್ನ ಈ ದಿವ್ಯರೂಪವನ್ನು ತೋರಿಸಿದನು. ಸಣ್ಣದು, ದೊಡ್ಡದು - ಎಲ್ಲವೂ ತನ್ನ ಶರೀರದಲ್ಲಿ ಅಡಕವಾಗಿದೆ ಎಂಬುದನ್ನು ಮನಗಾಣಿಸಿದನು. ಇಡಿಯ ಜಗತ್ತೇ ನಿಜವಾಗಿ ಭಗವಂತನ ರೂಪವಾದರೂ ನಮಗೆ ಹಾಗೆಂದು ತೋರಲೊಲ್ಲದು. ನಮಗೆ ಅರ್ಜುನನಂತೆ ಪುಣ್ಯಪರಿಪಾಕವಿಲ್ಲದ್ದರಿಂದ ಜಗತ್ತಿನಲ್ಲಿ ಭಗವದ್ಭಾವನೆ ಬರುವಹಾಗಿಲ್ಲ. "ಬೆಳಕೆಂದರೆ ಯಾವ ಪದಾರ್ಥ?" ಎಂದು ಕೇಳಿದ ಕುರುಡುಹುಡುಗನಂತೆ ಭಗವಂತನೆಲ್ಲಿರುವನು?- ಎಂದು ಕೇಳುತ್ತಿರುವವರು ನಾವು. ಪರಮಾತ್ಮನ ಶರೀರವೀಜಗತ್ತು ಎಂಬುದನ್ನು ನಾವು ಈಗಲೆ ಭಾವನೆಗೆ ತಂದುಕೊಳ್ಳಲಾರೆವಾದರೂ ಈ ಶ್ಲೋಕವನ್ನು ಹೇಳಿಕೊಳ್ಳುತ್ತಾ ಒಳ್ಳೆಯ ಭಾವನೆಯನ್ನು ಮಾಡುತ್ತಾ ಬಂದರೆ ಧನ್ಯರಾದೇವು. ಮುಖ್ಯವಾಗಿ ನಮ್ಮ ಹೃದಯವು ತೆರಪಾಗಿರಬೇಕು. 'ಮನೆಯು ಬಾಡಿಗೆಗೆ ದೊರೆಯುತ್ತೆ' ಎಂದು ಬೋರ್ಡು ಹಾಕಿಸಿಕೊಂಡವರ ಮನೆಯನ್ನು ಮಾತ್ರ ಹೊರಗಿನವರು ವಾಸಕ್ಕೆಂದು ವಿಚಾರಿಸುವದಕ್ಕೆ ಬರುತ್ತಾರೆ. ಅಲ್ಲವೆ? ಅದರಂತೆ ನಮ್ಮ ಹೃದಯವು ಮೊದಲು ಖಾಲಿಯಾಗಲಿ; ಇದರಲ್ಲಿ ತುಂಬಿರುವ ಅಹಂಕಾರವು ಹೋಗಲಿ: ಭಗವಂತನ ಭಾವನೆಯ ಬೋರ್ಡುಹಾಕಿಕೊಳ್ಳೋಣ. ಆಮೇಲೆ ಕಾಲಾನುಕಾಲಕ್ಕೆ ಇಲ್ಲಿಗೆ ಭಗವಂತನು ವಾಸಕ್ಕೆ ಬರುವನು.

## ೮೨. ವಿಶ್ವರೂಪದರ್ಶನದ ಪರಿಣಾಮ ೧೧-(೧೯-೩೫)

(೨೩-೫-೪೮)

ಅರ್ಜುನನು ಭಗವಂತನ ವಿಶ್ವರೂಪವನ್ನು ಕಂಡು ಬೆರಗಾಗಿ ರೋಮಾಂಚದಿಂದ ಆತನನ್ನು ಸ್ತೋತ್ರಗೈಯುತ್ತಿದ್ದಾನೆ:

**ಅನಾದಿಮಧ್ಯಾನ್ತಮನನ್ತವೀರ್ಯ-**
**ಮನನ್ತಬಾಹುಂ ಶಶಿಸೂರ್ಯನೇತ್ರಮ್ ।**
**ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ**
**ಸ್ವತೇಜಸಾ ವಿಶ್ವಮಿದಂ ತಪನ್ತಮ್ ॥** (೧೧-೧೯)

"ನಿನ್ನ ಆದಿಯಾಗಲಿ ಮಧ್ಯವಾಗಲಿ ಅಂತವಾಗಲಿ ಕಾಣಿಸುತ್ತಿಲ್ಲ, ನಿನ್ನ ವೀರ್ಯಕ್ಕೆ ಕೊನೆಯೇ ಇಲ್ಲವಾಗಿದೆ. ಎಲ್ಲೆಲ್ಲಿಯೂ ನಿನ್ನ ಬಾಹುಗಳು ಲೆಕ್ಕವಿಲ್ಲದಷ್ಟು ಕಾಣಿಸುತ್ತಿವೆ. ಎದ್ದುರಿಯುವ ಬೆಂಕಿಯಂತೆ ಬಾಯಿಮಾಡಿಕೊಂಡಿರುತ್ತೀಯೆ, ನಿನ್ನ ತೇಜಸ್ಸಿನಿಂದ ಇಡಿಯ ವಿಶ್ವವೇ ಸುಟ್ಟುಹೋಗುತ್ತಿದೆ." ಭಗವಂತನನ್ನು ಶ್ರೀಕೃಷ್ಣನ ರೂಪದಲ್ಲಿ, ತನ್ನ ಸಾರಥಿಯ ರೂಪದಲ್ಲಿ ಕಾಣುತ್ತಿದ್ದ ಅರ್ಜುನನಿಗೆ ಈ ದೃಶ್ಯದಿಂದ ಆಗಿರುವ ಭಾವನೆಯ ಮಾರ್ಪಾಡನ್ನೂ ಮನದಂದರೆ ಸಾಮಾನ್ಯವಾಗಿ ವ್ಯವಹಾರದಲ್ಲಿ ಮುಳುಗಿರುವವರಿಗೂ ಸರ್ವತ್ರ ದೈವಭಾವನೆಯಿಂದ ಕೂಡಿರುವವರಿಗೂ ಇರುವ ಮನಸ್ಸಿನ ತಾರತಮ್ಯವು ತಿಳಿಯುವದು. ಆದರೆ ಇಲ್ಲಿ ಅರ್ಜುನನು ಭಗವಂತನ ವಿಶ್ವವ್ಯಾಪಕವಾದ ಉಗ್ರರೂಪವನ್ನು ಕಂಡಿರುತ್ತಾನೆ.

**ದ್ಯಾವಾಪೃಥಿವ್ಯೋರಿದಮನ್ತರಂ ಹಿ**
**ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥** (೧೧-೨೦)

**ಅಮೀ ಹಿ ತ್ವಾಂ ಸುರಸಙ್ಘಾ ವಿಶನ್ತಿ**
**ಕೇಚಿದ್ಭೀತಾಃ ಪ್ರಾಞ್ಜಲಯೋ ಗೃಣನ್ತಿ ।**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಙ್ಘಾಃ**
**ಸ್ತುವನ್ತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥** (೧೧-೨೧)

ಅರ್ಜುನನಿಗೆ ಕಾಣಿಸಿಕೊಂಡ ಆ ದೃಶ್ಯವು ಯಾವದು? ಭೂಮಿಯಿಂದ ಅಂತರಿಕ್ಷದವರೆಗಿರುವ ಸ್ಥಳವೆಲ್ಲವೂ ಭಗವಂತನ ಆ ಉಗ್ರರೂಪದಿಂದ ವ್ಯಾಪ್ತವಾಗಿರುತ್ತದೆ. ಅದನ್ನು ನೋಡಿ ಮೂರೂಲೋಕವೂ ತಲ್ಲಣಿಸುತ್ತಿದೆ. ದೇವತೆಗಳು ಗುಂಪುಗುಂಪಾಗಿ ಬಂದು ಕಾಡುಗಿಚ್ಚಿನಲ್ಲಿ ಬಿದ್ದು ಸೀಕರಿಯಾಗುವ ಹಕ್ಕಿಗಳಂತೆ

ಭಗವಂತನ ಆ ಉಗ್ರಸ್ವರೂಪದೊಳಗೆ ಹೊಕ್ಕು ಅದೃಶ್ಯರಾಗುತ್ತಿದ್ದಾರೆ! ಸರಿಯಾಗಿ ನೋಡಿದರೆ ದೇವತೆಗಳು ಭಗವಂತನಿಗಿಂತ ಬೇರೆಯಾಗಿರುವದೇ ಇಲ್ಲ. ಸೂರ್ಯನಿಗೆ ಕಿರಣಗಳಿರುವಂತೆಯೇ ಭಗವಂತನಿಗೆ ದೇವತೆಗಳು ಅಂಶಭೂತರಾಗಿರುತ್ತಾರೆ. ಆದರೂ ಅರ್ಜುನನು ದೇವತೆಗಳನ್ನು ಬೇರೆಬೇರೆಯೆಂದೇ ಭಾವಿಸಿದ್ದನಾದ್ದರಿಂದ ಅವನಿಗೆ ಈ ಅವರೆಲ್ಲರೂ ಭಗವಂತನಲ್ಲಿ ಬಂದು ಅದೃಶ್ಯರಾಗುವ ಭೀಕರವಾದ ನೋಟವು ಅಂಜಿಕೆಯನ್ನುಂಟುಮಾಡುತ್ತಿದೆ. ಕೆಲವರು ದೇವತೆಗಳು ಕೈಮುಗಿದುಕೊಂಡು ಭಗವಂತನನ್ನು ಸ್ತೋತ್ರಮಾಡುತ್ತಿರುತ್ತಾರೆ. ಮಹರ್ಷಿಗಳು ಸಿದ್ಧರೂ ಗುಂಪುಗುಂಪಾಗಿ ನಿಂತು ಜಗತ್ತಿಗೆ ಸ್ವಸ್ತಿಯಾಗಲಿ! ಎಂದು ಭಗವಂತನನ್ನು ಹೇರಳವಾದ ಸ್ತುತಿಗಳಿಂದ ಸ್ತೋತ್ರಮಾಡುತ್ತಿರುತ್ತಾರೆ.

ಆಗ ಅರ್ಜುನನ ಮನೋಭಾವವು ಹೇಗಿತ್ತು? ಎಂಬುದನ್ನು ತಿಳಿಯುವದಕ್ಕೆ ೧೯೪೨ನೆಯ ಇಸವಿಯಲ್ಲಿ ನಮ್ಮ ದೇಶದಲ್ಲಾದ ರಾಜಕೀಯ ಉಪಪ್ಲವವನ್ನು ನೆನಪಿಗೆ ತಂದುಕೊಂಡರೆ ಸ್ವಲ್ಪಮಟ್ಟಿಗೆ ನಮಗೆ ಮನವರಿಕೆಯಾದೀತು. ಆ ಕಾಲದಲ್ಲಿ ಭರತಖಂಡದ ಆದ್ಯಂತವೂ ಮಹಾಜನವೂ ವಿದ್ಯಾರ್ಥಿಗಳೂ ಸರಕಾರಕ್ಕೆ ಎದುರು ಬಿದ್ದಿದ್ದರು. ಮಹಾತ್ಮಗಾಂಧಿಯವರು ದೇಶಸೇವೆಗೆ ವಿದ್ಯಾರ್ಥಿಗಳನ್ನು ಕರೆದಿದ್ದರು. ಅವರುಗಳು ಗುಂಪುಗುಂಪಾಗಿ ರೈಲಿನಲ್ಲಿ ಟಿಕೆಟ್ಟಿಲ್ಲದೆ ಪ್ರಯಾಣಮಾಡುವದು, ಊರೂರಿಗೆ ಹೋಗಿ ಜನರಿಗೆ ಬೋಧೆಮಾಡಿ ಅವರನ್ನು ಕೆರಳಿಸುವದು, ಅಲ್ಲಲ್ಲಿ ವಿನಾಶಕರವಾದ ಕೃತ್ಯಗಳನ್ನು ಕೈಕೊಳ್ಳುವದು - ಹೀಗೆ ಮಾಡುತ್ತಿರುವದನ್ನು ನೋಡಿ ಜನರು ಬೆರಗಾಗಿದ್ದರು. ಇಡಿಯ ದೇಶವೇ ಪ್ರಲಯವಾಗುತ್ತಿದೆಯೋ, ಬಂದಿಯ ಮನೆಯಲ್ಲಿ ಸೇರಿರುವ ಗಾಂಧೀಜಿಯವರ ಅಂತರಾತ್ಮವು ಈ ನಾನಾ ಪ್ರಕಾರದ ಆಕಾರಗಳನ್ನು ತಾಳಿ ಎಲ್ಲರನ್ನೂ ತಲ್ಲಣಗೊಳಿಸುತ್ತಿದೆಯೋ ಎಂಬಂತೆ ಕಾಣುತ್ತಿತ್ತು. ದೇಶದ ಪರಿಸ್ಥಿತಿಯು ಬಹಳ ಉಲ್ಬಣವಾಗಿತ್ತು; ರೇಗಿದ್ದ ಜನರನ್ನು ಯಾರೂ ತಡೆಗಟ್ಟುವದಕ್ಕೆ ಸಮರ್ಥರೆಂದು ಕಾಣುತ್ತಿರಲಿಲ್ಲ. ಅಲ್ಲವೆ? ಹಾಗೆಯೇ ಅರ್ಜುನನಿಗೆ ಎಲ್ಲೆಲ್ಲಿಯೂ ಭಗವಂತನ ಉಗ್ರರೂಪದ ಪ್ರತಾಪವೇ ಕಾಣಬರುತ್ತಿತ್ತು. ಮನುಷ್ಯರು, ಋಷಿಗಳು, ದೇವತೆಗಳು ಎಲ್ಲರೂ ಜಗತ್ತಿನ ಪ್ರಲಯವು ಹತ್ತಿರವಾಗುತ್ತಿದೆ - ಎಂದು ಭಾವಿಸಿ ಚಿಂತಿಸುತ್ತಿದ್ದರು; ಅವರಲ್ಲಿ ಕೆಲವರು ಮಾತ್ರ ಭಗವಂತನು ಪ್ರಸನ್ನನಾದರೆ ಎಲ್ಲವೂ ಸರಿಹೋದೀತೆಂದು ಭಯಭಕ್ತಿಯಿಂದ ಸ್ತೋತ್ರವನ್ನು ಮಾಡುತ್ತಿದ್ದರು. ಅರ್ಜುನನಿಗಂತೂ ಧೈರ್ಯವು ಸಂಪೂರ್ಣವಾಗಿ ಉಡುಗಿಹೋಗಿತ್ತು.

ಏಕಾದಶರುದ್ರರು, ದ್ವಾದಶಾದಿತ್ಯರು, ಅಷ್ಟವಸುಗಳು, ಸಾಧ್ಯರು, ಅಶ್ವಿನೀ ದೇವತೆಗಳು, ಮರುತ್ತುಗಳು, ಊಷ್ಮಪರೆಂಬ ಬಿಸಿಯೂಟದ ಪಿತೃಗಳು, ಗಂಧರ್ವರು,

ಯಕ್ಷರು, ಅಸುರರು, ಸಿದ್ಧರು - ಎಲ್ಲರೂ ಗುಂಪಾಗಿ ಭಗವಂತನನ್ನೇ ಬೆರಗಾಗಿ ಎವೆಯಿಕ್ಕದೆ ನೋಡುತ್ತಿದ್ದರು. ಭಗವಂತನ ಆ ರೂಪವು ಎಲ್ಲೆಲ್ಲಿಯೂ ವ್ಯಾಪಿಸಿರುವಂತೆ ಕಾಣಿಸುತ್ತಿತ್ತು; ಆತನ ತೋಳುಗಳು, ತೊಡೆಗಳು, ಕಾಲುಗಳು, ಹೊಟ್ಟೆಗಳು, ಭಯಂಕರವಾದ ಕೋರದಾಡೆಗಳು - ಇವುಗಳಿಗೆ ಲೆಕ್ಕವೇ ಇಲ್ಲ. ಆ ರೂಪವನ್ನು ನೋಡಿ ಎಲ್ಲರಿಗೂ ಅತ್ಯಂತವಾಗಿ ತಳ್ಳಂಕವುಂಟಾಗಿದೆ. ಹೀಗಿರುವಲ್ಲಿ ಅರ್ಜುನನ ಪಾಡೇನು?

"ಮುಗಿಲು ಮುಟ್ಟುತ್ತಿರುವ, ಝುಗಝುಗನೆ ಉರಿಯುತ್ತಿರುವ ಬಗೆಬಗೆಯ ವರ್ಣಗಳಿಂದೊಡಗೂಡಿರುವ, ಬಾಯಿತೆರೆದುಕೊಂಡಿರುವ ನಿನ್ನನ್ನು ಕಂಡು ನನ್ನ ಮನಸ್ಸು ಭಯದಿಂದ ಹೊಯ್ದಾಡುತ್ತಿದೆ. ಎಲೈ ಸರ್ವವ್ಯಾಪಕನಾದ ಭಗವಂತನೆ, ನನ್ನ ಸರ್ವಾವಯವಗಳೂ ಕುಸಿದುಬೀಳುತ್ತಿವೆ. ಮನಸ್ಸಾಗಲಿ, ಇಂದ್ರಿಯಗಳಾಗಲಿ, ಶರೀರವಾಗಲಿ ನಿಲುಗಡೆಗೆ ಬರುವಂತಿಲ್ಲ. ಕೋರದಾಡೆಗಳಿಂದ ಭಯಂಕರವಾಗಿರುವ ಪ್ರಲಯಕಾಲದ ಅಗ್ನಿಯಂತೆ ಉರಿಯುತ್ತಿರುವ ನಿನ್ನನ್ನು ನೋಡಿದ ಮಾತ್ರದಿಂದ ನನಗೆ ದಿಕ್ಕುತೋಚದಂತೆ ಆಗಿದೆ. ಮನಸ್ಸಿಗೆ ಸಮಾಧಾನವಿಲ್ಲವಾಗಿದೆ. ಎಲೈ ದೇವೇಶನೆ, ಜಗತ್ತಿಗೆಲ್ಲ ಆಶ್ರಯಭೂತನಾದವನೆ, ನನ್ನಲ್ಲಿ ಪ್ರಸನ್ನನಾಗು," ಎಂದು ಅರ್ಜುನನು ಅಂಗಲಾಚಿಬೇಡಿಕೊಳ್ಳುತ್ತಿದ್ದಾನೆ. ಅವನ ಮನಸ್ಸಿನಲ್ಲಿ ಇಷ್ಟರಲ್ಲಿಯೇ ಭಗವಂತನು ಪ್ರಸನ್ನನಾಗುತ್ತಾನೆ; ಪ್ರಲಯಕಾಲದ ಅಗ್ನಿಯು ಎಲ್ಲವನ್ನೂ ಸುಟ್ಟು ಬೂದಿಗೈದು ತಣ್ಣಗಾಗುವಂತೆ, ಬೆಟ್ಟವನ್ನೆಲ್ಲ ಆವರಿಸಿರುವ ಬೆಂಕಿಯು ಮಳೆಹೊಯ್ದು ಆರಿಕೊಂಡಂತೆ, ಇನ್ನಿಲ್ಲವೆಂಬಷ್ಟು ಕೋಪವನ್ನು ನಟನೆಗಾಗಿ ತೋರಿಸಿದವನು ಥಟ್ಟನೆ ಸಹಜವಾದ ಮುಖದಿಂದ ನಕ್ಕಂತೆ, ನನ್ನನ್ನು ಸೌಮ್ಯಮುಖದಿಂದ ಕರುಣಾರ್ದ್ರ ದೃಷ್ಟಿ ಯಿಂದ ನೋಡುತ್ತಾನೆ - ಎಂಬ ಆಶೆಯ ಕಿರಣವೂ ಒಂದಿಷ್ಟಿದ್ದಿರಬಹುದು. ಆದರೆ ಎದುರಿಗೆ ಕಾಣುತ್ತಿರುವ ಅದ್ಭುತವಾದ ಆಕಾರವನ್ನು ಕಂಡರೆ ಅಂಥ ಪ್ರತೀಕ್ಷೆಯು ಯಾವದೂ ದಕ್ಕುವ ಹಾಗೆ ಕಾಣುತ್ತಿಲ್ಲ! ಅವನು ಹೇಳುತ್ತಿರುವದನ್ನು ಕೇಳಿ:

"ಎಲೈ ಭಗವಂತನೆ, ಈ ಧೃತರಾಷ್ಟ್ರನ ಮಕ್ಕಳು, ಭೀಷ್ಮ, ದ್ರೋಣ, ಕರ್ಣ, ನಮ್ಮಲ್ಲಿಯೂ ಯಾರುಯಾರು ಮುಖ್ಯಮುಖ್ಯ ಯೋಧರಿರುವರೋ ಅವರು— ಎಲ್ಲರೂ ಸಹಾಯಕ್ಕೆ ಬಂದಿರುವ ರಾಜರುಗಳೊಡನೆ ಭರ್ರೆಂದು ವೇಗದಿಂದ— ಹೆಬ್ಬಾವಿನ ಉಸಿರಿಗೆ ಸಿಕ್ಕುವ ಬಡಪ್ರಾಣಿಗಳಂತೆ - ನಿನ್ನ ಉಸಿರಿಗೆ ಸಿಕ್ಕುಬಿದ್ದು ಬಂದುಬಂದು ಕೋರೆದಾಡೆಗಳಿಂದ ಭಯಂಕರವಾದ ನಿನ್ನ ಮುಖದ ಒಳಕ್ಕೆ ಸೇರುತ್ತಿದ್ದಾರೆ. ಕೆಲವರು ಆಗಲೆ ಒರಳಿನಲ್ಲಿ ಒನಕೆ ಪೆಟ್ಟಿಗೆ ಪುಡಿಪುಡಿಯಾಗುವ ರಂಗೋಲಿಕಲ್ಲುಗಳ ಹಾಗೆ ಪುಡಿಯಾಗಿದ್ದಾರೆ. ಅವರ ತಲೆಗಳ ಚೂರುಗಳು ನಿನ್ನ

ಹಲ್ಲುಗಳ ನಡುವೆ ಸಿಕ್ಕಿಕೊಂಡು ಜೋಲಾಡುತ್ತಿವೆ! ಹೇಗೆ ನದಿಗಳು ಹೆಚ್ಚಿನ ಸೆಳವಿನಿಂದ ಬೇಗಬೇಗನೆ ಹರಿಯುತ್ತಾ ಬಂದು ಸಮುದ್ರದೊಳಕ್ಕೇ ಧುಮುಕುತ್ತಿರುವವೋ ಹಾಗೆ ಮಹಾವೀರರಾದ ಯೋಧರುಗಳು ಉರಿಯುತ್ತಿರುವ ನಿನ್ನ ಮುಖಗಳೊಳಕ್ಕೆ ಪ್ರವೇಶಿಸುತ್ತಿರುವರು. ಧಗಧಗನೆ ಎದ್ದೆದ್ದು ಉರಿಯುತ್ತಿರುವ ಬೆಂಕಿಯೊಳಕ್ಕೆ ಪತಂಗದ ಹುಳುಗಳು ಬಂದುಬಂದು ಬಿದ್ದು ಸೀಕರಿಯಾಗಿ ಹೋಗುವಂತೆ ಅತ್ಯಂತವೇಗದೊಡನೆ ಜನರು ಬಂದುಬಂದು ಭಗ್ ಭಗ್ ಎಂದು ಉರಿಯುತ್ತಿರುವ ನಿನ್ನ ಬಾಯಿಗಳೊಳಗೆ ಹೊಕ್ಕು ನಾಶವಾಗುತ್ತಿರುವರು. ನೀನು ಎಲ್ಲರನ್ನೂ ಉರಿಯುವ ಬಾಯಿಗಳಿಂದ ನುಂಗುತ್ತಾ ಇರುವೆ; ನಿನ್ನ ಉಗ್ರವಾದ ಕಾಂತಿಯ ಕಿರಣಗಳು ಎಲ್ಲಾ ಜಗತ್ತನ್ನೂ ಸುಡುತ್ತಿರುವವು!"

ಇನ್ನೂ ಯುದ್ಧವು ಪ್ರಾರಂಭವಾಗಿಲ್ಲ. ಆದರೂ ಭಗವಂತನು ಮುಂದೆ ಆಗಲಿರುವ ಘಟನೆಗಳ ದೃಶ್ಯವನ್ನು ಆಡಿತೋರಿಸಿರುತ್ತಾನೆ. ಈ ಸಮಯದಲ್ಲಿ ಅರ್ಜುನನ ಮನೋಭಾವವು ಹೇಗಿರಬಹುದು? ತನ್ನ ಕಣ್ಣೆದುರಿಗೇ ಧೃತರಾಷ್ಟ್ರನ ಮಕ್ಕಳೆಲ್ಲ ಭಗವಂತನ ಬಾಯಿಯನ್ನು ಹೊಕ್ಕು ನಾಶವಾಗಿರುತ್ತಾರೆ. ಭೀಷ್ಮ ದ್ರೋಣ, ಕರ್ಣ - ಇಂಥ ವೀರರೂ ಮಾಯವಾಗಿರುತ್ತಾರೆ. ತನ್ನ ಕಡೆಯವರೆಲ್ಲರನ್ನೂ ಭಗವಂತನು ನುಂಗಿ ನೊಣೆದಿರುತ್ತಾನೆ. ಇನ್ನು ನನ್ನ ಗತಿಯೇನಾಗಬಹುದು? -ಎಂಬ ಯೋಚನೆಯು ಅರ್ಜುನನಿಗೆ ಹುಟ್ಟಿದ್ದರೆ ಆಶ್ಚರ್ಯವೇನು? ಗೋಗ್ರಹಣದ ಕಾಲದಲ್ಲಿ ಉತ್ತರಕುಮಾರನಿಗೆ ಆದ ಅಂಜಿಕೆಯು ಈಗ ಅರ್ಜುನನಿಗೇ ಬಂದಿದೆ ಎಂದರೂ ಸಲ್ಲುವಂತಿದೆ. "ಅದೇ ಭೂತಗ್ರಾಮವು ಮತ್ತೆಮತ್ತೆ ಹುಟ್ಟಿ ಪ್ರಲಯಕಾಲದಲ್ಲಿ ಅಡಗುತ್ತದೆ" ಎಂದು ಹಿಂದೆ ಭಗವಂತನು ಉಪದೇಶಿಸಿದ್ದನಲ್ಲ, ಅದನ್ನು ಈಗ ಅರ್ಜುನನಿಗೆ ಕಣ್ಣಿಗೆ ಕಟ್ಟಿದಂತೆ ಸಾಕ್ಷಾತ್ತಾಗಿ ತೋರಿಸಿಕೊಡುತ್ತಿದಾನೆ!

ಈ ವರ್ಣನೆಯನ್ನು ಕೇಳಿ ಅರ್ಜುನನ ಪಾಡನ್ನು ನೆನೆಸಿಕೊಂಡು ನಾವು ನಕ್ಕರೆ, ಈ ಗೀತಾಶ್ರವಣವು ವ್ಯರ್ಥವಾದಂತೆಯೇ ಸರಿ. ಇದು ನಗುವ ಸಂದರ್ಭವಲ್ಲ; ಚೆನ್ನಾಗಿ ವಿಚಾರಮಾಡಬೇಕಾದ ಸಂದರ್ಭ. ಅರ್ಜುನನಿಗೆ ಕಂಡಾಗ ಮಾತ್ರವೇ ಈ ಜಗತ್ತು ಇಂಥ ಭಯಂಕರಪರಿಸ್ಥಿತಿಯಲ್ಲಿತ್ತೆ? ಈಗ ಹೇಗಿದೆ? ಸರಿಯಾಗಿ ನೋಡಿದರೆ ಜಗತ್ತೆಲ್ಲವೂ ಮೃತ್ಯುವಿನಿಂದ ವ್ಯಾಪ್ತವಾಗಿರುತ್ತದೆ, ಮೃತ್ಯುವಿನ ದವಡೆಯಲ್ಲಿಯೇ ಸಿಕ್ಕಿಕೊಂಡಿದೆ. ನಾವು ಹುಟ್ಟಿದೆವು, ಬೆಳೆದೆವು - ಎಂದರೆ ಏನರ್ಥ? ಮೃತ್ಯುವಿಗೆ ಅಷ್ಟಷ್ಟು ಹತ್ತಿರವಾದೆವು ಎಂದೇ ಅರ್ಥ. ಇದನ್ನು ನಾವು ಅರಿಯದೆ ನಮಗೆ ಅಷ್ಟು ವಯಸ್ಸಾಯಿತು. ಇಷ್ಟು ವಯಸ್ಸಾಯಿತು ಎಂದು ಹಿಗ್ಗುತ್ತಿರುವೆವಲ್ಲ! ಭಗವಂತನನ್ನು ಶರಣುಹೊಕ್ಕವರಿಗೆ ಮಾತ್ರವೇ ಈ ಲೋಕದಲ್ಲಿ ಬಾಳುಂಟು. "ಪ್ರಸೀದ. ದೇವೇಶ,

ಜಗನ್ನಿವಾಸ" ಎಂಬುದೇ ನಿತ್ಯವಾದ ನಮ್ಮ ಮನಸ್ಸಿನ ಭಾವನೆಯಾಗಿರಬೇಕು. ಯಾವನೋ ಒಬ್ಬ ಸಿಪಾಯಿ ನಮಗೆ ಸ್ನೇಹಿತನಾಗಿದಾನೆಂದು ಇಟ್ಟುಕೊಳ್ಳಿರಿ. ನಾವು ಕುತೂಹಲದಿಂದ "ಏನಪ್ಪ, ನಾನಷ್ಟು ಯುದ್ಧರಂಗವನ್ನು ನೋಡಬೇಕಲ್ಲ!" ಎಂದು ಕೇಳಿದರೆ ಅವನು ನಮ್ಮನ್ನು ಯುದ್ಧವಿಮಾನದ ಮೇಲೆ ಕುಳ್ಳಿರಿಸಿಕೊಂಡು "ಇಗೋ ನೋಡಿ, ಆ ಕಡೆ ಶತ್ರುಗಳ ಸೈನ್ಯವು ಭಾಗಭಾಗವಾಗಿ ನಿಂತಿದೆ. ಅದರಲ್ಲಿ ಕೆಲವರು ಫಿರಂಗಿಗಳಿಗೆ ಬೆಂಕಿಹಾಕುವದಕ್ಕೆ ಪ್ರಯತ್ನಿಸುತ್ತಿದಾರೆ; ಮತ್ತೆ ಕೆಲವರು ಬಾಂಬುಗಳನ್ನು ಎಸೆಯುವದಕ್ಕೆ ಸಜ್ಜು ಮಾಡುತ್ತಿದಾರೆ. ಇಗೋ, ಇಲ್ಲಿ ಟ್ಯಾಂಕುಗಳು ನುಗ್ಗಿಬರುತ್ತಿವೆ. ಇವುಗಳೊಳಗೆಲ್ಲ ಮಾರಕವಸ್ತುಗಳೇ ತುಂಬಿವೆ. ಇಗೋ, ನಮ್ಮ ಸಿಪಾಯಿಗಳು ಮರಗಳನ್ನು ಕಡಿದು ಹಾಕಿ ಬಯಲುಮಾಡಿ ಶತ್ರುಗಳ ಮೇಲೆ ಹಾಯುವದಕ್ಕೆ ಸಿದ್ಧವಾಗುತ್ತಿದಾರೆ. ಅಗೋ ನೋಡಿರಿ, ಆ ಕಡೆಯಿಂದ ಶತ್ರುಗಳ ವಿನಾಶಕವಿಮಾನಗಳು ಹತ್ತೆಂಟು ಕಾಣಿಸಿಕೊಳ್ಳುತ್ತಿವೆ" ಎಂದು ವರ್ಣಿಸಿದರೆ ಆ ಕೂಡಲೆ ಆಶ್ಚರ್ಯ, ನಮ್ಮ ಅಶಕ್ತತೆ, ಸಿಪಾಯಿಯ ಧೈರ್ಯ, ಜನರ ಮತ್ತು ಪ್ರಾಣಿಗಳ ನಾಶ, ಯುದ್ಧದಿಂದ ಆಗುವ ವಿಪತ್ತು, ಭಯ - ಇವುಗಳು ಒಂದರ ಹಿಂದೊಂದು ಬಂದುಬಂದು ನಮ್ಮನ್ನು ಆವರಿಸುವವು. ಅಲ್ಲವೆ? ಇದರಂತೆ ಆಗಿದೆ, ಅರ್ಜುನನ ಸ್ಥಿತಿ.

ಅರ್ಜುನನಿಗೆ ಶ್ರೀಕೃಷ್ಣನ ವಿಷಯದಲ್ಲಿ ಇದ್ದ ಭಾವವು ಬರುಬರುತ್ತಾ ಮಾರ್ಪಡುತ್ತಿದೆ. ಮೊಟ್ಟಮೊದಲು ಶ್ರೀಕೃಷ್ಣನು ತನ್ನ ಗೆಳೆಯ, ನೆಂಟ-ಎಂಬ ಭಾವನೆಯಿತ್ತು. ಬಳಿಕ ಯುದ್ಧವು ಮೊದಲಾಗಲು ಭೀಷ್ಮಾದಿಗಳನ್ನು ಹೇಗೆ ಹೊಡೆಯಲಿ ಎಂಬ ಧರ್ಮಸಂಕಟವು ಬಂದಾಗ "ನೀನೇ ಗುರು, ಧರ್ಮವನ್ನು ತಿಳಿಸಿಕೊಡು" ಎಂದು ಕೇಳಿಕೊಂಡನು. ಆ ಬಳಿಕ ಗೀತೋಪದೇಶವು ಆದಂತೆಲ್ಲ ಭಗವಂತನೇ ಈ ಅವತಾರವನ್ನು ಮಾಡಿರುತ್ತಾನೆ ಎಂಬ ಹೊಸಭಾವನೆಯೊಂದು ಅಂಕುರಿಸಿತು. ಈಗ ವಿಶ್ವರೂಪವನ್ನು ಕಂಡು ಚಕಿತನಾಗಿರುತ್ತಾನೆ. ನಮ್ಮ ಜೊತೆಯಲ್ಲಿ ಆಟದ ಗೆಳೆಯನಂತೆ ಇದ್ದು ಸಾಧಾರಣಮನುಷ್ಯನೆಂದು ನಾವು ತಿಳಿದುಕೊಂಡಿದ್ದ ಒಬ್ಬ ಪುರುಷನು ದೇಶವಿದೇಶಗಳ ವರ್ತಮಾನವನ್ನು ತಿಳಿದಿರುವನೆಂದೂ ದೊಡ್ಡದೊಡ್ಡವರ ಪರಿಚಯವುಳ್ಳವನೆಂದೂ ತಿಳಿದರೆ ನಮಗೆ ಅಷ್ಟಕ್ಕೇ ಆಶ್ಚರ್ಯ ವಾಗುತ್ತದೆ; ಮುಂದೆ ಅವನು ಒಬ್ಬ ಶ್ರೀಮಂತನೆಂದು ತಿಳಿದರೆ ಅವನ ವಿಷಯದ ಗೌರವವು ಮತ್ತಷ್ಟು ಹೆಚ್ಚುತ್ತದೆ. ಇನ್ನೂ ಮುಂದಕ್ಕೆ ಅವನಿಗೆ ಸರ್ಕಾರದ ದೊಡ್ಡದೊಡ್ಡ ಅಧಿಕಾರಿಗಳ ಪರಿಚಯವಿದೆಯೆಂದೂ ಕೊನೆಗೆ ಅರಮನೆಯವರೆಲ್ಲರೂ ಅವನಿಗೆ ಗುರುತಿನವರೇ ಎಂದೂ ತಿಳಿದರೆ ಇನ್ನೂ ಬೆರಗಾಗುವೆವು. ಆದರೆ ಅವನು ಮಹಾರಾಜರಿಗೇ ಹಿತನೆಂದು ಗೊತ್ತಾದರೆ, ಅಥವಾ ಮಹಾರಾಜರು ಅವನನ್ನು

ಗೌರವದಿಂದಲೂ ಭಯಭಕ್ತಿಯಿಂದಲೂ ನೋಡಿಕೊಳ್ಳುತ್ತಿರುವರೆಂದು ತಿಳಿದುಬಂದರೆ? ನಮ್ಮ ಮನಸ್ಸಿನಲ್ಲಿ ಎಂಥ ಪರಿಸ್ಥಿತಿಯುಂಟಾದೀತು! ಅದೇ ಮನಃಸ್ಥಿತಿಯಿಂದ ಅರ್ಜುನನು ಕೇಳುತ್ತಿದಾನೆ :

ಆಖ್ಯಾಹಿ ಮೇ ಕೋ ಭವಾನುಗ್ರರೂಪೋ
ನಮೋಽಸ್ತು ತೇ ದೇವವರ ಪ್ರಸೀದ ।
ವಿಜ್ಞಾತುಮಿಚ್ಛಾಮಿ ಭವನ್ತಮಾದ್ಯಂ
ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥ (೧೧-೩೧)

"ಎಲೈ ದೇವವರನೆ, ಉಗ್ರರೂಪನಾದ ನೀನು ಯಾರು? ನನ್ನಲ್ಲಿ ಪ್ರಸನ್ನನಾಗಿ ಇದನ್ನು ಹೇಳು. ಲೋಕಕ್ಕೆಲ್ಲ ಆದಿಯಾಗಿರುವ ನಿನ್ನ ಸ್ವರೂಪವನ್ನು ತಿಳಿಯಬೇಕೆಂದು ನನಗೆ ಇಚ್ಛೆಯುಂಟಾಗಿದೆ. ನೀನು ಏತಕ್ಕೆ ಈ ರೂಪವನ್ನು ಕೈಕೊಂಡಿರುವೆ, ಹೇಳು". ಇದಕ್ಕೆ ಭಗವಂತನು ಕೊಡುವ ಉತ್ತರವನ್ನು ನಾವು ಪರಿಶೀಲಿಸಬೇಕಾಗಿದೆ.

ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ
ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।
ಋತೇಽಪಿ ತ್ವಾಂ ನ ಭವಿಷ್ಯನ್ತಿ ಸರ್ವೇ
ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥ (೧೧-೩೨)

ತಸ್ಮಾತ್ ತ್ವಮುತ್ತಿಷ್ಠ ಯಶೋ ಲಭಸ್ವ
ಜಿತ್ವಾ ಶತ್ರೂನ್ ಭುಙ್ಕ್ಷ್ವ ರಾಜ್ಯಂ ಸಮೃದ್ಧಮ್ ।
ಮಯೈವೈತೇ ನಿಹತಾಃ ಪೂರ್ವಮೇವ
ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ (೧೧-೩೩)

"ಅರ್ಜುನನೆ, ನಾನು ಯಾರೆಂದು ಕೇಳಿದೆಯಲ್ಲ, ಹೇಳುವೆನು ಕೇಳು. ನಾನು ಲೋಕವನ್ನೆಲ್ಲ ಕ್ಷಯಮಾಡಬೇಕೆಂದು ಬೆಳೆದುಕೊಂಡಿರುವ ಕಾಲನು. ಭಗವಂತನಾದ ನಾನು ಈಗ ಕಾಲರೂಪವನ್ನು ತೊಟ್ಟಿರುತ್ತೇನೆ. ಲೋಕಸಂಹಾರಕ್ಕಾಗಿಯೇ ನಾನು ಹೊರಟಿರುವದರಿಂದ ನೀನು ಯುದ್ಧಮಾಡಿದರೂ ಸರಿ, ಬಿಟ್ಟರೂ ಸರಿ; ನೀನಿಲ್ಲದೆಯೇ ಈ ಯೋಧರೆಲ್ಲರೂ ಅವಶ್ಯವಾಗಿ ನಾಶವಾಗುತ್ತಾರೆ. ನಾನು ಬಂದದ್ದೇ ಇವರನ್ನೆಲ್ಲ ನಾಶಗೊಳಿಸುವದಕ್ಕೆ; ಕಾಲವು ಪಕ್ವವಾಗುತ್ತಲೂ ಕಾರ್ಯವಾಗುವದಾದ್ದರಿಂದ ನಾನು ಇವರ ನಾಶವನ್ನೇ ಸಿದ್ಧಗೊಳಿಸುತ್ತಿದ್ದೇನೆ. ಯುದ್ಧದಲ್ಲಿ ಶತ್ರುಗಳೆಲ್ಲರೂ ಆಗಲೆ ನಾಶವಾಗಿದ್ದಾರೆಂದೇ ತಿಳಿದುಕೊ, ನಿನ್ನಿಂದ ನಾಶವಾಗುತ್ತಾರೆ ಎಂದೇನೂ ಬಗೆಯ ಬೇಡ; ನೀನು ನಿಮಿತ್ತಮಾತ್ರನಾಗು. ನಾನು ಉಳಿದ ಭಾಗವನ್ನು ನೋಡಿಕೊಳ್ಳುವೆನು."

ಅರ್ಜುನನು ದ್ರೋಣನನ್ನೂ ಭೀಷ್ಮನನ್ನೂ ಹೇಗೆ ಕೊಲ್ಲಲಿ! ಎಂದು ಚಿಂತಿಸುತ್ತಿದಾನೆ. ಆದರೆ ಭಗವಂತನ ದೃಷ್ಟಿಯಿಂದ ಅವರನ್ನು ಹೊಸದಾಗಿ ಕೊಲ್ಲಬೇಕಾದದ್ದೇನೂ ಇಲ್ಲ. ಭೀಷ್ಮ, ದ್ರೋಣ, ಜಯದ್ರಥ, ಕರ್ಣ ಇನ್ನೂ ಉಳಿದ ವೀರರುಗಳು - ಎಲ್ಲರನ್ನೂ ಭಗವಂತನು ಕೊಂದುಹಾಕಿಯೇಬಿಟ್ಟಿರುತ್ತಾನೆ. "ನಾನು ಕೊಂದವರನ್ನೇ ನೀನು ಕೊಲ್ಲು; ವ್ಯಥೆಪಡಬೇಡ, ಯುದ್ಧ ಮಾಡು, ನಿಜವಾಗಿಯೂ ಶತ್ರುಗಳನ್ನು ರಣದಲ್ಲಿ ಜಯಿಸುವೆ" ಎಂದು ಹೇಳುತ್ತಿದಾನೆ.

ಇದುವರೆಗೆ ಕರ್ಮ, ಧ್ಯಾನ, ಭಕ್ತಿ, ಜ್ಞಾನ - ಇವುಗಳನ್ನು ಉಪದೇಶಿಸಿದ್ದಾಯಿತು. "ಆದ್ದರಿಂದ ಏಳು, ನಾನು ಮೊದಲು ಹೇಳಿದಂತೆ ನಿನ್ನ ಕರ್ತವ್ಯವನ್ನು ಮಾಡಿಬಿಡು" ಎಂದು ತಿಳಿಸುತ್ತಿದ್ದಾನೆ. ಈ ಮಾತನ್ನು ಭಗವಂತನು ಅರ್ಜುನನನ್ನು ಹೆದರಿಸುವದಕ್ಕೆ ಹೇಳಿಲ್ಲ. ರಾಜನೀತಿಯಲ್ಲಿ ಈಗಿನ ಕಾಲದಲ್ಲಿ ಒಂದು ರಾಷ್ಟ್ರದವರು ಮತ್ತೊಬ್ಬರನ್ನು ಅಂಜಿಸುವದಕ್ಕೆಂದು ನಮ್ಮಲ್ಲಿ ಅನೇಕ ಅಟಂಬಾಂಬುಗಳಿವೆ, ಅಷ್ಟು ಸೈನ್ಯವಿದೆ, ಇಷ್ಟು ಜಹಜುಗಳಿವೆ, ಇಂತಿಷ್ಟು ವಿನಾಶಕವಿಮಾನಗಳಿವೆ" ಎಂದು ಕೊಚ್ಚಿಕೊಳ್ಳುವದುಂಟು. ಭಗವಂತನು ಅರ್ಜುನನನ್ನು ಯುದ್ಧಕ್ಕೆ ಹುರಿದುಂಬಿಸುವದಕ್ಕಾಗಿ ಹೀಗೆ ಹೇಳಿದ್ದಾನೆಂದು ಮಾತ್ರ ತಿಳಿಯಬಾರದು; ಅರ್ಜುನನು ವಿಶ್ವರೂಪವನ್ನು ತೋರಿಸು ಎಂದು ಬೇಡಿಕೊಂಡಿರುತ್ತಾನೆ; ಅದರಂತೆ ಭಗವಂತನು ತೋರಿಸಿರುತ್ತಾನೆ. ಆ ಅದ್ಭುತ ರೂಪವನ್ನು ಕಂಡು ಅಂಜಿಕೆಯಿಂದ "ಈ ರೂಪವನ್ನು ತಾಳಿ ಜಗತ್ತಿನಲ್ಲಿ ನೀನು ಕಾಣಿಸಿಕೊಂಡ ಉದ್ದೇಶವೇನು?" ಎಂದು ಕೇಳಿದ್ದಕ್ಕೆ "ದುಷ್ಟರ ದಮನ ಮಾಡುವದಕ್ಕೆಂದು ಕಾಲರೂಪದಿಂದ ಅವತರಿಸಿದ್ದೇನೆ" ಎಂದು ಭಗವಂತನು ಸಹಜವಾಗಿಯೇ ಉತ್ತರಕೊಟ್ಟಿರುತ್ತಾನೆ. ಅರ್ಜುನನಿಗೆ ಹಿತವಾಗಲೆಂಬುದೇ ಭಗವಂತನ ಅಭಿಲಾಷೆ. ಅವನ ಮೇಲೆ ಅನುಗ್ರಹವನ್ನು ಮಾಡುವದಕ್ಕಾಗಿಯೇ ಭಗವಂತನು ಕೌರವಾದಿಗಳ ಮರಣವನ್ನು ಮುಂಚಿತವಾಗಿಯೇ ಕಣ್ಣಿಗೆ ಕಟ್ಟಿದಂತೆ ತೋರಿಸಿ "ನಾನೇ ಇವರನ್ನು ಈ ಮೊದಲೇ ಕೊಂದಿರುತ್ತೇನೆ; ನೀನು ನಿಮಿತ್ತಮಾತ್ರನಾಗಿ ಇವರನ್ನು ಕೊಲ್ಲು" ಎಂದು ಹೇಳಿರುತ್ತಾನೆ. ಯುದ್ಧವು ಇನ್ನೂ ಪ್ರಾರಂಭವೇ ಆಗದಿರುವಾಗ ಎಲ್ಲರನ್ನೂ ಕೊಂದಿರುವೆನೆಂದದ್ದು ಅನೃತವಲ್ಲವೆ? ಎಂದು ಯಾರಾದರೂ ಶಂಕಿಸಬಹುದು. ಅದಕ್ಕೆ ಪರಿಹಾರವೇನೆಂದರೆ ಅರ್ಜುನನ ಮತ್ತು ಸಾಮಾನ್ಯರ, ವ್ಯವಹಾರದೃಷ್ಟಿಯಿಂದ ಇನ್ನೂ ಯುದ್ಧವಾಗಿಲ್ಲ, ಕೌರವರ ನಾಶವೂ ಆಗಿಲ್ಲ. ಆದರೆ ಭಗವಂತನ ದೃಷ್ಟಿಯಿಂದ ಅದೆಲ್ಲವೂ ಆಗಲೆ ಆಗಿಹೋಗಿರುತ್ತದೆ. ಯೋಗಿಗಳಿಗೆ ತ್ರಿಕಾಲಜ್ಞಾನವಿರುತ್ತದೆ ಎಂದು ನೀವು ಕೇಳಿರಬಹುದು. ಅವರಿಗೆ ಎಲ್ಲಾ ದೇಶಗಳೂ ಎಲ್ಲಾ ಕಾಲಗಳೂ ಒಮ್ಮೆಗೆ ಕಾಣುವವು. ಯೋಗಿ ಪ್ರತ್ಯಕ್ಷದಲ್ಲಿ ಭೂತಭವಿಷ್ಯದ್ವರ್ತಮಾನಗಳೆಂಬ ಭೇದಗಳಿರುವದಿಲ್ಲ. ಅವರಿಗೆ ಎಲ್ಲವೂ ವರ್ತಮಾನವೇ. ಹಾಗೆಯೇ

ಭಗವಂತನ ದೃಷ್ಟಿಯಿಂದ ಎಲ್ಲರೂ ಆಗಲೇ ಸತ್ತಿರುತ್ತಾರೆ.

ಸಾಮಾನ್ಯರಾದ ಯೋಗಿಗಳಿಗೇ ಇಂಥ ಪ್ರತ್ಯಕ್ಷವಾಗುವಾಗ ಯೋಗೇಶ್ವರನಾದ ಭಗವಂತನಿಗೆ ಇಂಥ ಜ್ಞಾನವುಂಟಾಗುವದರಲ್ಲಿ ಆಶ್ಚರ್ಯವೇನು? ಅರ್ಜುನನು ಭೀಷ್ಮಾದಿಗಳನ್ನು ಹೇಗೆ ಹೊಡೆಯಲಿ! ಎಂದು ಚಿಂತಿಸುತ್ತಿರುವಾಗ ಭಗವಂತನು 'ಪ್ರಹಸನ್ನಿವ' ನಗುವವನಂತೆ ಮಾತಾಡಿದನು - ಎಂದು ಎರಡನೆಯ ಅಧ್ಯಾಯದಲ್ಲಿ ಹೇಳಿರುವದೇನೆಂಬುದು ಈಗ ನಮಗೆ ಅರ್ಥವಾಗುತ್ತದೆ. ಏಕೆಂದರೆ ಅರ್ಜುನನ ದೃಷ್ಟಿಯಲ್ಲಿ ಭೀಷ್ಮಾದಿಗಳು ಆಗಲೆ ಸತ್ತಿರುವರೆಂಬುದು ಸಿದ್ಧವಾಗಿಲ್ಲ. ಡಾಕ್ಟರರ ದೃಷ್ಟಿಯಿಂದ ಆಗಲೆ ಸತ್ತಿರುವವರು ನಮ್ಮಗಳ ದೃಷ್ಟಿಯಿಂದ ಇನ್ನೂ ಬದುಕಿರುತ್ತಾರೆ. ಇದರಂತೆ ಭಗವಂತನ ದೃಷ್ಟಿಯಿಂದ ಸತ್ತಿರುವ ದ್ರೋಣಾದಿಗಳು ಈಗಲೂ ಬದುಕಿರುತ್ತಾರೆ. ಭಗವಂತನು ತನ್ನ ಉತ್ತಮದೃಷ್ಟಿಯಿಂದಲೇ ಉಪದೇಶವನ್ನು ಮೊದಲೇ ಮಾಡಲಿಲ್ಲ. "ಅಂಜುಬುರುಕನಾಗದಿರು, ಕ್ಷತ್ರಿಯನಾಗಿ ಯುದ್ಧಕ್ಕೆ ಹೆದರುವದೆ"? ಎಂದು ಮುಂತಾಗಿ ಲೋಕನೀತಿಯನ್ನು ಮೊದಲು ಹೇಳಿದನು. ಅದಕ್ಕೆ ಸಗ್ಗದೆ ಇರಲು ಅರ್ಜುನನಿಗೆ ತತ್ತ್ವೋಪದೇಶವನ್ನು ಮಾಡಿದನು. ಈಗ ದಿವ್ಯದೃಷ್ಟಿಯನ್ನು ಅನುಗ್ರಹಿಸಿ ಎಲ್ಲಾ ಯೋಧವೀರರೂ ಆಗಲೆ ಮಡಿದಿರುವದನ್ನು ತೋರಿಸಿರುತ್ತಾನೆ. ಈಗ ಅರ್ಜುನನಿಗೆ ಎಂಥ ನಾಚಿಕೆಯಾಗಿರಬೇಕು! ನಾವುಗಳೂ ಹೀಗೆಯೇ "ನಮ್ಮನಮ್ಮ ಶರೀರ, ಇಂದ್ರಿಯ, ಬುದ್ಧಿ - ಇವುಗಳನ್ನು ಉಪಯೋಗಿಸಿ ಕೊಂಡು ಸ್ವತಂತ್ರರಾಗಿ ಬಾಳುತ್ತೇವೆ; ನಮಗೆ ಮತ್ತೊಬ್ಬರ ಹಂಗುಬೇಡ!" ಎನ್ನುತ್ತಿರುವೆವು. ವ್ಯವಹಾರದೃಷ್ಟಿಯಿಂದ ಇದೇನೋ ಯುಕ್ತವಾದದ್ದೇ ಸರಿ. ಆದರೆ ನಮ್ಮ ಶರೀರಾದಿಗಳನ್ನು ನಾವು ಎಲ್ಲಿಂದ ತಂದೆವು? ಅವನ್ನು ನಾವೇ ಮಾಡಿಕೊಂಡಿರುವೆವೆ? ಇವೆಲ್ಲ ಭಗವಂತನ ಅನುಗ್ರಹವೇ ಎಂಬುದನ್ನು ನಾವು ಆಲೋಚನೆಗೆ ತಂದುಕೊಂಡಿರುವದಿಲ್ಲ.

ಈ ಇಡಿಯ ಪ್ರಪಂಚವೇ ಭಗವಂತನ ರೂಪವು. ಇದು ಕಾಲಕಾಲಕ್ಕೆ ಬೇರೆ ಬೇರೆಯ ರೀತಿಯ ಆಕಾರವನ್ನು ಹೊಂದುತ್ತಿರುವದು. ಆತನು ತನ್ನ ಸಂಕಲ್ಪದಂತೆ ಆಯಾ ಕಾಲಕ್ಕೆ ಆಯಾ ರೂಪವನ್ನು ಪ್ರದರ್ಶನಮಾಡಿ ಆಯಾ ಕಾರ್ಯವನ್ನು ನೆರವೇರಿಸುತ್ತಾನೆ. ಯಾವಾಗ ಯಾರನ್ನಾದರೂ ನಿಮಿತ್ತವಾಗಿ ಮಾಡಿಕೊಂಡು ತನ್ನ ಕೆಲಸವನ್ನು ಮಾಡಿಕೊಳ್ಳುತ್ತಾನೆ. ಆತನ ಸಂಕಲ್ಪದಲ್ಲಿ ಎಲ್ಲವೂ ನಿತ್ಯವಾಗಿರುತ್ತದೆ; ನಮ್ಮ ಪರಿಚ್ಛಿನ್ನದೃಷ್ಟಿಯಿಂದ ಆ ರೂಪವು ಆಗಾಗ್ಗೆ ಎದ್ದು ತೋರಿಕೊಳ್ಳುತ್ತದೆ. ಬ್ರಿಟಿಷರ ರಾಜ್ಯಭಾರವು ಇದ್ದಾಗ ಅವರ ಸಾಮ್ರಾಜ್ಯದ ಸತ್ತೆಯನ್ನೂ ವೈಶಾಲ್ಯವನ್ನೂ ಕಂಡು ಅಂಜುತ್ತಿದ್ದ. ಈ ದೇಶದಲ್ಲಿಯೇ ಕಾಂಗ್ರೆಸ್ ಎಂಬ ಒಂದು ರಾಜಕೀಯ ಪಕ್ಷವು ಎದ್ದುಕೊಂಡು ಕ್ರಮಕ್ರಮವಾಗಿ ಪ್ರಬಲವಾಗಿ "ಈ ದೇಶವನ್ನು ಬಿಟ್ಟು

ತೊಲಗಿ!" ಎಂದು ಹೇಳುವ ಎದೆಯನ್ನು ಸಂಪಾದಿಸಿಕೊಳ್ಳುವದೆಂದೂ ಕೊನೆಗೆ ಅದರಂತೆ ನಡೆದೇ ತೀರುವದೆಂದೂ ಆಗ ಯಾರು ತಿಳಿದಿದ್ದರು? ಇದರಂತೆಯೇ ಭಗವಂತನ ಸಂಕಲ್ಪದಂತೆ ನಡೆಯಬೇಕಾದದ್ದೆಲ್ಲವೂ ನಡೆದೇ ಇರುತ್ತದೆಯಾದರೂ ಲೋಕದೃಷ್ಟಿಯಿಂದ ಇನ್ನು ಮುಂದೆ ನಡೆಯಬೇಕಾಗಿರುತ್ತದೆ. ಅದಕ್ಕಾಗಿ ಈ ಕಾಲ ರೂಪವನ್ನು ಆತನು ಧರಿಸಿರುತ್ತಾನೆ. ಇದೊಂದು ಆತನ ಹೊಸ ಉಡುಪು. ಸೃಷ್ಟಿ, ಸ್ಥಿತಿ, ಪ್ರಲಯ - ಇವುಗಳಿಗೆ ತಕ್ಕಂತೆ ಆತನು ಬೇರೆಬೇರೆಯ ರೂಪವನ್ನು ಧರಿಸುತ್ತಲೇ ಇರುತ್ತಾನೆ. "ನಮಗೆ ಜಯವಾಗುವದೋ, ಅವರೇ ಜಯಿಸುವರೋ ಯಾರು ಬಲ್ಲರು ? ಎಂದು ಕೇಳಿದ್ದ ಅರ್ಜುನನಿಗೆ ಯಾರಯಾರ ದೆಸೆಯಿಂದ ಸೋಲಿನ ಅಂಜಿಕೆಯಿತ್ತೋ ಅವರೆಲ್ಲರೂ ಸತ್ತಿರುವರೆಂಬ ನಂಬಿಕೆಯನ್ನಿತ್ತು "ಏಳು; ಯುದ್ಧ ಮಾಡು, ಜಯಿಸುವೆ" ಎಂದಿರುತ್ತಾನೆ.

ನಾವು ಈ ವಿಷಯವನ್ನು ಚೆನ್ನಾಗಿ ಮನಸ್ಸಿನಲ್ಲಿಡಬೇಕು. ನಮ್ಮ ಸಂಕಲ್ಪದಂತೆ ಯಾವದೂ ನಡೆಯುತ್ತಿಲ್ಲ. ಈ ಸಂಕಲ್ಪಗಳೆಲ್ಲ ಭಗವಂತನ ಮಹಾಸಂಕಲ್ಪದ ಸಮುದ್ರದಲ್ಲಿ ಏಳುವ ಕ್ಷುದ್ರತರಂಗಗಳು. ಇವುಗಳಿಗೆ ಯಾವದಕ್ಕೂ ಸ್ವಾತಂತ್ರ್ಯವಿಲ್ಲ. ಹಾಗೆ ಮಾಡುತ್ತೇನೆ ಹೀಗೆ ಮಾಡುತ್ತೇನೆ ಎಂಬ ಸಂಕಲ್ಪವು ನಮಗೆ ಬೇಡ. 'ಎಲ್ಲವೂ ಭಗವಂತನ ಸಂಕಲ್ಪದಂತೆ ನಡೆಯುವದು' ಎಂಬ ದೃಢಚಿತ್ತವಿರಲಿ. ನಾವು ಆತನ ಲೀಲಾನಾಟಕಕ್ಕೆ ನಿಮಿತ್ತಮಾತ್ರರು. ಇದನ್ನು ಅರಿತಿರೋಣ. ಭಗವಂತನ ಈ ಮಾತನ್ನು ಕೇಳಿ ಅರ್ಜುನನ ಸೊಕ್ಕಡಗಿತು, ಗಡಗಡನೆ ನಡುಗುತ್ತಾ ನಮಸ್ಕರಿಸಿ, ಗದ್ಗದಧ್ವನಿಯಿಂದ, ಮಹಾಭೀತಿಯಿಂದ ಭಗವಂತನನ್ನು ಸ್ತೋತ್ರಮಾಡಲಾರಂಭಿಸಿದನು. ಅದನ್ನು ಇನ್ನೊಂದು ದಿವಸದ ಉಪನ್ಯಾಸಕ್ಕೆ ಇಟ್ಟುಕೊಳ್ಳೋಣ.

ಸಂಜಯನು ಅರ್ಜುನನ ಸ್ಥಿತಿಯನ್ನೂ ಭಗವಂತನ ವಾಕ್ಯವನ್ನೂ ನಡೆದದ್ದು ನಡೆದಂತೆ ದಿವ್ಯದೃಷ್ಟಿಯಿಂದ ಅರಿತು ಧೃತರಾಷ್ಟ್ರನಿಗೆ ಹೇಳಿದನು. ಆಗಲಾದರೂ ಆ ಹುಟ್ಟುಕುರುಡನು ಎಚ್ಚೆತ್ತುಕೊಳ್ಳಲಿಲ್ಲ. ದ್ರೋಣಾದಿಗಳೂ ಹೋದಮೇಲೆ ನನ್ನ ಮಗನ ಪಾಡೇನು? - ಎಂದು ಅವನು ಆಗಲಾದರೂ ಯೋಚಿಸಬಹುದಾಗಿತ್ತು. ಭಗವಂತನು ಅರ್ಜುನನಿಗೇ ಗೆಲುವನ್ನು ಕೊಡಿಸುವ ಸಂಕಲ್ಪವನ್ನು ಮಾಡಿರುತ್ತಾನೆಂದು ತಿಳಿದಮೇಲಾದರೂ ದುರ್ಯೋಧನನಿಗೆ ಹೇಳಿ ಅವನಿಗೆ ಪಾಂಡವರೊಡನೆ ಸಂಧಿಮಾಡಿಸಬಹುದಿತ್ತಲ್ಲವೆ? ಇಲ್ಲ. ಆಗಲೂ ಅವನು ಹಾಗೆ ಮಾಡಲಿಲ್ಲ. ಅದೂ ಭಗವಂತನ ಸಂಕಲ್ಪವೇ. ದುರ್ಯೋಧನಾದಿಗಳ ಅಧರ್ಮವು ಆಗಲೆ ಪಕ್ವವಾಗಿತ್ತು; ಆದ್ದರಿಂದ ಅವರು ಅದರ ಫಲವನ್ನು ಉಣ್ಣಲೇಬೇಕಾಗಿತ್ತು. ಭಗವಂತನ ದೃಷ್ಟಿಯಿಂದ ಆ ಫಲವು ಅವರಿಗೆ ಆಗಲೆ ದೊರಕಿಯೇಬಿಟ್ಟಿತ್ತು! ಹರಿಚಿತ್ತಕ್ಕೂ ನರಚಿತ್ತಕ್ಕೂ ಅಷ್ಟು ಅಂತರವಿದೆ!

# ೮೩. ಅರ್ಜುನನು ಮಾಡಿದ ಭಗವತ್ ಸ್ತೋತ್ರ ೧೧-(೩೬-೪೩)

(೩೦-೫-೪೮)

ಅರ್ಜುನನು ಭಗವಂತನ ಉಗ್ರರೂಪವನ್ನೂ ಆತನು ಲೋಕದ ಕ್ಷಯಕ್ಕೆಂದೇ ಕಾಲರೂಪದಿಂದ ಪ್ರವೃತ್ತನಾಗಿದ್ದೇನೆಂದೂ ಎಲ್ಲರೂ ಆಗಲೆ ತನ್ನಿಂದ ಹತರಾಗಿರುವರೆಂದೂ ಹೇಳಿದ ಮಾತನ್ನು ಕೇಳಿ ಅತ್ಯಂತಭೀತನಾಗಿ ಗದ್ಗದಕಂಠದಿಂದ ಹೀಗೆಂದು ಸ್ತೋತ್ರಮಾಡುವದಕ್ಕೆ ಉಪಕ್ರಮಿಸಿದನು.

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವನ್ತಿ**
**ಸರ್ವೇ ನಮಸ್ಯನ್ತಿ ಚ ಸಿದ್ಧಸಙ್ಘಾಃ ॥** (೧೧-೩೬)

"ಎಲೈ ಹೃಷಿಕೇಶನೆ, ನಿನ್ನನ್ನು ಕೀರ್ತನಮಾಡುವದರಿಂದ ಜಗತ್ತಿನ ನಿವಾಸಿಗಳೆಲ್ಲರೂ ಅತ್ಯಂತ ಹರ್ಷವನ್ನು ಪಡೆಯುತ್ತಾರೆ, ಅನುರಾಗವನ್ನೂ ಹೊಂದುತ್ತಾರೆ." ತನ್ನಲ್ಲಿ ತನಗೆ ಪ್ರೀತಿಯಿದ್ದೇ ಇರುತ್ತದೆ; ಆದರೆ ಪರಮಾತ್ಮನೇ ತನ್ನ ಸ್ವರೂಪವೆಂದು ತಿಳಿಯುವದರಿಂದ ಆ ಪ್ರೀತಿಯು ಇನ್ನೂ ಹೆಚ್ಚಾಗುತ್ತದೆ. ಪರಮಾತ್ಮನ ವಿಷಯವಾಗಿ ಶಾಸ್ತ್ರದಿಂದಲೂ ಗುರುಗಳಿಂದಲೂ ಕೇಳಿದ ಬಳಿಕ ಆಗುವ ಪ್ರೀತಿಗೆ ಅನುರಾಗವೆಂದು ಹೆಸರು. ಅನಾತ್ಮದಲ್ಲಿ ಆತ್ಮಬುದ್ಧಿಯನ್ನು ಮಾಡಿಕೊಂಡಿರುವವರು ಅದನ್ನು ಕಾಪಾಡಿಕೊಳ್ಳುವದಕ್ಕೆಂದು ಮಾಡಬಾರದ ಕೆಲಸಗಳನ್ನೂ ಮಾಡುತ್ತಾರೆ. ಇನ್ನೊಬ್ಬರಿಗೆ ತೊಂದರೆಯನ್ನು ಕೊಟ್ಟಾದರೂ ತಾವು ಸುಖವಾಗಿರಬೇಕೆಂದು ಹವಣಿಸುತ್ತಾರೆ. ಆದರೆ ಅವರು ತಮ್ಮ ಸ್ವರೂಪವೆಂದು ತಿಳಿದುಕೊಂಡಿರುವದು ಅನಾತ್ಮವಾದ್ದರಿಂದ ಅವರಿಗೂ ದುಃಖವೇ ಆಗುತ್ತದೆ. ಪರಮಾತ್ಮನ ಗುಣಗಳನ್ನು ಕೀರ್ತನೆಮಾಡುವದು ರಾಕ್ಷಸರ ಕಿವಿಗೆ ಬಿದ್ದರೆ ಅವರು ದಿಕ್ಕಾಪಾಲಾಗಿ ಓಡುತ್ತಾರೆ. ಸಿದ್ಧರುಗಳು, ಎಂದರೆ ತಪಸ್ಸು, ಯೋಗ - ಮುಂತಾದವುಗಳ ಸಿದ್ಧಿಯನ್ನು ಪಡೆದವರು, ಆ ಮಹಾತ್ಮನಿಂದಲೇ ತಮ್ಮಲ್ಲಿ ಸಿದ್ಧಿಗಳು ಪ್ರಕಟವಾಗಿರುವವು ಎಂದು ಸಂತೋಷದಿಂದ ನಮಸ್ಕರಿಸುತ್ತಾರೆ. "ಎಲೈ ಭಗವಂತನೆ, ಇದೆಲ್ಲವೂ ನಿನ್ನ ವಿಷಯದಲ್ಲಿ ಯುಕ್ತವು. ಇದು ನಿನಗೇ ಸಲ್ಲತಕ್ಕದ್ದು."

ಈ ಶ್ಲೋಕವನ್ನು ಮಂತ್ರಶಾಸ್ತ್ರಜ್ಞರು ರಾಕ್ಷೋಘ್ನಮಂತ್ರವೆಂದು ಉಪಯೋಗಿಸುತ್ತಾರೆ. ಇದನ್ನು ಪುರಶ್ಚರಣೆಮಾಡಿಕೊಂಡು ಸಿದ್ಧರಾದವರು ಯಂತ್ರದಲ್ಲಿ ಬರೆದು ಕಟ್ಟಿದರೆ ಜ್ವರಾದಿಗಳೂ ಭೀತಿಶಂಕೆಯೂ ಹೋಗುವವು - ಎಂದು ಅವರ

ನಂಬಿಕೆಯಿರುತ್ತದೆ. ಸರಿಯಾದ ಸಿದ್ಧಪುರುಷರು ಸಿಕ್ಕದಿದ್ದರೂ ನಾವೇ ಅಹಂಕಾರವಿಲ್ಲದ ಶುದ್ಧಭಾವನೆಯಿಂದ ಪರಮಾತ್ಮನ ಸನ್ನಿಧಿಯನ್ನು ಮನಸ್ಸಿಗೆ ತಂದುಕೊಂಡು ಆತನ ಗುಣದ ಕೀರ್ತನೆಯಿಂದ ಸಕಲಇಷ್ಟಾರ್ಥಗಳೂ ಸಿದ್ಧಿಸುವವೆಂದೂ ಸಕಲ ಅನಿಷ್ಟಗಳೂ ಪರಿಹಾರವಾಗುವವೆಂದೂ ನಂಬಿ ಈ ಶ್ಲೋಕವನ್ನು ಪಠಿಸಿದರೂ ಕಲ್ಯಾಣವಾಗುವದರಲ್ಲಿ ಸಂಶಯವಿಲ್ಲ. ಪರಮಾತ್ಮನ ಭಾವನೆಯಿಂದ ಏನೇನು ಸಿದ್ಧಿಸಲಾರದು? ನಮ್ಮ ದೇಶದಲ್ಲಿ ಯಂತ್ರತಂತ್ರಗಳಲ್ಲಿ ನಂಬಿಕೆಯಿರುವವರು ಬಹಳ. ಎಷ್ಟೋ ಜನರು ಯಾವ ತಂತ್ರಶಾಸ್ತ್ರದ ಪರಿಚಯವಿಲ್ಲದಿದ್ದರೂ ಕಾಮ ಕ್ರೋಧಾದಿಗಳಿಂದ ಚಿತ್ತವು ದೂಷಿತವಾಗಿದ್ದರೂ ಈ ಬಗೆಯ ಮಂತ್ರಗಳಿಂದಲೂ ಯಂತ್ರಗಳಿಂದಲೂ ಇಷ್ಟಾರ್ಥವು ಸಿದ್ಧಿಯಾಗುವದೆಂದು ಎಣಿಸಿರುತ್ತಾರೆ. ತಾವೂ ಮೋಸಹೋಗುವದಲ್ಲದೆ ಮಿಕ್ಕವರನ್ನೂ ವಂಚಿಸುತ್ತಿರುತ್ತಾರೆ. ನಿಜವಾದ ರಹಸ್ಯ ವೇನೆಂದರೆ ಮಂತ್ರವಾಗಲಿ ಯಂತ್ರವಾಗಲಿ ತನ್ನ ರೂಪದಿಂದ ತನ್ನಲ್ಲಿ ಯಾವ ಶಕ್ತಿಯನ್ನೂ ಒಳಗೆ ಇಟ್ಟುಕೊಂಡಿರುವದಿಲ್ಲ; ಅವನ್ನು ಉಪಯೋಗಿಸುವವರ ಮನಸ್ಸು ಪರಿಶುದ್ಧವಾಗಿದ್ದರೆ, ಪರಮೇಶ್ವರನಲ್ಲಿ ಶ್ರದ್ಧಾಭಕ್ತಿಗಳು ಅಚಲವಾಗಿದ್ದರೆ ಮಾತ್ರ, ಅವುಗಳಿಂದ ಆಗಬೇಕಾದ ಫಲವು ಉಂಟಾಗುತ್ತದೆ.

ಇದಂತಿರಲಿ. ಈ ಸ್ತೋತ್ರವನ್ನು ಪಠಿಸಿ ಕ್ಷುದ್ರವಾದ ಫಲಗಳಿಗಾಗಿ ಬಾಯಿನೀರು ಕರೆಯಬಾರದು. ಇದರಿಂದ ನಮಗೆ ಆಗಬೇಕಾದ ಮಹಾಫಲವೊಂದಿದೆ. ಅದು ಶ್ಲೋಕಾರ್ಥವನ್ನು ಮನನಮಾಡುವವರಿಗೆಲ್ಲ ಒಡೆದುಕಾಣುತ್ತದೆ. ಪರಮಾತ್ಮನ ಗುಣಗಳನ್ನು ಭಕ್ತಿಯಿಂದ ಅನುಸಂಧಾನಮಾಡಿಕೊಂಡು ನಾಮವನ್ನು ಉಚ್ಚರಿಸಿದರೆ ಮನಸ್ಸಿಗೆ ಉಲ್ಲಾಸವಾಗುತ್ತದೆ, ಆತನಲ್ಲಿ ಉತ್ತಮವಾದ ಅನುರಾಗವುಂಟಾಗುತ್ತದೆ. ಪರಮೇಶ್ವರನಲ್ಲಿ ಅನುರಾಗರೂಪವಾದ ಭಕ್ತಿಯುಂಟಾದರೆ ಎಲ್ಲಾ ಸಿದ್ಧಿಗಳೂ ಆದಂತೆಯೇ; ಅದಕ್ಕಿಂತ ಹೆಚ್ಚಿನ ಯಾವ ಸಿದ್ಧಿಯೂ ಬೇಕಿಲ್ಲ. ಸಂಸಾರಭಯವನ್ನೇ ನಾಶಗೊಳಿಸುವ ಆತನ ಗುಣಕೀರ್ತನದಿಂದ ಸಣ್ಣಪುಟ್ಟ ಭಯಗಳು ನಾಶವಾಗುವದೇನೂ ಆಶ್ಚರ್ಯವಲ್ಲ, ಇರಲಿ. ಮುಂದಿನ ಸ್ತೋತ್ರವನ್ನು ಕೇಳೋಣ:

**ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್**
**ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।**
**ಅನನ್ತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ತತ್ಪರಂ ಯತ್ ॥** (೧೧-೩೭)

ಭಗವಂತನನ್ನು ಸಿದ್ಧಪುರುಷರು ಕೂಡ ನಮಸ್ಕರಿಸುವರೆಂಬುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಅರ್ಜುನನು ಹೀಗೆನ್ನುತ್ತಿದ್ದಾನೆ: "ನೀನು ಮಹಾತ್ಮನು; ಅಲ್ಪಾತ್ಮರಾದವರಿಗೆ ಯಾರುತಾನೆ ನಮಸ್ಕಾರಮಾಡುವರು? ನೀನು ಎಲ್ಲರಿಗಿಂತಲೂ

ದೊಡ್ಡವನು; ಜಗತ್ತೆಲ್ಲವನ್ನೂ ಸೃಷ್ಟಿಸುವ ಬ್ರಹ್ಮನನ್ನೂ ಸೃಷ್ಟಿಸಿದಾತನು. ನಿನಗಲ್ಲದೆ ಮತ್ತೆ ಯಾರಿಗೆ ನಮಸ್ಕಾರ ಮಾಡಿಯಾರು? ನೀನು ಅನಂತನು, ದೇಶಕಾಲಾದಿ ಪರಿಚ್ಛೇದ ಶೂನ್ಯನು, ಪರಿಚ್ಛಿನ್ನರಾದ ಇಂದ್ರಾದಿಗಳಿಗೂ ಈಶ್ವರನು, ಇಡಿಯ ಜಗತ್ತಿಗೂ ಆಶ್ರಯವಾಗಿರುವವನು. ಇಂದ್ರಾದಿಗಳು ಪರಿಚ್ಛಿನ್ನಾಭಿಮಾನಿಗಳಾದ್ದರಿಂದ ಅವರಿಗೆ ಇರುವ ಹೆಚ್ಚಿನ ಅಣಿಮಾದ್ಯೈಶ್ವರ್ಯಗಳಿಂದ ಅಷ್ಟರಮಟ್ಟಿಗೆ ಪುಣ್ಯರು. ನಾವುಗಳು ತೀರ ಪರಿಚ್ಛಿನ್ನಶಕ್ತಿಯವರು; ಪರಿಚ್ಛಿನ್ನಜ್ಞಾನದವರು. ಇಂದ್ರಾದಿಗಳೂ ಬ್ರಹ್ಮನೂ ಯಾವ ನಿನ್ನೊಳಗೇ ಅಡಕವಾಗಿರುವರೋ, ಯಾವ ನಿನ್ನನ್ನೇ ಪೂಜಿಸುತ್ತಿರುವರೋ, ಅಂಥ ನಿನ್ನನ್ನು ನಾವುಗಳು ಹೇಗೆ ಪೂಜಿಸಬೇಕಾಯಿತು? ನೀನು ಇಂಥದ್ದನ್ನು ಒಳಗೊಂಡಿರುವೆ, ಇಂಥದ್ದನ್ನಿಲ್ಲ- ಎಂದು ಹೇಳುವದಕ್ಕಿಲ್ಲ. ಏಕೆಂದರೆ ನೀನೇ ಸತ್ತು, ನೀನೇ ಅಸತ್ತು, ನೀನೇ ಸದಸತ್ತುಗಳನ್ನು ಮೀರಿರುವ, ಶ್ರುತಿಗಳು 'ನೇತಿ, ನೇತಿ' ಎಂದು, ತಿಳಿಸಿಕೊಡುವ, ಅಕ್ಷರವೆಂಬ ನಾಶರಹಿತ ಪರಮಾರ್ಥವು.

**ತ್ವಮಾದಿದೇವಃ ಪುರುಷಃ ಪುರಾಣ-**
**ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ**
**ತ್ವಯಾ ತತಂ ವಿಶ್ವಮನನ್ತರೂಪ ॥** (೧೧-೩೮)

"ಎಲೈ ಭಗವಂತನೆ, ನೀನೇ ಆದಿದೇವನು. ಮಿಕ್ಕವರಿಗೆಲ್ಲ ದೇವತ್ವವು ನಿನ್ನ ಅನುಗ್ರಹದಿಂದ ಉಂಟಾಗಿರುತ್ತದೆ. ಮೊದಲನೆಯ ಬಿಸಿಯು ಎಂದರೆ ಬೆಂಕಿಯು; ಅದರ ಸಂಪರ್ಕದಿಂದ ಮಿಕ್ಕದ್ದೆಲ್ಲವೂ ಬಿಸಿಯಾಗಬೇಕು. ಅದರಂತೆ ದೇವತ್ವವನ್ನು ದೇವತೆಗಳಿಗೆ ಕೊಟ್ಟಿರುವವನು ನೀನು; ಆದ್ದರಿಂದ ಆದಿದೇವನು. ನೀನು ಪುರುಷನು, ಜಗತ್ತನ್ನೆಲ್ಲ ತುಂಬಿರುವವನು. ನೀನು ಪುರಾಣನು, ಹಿಂದೆಯೂ ಹೊಸಬನೇ ಆಗಿದ್ದವನು. ಇಡಿಯ ಜಗತ್ತಿಗೆಲ್ಲ ನೀನು ಹೆಚ್ಚಿನ ನಿಧಾನವು, ನಿಕ್ಷೇಪಸ್ಥಾನವು. ಏಕೆಂದರೆ ಪರಮಾತ್ಮನಾದ ನಿನ್ನ ಸ್ವರೂಪವೆಂಬ ಬ್ಯಾಂಕಿನಲ್ಲಿಯೇ ಸಮಸ್ತವಿಶ್ವವೂ ಡಿಪಾಜಿಟ್ ಆಗಿರುತ್ತದೆ. ಪೃಥಿವಿಯೇ ಮುಂತಾದ ಒಂದೊಂದು ಭೂತವೂ ಮುಂದುಮುಂದಿನ ಅಪ್ಪು ಮುಂತಾದ ಭೂತದಲ್ಲಿ ಲಯವಾಗುತ್ತದೆ. ಕೊನೆಗೆ ಇಡಿಯ ಜಗತ್ತೇ ನಿನ್ನಲ್ಲಿ ಲಯವಾಗುತ್ತದೆ. ಪ್ರಲಯಕಾಲದಲ್ಲಿ ನಿನ್ನಲ್ಲಿಯೇ ಅಡಗಿದ್ದು ಮತ್ತೆ ಸೃಷ್ಟಿಯಾಗುವವರೆಗೂ ನಿನ್ನ ಅಧೀನವಾಗಿಯೇ ಇದ್ದುಕೊಂಡಿರುತ್ತದೆ. ಆದ್ದರಿಂದ ನೀನು 'ಪರನಿಧಾನವು' ಎಲ್ಲಕ್ಕೂ ಹೆಚ್ಚಿನ ಮೂಲನಿಕ್ಷೇಪಸ್ಥಾನವು. ವ್ಯಾಕೃತವಾದ ಜಗತ್ತು ವೇದ್ಯ (ಅರಿಯಲ್ಪಡತಕ್ಕದ್ದು), ವೇತ್ತೃ (ಅರಿಯುವವನು) ಎಂದು ವಿಂಗಡವಾಗಿರುವದಷ್ಟೆ; ಈ ಎಲ್ಲಾ ರೂಪಗಳಿಂದಲೂ ಕಾಣುತ್ತಿರುವವನು

ಪರಮಾರ್ಥವಾಗಿ ನೀನೇ. ನೊರೆ, ತೆರೆ, ಗುಳ್ಳೆ —ಎಂದು ಕಾಣುತ್ತಿರುವದೆಲ್ಲವೂ ಸಮುದ್ರವೇ ಅಲ್ಲವೇ? ಇದೂ ಅಲ್ಲದೆ ನಿತ್ಯವಾದ ನಿನ್ನ ಚೈತನ್ಯರೂಪದಿಂದ ಎಲ್ಲವನ್ನೂ ಅರಿಯುತ್ತಿರುವದರಿಂದ ನೀನು ವೇತ್ತೃ. ನಿನ್ನನ್ನು ಅರಿತಲ್ಲದೆ ಯಾರಿಗೂ ಅಜ್ಞಾನವು ಆತ್ಯಂತಿಕವಾಗಿ ಹೋಗುವದಿಲ್ಲವಾದ್ದರಿಂದ 'ನಾರಾಯಣಂ ಮಹಾಜ್ಞೇಯಮ್' ಎಂಬ ಶ್ರುತಿಯು ಹೇಳುವಂತೆ ನೀನೇ ವೇದ್ಯವು. ನೀನೇ ಪರಮಧಾಮವು, ನಿನ್ನನ್ನು ಸೇರಿದರೇ ಜನರಿಗೆ ಪರಮವಿಶ್ರಾಂತಿಯು ದೊರಕುವ ಸ್ಥಾನವು ಸಿಕ್ಕಿದಂತೆ ಆಗುವದು. ಈ ವಿಶ್ವವೆಲ್ಲವೂ ನಿನ್ನಿಂದಲೇ ಸಾಮಾನ್ಯರೂಪದಿಂದ ವ್ಯಾಪ್ತವಾಗಿರುವದು. ಬಿಡಿಬಿಡಿಯಾದ ಅನಂತರೂಪಗಳೆಲ್ಲವೂ ನಿನ್ನವೇ; ನಿನ್ನ ಸ್ವರೂಪವು ಪರಮಾರ್ಥವಾಗಿ ಅನಂತವಾಗಿಯೇ ಇರುತ್ತದೆ."

**ವಾಯುರ್ಯಮೋಽಗ್ನಿರ್ವರುಣಃ ಶಶಾಙ್ಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥** (೧೧-೩೯)

"ನೀನೇ ವಾಯು, ಯಮ, ಅಗ್ನಿ, ವರುಣ, ಚಂದ್ರ - ಮುಂತಾದ ವ್ಯಷ್ಟಿ ದೇವತೆಗಳು, "ಏಕಂ ಸದ್ವಿಪ್ರಾ ಬಹುಧಾ ವದನ್ತಿ" ಎಂಬ ವೇದವಾಕ್ಯವು ಹೇಳುತ್ತಿರುವಂತೆ ಇರುವವನು ನೀನೊಬ್ಬನೇ, ನಿನ್ನನ್ನೇ ಹಲವರು ಹಲವು ರೂಪಗಳಿಂದಲೂ ನಾಮಗಳಿಂದಲೂ ಕಾಣುತ್ತಿರುವರು. ದೇವತೆಗಳು ಬೇರೆಬೇರೆಯಾಗಿರುವರು ಎಂದು ತಿಳಿಯುವವರಿಗೇ ದೇವತೆಗಳ ಮಹತ್ತ್ವವು ಎದ್ದು ಕಾಣುತ್ತಿರುವದು; ಇನ್ನು ನೀನೊಬ್ಬನೇ ವಾಯ್ವಾದಿಸಮಸ್ತದೇವತೆಗಳ ರೂಪದಲ್ಲಿಯೂ ಕಾಣಿಸಿಕೊಳ್ಳುತ್ತಿರುವೆ ಎಂಬ ಪರಮಾರ್ಥವನ್ನು ತಿಳಿದವರಿಗೆ ಹೇಳತಕ್ಕದ್ದೇನಿದೆ? ನೀನೇ ಎಲ್ಲರಿಗೂ ತಂದೆಯಾಗಿರುವ ಪ್ರಜಾಪತಿಯು, ವಿರಾಟ್ಪುರುಷನು. ನೀನೇ ಪ್ರಜಾಪತಿಗೂ ತಂದೆಯಾದ ಹಿರಣ್ಯಗರ್ಭನಾಗಿರುವದರಿಂದ ಪಿತಾಮಹನು, ಮತ್ತು ಅವನಿಗೂ ಆದಿಕಾರಣನಾಗಿರುವದರಿಂದ ಪ್ರಪಿತಾಮಹನು. ನಿನಗೆ ನಮಸ್ಕಾರ, ನಮಸ್ಕಾರ! ಸಾವಿರಬಾರಿ ನಮಸ್ಕಾರ!" ಅರ್ಜುನನು ಸಾವಿರ ಸಲ ನಮಸ್ಕಾರ ಹಾಕಿದನು ಎಂಬುದು ಲೆಕ್ಕವಲ್ಲ; ಅವನ ಅಹಂಕಾರವೆಲ್ಲ ಅಡಗಿಹೋಗಿತ್ತು. ಸಾವಿರ ನಮಸ್ಕಾರ ಎಂದರೆ ಅನಂತನಮಸ್ಕಾರ! ಎಂದರ್ಥ. ಅರ್ಜುನನು ದೇಹದಿಂದ ಒಂದುಸಲ ಮಾಡುವದರೊಳಗಾಗಿ ಹೃದಯದಲ್ಲಿ ಸಾವಿರ ಸಲ ಮಾಡಿರುತ್ತಾನೆ. ಅರ್ಜುನನು ಮಾಡಿದ ನಮಸ್ಕಾರಗಳನ್ನು ಅಶ್ವತ್ಥಪ್ರದಕ್ಷಿಣೆಯ ಸಂಖ್ಯೆಯಂತೆ ಅಳೆಯುವದಕ್ಕೆ ಆಗುವದಿಲ್ಲ.

ನಮಃ ಪುರಸ್ತಾದಥ ಪೃಷ್ಠತಸ್ತೇ
ನಮೋಽಸ್ತು ತೇ ಸರ್ವತ ಏವ ಸರ್ವ ।
ಅನಂತವೀರ್ಯಾಮಿತವಿಕ್ರಮಸ್ತ್ವಂ
ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥ (೧೧-೪೦)

ಭಗವಂತನು ಸರ್ವವ್ಯಾಪಕನು. ಅವನಿಗೆ ಹಿಂದು, ಮುಂದು - ಎಂದು ದಿಗ್ದೇಶಗಳನ್ನು ಕಲ್ಪಿಸುವದಕ್ಕೆ ಆಗುವದಿಲ್ಲ. ಹಿಂದು, ಮುಂದು ಎಲ್ಲವೂ ಆತನೇ. ಈ ವಿಶ್ವರೂಪದಿಂದಲೂ ಅವನು ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವಂತೆ ಕಾಣಿಸುತ್ತಿದ್ದಾನೆ. ಆದ್ದರಿಂದ ಅರ್ಜುನನು ಅವನಿಗೆ ಎಲ್ಲೆಲ್ಲಿಯೂ ನಮಸ್ಕಾರಮಾಡುತ್ತಿದ್ದಾನೆ. ಸರ್ವವ್ಯಾಪಕನಾದ್ದರಿಂದ ಅವನು ಸರ್ವನೇ ಆಗಿರುತ್ತಾನೆ. "ಎಲೈ ಅನಂತವೀರ್ಯನೆ, ಅಪರಿಮಿತವಾದ ವಿಕ್ರಮವುಳ್ಳಾತನೆ, ನಿನಗೆ ನಮಸ್ಕಾರ! ನೀನು ಸರ್ವವನ್ನೂ ವ್ಯಾಪಿಸಿಕೊಂಡಿರುತ್ತೀಯೆ; ಆದ್ದರಿಂದ ಸರ್ವನಾಗಿರುತ್ತೀಯೆ" ಎಂದು ಅರ್ಜುನನು ಕೊಂಡಾಡಿರುವದು ವಿಶ್ವರೂಪವನ್ನೇ ಆದರೂ ಪರಮಾರ್ಥಸ್ವರೂಪಕ್ಕೂ ಅದು ಹೊಂದುತ್ತದೆ. ಏಕೆಂದರೆ ಪರಮಾತ್ಮನು ಎಲ್ಲವನ್ನೂ ಸಂಪೂರ್ಣವಾಗಿ ವ್ಯಾಪಿಸಿಕೊಂಡಿರುತ್ತಾನಾದ್ದರಿಂದ ಅವನಿಗಿಂತ ಬೇರೆ ಯಾವದೂ ಇರುವದೇ ಇಲ್ಲ; ನಾವು ಯಾವ ಯಾವದನ್ನು ಪರಮಾತ್ಮನಿಗಿಂತ ಬೇರೆ ಎಂದು ಕಲ್ಪಿಸಿಕೊಂಡಿರುವೆವೋ ಅದೆಲ್ಲವನ್ನೂ ಸಂಪೂರ್ಣವಾಗಿ ವ್ಯಾಪಿಸಿಕೊಂಡಿರುತ್ತಾನೆ. ಆದ್ದರಿಂದ ಈ ಸಂಪೂರ್ಣ ವ್ಯಾಪ್ತಿಯು ಪರಮಾತ್ಮನಿಗಿಂತ ಅತಿರಿಕ್ತವಾಗಿ ಯಾವದೊಂದೂ ಇಲ್ಲ ಎಂಬ ಅಭಿಪ್ರಾಯದಲ್ಲಿಯೇ ವಿಶ್ರಾಂತವಾಗುವದು.

ಭಗವಂತನ ಈ ನಿರತಿಶಯವಾದ ಸ್ವರೂಪವೆಲ್ಲಿ, ತನ್ನ ಪರಿಚ್ಛಿನ್ನಜ್ಞಾನಶಕ್ತಿಗಳ ಸ್ವರೂಪವೆಲ್ಲಿ! —ಎಂಬ ಅಜಗಜಾಂತರವಾದ ತಾರತಮ್ಯವು ಮನಸ್ಸಿಗೆ ಹೊಳೆಯಲು ಅರ್ಜುನನು ಹೀಗೆನ್ನುತ್ತಿದ್ದಾನೆ.

ಸಖೇತಿ ಮತ್ವಾ ಪ್ರಸಭಂ ಯದುಕ್ತಂ
ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।
ಅಜಾನತಾ ಮಹಿಮಾನಂ ತವೇದಂ
ಮಯಾ ಪ್ರಮಾದಾತ್ ಪ್ರಣಯೇನ ವಾಪಿ ॥ (೧೧-೪೧)

ಯಚ್ಚಾವಹಾಸಾರ್ಥಮಸತ್ಕೃತೋಽಸಿ
ವಿಹಾರಶಯ್ಯಾಸನಭೋಜನೇಷು ।
ಏಕೋಽಥವಾಪ್ಯಚ್ಯುತ ತತ್ಸಮಕ್ಷಂ
ತತ್ ಕ್ಷಾಮಯೇ ತ್ವಾಮಹಮಪ್ರಮೇಯಮ್ ॥ (೧೧-೪೨)

"ದೊಡ್ಡವರು ಸಲುಗೆಯಿಂದ ಇದ್ದಷ್ಟೂ ನಮಗೆ ಮೋಸವಾಗುವದು. ನಾನು ಈ ಭಗವಂತನು ನನ್ನಲ್ಲಿ ಸಲುಗೆಯಿಂದ ವ್ಯವಹರಿಸಿದ್ದರಿಂದ ಈತನ ಮಹಾಮಹಿಮೆ ಯನ್ನರಿಯದೆ, ಇವನು ನನ್ನ ಗೆಳೆಯನೆಂದು ಬಗೆದೆನಲ್ಲ! 'ಎಲೆ ಕೃಷ್ಣ, ಎಲೆ ಯಾದವ, ಗೆಳೆಯ', ಎಂದು ಸಲೀಸಾಗಿ ಕರೆಯುತ್ತಿದ್ದೆನಲ್ಲ! ಎಂಥ ಪ್ರಮಾದವಾಯಿತು! ಪ್ರೇಮದ ಭರದಲ್ಲಿ ಎಂಥೆಂಥ ಮಾತುಗಳನ್ನು ಆಡಿ ಬಿಟ್ಟಿರುವೆನು! ಎಲೈ ಭಗವಂತನೆ, ಓಡಾಡುವಾಗ, ಮಲಗುವಾಗ, ಕುಳಿತಿರುವಾಗ ಅಥವಾ ಊಟ ಮಾಡುತ್ತಿರುವಾಗ, ಒಬ್ಬನೇ ಇದ್ದಾಗ ಅಥವಾ ಮತ್ತೊಬ್ಬರ ಎದುರಿಗೆ ಏನೇನು ಅಸತ್ಕಾರವನ್ನು ಮಾಡಿರುವೆನೋ, ಅದೆಲ್ಲವೂ ಅಪ್ರಮೇಯನಾದ ನಿನ್ನ ಪರಮ ಸ್ವರೂಪವನ್ನು ಅರಿಯದೆ ನಾನು ಮಾಡಿರುವದು. ದಯಾಮಯನಾದ ನೀನು ಅದೆಲ್ಲವನ್ನೂ ಕ್ಷಮಿಸಬೇಕು!"

ಅರ್ಜುನನು ಹೀಗೆ ಬೇಡಿಕೊಂಡಿರುವದನ್ನು ಮನದಂದಾದರೂ ನಾವು ಭಗವಂತನ ವಿಷಯದಲ್ಲಿ ಮಾಡಿರುವ ಮಹಾಪರಾಧವನ್ನು ನೆನಪಿಸಿಕೊಳ್ಳಬೇಕು. ಪರಮಾತ್ಮನೊಬ್ಬನು ಇದ್ದಾನೆ ಎಂಬುದನ್ನೇ ನಾವು ಮರೆತಿದೇವೆ! ನಮ್ಮದು ಎಷ್ಟು ದೊಡ್ಡ ಅಪರಾಧವಾಯಿತು! ನಾವು ಎಲ್ಲಾ ಬಗೆಯಿಂದಲೂ ಪ್ರಮಾದದಿಂದ ವರ್ತಿಸಿರುತ್ತೇವೆ; ಪರಮೇಶ್ವರನನ್ನೇ ಅಸಡ್ಡೆ ಮಾಡಿಬಿಟ್ಟಿರುತ್ತೇವೆ! ಸುಖ, ದುಃಖ, ಅಜ್ಞಾನ, ಶೋಕ, ಜಯ, ಲಾಭ, ಭಯ, ರೋಗ, ಐಶ್ವರ್ಯ, ಬಡತನ - ಯಾವ ನಿಮಿತ್ತದಿಂದಲೂ ನಾವು ಭಗವಂತನನ್ನು ಜ್ಞಾಪಿಸಿಕೊಂಡಿಲ್ಲ; ಆತನು ಸರ್ವಥಾ ಇಲ್ಲದಿದ್ದರೆ ಹೇಗೋ ಹಾಗೆಯೇ ವರ್ತಿಸಿರುತ್ತೇವೆ! ಆದ್ದರಿಂದ ಅರ್ಜುನನಿಗಿಂತಲೂ ಹೆಚ್ಚಾಗಿ ನಮಗೆ ಪಶ್ಚಾತ್ತಾಪವುಂಟಾಗುವದಕ್ಕೆ ಕಾರಣವಿದೆ. "ಭಗವಂತ, ನಾವು ತಿಳಿಯದೆ ಈವರೆಗೆ ಮಾಡಿರುವ ಅಸತ್ಕಾರವನ್ನೆಲ್ಲ ಕ್ಷಮಿಸು" ಎಂದು ಹೃದಯ ಪೂರ್ವಕವಾಗಿ ಪ್ರಾರ್ಥಿಸಿಕೊಳ್ಳೋಣ; ಪಶ್ಚಾತ್ತಾಪದಿಂದ ಮನುಷ್ಯನ ಪಾಪವೆಲ್ಲ ತೊಳೆದು ಹೋಗುವದು! ಅವನು ಹೊಸ ಮನುಷ್ಯನಾಗುತ್ತಾನೆ. ಅಂಥವನಿಗೇ ಪರಮಾತ್ಮನ ದರ್ಶನವಾಗುವದು.

---

## ೮೮. ಅರ್ಜುನನ ಪಶ್ಚಾತ್ತಾಪ ೧೧-(೪೩-೪೫)

### (೬-೬-೪೮)

ಅರ್ಜುನನಿಗೆ, ಮಹಾಮಹಿಮನಾದ ಭಗವಂತನನ್ನು ತಾನು ಸಲುಗೆಯಿಂದ ಸಾಧಾರಣ ಮನುಷ್ಯರನ್ನು ಕಾಣುವಂತೆ ಕಂಡೆನಲ್ಲ! ಎಂದು ಪಶ್ಚಾತ್ತಾಪವುಂಟಾಗಿದೆ.

'ಅಪ್ರಮೇಯನಾದ ನಿನ್ನನ್ನು ಕ್ಷಮೆಬೇಡುತ್ತೇನೆ' ಎಂದು ಕಣ್ಣೀರಿಟ್ಟು ಪ್ರಾರ್ಥಿಸಿರುತ್ತಾನೆ. ಪರಮಾತ್ಮನ ಮಹಿಮೆ ಎಂಥದ್ದು! ಅರ್ಜುನನು ಹೀಗೆನ್ನುತ್ತಿದ್ದಾನೆ:

**ಪಿತಾಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವ ॥** (೧೧-೪೩)

"ನೀನು ಲೋಕತ್ರಯವನ್ನೂ ಹಡೆದವನು, ಸ್ಥಾವರಜಂಗಮಗಳಿಗೆಲ್ಲ ನಿನ್ನಿಂದಲೇ ಇರವು ಉಂಟಾಗಿರುತ್ತದೆ. ನೀನೇ ಮೂರು ಲೋಕಕ್ಕೂ ಪೂಜ್ಯನು, ನೀನೇ ದೊಡ್ಡ ಗುರು." ಹಿಂದೆ ಭಗವಂತನನ್ನು ಅರ್ಜುನನು "ನಿನ್ನ ಶಿಷ್ಯನಾಗಿರುತ್ತೇನೆ; ನನಗೆ ಯಾವದನ್ನು ಮಾಡಬೇಕು ಯಾವದನ್ನು ಮಾಡಬಾರದು ಎಂಬ ವಿಷಯದಲ್ಲಿ, ದಿಕ್ಕುತೋಚದಂತೆ ಆಗಿರುತ್ತದೆ. ದಯವಿಟ್ಟು ಶರಣುಬಂದಿರುವ ನನಗೆ ಬುದ್ಧಿಹೇಳು" ಎಂದು ಕೇಳಿಕೊಂಡಿದ್ದನು. ಆ ಸ್ಥಿತಿಯೇ ಬೇರೆ. ಆಗ ಸ್ವಜನರನ್ನು ಕಂಡು ಅವರನ್ನು ಹೊಡೆಯಲೊ ಬೇಡವೊ? ಯುದ್ಧದಲ್ಲಿ ಪ್ರವೇಶಮಾಡಬೇಕೊ, ಬಾರದೊ? ಅದೇನು ಪಾಪಕೃತ್ಯವೊ, ಪುಣ್ಯಕರ್ಮವೊ? - ಎಂಬ ಸಂದೇಹವು ಅರ್ಜುನನಿಗೆ ಬಂದಿತ್ತು. ಶ್ರೀಕೃಷ್ಣನಿಗಿಂತ ಹೊರಚ್ಚಾಗಿ ತಾನೊಬ್ಬ ವ್ಯಕ್ತಿಯಾಗಿ ನಿಂತುಕೊಂಡದ್ದು ಅದು, ಆದರೆ ಈಗ ಹಾಗಿಲ್ಲ.

"ಶ್ರೀಕೃಷ್ಣನೆ, ನಾನು ಈ ಸುಖದುಃಖಗಳಿಗೆ ಸಿಕ್ಕಿದವನು; ಈಗ ಧರ್ಮಾಧರ್ಮಗಳ ಜ್ಞಾನಾಜ್ಞಾನವಿಲ್ಲದೆ ಇದೇನೆ. ನಿನಗೇನೂ ಈ ವಿಚಾರಗಳ ಕ್ಲೇಶವಿಲ್ಲವಷ್ಟೆ, ನೀನು ಈ ಕೋಟಲೆಯಿಂದ ಹೊರಗಾಗಿರುವದರಿಂದ ನನಗೆ ಬುದ್ಧಿ ಹೇಳುವದಕ್ಕೆ ಶಕ್ತನಾಗಿರುವೆ" ಎಂದು ಅರ್ಜುನನು ನಮ್ಮಂಥವರು ಸ್ನೇಹಿತರಲ್ಲಿ ಮಂತ್ರಾಲೋಚನೆ ಮಾಡುವಂತೆ ಕೇಳಿದ್ದನು. ಆದರೆ ಈಗ ಹಾಗಲ್ಲ. ಶ್ರೀಕೃಷ್ಣನು ಅಜನೂ ಅವ್ಯಯನೂ ಆದ ಪರಮೇಶ್ವರನೆಂದೂ ಅವನು ಧರ್ಮಸಂಸ್ಥಾಪನೆಗಾಗಿ ಹಲವು ಬಾರಿ ಅವತರಿಸಿರುತ್ತಾನೆಂದೂ ಅವನಿಗೆ ತಿಳಿದುಹೋಗಿದೆ. ಕರ್ಮಯೋಗ, ಧ್ಯಾನಯೋಗ, ಭಕ್ತಿಯೋಗ, ಜ್ಞಾನಯೋಗಗಳ ತಾರತಮ್ಯವನ್ನು ಆತನಿಂದ ತಿಳಿದುಕೊಂಡದ್ದೂ ಆಗಿರುತ್ತದೆ. ಇಷ್ಟೇ ಅಲ್ಲ. ಆ ಶ್ರೀಕೃಷ್ಣಭಗವಂತನೇ ತನ್ನ ಸತ್ಯಸಂಕಲ್ಪದಿಂದ ಇಡಿಯ ಲೋಕದಲ್ಲಿಯೇ ಅಧರ್ಮವು ಉಳಿಯದಂತೆ ಮಾಡುವದಕ್ಕಾಗಿ ಈಗ ಅವತರಿಸಿರುತ್ತಾನೆಂಬುದೂ ಯಾರು ಸಹಾಯಮಾಡಲಿ, ಬಿಡಲಿ, ಆತನ ಕಾರ್ಯಕ್ಕೆ ಯಾವದೂ ಅಡ್ಡಿಯಾಗುವಂತಿಲ್ಲವೆಂಬುದೂ ಪರಮಾರ್ಥವಾಗಿ ಕೌರವಾದಿಗಳ ಹನನವು ಆಗಲೇ

ಆಗಿಹೋಗಿದೆಯೆಂಬುದೂ ಮನದಟ್ಟಾಗಿ ಬಿಟ್ಟಿದೆ. ಆದ್ದರಿಂದ ಭಗವಂತನೆ, ನೀನು ಗುರುಗಳಿಗೂ ಗುರುವು; ತತ್ತ್ವಾರ್ಥವನ್ನೆಲ್ಲ ನಿನ್ನ ನಿತ್ಯಜ್ಞಾನದಿಂದ ಅರಿತುಕೊಂಡು ನನಗೆ ದಯವಿಟ್ಟು ಉಪದೇಶಿಸಿರುತ್ತೀಯೆ" ಎಂದು ಸ್ತುತಿಸಿರುತ್ತಾನೆ.

ಈ ಸಂದರ್ಭದಲ್ಲಿ ಗುರುಭಕ್ತಿಯ ವಿಷಯವಾಗಿ ಒಂದಿಷ್ಟು ಹೇಳತಕ್ಕದ್ದು ಅವಶ್ಯವಾಗಿರುತ್ತದೆ. ನಮ್ಮ ದೇಶದಲ್ಲಿ ಗುರುವಿಗೆ ಬಹಳ ಹೆಚ್ಚಿನ ಸ್ಥಾನವಿರುತ್ತದೆ. ಗುರುವೆಂದರೆ ಸಾಕ್ಷಾತ್ಪರಮೇಶ್ವರನೇ ಎಂಬುದು ಒಂದು ಉತ್ಕೃಷ್ಟಭಾವನೆ. ಕೆಲವು ಮತಗಳಲ್ಲಿ ಗುರುವನ್ನು ದೇವರ ದೂತನೆಂದು ಭಾವಿಸಲಾಗಿದೆ. ಈಶ್ವರನಿಗೆ ಸಮಾನರು ಯಾರೂ ಇಲ್ಲ; ಅವನಿಗೆ ಸರಿತೂಗುವವರೆಂದು ಮಿಕ್ಕ ಯಾವ ಸೃಷ್ಟಚೇತನರನ್ನೂ ಎಣಿಸಬಾರದು ಎಂಬ ಭಾವನೆಯು ಆ ನಂಬಿಕೆಯಲ್ಲಿ ಅಡಗಿರುತ್ತದೆ. ಮತ್ತೆ ಕೆಲವರು ನಮಗೆ ಹಿತವನ್ನು ಹೇಳುವವರು ಗುರುಗಳು ಎಂದಷ್ಟೇ ಒಪ್ಪುತ್ತಾರೆ. ಆದರೆ "ಗುರುರ್ಬ್ರಹ್ಮಾ ಗುರುರ್ವಿಷ್ಣು ಗುರುರೇವ ಮಹೇಶ್ವರಃ, ಗುರುಃ ಸಾಕ್ಷಾತ್ಪರಂಬ್ರಹ್ಮ ತಸ್ಮೈಃ ಶ್ರೀಗುರವೇ ನಮಃ" ಎಂಬಷ್ಟು ಉತ್ಕೃಷ್ಟಭಾವನೆಯು ಮತ್ತೆ ಯಾವದೂ ಇರುವದಿಲ್ಲ. ಗುರುವನ್ನು ಕಂಡರೆ ಪರಮಾರ್ಥವೇ ಮೂರ್ತಿಮಂತವಾಗಿ ನಮ್ಮೆದುರಿಗೆ ಇದೆ ಎಂಬ ಭಾವನೆ ಬರಬೇಕು ಎಂಬುದು ನಮ್ಮ ದೇಶದ ವಾಙ್ಮಯವನ್ನು ಬಿಟ್ಟರೆ ಮತ್ತೆಲ್ಲಿಯೂ ಉಪದಿಷ್ಟವಾಗಿರುವದಿಲ್ಲ.

ಇದರಲ್ಲಿ ಆನುಕೂಲ್ಯವಿರುವಷ್ಟೇ ಅಪಾಯವೂ ಇದೆ. ಏಕೆಂದರೆ ಇಂಥ ಉದಾತ್ತವಾದ ಭಾವನೆಗೆ ತಕ್ಕ ಗುರುವನ್ನೇ ನಾವು ಹುಡುಕಬೇಕಾಗುತ್ತದೆ. ನಾವು ಇನ್ನೂ ತತ್ತ್ವವನ್ನು ತಿಳಿಯದೆ ಇರುವ ದಶೆಯಲ್ಲಿ ಇಂಥವರೊಬ್ಬರು ಎಲ್ಲಾ ದೃಷ್ಟಿಯಿಂದಲೂ ಸರ್ವಗುಣಸಂಪನ್ನರಾದವರು, ಗುರುಗಳಾಗುವದಕ್ಕೆ ತಕ್ಕವರು ಎಂದು ಅರಿಸಿಕೊಳ್ಳುವದಕ್ಕೆ ಆಗುವಹಾಗಿಲ್ಲ. ಆದರೂ ನಮಗೆ ಗುರುಗಳಿಲ್ಲದೆ ಕೆಲಸವಾಗುವದಿಲ್ಲ ಎಂಬುದು ಗೊತ್ತಾಗಿರುವದರಿಂದ ಯಾರಾದರೊಬ್ಬರನ್ನು ಗುರುಗಳಾಗಿ ಆರಿಸಿಕೊಂಡುಬಿಡುತ್ತೇವೆ. ಈ ಸಂದರ್ಭದಲ್ಲಿ ಸರಿಯಾದ ಗುರು ಸಿಕ್ಕದೆ ಇದ್ದರೆ, ನಮಗೆ ಪುರುಷಾರ್ಥಪ್ರಾಪ್ತಿಯಾಗುವದು ಹಾಗಿರಲಿ, ಅನರ್ಥವೇ ಆಗಿಬಿಡಬಹುದು.

ಗುರುಗಳಿಗೆ ಯಾವ ಲಕ್ಷಣಗಳಿರಬೇಕು? ಶಾಸ್ತ್ರದಲ್ಲಿ ಹೀಗೆಂದು ಹೇಳಿರುತ್ತದೆ. ಗುರುವು ಶ್ರೋತ್ರಿಯನಾಗಿರಬೇಕು, ಶಾಸ್ತ್ರಾರ್ಥವನ್ನು ಚೆನ್ನಾಗಿ ತಿಳಿದವನಾಗಿರಬೇಕು, ಅವೃಜಿನನಾಗಿರಬೇಕು, ಎಂದರೆ ಪಾಪವಾಸನೆಯಿಲ್ಲದವನಾಗಿರಬೇಕು; ಅಕಾಮಹತನಾಗಿರಬೇಕು, ಅವನಿಗೆ ಯಾವ ಕಾಮಗಳ ಪೀಡೆಯೂ ಇರಬಾರದು. ಈ ಲಕ್ಷಣಗಳನ್ನು ಗುರುತಿಸಬೇಕಾದರೂ ನಮ್ಮಲ್ಲಿ ಹೆಚ್ಚಿನ ಯೋಗ್ಯತೆ ಇರಬೇಕಾಗುತ್ತದೆ. ಆದರೆ ಒಂದು ವಿಷಯವನ್ನು ನೆನಪಿನಲ್ಲಿಟ್ಟರೆ ಈ ತೊಡಕೆಲ್ಲ ತಪ್ಪುತ್ತದೆ.

ಪುರುಷಾರ್ಥವನ್ನು ನಮಗೆ ಉಂಟುಮಾಡುವ ಉಪದೇಶಮಾಡುವವನೇ ಗುರು. ಗುರುವೆನಿಸಿಕೊಂಡವನು ಮಾಡುವ ತತ್ತ್ವೋಪದೇಶವು ನಮ್ಮ ಅನುಭವಕ್ಕೆ ಬರಬೇಕು, ಅನುಭವಿಗಳಾದ ಗುರುಗಳು ಉಪದೇಶಮಾಡಿದರೆ ಯೋಗ್ಯರಾದ ಶಿಷ್ಯರಿಗೆ ಅವಶ್ಯವಾಗಿ ಅದು ಅನುಭವಕ್ಕೆ ಬಂದು ಕಾರ್ಯಕಾರಿಯಾಗಲೇಬೇಕು, ಆದ್ದರಿಂದ ಯಾವಾತನು ಹೇಳಿದ ಉಪದೇಶದಿಂದ ನಮ್ಮ ಮನಸ್ಸಿನ ಮೇಲೆ ಪರಿಣಾಮವಾಗುವದೋ ಆತನೇ ಗುರು. ಗುರುಗಳು 'ನಾನು ಗುರು' ಎಂದು ಮನೆಯ ಮುಂದೆ ಬೋರ್ಡು ಹಾಕಿಸಿಕೊಂಡಿರುತ್ತಾರೆಯೆ? ಅವರನ್ನು ಹೇಗೆ ಕಂಡು ಹಿಡಿಯುವದು? ಎಂದು ಹಲುಬುವದು ಬೇಡ. ಏಕೆಂದರೆ ನಿಜವಾದ ಗುರು, ಗುರುಗಳಿಗೆಲ್ಲ ಆದಿಗುರುವಾಗಿರುವ ಪರಮಾತ್ಮನು, ಎಲ್ಲೆಲ್ಲಿಯೂ ಇರುತ್ತಾನೆ. ಆದ್ದರಿಂದ ಸದ್ಗುರುವು ಎಲ್ಲೆಲ್ಲಿಯೂ ಇರುತ್ತಾನೆಂದೇ ಭಾವಿಸಬೇಕು. ನಮ್ಮ ದೋಷಗಳನ್ನು ತೆಗೆದುಹಾಕಿ ಗುಣಗಳನ್ನು ತುಂಬುವ ಸದುಪದೇಶವನ್ನು ಮಾಡುವವನೇ ಗುರು. ಈ ಒರೆಗಲ್ಲಿಗೆ ತಿಕ್ಕಿಯೇ ಗುರುವಿನ ಬಣ್ಣವನ್ನು ತಿಳಿದುಕೊಳ್ಳಬೇಕು. ಈ ಲೋಕದಲ್ಲಿ 'ಗುರುಗಳು' ಎನ್ನಿಸಿಕೊಳ್ಳಬೇಕೆಂದು ಹವಣಿಸುತ್ತಿರುವವರಿಗೇನು ಕಡಿಮೆಯಿಲ್ಲ. 'ಗುರವೋ ಬಹವಃ ಸನ್ತಿ ಶಿಷ್ಯವಿತ್ತಾಪಹಾರಕಾಃ' ಶಿಷ್ಯನ ವಿತ್ತವನ್ನು ಅಪಹರಿಸುವ ಗುರುಗಳು ಬೇಕಾದಷ್ಟು ಜನರು ಸಿಕ್ಕಬಹುದು. 'ಗುರುಗಳ ದಂಡು' ಎಂಬ ಲೇಖನವೊಂದನ್ನು 'ಅಧ್ಯಾತ್ಮಪ್ರಕಾಶ' ಪತ್ರಿಕೆಯಲ್ಲಿ ಕೆಲವು ವರ್ಷಗಳ ಹಿಂದೆ ಒಬ್ಬರು ಬರೆದಿದ್ದರು. ಮೋಸಗಾರರಾದ ವೇಷಧಾರಿಗಳ ಕೆಲವು ತಂಡಗಳನ್ನು ಅಲ್ಲಿ ವಿವರಿಸಿರುತ್ತದೆ. ಅಂಥ ಗುರುಗಳು ಹಲವರು ನಮಗೆ ಗೋಚರವಾಗಬಹುದು. ಆದರೆ ತತ್ತ್ವೋಪದೇಶದಿಂದ ಶಿಷ್ಯನ ತಾಪವನ್ನೇ ಪರಿಹರಿಸುವ ಗುರುಗಳು ಎಲ್ಲಿ ಸಿಕ್ಕುತ್ತಾರೆ? ಆದರೆ ಅವಿವೇಕಿಗಳಾದ ಗುರುಗಳನ್ನು ಬಿಡುವ ಸಂಭ್ರಮದಲ್ಲಿ ನಮ್ಮನ್ನು ಉದ್ಧಾರಮಾಡಬಲ್ಲ ಮಹಾತ್ಮರನ್ನೂ ಅನಾದರಮಾಡಬಾರದು. ಏಕೆಂದರೆ ಅಜ್ಞಾನ ನಾಶಕ್ಕೆ ಸದ್ಗುರುವಲ್ಲದೆ ಬೇರೊಂದು ಸಾಧನದ್ವಾರವಿಲ್ಲ. ಸದ್ಗುರುವು ಸಿಕ್ಕುವವರೆಗೂ ಪರಮಾತ್ಮನನ್ನೇ ಗುರುವೆಂದು ಭಾವಿಸಿ, ಆತನ ಪ್ರಚೋದನೆಯಲ್ಲಿ ನಮ್ಮ ಬುದ್ಧಿಯಲ್ಲಿ ಹೊಳೆದ ಸಾಧನಗಳನ್ನು ಮಾಡುತ್ತಿರಬೇಕು. ಹಾಗಾದರೆ ಆತನು ನಮ್ಮ ಅಂತಸ್ತಿಗೆ ತಕ್ಕ ಸಾಧನವನ್ನು ಉಪದೇಶಿಸುವ ಮನುಷ್ಯರೂಪದ ಸದ್ಗುರುಗಳನ್ನು ಕಾಲಕ್ರಮದಲ್ಲಿ ಒದಗಿಸಿಕೊಡುತ್ತಾನೆ.

ಅರ್ಜುನನು ಭಗವಂತನನ್ನು ಗುರುವೆಂದು ವರ್ಣಿಸಿರುವದರ ಅಭಿಪ್ರಾಯವನ್ನು ತಾನೇ ಮುಂದಿನ ವಾಕ್ಯದಲ್ಲಿ ಸ್ಪಷ್ಟಗೊಳಿಸಿರುತ್ತಾನೆ. "ನಿನಗೆ ಸಮನಾದವರು ಯಾರೂ ಇಲ್ಲ, ಇನ್ನು ಹೆಚ್ಚಿನವನು ಎಲ್ಲಿರಬೇಕು?" ಭಗವಂತನನ್ನು ಐಶ್ವರ್ಯ,

ಜ್ಞಾನ, ಯಶಸ್ಸು - ಮುಂತಾದ ಗುಣಗಳಿಂದ ಸರಿಗಟ್ಟುವವರು ಮೂರು ಲೋಕದಲ್ಲಿಯೂ ಯಾರೊಬ್ಬರೂ ಇಲ್ಲ; ಇನ್ನು ಅವನಿಗಿಂತ ಹೆಚ್ಚಿನವನು ಎಲ್ಲಿಂದ ಬಂದಾನು? ಅಂಥ ಭಗವಂತನನ್ನು ಬಿಟ್ಟವನೇ ಕೆಟ್ಟನು. ಭಗವಂತನ ಮಿಗಿಲಿಲ್ಲದ ಸ್ವರೂಪವನ್ನು ಅರಿತುಕೊಂಡವನು ಅಮೃತತ್ವವನ್ನು ಪಡೆಯುತ್ತಾನೆ ಎಂದು ಶ್ರುತಿ ಸಾರುತ್ತಿದೆ. ನಮ್ಮಗಳಲ್ಲಿ ಕೆಲವರಾದರೂ ಭಗವಂತನಿದ್ದಾನೆಂಬುದನ್ನು ಬಲ್ಲವರಿಂದ ಕೇಳಿ ತಿಳಿದುಕೊಂಡಿರುತ್ತೇವೆ. ಆದರೆ ಅವನೇ ಎಲ್ಲಕ್ಕಿಂತಲೂ ಹೆಚ್ಚು ಎಂಬ ಅರಿವು ನಮಗೆ ಆಗಿರುವದಿಲ್ಲ. ಆದ್ದರಿಂದ ನಮಗೆ ಪರಮಪುರುಷಾರ್ಥವು ಬಹುದೂರ ವಾಗಿರುತ್ತದೆ. ಇನ್ನು ಭಗವಂತನೇ ಇಲ್ಲ ಎನ್ನುವ ಮೂಢನನ್ನು ಕುರಿತು ಹೇಳತಕ್ಕದ್ದೇನಿದೆ? ಈಶ್ವರನನ್ನು ನಂಬುವವರ ವ್ಯವಹಾರವೆಲ್ಲ ಕೆಡುತ್ತದೆ ಎಂದು ಕೆಲವರು ಅವಿವೇಕಿಗಳ ನಂಬಿಕೆ. ಆದರೆ ವ್ಯವಹಾರದಲ್ಲೆಲ್ಲ ಆಶಾಭಂಗವಾಗಿ ತೀರ ಕೊನೆಯಲ್ಲಿ ಈಶ್ವರನನ್ನು ನಂಬಿದರೂ ಕಾಪಾಡುತ್ತಾನೆ, ಆ ದಯಾಘನನು! ಇದುವರೆಗೆ ಎಷ್ಟೇ ಪಾಪಗಳನ್ನು ಮಾಡಿರಲಿ, ಇನ್ನು ಮುಂದೆ ಹೀಗೆ ಮಾಡುವದಿಲ್ಲ ಎಂದು ಪಶ್ಚಾತ್ತಾಪಪೂರ್ವಕವಾಗಿ ಪ್ರತಿಜ್ಞೆಮಾಡಿದರೂ ಸಾಕು; ಕೂಡಲೆ ಆತನ ಅನುಗ್ರಹದಿಂದ ಮುಂದಿನ ವ್ಯವಹಾರವೆಲ್ಲ ಸುಖಮಯವಾಗಿಬಿಡುವದು. ವ್ಯವಹಾರದಲ್ಲಿ ನಮಗೆ ಬರುವ ಅಡ್ಡಿಗಳೂ ಸಂಕಟಗಳೂ ಏತರ ಫಲ? ಆ ಭಗವಂತನನ್ನು ಮರೆತದ್ದೇ, ಆತನ ವ್ಯವಸ್ಥೆಯಿಂದ ಜಾರಿ ಸ್ವೇಚ್ಛಾ ಪ್ರವೃತ್ತಿಗೆ ಹೊರಟಿದ್ದೇ ಈ ಸಂಕಷ್ಟಗಳಿಗೆಲ್ಲ ಕಾರಣವಾಗಿರುತ್ತದೆ. ಹೀಗಿರುವಲ್ಲಿ ಭಗವಂತನನ್ನು ನಂಬಿದರೆ ವ್ಯವಹಾರವು ಕೆಡುವದೆನ್ನುವದು ಎಂಥ ಅವಿವೇಕ!

ಪರಮಾತ್ಮನಿಗೆ ಯಾವನೂ ವಂಚನೆಮಾಡಲಾರನು. ಅವನು ನಮ್ಮ ಆತ್ಮನು. ನಾವು ಅವನನ್ನೇ ಶರಣುಹೊಕ್ಕು ಬದುಕಬೇಕಾಗಿರುತ್ತದೆ. ಆತನಿಗಿಂತ ಹೆಚ್ಚಿನ ಶರಣವು ಯಾವದೊಂದೂ ಇರುವದಿಲ್ಲ. ಎಲ್ಲವೂ ಆತನು ನಮಗೆ ಕೊಟ್ಟದ್ದೇ. "ಭಗವಂತನೆ, ನಾನು ನನ್ನ ಸರ್ವಸ್ವವೂ ನಿನ್ನದೇ, ನೀನು ಶೇಷಿ, ನಾನು ಶೇಷ" ಎನ್ನುತ್ತಿರಬೇಕು. ನಾವು ಏನೇನು ಸಂಪಾದನೆಮಾಡಿದ್ದರೂ ಎಷ್ಟು ವರ್ಷಗಳು ಅದನ್ನು ಕಾಪಾಡಿಕೊಂಡಿದ್ದರೂ ಅದೆಲ್ಲ ಆತನದೇ. ಇದೆಲ್ಲ ಭಗವಂತನದು ಎಂದು ಆತನಿಗೆ ಎಲ್ಲವನ್ನೂ ಒಪ್ಪಿಸಿ ನಾವು ಬದುಕಬೇಕಾಗಿದೆ. ನಾವು ನಿಮಿತ್ತಮಾತ್ರರು. ಭಗವಂತನು ಕೊಟ್ಟಿರುವ ಉಪಕರಣಗಳನ್ನು ಉಪಯೋಗಿಸಿಕೊಂಡು ನಾವು ಕೃತಾರ್ಥರಾಗತಕ್ಕದ್ದೇ ಹೊರತು ಅವುಗಳಲ್ಲಿ ಅಹಂತಾಮಮತಾಭಿಮಾನಗಳನ್ನು ಮಾಡತಕ್ಕದ್ದಲ್ಲ. ಹರಿಭಕ್ತಿಸಾರದಲ್ಲಿ ಹೇಳಿರುವ "ದೀನ ನಾನು ಸಮಸ್ತಲೋಕಕ್ಕೆ ದಾನಿ ನೀನು" ಎಂಬ ಭಾವವನ್ನು ಸಂಪಾದಿಸಿಕೊಳ್ಳಬೇಕು. ಇದರಿಂದ ಪರಮಾತ್ಮ ತತ್ತ್ವದ ಜ್ಞಾನವುಂಟಾಗುವದು. ಪ್ರಪಂಚದಲ್ಲಿರುವ ಪ್ರತಿಯೊಂದು ವಸ್ತುವೂ

ಆನಂದದಾಯಕವಾಗುವದು. ಭೋಗಸಾಮಗ್ರಿಗಳಲ್ಲಿಯೇ ಸುಖವಿರುವದಿಲ್ಲ; ಭಗವಂತನು ಅವನ್ನು ದ್ವಾರವಾಗಿ ಮಾಡಿಕೊಂಡು ನಮಗೆ ಸುಖವನ್ನು ಕೊಡಬೇಕು.

ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ
ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।
ಪಿತೇವ ಪುತ್ರಸ್ಯ ಸಖೇವ ಸಖ್ಯುಃ
ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ । (೧೧-೪೪)

“ಆದ್ದರಿಂದ ಶರೀರವನ್ನು ಕೆಳಗಿಟ್ಟು ನಮಸ್ಕರಿಸಿ, ಈಡ್ಯನಾದ ನಿನ್ನನ್ನು ಕ್ಷಮಿಸೆಂದು ಬೇಡಿಕೊಳ್ಳುತ್ತೇನೆ. ತಂದೆಯು ಮಗನನ್ನು ಕ್ಷಮಿಸುವಂತೆಯೂ ಗೆಳೆಯನು ಗೆಳೆಯನನ್ನು ಕ್ಷಮಿಸುವಂತೆಯೂ ಪ್ರಿಯನು ಪ್ರಿಯಳನ್ನು ಕ್ಷಮಿಸುವಂತೆಯೂ ನನ್ನನ್ನು ಎಲೈ ದೇವನೆ, ನೀನು ಕ್ಷಮಿಸಬೇಕು.”

ಭಗವಂತನಿಗಲ್ಲದಿದ್ದರೆ ಯಾರಿಗೆ ನಮಸ್ಕರಿಸತಕ್ಕದ್ದು? ನಮಸ್ಕರಿಸುವಾಗ ಸೆಟೆತುಕೊಂಡಿರಬಾರದು, ಶರೀರವನ್ನು ಸಡಿಲಿಸಬೇಕು, ಅದರಲ್ಲಿ ಮಮತೆಯನ್ನು ಸಡಿಲಿಸಿ ನಮಸ್ಕರಿಸಬೇಕು. ನನ್ನ ಮೇಲೆ ಕರುಣೆಯಿಂದ ಅನುಗ್ರಹವನ್ನು ಮಾಡು ಎಂದು ಆರ್ತನಾಗಿ ಬೇಡಿಕೊಳ್ಳಬೇಕು. ತಂದೆಯಲ್ಲಿ ಮಗನಿಗಿರುವ ಭಾವ, ಗೆಳೆಯನಿಗೆ ಗೆಳೆಯನಲ್ಲಿರುವ ಭಾವ, ಪ್ರಿಯಳಿಗೆ ಪ್ರಿಯನಲ್ಲಿರುವ ಭಾವ - ಇವುಗಳಿಗೆ ನೂರ್ಮಡಿಯಾಗಿ ಪರಮಾತ್ಮನಲ್ಲಿರುವ ಭಕ್ತಿಭಾವವು ಹೊರಹೊಮ್ಮಬೇಕು. ಆಗ ಭಗವಂತನು ತನ್ನ ಅಭಯಹಸ್ತವನ್ನು ನಮ್ಮ ತಲೆಯಮೇಲೆ ಇಡುವನು. ಆಗ ನಾವು ಕೃತಾರ್ಥರಾಗುವೆವು. ಅಹಂಕಾರಮಮಕಾರಗಳು ಮಟ್ಟಾಗುವವರೆಗೂ ನಮಗೆ ಈ ಮನಃಸ್ಥಿತಿಯ ನಿಜದ ಅರಿಕೆಯಾಗುವದೇ ಇಲ್ಲ.

---

## ೮೫. ಭಕ್ತಿಯೋಗದ ಸೂತ್ರ ೧೧-(೪೬-೫೫)
## (೧೩-೬-೪೮)

ತನ್ನ ತೀರ ತಗ್ಗಿನ ಮಟ್ಟವನ್ನೂ ಭಗವಂತನ ಉನ್ನತವಾದ ಮಟ್ಟವನ್ನೂ ಅರ್ಜುನನು ಚೆನ್ನಾಗಿ ಮನಗಂಡಿದ್ದಾನೆ. ಅವನು ಹೇಳುತ್ತಿರುವದೇನು? “ಭಗವಂತನೆ, ನಿನ್ನ ಈ ಅದ್ಭುತರೂಪವನ್ನು ನಾನು ಹಿಂದೆ ಎಂದೂ ಕಂಡಿರಲಿಲ್ಲ. ಇದನ್ನು ಕಂಡು ನನಗೆ ರೋಮಾಂಚವಾಗಿರುತ್ತದೆ; ಮನಸ್ಸು ಅಂಜಿಕೆಯಿಂದ ತಲ್ಲಣಿಸುತ್ತಿದೆ. ಆದ್ದರಿಂದ ಅದೇ ರೂಪವನ್ನು ನನಗೆ ತೋರಿಸು; ಎಲೈ ದೇವೇಶನೆ, ಜಗನ್ನಿವಾಸನೆ, ನನ್ನಲ್ಲಿ

ಪ್ರಸನ್ನನಾಗು!" ಆ ಮೊದಲಿನ ರೂಪವನ್ನು ತೋರಿಸು ಎನ್ನುವದಕ್ಕೆ ಕೂಡ ಅವನಿಗೆ ಬಾಯಿಲ್ಲ. 'ಅದೇ ರೂಪವನ್ನು' ಎಂದು ಅಂಜಿಕೆಯಿಂದ ನಡುಗುತ್ತಾ ಅಂಗಲಾಚಿ ಬೇಡಿಕೊಂಡಿರುತ್ತಾನೆ! ಭಗವಂತನೇನೂ ಅರ್ಜುನನನ್ನು ಹೆದರಿಸಬೇಕೆಂದು ಈ ರೂಪವನ್ನು ಧರಿಸಿರುವದಿಲ್ಲ; ಅರ್ಜುನನ ಕೋರಿಕೆಯಂತೆಯೇ ವಿಶ್ವರೂಪವನ್ನು ತೋರಿಸಿರುತ್ತಾನೆ. ಆದರೇನು? ಅರ್ಜುನನು ತನಗೂ ಭಗವಂತನಿಗೂ ಇರುವ ಅಂತರವನ್ನು ಮನಗಂಡು ತಾನೇ ಹೆದರಿರುತ್ತಾನೆ:

**ಕಿರೀಟಿನಂ ಗದಿನಂ ಚಕ್ರಹಸ್ತ-**
**ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ**
**ಸಹಸ್ರಬಾಹೋ ಭವ ವಿಶ್ವಮೂರ್ತೇ ॥** (೧೧-೪೬)

"ಎಲೈ ಸಹಸ್ರಬಾಹುವೆ, ವಿಶ್ವಮೂರ್ತಿಯೆ, ನಾನು ನಿನ್ನನ್ನು ಕಿರೀಟ, ಗದೆ, ಚಕ್ರ, ಶಂಖ, ಪದ್ಮ - ಇವುಗಳನ್ನು ಧರಿಸಿದ ಮುನ್ನಿನ ರೂಪವಿತ್ತಲ್ಲ, ಅದೇ ರೂಪದಲ್ಲಿ ನೋಡಬೇಕು. ಎಲೈ ಭಗವಂತನೆ, ಆ ನಾಲ್ದೋಳಿನ ರೂಪವನ್ನೇ ಧರಿಸು!" ಎಂದು ಅರ್ಜುನನು ಬೇಡಿಕೊಂಡಿರುತ್ತಾನೆ. ಭಗವಂತನು ಈ ರೂಪವನ್ನು ಉಪಸಂಹಾರಮಾಡುವನೊ, ಇಲ್ಲವೊ? ಈ ರೂಪದಿಂದಲೇ ಇದ್ದು ಉದ್ಧತರಾದ ಕ್ಷತ್ರಿಯರನ್ನೆಲ್ಲ ಸಂಹರಿಸಿ ಅದೃಶ್ಯನಾಗಿಬಿಟ್ಟರೇನುಗತಿ! - ಎನಿಸಿರಬಹುದು, ಅವನಿಗೆ! ಆದ್ದರಿಂದ ದಯವಿಟ್ಟು ಆ ಹಿಂದಿನ ರೂಪವನ್ನೇ ತಾಳಿಕೊ - ಎಂದು ಬೇಡಿಕೊಂಡಿರುತ್ತಾನೆ. ದುರ್ಯೋಧನಾದಿಗಳು ಆ ರೂಪವೇ ಒಂದು ದೋಷವೆಂದು ಭಾವಿಸಿಕೊಂಡಿದ್ದರೂ ಇರಬಹುದು. ಆದರೆ ಅರ್ಜುನನಿಗೆ ಹಾಗಿಲ್ಲ. ಆ ರೂಪವೇ ಅವನಿಗೆ ಹೆಚ್ಚಾಗಿ ಪರಿಚಿತವಾಗಿದ್ದದ್ದು. ಆ ರೂಪದಿಂದ ಕೂಡಿದ ಶ್ರೀಕೃಷ್ಣನು, ತನ್ನ ಬಂಧು, ಗೆಳೆಯ - ಎಂದು ಅವನು ವಿನೋದದಿಂದ ಎಷ್ಟೋ ಕಾಲದಿಂದ ಒಡನಾಡಿಯಾಗಿದ್ದುಕೊಂಡಿದ್ದನು. ಆದ್ದರಿಂದ ಅವನಿಗೆ ಮನಸ್ಸಮಾಧಾನವೂ ಸಂತೋಷವೂ ಆಗುವದಕ್ಕೆ ಆ ರೂಪವು ಬೇಕಾಗಿದೆ. ಹೀಗೆಯೇ ವಸುದೇವಾದಿಗಳಿಗೆ ಮಗನಾಗಿ ಕಂಡ ರೂಪವು ಬೇಕು; ಗೋಪಗೋಪಿಯರಿಗೆ ತಮ್ಮೊಡನೆ ಆಟವಾಡುತ್ತಿದ್ದ ಆನಂದಕಂದನು ಬೇಕು. ಅರ್ಜುನನೂ ತನಗೆ ಪರಿಚಯವಾಗಿದ್ದ ರೂಪವನ್ನೇ ಬಯಸಿದ್ದು ಈ ದೃಷ್ಟಿಯಿಂದ ಸಹಜವಾಗಿರುತ್ತದೆ.

ಈಗ ಭಗವಂತನು ಅರ್ಜುನನ ಸಮಾಧಾನಕ್ಕಾಗಿ ಆಡಿದ ಮಾತುಗಳಿವು; "ಎಲೈ ಅರ್ಜುನನೆ, ನಿನಗೆ ನಾನು ಪ್ರಸನ್ನನಾಗಿ ಈ ವಿಶ್ವರೂಪದ ದರ್ಶನವನ್ನು ಅನುಗ್ರಹಿಸಿದೆನು. ಈ ರೂಪವನ್ನು ನಾನು ನನ್ನ ಯೋಗದಿಂದ, ತ್ರಿಗುಣಾತ್ಮಕವಾದ

ಮಾಯೆಯನ್ನು ಜೋಡಿಸುವ ಶಕ್ತಿವಿಶೇಷದಿಂದ, ನಿನಗೆ ತೋರಿಸಿರುತ್ತೇನೆ." ಸಾಮಾನ್ಯವಾದ ಗಾರುಡೀವಿದ್ಯೆಯನ್ನು ಬಲ್ಲವನು ಉಕ್ಕಿನ ಬಳೆಗಳು ಒಂದಕ್ಕೊಂದು ಕೂಡುವದಕ್ಕೆ ಅವಕಾಶವಿಲ್ಲದಂತೆ ಕಂಡರೂ ಅವುಗಳನ್ನು ತನ್ನ ವಿಚಿತ್ರಶಕ್ತಿಯಿಂದ ಸೇರಿಕೊಳ್ಳುವಂತೆ ಮಾಡಿ ಬಗೆಬಗೆಯ ಆಕಾರಗಳನ್ನು ಮಾಡುವದನ್ನು ನೀವು ಯಾವಾಗಲಾದರೂ ನೋಡಿರಬಹುದು. ಅದರಂತೆ, ಅಥವಾ ಇದಕ್ಕೂ ಹೆಚ್ಚಿನ ಅಚಿಂತ್ಯಶಕ್ತಿಯಿಂದ, ಭಗವಂತನು ಗುಣತ್ರಯವನ್ನೂ ಅದರಿಂದಾಗಿರುವ ಕಾರ್ಯ ಗಳನ್ನೂ ಸಂಕಲ್ಪಮಾತ್ರದಿಂದ ಜೋಡಿಸಿ ಯಾವ ರೂಪವೆಂದರೆ ಆ ರೂಪವನ್ನು ಸೃಷ್ಟಿಸಿಕೊಳ್ಳಬಲ್ಲನು. ಪರಮಾರ್ಥವಾಗಿ ನೋಡಿದರೆ ಆ ಯಾವ ರೂಪವೂ ಆತನಿಗಿಂತ ಬೇರೆಯಾಗಿರುವದೂ ಇಲ್ಲ. ಇದೇ ಭಗವಂತನ ಯೋಗಮಹಿಮೆ. ಭಗವಂತನು ಅರ್ಜುನನನ್ನು "ಈ ರೂಪವನ್ನು ನಿನಗಲ್ಲದೆ ಮತ್ತೆ ಯಾರಿಗೂ ತೋರಿಸಿರುವದಿಲ್ಲ. ವೇದಾಧ್ಯಯನ, ಯಜ್ಞಾಧ್ಯಯನ, ದಾನ, ಕರ್ಮಗಳು, ಉಗ್ರವಾದ ತಪಸ್ಸು - ಇವುಗಳನ್ನು ಎಷ್ಟು ಮಾಡಿದರೂ ನಿನ್ನ ಹೊರತು ಮತ್ತೊಬ್ಬರಿಗೆ ಈ ರೂಪದರ್ಶನವು ದಕ್ಕಲಾರದು. ಇಂಥ ರೂಪದರ್ಶನವನ್ನು ನಿನಗೆ ಅನುಗ್ರಹಿಸಿರುತ್ತೇನೆ" ಎಂದು ಅಪ್ಪಣೆಕೊಡಿಸಿರುತ್ತಾನೆ. ಅಂಥ ಅದ್ಭುತ ರೂಪವದು!

ಆ ಭಗವಂತನ ರೂಪವು ಅತ್ಯಂತ ತೇಜೋಮಯವಾದದ್ದು, ವಿಶ್ವವೆಲ್ಲವನ್ನೂ ತನ್ನಲ್ಲಿ ಅಡಕಮಾಡಿಕೊಂಡದ್ದು, ಜಗತ್ತಿನ ಸೃಷ್ಟಿಯ ಆದಿಯಲ್ಲಿ ಸಂಕಲ್ಪಮಾತ್ರದಿಂದ ಸೃಷ್ಟವಾದದ್ದು, ಕರ್ಮಜನ್ಯವಲ್ಲ, ಯಾವ ಪರಿಚ್ಛೇದವೂ ಇಲ್ಲದ್ದು. ಇಂಥ ರೂಪದ ದರ್ಶನವು ಸಾಮಾನ್ಯರಿಗೆ ಹೇಗೆ ದೊರಕೀತು? ಯಜ್ಞ, ದಾನ, ತಪಸ್ಸು - ಮುಂತಾದ ಸಾಧನಗಳಿಂದ ಸಾಮಾನ್ಯರಿಗೆ ದಕ್ಕದ ಫಲವನ್ನೂ ದೊರಕಿಸಿ ಕೊಳ್ಳಬಹುದೆಂದು ಶಾಸ್ತ್ರವು ಹೇಳುತ್ತದೆ. ಆದರೆ ಅವುಗಳಿಂದಲೂ ಈ ರೂಪದರ್ಶನ ವನ್ನು ದೊರಕಿಸಿಕೊಳ್ಳಲಾಗುವದಿಲ್ಲ. ಅರ್ಜುನನನಿಗೆ ಮಾತ್ರ ಭಗವಂತನ ಪ್ರಸಾದವೊಂದೇ ಈ ದರ್ಶನಕ್ಕೆ ಕಾರಣವಾಯಿತು.

"ಅರ್ಜುನನೆ, ಈ ಘೋರವಾದ ಇಂಥ ಈ ನನ್ನ ರೂಪವನ್ನು ಕಂಡು ತಳ್ಳಂಕಗೊಳ್ಳಬೇಡ, ಮನಸ್ಸಿನಲ್ಲಿ ಏನೂ ತೋಚದ ವಿಮೂಢನಾಗಬೇಡ, ಹೆದರಿಕೆಯನ್ನು ಬಿಡು; ಮತ್ತೆ ಅದೇ ನೀನು ಕೇಳಿದ ರೂಪವನ್ನು ಇಗೋ ಧರಿಸ ುತ್ತೇನೆ, ನೋಡು!" ಹೀಗೆಂದು ಭಗವಂತನು ಮತ್ತೆ ತನ್ನ ಸೌಮ್ಯವಾದ ರೂಪವನ್ನು ಧರಿಸಿ ಅರ್ಜುನನ್ನು ಸಮಾಧಾನಗೊಳಿಸಿದನು. ಭಗವಂತನಿಗೆ ನಿಯತವಾದ ಯಾವ ದೊಂದು ರೂಪವೂ ಇರುವುದಿಲ್ಲ. ಆದರೂ ಶ್ರೀಕೃಷ್ಣಾವತಾರದಲ್ಲಿ ವಸುದೇವನ

ಮಗನಾಗಿ ಅವತರಿಸಿದಾಗ ಧರಿಸಿದ್ದ ರೂಪವನ್ನೇ ಇಲ್ಲಿ 'ಸ್ವಕಂ ರೂಪಮ್' (ತನ್ನ ರೂಪವು) ಎಂದು ವರ್ಣಿಸಿರುತ್ತದೆ.

ಭಗವಂತನು ಹೀಗೆ ತನ್ನ ರೂಪವನ್ನು ಅರ್ಜುನನಿಗೆ ತೋರಿಸಿದನು ಎಂಬ ಮೇಲಿನ ಉಕ್ತಿಯು ಸಂಜಯನದು. ಇದು ಧೃತರಾಷ್ಟ್ರನಿಗೆ ಹೇಳಿದ್ದು. ಕನ್ನಡದಲ್ಲಿ 'ರಾಯ ಕೇಳೆಂದ' ಎಂದು ಎಷ್ಟೋ ಸಾರಿ ಪದಪೂರ್ತಿಗಾಗಿ ಬರುತ್ತದೆ. ಜನರು 'ಹೇಳೆಂದ ಕೇಳೆಂದ' ಎಂದು ತಿರಸ್ಕಾರಸೂಚನೆಗೆ ಇದನ್ನು ಉದಾಹರಿಸುವದುಂಟು. ಆದರೆ ಭಗವದ್ಗೀತೆಯಲ್ಲಿ ಹೀಗೆ ಸಂಜಯನ ಮಾತು ಬಂದಿರುವದು ಎಲ್ಲಿಯೋ ಕೆಲವು ಕಡೆ. ಧೃತರಾಷ್ಟ್ರನಿಗೆ ಭಗವಂತನ ಸಹಜಶಕ್ತಿಯು ತಿಳಿಯಲೆಂದು ಇಲ್ಲಿ ಸಂಜಯನು ಹೇಳಿರುತ್ತಾನೆ. ಭಗವಂತನು ವಿಶ್ವರೂಪವನ್ನು ಅರ್ಜುನನ ಪ್ರಾರ್ಥನೆಯಂತೆ ಕೂಡಲೆ ತೋರಿಸಿದ್ದರಿಂದ ಅವನು ತನಗೆ ಬೇಕಾದ ರೂಪವನ್ನು ಧರಿಸಬಲ್ಲನೆಂದು ತಿಳಿಸಿದಂತೆ ಆಯಿತು. ಅರ್ಜುನನು ಕೇಳಿಕೊಂಡ ಕೂಡಲೆ ಮತ್ತೂ ತನ್ನ ಸೌಮ್ಯರೂಪವನ್ನು ಧರಿಸಿದನೆಂದದ್ದರಿಂದ ಭಗವಂತನು ಭಕ್ತಪರಾಧೀನನೆಂದು ಸೂಚಿಸಿದಂತೆ ಆಯಿತು. ಅರ್ಜುನನಿಗೆ ಉಪದೇಶ ಮಾಡಿದ್ದು, ಅವನ ಇಷ್ಟಾರ್ಥವನ್ನು ಸಲ್ಲಿಸಿದ್ದು, ಅರ್ಜುನನನ್ನು ಸಮಾಧಾನಗೊಳಿಸಿದ್ದು - ಇದೆಲ್ಲವನ್ನು ಹೇಳಿದ್ದರಿಂದ ಅರ್ಜುನನಲ್ಲಿರುವ ಪ್ರೇಮವನ್ನು ಸೂಚಿಸಿದಂತೆ ಆಯಿತು. ಅರ್ಜುನನು ತನ್ನ ಮಹಿಮೆಯನ್ನು ಅರಿಯದೆ ಎಷ್ಟು ಅನಾದರಮಾಡಿದ್ದರೂ ಸುಮ್ಮನಿದ್ದದ್ದು, ತನ್ನ ಘೋರರೂಪವನ್ನು ಕಂಡು ಅವನು ಭಯಚಕಿತನಾದದ್ದನ್ನು ಕಂಡು ಸಮಾಧಾನ ಮಾಡಿದ್ದು - ಇದೆಲ್ಲವನ್ನೂ ತಿಳಿಸಿದ್ದರಿಂದ ಭಗವಂತನ ಕರುಣೆಯನ್ನು ತಿಳಿಸಿದಂತೆ ಆಯಿತು. ದೊಡ್ಡವರಿಗೆ ದೊಡ್ಡಸ್ತಿಕೆ, ನಮ್ರತೆ - ಎರಡೂ ಸಮವಾಗಿಯೇ ಇರುವವು. ಅವರಿಗೆ ಯಾವದೊಂದರಲ್ಲಿಯೂ ಅಭಿಮಾನವಿರುವದಿಲ್ಲ. ಭಗವಂತನಿಗೂ ಹಾಗೆಯೇ ಯಾವದೊಂದು ದೇಹದಲ್ಲಿಯೂ ಅಭಿಮಾನವಿರುವದಿಲ್ಲ. ಇಷ್ಟೆಲ್ಲ ಸಂಜಯನು ಹೇಳಿದರೂ ಧೃತರಾಷ್ಟ್ರನಿಗೆ ಬುದ್ಧಿಬರಲಿಲ್ಲ!

ಭಗವಂತನ ಸ್ವಭಾವವೇನು? "ದೇವತ್ವೇ ದೇವವಚ್ಚೇಷ್ಟಾ ಮನುಷ್ಯತ್ವೇ ಮನುಷ್ಯವತ್" ತಾನು ದೇವನಾಗಿ ಅವತರಿಸಿದಾಗ ದೇವತೆಗಳಂತೆ ನಡೆಯುವನು, ಮನುಷ್ಯನಾಗಿ ಅವತರಿಸಿದಾಗ ಮನುಷ್ಯರಂತೆ ನಡೆಯುವನು. ವಿಶ್ವರೂಪನಾಗಿದ್ದಾಗ ನೀನು ಯಾರು? ಎಂದು ಅರ್ಜುನನು ಕೇಳಿದಾಗ "ನಾನು ಕಾಲನು; ಲೋಕದ ಕ್ಷಯಕ್ಕಾಗಿ ಬೆಳೆದುಕೊಂಡಿರುವೆನು. ಎಲ್ಲರೂ ನನ್ನಿಂದ ಸಂಹೃತರಾಗಿಬಿಟ್ಟಿದ್ದಾರೆ, ನೀನು ಯುದ್ಧಮಾಡದಿದ್ದರೂ ಚಿಂತೆಯಿಲ್ಲ. ಇವರೆಲ್ಲ ಹತರಾಗಿಯೇ ಇರುತ್ತಾರೆ" ಎಂದು ಹೇಳಿದ್ದನಷ್ಟೆ. ಈಗ ಮೊದಲಿನ ಸೌಮ್ಯವಾದ ಶ್ರೀಕೃಷ್ಣರೂಪವನ್ನು ತಳೆದು

ಪ್ರಶಾಂತನಾಗಿ ಅರ್ಜುನನಲ್ಲಿ ಸಹಾನುಭೂತಿಯಿಂದ ಮಾತನಾಡುತ್ತಿದ್ದಾನೆ. ಈಗ ಮಾತನಾಡುತ್ತಿರುವವನು ಗೀತಾಚಾರ್ಯನಾದ ಭಗವಂತನು. ಅರ್ಜುನನು "ಎಲೈ ಜನಾರ್ದನನೆ, ನಿನ್ನ ಈ ಮಾನುಷರೂಪವನ್ನು ಕಂಡು, ನನಗೆ ಹೊರಗಿನ ಅರಿವು ಬಂತು, ನಾನು ನನ್ನ ಎಂದಿನ ಪ್ರಕೃತಿಯನ್ನು, ಸ್ವಭಾವವನ್ನೇ ಹೊಂದಿರುತ್ತೇನೆ" ಎನ್ನುತ್ತಿರಲು ಭಗವಂತನು ಇಂತೆದನು:

"ಅರ್ಜುನನೆ, ನೀನು ನನ್ನ ಈ ರೂಪವನ್ನು ನೋಡಿದೆಯಲ್ಲ. ಇದನ್ನು ನೋಡಬೇಕೆಂದು ದೇವತೆಗಳು ನಿತ್ಯವೂ ಹಂಬಲಿಸುತ್ತಿರುವರು." ಭಗವಂತನು ವಿಶ್ವರೂಪವನ್ನು ಧರಿಸಿದ ಬಳಿಕ ದೇವತೆಗಳು ಸೃಷ್ಟಿಯಾಗುವರು; ಹೀಗಿರುವಲ್ಲಿ ತಮಗೂ ಆದಿಯಾಗಿರುವ ಆ ಪರಮಾತ್ಮನ ರೂಪವನ್ನು ಅವರು ಹೇಗೆ ಕಾಣಬೇಕು? "ಅರ್ಜುನನೆ, ನೀನು ನನ್ನನ್ನು ಕಂಡಿರುವೆಯಲ್ಲ, ಈ ರೂಪವನ್ನು ವೇದಾಧ್ಯಯನದಿಂದಲಾಗಲಿ ತಪಸ್ಸಿನ ಅನುಷ್ಠಾನದಿಂದಲಾಗಲಿ ದಾನದಿಂದಲಾಗಲಿ ಯಜ್ಞದಿಂದಲಾಗಲಿ, ನೋಡುವದಕ್ಕೆ ಸಾಧ್ಯವಿಲ್ಲ." ವೇದಾಧ್ಯಯನವೆಂಬುದು ಎಲ್ಲಾ ವಿದ್ಯೆಗಳ ಸಂಪಾದನೆಗಿಂತಲೂ ದೊಡ್ಡದು, ಯಜ್ಞವೂ ಕರ್ಮಗಳಲ್ಲೆಲ್ಲ ದೊಡ್ಡದು; ತಪಸ್ಸು ಮಾಡುವದಕ್ಕೆ ಕಷ್ಟವಾಗಿರುವ ಅನುಷ್ಠಾನಗಳಲ್ಲೆಲ್ಲ ದೊಡ್ಡದು. ದಾನವೂ ಬಲು ದೊಡ್ಡ ಸಾಧನ. ವೇದದಲ್ಲಿಯೂ ಗೀತೆಯಲ್ಲಿಯೂ ಯಜ್ಞದಾನ ತಪಸ್ಸುಗಳ ಪ್ರಶಂಸೆ ಮತ್ತೆಮತ್ತೆ ಬಂದಿರುತ್ತದೆ. ಆದರೇನು? ಅಂಥವರಿಗೂ ಭಗವಂತನ ದರ್ಶನವಿಲ್ಲ - ಎಂದರೆ ಸಾಮಾನ್ಯರಿಗೆ ಎಲ್ಲಿ ಸಾಧ್ಯವಾದೀತು? ಭಗವಂತನ ದರ್ಶನವು ಎಷ್ಟು ಕೋಟಿ ರೂಪಾಯಿಗಳನ್ನು ಕೊಟ್ಟರೆ ಸಾಧ್ಯವಾದೀತು? ಯಜ್ಞದಾನತಪಸ್ಸುಗಳ ಕ್ಷೇತ್ರವನ್ನು ಮೀರಿರುವದು ಭಗವತ್ತತ್ತ್ವ !

ಹಾಗಾದರೆ ಭಗವತ್ಪ್ರಾಪ್ತಿಗೆ ಮತ್ತೆ ಯಾವ ಸಾಧನವಿದೆ? ಎಂದು ಯಾರಾದರೂ ಕೇಳಬಹುದು.

> ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।
> ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ (೧೧-೫೪)

ಭಗವಂತನ ಧ್ಯಾನಕ್ಕೆ ಪ್ರೇಮವನ್ನು ಸೇರಿಸಿದರೆ ಭಕ್ತಿಯಾಗುವದು; ಭೀತಿಯ ಧ್ಯಾನವಲ್ಲ, ಪ್ರೀತಿಯ ಧ್ಯಾನ.

ಭಗವದ್ಗೀತೆಯಲ್ಲಿ ಹೇಳಿರುವ ಸಾಧನಗಳನ್ನು ಒಂದೊಂದಾಗಿ ವಿಮರ್ಶಿಸಿ ನೋಡಿದರೆ ಕಾಮ್ಯಕರ್ಮಗಳು ಆಯಾ ಕಾಮವು ಪ್ರಾಪ್ತವಾಗುವದಕ್ಕೆ ಮಾತ್ರ ಸಾಧನವಾಗಿರುವವು. ನಿತ್ಯಕರ್ಮವು ದುರಿತಕ್ಷಯದ ಮೂಲಕ ಚಿತ್ತಶುದ್ಧಿಯನ್ನು

ಕೊಡುವದಕ್ಕೆ ಕಾರಣವು. ನಿಷ್ಕಾಮಕರ್ಮವು ಅಥವಾ ಕರ್ಮಯೋಗವು, ಈಶ್ವರಾರಾಧನೆಗಾಗಿ ವರ್ಣಾಶ್ರಮಧರ್ಮಗಳನ್ನು ಪಾಲಿಸುವದು, ಚಿತ್ತಶುದ್ಧಿಯ ಮೂಲಕ ಪರಮೇಶ್ವರನ ಪ್ರಾಪ್ತಿಗೆ ಕಾರಣವಾಗುವದು. ಧ್ಯಾನವು ಚಿತ್ತವನ್ನು ಏಕಾಗ್ರ್ಯದಿಂದ ಆತ್ಮನಲ್ಲಿಡುವದಕ್ಕೂ ಆತ್ಮಸ್ವರೂಪವನ್ನು ಅರಿತುಕೊಳ್ಳುವದಕ್ಕೂ ಸಹಾಯಕವಾಗಿರುತ್ತದೆ. ಇದಕ್ಕಿಂತ ಹೆಚ್ಚಿನದು ಅನನ್ಯಭಕ್ತಿ, ಅವ್ಯಭಿಚರಿತಭಕ್ತಿ. ವಾಸುದೇವನೇ ನನಗೆ ಬೇಕು, ಮತ್ತೊಂದು ಬೇಡ ಎಂಬ ಪ್ರೀತಿಯಿಂದ ಭಗವತ್ಸ್ವರೂಪವನ್ನು ಚಿಂತಿಸುತ್ತಿರುವ ಈ ಅನನ್ಯ ಭಕ್ತಿಯಿಂದಲೇ ಭಗವಂತನನ್ನು ಅರಿತುಕೊಂಡು ತತ್ತ್ವದಿಂದ ಕಂಡುಕೊಂಡು ಅವನಲ್ಲಿ ಪ್ರವೇಶಮಾಡಿ ಆತನ ಸ್ವರೂಪದಲ್ಲಿಯೇ ನೆಲೆನಿಲ್ಲುವದು ಸಾಧ್ಯವಾಗುವದು.

ಭಗವಂತನನ್ನು ಅರಿತುಕೊಳ್ಳುವದು, ಕಂಡುಕೊಳ್ಳುವದು, ಮತ್ತು ಆತನನ್ನೇ ಪ್ರವೇಶಿಸುವದು - ಎಂಬುವು ಸಾಧನದ ಮೆಟ್ಟಿಲುಗಳು. ಆರನೆಯ ಅಧ್ಯಾಯದಲ್ಲಿ ಹೇಳಿರುವ ಮತ್ತು ಎಂಟನೆಯ ಅಧ್ಯಾಯದಲ್ಲಿ ಹೇಳಿರುವ ಸಾಧನಕ್ರಮದಲ್ಲಿ ತಾರತಮ್ಯವುಂಟೆಂದು ಆಗಲೆ ತಿಳಿಸಿರುತ್ತೇನೆ. ಆರನೆಯ ಅಧ್ಯಾಯದಲ್ಲಿ ತಿಳಿಸಿರುವದು ಸಮ್ಯಗ್ದರ್ಶನಕ್ಕೆ ಅಂಗವಾದ ನಿದಿಧ್ಯಾಸನವು. ಎಂಟನೆಯ ಅಧ್ಯಾಯದಲ್ಲಿಯೂ ಇಲ್ಲಿಯೂ ಹೇಳಿರುವದು ಭಾವನಾರೂಪವಾದ ಉಪಾಸನೆಯು. ಒಬ್ಬ ಮನುಷ್ಯನಿಗೆ ರುಚಿಯಾದ ಒಂದು ಭಕ್ಷ್ಯದ ವರ್ಣನೆಯನ್ನು ಕೇಳಿ, ಅದನ್ನು ತಾನೇ ಕಣ್ಣಾರೆ ನೋಡಿ, ಆ ಬಳಿಕ ಅದನ್ನು ತಿಂದುಬಿಡಬೇಕೆಂಬ ಕುತೂಹಲವು ಅವನನ್ನು ಹಿಡಿದುಕೊಳ್ಳಲು, ಅವನ ಮನಸ್ಸು ಅದರಲ್ಲಿಯೇ ಹೊಕ್ಕುಬಿಡುವಂತೆ ಇಲ್ಲಿ ಭಕ್ತಿಯ ಮೆಟ್ಟಿಲುಗಳನ್ನು ವಿವರಿಸಿರುತ್ತದೆ. ಅನನ್ಯವಾದ ಭಕ್ತಿಯಿಂದ ಭಗವಂತನಿಗಿಂತ ಎಂದಿಗೂ ಬೇರಾಗದ ಭಕ್ತಿಯಿಂದ, ಯಾವ ಕರಣಗಳಿಂದಲೂ ಭಗವಂತನಿಗಿಂತ ಬೇರೆಯಾದದ್ದನ್ನು ಕಾಣದಿರುವ ಭಕ್ತಿಯಿಂದ, ಈ ವಿಶ್ವರೂಪದ ಭಗವಂತನನ್ನು ಶಾಸ್ತ್ರಶ್ರವಣದಿಂದ ಅರಿತುಕೊಳ್ಳಬಹುದು. ಸುಮ್ಮನೆ ಕೇಳಿ ತಿಳಿದುಕೊಳ್ಳಬಹುದು ಮಾತ್ರವೇ ಅಲ್ಲ, ಅವನನ್ನು ಕಾಣಬಹುದು ಎಂದರೆ ಇದ್ದದ್ದು ಇದ್ದಂತೆ ಸಾಕ್ಷಾತ್ಕಾರಮಾಡಿಕೊಳ್ಳಬಹುದು; ಆಮೇಲೆ ಆ ಭಗವಂತನಲ್ಲಿಯೇ ಕೊನೆಗೆ ಪ್ರವೇಶಿಸಿ ಮೋಕ್ಷವನ್ನು ಪಡೆದು ಕೊಳ್ಳಬಹುದು. **"ದೇವೋ ಭೂತ್ವಾ ದೇವಾನಪ್ಯೇತಿ"** ಇಲ್ಲಿಯೇ ಉಪಾಸನೆಯ ಅಭ್ಯಾಸಾತಿಶಯದಿಂದ ಉಪಾಸ್ಯದೇವತೆಯ ಸಾಕ್ಷಾತ್ಕಾರವನ್ನು ಹೊಂದಿ ಆ ದೇವತೆಯೇ ತಾನೆಂಬ ಅಭಿಮಾನವು ರೂಪುಗೊಳ್ಳುವಂತೆ ಮಾಡಿಕೊಂಡು, ಆ ಸಾಕ್ಷಾತ್ಕಾರದ ಬಲದಿಂದ ಸಾಯುವ ಕಾಲದಲ್ಲಿ ಅದೇ ಭಾವನೆಯಿಂದೊಡಗೂಡಿ, ಕೊನೆಗೆ ಆ ದೇವತೆಯೇ ತಾನಾಗಿಬಿಡುತ್ತಾನೆ; ಅದೇ ಆ ದೇವತೆಯ ಸಾಯುಜ್ಯವು ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಇದೇ ಭಕ್ತಿಶಾಸ್ತ್ರದ

ಮರ್ಮವು. ಸಂಗೀತವನ್ನು ಹಾಡಿ ಸ್ವರಗಳನ್ನು ಸಾಕ್ಷಾತ್ಕಾರಮಾಡಿಕೊಂಡು ಆನಂದಿಸು ವಂತೆ ಈ ಉಪಾಸನಾ ವಿದ್ಯೆಯಲ್ಲಿ ನಿಪುಣರಾದವರು ಎಂದೆಂದಿಗೂ ಉಪಾಸ್ಯನಾದ ಭಗವಂತನಲ್ಲಿಯೇ ಸೇರಿಹೋಗಿ ಆನಂದಿಸುತ್ತಿರುವರು.

ಈ ಸಗುಣಸಾಕಾರಭಕ್ತಿಯ ಸೂತ್ರಭೂತವಾಗಿರುವ ವಾಕ್ಯವನ್ನು ಭಗವಂತನು ಇಲ್ಲಿ ಹೇಳುತ್ತಾನೆ:

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಙ್ಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಣ್ಡವ ॥** (೧೧-೫೫)

ಈ ಭಕ್ತಿಯನ್ನು ಯಾರಾದರೂ ಮಾಡಬಹುದು. ಅವನು ಭಗವಂತನನ್ನು ಸೇರಿಕೊಳ್ಳುತ್ತಾನೆ. ಇದರ ಅಂಗಗಳು ಯಾವವೆಂದರೆ '**ಮತ್ಕರ್ಮಕೃತ್**' ಭಗವಂತನ ಕರ್ಮವನ್ನೇ ಮಾಡುವದು. ಭಗವಂತನ ಕರ್ಮವು ಬೇರೆ, ನಮ್ಮ ಕರ್ಮವು ಬೇರೆ- ಎಂದು ಎರಡು ಬಗೆಯ ಕರ್ಮಗಳಿರಬಾರದು. ಭಗವಂತನಿಗಾಗಿ ಇಷ್ಟುಹೊತ್ತು, ಮಿಕ್ಕದ್ದು ನಮಗಾಗಿ - ಎಂದು ಸರಕಾರಿಯ ನೌಕರರಂತೆ ಅಥವಾ ಕಂಪೆನಿಯ ಕೆಲಸಗಾರರಂತೆ ಮಾಡುವ ಕರ್ಮವಲ್ಲ, ಇದು. ಒಂದೇ ಕುಟುಂಬಕ್ಕೆ ಸೇರಿದವರು ಮಾಡುವ ಕರ್ಮವು ಎಲ್ಲವೂ ಕುಟುಂಬಕ್ಕಾಗಿಯೇ ಇರುವಂತೆ ಭಗವಂತನ ಕರ್ಮವೇ ನಮ್ಮ ಕರ್ಮವಾಗಿಬಿಡಬೇಕು. ನಾವು ಭಗವಂತನ ಕುಟುಂಬದವರಾಗಿ ದುಡಿಯಬೇಕು. ದೇಶಕ್ಕಾಗಿ ಯುದ್ಧಮಾಡುವ ದೇಶಭಕ್ತರಂತೆ ಕರ್ಮದಲ್ಲಿ ತೊಡಗಬೇಕು.

ಎರಡನೆಯದು '**ಮತ್ಪರಮಃ**' ಭಗವಂತನೇ ಪರಗತಿ ಎಂಬ ಭಾವದಿಂದ ಕೂಡಿರಬೇಕು. ಮಾಡುವದು ಭಗವಂತನ ಕರ್ಮ, ಸೇರುವದು ಭಗವಂತನನ್ನೇ; ನಾನು ಮುಟ್ಟಬೇಕಾದ ಸ್ಥಾನವು ಆ ಭಗವಂತನೇ ಎಂಬ ಭಾವವು ಬಲವಾಗಿರಬೇಕು.

'**ಮದ್ಭಕ್ತಃ**' - ನನಗೇ ಭಕ್ತನಾಗಿರುವದು ಎಂಬುದು ಮೂರನೆಯದು. ಎಲ್ಲಾ ವಿಧದಿಂದಲೂ ಸಂಪೂರ್ಣವಾದ ಮನಸ್ಸಿನಿಂದ ಸರ್ವೋತ್ಸಾಹದಿಂದ ಕೂಡಿ ಭಗವಂತನನ್ನೇ ಭಜಿಸುತ್ತಿರುವವನು ಭಗವಂತನ ಭಕ್ತನು. ಪರಮಾತ್ಮನೇ ಎಲ್ಲಕ್ಕಿಂತಲೂ ಪ್ರಿಯನು ಎಂದು ಆತನಲ್ಲಿಯೇ ತನ್ನ ಪ್ರೇಮವನ್ನು ತಪ್ಪದೆ ಇಟ್ಟುಕೊಂಡಿರಬೇಕು ಎಂದು ಹೇಳಿದಂತೆ ಆಯಿತು.

ಈಗ '**ಸಙ್ಗವರ್ಜಿತಃ**' ಎಂಬ ವಿಶೇಷಣಕ್ಕೂ ಅರ್ಥವನ್ನು ನಾವು ಸುಲಭವಾಗಿ ಕಲ್ಪಿಸಬಹುದು. ಯಾವನು ಪರಮಾತ್ಮನೇ ತನಗೆ ಪ್ರಿಯನೆಂದು ಭಜಿಸುತ್ತಿರುವನೋ ಅವನಿಗೆ ಧನ, ಪುತ್ರ, ಮಿತ್ರ, ಕಲತ್ರ, ಬಂಧು - ಮುಂತಾದವುಗಳು ಎಂದಿಗೂ

ಪ್ರಿಯವಾಗಿರುವದಿಲ್ಲ. ಅವನು ಅವುಗಳನ್ನು ದ್ವೇಷಿಸುತ್ತಾನೆಂದೇನೂ ಅಭಿಪ್ರಾಯವಿಲ್ಲ. ಪರಮಾತ್ಮನ ಪ್ರೇಮದ ಭರದಲ್ಲಿ ಅವನಿಗೆ ಅವುಗಳಲ್ಲಿ ಮೊದಲಿದ್ದ ಸಂಗವು, ಮನಸ್ಸಿನ ಅಂಟು, ಬಿಟ್ಟುಕೊಂಡುಬಿಡುತ್ತದೆ. ಅವುಗಳ ಇರವೂ ಬರವೂ ಹೋಗುವಿಕೆಯೂ ಅವನ ಮನಸ್ಸಿನಲ್ಲಿ ಯಾವ ಏರುಪೇರನ್ನೂ ಉಂಟುಮಾಡುವದಿಲ್ಲ. ಪರಮೇಶ್ವರನು ಅವನಿಗೆ ಅವಶ್ಯವಾದ ಭೋಗವಸ್ತುಗಳನ್ನು ತಪ್ಪದೆ ಒದಗಿಸಿಕೊಟ್ಟೇ ತೀರುವನು; ಅವುಗಳು ಅವಶ್ಯವಿದ್ದಷ್ಟು ಕಾಲ ಇರುವಂತೆಯೂ ಮಾಡಿಕೊಟ್ಟಿರುತ್ತಾನೆ. ಏಕೆಂದರೆ ತನ್ನ ಭಕ್ತರನ್ನು ಸಂಕಟದಲ್ಲಿಟ್ಟಿರುವದು ಆ ದೇವನಿಗೆ ಎಂದಿಗೂ ಬೇಕಿರುವದಿಲ್ಲ. ಆದರೂ ಆ ವಸ್ತುಗಳಿಗಾಗಿ ಅವುಗಳನ್ನು ಈ ಭಕ್ತನು ಎಂದಿಗೂ ಬಯಸುವದಿಲ್ಲ. ಏಕೆಂದರೆ ಆ ವಸ್ತುಗಳು ತಮ್ಮ ರೂಪದಿಂದಲೇ ಎಂದಿಗೂ ಪ್ರಿಯವಲ್ಲವೆಂಬುದನ್ನೂ ಪರಮಾತ್ಮನ ಪ್ರಸಾದವೆಂಬ ಕಾರಣದಿಂದಲೇ ಪ್ರಿಯವಾಗಿರುವವೆಂಬುದನ್ನೂ ಅವನು ಬಲ್ಲವನಾಗಿರುತ್ತಾನೆ.

**'ನಿರ್ವೈರಃ ಸರ್ವಭೂತೇಷು'** ಎಂಬುದು ಭಕ್ತನ ಮತ್ತೊಂದು ವಿಶೇಷಣವು. ಯಾವ ಪ್ರಾಣಿಗಳಲ್ಲಿಯೂ, ತನಗೆ ಅತ್ಯಂತ ಅಪಕಾರವನ್ನೆಸಗಿರುವ ಪ್ರಾಣಿಗಳಲ್ಲಿಕೂಡ, ಅವನು ನಿರ್ವೈರನಾಗಿರುವನು. ಇವು ನನಗೆ ಶತ್ರುಗಳು - ಎಂಬ ಭಾವವಿಲ್ಲದವನಾಗಿರುವನು. ಯಾವನು ಪರಮಾತ್ಮನಿಗಿಂತ ಬೇರೆಯಾಗಿರುವ ವಸ್ತುಗಳಲ್ಲಿ ಗುಣದೋಷವಿಭಾಗವನ್ನು ಮಾಡಿಕೊಂಡಿರುವನೋ, ಅವನು ತನಗೆ ಒಳ್ಳೆಯ ಪದಾರ್ಥಗಳು ಒದಗುವಂತೆ ಮಾಡಿದವರು ಮಿತ್ರರೆಂದು, ಕೆಟ್ಟವು ಬಂದೊದಗುವಂತೆ ಮಾಡಿದವರು ಶತ್ರುಗಳೆಂದೂ ಭಾವಿಸುವದು ಸ್ವಾಭಾವಿಕವಾಗಿದೆ. ಆದರೆ ಭಗವದ್ಭಕ್ತನಿಗೆ ಭಗವಂತನ ಸಂಬಂಧವಿಲ್ಲದ್ದೇ ಇರುವದಿಲ್ಲ; ಆದ್ದರಿಂದ ಯಾವ ವಸ್ತುವೇ ಆಗಲಿ ಭಗವಂತನ ಸಂಬಂಧದಿಂದ ಉತ್ತಮವಾದದ್ದೇ, ಪ್ರಿಯವಾದದ್ದೇ, ಆಗಿರುವದು. ಆದ್ದರಿಂದ ಇತರರು ತಮ್ಮತಮ್ಮ ದೃಷ್ಟಿಯಿಂದ 'ಇವನು ನಮ್ಮ ಶತ್ರು, ಇವನಿಗೆ ಅಪಕಾರವನ್ನು ಮಾಡಬೇಕು' ಎಂದು ಬಗೆಯುತ್ತಿದ್ದರೂ ಇವನಿಗೆ ಮಾತ್ರ ಯಾರಲ್ಲಿಯೂ ವೈರವುಂಟಾಗುವಂತಿರುವದಿಲ್ಲ.

ಇದು ವಿಶ್ವರೂಪನಾದ ಭಗವಂತನು ತನ್ನ ಸಾಯುಜ್ಯವನ್ನು ಪಡೆಯುವದಕ್ಕೆ ಉಪಾಯವಾಗಿ ಹೇಳಿದ **ಭಕ್ತಿಯೋಗವು**. "ಅರ್ಜುನನೆ; ಯಾವನಿಗೆ ಈ ಸಾಧನಗಳು ಅಳವಟ್ಟಿರುವವೋ, ಅವನು ನನ್ನನ್ನೇ ಪಡೆದುಕೊಳ್ಳುತ್ತಾನೆ" ಎಂದು ಭಗವಂತನೇ ಉಪಸಂಹಾರಮಾಡಿರುತ್ತಾನೆ. ಆದ್ದರಿಂದ ಅರ್ಜುನನು ಮಾತ್ರವಲ್ಲ, ಯಾರು ಯಾರು ಈ ಸಾಧನಗಳನ್ನು ಅನುಷ್ಠಾನಮಾಡಿ ವಶಪಡಿಸಿಕೊಳ್ಳುವರೋ ಅವರೆಲ್ಲರೂ ಭಕ್ತಿನಿಷ್ಠರು. ಅಂಥವರು ಅವಶ್ಯವಾಗಿ ವಿಶ್ವರೂಪನಾದ ಭಗವಂತನ ಸಾಯುಜ್ಯವನ್ನು

ಪಡೆಯುವರು. ಅವರು ಮತ್ತೆ ವ್ಯಷ್ಟಿಬುದ್ಧಿಯಿಂದ ಪರಿಚ್ಛಿನ್ನವಾದ ಕರ್ಮಫಲವಾದ ದೇಹವನ್ನು ಪಡೆಯುವದಿಲ್ಲ. ಆದ್ದರಿಂದ ಶ್ರೇಯಸ್ಕಾಮರಾದವರು ಅನುಷ್ಠಾನ ಮಾಡತಕ್ಕದ್ದಿದು. ಆದ್ದರಿಂದಲೇ ಶ್ರೀಶಂಕರಾಚಾರ್ಯರು ಈ ಶ್ಲೋಕದ ಅವತರಣಿಕೆಯಲ್ಲಿ "**ಅಧುನಾ ಸರ್ವಸ್ಯ ಗೀತಾಶಾಸ್ತ್ರಸ್ಯ ಸಾರಭೂತೋಽರ್ಥೋ ನಿಃಶ್ರೇಯಸಾರ್ಥಃ ಅನುಷ್ಠೇಯತ್ವೇನ ಸಮುಚ್ಚಿತ್ಯ ಉಚ್ಯತೇ**" (ಈಗ ಗೀತಾಶಾಸ್ತ್ರಕ್ಕೆಲ್ಲ ಸಾರವಾಗಿರುವ ಈ ಮೋಕ್ಷಸಾಧನವನ್ನು ಅನುಷ್ಠಾನಮಾಡಬೇಕೆಂದು ಒಟ್ಟುಗೂಡಿಸಿ ಹೇಳಲಾಗುತ್ತದೆ) ಎಂದು ಈ ಉಪದೇಶವನ್ನು ಕೊಂಡಾಡಿರುತ್ತಾರೆ.

---

# ೮೬. ಸಗುಣನಿರ್ಗುಣೋಪಾಸನೆಗಳಲ್ಲಿ ಯಾವದು ಉತ್ತಮ ? ೧೨-(೧-೨)

(೨೦-೬-೪೮)

ಭಗವಂತನು ವಿಶ್ವರೂಪವನ್ನು ತೋರಿಸಿ ಕೊನೆಯಲ್ಲಿ "ಯಾವನು ನನ್ನ ಕರ್ಮವನ್ನೇ ಮಾಡುತ್ತಾ ನಾನೇ ಪರಗತಿಯೆಂದು ನಂಬಿ ನನ್ನ ಭಕ್ತನಾಗಿ ಬಾಹ್ಯ ವಸ್ತುಗಳಲ್ಲಿ ಸಂಗವಿಲ್ಲದೆ ಯಾರೊಬ್ಬರಲ್ಲಿಯೂ ವೈರವಿಲ್ಲದವನಾಗಿರುವನೋ ಅವನು ನನ್ನನ್ನು ಪಡೆಯುತ್ತಾನೆ" ಎಂದು ಹೇಳಿದನಷ್ಟೆ. ಈಗ ಅರ್ಜುನನು ಒಂದು ಸಂಶಯವನ್ನು ಬಗೆಹರಿಸಿಕೊಳ್ಳುವದಕ್ಕಾಗಿ ಪ್ರಶ್ನಿಸುತ್ತಿದ್ದಾನೆ:

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥** (೧೨-೧)

ಎರಡನೆಯ ಅಧ್ಯಾಯದಲ್ಲಿ ಆತ್ಮನ ನಿರ್ವಿಕಾರವಾದ ಪರಮಾರ್ಥಸ್ವರೂಪವನ್ನು ವಿಸ್ತಾರವಾಗಿ ಹೇಳಿದೆ; ಏಳರಿಂದ ಮುಂದಕ್ಕೆ ಭಗವಂತನ ವಿಭೂತಿಗಳನ್ನು ಹೇಳಿದೆ. ಹನ್ನೊಂದನೆಯ ಅಧ್ಯಾಯದಲ್ಲಿ ಭಗವಂತನ ವಿಶ್ವರೂಪದ ವಿಷಯದಲ್ಲಿ ಅರ್ಜುನನ ಕೋರಿಕೆಯಂತೆ ವಿವರಣೆಯನ್ನು ಕೊಟ್ಟಿರುತ್ತದೆ. ಒಂಬತ್ತನೆಯ ಅಧ್ಯಾಯದಲ್ಲಿ ಅವ್ಯಕ್ತಕ್ಕಿಂತ ಅವ್ಯಕ್ತನಾಗಿರುವ ಅಕ್ಷರಕ್ಕಿಂತಲೂ ಅಕ್ಷರನಾಗಿರುವ ಭಗವಂತನ ನಿಷ್ಪ್ರಪಂಚವಾದ ಪರಮಾರ್ಥಸ್ವರೂಪವನ್ನು ವರ್ಣಿಸಿದೆ. ಈಗ ಅರ್ಜುನನ ಪ್ರಶ್ನೆ ಏನೆಂದರೆ, ಹಿಂದಿನ ಅಧ್ಯಾಯದ ಕೊನೆಯಲ್ಲಿ ಹೇಳಿರುವಂತೆ ವಿಶ್ವರೂಪಭಗವಂತನನ್ನು ಭಜಿಸುವವರೇ ಹೆಚ್ಚಿನವರೊ, ಅಥವಾ ಯಾವ ವಿಶೇಷಣವೂ ಅಂಟದ ಅಕ್ಷರವೆಂಬ ಪರಮಾತ್ಮತತ್ತ್ವವನ್ನು ಭಜಿಸುವವರು ಹೆಚ್ಚಿನವರೊ?

ಈ ಪ್ರಶ್ನೆಯ ಅಭಿಪ್ರಾಯವನ್ನು ಸ್ವಲ್ಪ ಬಿಡಿಸಿ ತಿಳಿದುಕೊಳ್ಳುವದು ಒಳ್ಳೆಯದು. ಏಕೆಂದರೆ ತಟ್ಟನೆ ನೋಡಿದರೆ ವಿಶ್ವರೂಪೋಪಾಸಕರು, ಅಕ್ಷರೋಪಾಸಕರು-ಇಬ್ಬರಲ್ಲಿ ಯಾರು ಮೇಲು? -ಎಂದು ಅವರಿಬ್ಬರಿಗೂ ತಾರತಮ್ಯವನ್ನು ಅರ್ಜುನನು ಕೇಳಿರುತ್ತಾನೆಂದು ಕಾಣುತ್ತದೆ. ಆದ್ದರಿಂದ ಪ್ರಶ್ನೆಯ ಅಭಿಪ್ರಾಯವನ್ನು ಸ್ವಲ್ಪಮಟ್ಟಿಗೆ ವಿವರಿಸುವೆನು. ಪರಮಾತ್ಮನು ತಾನು ಇದ್ದಂತೆಯೇ ಇರುವ ರೂಪದಲ್ಲಿ ಯಾವದೊಂದು ವಿಶೇಷವೂ ಇರುವದಿಲ್ಲ. ಅವನು ಇಂಥವನು, ಅಂಥವನು - ಎಂದು ಯಾವದಾದರೂ ವಿಶೇಷಣವನ್ನು ಕೊಟ್ಟು ಬಣ್ಣಿಸುವದಕ್ಕಾಗಲಿ ಚಿಂತಿಸುವದಕ್ಕಾಗಲಿ ಆಗುವದೇ ಇಲ್ಲ. ಆದ್ದರಿಂದಲೇ ಶ್ರುತಿಯಲ್ಲಿ ಅವನನ್ನು ಅಸ್ಥೂಲ, ಅನಣು -ಎಂದು ಮುಂತಾಗಿ ಅವನಲ್ಲಿಲ್ಲದ ಧರ್ಮಗಳನ್ನು ಅಲ್ಲಗಳೆಯುವದರಿಂದಲೇ ತಿಳಿಸಿರುತ್ತದೆ. ಅಕ್ಷರದ ಸ್ವರೂಪವನ್ನು ಯಾವದಾದರೊಂದು ವಿಶೇಷಣದಿಂದ ತಿಳಿಸುವದಕ್ಕೆ ಹೊರಟರೆ ವಿಸ್ತಾರವಾದ ಕಾಫಿತೋಟಕ್ಕೆ ಕೆಲವೇ ಗಜಗಳ ಉದ್ದವಿರುವ ತಂತಿ ಬೇಲಿಯನ್ನು ಕಟ್ಟುವ ಪ್ರಯತ್ನವಾಗುತ್ತದೆ. ಇರಲಿ; ಅದೇ ಪರಮಾರ್ಥಸ್ವರೂಪವು. ಉಪಾಧಿಗಳಿಂದ ತೋರುವ ಬಗೆಗಳಲ್ಲಿ ವಿಶ್ವರೂಪವೂ ಒಂದು. ಬಣ್ಣದ ಚಿಮ್ನಿಗಳಿಂದ ದೀಪವೂ ಬಣ್ಣಬಣ್ಣವಾಗಿ ತೋರುವಂತೆ ಆಯಾ ಉಪಾಧಿಯಿಂದ ಆಯಾರೂಪವು ಪರಮಾತ್ಮನಲ್ಲಿದ್ದಂತೆ ತೋರುತ್ತಿರುತ್ತದೆ. ಇಡಿಯ ಪ್ರಪಂಚವೇ ಶರೀರವಾಗುಳ್ಳ ಪರಮಾತ್ಮರೂಪವು ಇಂಥ ಸೋಪಾಧಿಕರೂಪಗಳಲ್ಲೆಲ್ಲ ದೊಡ್ಡದು. ಹೀಗೆ ನಿರುಪಾಧಿಕವಾದ ಪರಮಾತ್ಮಸ್ವರೂಪ ಮತ್ತು ಸೋಪಾಧಿಕವಾದ ವಿಶ್ವರೂಪ-ಎರಡನ್ನೂ ಭಗವಂತನು ಅಲ್ಲಲ್ಲಿ ಉಪದೇಶಮಾಡಿರುವದರಿಂದ ಅರ್ಜುನನಿಗೆ ಈ ಎರಡು ಬಗೆಯ ಉಪಾಸನೆಗಳಲ್ಲಿ ಯಾವದು ಹೆಚ್ಚಿನದು? -ಎಂಬ ಸಂಶಯವು ಬಂದಿದೆ.

ಇಲ್ಲಿ ಅಕ್ಷರೋಪಾಸಕರು, ವಿಶ್ವರೂಪೋಪಾಸಕರು - ಈ ಇಬ್ಬರಲ್ಲಿ ಯಾರು ಹೆಚ್ಚು ಎಂಬುದು ಪ್ರಕೃತವಲ್ಲ. ಏಕೆಂದರೆ ಅರ್ಜುನನು ಎರಡೂ ಉಪದೇಶಗಳನ್ನು ಕೇಳಿರುವದರಿಂದ, ನಾನು ಯಾವದನ್ನು ಮಾಡಲಿ? ನನಗೆ ಸುಲಭವಾಗಿ ಯಾವದು ದಕ್ಕೀತು? - ಎಂಬ ಸಂಶಯದಿಂದ ಗ್ರಸ್ತನಾಗಿರುತ್ತಾನೆ. ಆದ್ದರಿಂದ "ತೇಷಾಂ ಕೇ ಯೋಗವಿತ್ತಮಾಃ" ಅವರಲ್ಲಿ ಯೋಗವನ್ನು ಹೆಚ್ಚು ಚೆನ್ನಾಗಿ ಬಲ್ಲವರು ಯಾರು? ಯಾವ ಯೋಗವು ಹೆಚ್ಚಿನದು? ಯಾವ ಸಾಧನವು ಸುಖಕರವಾದದ್ದು? -ಎಂಬುದೀಗ ಪ್ರಶ್ನೆ. ಉದಾಹರಣೆಗೆ ಕೆಲವೇ ತೆಂಗಿನಕಾಯಿ ಬೇಕಾದವನು ತೋಟವನ್ನು ಮಾಡುವದು, ಅಥವಾ ಒಂದು ತೆಂಗಿನಕಾಯಿಮಂಡಿ ಇಡುವದೇನೂ ಜಾಣತನವಲ್ಲ; ಅಂಗಡಿಯಲ್ಲಿ ತನ್ನ ಉದ್ದೇಶವನ್ನು ನೆರವೇರಿಸಿಕೊಳ್ಳಬಹುದಾಗಿದೆ. ಆದರೆ ಹೆಚ್ಚಾಗಿ ಜಮೀನು, ಆಳುಕಾಳುಗಳೂ ಧನಸಂಪತ್ತೂ ಇರುವವನು ತೆಂಗಿನಕಾಯಿಗಳನ್ನು

ಕೊಂಡು ಮಾರಾಟಮಾಡುವದಕ್ಕಿಂತ ತೋಟವನ್ನು ಮಾಡುವದೇ ಹೆಚ್ಚು ಲಾಭದಾಯಕ ವಾಗಿರುತ್ತದೆ. ಹಾಗೆ ಸದ್ಯದಲ್ಲಿ ಪ್ರಕೃತವಾಗಿರುವ ಈ ಎರಡು ಉಪಾಸನೆಗಳಲ್ಲಿ ನಾನು ಯಾವ ಉಪಾಸನೆಯನ್ನು ಅನುಸರಿಸುವದು ಜಾಣತನ? -ಎಂಬುದೇ ಅರ್ಜುನನ ಪ್ರಶ್ನೆ.

ಈ ಸಂದರ್ಭದಲ್ಲಿ ಇನ್ನೊಂದು ವಿಷಯವನ್ನೂ ಇಲ್ಲಿ ಸ್ಫುಟಗೊಳಿಸಬೇಕಾಗಿದೆ. ಶ್ರುತಿಯಲ್ಲಿಯೂ ಭಗವದ್ಗೀತೆಯಲ್ಲಿಯೂ ಜ್ಞಾನ, ಉಪಾಸನೆ - ಈ ಎರಡು ಶಬ್ದಗಳನ್ನೂ ಪರ್ಯಾಯವಾಗಿಯೇ ಬಳಸಿರುತ್ತದೆ. ಈಗ ವೇದಾಂತಿಗಳು ಜ್ಞಾನ ಎಂದರೆ ವಸ್ತುತಂತ್ರವಾದದ್ದು, ಉಪಾಸನೆ ಎಂದರೆ ಭಾವನಾರೂಪವಾದದ್ದು - ಎಂಬ ಅರ್ಥವಿವೇಚನೆಯನ್ನು ಮಾಡಿಕೊಂಡಿರುತ್ತಾರೆ. ಇದು ವಿಷಯವಿಮರ್ಶೆಗೆ ಬೇಕಾಗುತ್ತದೆ ಯಾದ್ದರಿಂದ ಹೀಗೆ ಪಾರಿಭಾಷಿಕವಾಗಿ ಈ ಶಬ್ದಗಳನ್ನು ಉಪಯೋಗಿಸಿಕೊಂಡದ್ದು ಯುಕ್ತವೇ ಆಗಿರುತ್ತದೆ. ಆದರೆ ಗೀತೆಯೇ ಮುಂತಾದ ಪ್ರಾಚೀನಗ್ರಂಥಗಳಲ್ಲಿ ಈ ಎರಡು ಶಬ್ದಗಳನ್ನೂ ಎರಡರ್ಥದಲ್ಲಿಯೂ ಉಪಯೋಗಿಸುತ್ತಾರಾದ್ದರಿಂದ ಯಾವ ಸಂದರ್ಭದಲ್ಲಿ ಯಾವ ಅರ್ಥವನ್ನು ಸ್ವೀಕರಿಸಬೇಕೆಂಬುದನ್ನು ವಿವೇಚನೆಯಿಂದ ಗೊತ್ತುಪಡಿಸಬೇಕಾಗುತ್ತದೆ. ಉಪಾಸನೆ ಎಂದರೆ ಆ ವಸ್ತುವಿನ ಚಿಂತನೆಯಲ್ಲಿಯೇ ಸತತವಾಗಿ ಇದ್ದುಕೊಂಡುಬಿಡುವದು. ಶಾಸ್ತ್ರದಲ್ಲಿ ಹೇಳಿರುವ ಗುಣಗಳಿಂದ ಕೂಡಿದ ಧ್ಯೇಯವನ್ನು, ಲೌಕಿಕವಸ್ತುಗಳ ಚಿಂತನೆಗೆ ಎಡೆಗೊಡದೆ, ಭಾವನೆಯನ್ನು ಮಾಡುತ್ತಾ ಇರುವದೇ ಉಪಾಸನೆಯು. ಈ ಉಪಾಸನೆಯು ಪುರುಷಪ್ರಯತ್ನಕ್ಕೆ ಅಧೀನ ವಾಗಿರುತ್ತದೆ; ಪ್ರಯತ್ನವು ಸಡಿಲವಾದರೆ ಭಾವನೆಯು ನಿಂತುಹೋಗುವದು. ಪ್ರಯತ್ನವು ಬಲವಾಗಿ ಬಹುಕಾಲದವರೆಗೆ ನಡೆಯುತ್ತಿದ್ದರೆ ಧ್ಯೇಯವು ಮನಸ್ಸಿನಲ್ಲಿ ನಿಂತುಬಿಡುವದು; ಆಗ ಅದರ ಸಾಕ್ಷಾತ್ಕಾರವಾದಂತಾಯಿತು. ಇದಿಷ್ಟೂ ಉಪಾಸನೆಯ ವಿಚಾರವಾಯಿತು.. ಇನ್ನು ಜ್ಞಾನವೆಂಬುದು ವಸ್ತುವಿಗೂ ಪ್ರಮಾಣಕ್ಕೂ ತಕ್ಕಂತೆ ಆಗುವದು. ಉದಾಹರಣೆಗೆ ದೂರದಲ್ಲಿರುವ ಕಪ್ಪೆಯಚಿಪ್ಪು ಬೆಳ್ಳಿಯಂತೆ ಕಾಣುತ್ತಿರು ವದು, ಅಥವಾ ಹಗ್ಗವು ಹಾವಿನಂತೆ ಕಾಣುತ್ತಿರುವದು, ಹತ್ತಿರಕ್ಕೆ ಹೋಗಿ ನೋಡಿದರೆ ಇದು ಕಪ್ಪೆಯಚಿಪ್ಪೇ ಅಥವಾ ಹಗ್ಗವೇ ಎಂದು ಗೊತ್ತಾಗಿ ಬಿಡುತ್ತದೆಯಷ್ಟೆ. ಇನ್ನುಮೇಲೆ ಆ ವಸ್ತು ಕಪ್ಪೆಯಚಿಪ್ಪೆಂದು ಅಥವಾ ಹಗ್ಗವೆಂದು ನೆನಪಿನಲ್ಲಿಡುವದಕ್ಕಾಗಿ ನಾವು ಯಾವ ಪ್ರಯತ್ನವನ್ನೂ ಮಾಡಬೇಕಾದದ್ದಿಲ್ಲ. ವಸ್ತುವಿನ ಜ್ಞಾನವಾದ್ದರಿಂದ ಅದು ತಾನೇ ನಿಂತುಬಿಡುತ್ತದೆ. ಇದರಂತೆ ಸಾಮಾನ್ಯಸ್ಥಿತಿಯಲ್ಲಿ ದೇಹಾದಿಗಳೇ ನಾವೆಂಬ ಅರಿವು ಉಂಟಾಗಿದ್ದರೂ ವಿವೇಚನೆಮಾಡಿ ನೋಡಿದರೆ ದೇಹಾದಿಗಳಿಗಿಂತ ವ್ಯತಿರಿಕ್ತನಾದ ಆತ್ಮನೇ ತಾನೆಂದು ತಿಳಿದುಬಿಡುತ್ತದೆ; ಶಾಸ್ತ್ರದಲ್ಲಿ ಹೇಳಿರುವಂತೆ

ಇನ್ನೂ ಒಳಹೊಕ್ಕು ವಿಮರ್ಶೆಮಾಡಿದರೆ ದೇಹಾದಿಗಳೆಲ್ಲ ಸ್ವಪ್ನಗಳಂತೆ ಅಸತ್ಯವೆಂತಲೂ ಆತ್ಮನೊಬ್ಬನೇ ಪರಮಾರ್ಥವೆಂತಲೂ ಗೊತ್ತಾಗಿಬಿಡುತ್ತದೆ. ಯಾವನಿಗೆ ಹೀಗೆ ದೇಹಾದಿಗಳು ಅನಿತ್ಯ, ಅಶುಚಿ, ದುಃಖಮಯ -ಎಂಬ ಜ್ಞಾನವುಂಟಾಗಿ ಅವುಗಳ ಅಸತ್ಯತೆಯು ಮನದಟ್ಟಾಗುವದೋ ಅವನು ಇನ್ನುಮುಂದೆ ಎಂದಿಗೂ ಅವುಗಳಲ್ಲಿ ನಾನು-ನನ್ನದು ಎಂಬ ಭಾವವನ್ನು ಇಟ್ಟುಕೊಳ್ಳಲಾಗುವದಿಲ್ಲ. ಕೂಟಸ್ಥನಿತ್ಯನಾದ ಆತ್ಮನಲ್ಲಿಯೇ ಅವನ ಮನಸ್ಸು ನಿಂತುಬಿಡುತ್ತದೆ. ಇದು ಜ್ಞಾನವು.

ಈಗ ಅರ್ಜುನನು ಕೇಳುವದೇನೆಂಬುದನ್ನು ವಿಮರ್ಶಿಸೋಣ. ಭಗವಂತನನ್ನು ವಿಶ್ವರೂಪದಿಂದ ಸತತವಾಗಿ ಭಾವಿಸುತ್ತಿರುವ ಯೋಗವು ಸುಖಕರವೊ, ಅಥವಾ ಆತ್ಮನು ಹುಟ್ಟುವದಿಲ್ಲ, ಸಾಯುವದಿಲ್ಲ. ಜಗಜ್ಜನ್ಮಾದಿಕಾರಣನಾಗಿ ನಿತ್ಯಶುದ್ಧ ಬುದ್ಧಮುಕ್ತನಾಗಿರುವನು -ಎಂಬ ತತ್ತ್ವವಿಚಾರವನ್ನು ಅವಲಂಬಿಸಿ ಆತ್ಮತತ್ತ್ವದ ಅನುಸಂಧಾನದಲ್ಲಿಯೇ ನಿಂತಿರುವದು ಸುಲಭವೊ? ವಿಶ್ವರೂಪೋಪಾಸಕರು, ಅಕ್ಷರೋಪಾಸಕರು - ಇವರಿಬ್ಬರಲ್ಲಿ ಯಾರು ಯುಕ್ತತಮರು?

ಅರ್ಜುನನ ಅಭಿಪ್ರಾಯವು ಇದೇ ಎಂಬುದು ಭಗವಂತನ ಉತ್ತರದಿಂದಲೂ ಗೊತ್ತಾಗುತ್ತದೆ. ಹೇಗೆಂದರೆ ಭಗವಂತನು ಹೇಳಿರುವದನ್ನು ನೋಡಿರಿ :

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥** (೧೨-೨)

"ನನ್ನಲ್ಲಿಯೇ ಮನಸ್ಸಿಟ್ಟು, ಯಾರು ನಿತ್ಯಯುಕ್ತರಾಗಿ ಹೆಚ್ಚಿನ ಶ್ರದ್ಧೆಯಿಂದ ಕೂಡಿದವರಾಗಿ ಉಪಾಸನೆಮಾಡುತ್ತಿರುವರೋ, ಅವರೇ ಯುಕ್ತತಮರೆಂದು ನನ್ನ ಅಭಿಮತವು."

ಉಪಾಸಕನೂ ಯುಕ್ತನು, ಅಕ್ಷರಚಿಂತಕನೂ ಯುಕ್ತನೇ; ಯುಕ್ತನೆಂದರೆ ಭಗವಂತನಲ್ಲಿಯೇ ಮನಸ್ಸನ್ನು ಅನುಚಿಂತನೆಯಿಂದ ಕೂಡಿಸಿಕೊಂಡಿರುವವನು. ಆದರೆ ಇವರಿಬ್ಬರಲ್ಲಿ ಯುಕ್ತತಮನು ಯಾರು? ಯಾರ ಸಾಧನವು ಹೆಚ್ಚು ಸುಲಭಸಾಧ್ಯವು? ಎಂದರೆ ಯಾರು ಹಿಂದೆ ಹೇಳಿರುವಂತೆ ನಿತ್ಯಯುಕ್ತರಾಗಿ, 'ಮತ್ಕರ್ಮಕೃನ್ಮತ್ಪರಮಃ' ಎಂಬ ರೀತಿಯಿಂದ ಎಲ್ಲೆಲ್ಲಿಯೂ ನನ್ನನ್ನೇ ಭಾವನೆ ಮಾಡುತ್ತಿರುವರೋ ಅವರೇ ಯುಕ್ತತಮರು. ಹಿಂದೆ "ಕರ್ಮಯೋಗ, ಕರ್ಮಸಂನ್ಯಾಸ - ಇವುಗಳೆರಡನ್ನೂ ಹೊಗಳುತ್ತಿರುವೆಯಲ್ಲ; ಇವುಗಳಲ್ಲಿ ಯಾವದು ಹೆಚ್ಚು ಶ್ರೇಯಸ್ಕರವು? ಹೇಳಿಬಿಡು" ಎಂದು ಅರ್ಜುನನು ಕೇಳಿದ್ದಕ್ಕೆ ಭಗವಂತನು ಹೇಳಿರುವ ಉತ್ತರವನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು. "ಸಂನ್ಯಾಸವೂ

ಕರ್ಮಯೋಗವೂ ಎರಡೂ ನಿಃಶ್ರೇಯಸಕ್ಕೆ ಕಾರಣವೇ; ಆದರೆ ಅವೆರಡರಲ್ಲಿ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವೇ ಮೇಲು, ಅದೇ ನಿನಗೆ ವಿಶಿಷ್ಟಸಾಧನ ವಾಗಿರುತ್ತದೆ". (೫-೨) ಎಂದು ಭಗವಂತನು ಹೇಳಿರುತ್ತಾನೆ. ಅಲ್ಲಿ ಸಂನ್ಯಾಸವು ಕಡಿಮೆಯ ಸಾಧನವೆಂದೇನೂ ಭಗವಂತನ ಅಭಿಮತವಾಗಿರಲಿಲ್ಲ; ಏಕೆಂದರೆ "ಸಂನ್ಯಾಸವನ್ನು ಕರ್ಮಯೋಗವಿಲ್ಲದೆ ಪಡೆದುಕೊಳ್ಳುವದು ಕಷ್ಟ" ಎಂದು ಮುಂದೆ ಹೇಳಿರುತ್ತಾನೆ. ಯಮನಿಯಮಾದಿ ಸಾಧನಗಳಿಂದೊಡಗೂಡಿರುವ ಸಂನ್ಯಾಸಕ್ಕಿಂತ ಕರ್ಮಯೋಗವೇ ಮಾಡುವದಕ್ಕೆ ಸುಲಭವಾದದ್ದು ಎಂದೇ ಅಲ್ಲವೆ, ಭಗವಂತನ ಅಭಿಪ್ರಾಯ? ಅದರಂತೆಯೇ ಇಲ್ಲಿಯೂ ತಿಳಿಯಬೇಕು. 'ವಿಶ್ವರೂಪೋಪಾಸಕರೂ ಅಕ್ಷರೋಪಾಸಕರೂ ಇಬ್ಬರೂ ಯುಕ್ತರೇ ಆದರೂ ಅವರಿಬ್ಬರಲ್ಲಿ ವಿಶ್ವರೂಪೋಪಾಸಕರ ಸಾಧನವೇ ಸುಲಭವಾಗಿರುತ್ತದೆ. ಆದ್ದರಿಂದ ನೀನು ಅದನ್ನೇ ಮಾಡು' ಎಂದು ಭಗವಂತನು ಅರ್ಜುನನಿಗೆ ಉಪದೇಶಿಸಿರುತ್ತಾನೆ. ಅಕ್ಷರೋಪಾಸಕರೂ ನನ್ನನ್ನೇ ಸೇರುವರಾದರೂ ಅವರ ವಿಷಯದಲ್ಲಿ ವಿವರವಾಗಿ ಹೇಳತಕ್ಕದ್ದು ಇದೆ. ಸದ್ಯಕ್ಕೆ ಸೌಲಭ್ಯದೃಷ್ಟಿಯಿಂದ ನೋಡಿದರೆ ವಿಶ್ವರೂಪೋಪಾಸನೆಯೇ ಹೆಚ್ಚಿನದು; ಅದನ್ನೇ ನೀನು ಮಾಡು - ಎಂಬುದು ಭಗವಂತನ ಆಶಯವು.

ಸಾಕಾರವಾಗಿ ಸಗುಣವಾಗಿ ಭಗವಂತನನ್ನು ಉಪಾಸನೆಮಾಡುವದು, ಜಗತ್ತೆಲ್ಲವನ್ನೂ ಪರಮಾತ್ಮನ ರೂಪವೇ ಎಂದು ಭಾವಿಸುವದು, ಬಹಳ ದೊಡ್ಡ ಸಾಧನೆ. ಅದೊಂದು ಪುಣ್ಯತಮವಾದ ಸಾಧನವು. ನಾವು ಕಂಡಿರುವ, ಕೇಳಿರುವ, ಊಹಿಸುವ, ಕಲ್ಪಿಸುವ - ಜಗತ್ತೆಲ್ಲವೂ, ಇಡಿಯ ಬ್ರಹ್ಮಾಂಡವೇ ಭಗವಂತನ ಶರೀರವೆಂದು ಕಲ್ಪಿಸುವದು ಬಹಳ ಉದಾರವಾದದ್ದು. 'ಅಂಡಸ್ಯಾನ್ತಸ್ತ್ವಿಮೇ ಲೋಕಾಃ' ಲೋಕಗಳೆಲ್ಲವೂ ಈ ಬ್ರಹ್ಮಾಂಡದಲ್ಲಿಯೇ ಅಡಕವಾಗಿರುತ್ತವೆ. ಈ ಉಪಾಸನೆಗಳನ್ನು ಕೆಲವರಾದರೂ ಮಾಡುವದಾಗಿದ್ದರೆ ಈಗ ನಮ್ಮಗಳಿಗೆ ಒದಗಿರುವ ಕಷ್ಟವು ಎಂದಿಗೂ ಬರುತ್ತಿರಲಿಲ್ಲ. ಏಕೆಂದರೆ ಈ ಉಪಾಸನೆಯನ್ನು ಮಾಡುವವರಿಗೆ ಯಾರೊಬ್ಬರಲ್ಲಿಯೂ ರಾಗದ್ವೇಷಗಳಿರುವದಕ್ಕೆ ಅವಕಾಶವಿರುವದಿಲ್ಲ. ವಿರಾಡು ಪಾಸನೆಯ ತತ್ತ್ವವೇನು? ಕಾರ್ಯಕರಣಸಂಘಾತವಾಗಿರುವ ನಮ್ಮ ಶರೀರದಲ್ಲಿ ಎಲ್ಲಾ ಅವಯವಗಳೂ ಸೇರಿಕೊಂಡು ಒಟ್ಟುಶರೀರಕ್ಕಾಗಿ ಕೆಲಸಮಾಡುತ್ತಿರುವಂತೆ ಪ್ರಪಂಚವೆಲ್ಲ ವಿರಾಟ್ಪುರುಷನ ಶರೀರವೆಂಬ ಭಾವನೆಯಿಂದ ಎಲ್ಲರೂ ಒಟ್ಟುಗೂಡಿ ಮಾಡುವ ವ್ಯವಹಾರವು ಎಷ್ಟು ಆನಂದಕರವಾಗಿದ್ದೀತು! ಶರೀರದಲ್ಲಿ ಕಣ್ಣಿಗೆ, ಕಿವಿಗೆ, ಮೂಗಿಗೆ ಇನ್ನೂ ಬೇರೆಬೇರೆಯ ಅವಯವಗಳಿಗೆ ಬೇರೆಬೇರೆಯ ಕೆಲಸವಿರುತ್ತದೆ. ಆದರೆ ಅವೆಲ್ಲ ಒಟ್ಟುಗೂಡಿ, ಒಂದಾಗಿ ಹೊಂದುಗೆಯಿಂದ

ಶರೀರಕರಣಸ್ವಾಮಿಯಾದ ಜೀವನಿಗೋಸ್ಕರ ಕೆಲಸವನ್ನು ಮಾಡುತ್ತಿರುವವು. ಜೇನು ಹುಟ್ಟಿಯನ್ನು ಎಲ್ಲಾ ಜೇನುಹುಳುಗಳೂ ಸೇರಿ ಸಜ್ಜುಗೊಳಿಸುತ್ತಿರುವಂತೆ ನಾವೆಲ್ಲರೂ ಸೇರಿ ಈ ಪ್ರಪಂಚವನ್ನು ತಯಾರುಮಾಡುತ್ತಿರುವೆವು. ಇಲ್ಲಿ ನಾವೆಲ್ಲ ಎಷ್ಟುಮಟ್ಟಿಗೆ ಹೊಂದಿಗೆಯಿಂದ ಕೆಲಸಮಾಡುವೆವೋ ಅಷ್ಟುಮಟ್ಟಿಗೆ ಈ ಪ್ರಪಂಚವು ಒಳ್ಳೆಯದಾಗಿ ಅಥವಾ ಕೆಟ್ಟದಾಗಿ ರೂಪುಗೊಳ್ಳುತ್ತಿರುವದು. ಅವಿಭಕ್ತಕುಟುಂಬದ ಜನರೆಲ್ಲರೂ ಒಂದೇ ಉದ್ದೇಶದಿಂದ ಕುಟುಂಬದ ಪುರೋಭಿವೃದ್ಧಿಗಾಗಿ ದುಡಿಯುವಂತೆ 'ಸರ್ವೇ ಜನಾಃ ಸುಖಿನೋ ಭವನ್ತು' ಎಂದು ನಾವೆಲ್ಲರೂ ದುಡಿಯುವದಕ್ಕೆ ಈ ವಿಶ್ವರೂಪೋಪಾಸನೆಯ ಭಾವನೆಯು ಬಹಳ ಸಹಾಯಕವಾಗುತ್ತದೆ. ದುರ್ದೈವದಿಂದ ಅವಿಭಕ್ತಕುಟುಂಬವು ಹಿಂದಿನ ಕಾಲದ ಆದರ್ಶವಾಯಿತು; ಈ ಉಪಾಸನೆಯೂ ಹಾಗೆಯೇ ಪುರಾಣದ ವರ್ಣನೆಯಲ್ಲಿಯೇ ವಿಶೇಷವಾಗಿ ಕಾಣಬರುವದಾಗಿರುತ್ತದೆ.

ವಿರಾಟ್ಪುರುಷನ ವರ್ಣನೆಯನ್ನು ಪುರುಷಸೂಕ್ತದಲ್ಲಿ ಕೊಟ್ಟಿರುವದನ್ನು ನಾವು ಮನಸ್ಸಿಗೆ ತಂದುಕೊಳ್ಳಬೇಕು. ಪುರುಷನೆಂದರೆ ಎಲ್ಲೆಲ್ಲಿಯೂ ಪೂರ್ಣನಾಗಿ-ತುಂಬಿಕೊಂಡು- ಇರುವವನು. ಪುರುಷಸೂಕ್ತವು ನಾರಾಯಣಋಷಿ ಪ್ರೋಕ್ತವೆಂದು ಕೆಲವರು ಹೇಳುತ್ತಾರೆ; ನಾರಾಯಣನೇ ಅದಕ್ಕೆ ದೇವತೆ ಎಂದು ಕೆಲವರು. ನರರಿಗೆಲ್ಲ ಅಯನ (ಸ್ಥಾನ) ವಾಗಿರುವವನು ನಾರಾಯಣನು. ಆ ಸೂಕ್ತದಲ್ಲಿ ಹೇಳಿರುವದೇನೆಂದರೆ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು - ಇವರೆಲ್ಲ ಪರಮಾತ್ಮನ ಅಂಗಗಳು. ಬ್ರಾಹ್ಮಣರು ಆ ಪುರುಷನ ಮುಖ, ಕ್ಷತ್ರಿಯರು ಅವನ ಬಾಹುಗಳು, ವೈಶ್ಯರು ತೊಡೆಗಳು, ಶೂದ್ರರು ಪಾದಗಳು. ಕೆಲವರು ಶೂದ್ರನು ಪಾದವೆಂದದ್ದರಿಂದ ಅವರು ಕೀಳೆಂಬ ಭಾವನೆ ಬರುವದೆನ್ನುವರು; ಅದು ತಪ್ಪು. ಎಲ್ಲರೂ ನಮಸ್ಕರಿಸುವ ಪರಮಾತ್ಮನ ಪಾದವು ಅವರು ಎಂದರೆ ಎಷ್ಟು ಪವಿತ್ರಸ್ಥಾನವಾಯಿತು! ಇದಂತಿರಲಿ. ಒಂದು ಶರೀರದ ಅವಯವಗಳೆಲ್ಲ ಒಂದೇ ಕಾರ್ಯಕ್ಕಾಗಿ ಸೇರಿಕೊಂಡು ಕೆಲಸಮಾಡುವಂತೆ ಎಲ್ಲರೂ ಒಟ್ಟುಗೂಡಿ ಕೆಲಸಮಾಡಿ ಸುಖಶಾಂತಿಗಳನ್ನು ಸಂಪಾದಿಸುವದಕ್ಕೆ ಸಾಧನವಾದ ಉತ್ತಮಭಾವನೆಯಿದು. "ತಮ್ಮ ತಮ್ಮ ಕರ್ಮಗಳಿಂದ ಆ ಭಗವಂತನಿಗೆ ಅರ್ಚನೆಮಾಡಿದರೆ ಮಾನವನಿಗೆ ಸಿದ್ಧಿಯಾಗುವದು" ಎಂದು ಮುಂದೆ ಈ ಗೀತೆಯಲ್ಲಿಯೇ ಹೇಳಿರುತ್ತದೆ.

ಭಗವಂತನ ಅಂಗಗಳಾಗಿ ನಾವು ಆ ಭಗವಂತನ ಶರೀರದಿಂದ ಬೇರ್ಪಟ್ಟರೆ, ಎಲ್ಲರಿಗೂ ಸುಖವಾಗುವದಕ್ಕೆ ಸಹಾಯಮಾಡದೆ ಸ್ವಾರ್ಥಪರರಾದರೆ, ಶರೀರದಿಂದ ಆಪರೇಷನ್ ಮಾಡಿ ತೆಗೆದುಹಾಕಿದ ಕೈ, ಕಾಲು, ಮುಂತಾದವುಗಳಂತೆ ದುಃಖ ಭಾಜನರಾಗುವೆವು. ಶ್ರುತಿಗಳಲ್ಲಿ ಪ್ರಾಣಸಂವಾದದ ಕಥೆಯೊಂದಿದೆ. ಶರೀರದ

ಕರಣಗಳೆಲ್ಲವೂ ಬ್ರಹ್ಮನ ಹತ್ತಿರಕ್ಕೆ ಹೋಗಿ ನಮ್ಮಲ್ಲಿ ಯಾರು ಹೆಚ್ಚು? ಎಂದು ಕೇಳಿದವಂತೆ; ಶರೀರವನ್ನು ಯಾರು ಬಿಟ್ಟುಹೋದರೆ ಅದು ಅಮಂಗಲವಾಗಿ ತೋರುವದೋ ಅವನೇ ಹೆಚ್ಚೆಂದು ತಿಳಿಯಿರಿ -ಎಂದನು. ಆಗ ಇಂದ್ರಿಯಗಳು ಒಂದೊಂದಾಗಿ ಶರೀರವನ್ನು ಬಿಟ್ಟುಹೋಗುವದಕ್ಕೆ ಮೊದಲುಮಾಡಿದವು; ಆದರೆ ಶರೀರಕ್ಕೇನೂ ಹಾನಿಯಾಗಲಿಲ್ಲ. ಆಯಾ ಇಂದ್ರಿಯದ ಕೆಲಸವು ಮಾತ್ರ ತಪ್ಪಿತ್ತು. ಶರೀರವು ಮಂಗಳವಾಗಿಯೇ ಕಾಣುತ್ತಿತ್ತು. ಕೊನೆಗೆ ಪ್ರಾಣವು ಶರೀರವನ್ನು ಬಿಟ್ಟುಹೋಗುವದಕ್ಕೆ ಯತ್ನಿಸಲು ಅಷ್ಟರಿಂದಲೇ ಅದು ಅಮಂಗಲವಾಗಿ ತೋರುವದಕ್ಕಾರಂಭಿಸಿತಂತೆ! ಆಗ ಇಂದ್ರಿಯಗಳೆಲ್ಲ ಪ್ರಾಣನನ್ನೇ ಶ್ರೇಷ್ಠನೆಂದು ಒಪ್ಪಿಕೊಂಡವಂತೆ. ತಮಗೆ ಆ ಪ್ರಾಣನಿಂದಲೇ ಶಕ್ತಿಯೂ ಪುಷ್ಟಿಯೂ ಬರುವವೆಂದೂ ತಿಳಿದುಕೊಂಡವಂತೆ! ವಿಶ್ವರೂಪನಾದ ಭಗವಂತನು ನಮಗೆ ಪ್ರಾಣಸ್ಥಾನದಲ್ಲಿರುತ್ತಾನೆ. ಅವನಿಗಾಗಿ ನಾವೆಲ್ಲರೂ ಕೆಲಸಮಾಡುವವರು, ಅವನಿಂದಲೇ ನಮ್ಮ ಸ್ವರೂಪ, ಸ್ಥಿತಿ, ಪ್ರವೃತ್ತಿ ಎಲ್ಲವೂ; ಆತನಿಂದ ನಾವು ಬೇರೆಯಾದರೆ, ಸಮಷ್ಟಿಜೀವನದಲ್ಲಿಯೇ ನಾವು ಒಂದಾಗುವೆವೆಂದು ತಿಳಿದುಕೊಂಡು ಪರಸ್ಪರೋಪಕಾರದ ಮೂಲಕವಾಗಿ ಆತನನ್ನು ಅರ್ಚನೆಮಾಡದೆ ಇದ್ದರೆ, ನಮ್ಮ ಸರ್ವಸ್ವವನ್ನೂ ಕಳೆದುಕೊಂಡಂತೆ ಆಯಿತು. ಆದ್ದರಿಂದ ಈ ಪೃಥಗ್ಭಾವನೆಯನ್ನು ಬಿಟ್ಟು ಎಲ್ಲರೂ ಒಟ್ಟಾಗಿ ಆ ಪರಮಾತ್ಮನ ಶರೀರವಾಗಿರುವೆವೆಂಬ ಭಾವವನ್ನು ಮನಸ್ಸಿಗೆ ತಂದುಕೊಳ್ಳೋಣ; ಆ ವಿರಾಟ್ ಪುರುಷನ ಚಿಂತನೆಯನ್ನು ಸಂತತವಾಗಿ ಮಾಡುವದಕ್ಕೆ ಪ್ರಯತ್ನಮಾಡೋಣ. ಅದೇ ವಿಶ್ವರೂಪದ ಉಪಾಸನೆಯಾಗುವದು.

ಈ ಉಪಾಸನೆಯು ಎಲ್ಲರಿಗೂ ದಕ್ಕುವ ತುತ್ತಲ್ಲ. ಆ ಭಗವಂತನು ಅಣುವಿಗಿಂತಲೂ ಅಣು, ಮಹತ್ತಿಗಿಂತಲೂ ಮಹತ್ತು. ಅವನು ಇಚ್ಛಾಮಾತ್ರದಿಂದ ಯಶೋದೆಯಂಥವರ ಕೈಯಲ್ಲಿರುವ ಮಗುವಾಗಬಲ್ಲನು; ಬಾಯಲ್ಲಿ ಹದಿನಾಲ್ಕು ಲೋಕಗಳನ್ನೂ ತೋರಿಸಬಲ್ಲನು. ಆತನು ದಯಾಘನನು; ಅವನು ನಮ್ಮನಮ್ಮ ಹೃದಯದಲ್ಲಿಯೇ ಇದಾನೆಂದು ಕಲ್ಪಿಸಿಕೊಂಡರೆ, ನಮ್ಮೊಳಗೇ ಸನ್ನಿಹಿತನಾಗುವನು. ಆತನನ್ನು ಹೃದಯದಲ್ಲಿಟ್ಟುಕೊಂಡು ಧ್ಯಾನಮಾಡೋಣ. "ಭಗವಂತ, ಯಾವಾಗಲೂ ನನ್ನ ಹೃದಯದಲ್ಲಿರು; ಕಾಲಕಾಲಕ್ಕೆ ಒಳ್ಳೆಯ ಬುದ್ಧಿಯನ್ನು ಕೊಟ್ಟು ಸರಿಯಾದ ಹಾದಿಯಲ್ಲಿ ನಡೆಯುವಂತೆ ಮಾಡು!" ಎಂದು ದೈನ್ಯದಿಂದ ಬೇಡಿಕೊಳ್ಳೋಣ. ಮನಸ್ಸಿನ ಭಾವವೆಂಬ ಪುಷ್ಪವನ್ನು ಆತನಿಗೆ ಅರ್ಪಿಸಬೇಕು; 'ನಾನು ಪ್ರಯತ್ನಿಸುತ್ತೇನೆ, ನೀನು ಅನುಗ್ರಹಿಸು' ಎಂದು ಬೇಡಿಕೊಳ್ಳುತ್ತಿರಬೇಕು. ಭಗವಂತನು ಯಾವಾಗಲೂ ಎಲ್ಲೆಲ್ಲಿಯೂ ಇರುತ್ತಾನೆ; ಆದ್ದರಿಂದ ನಮ್ಮ ಹೃದಯದಲ್ಲಾಗಲಿ ಮತ್ತೆಲ್ಲಿಯಾದರೂ

ಆತನ ಸನ್ನಿಧಿಯ ಭಾವನೆಯು ನಮ್ಮ ಮನಸ್ಸಿಗೆ ಬಂದರೆ ಸಾಕು, ಅಲ್ಲಿ ಇದ್ದೇ ಇರುತ್ತಾನೆ. ಈ ಭಾವನೆಯು ಸತತವಾಗಿ ನಡೆದರೆ ಅದೇ ಧ್ಯಾನವು.

ಆದರೆ ಇಲ್ಲಿ ಒಂದು ಎಚ್ಚರಿಕೆ ಅವಶ್ಯಕವಾಗಿರುತ್ತದೆ. ಭಗವಂತನನ್ನು ಗೊತ್ತಾದ ಕಾಲಗಳಲ್ಲಿ ಧ್ಯಾನಿಸಿ ಮಿಕ್ಕ ಕಾಲಗಳಲ್ಲಿ ಅವನು ಇಲ್ಲವೆಂಬಂತೆ ನಡೆಯಬಾರದು. ಅದು ಆತ್ಮವಂಚನೆಯಾಗುವದು; ನಮ್ಮ ವ್ಯವಹಾರದಲ್ಲೆಲ್ಲ ಆತನ ಬಲವೇ ನಮ್ಮ ಬಲವು ಎಂದು ದೃಢವಾಗಿ ನಂಬಬೇಕು. ನಮ್ಮ ಪ್ರತಿಯೊಂದು ಕರ್ಮವೂ ಆತನ ಅರ್ಚನೆಯಾಗಿರಬೇಕು. ಈಜುಬುರುಡೆಯನ್ನು ಕಟ್ಟಿಕೊಂಡು ಧೈರ್ಯದಿಂದ ನೀರಿನಲ್ಲಿ ಧುಮುಕುವವರಂತೆ, ಪರಮಾತ್ಮಭಾವನೆಯನ್ನು ಕಟ್ಟಿಕೊಂಡೇ ಈ ವ್ಯವಹಾರಸಮುದ್ರದಲ್ಲಿ ಧುಮುಕಬೇಕು. ನೀರಿನಲ್ಲಿ ಮೊದಲನೆಯ ಸಾರಿ ಧುಮುಕಿದರೆ ಗಾಭರಿಯಾಗುವಂತೆ ನಮಗೆ ಭಗವಂತನನ್ನೇ ನಂಬಿ ವ್ಯವಹಾರಮಾಡಿದರೆ ಈ ಅನ್ಯಾಯದ ಲೋಕದಲ್ಲಿ ಯಾವ ಮೋಸವಾಗುವದೋ ಎಂಬ ಅಂಜಿಕೆ ಬರಬಹುದು. ಆದರೆ ಕಾಲಕ್ರಮದಲ್ಲಿ ಈ ಅಂಜಿಕೆಗೇನೂ ಕಾರಣವಿಲ್ಲವೆಂಬ ವಿಶ್ವಾಸವುಂಟಾಗಿ ಮನಸ್ಸಿಗೆ ಶಾಂತಿಯು ಬರುವದು. ಮೊಟ್ಟಮೊದಲು ನ್ಯಾಯಬದ್ಧರಾಗಿ ಧರ್ಮಕ್ಕೆ ಕಟ್ಟುಬಿದ್ದು ನಡೆಯುವದಕ್ಕೆ ಪ್ರಾರಂಭಿಸಬೇಕು. ಈ ಲೋಕದಲ್ಲಿ ಇಂಥವರು ಕೆಟ್ಟವರು, ಇಂಥವರು ಒಳ್ಳೆಯವರು - ಎಂಬ ವಿಂಗಡವಿಲ್ಲ. ಎಲ್ಲರೂ ಕೆಟ್ಟವರೇ, ಎಲ್ಲರೂ ಒಳ್ಳೆಯವರೇ. ನಮ್ಮನಮ್ಮ ಭಾವನೆಯಂತೆಯೂ ನಮ್ಮನಮ್ಮ ನಡತೆಯಂತೆಯೂ ಹೊರಗೆ ಪರಿಣಾಮವಾಗುವದು. ಆದ್ದರಿಂದ ಭಗವದ್ಭಾವನೆಯನ್ನು ಎಂದಿಗೂ ಬಿಡಬಾರದು.

ಹೀಗೆ ಭಗವಂತನನ್ನು ನಂಬಿದ ಮೇಲೆ ನಮ್ಮದಾಗಿಯೇ ಇರುವ ಬೇರೆಯ ಪ್ಲಾನುಗಳೂ ಹಂಚಿಕೆಗಳೂ ಅವಶ್ಯವಾಗುವದಿಲ್ಲ. ನಮ್ಮದೇ ಆಗಿರುವ ಬೇರೊಂದು ಪ್ರಯತ್ನವು ಬೇಕಾಗುವದಿಲ್ಲ. ನಾವು ನಮ್ಮ ಸಂಕಲ್ಪದ ಕಟ್ಟಡವನ್ನು ಮೊದಲು ಕೆಡವಬೇಕು; ಆ ಬಳಿಕ ಭಗವಂತನ ಸಂಕಲ್ಪದ ಕಟ್ಟಡವು ಏಳುವದಕ್ಕೆ ಮೊದಲಾಗುವದು.

ಆದ್ದರಿಂದ ಭಗವಂತನ ವಿಶ್ವರೂಪವನ್ನು ಮನಃಪೂರ್ವಕವಾಗಿ ಧ್ಯಾನ ಮಾಡುವದಕ್ಕೆ ಮೊದಲುಮಾಡೋಣ. ನಮಗೆ ಇಷ್ಟವಾದ ನಾಮರೂಪಗಳಿಂದ ಆತನನ್ನು ಧ್ಯಾನಮಾಡಿದರೂ ಆಗುತ್ತದೆ. ಧ್ಯಾನದಲ್ಲಿ ಭಗವಂತನಿಗೂ ನಮಗೂ ಸಂಬಂಧವಾಗಬೇಕು. ಭಗವಂತನು ಇಲ್ಲಿದಾನೆ, ಆತನನ್ನು ನಾನು ಧ್ಯಾನಮಾಡುತ್ತಿದ್ದೇನೆ - ಎಂಬ ಭಾವನೆಯು ನಮ್ಮ ಹೃದಯವನ್ನು ತುಂಬಿಕೊಳ್ಳಬೇಕು. ಧ್ಯಾನವು ಸಾಗಿದಂತೆಲ್ಲ ನಮ್ಮ ಅಪವಿತ್ರಭಾವನೆಗಳು ಒಂದೊಂದಾಗಿ ತೊಲಗುವವು; ಭಗವಂತನು ಅನುಗ್ರಹಿಸುವ ಪವಿತ್ರಭಾವನೆಗಳು ಒಂದೊಂದಾಗಿ ಬಂದು ನಮ್ಮೊಳಗೆ ಸೇರಿ

ಕೊಳ್ಳುವವು. ಕೊನೆಗೆ ಭಗವಂತನೇ ನಮ್ಮ ಹೃದಯವನ್ನು ಪ್ರವೇಶಿಸಿ ಅಲ್ಲಿ ನೆಲೆಸಿಬಿಡುತ್ತಾನೆ.

ಈ ಧ್ಯಾನಕಾರ್ಯಕ್ಕೆ ದೊಡ್ಡವರು ಮಾಡುತ್ತಿರುವ ದೊಡ್ಡದೊಡ್ಡ ಸಾಧನಗಳನ್ನು ಮನಸ್ಸಿಗೆ ತಂದುಕೊಳ್ಳಬಾರದು. ನಮ್ಮನಮ್ಮ ಯೋಗ್ಯತೆಗೆ ತಕ್ಕ ಸಣ್ಣಪುಟ್ಟ ಸಾಧನಗಳನ್ನೇ ಮೊದಲು ಪ್ರಾರಂಭಿಸಬೇಕು. ನಾವು ಇರುವದಕ್ಕೆ ಒಂದು ನೆರಳಿನ ತಾಣವು ಬೇಕಾದರೆ ಅರಮನೆಯನ್ನು ನೆನೆಸಿಕೊಳ್ಳುವೆವೇನು? ಇಲ್ಲ. ನಮ್ಮ ಪಾಲಿಗೆ ನಮ್ಮ ಗುಡಿಸಲೇ ಅರಮನೆಯಾಗಿರುವದು. ಅಲ್ಲವೆ? ಇದರಂತೆ ನಮ್ಮ ಯೋಗ್ಯತೆಗೆ ತಕ್ಕ ಸಣ್ಣಪುಟ್ಟ ಸಾಧನಗಳನ್ನೇ ಮೊದಲು ಮಾಡಬೇಕು. ಭಗವಂತನಿಗೂ ನಮ್ಮ ಹೃದಯಕ್ಕೂ ಸಂಬಂಧವನ್ನು ಕಲ್ಪಿಸಿಕೊಳ್ಳಬೇಕು. ಆ ಸಾಧನದಲ್ಲಿ ಮೆಲ್ಲಮೆಲ್ಲಗೆ ಮುಂದಡಿಯಿಟ್ಟರೆ, ಭಗವಂತನೇ ನಮ್ಮ ಹೃದಯದೊಳಕ್ಕೆ ಬಂದು ಸೇರುವನು. ನಮ್ಮದು ಸಣ್ಣ ಜೋಪಡಿ ಎಂದು ಅವನು ಅನಾದರಮಾಡುವದಿಲ್ಲ. ಆತನ ಅನುಗ್ರಹದಿಂದ ಈ ಸಣ್ಣ ಗುಡಿಸಲೇ ಅರಮನೆಯಾಗುವದು. ನಮಗೆ ಏನು ಬೇಕು? ಅದು ಎಷ್ಟು ಸಣ್ಣದಾದರೂ ಆ ಭಗವಂತನಲ್ಲಿಯೇ ಕೇಳಿಕೊಳ್ಳೋಣ. ಅವನು ನಮ್ಮ ಯೋಗಕ್ಷೇಮವನ್ನೆಲ್ಲ ನೋಡಿಕೊಳ್ಳುತ್ತಾನೆ. ಅಥವಾ ಆತನನ್ನು ಕೇಳಿಕೊಳ್ಳುವದಾದರೂ ಏತಕ್ಕೆ? ಮೊದಲು ಆತನನ್ನು ಚಿತ್ತದಲ್ಲಿಟ್ಟುಕೊಳ್ಳೋಣ. ಬಳಿಕ ನಮಗೆ ಬೇಕಾದದ್ದನ್ನು ಆತನೇ ಅನುಗ್ರಹಿಸುವನು.

ಈ ದಿನದ ವಿಚಾರದ ಸಾರವೆಲ್ಲ ಇಷ್ಟೇ. ಭಗವಂತನನ್ನೇ ಎಡೆಬಿಡದೆ ನಾವು ಯಾವಾಗಲೂ ಧ್ಯಾನಿಸುತ್ತಿರಬೇಕು. ಅದೇ ಉಪಾಸನೆಯು. ಈ ಉಪಾಸನೆಯಿಂದ ನಮಗೂ ಮಿಕ್ಕ ಎಲ್ಲಾ ಪ್ರಾಣಿಗಳಿಗೂ ಸಂಬಂಧವು ಏರ್ಪಡುವದು. ನಮ್ಮಲ್ಲಿ ಉತ್ತಮವಾದ ಭಾವನೆಗಳೂ ಗುಣಗಳೂ ನೆಲಸುವವು. ನಮ್ಮ ಇಷ್ಟಾರ್ಥವೆಲ್ಲ ಆ ಭಗವಂತನ ಅನುಗ್ರಹದಿಂದಲೇ ಕೈಸೇರುವದು.

## ೮೭. ಭಗವಂತನ ಉಪಾಸನೆಯ ಸೌಲಭ್ಯ ೧೨-(೩-೭)

(೨೭-೬-೪೮)

ಹನ್ನೊಂದನೆಯ ಅಧ್ಯಾಯದಲ್ಲಿ ಸೋಪಾಧಿಕವಾದ ವಿಶ್ವರೂಪವನ್ನು ಅನನ್ಯ ಭಕ್ತಿಯಿಂದ ಉಪಾಸನೆಮಾಡುವ ಕ್ರಮವನ್ನು "ನನ್ನ ಕರ್ಮವನ್ನೇ ಮಾಡು, ನನ್ನನ್ನೇ ಪರಗತಿಯೆಂದು ನಂಬಿರು, ನನ್ನ ಭಕ್ತನಾಗಿರು, ಸಂಗವಿಲ್ಲದವನಾಗಿರು" - ಎಂದು ಭಗವಂತನು ಅರ್ಜುನನಿಗೆ ಉಪದೇಶಿಸಿದನು. ಅದಕ್ಕಿಂತ ಹಿಂದೆ "ಹುಟ್ಟುವದಿಲ್ಲ,

ಸಾಯುವದಿಲ್ಲ", "ನನ್ನಲ್ಲಿ ಯಾವ ಭೂತಗಳೂ ಇರುವದೂ ಇಲ್ಲ" ಎಂದು ಮುಂತಾಗಿ ಯಾವ ಉಪಾಧಿಯ ಸಂಬಂಧವೂ ಇಲ್ಲದ ಅಕ್ಷರವೆಂಬ ಪರಮಾರ್ಥ ತತ್ತ್ವದ ಜ್ಞಾನವನ್ನು ಬೋಧಿಸಿರುತ್ತಾನೆ. ಆದ್ದರಿಂದ ಈ ಎರಡರಲ್ಲಿ "ಯಾವದನ್ನು ಅನುಸರಿಸುವವರು ಯುಕ್ತತಮರು?" ಎಂದು ಅರ್ಜುನನು ಪ್ರಶ್ನೆಮಾಡಿದ್ದನು. ಅದಕ್ಕೆ ಭಗವಂತನು ಕೊಟ್ಟ ಉತ್ತರವನ್ನು ಹಿಂದಿನ ದಿನ ಸ್ವಲ್ಪವಾಗಿ ತಿಳಿಸಿದ್ದಾಗಿದೆ.

ಗೀತೆಯಲ್ಲಿ ಅರ್ಜುನನು ಕೇಳಿದ ಪ್ರಶ್ನೆಗಳಿಗೆ ಭಗವಂತನು ಹೇಳುವ ಉತ್ತರಗಳಲ್ಲೆಲ್ಲ ಒಂದು ತತ್ತ್ವವು ಅನುಸರಿಸಿಕೊಂಡೇ ಬಂದಿರುತ್ತದೆ. ಅದೇನೆಂದರೆ 'ಇದು ಒಳ್ಳೆಯದೊ, ಅದು ಒಳ್ಳೆಯದೊ?' ಎಂದು ಅರ್ಜುನನು ಕೇಳಿದರೆ, 'ಇಂಥದ್ದೊಂದು ಒಳ್ಳೆಯದು' ಎಂಬ ಭಗವಂತನ ಉತ್ತರದಲ್ಲಿ ಸುಲಭವಾದ ಸಾಧನವನ್ನೇ ಹೇಳಿರುತ್ತದೆ. "ಕರ್ಮವನ್ನು ಬಿಡುವದು ಮೇಲೊ, ಮಾಡುವದು ಮೇಲೊ?" ಎಂಬ ಪ್ರಶ್ನೆಗೆ ಭಗವಂತನು "ಕರ್ಮಸಂನ್ಯಾಸ, ಕರ್ಮಯೋಗ - ಈ ಎರಡೂ ಮುಕ್ತಿಗೆ ಸಾಧನವೇ; ಆದರೆ ಕರ್ಮಸಂನ್ಯಾಸಕ್ಕಿಂತ ಕರ್ಮಯೋಗವೇ ಮೇಲು" ಎಂದಿರುತ್ತಾನೆ. ಬಹುಜನರು ಕೆಳಗಿನ ಮಟ್ಟದಲ್ಲಿಯೇ ಇರುತ್ತಾರೆ. ಆದ್ದರಿಂದ ಅವರಿಗೆ ಸುಲಭವಾದ ಸಾಧನವನ್ನೇ ಹೇಳುವದು ಯುಕ್ತವಾಗಿದೆ. 'ವೇದಶ್ರವಣವನ್ನು ಮಾಡಲಾರದ ಸ್ತ್ರೀಶೂದ್ರ ದ್ವಿಜಬಂಧುಗಳಿಗೋಸ್ಕರ ಭಾರತವನ್ನು ವ್ಯಾಸರು ಹೇಳಿರುತ್ತಾರೆ' ಎಂದು ಭಾರತದಲ್ಲಿಯೇ ಹೇಳಿರುತ್ತದೆ. ಭಗವದ್ಗೀತೆಯೂ ಇದೇ ಗುರಿಯನ್ನಿಟ್ಟುಕೊಂಡಿರುತ್ತದೆ - ಎಂಬುದಕ್ಕೆ ಅದು ಭಾರತಮಧ್ಯದಲ್ಲಿರುವದೇ ಸಾಕ್ಷಿ. ಆದರೆ ಅಷ್ಟುಮಾತ್ರದಿಂದ ಸಿದ್ಧಾಂತವೇ ಬದಲಾಯಿಸಿರುತ್ತದೆ ಎಂದು ಭಾವಿಸಬಾರದು. ಅದೇ ಸಿದ್ಧಾಂತವನ್ನೇ ಬೇರೆಬೇರೆಯ ಮೆಟ್ಟಿಲುಗಳಲ್ಲಿರುವ ಸಾಧನಗಳ ಸಮೇತ ಇಲ್ಲಿ ಉಪದೇಶಿಸಿರುತ್ತದೆ. ಅಷ್ಟೆ. ಈ ಅಭಿಪ್ರಾಯವನ್ನು ಈ ಅಧ್ಯಾಯದಲ್ಲಿ ಮುಂದೆ ಮತ್ತಷ್ಟು ಸ್ಫುಟಗೊಳಿಸುವೆನು.

ಇದಂತಿರಲಿ. ಪ್ರಕೃತದಲ್ಲಿ ವಿಶ್ವರೂಪೋಪಾಸಕರು, ಅಕ್ಷರೋಪಾಸಕರು - ಈ ಇಬ್ಬರಲ್ಲಿ ಯಾರು ಯುಕ್ತತಮರು? ಎಂದು ಅರ್ಜುನನು ಕೇಳಿರುತ್ತಾನಷ್ಟೆ. ಭಗವಂತನು ವಿಶ್ವರೂಪೋಪಾಸಕರೇ ಯುಕ್ತತಮರು - ಎಂದು ಉತ್ತರವನ್ನು ಹೇಳಿರುತ್ತಾನೆ. ಇದರಿಂದ ವಿಶ್ವರೂಪೋಪಾಸನೆಯು ಅಕ್ಷರೋಪಾಸನೆಗಿಂತ ಸುಲಭವಾದದ್ದೆಂದು ತಾನೇ ಏರ್ಪಡುತ್ತದೆ; ಅಕ್ಷರೋಪಾಸನೆಯು ಕಷ್ಟವಾದ್ದರಿಂದ ಅರ್ಜುನನಿಗೆ ಭಗವಂತನು ವಿಶ್ವರೂಪದ ಉಪಾಸನೆಯನ್ನೇ ಹೇಳಿರುತ್ತಾನೆ ಎಂಬುದು ಬರಿಯ ಕಲ್ಪನೆಯಿಂದ ಸಿದ್ಧವಾಗುವದಿಲ್ಲ. ಇಲ್ಲಿ ಭಗವಂತನು ತಾನೇ ಬಾಯಿಬಿಟ್ಟು ಹಾಗೆಂದು ತಿಳಿಸಿರುತ್ತಾನೆ. ಭಗವಂತನು ಹೇಳಿರುವದನ್ನು ಕೇಳಿರಿ:

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗಮಚಿನ್ತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥** (೧೨-೩)
**ಸಂನಿಯಮ್ಯೇನ್ದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವನ್ತಿ ಮಾಮೇವ ಸರ್ವಭೂತಹಿತೇ ರತಾಃ ॥** (೧೨-೪)
**ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥** (೧೨-೫)

ನಿರುಪಾಧಿಕವಾದ ತತ್ತ್ವಕ್ಕೆ ಅಕ್ಷರವೆಂದು ಹೆಸರು. ಈ ಪರಮಾರ್ಥತತ್ತ್ವವು ಕಾಲಾತೀತವಾಗಿರುವದರಿಂದ ಅದು ನಾಶವಾಗತಕ್ಕದ್ದಲ್ಲ. ಆದ್ದರಿಂದ ಅದನ್ನು ಶ್ರುತಿಯಲ್ಲಿ 'ಅಮೃತ'ವೆಂದೂ ಕರೆದಿರುತ್ತದೆ.

ಈ ಅಕ್ಷರವು **ಅನಿರ್ದೇಶ್ಯವು**. ಅದನ್ನು 'ಹೀಗಿದೆ, ಹಾಗಿದೆ' ಎಂದು ವರ್ಣಿಸಿ ಹೇಳುವದಕ್ಕೆ ಬರುವದಿಲ್ಲ. ಅದರಲ್ಲಿ ಯಾವ ಗುಣ, ಕ್ರಿಯೆ, ಜಾತಿ ಅಥವಾ ಸಂಬಂಧವು ಇರುವದಿಲ್ಲ. ಆದ್ದರಿಂದಲೇ ಅದನ್ನು 'ನೇತಿ, ನೇತಿ' (ಹೀಗಲ್ಲ, ಹೀಗಲ್ಲ) ಎಂದು ಶ್ರುತಿಯು ಮತ್ತೊಂದು ಕಲ್ಪನೆಯನ್ನು ಅಲ್ಲಗಳೆದೇ ತಿಳಿಸಿರುತ್ತದೆ.

ಅದು **ಅವ್ಯಕ್ತವು**. ಯಾವದು ಇಂದ್ರಿಯಗಳಿಗೆ ಶಬ್ದಸ್ಪರ್ಶಾದಿಗುಣಗಳ ಮೂಲಕ ತೋರಿಕೊಳ್ಳುವದೋ ಅದು ವ್ಯಕ್ತವೆನಿಸುವದು. ಆದರೆ ಈ ಪರಮಾರ್ಥ ತತ್ತ್ವದಲ್ಲಿ ಯಾವದೊಂದು ಗುಣವೂ ಇಲ್ಲದ್ದರಿಂದ ಇದು ಯಾವ ಇಂದ್ರಿಯಕ್ಕೂ ಗೋಚರವಲ್ಲ. ಯೋಗಿಗಳು ಇಂದ್ರಿಯಗಳ ಸಹಾಯವಿಲ್ಲದೆ ದೇಶ, ಕಾಲವ್ಯವಧಾನ ವಿರುವದನ್ನು ಕೂಡ ಕಾಣಬಲ್ಲರೆಂದು ಹೇಳುತ್ತಾರೆ. ಈ ಪರಮಾರ್ಥತತ್ತ್ವವು ಆ ಯೋಗಿಪ್ರತ್ಯಕ್ಷಕ್ಕೂ ಗೋಚರವಲ್ಲ.

ಇದು **ಸರ್ವತ್ರಗ**. ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವಂಥದ್ದು. ಎಲ್ಲಿಯೂ ಯಾರಿಗೂ ಗೋಚರವಲ್ಲವೆಂದದ್ದರಿಂದ ಅದು ಶೂನ್ಯವೆಂದು ಯಾರಾದರೂ ಅವಿವೇಕಿಗಳು ಭಾವಿಸಬಹುದು. ಆದರೆ ನಿಜವು ಹಾಗಿಲ್ಲ. ಅದು ಇಲ್ಲದ ಕಡೆಯೇ ಇಲ್ಲ; ಆಕಾಶದಂತೆ ಅದು ಎಲ್ಲೆಲ್ಲಿಯೂ ಇದ್ದುಕೊಂಡಿರುವದು.

ಅದು **ಅಚಿಂತ್ಯವೂ** ಆಗಿರುತ್ತದೆ. ಇಂದ್ರಿಯಗಳಿಗೆ ಗೋಚರವಲ್ಲದಿದ್ದರೂ ಬಾಯಿಯಿಂದ ಹೇಳಿ ತಿಳಿಸುವದಕ್ಕೆ ಆಗದಿದ್ದರೂ ಮನಸ್ಸಿನಲ್ಲಿಯೇ ಕಲ್ಪಿಸಿಕೊಳ್ಳುವದಕ್ಕೆ ಬರುತ್ತಿರಬಹುದು - ಎಂದು ಎಣಿಸಬಾರದು, ಅದು ವಿಷಯವೇ ಅಲ್ಲವಾದ್ದರಿಂದ ಮನಸ್ಸಿಗೂ ಗೋಚರವಾಗುವಂತಿಲ್ಲ.

**ಕೂಟಸ್ಥವೂ ಅಚಲವೂ ಆಗಿದೆ;** ತನ್ನ ಮೇಲೆ ಎಲ್ಲಾ ಚಿನ್ನಬೆಳ್ಳಿಗಳ ಗಟ್ಟಿಯನ್ನು ಇಟ್ಟು ಸುತ್ತಿಗೆಯಿಂದ ತಟ್ಟಿ ಬೇರೆಬೇರೆ ರೂಪಗಳಿಗೆ ಇಳಿಸುತ್ತಿದ್ದರೂ

ತಾನು ಮಾತ್ರ ಇದ್ದಂತೆಯೇ ಇರುವ ಅಕ್ಕಸಾಲಿಗರ ಅದಿಗಣೆಯಂತೆ ಯಾವ ಮಾರ್ಪಾಡೂ ಇಲ್ಲದ್ದು ಕೂಟಸ್ಥವು. ಒಂದು ವಸ್ತು ತನ್ನಲ್ಲಿ ಯಾವ ಪರಿಣಾಮವೂ ಇಲ್ಲದಿದ್ದರೂ ಸ್ಥಳದಿಂದ ಸ್ಥಳಕ್ಕೆ ಓಡಾಡುತ್ತಿರಬಹುದು; ಅದು ಚಲವೆನಿಸುತ್ತದೆ. ಆದರೆ ಈ ಅಕ್ಷರವು ಅಚಲವು; ಹಾಗೆ ಚಲಿಸುವದೂ ಅಲ್ಲ. **ಧ್ರುವವು** ಎಂದರೆ ಧ್ರುವನ ಹಾಗೆ ಅರವತ್ತು ಸಾವಿರ ವರ್ಷ ಆಯುಸ್ಸುಳ್ಳದ್ದು ಎಂದು ಅರ್ಥವಲ್ಲ. ಎಂದೆಂದಿಗೂ ಇದ್ದಂತೆ ಇರುವದು, ಶಾಶ್ವತವು ಕಾಲಾತೀತವಾದದ್ದು ಎಂದರ್ಥ.

ಅಕ್ಷರವನ್ನು ವರ್ಣಿಸಿರುವ ಈ ವಿಶೇಷಣಗಳನ್ನು ಕೇಳಿದವರಿಗೆ, ಬೆಟ್ಟದ ಕೋಡುಗಲ್ಲನ್ನು ಏರಿದವರಿಗೆ ತಲೆ ಗಿರ್ರೆನ್ನುವಂತೆ, ಅವರು ಇನ್ನು ಇಳಿಯೋಣ ಎನ್ನುವಂತೆ, "ತತ್ತ್ವವಿಚಾರವು ಸಾಕು; ಇಂಥದ್ದೊಂದು ಪದಾರ್ಥವು ಇಲ್ಲವೆಂದೇ ತೋರುತ್ತದೆ. ಅಥವಾ ಇದ್ದರೂ ಅದು ನಮ್ಮಂಥವರಿಗೆ ಎಟುಕುವದೂ ಇಲ್ಲ" ಎಂದೇ ತೋರುವದು ಸ್ವಾಭಾವಿಕವಾಗಿದೆ. ಈ ತತ್ತ್ವದ ಸ್ವಭಾವವನ್ನು ನೋಡಿದರೆ ಹೀಗೆ; ಇನ್ನು ಇದನ್ನು ಉಪಾಸನೆಮಾಡುವವರು ಹೇಗಿರಬೇಕು? - ಎಂದರೆ ಭಗವಂತನು ಹೇಳುತ್ತಿದಾನೆ :

**ಇಂದ್ರಿಯಗಳನ್ನು ಸಂಯಮಮಾಡಿಕೊಂಡಿರಬೇಕು.** ಇಂದ್ರಿಯಗಳಿಗೆ ಸ್ವಭಾವವೇನು? ಕಪಿಗಳಿಗೆ ನರ್ತನವನ್ನು ಕಲಿಸುವವನು ಎಷ್ಟು ಎಚ್ಚರಿಕೆಯಿಂದ ಅವುಗಳನ್ನು ತಯಾರುಮಾಡುತ್ತಿದ್ದರೂ ಅವು ನೆಲಗಡಲೆಕಾಯಿ ಸ್ವಲ್ಪ ದೂರದಲ್ಲಿ ಬಿದ್ದಿರುವದು ಕಣ್ಣಿಗೆ ಬಿದ್ದರೆ ಕೂಡಲೆ ಅತ್ತ ಓಡುವಂತೆ, ವಿಷಯಗಳು ಗೋಚರವಾದರೆ ಸಾಕು, ಇಂದ್ರಿಯಗಳು ಅತ್ತ ಹರಿಯುವವು. ಅವುಗಳನ್ನು ಹಿಡಿದೆಳೆದು ಒಳಗಡೆಗೆ ಸರಿಯಿಸಿದರೆ ತೂಕಡಿಕೆ ಬರುವದು; ಏನೂ ಮಾಡದೆ ಸುಮ್ಮನೆ ಇದ್ದರೆ ಮನಸ್ಸು ಯಾವದಾದರೊಂದು ಯೋಚನೆಯನ್ನು ಹತ್ತಿಸಿಕೊಳ್ಳುವದು. ಆದ್ದರಿಂದ ಅತ್ಯಂತ ಸೂಕ್ಷ್ಮವಾಗಿ ದುರವಗಾಹವಾಗಿರುವ ಅಕ್ಷರತತ್ತ್ವವನ್ನು ಅರಿಯಬೇಕೆನ್ನುವವರು ಇಂದ್ರಿಯಗಳನ್ನು ಹೊರಕ್ಕೂ ಹರಿಯಗೊಡಬಾರದು. ಆತ್ಮನ ಕಡೆಗೆ ತಿರುಗಿಸಿ ಅವುಗಳನ್ನು ಸುಮ್ಮನೆ ಬಿಡಲೂಬಾರದು. ಆತ್ಮನ ಚಿಂತನೆಯಲ್ಲಿ ಎಚ್ಚರವಾಗಿಯೇ ಇರುವ ಪ್ರಯತ್ನವನ್ನು ಮಾಡುತ್ತಿರಬೇಕು.

**ಸರ್ವತ್ರಸಮಬುದ್ಧಿಗಳಾಗಿರಬೇಕು** – ಎಂಬುದು ಅಕ್ಷರೋಪಾಸಕರ ಎರಡನೆಯ ಅಧಿಕಾರಲಕ್ಷಣವು. ಅವರಿಗೆ ವಿಚಿತ್ರವಾಗಿರುವ ಈ ಪ್ರಪಂಚದಲ್ಲಿ ಯಾವ ಭೇದವೂ ಕಾಣಬಾರದು. ಶರೀರಾದ್ಯುಪಾಧಿಗಳಿಂದ ತೋರುವ ಭೇದವು ಮಾಯಿಕವೆಂದೂ ಚೈತನ್ಯರೂಪನಾದ ಪರಮಾತ್ಮನು ಏಕರಸನಾಗಿ ಎಲ್ಲೆಲ್ಲಿಯೂ ಇರುತ್ತಿರುವನೆಂದೂ ಬುದ್ಧಿಯಲ್ಲಿ ನಿಶ್ಚಯವುಂಟಾಗಿರಬೇಕು.

**ಸರ್ವಭೂತಗಳ ಹಿತದಲ್ಲಿಯೂ ನಿರತರಾಗಿರಬೇಕು** - ಎಂಬುದು ಮತ್ತೊಂದು ವಿಶೇಷಣವು. ಯಾವದೊಂದು ಪ್ರಾಣಿಯಲ್ಲಿ ವಿಶೇಷವಾದ ಅಭಿಮಾನವಾಗಲಿ ದ್ವೇಷವಾಗಲಿ ಇರಬಾರದು; ಎಲ್ಲರಿಗೂ ಹಿತವನ್ನುಂಟು ಮಾಡುವದರಲ್ಲಿ ನಿರತರಾಗಿರುವವರು ಅಕ್ಷರೋಪಾಸಕರು.

ಈ ಪರಮಾರ್ಥವನ್ನು ಅನಿರ್ದೇಶ್ಯ, ಅವ್ಯಕ್ತ, ಅಚಲ, ಅಕ್ಷರ - ಎಂದು ಬೇರೆಬೇರೆಯ ಧರ್ಮಗಳ ನಿಷೇಧಮೂಲಕವಾಗಿಯೇ ತಿಳಿಸಿದೆಯಾದರೂ ಅದು ಇಲ್ಲವೇ ಇಲ್ಲವೆನ್ನುವಂತಿಲ್ಲ. ಏಕೆಂದರೆ ಅದು ನಮ್ಮೆಲ್ಲರ ಆತ್ಮನೇ ಆಗಿರುವ ಕೂಟಸ್ಥಚೈತನ್ಯವಾಗಿರುತ್ತದೆ. ಅದನ್ನು ಅನುಭವಕ್ಕೆ ತಂದುಕೊಂಡು ಅದರ ಚಿಂತನೆಯಲ್ಲಿಯೇ ಕಾಲವನ್ನು ಹಾಕುವದಕ್ಕೆ ಈ ಶರೀರದಲ್ಲಿ ನಾನು ನನ್ನದು ಎಂಬ ಅಭಿಮಾನವು ಸಂಪೂರ್ಣವಾಗಿ ಹೋಗಿರಬೇಕು, ಇಂದ್ರಿಯಗಳು ಸಂಪೂರ್ಣವಾಗಿ ಹಿಡಿತಕ್ಕೆ ಬಂದಿರಬೇಕು. ಎಲ್ಲಾ ಪ್ರಾಣಿಗಳಲ್ಲಿಯೂ, ಸಮಬುದ್ಧಿಯು ಅಳವಟ್ಟಿರಬೇಕು. 'ಇಂಥವರು ನನ್ನನ್ನೇ ಪಡೆಯುತ್ತಾರೆ; ಅವರು ಮತ್ತೊಬ್ಬರ ಸಹಾಯವನ್ನು ಬಯಸದೆ ಪರಮಾತ್ಮನಿಷ್ಠೆಯನ್ನು ಪಡೆಯುತ್ತಾರೆ' - ಎಂದು ಭಗವಂತನು ಅಕ್ಷರೋಪಾಸಕರ ಮಹಿಮೆಯನ್ನು ಕೊಂಡಾಡುತ್ತಿದಾನೆ.

ಆದರೆ ಪ್ರಕೃತದಲ್ಲಿ ಅರ್ಜುನನು ಕೇಳಿರುವ ಪ್ರಶ್ನೆಗೆ ಉತ್ತರವೇನು? ಅಕ್ಷರಚಿಂತಕರ ಮಹಿಮೆಯನ್ನು ಕೊಂಡಾಡುವದಲ್ಲ. ವಿಶ್ವರೂಪದ ಉಪಾಸಕರೇ 'ಯೋಗವಿತ್ತಮರು; ಅವರ ಸಾಧನವೇ ಸುಲಭವಾದದ್ದು ಎಂದು ತಿಳಿಸುವದೇ ಭಗವಂತನ ಮೊದಲನೆಯ ಗುರಿ. ಆದ್ದರಿಂದ ಭಗವಂತನು ಹೀಗೆನ್ನುತ್ತಿದಾನೆ :

**ಯೇ ತು ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯನ್ತ ಉಪಾಸತೇ ॥** (೧೨-೬)

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಮ್ ॥** (೧೨-೭)

"ಅವ್ಯಕ್ತಾಸಕ್ತಚಿತ್ತರಾದ ಅವರಿಗೆ ಕ್ಲೇಶವು ಅಧಿಕತರವಾಗಿರುತ್ತದೆ. ಏಕೆಂದರೆ ದೇಹವಂತರಿಗೆ ಅವ್ಯಕ್ತಗತಿಯು ಬಹುಕಷ್ಟದಿಂದ ದೊರಕುತ್ತದೆ. ಆದರೆ ಯಾರು ಸರ್ವಕರ್ಮಗಳನ್ನೂ ನನ್ನಲ್ಲಿಯೇ ಸಂನ್ಯಾಸಮಾಡಿ ನನ್ನಲ್ಲಿಯೇ ತತ್ಪರರಾಗಿ ಅನನ್ಯ ಯೋಗದಿಂದಲೇ ನನ್ನನ್ನು ಧ್ಯಾನಿಸುತ್ತಾ ಉಪಾಸನೆಮಾಡುತ್ತಿರುವರೋ ನನ್ನಲ್ಲಿಯೇ ಚಿತ್ತವಿಟ್ಟಿರುವ ಅವರನ್ನು ನಾನು ಮೃತ್ಯುಸಂಸಾರಸಾಗರದಿಂದ ಉದ್ಧಾರಮಾಡುವವ ನಾಗುವೆನು."

ಇಗೋ ಇಲ್ಲಿ ಭಗವಂತನು ಅತ್ಯಂತಸ್ಪಷ್ಟವಾಗಿ ವಿಶ್ವರೂಪೋಪಾಸನೆಯ ಸೌಲಭ್ಯವನ್ನು ತಿಳಿಸಿಕೊಟ್ಟಿರುತ್ತಾನೆ. ಸಗುಣೋಪಾಸಕರಿಗೇನೂ ಕ್ಲೇಶವು ಕಡಿಮೆಯಿಲ್ಲ. ಯಾವದೊಂದು ಅಧ್ಯಾತ್ಮಸಾಧನವೂ ಕಷ್ಟವಿಲ್ಲದೆ ಬರುವದಿಲ್ಲ. ವಿಶ್ವರೂಪೋಪಾಸನೆಯನ್ನು ಮಾಡುವವರು ವಿಶ್ವದಲ್ಲಿಯೇ ಆತ್ಮಬುದ್ಧಿಯನ್ನು ಮಾಡಬೇಕೆಂದೂ, ಉಳಿದದ್ದನ್ನೆಲ್ಲ ಬಿಟ್ಟು ಪರಮೇಶ್ವರನೊಬ್ಬನಲ್ಲಿಯೇ ಭಕ್ತಿಯನ್ನು ಮಾಡುತ್ತಾ ನಿತ್ಯಯುಕ್ತರಾಗಿರಬೇಕೆಂದೂ ಮನದಂದವರಿಗೆ ಆ ಉಪಾಸನೆಯಲ್ಲಿರುವ ಕ್ಲೇಶವು ಯಾವ ಬಗೆಯದೆಂಬುದು ಗೊತ್ತೇ ಆಗಿರುತ್ತದೆ. ಆದರೆ ಈ ಅಕ್ಷರೋಪಾಸನೆಯಲ್ಲಿ ಕ್ಲೇಶವು ಅಧಿಕತರವಾಗಿರುತ್ತದೆ, ಇನ್ನೂ ಹೆಚ್ಚಾಗಿರುತ್ತದೆ. ಏಕೆಂದರೆ ಅವ್ಯಕ್ತಗತಿಯು ದೇಹವಂತರಿಗೆ ಸಿಕ್ಕುವದು ಬಹಳ ಕಷ್ಟ. ಎಲ್ಲರಿಗೂ ದೇಹವಿದ್ದೇ ಇದೆಯಲ್ಲ! ಅವ್ಯಕ್ತೋಪಾಸಕರು ದೇಹವಿಲ್ಲದವರೆಂದರೆ ಹೇಗೆ? ಎಂದು ಆಕ್ಷೇಪಿಸಬಾರದು. ದೇಹವು ಸತ್ಯವಾದದ್ದು ಅದೇ ನಾನು - ಎಂಬ ಅಭಿಮಾನವಿರುವದೇ ದೇಹತ್ವವು. ಹೇಗೆ ಹಣವಂತರಿಗೆ ಹಣದಲ್ಲಿ ಅಭಿಮಾನವಿರುವದೋ ಹಾಗೆ ದೇಹವಂತರಿಗೆ ದೇಹದಲ್ಲಿ ಅಭಿಮಾನವಿರುತ್ತದೆ. ಆದರೆ ಅಕ್ಷರಚಿಂತಕರಿಗೆ ಈ ಅಭಿಮಾನವು ಎಳ್ಳಷ್ಟೂ ಇರುವದಿಲ್ಲ. ಏಕೆಂದರೆ ಅವರಿಗೆ ದೇಹವು ಅಸತ್ಯವೆಂದೂ ತಾವು ಅದಕ್ಕಿಂತ ಅತ್ಯಂತವಿಲಕ್ಷಣಸ್ವಭಾವದವರೆಂದೂ ಅರಿವಾಗಿಬಿಟ್ಟಿರುತ್ತದೆ.

ಇಲ್ಲಿ ಪರಮಾರ್ಥತತ್ತ್ವದ ವಿಚಾರವನ್ನು ಸ್ವಲ್ಪ ಮಾಡುವದು ಅವಶ್ಯವಾಗಿದೆ. ಏಕೆಂದರೆ ಆಗಲೇ ಅಕ್ಷರೋಪಾಸನೆಯಲ್ಲಿರುವ ಕ್ಲೇಶವು ನಮಗೆ ಮನವರಿಕೆಯಾಗುತ್ತದೆ. ಪರಮಾರ್ಥವು ಹಾಗಿದೆ, ಹೀಗಿದೆ ಎಂದು ವರ್ಣಿಸುವದಕ್ಕೆ ಬರುವಂಥದೇ ಅಲ್ಲವೆಂದು ಆಗಲೆ ಹೇಳಿದ್ದಾಗಿದೆ. ಹಾಗಾದರೆ ಅದು ಇಲ್ಲವೇ ಇಲ್ಲ ಎನ್ನುವದಕ್ಕೆ ಬರುವದಿಲ್ಲ. ಏಕೆಂದರೆ ಅದು ನಮ್ಮ ನಿಮ್ಮ ಇಡಿಯ ಜಗತ್ತಿನ ಆತ್ಮನಾಗಿರುತ್ತದೆ, ತಿರುಳಾಗಿರುತ್ತದೆ. ಪರಮಾರ್ಥತತ್ತ್ವವು ಇಲ್ಲವೆಂದವನು ತಾನೇ ಇಲ್ಲ ಎಂದವನಾಗುತ್ತಾನೆ. ನಾನು ಎಂದರೇನು? ಮೊದಲನೆಯದಾಗಿ ಶರೀರವಲ್ಲ. "ನಾನು ಹೋಗುವ ದಿನ ಬಂತು" ಎನ್ನುವಾಗ ಶರೀರವು ಇಲ್ಲಿಯೇ ಬಿದ್ದುಹೋಗುವದೆಂದೂ ನಾವು ಧರ್ಮಾಧರ್ಮಗಳ ಫಲವನ್ನು ಲೋಕಾಂತರದಲ್ಲಿ ಅನುಭವಿಸುವೆವೆಂದೂ ಹೇಳಿದಂತೆ ಆಗುತ್ತದೆ. "ನನ್ನ ಶರೀರವು ಬಡಕಲಾಗಿತ್ತು; ಈಗ ಪುಷ್ಟಿಯಾಗಿದೆ" ಎನ್ನುವೆವಲ್ಲ, ಆಗ ನಾನು ಶರೀರಕ್ಕಿಂತ ಬೇರೆ ಎಂಬುದು ಸ್ಫುಟವಾಗಿ ಕಾಣುತ್ತದೆ. ಇದರಂತೆ ಇಂದ್ರಿಯಗಳು, ಮನಸ್ಸು, ಬುದ್ಧಿ - ಎಲ್ಲವನ್ನೂ ಅರಿಯಬೇಕು. ಇವುಗಳೆಲ್ಲ ನನ್ನದು ಎಂಬ ಬುದ್ಧಿಗೆ ವಿಷಯವಾಗಿರುತ್ತವೆ; ಹೆಚ್ಚುಕಡಿಮೆಯಾಗುತ್ತಿರುತ್ತವೆ. ಕನಸಿನಲ್ಲಿ ಮರೆಯಾಗಿ ವಾಸನಾಮಯವಾಗಿರುತ್ತವೆ;

ತನಿನಿದ್ರೆಯಲ್ಲಂತೂ ತೋರುವದೇ ಇಲ್ಲ. ಇರುವದೇ ಇಲ್ಲ. ಆದರೆ ನಾನು ಅವುಗಳೆಲ್ಲ ಎಷ್ಟೇ ಮಾರ್ಪಟ್ಟರೂ, ತೋರಿಹಾರಿದರೂ ಇದ್ದುಕೊಂಡಿರುತ್ತೇನೆ; ನಾನಿಲ್ಲವೆಂಬುದನ್ನು ಕಲ್ಪಿಸುವದಕ್ಕೂ ಆಗುವದಿಲ್ಲ. ಇವೆಲ್ಲವನ್ನೂ ಬೆಳಗುತ್ತಿರುವ ಅರಿವೇ ನಾನು. ಇದನ್ನೇ ಸಾಕ್ಷಿ ಎನ್ನುತ್ತಾರೆ. ಅವುಗಳ ಕಷ್ಟಸುಖಗಳು ಈ ನಮ್ಮ ಸ್ವರೂಪಕ್ಕೆ ಒಂದಿಷ್ಟೂ ಇರುವದಿಲ್ಲ. ಈ ಸಾಕ್ಷಿರೂಪದಲ್ಲಿ ಯಾವ ಧರ್ಮವೂ ಇಲ್ಲದ್ದರಿಂದ ಇದನ್ನು ಶಬ್ದದಿಂದ ಹೇಳುವದಕ್ಕೆ ಬರುವದಿಲ್ಲ. ಇಂದ್ರಿಯಗಳಿಂದ ಕಾಣುವದಕ್ಕೆ ಬರುವದಿಲ್ಲ. ಮನಸ್ಸಿನಿಂದ ಚಿಂತಿಸುವದಕ್ಕೂ ಬರುವದಿಲ್ಲ. ಸಾಕ್ಷಿರೂಪನಾದ ಆತ್ಮನೇ ಎಲ್ಲವನ್ನೂ ನೋಡುತ್ತಿರುತ್ತಾನೆ. ಈ ಆತ್ಮನನ್ನು ಒಬ್ಬರು, ಇಬ್ಬರು ಎಂದು ಎಣಿಸುವದಕ್ಕೆ ಕೂಡ ಆಗುವದಿಲ್ಲ. ಇದೇ ಎಲ್ಲರಿಗೂ ಆತ್ಮನಾದ **ಅಕ್ಷರವು**. ಇದು ಪರಮಾರ್ಥಸ್ಥಿತಿ.

ನಿಜವು ಹೀಗಿದ್ದರೂ ನಮಗೆ ಈಗ ಶರೀರಾದಿಗಳಲ್ಲಿ ಅಭಿಮಾನವನ್ನು ಬಿಡುವದಕ್ಕೆ ಆಗುವಂತಿಲ್ಲ. ಇದಕ್ಕೆ ಅನಾದಿಕಾಲದಿಂದ ನಡೆದುಕೊಂಡುಬಂದಿರುವ ಅಧ್ಯಾಸವೇ ಕಾರಣವಾಗಿರುತ್ತದೆ. ಹೊಸದಾಗಿ ಸಂನ್ಯಾಸವನ್ನು ತೆಗೆದುಕೊಂಡವನು ಪೂರ್ವವಾಸನೆಯಿಂದ ಜನಿವಾರವನ್ನು ನಿವೀತಿಹಾಕಿಕೊಳ್ಳುವದಕ್ಕೆ ಯತ್ನಿಸುವಂತೆ ನಾವೂ ಅನಾದಿವಾಸನೆಯಿಂದ ಶರೀರ, ಇಂದ್ರಿಯ, ಮನಸ್ಸು, ಬುದ್ಧಿ - ಇವುಗಳಲ್ಲಿ ಅಭಿಮಾನವನ್ನು ಇಟ್ಟುಕೊಂಡೇ ಇರುತ್ತೇವೆ. ಅವ್ಯಕ್ತಾಸಕ್ತಚಿತ್ತರಿಗೆ ಈ ಯಾವದೊಂದರ ಅಭಿಮಾನವೂ ಇರಕೂಡದು. ಅಭಿಮಾನವಿಲ್ಲದವರಿಗೆ ಮಾತ್ರ ಸರ್ವಧರ್ಮ ವರ್ಜಿತವಾದ ಸರ್ವವ್ಯಾಪಿಯಾದ ಕೂಟಸ್ಥವಾದ ಅಚಲವಾದ ಅನಿರ್ದೇಶ್ಯ ಅಚಿಂತ್ಯರೂಪದಲ್ಲಿ ನೆಲೆನಿಲ್ಲುವದಕ್ಕೆ ಸಾಧ್ಯವು. ಹಾಗಿಲ್ಲದೆ ದೇಹಾದ್ಯಭಿಮಾನಿಗಳಾಗಿ, ಹೊರದೃಷ್ಟಿಯವರಾಗಿ, ದ್ವಂದ್ವಗಳನ್ನು ಸಹಿಸಲಾರದೆ, ವಿಷಯಸಂಗದಿಂದ ಕೂಡಿರು ವವರಿಗೆ ಅಕ್ಷರನಿಷ್ಠೆಯು ಬಲುದೂರ; ಅದಕ್ಕೆ ಪ್ರಯತ್ನಪಟ್ಟರೆ ಅವರಿಗೆ ವೃಥಾ ಕ್ಲೇಶವೇ ಫಲವಾಗುತ್ತದೆ. ಬಲೂನಿನಲ್ಲಿ ಮೇಲಕ್ಕೇರುವವರು ಅದು ಬಹಳ ವೇಗದಿಂದ ಮೇಲಕ್ಕೆ ಹತ್ತದಂತೆ ಕೆಲವು ಭಾರದ ವಸ್ತುಗಳನ್ನು ಇಟ್ಟುಕೊಂಡಿರುತ್ತಿದ್ದರು; ಆದರೆ ಏರಿಕೆಯ ವೇಗವು ಹೆಚ್ಚಾಗಬೇಕಾದರೆ ಆ ವಸ್ತುಗಳನ್ನು ಒಂದೊಂದಾಗಿ ಕೆಳಕ್ಕೆ ಬಿಸಾಡುತ್ತಿದ್ದರು. ಇಲ್ಲಿಯೂ ನಮ್ಮ ಅಂತಃಕರಣವೆಂಬ ಬಲೂನು ಎಲ್ಲಕ್ಕೂ ಉಚ್ಚ ವಾಗಿರುವ ಅಕ್ಷರವಸ್ತುವನ್ನು ಮುಟ್ಟುವಂತೆ ಏರಬೇಕಾದರೆ ಇದರಲ್ಲಿರುವ ಹೆಂಡತಿ, ಮಗ, ಹೊಲ, ಮನೆ, ಹಣ, ಬಂಧುಗಳು ಮುಂತಾದವರ ಅಭಿಮಾನವೇ ಅಲ್ಲದೆ ಶರೀರ, ಪ್ರಾಣ, ಮನಸ್ಸು, ಬುದ್ಧಿ - ಈ ಎಲ್ಲದರ ಅಭಿಮಾನವನ್ನೂ ಕೆಳಕ್ಕೆ ಎಸೆದುಬಿಡಬೇಕು. ಡಾಕ್ಟರರ ಪರೀಕ್ಷೆಗೆ ನಿಂತವನು ಮೈಮೇಲಿನ ಬಟ್ಟೆಗಳನ್ನೆಲ್ಲ ತೆಗೆದು ಬಿಡುವದಕ್ಕೆ ಸಿದ್ಧನಾಗಬೇಕಾಗುವಂತೆ ಎಲ್ಲದರ ಅಭಿಮಾನವನ್ನೂ ಬಿಟ್ಟುಬಿಟ್ಟು

ಯಾವ ವಸ್ತುಗಳನ್ನಾದರೂ ಕಿತ್ತೊಗೆಯುವದಕ್ಕೆ ಸಿದ್ಧನಾಗಿರಬೇಕು. ಲಾಭ, ಅಲಾಭ, ಜಯ, ಅಪಜಯ - ಮುಂತಾದದ್ದು ಯಾವದನ್ನೂ ಲೆಕ್ಕಿಸದೆ ನನಗೆ ಆ ಪರಮಾರ್ಥದರ್ಶನವೊಂದೇ ಬೇಕೆಂದು ಹಾತುವರಿಯುತ್ತಿರಬೇಕು. ಇಂಥವರು ಮಾತ್ರ ಆ ನಿರ್ಗುಣವಾದ ಅಕ್ಷರವನ್ನು ಚಿಂತಿಸುತ್ತಿರುವದಕ್ಕೆ ಅರ್ಹರು. ಅವರನ್ನೇ ಅಶರೀರರು ಎಂದು ಶ್ರುತಿಯಲ್ಲಿ ಕರೆದಿರುವದು. ಮಿಕ್ಕವರೆಲ್ಲರೂ ದೇಹವಂತರು, ಅವರಿಗೆ ಅವ್ಯಕ್ತೋಪಾಸನೆಯು ಅತ್ಯಂತ ಕ್ಲೇಶದಾಯಕವಾಗಿರುತ್ತದೆ. ರೈಲಿನಲ್ಲಿ ಕುಳಿತಿರುವವನಿಗೆ ಎದುರಿಗಿರುವದು ತನ್ನ ಗಂಟೆಂಬ ಭ್ರಮೆಯಾದರೂ ಅದರಲ್ಲಿ ಅಭಿಮಾನವುಂಟಾಗಿಬಿಡುತ್ತದೆ; ಆ ಭ್ರಮೆಯು ತತ್ತ್ವಜ್ಞಾನದಿಂದ ಹೋದವರಿಗೆ ಆ ಅಭಿಮಾನವೂ ಇರುವದಿಲ್ಲ.

ಆದರೆ ಶರೀರಾದಿಗಳಲ್ಲಿ ನಾನು ನನ್ನದೆಂಬ ಅಭಿಮಾನವನ್ನು ಬಿಡುವದೇನೂ ಸುಲಭವಲ್ಲ. ಸರ್ವಕರ್ಮಗಳ ಸಂನ್ಯಾಸವನ್ನು ಮಾಡಿದವರು ಕೂಡ ವಿಷಯ ವಾಸನೆಯನ್ನೂ ದೇಹಾದ್ಯಭಿಮಾನದ ವಾಸನೆಯನ್ನೂ ಬಿಟ್ಟಿರುವದಿಲ್ಲ. ನಮ್ಮವರೆಂದು ಅಭಿಮಾನಮಾಡಿಕೊಂಡವರು ಸತ್ತಮೇಲೂ ಅವರ ಶರೀರದಲ್ಲಿ ನಮಗೆ ಅಭಿಮಾನವು ತಪ್ಪುವದಿಲ್ಲ. ಧಾರವಾಡದಲ್ಲಿ ಒಮ್ಮೆ ನಾನೂ ಕೆಲವು ಸ್ನೇಹಿತರೂ ಪ್ಲೇಗಿನಿಂದ ಸತ್ತಿದ್ದವನೊಬ್ಬನ ಶವವನ್ನು ಹೊರಬೇಕಾದ ಪ್ರಸಂಗವು ಬಂದಿತ್ತು. ಆದರೆ ಮನೆಯವರೂ ಬಂಧುಗಳೂ ಬಲುಮಂದಿಯಿದ್ದರು. ನಾವು ಶವವನ್ನು ಎತ್ತುವದಕ್ಕೆ ಹೋದರೆ ಅವರು ಯಾರೂ ಅದನ್ನು ಬಿಡದೆ ಹಿಂದಕ್ಕೆ ಎಳೆಯುತ್ತಿದ್ದರು. ಇಂಥದ್ದು ಶರೀರಾಭಿಮಾನ! ಆದ್ದರಿಂದಲೇ ಭಗವಂತನು ಅವ್ಯಕ್ತಗತಿಯು ದೇಹವಂತರಿಗೆ ದೊರಕುವದೂ ಬಹಳ ಕಷ್ಟ - ಎಂದಿರುತ್ತಾನೆ. ಶರೀರೇಂದ್ರಿಯ ಮನೋಬುದ್ಧಿಗಳಲ್ಲಿ ನಾನು, ನನ್ನದು ಎಂಬ ಅಭಿಮಾನವು ಅನಾದಿಕಾಲದಿಂದಲೂ ನಮಗೆ ಅಂಟಿಕೊಂಡು ಬಂದಿರುತ್ತದೆ. ಇದನ್ನು ಬಿಟ್ಟಹೊರತು ನಾವು ಪರಮಾತ್ಮನ ಕಡೆಗೆ ತಿರುಗುವಂತಿಲ್ಲ. ಬಲೂನಿನಲ್ಲಿ ಕುಳಿತಿದ್ದವರು ಮೇಲಕ್ಕೇರಬೇಕಾದರೆ ಅದರಲ್ಲಿರುವ ಭಾರವಾದ ವಸ್ತುಗಳನ್ನು ಕೆಳಕ್ಕೆ ಹಾಕಬೇಕಾದ ಪ್ರಸಂಗವು ಬರುತ್ತಿತ್ತು. ಇದರಂತೆ ಊರ್ಧ್ವ ಮೂಲಸ್ವರೂಪನಾದ ಪರಮಾತ್ಮನನ್ನು ಮುಟ್ಟಬೇಕಾದವರು ಶರೀರಾದ್ಯಭಿಮಾನದ ಭಾರವನ್ನು ತೆಗೆದುಹಾಕಬೇಕಾಗುವದು. ಯಾರು ಸರ್ವದೇಹಾ ಭಿಮಾನವನ್ನೂ ತೊರೆದಿರುವರೋ ಅವರಿಗೆ ಅವ್ಯಕ್ತೋಪಾಸನೆಯು ದಕ್ಕುವದು. ಆದ್ದರಿಂದ ಸಾಮಾನ್ಯರಿಗೆ, ದೇಹಾಭಿಮಾನವುಳ್ಳವರಿಗೆ, ಅವ್ಯಕ್ತೋಪಾಸನೆಗಿಂತಲೂ ವ್ಯಕ್ತೋ ಪಾಸನೆಯೇ, ವಿಶ್ವರೂಪೋಪಾಸನೆಯೇ, ಸುಲಭವಾಗಿರುತ್ತದೆ.

ಈ ವಿಶ್ವರೂಪವನ್ನು ಉಪಾಸನೆಮಾಡುವವರು ಹೇಗಿರಬೇಕು? ಸರ್ವಕರ್ಮ ಗಳನ್ನೂ ಭಗವಂತನಲ್ಲಿ ಸಂನ್ಯಾಸಮಾಡಿ 'ಭಗವಂತ, ನೀನೇ ಎಲ್ಲವನ್ನೂ

ಮಾಡಿಸುವವನು; ನಾನು ಮಾಡುವದೇನು ಉಳಿದಿದೆ?' ಎಂದು ತನ್ನ ಸಾಧನೆಯು ಸಾಗುವದು ಕೂಡ ಭಗವಂತನ ಕೈಯಲ್ಲಿದೆ ಎಂದು ನಂಬಿ-ಪರಮೇಶ್ವರನ ಮೇಲೆಯೇ ಎಲ್ಲಾ ಭಾರವನ್ನೂ ಹಾಕಿ, 'ಹಾಲಿನಲ್ಲಾದರೂ ಹಾಕು, ನೀರಿನಲ್ಲಾದರೂ ಹಾಕು, ನೀನೇ ಗತಿ' ಎಂದು ಅನನ್ಯಯೋಗದಿಂದ, ನನಗೆ ಮತ್ತೆ ಯಾರೂ ಶರಣ್ಯರಿಲ್ಲ, ಮತ್ತೆ ಯಾರೂ ಬಂಧುಗಳಿಲ್ಲ ಎಂಬ ತಿಳಿವಳಿಕೆಯ ಬಲದಿಂದ ಭಗವಂತನನ್ನೇ ಚಿಂತಿಸುತ್ತಾ ಉಪಾಸನೆಮಾಡುತ್ತಿರಬೇಕು; ಭಗವಂತನಲ್ಲಿಯೇ ಚಿತ್ತವು ಸೇರಿಕೊಂಡುಬಿಟ್ಟಿರಬೇಕು. "ಇಂಥವರನ್ನು ನಾನೇ ಬಲುಬೇಗನೆ ಈ ಮೃತ್ಯುಸಂಸಾರವೆಂಬ ಸಾಗರದಿಂದ ಉದ್ಧಾರಮಾಡುವವನಾಗುವೆನು" ಎಂದು ಭಗವಂತನು ಇಲ್ಲಿ ವಾಗ್ದಾನಮಾಡಿರುತ್ತಾನೆ. ಈಜುವದು ಬರದೆ ಇದ್ದರೂ ಈಜು ಬುರುಡೆಯನ್ನು ಕಟ್ಟಿಕೊಂಡು ನೀರಿನಲ್ಲಿ ಬಿದ್ದವರನ್ನು ಅದೇ ಹೇಗೆ ಮೇಲಕ್ಕೆತ್ತಿ ತೇಲಿಸುವದೋ, ಹಾಗೆ ಭಕ್ತಿ ಎಂಬ ಈಜುಬುರುಡೆಯನ್ನು ಕಟ್ಟಿಕೊಂಡು ಸಂಸಾರ ಸಾಗರದಲ್ಲಿ ಬಿದ್ದವರನ್ನು ಆ ಭಗವಂತನ ಭಕ್ತಿಯೇ ಮೇಲಕ್ಕೆತ್ತುವದು. ಯಾರು ಆ ಭಗವಂತನನ್ನು ತಮ್ಮ ಹೃದಯದಲ್ಲಿ ಇಟ್ಟುಕೊಂಡಿರುವರೋ ಅವರಿಗೇ ಲಾಭವು, ಅವರಿಗೇ ಜಯವು. ಅವರಿಗೆ ಸೋಲೆಂಬುದೇ ಇಲ್ಲ ಎಂದು ಸ್ಮೃತಿ ವಚನವಿದೆ. "ಅದು ಹೇಗೆ ಸಾಧ್ಯ? ಎಲ್ಲಾ ಕೆಲಸಗಳೂ ಲಾಭದಾಯಕವಾಗಿರುವದು ಹೇಗೆ ಸಾಧ್ಯ? ಜಯಪರಾಜಯಗಳು ಹೇಗೆತಾನೆ ನಿಯತವಾಗಿದ್ದಾವು?" ಎಂದು ಯಾರಾದರೂ ಕೇಳಬಹುದು. ಇದರಲ್ಲೇನೂ ಆಶ್ಚರ್ಯವಿಲ್ಲ, ಏಕೆಂದರೆ ಭಗವಂತನಲ್ಲಿ ಭಕ್ತಿಯಿದ್ದವರು ಲಾಭವಾಗುವ ಕೆಲಸವನ್ನೇ, ಜಯವಾಗುವ ಕಾರ್ಯವನ್ನೇ, ಹಿಡಿಯುವಂತೆ ಭಗವಂತನು ಅವರಿಗೆ ಅನುಗ್ರಹಿಸುತ್ತಾನೆ. ಭಕ್ತರನ್ನು ಯಾವಾಗಲೂ ಆನಂದದಲ್ಲಿಡುವದೇ ಭಗವಂತನ ಅನುಗ್ರಹವು. ಭಗವಂತನನ್ನು ಅನನ್ಯಭಕ್ತಿಯಿಂದ ನಂಬಿದವರು ಯಾರೇ ಆಗಿರಲಿ, ಅವರೆಲ್ಲರನ್ನೂ ಆತನು ಮೃತ್ಯುಸಾಗರದಿಂದ ಉದ್ಧಾರಮಾಡುತ್ತಾನೆ; ಅವರೆಲ್ಲರೂ ಅಮೃತರೇ ಆಗುವರು. ಸಂಸಾರವೆಂಬುದು ಒಂದು ದೊಡ್ಡ ಸಾಗರವು; ಇದರಲ್ಲಿ ಮೃತ್ಯುವೆಂಬ ಮೊಸಳೆಯು ಬಾಯಿಬಿಟ್ಟುಕೊಂಡು ಎಲ್ಲೆಲ್ಲಿಯೂ ಸಂಚರಿಸುತ್ತಿರುವದು. ಇಂಥ ಸಾಗರದಲ್ಲಿ 'ಅಹಂ' (ನಾನು) ಎಂಬ ಭಾರವಾದ ಕಲ್ಲುಕಟ್ಟಿಕೊಂಡು ಜೀವರು ಬಿದ್ದಿರುತ್ತಾರೆ, ಅಂಥವರಿಗೆ ಸಂಸಾರದಿಂದ ಉದ್ಧಾರವಾಗುವವೆಂಬ ಆಶೆಯೆಲ್ಲಿಯದು? ಯಾರು ಅನನ್ಯಭಕ್ತಿ ಎಂಬ ಈಜು ಬುರುಡೆಯನ್ನು ಕಟ್ಟಿಕೊಳ್ಳುವರೋ, ಯಾರು 'ನಾನು ಮಾಡುವೆನು, ನಾನು ಫಲವನ್ನು ಅನುಭವಿಸುವೆನು' ಎಂಬ ಹಮ್ಮನ್ನುಳಿದು ಭಗವಂತನನ್ನೇ ನಂಬುತ್ತಾರೋ ಅಂಥವರನ್ನು ಭಗವಂತನೇ ಮೇಲಕ್ಕೆತ್ತಿ ದಡವನ್ನು ಸೇರಿಸುತ್ತಾನೆ. ಇದೇ ವಿಶ್ವರೂಪೋಪಾಸನೆಯ ಮರ್ಮವು.

---

# ೮೮. ಉಪಾಸನೆಯ ಸೋಪಾನ ೧೨-(೮-೧೧)

(೪-೭-೪೮)

ಅರ್ಜುನನು ಕೇಳಿದ ಪ್ರಶ್ನೆಗೆ ಭಗವಂತನು ಉತ್ತರವನ್ನು ಕೊಡುತ್ತಿದ್ದಾನೆ. ವಿಶ್ವರೂಪದ-ಸಗುಣಸಾಕಾರದ - ಉಪಾಸಕರು ಹೆಚ್ಚಿನ ಯೋಗಿಗಳೊ, ಅಕ್ಷರೋಪಾಸಕರು ಹೆಚ್ಚಿನ ಯೋಗಿಗಳೊ ? ಭಗವಂತನು ಹೇಳುತ್ತಾನೆ; ಅಕ್ಷರೋಪಾಸನೆಯೂ ವಿಶ್ವರೂಪೋಪಾಸನೆಯೂ ಎರಡೂ ಭಗವತ್ಪ್ರಾಪ್ತಿಗೆ ಸಾಧನವೇ ಸರಿ. ಆದರೆ ಅಕ್ಷರೋಪಾಸನೆಯು ಎಲ್ಲರಿಗೂ ದೊರಕುವದಲ್ಲ; ಅದು ಬಹಳ ಕ್ಲೇಶಕರವಾದದ್ದು. ಮನುಷ್ಯನಿಗೆ ಹೆಚ್ಚಿನ ಸಾಧನವನ್ನು ಮಾಡಬೇಕೆಂಬ ಆಸೆ ಬಲವತ್ತರವಾಗಿರುತ್ತದೆ; ಆದರೆ ಅದಕ್ಕಾಗಿ ಪಡಬೇಕಾಗಿರುವ ಕ್ಲೇಶಕ್ಕೆ ಸಿದ್ಧನಾಗಿರುವದಿಲ್ಲ. ದೇವರನ್ನು ನೋಡುವದಕ್ಕೆ ಕಾಡಿಗೇ ಹೋಗಬೇಕಾದದ್ದಿಲ್ಲ. ತರಗೆಲೆಯನ್ನಾಗಲಿ ವಾಯುಭಕ್ಷಣವನ್ನಾಗಲಿ ಮಾಡಬೇಕಾದದ್ದೂ ಇಲ್ಲ. ಪುಣ್ಯಫಲವಿದ್ದರೆ ಆತನನ್ನು ಮನೆಯಲ್ಲಿಯೇ ಕಾಣಬಹುದು ಎಂದು ದೊಡ್ಡವರು ಹೇಳುವದನ್ನು ನೀವು ಕೇಳಿರಬಹುದು. ತಪಸ್ಸು ಮಾಡುವದು ಒಳ್ಳೆಯದೇ ಸರಿ; ಆದರೆ ಅದು ದಕ್ಕದೆ ಇರುವವರು ಸುಮ್ಮನೆ ಕೂತುಕೊಳ್ಳಬೇಕಾದದ್ದಿಲ್ಲ. ತಾವು ಇರುವಲ್ಲಿಯೇ ಕೈಯಲ್ಲಾದ ಪ್ರಯತ್ನದಿಂದ ಭಗವಂತನನ್ನು ಒಲಿಸಿಕೊಳ್ಳುವದಕ್ಕೆ ಯತ್ನಿಸಬೇಕು ಎಂಬುದು ಉಪದೇಶದ ಅಭಿಪ್ರಾಯವು. ನಾವು ಉಪಯೋಗಿಸುವ ಸಾಧನಗಳೂ ಸಾಮಗ್ರಿಗಳೂ ಮುಖ್ಯವಲ್ಲ; ಪಾಪವಶದಿಂದ ಆ ಸಾಮಗ್ರಿಗಳೇ ನಮಗೆ ಅಡ್ಡಿಯಾಗಬಹುದು. ವೀಣೆಯನ್ನು ಮನೆಯಲ್ಲಿಟ್ಟುಕೊಂಡಮಾತ್ರದಿಂದ ಎಲ್ಲರಿಗೂ ಅದನ್ನು ನುಡಿಸುವದಕ್ಕೆ ಬಂದೀತೆ ? ಅನಿರ್ದೇಶ್ಯನೂ ಅವ್ಯಕ್ತನೂ ಅಚಿಂತ್ಯನೂ ಆಗಿರುವ ಪರಮಾತ್ಮನನ್ನು ಉಪಾಸನೆಮಾಡುವದು ದೊಡ್ಡದೇ ಸರಿ. ಆದರೆ ದೇಹವಾಸನೆಯಿರುವವರಿಗೆ ಅದು ದಕ್ಕಬೇಕಲ್ಲ! ಅವ್ಯಕ್ತಾಸಕ್ತರಾದವರಿಗೆ ಕ್ಲೇಶವು ಅಧಿಕತರವಾಗಿರುವದು. ಆದ್ದರಿಂದ ವಿಶ್ವರೂಪದ ಉಪಾಸನೆ ಮಾಡುವವರೇ ಯೋಗವಿತ್ತಮರು ಎಂದು ಭಗವಂತನು ಅಪ್ಪಣೆಕೊಡಿಸಿರುತ್ತಾನೆ.

ಆದರೆ ಸಗುಣೋಪಾಸನೆಯನ್ನು ಮಾಡುವದರಲ್ಲಿ ಒಂದು ತತ್ತ್ವವನ್ನು ನೆನಪಿನಲ್ಲಿಟ್ಟಿರಬೇಕಾಗುತ್ತದೆ. ಅದರಲ್ಲಿಯೂ ಕ್ಲೇಶವು ಇದ್ದೇ ಇದೆ; ಆದರೆ ಅವ್ಯಕ್ತೋಪಾಸನೆಯ ಕ್ಲೇಶವು ವ್ಯಕ್ತವಾದ ದೇಹದ ಅಭಿಮಾನವಿದ್ದವರಿಗೆ ಅಧಿಕತರ. ಮೂಗುಬಟ್ಟು ಮುಂತಾದ ಒಡವೆಗಳನ್ನು ಇಟ್ಟುಕೊಳ್ಳುವ ಆಸೆಯಿರುವ ಹೆಣ್ಣುಮಕ್ಕಳು ಮೂಗುಚುಚ್ಚಿಸಿಕೊಳ್ಳುವ ನೋವನ್ನು ಸಹಿಸಿಕೊಳ್ಳಬೇಕಾಗುವಂತೆ ದೇಹಾಭಿಮಾನವನ್ನು ಬಿಡುವ ಕ್ಲೇಶವು ಅವ್ಯಕ್ತೋಪಾಸಕರಿಗೆ ಅತ್ಯವಶ್ಯವಾಗಿರುತ್ತದೆ. ಸಗುಣೋಪಾಸಕರಿಗೋ

ಎಂದರೆ ಅಹಂಭಾವವನ್ನು ಬಿಟ್ಟು ಭಗವಂತನನ್ನೇ ಅನನ್ಯಭಕ್ತಿಯಿಂದ ಸೇವಿಸ ಬೇಕಾಗುತ್ತದೆ. ಒಂದು ಸಂಸ್ಥೆಯಲ್ಲಿ ಗುಮಾಸ್ತನಾಗಿರುವವನು ಜಮಾಖರ್ಚಿನ ಲೆಕ್ಕವನ್ನಿಟ್ಟಿರುತ್ತಾನೆ; ಆದರೆ ಲಾಭವಾಗಲಿ ನಷ್ಟವಾಗಲಿ ಆ ಸಂಸ್ಥೆಯದೆಂದು ಅವನಿಗೆ ಗೊತ್ತಿರುವದರಿಂದ ಅವನಿಗೆ ಯಾವ ಹಿಗ್ಗುತಗ್ಗಿನ ಕ್ಲೇಶವೂ ಇರುವದಿಲ್ಲ. ಅಲ್ಲವೆ? ಅದರಂತೆ ತಾನು ಮಾಡುವ ಕರ್ಮವನ್ನೆಲ್ಲ ಭಗವಂತನಲ್ಲಿಟ್ಟುಬಿಟ್ಟಿದ್ದವನು ಅನನ್ಯ ಯೋಗಿಯು; ಅವನಿಗೆ ಮಾಡಿದ ಕರ್ಮದಿಂದ ಆಗಬೇಕಾದ ಲಾಭವೂ ಇಲ್ಲ, ನಷ್ಟವೂ ಇಲ್ಲ. ಅನನ್ಯಯೋಗದಿಂದ ಕರ್ಮವನ್ನು ಮಾಡುವವನಿಗೆ ಕರ್ಮದ ಮೇಲೆ ದೃಷ್ಟಿಯಿರುವದಿಲ್ಲ. ಅವನು ಭಗವಂತನನ್ನೇ ಧ್ಯಾನಿಸುತ್ತಾ ಇರುತ್ತಾನೆ. ನನಗೆ ಇಂಥ ಕರ್ಮವು ಬೇಕು, ಇಂಥ ಸಾಧನವು ಬೇಕು - ಎಂದು ಅವನು ಹವಣಿಸುವದಿಲ್ಲ. ತನಗೆ ಭಗವಂತನು ಕೊಟ್ಟ ಕರ್ಮವನ್ನು ಮಾಡಿ ಅವನಿಗೇ ಅರ್ಪಿಸಿಬಿಡುತ್ತಾನೆ. ನಾವು ಮಾಡುವ ಕೆಲಸವು ದೊಡ್ಡವರಿಗೆ ಕಾಣಬೇಕು ಎಂದು ಅವರ ಹತ್ತಿರವೇ ಯಾವಾಗಲೂ ಇರುವದರಿಂದ ಅವರಿಗೆ ತೃಪ್ತಿಯಾಗುವದಿಲ್ಲ; ತನ್ನ ಪಾಲಿಗೆ ಬಂದಿರುವದು ಎಂಥ ಕೀಳುಕೆಲಸವಾಗಲಿ ಅದನ್ನೇ ಉತ್ಕೃಷ್ಟರೀತಿಯಿಂದ ಮಾಡುವದು ಅವಶ್ಯವಾಗಿರುತ್ತದೆ.

ಕರ್ಮಕ್ಕೆ ಸ್ಥಾನವಾಗಲಿ ಕಾಲವಾಗಲಿ ಮುಖ್ಯವಲ್ಲ; ಅದನ್ನು ಹೇಗೆ ಮಾಡುತ್ತೇವೆ ಎಂಬುದು ಮುಖ್ಯ. ನಾವು ಭಗವಂತನ ಆರಾಧನಾರೂಪವಾಗಿ ಯಾವ ಕೆಲಸವನ್ನು ಎಲ್ಲಿ ಮಾಡಿದರೂ ಅದು ಭಗವಂತನ ಅನುಗ್ರಹಕ್ಕೆ ಪಾತ್ರವಾಗುವದು. ಇದು ನನಗಾಗಿ ಅಲ್ಲ, ಭಗವಂತನಿಗಾಗಿ ಮಾಡುವ ಕೆಲಸ - ಎಂದು ಅಂತಃಕರಣದಲ್ಲಿ ತುಂಬಿತುಳುಕುತ್ತಿರಬೇಕು. ಯಾವಾಗಲೂ ಎಲ್ಲಾ ಕರಣಗಳಿಂದಲೂ ಭಗವಂತನನ್ನೇ ಕಾಣುತ್ತಿರಬೇಕು. ಒಂದು ಪೂಜೆಯ ಕಾಲದಲ್ಲಿ ನಮ್ಮೆದುರಿಗೆ ಕಾಣುವದು ದೇವರ ಮಂಟಪವು, ದೇವರ ವಸ್ತ್ರವು, ದೇವರ ಹೂ - ಎಂದು ಪೂಜಾಸಾಮಗ್ರಿಯೆಲ್ಲವೂ ದೇವರಿಗೆ ಸಂಬಂಧಪಟ್ಟಿದ್ದರೆ, ಕ್ರಿಯಾಕಾರಕಫಲಗಳೆಲ್ಲ ಭಗವಂತನೇ ಎಂಬ ಭಾವನೆಯಿದ್ದರೆ, ಅದು ನಿಜವಾದ ಭಗವಂತನ ಪೂಜೆ; ಇದೇ ಅನನ್ಯಯೋಗವು.

ಕರ್ಮವನ್ನು ಭಗವಂತನಲ್ಲಿ ಸಂನ್ಯಾಸಮಾಡಿ ಕರ್ಮವನ್ನು ಕೂಡ ಮರೆತಿರುವದು ನಿಜವಾದ ಭಗವತ್ಕರ್ಮವಾಗುವದು. ಒಂದು ವಿಗ್ರಹವನ್ನು ಮಾಡುವವನು, ತನ್ನ ಭಾವನೆಯು ವಿಗ್ರಹದ ಸೌಂದರ್ಯದಲ್ಲಿಯೂ, ಕಾವ್ಯವನ್ನು ಮಾಡುತ್ತಿರುವವನು ಅದನ್ನು ತಾನು ಹುದುಗಿಸಬೇಕೆಂಬ ರಸದ ಮಾಧುರ್ಯದಲ್ಲಿಯೂ, ಚಿತ್ರವನ್ನು ಬರೆಯುವವನು ಅದನ್ನು ತನ್ನ ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡಿರುವ ಆಕಾರದಲ್ಲಿಯೂ ಮುಳುಗಿಸಿದ್ದರೆ ಆಯಾ ಕೆಲಸವು ಉತ್ಕೃಷ್ಟವಾಗುವಂತೆ, ಭಗವಂತನ ಧ್ಯಾನದಲ್ಲಿಯೇ

ಮುಳುಗಿದ್ದು ಮಾಡುವವನ ಕರ್ಮವೂ ಉತ್ಕೃಷ್ಟವಾಗುವದು. ಇದಕ್ಕೆ ಮನಸ್ಸಿನ ನೈರ್ಮಲ್ಯವೇ ಕಾರಣವು.

ಹೀಗೆ ಭಗವತ್ಕರ್ಮವನ್ನು ಅನನ್ಯಯೋಗದಿಂದ ಯಾವನು ಮಾಡುತ್ತಿರುವನೋ, ಯಾವನು ತನ್ನ ಕರ್ಮವನ್ನೆಲ್ಲ ಭಗವಂತನಿಗೇ ಅರ್ಪಿಸಿ ಅನನ್ಯಯೋಗದಿಂದ ಆತನನ್ನೇ ಚಿಂತಿಸುತ್ತಿರುವನೋ ಅವನನ್ನು 'ನಾನು ಸಮುದ್ಧಾರ ಮಾಡುವೆನು; ಚೆನ್ನಾಗಿ ಸಂಸಾರಸಾಗರದಿಂದ ಮೇಲಕ್ಕೆತ್ತಿ ಪಾರುಗಾಣಿಸುವೆನು' ಎಂದು ಭಗವಂತನು ಅಪ್ಪಣೆಕೊಡಿಸಿರುತ್ತಾನೆ. ಭಗವಂತನನ್ನೇ ಮನಸ್ಸಿನಲ್ಲಿ ತುಂಬಿಕೊಂಡರೆ ಗಾಳಿ ತುಂಬಿದ ಕಾಲ್ಚೆಂಡು ಮೇಲಕ್ಕೇರುವಂತೆ, ಸಂಸಾರವನ್ನು ಬಿಟ್ಟು ಮೇಲಕ್ಕೇರಬಹುದು. ಈಗ ನಮಗೆ ವಿಷಯದ ಕಡೆಗೆ ಮನಸ್ಸು ತಿರುಗಿದೆ, ವಿಷಯಗಳಲ್ಲಿಯೇ ನೆಟ್ಟಿದೆ; ಇದನ್ನು ಭಗವಂತನ ಕಡೆಗೆ ತಿರುಗಿಸಬೇಕು, ಭಗವಂತನಲ್ಲಿಯೇ ನಿಲ್ಲಿಸಿಕೊಳ್ಳಬೇಕು. ಹಾಗೆ ಭಗವಂತನಲ್ಲಿಯೇ ಹೊಗಿಸಿದ ಚಿತ್ತವುಳ್ಳವರನ್ನೇ ಭಗವಂತನು ಉದ್ಧಾರ ಮಾಡುವನೇ ಹೊರತು ವಿಷಯಾವೇಶಿತಚಿತ್ತರಾದವರನ್ನು ಉದ್ಧಾರಮಾಡಲಾರನು. ಭಾರಿಭಾರಿಯ ವಿಷಯಗಳ ಆಶೆ ಎಂಬ ಕಲ್ಲನ್ನು ಕಟ್ಟಿಕೊಂಡು ಸಂಸಾರಸಮುದ್ರದಲ್ಲಿ ಧುಮುಕುವವರನ್ನು ಯಾರು ತಾನೆ ಬದುಕಿಸಲಾಪರು?

ಭಗವಂತನನ್ನು ಸೇರುವದಕ್ಕೆ, ಭಗವಂತನೇ ನಮ್ಮನ್ನು ಉದ್ಧಾರಮಾಡುವಂತೆ ಒಲಿಯುವ ಸಾಧನಗಳನ್ನು ಕೈಕೊಳ್ಳಬೇಕಾಗುವದು. ಈ ಸಾಧನಗಳೆಲ್ಲವೂ ನಮಗೆ ಎಲ್ಲರಿಗೂ ದಕ್ಕುವಂತಿರುವದಿಲ್ಲ; ನಮ್ಮನಮ್ಮ ಯೋಗ್ಯತೆಗೆ ತಕ್ಕ ಮೆಟ್ಟಿಲಿನಲ್ಲಿದ್ದುಕೊಂಡು ಆಯಾ ಸಾಧನವನ್ನು ಕೈಕೊಳ್ಳಬೇಕು. ಇದನ್ನು ತಿಳಿಸುವದಕ್ಕಾಗಿ ಭಗವಂತನು ಉಪದೇಶಿಸಿರುವ ಸಾಧನಸೋಪಾನವನ್ನು ಈಗ ಮನಸ್ಸಿಗೆ ತಂದುಕೊಳ್ಳೋಣ:

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ (೧೨-೮)**

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥ (೧೨-೯)**

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ (೧೨-೧೦)**

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ (೧೨-೧೧)**

"ನನ್ನಲ್ಲಿಯೇ ಮನಸ್ಸಿಡು, ನನ್ನಲ್ಲಿಯೇ ಬುದ್ಧಿಯನ್ನು ನಿಲ್ಲಿಸಿಕೊ; ಹಾಗಾದರೆ ಇನ್ನುಮೇಲೆ ನನ್ನಲ್ಲಿಯೇ ವಾಸಮಾಡಿಕೊಂಡಿರುವೆ" ಎಂದು ಭಗವಂತನು ಹೇಳುತ್ತಿದಾನೆ. ಹೀಗೆ ಮಾಡುವದು ಹೇಗೆ? ಭಗವಂತನು ಎಲ್ಲಿದಾನೆಂದು ತಿಳಿದು ಅವನಲ್ಲಿಯೇ ಮನೋಬುದ್ಧಿಗಳನ್ನು ನಿಲ್ಲಿಸಿಕೊಳ್ಳಬೇಕು? ಆ ಭಗವಂತನು ಎಲ್ಲೆಲ್ಲಿಯೂ ಇರುತ್ತಾನೆ. ನಾವು ವಿಷಯಗಳಲ್ಲಿರುವ ಮನಸ್ಸನ್ನು ಹಿಂತಿರುಗಿಸಿದರೆ ಆಯಿತು, ಭಗವಂತನಲ್ಲಿಟ್ಟಂತೆಯೇ. ವಿಷಯದ ಕಡೆಗೆ ಮನಸ್ಸನ್ನು ಹರಿಯಗೊಟ್ಟರೆ ಅದು ಸಂಕಲ್ಪವಿಕಲ್ಪಗಳನ್ನು ಮಾಡಿಕೊಳ್ಳುತ್ತಾ ಹರಿದಾಡುವದು, ಬುದ್ಧಿಯು ಅವುಗಳಲ್ಲಿಯೇ ಹೊಕ್ಕುಬಿಡುವದು. ನಾವು ಇಷ್ಟಪಟ್ಟರೂ ಬೇರೆಯ ಕಡೆಗೆ ಹೋಗುವದಿಲ್ಲ. ಒಬ್ಬ ಮೊಗಲಾಯಿ ಚಕ್ರವರ್ತಿಯು ಮಸೀದಿಯಲ್ಲಿ ಪ್ರಾರ್ಥನೆಮಾಡುತ್ತಿದ್ದನು; ಮೌಲ್ವಿಯು ಪರಮೇಶ್ವರನ ಸ್ತೋತ್ರವನ್ನು ಗಟ್ಟಿಯಾಗಿ ಹೇಳುತ್ತಿದ್ದನು. ಆ ಸಮಯಕ್ಕೆ ಅಲ್ಲಿಗೆ ಬಂದಿದ್ದ ಮಹಾತ್ಮನೊಬ್ಬನು ಈ ಸ್ತೋತ್ರವನ್ನು ಕೇಳಿದಂತೆಲ್ಲ ಖೊಳ್ಳೆಂದು ಗಟ್ಟಿಯಾಗಿ ನಗುತ್ತಿದ್ದನು. ಬಾದಷಹಾನು ಕಿಡಿಕಿಡಿಯಾಗಿ "ಏಕೆ ನಕ್ಕಿರಿ? ಪರಮೇಶ್ವರನ ಸ್ತೋತ್ರವು ನಿಮಗೆ ಉಪಹಾಸ್ಯವಾಯಿತೆ?" ಎಂದು ಕೇಳಲು ಆ ಮಹಾತ್ಮನು "ಮೌಲ್ವಿಯವರು ಭಗವಂತನ ಸ್ತೋತ್ರಮಾಡುತ್ತಿರಲಿಲ್ಲ; ತಮ್ಮ ಮನೆಯ ಕರುವನ್ನು ನೆನೆಸಿಕೊಳ್ಳುತ್ತಿದ್ದರು" ಎಂದನಂತೆ. ನಿಶ್ಚಯವಾಗಿಯೂ ಆ ಕಾಲಕ್ಕೆ ಮೌಲ್ವಿಗೆ ತನ್ನ ಮನೆಯ ಕರುವಿನ ಚಿಂತೆಯು ಹತ್ತಿಕೊಂಡಿತ್ತೆಂಬುದು ಮುಂದೆ ವ್ಯಕ್ತವಾಗಲು, ಆ ಮಹಾತ್ಮನು ಯೋಗಿಪ್ರತ್ಯಕ್ಷದಿಂದ ಈ ಗುಟ್ಟನ್ನು ಅರಿತು ನಕ್ಕನೆಂಬುದು ಚಕ್ರವರ್ತಿಗೆ ಗೊತ್ತಾಯಿತಂತೆ. ನಾವು ಭಗವಂತನಲ್ಲಿಯೇ ಮನಸ್ಸನ್ನಿಟ್ಟು ಬುದ್ಧಿಯನ್ನು ಆತನಲ್ಲಿಯೇ ನಿಲ್ಲಿಸಿಕೊಳ್ಳುವದೆಂಬುದೇನೂ ಅಷ್ಟು ಬಿಟ್ಟಿಯ ಮಾತಲ್ಲ. ಆದ್ದರಿಂದಲೇ ಇದರಲ್ಲಿ ಕ್ಲೇಶವಿದೆಯೆಂದು ಹಿಂದೆ ಹೇಳಿರುವದು. ನಾವು ಯಾವನಾದರೊಬ್ಬ ಮಹಾರಾಜನೊಡನೆ ಆಗಬೇಕಾದ ಸಂಭಾಷಣೆಯ ಕಾಲವನ್ನು ಬಹಳ ಶ್ರಮದಿಂದ ಅನೇಕರ ಶಿಫಾರಿಸಿನ ಬಲದಿಂದ ಗೊತ್ತು ಮಾಡಿಕೊಂಡು ಆತನ ಸನ್ನಿಧಿಯಲ್ಲಿ ನಿಂತಿರುವಾಗ ಯಾವದೋ ಒಂದು ಕ್ಷುದ್ರವಿಷಯವನ್ನು ಮನಸ್ಸಿಗೆ ತಂದುಕೊಂಡು ಅದರ ಚಿಂತೆಯಲ್ಲಿ ಮಗ್ನರಾಗಿ ಮಾತನಾಡುವ ಕಾಲವನ್ನು ಕಳೆದುಬಿಟ್ಟರೆ ಹೇಗೆ ನಮ್ಮ ಶ್ರಮವು ವ್ಯರ್ಥವಾಗುವದೋ ಹಾಗೆಯೇ ಸಕಲಪುರುಷಾರ್ಥಗಳನ್ನೂ ದಯಪಾಲಿಸಬಲ್ಲ ಭಗವಂತನಲ್ಲಿ ಮನಸ್ಸನ್ನಿಟ್ಟು ಆತನನ್ನೇ ಧ್ಯಾನಮಾಡಬೇಕೆಂದು ಮನಸ್ಸು ಮಾಡಿರುವಾಗಲೂ ನಮ್ಮ ಮನಸ್ಸು ಪೂರ್ವಾಭ್ಯಾಸದಿಂದ ವಿಷಯಗಳ ಕಡೆಗೆ ಧಾವಿಸಿದಾಗ ಧ್ಯಾನದ ಕಾಲವು ವ್ಯರ್ಥವಾಗುವದು. ಆದ್ದರಿಂದ ಅಂಥ ವೇಳೆಗಳಲ್ಲಿ ಮನಸ್ಸನ್ನೂ ಬುದ್ಧಿಯನ್ನೂ ಸೆಳೆದುಕೊಂಡು ಆ ಪರಮೇಶ್ವರನಲ್ಲಿಯೇ

ನಿಲ್ಲಿಸಿಕೊಳ್ಳಬೇಕು. ವಿಷಯಗಳೆಂಬಿವು ಭಗವಂತನ ಹೊರಮೈ; ಆದ್ದರಿಂದ ಅವುಗಳ ಕಡೆಗೆ ಮನಸ್ಸು ಹರಿದಾಗ ಆ ಹೊರಮೈಯಿಂದ ಸೂಚಿತನಾಗಿರುವ ಭಗವಂತನನ್ನೇ ಮನಸ್ಸಿಗೆ ತಂದುಕೊಂಡು ಆತನಲ್ಲಿಯೇ ಮನೋಬುದ್ಧಿಗಳನ್ನು ನಿಲ್ಲಿಸಿಕೊಳ್ಳಬೇಕು.

ಹೀಗಾದರೆ ಭಗವಂತನಲ್ಲಿ ನೆಲೆನಿಂತ ಮನೋಬುದ್ಧಿಗಳ ಮೂಲಕ ನಾವೂ ಆತನಲ್ಲಿಯೇ ನೆಲಸಿಬಿಡುವೆವು. ಆತನನ್ನು ಬಿಟ್ಟು ಒಂದರೆಗಳಿಗೆಯೂ ಅತ್ತಿತ್ತ ಕದಲುವದಕ್ಕೆ ಇಚ್ಛಿಸುವದಿಲ್ಲ. ಸಾಯುವಾಗಲೂ ನಮ್ಮ ಮನೋಬುದ್ಧಿಗಳು ಆ ಭಗವಂತನಲ್ಲಿಯೇ ನೆಲೆನಿಂತಿರುವವು; ಸತ್ತಬಳಿಕ ನಮಗೆ ಮತ್ತೆ ಯಾವ ವಿಷಯಗಳ ವಾಸನೆಯೂ ಇಲ್ಲದಿರುವದರಿಂದ ಅವುಗಳ ಭೋಗಕ್ಕಾಗಿ ಶರೀರಧಾರಣವನ್ನು ಮಾಡುವ ಪ್ರಸಂಗವು ಬರುವದಿಲ್ಲ. ಅದೇ ಭಾವನೆಯಿಂದ ಭಾವಿತರಾಗಿ ಶರೀರವನ್ನು ಬಿಟ್ಟ ಬಳಿಕವೂ ಭಗವಂತನಲ್ಲಿಯೇ ನಾವು ನಿಂತುಬಿಟ್ಟಿರುವೆವು. ಮುಂದೆ ಭಗವಂತನ ತಾದಾತ್ಮ್ಯವನ್ನು ಪಡೆದು ಆತನಲ್ಲಿಯೇ ಇದ್ದುಬಿಡುವೆವು.

ಆದರೆ ಹೀಗೆ ಮನೋಬುದ್ಧಿಗಳನ್ನು ಎಡೆಬಿಡದೆ ಭಗವಂತನಲ್ಲಿಯೇ ನಿಲ್ಲಿಸಿ ಕೊಳ್ಳುವದೇನೂ ಸುಲಭವಲ್ಲ. ಇದನ್ನರಿತ ಭಗವಂತನು ಇದಕ್ಕಿಂತ ಕೆಳಗಿನ ಮೆಟ್ಟಿಲನ್ನು ಹೀಗೆಂದು ಉಪದೇಶಿಸಿರುತ್ತಾನೆ; "ಆದರೆ ಹೀಗೆ ನೀನು ಚಿತ್ತವನ್ನು ನನ್ನಲ್ಲಿಯೇ ಸ್ಥಿರವಾಗಿ ನೆಲೆಗೊಳಿಸಿಕೊಳ್ಳಲು ಸಮರ್ಥನಲ್ಲದೆ ಹೋದರೆ, ಆಗ ಅಭ್ಯಾಸಯೋಗದಿಂದ ನನ್ನನ್ನು ಪಡೆದುಕೊಳ್ಳುವದಕ್ಕೆ ಇಚ್ಛಿಸು" ಪರಮಾತ್ಮನಲ್ಲಿಯೇ ಮನೋಬುದ್ಧಿಗಳು ನಿಲ್ಲಲಿ; ಹಾಗಾಗದಿದ್ದರೆ ಮತ್ತೆ ಮತ್ತೆ ಪ್ರಯತ್ನಿಸಿಯಾದರೂ ಪರಮಾತ್ಮನನ್ನು ಪಡೆದುಕೊಂಡೇ ತೀರುವೆನು, ಅವನಲ್ಲಿಯೇ ಮನೋಬುದ್ಧಿ ಗಳನ್ನಿಡುವೆನು - ಎಂದು ಬಲವಾದ ಇಚ್ಛೆಯನ್ನು ಮಾಡು. ಇಚ್ಛೆಯಿದ್ದರೆ ಅದೇ ಒಂದು ಸಾಧನವೆಂದು ಭಗವಂತನು ಒಪ್ಪಿಕೊಂಡುಬಿಡುತ್ತಾನೆ. ಏಕೆಂದರೆ ಬಲವಾದ ಇಚ್ಛೆಯಿದ್ದರೆ ನಾವು ಬೇಡವೆಂದರೂ ಸಾಧನದಲ್ಲಿ ಪ್ರವೃತ್ತಿಯಾಗುತ್ತದೆ. ಅತ್ತಿತ್ತ ಹರಿದಾಡುವ ಮನಸ್ಸನ್ನು ಮತ್ತೆ ಮತ್ತೆ ತನಗೆ ಬೇಕಾದ ವಸ್ತುವಿನಲ್ಲಿಯೇ ಸ್ಥಿರಪಡಿಸಿಕೊಳ್ಳುವದಕ್ಕೆ ಅಭ್ಯಾಸವೆಂದು ಹೆಸರು. ಹಾಗೆ ಮಾಡುವ ಅಧ್ಯಾತ್ಮಸಾಧನವು ಅಭ್ಯಾಸವು; ಅಭ್ಯಾಸಪೂರ್ವಕವಾಗಿ ಮತ್ತೆ ಮತ್ತೆ ಭಗವಂತನಲ್ಲಿಯೇ ಚಿತ್ತವನ್ನಿಟ್ಟು ಕೊಳ್ಳುವದಕ್ಕೆ ಮಾಡುವ ಅಭ್ಯಾಸಯೋಗದಿಂದಲಾದರೂ ಆ ವಿಶ್ವರೂಪನಾದ ಪರಮಾತ್ಮನನ್ನು ಸೇರುವದಕ್ಕೆ ಇಚ್ಛಿಸಬೇಕು. ಮರವನ್ನು ಹತ್ತುವ ಹುಳು ಎಷ್ಟುಸಲ ಕೆಳಕ್ಕೆ ಬಿದ್ದರೂ ಮೇಲಕ್ಕೇರುತ್ತಲೇ ಇರುವ ಅಭ್ಯಾಸಬಲದಿಂದ ಕೊನೆಗೂ ಒಂದು ಸಲ ಮರದ ಮೇಲುಗಡೆಯನ್ನು ಸೇರುವಂತೆ ಅಭ್ಯಾಸಯೋಗದಿಂದ ಭಗವಂತನಲ್ಲಿಯೇ

ಮನಸ್ಸನ್ನು ಇಟ್ಟುಕೊಳ್ಳಬಹುದು. ಇಲ್ಲಿ ಅಭ್ಯಾಸಕ್ಕೆ ಇರುವ ಬಲಕ್ಕಿಂತ ಭಗವಂತನ ಅನುಗ್ರಹದ ಬಲವು ಹೆಚ್ಚಾಗಿರುತ್ತದೆ. ನಾವು ಭಗವಂತನ ಕಡೆಗೆ ತಿರುಗಿದರೆ ಸಾಕು, ಆತನು ತಾಯಿಯೇ ಮಗನನ್ನು ಎತ್ತಿಕೊಳ್ಳುವಂತೆ ತನ್ನ ಕಡೆಗೆ ಹಿಡಿದೆಳೆದುಕೊಳ್ಳುತ್ತಾನೆ. ಗಾಳಿಯ ಕಡೆಗೆ ತೂರಿಕೊಂಡರೆ ಕೆಲಸವು ಸುಲಭವಾಗುವದು; ಗಾಳಿಗೆದುರಾದರೆ ಕಷ್ಟವಾಗುವದು. ಅದರಂತೆ ಭಗವಂತನ ಕಡೆಗೆ ತಿರುಗುವದು, ಆತನಲ್ಲಿಯೇ ಮನೋಬುದ್ಧಿಗಳನ್ನಿಡುವದು, ಈ ಪ್ರಯತ್ನದಿಂದ ಅವಶ್ಯವಾಗಿ ಭಗವಂತನು ಅನುಗ್ರಹಿಸುವನು. ಭಗವಂತನು ಬಹಳ ಕರುಣಾಳು; ಆದರೆ ನಾವು ಅವನಿಗೆ ವಿಮುಖರೇ ಆಗಿದ್ದರೆ, ಅವನ ಉಪದೇಶವನ್ನು ಲೆಕ್ಕಿಸದೆಯೇ ಇದ್ದರೆ, ನಾವೇ ಮಾಡಿದ ಅಪರಾಧಕ್ಕೆ ಆತನೇನು ಮಾಡಬೇಕು? ಒಂದು ಮರದಮೇಲೆ ಒಬ್ಬ ಅತ್ಯಂತ ಮೂಢನು ಕುಳಿತುಕೊಂಡು, ತಾನು ಕುಳಿತಿದ್ದ ಕೊಂಬೆಯನ್ನೇ ಕಡಿಯು ತ್ತಿದ್ದನಂತೆ. ಅತ್ತ ಬರುತ್ತಿದ್ದ ಪಾರ್ವತೀಪರಮೇಶ್ವರರು ಅವನನ್ನು ನೋಡಿ ಕನಿಕರದಿಂದ ಇವನಿಗೆ ಏನು ಅನುಗ್ರಹಮಾಡಬಹುದು ಎಂದು ಯೋಚಿಸಿದರಂತೆ. “ಪರಮೇಶ್ವರನು ಇವನು ಬೀಳುವಾಗ ‘ಅಪ್ಪಾ!’ ಎಂದು ಕೂಗಿದರೆ ನಾನು ಕಾಪಾಡುವೆನು; ‘ಅಮ್ಮಾ!’ ಎಂದರೆ ನೀನು ಕಾಪಾಡು; ಅಷ್ಟು ಮಾತ್ರದಿಂದಲೇ ಪ್ರಪಂಚದ ಮಾತಾಪಿತೃಗಳಾದ ನಮ್ಮನ್ನು ಅವನು ಸ್ಮರಿಸಿಕೊಂಡಂತೆ ಭಾವಿಸೋಣ” ಎಂದನಂತೆ. ಆದರೆ ಆ ದೌರ್ಭಾಗ್ಯನು “ಅಯ್ಯೋ, ಆಹಾ! ಹೋ!” ಎಂದು ಕಿರಿಚಿಕೊಂಡನೇ ಹೊರತು ಬೀಳುವಾಗ ಅಪ್ಪಾ! ಅಮ್ಮಾ! ಎಂದು ಕೂಡ ಅನ್ನಲಿಲ್ಲವಂತೆ!

“ಅಭ್ಯಾಸದಲ್ಲಿಯೂ ಅಸಮರ್ಥನಾದರೆ ಈಶ್ವರಾರಾಧನಾರ್ಥವಾದ ಕರ್ಮವನ್ನು ಮಾಡು.” ಭಗವದರ್ಥವಾಗಿ ಕರ್ಮವನ್ನು ಮಾಡಿದರೆ ಸ್ವಾರ್ಥದಿಂದ ಎಷ್ಟೋ ಹಿಮ್ಮೆಟ್ಟಿದಂತೆ ಆಯಿತು. ಆದ್ದರಿಂದ ಭಗವಂತನ ಕಡೆಗೆ ತಿರುಗುವದಕ್ಕೆ ಅದು ಅಭ್ಯಾಸಯೋಗಕ್ಕಿಂತ ಕಡಿಮೆಯ ಮೆಟ್ಟಿಲಾದರೂ ಸಾಧನದೃಷ್ಟಿಯಿಂದ ಕಡಿಮೆ ಯದೇನೂ ಅಲ್ಲ. ಆದ್ದರಿಂದ ಭಗವಂತನು ‘ಮದರ್ಥಕರ್ಮವನ್ನಾದರೂ ಮಾಡು’ ಎಂದು ಹೇಳಿರುತ್ತಾನೆ. ಭಗವದರ್ಥಕರ್ಮಗಳೆಂದರೆ ಈಶ್ವರಪ್ರೀತ್ಯರ್ಥವಾಗಿ ಲೋಕ ಕಲ್ಯಾಣಕರವಾದ ಕರ್ಮಗಳನ್ನು ಮಾಡುವದು. ಅಭ್ಯಾಸಯೋಗವು ಅಂತರಂಗ ಸಾಧನವು; ಭಗವತ್ಕರ್ಮವು ಅದಕ್ಕಿಂತ ಬಹಿರಂಗವು.

ಇದು ಆಗದಿದ್ದರೊ? ಇನ್ನೂ ಒಂದು ಕೆಳಗಿನ ಮೆಟ್ಟಿಲು ಇರುತ್ತದೆ. ಭಗವತ್ಕರ್ಮವನ್ನೂ ಮಾಡುವದಕ್ಕಾಗದಿದ್ದರೆ ನೀನು ಮಾಡುವ ಕರ್ಮಗಳ ಫಲ ತ್ಯಾಗವನ್ನು ಮಾಡು. ಕರ್ಮಗಳಿಂದ ಯಾವ ತೊಂದರೆಯೂ ಇಲ್ಲ; ಅವುಗಳ

ಫಲದ ಆಶೆಯೇ ನಮ್ಮನ್ನು ಗೋಳುಗುಟ್ಟಿಸುವದು. ಆಯಾ ಫಲದ ಅನುಭವದ ವಾಸನೆಯಿಂದ ಮತ್ತೆ ಮತ್ತೆ ಕರ್ಮಗಳನ್ನು ಮಾಡಿ ಮತ್ತೆ ಮತ್ತೆ ಅನುಭವಿಸುತ್ತಿರುವದರಿಂದ ಉಂಟಾಗುವ ರಾಗದ್ವೇಷಾದಿಗಳೇ ಚಿತ್ತದ ಅಶುದ್ಧಿಯೆನಿಸುವದು; ಕರ್ಮಫಲತ್ಯಾಗದಿಂದ ಚಿತ್ತವು ರಾಗದ್ವೇಷಾದಿಗಳನ್ನು ಬಿಟ್ಟು ಶುದ್ಧವಾಗುತ್ತದೆ. ಆ ಬಳಿಕ ಅಭ್ಯಾಸಯೋಗದಿಂದ ಪರಮಾತ್ಮನಲ್ಲಿ ಮನೋಬುದ್ಧಿಗಳನ್ನು ಅಳವಡಿಸಿಕೊಂಡು ಕಾಲಕ್ರಮದಲ್ಲಿ ಭಗವತ್ಸಾಯುಜ್ಯವನ್ನೇ ಪಡೆದುಕೊಳ್ಳಬಹುದು.

ಇದೂ ಆಗದಿದ್ದರೊ? ಇನ್ನು ಯಾವ ಗತಿಯೂ ಇಲ್ಲ. ಮನುಷ್ಯನಿಗೆ ಸಾಧನವನ್ನು ಮಾಡುವ ಆಯಾಸವು ಬೇಡ; ಸಾಧನದಿಂದ ಆಗುವ ಫಲವು ಮಾತ್ರ ಬೇಕು. ಒಬ್ಬ ಶೆಟ್ಟಿಯು ಎತ್ತಲೋ ನೋಡುತ್ತಾ ಒಂದು ಕಾಗೆಯ ಕಡೆಗೆ ಕಲ್ಲೆಸೆಯಲು ಅದು ಪ್ರಾಣವನ್ನು ಬಿಟ್ಟಿತಂತೆ. ಆಗ ಅವನು ಒಬ್ಬ ಬ್ರಾಹ್ಮಣನ ಬಳಿಗೆ ಬಂದು "ಸ್ವಾಮಿ, ಕಾಗೆಯನ್ನು ಕೊಂದ ಪಾಪವು ಹೋಗುವ ಬಗೆ ಹೇಗೆ? ತಿಳಿಸಬೇಕು" ಎಂದು ಕೇಳಿಕೊಂಡನು. ಬ್ರಾಹ್ಮಣನು "ಶೆಟ್ಟರೆ, ಎಷ್ಟಾದರೂ ನಿರಪರಾಧಿಯಾದ ಪ್ರಾಣಿಯನ್ನು ಕೊಂದದ್ದು ಹೆಚ್ಚಿನ ಪಾಪವೇ ಸರಿ; ಆದರೂ ನೀವು ಬೇಕೆಂತ ಕೊಂದಿಲ್ಲ. ಆದ್ದರಿಂದ ಒಂದು ಚಿನ್ನದ ಕಾಗೆಯನ್ನು ಮಾಡಿಸಿ ದಾನಮಾಡಿದರೆ ಪಾಪವು ಪರಿಹಾರವಾದೀತು" ಎಂದನು. ಶೆಟ್ಟಿಯು "ಚಿನ್ನದ್ದನ್ನು ಮಾಡಿಸುವಷ್ಟು ಶಕ್ತಿಯಿಲ್ಲದಿದ್ದರೆ ಹೇಗೆ?" ಎನ್ನಲು ಬ್ರಾಹ್ಮಣನು "ಬೆಳ್ಳಿಯದನ್ನು ಮಾಡಿಸಿರಿ; ಅದೂ ಆಗುವಹಾಗಿಲ್ಲದಿದ್ದರೆ ತಾಮ್ರದ್ದನ್ನೇ ಮಾಡಿಸಿಕೊಡಿರಿ" ಎಂದನು. ಶೆಟ್ಟಿಯು "ಅದೂ ಆಗದಿದ್ದರೆ?" ಎನ್ನಲು 'ಒಂದು ಕೆ.ಜಿ. ತೂಕದ ಬೆಲ್ಲದ ಕಾಗೆಯನ್ನೇ ಮಾಡಿಸಿಕೊಟ್ಟರಾಯಿತು' ಎಂದನು. ಹೀಗೆ ಚೌಕಾಶಿ ಮಾಡುತ್ತ ಮಾಡುತ್ತಾ ಕೊನೆಗೆ 'ಒಂದು ಸಣ್ಣ ಬೆಲ್ಲದಚ್ಚಿನಲ್ಲಿಯೇ ಕಾಗೆಯ ಆಕೃತಿಯನ್ನು ಮಾಡಿಸಿಯಾದರೂ ದಾನಮಾಡಿರಿ' ಎಂದನು. ಶೆಟ್ಟಿಯು ಆ ಬೆಲ್ಲದ ಕಾಗೆಯನ್ನು ಕೈಯಲ್ಲಿಟ್ಟುಕೊಂಡು "ಸ್ವಾಮಿ ಇಷ್ಟು ಸಣ್ಣ ಕಾಗೆಯನ್ನು ಕೊಟ್ಟರೆ, ಆ ಮಹಾಪಾಪವು ಹೋದೀತೆ?" ಎನ್ನಲು ಬ್ರಾಹ್ಮಣನು "ಪಾಪದ ವಿಚಾರವು ನನಗಿರಲಿ; ನೀವು ಪಶ್ಚಾತ್ತಾಪಪೂರ್ವಕವಾಗಿ ಕೊಟ್ಟರೆ ಅಷ್ಟರಿಂದಲೇ ಅವಶ್ಯವಾಗಿ ಪಾಪವು ಹೋಗುವದು" ಎಂದನು. ಶೆಟ್ಟಿಯು ಹರ್ಷದಿಂದ "ಸರಿ ಹಾಗಾದರೆ ಆ ಕಾಗೆಯನ್ನು ಕೊಂದ ಪಾಪವನ್ನು ತಾವು ವಹಿಸಿಕೊಂಡಿರಿ; ಈ ಬೆಲ್ಲದ ಕಾಗೆಯನ್ನು ಕೊಡದಿದ್ದ ಪಾಪವು ನನಗೇ ಇರಲಿ!" ಎಂದು ಅದನ್ನೂ ಬಾಯಿಗೆ ಹಾಕಿಕೊಂಡನಂತೆ! ಹೀಗೆ ಒಂದೊಂದಕ್ಕಿಂತ ಒಂದೊಂದು ಕೆಳಗಿನ ಸಾಧನವನ್ನು ಹೇಳುತ್ತಾ ಕೊನೆಗೆ ಸರ್ವಕರ್ಮ ಫಲತ್ಯಾಗವೆಂಬ ಸುಲಭವಾದ ಸಾಧನವನ್ನು ಭಗವಂತನು ಹೇಳಿರುತ್ತಾನೆ.

ಈಗ ಅದೂ ನಮ್ಮಿಂದ ಆಗುವದಿಲ್ಲವೆಂದರೆ, ನಮಗೆ ಯಾವ ಸದ್ಗತಿಯೂ ಇಲ್ಲ. ನಾವು ಯಾವ ಸಾಧನಕ್ಕೂ ಅರ್ಹರಲ್ಲ - ಎಂದು ನಿಶ್ಚಯಿಸಿಕೊಳ್ಳಬಹುದು.

ನಾವು ಪ್ರಯತ್ನಮಾಡದಿದ್ದರೆ ಯಾವ ಶಾಸ್ತ್ರವಾಗಲಿ, ಗುರುವಾಗಲಿ, ಕೊನೆಗೆ ಪರಮಾತ್ಮನೇ ಆಗಲಿ, ನಮಗೆ ಯಾವ ಸಹಾಯವನ್ನೂ ಮಾಡಲಾರನು. ನಮ್ಮ ಪುರುಷಾರ್ಥಕ್ಕೆ ನಾವೇ ಪ್ರಯತ್ನವನ್ನು ಮಾಡಬೇಕು. 'ಓದುವ ಕನ್ನಡಕ'ವೆಂಬ ಶಬ್ದದ ಅರ್ಥವನ್ನು ತಿಳಿಯದೆ ಒಬ್ಬ ಗಾಂಪನು ಓದುವ ಪ್ರಯತ್ನವಿಲ್ಲದವರಿಗೂ ಕನ್ನಡಕವು ಓದು ಕಲಿಸಿಕೊಡುವದೆಂದು ಭಾವಿಸಿಕೊಂಡನಂತೆ. ಅವನು ಅಂಗಡಿಯಲ್ಲಿ ಹೋಗಿ ಕನ್ನಡಕಗಳನ್ನು ಒಂದೊಂದಾಗಿ ನೋಡಿ "ಇದೇನು, ಯಾವದರಿಂದಲೂ ಓದುವದಕ್ಕೆ ಆಗುವದೇ ಇಲ್ಲವಲ್ಲ" ಎಂದನಂತೆ. ಅಂಗಡಿಯವನು "ಏನಯ್ಯ, ನೀನು ಓದುವದಕ್ಕೆ ಕಲಿತಿದ್ದೀಯೊ, ಇಲ್ಲವೊ?" ಎನ್ನಲು "ಕಲಿತಿದ್ದರೆ ಕನ್ನಡಕವನ್ನೇಕೆ ಕೇಳುತ್ತಿದ್ದೆನು, ಸ್ವಾಮಿ? ನನಗೆ ಓದುವದಕ್ಕೆ ಬಾರದು; ಆದ್ದರಿಂದಲೇ ಓದುವ ಕನ್ನಡಕ ಕೊಡಿ, ಎಂದು ಕೇಳಿದ್ದು" ಎಂದನಂತೆ! ಇಲ್ಲಿ ಹೇಳಿರುವ ಸಾಧನಗಳನ್ನು ಮಾಡದೆ ಭಗವಂತನೇ ನಮ್ಮನ್ನು ಉದ್ಧಾರಮಾಡುವನು ಎಂದು, ಕುಳಿತುಕೊಳ್ಳುವವನೂ ಅಂಥ ಮೂಢನೇ ಸರಿ. ಭಗವಂತನು ನಮಗೆ ಶಾಸ್ತ್ರ ಗುರು, ಸಾಧನ - ಎಲ್ಲವನ್ನೂ ಅನುಗ್ರಹಿಸಿರುತ್ತಾನೆ. ಅವುಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳುವದಕ್ಕೆ ಪ್ರಯತ್ನಿಸದಿದ್ದರೆ ಅದು ನಮ್ಮದೇ ತಪ್ಪು. ಯಾವನು ಸ್ವಪ್ರಯತ್ನದಿಂದ ಈ ಭವಸಾಗರವನ್ನು ದಾಟುವದಕ್ಕೆ ಪ್ರಯತ್ನಿಸುವದಿಲ್ಲವೋ ಅವನ ಪಾಲಿಗೆ ಶಾಸ್ತ್ರ, ಗುರು - ಎಲ್ಲವೂ ವ್ಯರ್ಥ. ಈ ಲೋಕದಲ್ಲಿ ನಾವು ಉದ್ಧಾರವಾಗುವದಕ್ಕೆ ಸಾಧನವಿಲ್ಲದೆ ಇಲ್ಲ, ಉಪಯೋಗಿಸಿಕೊಂಡು ಉದ್ಧಾರವಾಗುವದು ಮಾತ್ರ ನಮ್ಮಮೇಲೆ ಬಿದ್ದ ಭಾರವಾಗಿದೆ. ಆ ಭಗವಂತನ ದಯದಿಂದ ನಾವು ಈ ಸರ್ವಕರ್ಮಫಲತ್ಯಾಗವನ್ನು ಕೈಕೊಂಡು ಉದ್ಧಾರವಾಗುವಂತೆ ಆಗಲಿ!

## ೮೯. ಕರ್ಮಫಲತ್ಯಾಗದ ಮಹಿಮೆ ೧೨-(೧೨-೧೩)

(೧೧-೭-೪೮)

ನಿರಾಕಾರವಾದ ಅಕ್ಷರದ ಉಪಾಸನೆಗಿಂತಲೂ ಸಾಕಾರವಾದ ವಿಶ್ವರೂಪದ ಉಪಾಸನೆಯು ಸುಕರ. ಅದನ್ನು ನಿರಂತರವಾಗಿ ಉಪಾಸನೆಮಾಡುತ್ತಿದ್ದರೆ ಭಗವತ್ಪ್ರಾಪ್ತಿಯೇ ಆಗುವದು. ಆದರೆ ಯಾರಿಗೆ ಇದು ಸಾಧ್ಯವಿಲ್ಲವೋ ಅವರು ಅಭ್ಯಾಸಯೋಗವನ್ನು ಸಾಧಿಸಬೇಕು; ಅದೂ ಕೈಯಲ್ಲಾಗದವರು ಭಗವತ್ಕರ್ಮವನ್ನು

ಮಾಡಬೇಕು. ಅದಕ್ಕೂ ಯೋಗ್ಯತೆಯಿಲ್ಲದವರು ಸರ್ವಕರ್ಮಫಲತ್ಯಾಗವನ್ನು ಮಾಡಬೇಕು.

ಕರ್ಮಫಲತ್ಯಾಗದಿಂದ ಚಿತ್ತಶುದ್ಧಿಯಾಗುವದು. ಗೀತೆಯಲ್ಲಿ ಹೇಳಿರುವದು ಶಾಸ್ತ್ರೋಕ್ತಕರ್ಮಗಳ ವಿಷಯ. ಆದರೂ ಈ ತತ್ತ್ವವನ್ನು ಲೌಕಿಕಕರ್ಮಗಳಿಗೂ ಅನ್ವಯಿಸಿಕೊಳ್ಳಬಹುದು. ಕರ್ಮಗಳು ಎರಡು ವಿಧ. ಕೆಲವಕ್ಕೆ ಈಗಲೇ ಇಲ್ಲಿಯೇ ಫಲವಾಗಿಬಿಡುತ್ತದೆ; ಇನ್ನು ಕೆಲವಕ್ಕೆ ಕಾಲಾಂತರದಲ್ಲಿ ಫಲವಾಗುತ್ತದೆ. ಹೇಗೇ ಆಗಲಿ, ಫಲವಿಲ್ಲದ ಕರ್ಮವೇ ಇಲ್ಲ. ಆದ್ದರಿಂದ ಕರ್ಮದ ಫಲವನ್ನು ಬಿಡುವದೆಂದರೆ ಕ್ಷುದ್ರವಾದ ಸದ್ಯಃ ಫಲವನ್ನು ಬಿಟ್ಟು ಕಾಲಾಂತರದಲ್ಲಾಗುವದಾದರೂ ಉತ್ತಮ ವಾಗಿರುವ ಫಲವನ್ನು ಪಡೆದುಕೊಳ್ಳುವದಕ್ಕೆ ಬಯಸಬೇಕು. ಒಬ್ಬ ಮನುಷ್ಯನು ಅಂಗಡಿಯನ್ನಿಟ್ಟು ಕೊಂಡವನು, ಪ್ರತಿದಿನವೂ ತಾನೇ ಅಂಗಡಿಯಲ್ಲಿರುವ ಬಾದಾಮಿ, ಸಕ್ಕರೆ- ಇವುಗಳನ್ನು ತಿನ್ನುತ್ತಾ ಬಂದರೆ ಅವುಗಳನ್ನು ಮಾರಿ ಕಾಲಾಂತರದಲ್ಲಿ ಪಡೆಯಬಹುದಾದ ಲಾಭವು ಸಿಕ್ಕೀತೆ? ಅಸಲೇ ಹೋಗಿಬಿಡುತ್ತದೆ; ಲಾಭವಂತೂ ಇಲ್ಲವೇ ಇಲ್ಲ. ಆದ್ದರಿಂದ ದೊಡ್ಡಫಲದ ದೃಷ್ಟಿಯಿಂದ ಸಣ್ಣಫಲವನ್ನು ಬಿಟ್ಟು ಬಿಡುವದನ್ನು ಕಲಿಯಬೇಕು.

ಮನುಷ್ಯನು ಯಾವದಾದರೊಂದು ಫಲದ ಆಶೆಯಿಂದ ಕೆಲಸವನ್ನು ಮಾಡುತ್ತಾನೆ; ಆದರೆ ಆ ಫಲವು ತನ್ನ ಕೈವಶವಾಗದೆ ಇದ್ದರೆ, ಅಥವಾ ಕೈಗೆ ಸಿಕ್ಕು ಬೇಗ ಹೋಗಿಬಿಟ್ಟರೆ ಆಗ ಅವನ ಮನಸ್ಸಿಗೆ ವ್ಯಥೆಯಾಗುವದು ನಿಶ್ಚಯ. ಒಬ್ಬ ಚಿಲ್ಲರೆ ಅಂಗಡಿಯವನಿಗೆ ಬಹುಕಾಲದ ಮೇಲೆ ಒಂದು ಮಗು ಹುಟ್ಟಿತು. ಆ ಮಗುವಿನ ಮೇಲೆ ಚಿತ್ತವು ಕೂತುಕೊಂಡಿತು. ಅದನ್ನು ಸಾಕುವದು, ಅದರ ಆಟ ಪಾಟಗಳನ್ನು ನೋಡುವದು, ಅದಕ್ಕೆ ಓದುಬರಹಗಳನ್ನು ಕಲಿಸುವದು -ಮುಂತಾದ ಯೋಚನೆಯಲ್ಲಿ ಮಗ್ನನಾದನು. ಈಗ ಅವನಿಗೆ ಅಂಗಡಿಯಲ್ಲಿ ಕುಳಿತಿರುವದಕ್ಕೆ ಕೂಡ ಬಿಡುವಿಲ್ಲವಾಯಿತು. ಹುಡುಗನು ಬರುತ್ತಾಬರುತ್ತಾ ದೊಡ್ಡವನಾದನು; ಅವನಿಗೆ ಮದುವೆಯನ್ನು ಮಾಡಬೇಕೆಂಬ ಚಿಂತೆಯು ತಂದೆಯನ್ನು ಹಿಡಿದುಕೊಂಡಿತು. ಅವರಿವರು ಹೆಣ್ಣುಕೊಡುವದಕ್ಕೆ ಬಂದರು. ಆದರೆ ಯಾವ ಹೆಣ್ಣನ್ನು ಆರಿಸಿಕೊಳ್ಳಲಿ? -ಎಂಬ ಯೋಚನೆಯಲ್ಲಿ ಅವನಿಗೆ ಮತ್ತೆ ಯಾವ ಕೆಲಸಕ್ಕೂ ವಿರಾಮವಿಲ್ಲದೆ ಹೋಯಿತು. ಇಷ್ಟರಲ್ಲಿ ಹುಡುಗನಿಗೆ ಏನೋ ರೋಗವು ಬಂದು ಹೆಚ್ಚಿನ ಚಿಂತೆಯು ಅವನನ್ನು ಮುಸುಕಿಕೊಂಡಿತು. ರೋಗದಲ್ಲಿ ನರಳಿನರಳಿ ಬರುಬರುತ್ತಾ ಹುಡುಗನು ಕೃಶನಾಗಿ ಕೊನೆಗೆ ಕಾಲಾಧೀನನಾಗಿಬಿಟ್ಟನು! ಆಗ ಅಂಗಡಿಯವನಿಗೆ ಉಂಟಾದ ವ್ಯಸನಕ್ಕೆ ಪಾರವಿಲ್ಲ. ಈಗ ಅಂಗಡಿಯಲ್ಲಿ ಕೂತಿರುವದೂ ಇಲ್ಲ, ಯಾವ ಕೆಲಸ

ವನ್ನೂ ಮಾಡುವದೂ ಇಲ್ಲ. ಲೋಕದ ವ್ಯವಹಾರದಲ್ಲಿಯೇ ಉದಾಸೀನನಾಗಿಬಿಟ್ಟನು. ನಮಗೆ ಅತ್ಯಂತಪ್ರಿಯರಾಗಿದ್ದವರು ಯಾರಾದರೂ ನಮ್ಮನ್ನು ಬಿಟ್ಟು ಪರಲೋಕಕ್ಕೆ ತೆರಳಿದಾಗ ನಮ್ಮಗಳಿಗೆ ಇಂಥ ದುಃಖವು ಉಂಟಾಗಿರುವ ಸಂಭವಗಳು ಸಾಧಾರಣವಾಗಿರುವದರಿಂದ ಆಗಿನ ಅವನ ಸ್ಥಿತಿಯನ್ನು ನಾವು ಸುಲಭವಾಗಿ ಊಹಿಸಿಕೊಳ್ಳಬಹುದು. ಆದರೆ ಕೆಲವು ದಿನಗಳಲ್ಲಿ ಒಬ್ಬ ಮಹಾತ್ಮನು ಅವನ ಅಂಗಡಿಯ ಮುಂದಕ್ಕೆ ಬಂದನು. "ಅಪ್ಪ, ಯಾರಿಗೂ ಬಾರದ ದುಃಖವೇನೂ ನಿನಗೆ ಬಂದಿಲ್ಲ. ನಿನ್ನ ವ್ಯಾಪಾರವು ಚೆನ್ನಾಗಿ ನಡೆಯುವಂತೆ ಆದದ್ದು ಇತ್ತೀಚೆಗೆ; ಅದಕ್ಕಿಂತ ಮೊದಲಿನ ದುಃಖವೆಲ್ಲ ನಿವಾರಣೆಯಾಗಲಿಲ್ಲವೆ? ನಿನಗೆ ಅಪರವಯಸ್ಸಿನಲ್ಲಿ ಪುತ್ರಸಂತಾನವಾಯಿತು. ಈ ಹುಡುಗನ ದೆಸೆಯಿಂದ ನಿನ್ನ ಮನಸ್ಸಿಗೆ ಎಷ್ಟೋ ಸಮಾಧಾನವು ದೊರಕಿತು; ಅದರಿಂದ ನಿನಗೆ ಮೊದಲಿಲ್ಲದಿದ್ದ ಕುಟುಂಬಸುಖದ ಲಾಭವು ದೊರಕಿತಲ್ಲವೆ? ಈಗ ಈ ಹುಡುಗನನ್ನು ಭಗವಂತನು ಕರೆದುಕೊಂಡು ಹೋಗಿರುತ್ತಾನೆ. ನಿನಗೆ ಅವಶ್ಯಕತೆಯಿಲ್ಲದ ದುಃಖಗಳನ್ನು ತೊಲಗಿಸಿ ಸುಖಕ್ಕೆ ಬೇಕಾದ ಸಾಧನಗಳನ್ನು ಈವರೆಗೂ ಸಜ್ಜುಗೊಳಿಸಿಕೊಟ್ಟಿರುವ ಭಗವಂತನೇ ಈ ಹುಡುಗನನ್ನು ತನ್ನ ಬಳಿಗೆ ಕರೆದುಕೊಂಡಿರುತ್ತಾನೆ. ಇದಕ್ಕಿಂತ ಯಾವ ಹೆಚ್ಚಿನ ಸೌಖ್ಯ ಸಾಧನವನ್ನು ನಿನಗೆ ಏರ್ಪಡಿಸಿಕೊಡುವನೋ ಯಾರು ಬಲ್ಲರು? ನಿನ್ನ ಅಂಗಡಿಯೂ ನಿನ್ನ ಕುಟುಂಬವೂ, ನಿನ್ನ ಮಗನೂ ನಿನಗೆ ಒಂದಾನೊಂದು ಕಾಲದಲ್ಲಿ ಬಂದ ನಿಮಿತ್ತಮಾತ್ರಗಳು; ಆ ನಿಮಿತ್ತಗಳಿಂದ ನಿನಗೆ ಸೌಖ್ಯವನ್ನು ಕೊಟ್ಟ ಆನಂದನಿಧಿಯು ಈಗೇನು ಬಡವನಾಗುವನೆ? ಚಿಂತಿಸದಿರು. ಸರಿಯಾಗಿ ವಿಚಾರಿಸಿದರೆ ಇಡಿಯ ಪ್ರಪಂಚವೇ ಭಗವಂತನು ನಮ್ಮಗಳ ಹಿತಕ್ಕಾಗಿ ಏರ್ಪಡಿಸಿರುವ ಸುಖಸಾಧನಗಳ ಪ್ರದರ್ಶನಶಾಲೆಯಾಗಿರುವದು. ಅವನು ಇಲ್ಲಿರುವ ಎಲ್ಲಾ ಜೀವವೇಷದಿಂದಲೂ ತನ್ನ ಲೀಲೆಯನ್ನು ಪ್ರಕಟಿಸುತ್ತಿರುವನು. ಎಲ್ಲಿ ಯಾರನ್ನು ನೋಡಿದರೂ ಭಗವಂತನೇ ಎಂಬ ಭಾವನೆಯನ್ನು ಬಿಡದೆ ಮಾಡು, ಆಗ ನಿನಗೆ ನಿನ್ನ ಮಗನಿಂದ ಆಗುತ್ತಿದ್ದ ಸಂತೋಷಕ್ಕಿಂತಲೂ ಇಮ್ಮಿಗಿಲಾದ, ನೂರ್ಮಡಿಯಾದ, ಆನಂದವು ನಿರಾಯಾಸವಾಗಿ ದೊರೆಯುವದು" - ಎಂದು ಉಪದೇಶಿಸಿದನು. ಅಂದಿನಿಂದ ಈ ಅಂಗಡಿಯವನು ನಿಷ್ಕಾಮಕರ್ಮವಾಗಿ ತನ್ನ ವ್ಯಾಪಾರವನ್ನು ಮಾಡುತ್ತಲೂ ಬಂದ ಲಾಭದಿಂದ ತನ್ನ ಜೀವನವನ್ನು ಮಾಡಿಕೊಂಡು ಉಳಿದದ್ದನ್ನು ಬಡಬಗ್ಗರ ಮಕ್ಕಳುಗಳಿಗೆ ಪುತ್ರ ವಾತ್ಸಲ್ಯದಿಂದ ಅನ್ನವಸ್ತ್ರಾದಿಗಳನ್ನು ಕೊಡಿಸುವದು, ವಿದ್ಯಾದಾನವನ್ನು ಮಾಡಿಸುವದು - ಮುಂತಾದದ್ದಕ್ಕೂ ಸಾಧುಸಂತರ ಸೇವೆಯನ್ನು ಮಾಡುವದಕ್ಕೂ ವಿನಿಯೋಗಿಸುತ್ತಾ ಬಂದನು. ಅವನಿಗೆ ಎಲ್ಲೆಲ್ಲಿಯೂ ಭಗವಂತನ ದರ್ಶನವೇ ಆದಂತೆ ಭಾವನೆಯುಂಟಾಗಿ

ಆ ಭಾವನೆಯು ಬೆಳೆದಂತೆಲ್ಲ ಇಹಜೀವನದಲ್ಲಿ ಆನಂದವೂ ದೊರಕಿ ಕಾಲಕ್ರಮದಲ್ಲಿ ಆಯುಸ್ಸು ಮುಗಿಯಲು ಪರಮಸಮಾಧಾನಚಿತ್ತದಿಂದ ಭಗವಂತನ ಸ್ಮರಣೆಯನ್ನೇ ಮಾಡುತ್ತಾ ಪರಮೇಶ್ವರನ ಧಾಮಕ್ಕೆ ಪ್ರಯಾಣವನ್ನು ಮಾಡಿದನು.

ಫಲತ್ಯಾಗವೆಂಬುದೇ ಹೀಗೆ. ಲೋಕದಲ್ಲಿ ಕ್ಷುದ್ರಫಲಗಳನ್ನು ಬಿಟ್ಟವರಿಗೆ ಉತ್ತಮೋತ್ತಮಫಲಗಳು ಕಾದಿರುವವು. ಅನಾತ್ಮದಿಂದಾಗುವ ಫಲಗಳನ್ನೆಲ್ಲ ಬಿಡಲು ಸಿದ್ಧರಾದವರಿಗೆ ಸರ್ವರ ಆತ್ಮನಾದ ಆನಂದಧಾಮನಾದ ಭಗವಂತನೇ ಸಿಕ್ಕುವನು. ಈ ಜಗತ್ತಿನಲ್ಲಿ ಜಗದ್ಬುದ್ಧಿಯಿರುವದು ಸಹಜ; ಆದರೆ ಇದೇ ಜಗತ್ತಿನಲ್ಲಿ ಭಗವದ್ಭಾವನೆ ಬರಬೇಕಾದರೆ ಈ ಭಾವನೆಯನ್ನು ಬಿಡಬೇಕಾಗುತ್ತದೆ. ನಮ್ಮೆದುರಿಗೆ ಮುತ್ತಿನ ರಾಶಿಯು ಬಿದ್ದಿದ್ದರೆ ಒಂದು ಹಿಡಿ ಮುತ್ತು ಬೇಕೆನ್ನುವ ಆಶೆಯಿರುವಾಗ ಕೈಯಲ್ಲಿರುವ ಒಂದು ಹಿಡಿ ಜೋಳವನ್ನು ಅತ್ತೊಗೆಯಬೇಕಾಗುವದಲ್ಲವೆ? ಭಗವಂತನು ಸರ್ವಕರ್ಮಫಲತ್ಯಾಗವನ್ನು ಹೊಗಳಿರುವ ರೀತಿಯನ್ನು ನೋಡಿರಿ :

**ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಮ್ ॥** (೧೨-೧೨)

"ಅಭ್ಯಾಸಕ್ಕಿಂತ ಜ್ಞಾನವು ಮೇಲು; ಜ್ಞಾನಕ್ಕಿಂತ ಧ್ಯಾನವು ಹೆಚ್ಚಿನದು. ಧ್ಯಾನಕ್ಕಿಂತ ಕರ್ಮಫಲತ್ಯಾಗವು. ತ್ಯಾಗದಿಂದ ಶಾಂತಿಯು ಕೂಡಲೆ ಉಂಟಾಗುವದು." ತ್ಯಾಗವು ಎಲ್ಲಕ್ಕಿಂತಲೂ ಹೆಚ್ಚಿನದೆಂದು ಅದನ್ನು ಸ್ತುತಿಸುವದಕ್ಕೆ ಹೇಳಿದ ಮಾತಿದು. ಆದರೆ ಈ ಶ್ಲೋಕದ ಅಭಿಪ್ರಾಯವು ಏನೆಂಬುದನ್ನು ಸ್ವಲ್ಪ ಒಳಹೊಕ್ಕು ವಿಚಾರಿಸ ತಕ್ಕದ್ದಿದೆ. ಏಕೆಂದರೆ ತಟ್ಟನೆ ನೋಡಿದರೆ ಇದುವರೆಗೆ ಹೇಳಿದ್ದಕ್ಕೆ ವಿರುದ್ಧವಾದ ಅರ್ಥವೇ ಈ ವಾಕ್ಯದಿಂದ ಉಕ್ತವಾಗಿರುವಂತೆ ಕಾಣುತ್ತದೆ. ಹೇಗೆಂದರೆ ಕರ್ಮಫಲ ತ್ಯಾಗದಿಂದ ಚಿತ್ತಶುದ್ಧಿಯಾಗುವದು, ಧ್ಯಾನದಿಂದ ಏಕಾಗ್ರತೆಯುಂಟಾಗುವದು, ಆ ಬಳಿಕ ಜ್ಞಾನವಾಗುವದು. ಆ ಜ್ಞಾನದಿಂದ ನಿಃಶ್ರೇಯಸಪ್ರಾಪ್ತಿಯಾಗುತ್ತದೆ ಎಂದು ಈವರೆಗೆ ತಿಳಿಸಿರುತ್ತದೆ. ಆದರೆ ಈ ಶ್ಲೋಕದಲ್ಲಿ ಹೇಳಿರುವದೇನು? ಜ್ಞಾನಕ್ಕಿಂತ ಧ್ಯಾನವು ಹೆಚ್ಚು, ಧ್ಯಾನಕ್ಕಿಂತ ಕರ್ಮಫಲತ್ಯಾಗವು ಹೆಚ್ಚು ಎಂದು! ಇವೆರಡು ಅಭಿಪ್ರಾಯಗಳನ್ನೂ ಹೇಗೆ ಹೊಂದಿಸಬೇಕು?

ಅಭ್ಯಾಸಕ್ಕಿಂತ ಜ್ಞಾನವು ಹೆಚ್ಚು; ಏಕೆಂದರೆ ಅಭ್ಯಾಸವು ಆತ್ಮನಲ್ಲಿ ಮನಸ್ಸನ್ನು ಸ್ಥಿರಗೊಳಿಸಿಕೊಳ್ಳುವ ಪ್ರಯತ್ನವಾಗಿದೆಯಾದ್ದರಿಂದ ಆಗ ಆತ್ಮನನ್ನು ವಿವೇಚಿಸಿ ಇನ್ನೂ ಅರಿತುಕೊಂಡಿರುವದಿಲ್ಲ. ಆದರೆ ಆತ್ಮಸ್ವರೂಪವನ್ನು ನಿಶ್ಚಯಿಸುವ ಜ್ಞಾನಕ್ಕಿಂತ ಜ್ಞಾನಪೂರ್ವಕವಾಗಿ ಧ್ಯಾನಮಾಡುವದು, ಆತ್ಮನನ್ನು ಅನುಭವಕ್ಕೆ ಹೊಂದಿಸಿಕೊಳ್ಳುವದು ಹೆಚ್ಚಿನದು. ಪರಮಾತ್ಮನ ಜ್ಞಾನವಾದದ್ದಕ್ಕೆ ಪರಮಾತ್ಮನ ಧ್ಯಾನದಲ್ಲಿಯೇ ನಿಲ್ಲುವದೇ

ಫಲವು. ಲೋಕದ ವಸ್ತುಗಳು ಹೆಚ್ಚಿಂದಾಗಲಿ ಲೌಕಿಕಕಾರ್ಯಗಳು ಹೆಚ್ಚಿಂದಾಗಲಿ ಭಾವನೆಯಿಲ್ಲದೆ ಆತ್ಮನೊಬ್ಬನನ್ನೇ ಧ್ಯಾನಮಾಡುತ್ತಿರುವ ಸ್ಥಿತಿಯು ಬರಿಯ ಶಾಸ್ತ್ರಜ್ಞಾನ ಕ್ಕಿಂತ ಹೆಚ್ಚಿನದೆಂಬುದಕ್ಕೆ ಸಂದೇಹವೇನು? "ನಿವಸಿಷ್ಯಸಿ ಮಯ್ಯೇವ" ಆಮೇಲೆ ನನ್ನಲ್ಲಿಯೇ ವಾಸಮಾಡಿಕೊಂಡು ಇದ್ದುಬಿಡುವೆ - ಎಂದು ಭಗವಂತನು ಹೇಳಿದಾನಲ್ಲವೆ? ಅಂಥ ನಿವಾಸವೇ ಇಲ್ಲಿ ಹೇಳಿರುವ ಧ್ಯಾನವು. ಪರಮಾತ್ಮನೇ ನಮ್ಮ ಮನಸ್ಸು ನೆಲಸುವದಕ್ಕೆ ಸರಿಯಾದ ಸ್ಥಾನವು ಎಂಬ ವಿಶ್ವಾಸವು ದೃಢವಾದರೆ ಎಂದಿಗಾದರೂ ಮತ್ತೊಂದು ಕಡೆ ಮನಸ್ಸು ಚಲಿಸೀತೆ? ಇಲ್ಲ. ಆದ್ದರಿಂದ ಜ್ಞಾನಕ್ಕಿಂತ ಈ ಧ್ಯಾನವು ಹೆಚ್ಚಿನದೆಂದು ಹೇಳಿರುತ್ತದೆ. ಹೀಗೆ ನಿರಂತರವಾಗಿ ಆತ್ಮಧ್ಯಾನದಲ್ಲಿಯೇ ನಿಂತವನಿಗೆ ಕರ್ಮಕ್ಕೆ ಅವಕಾಶವೆಲ್ಲಿ? ಯಾವಾಗ ಹೃದಯದಲ್ಲಿರುವ ಕಾಮಗಳೆಲ್ಲ ತೊಲಗುವವೋ ಆಗ ಮರ್ತ್ಯನು ಅಮೃತನಾಗುವನು, ಇಲ್ಲಿಯೇ ಬ್ರಹ್ಮವನ್ನು ಪಡೆದುಕೊಳ್ಳುವನು - ಎಂದು ಶ್ರುತಿಯು ಸಾರುತ್ತಿರುವದು. ಆದ್ದರಿಂದ ಆತ್ಮನನ್ನು ಅರಿತುಕೊಂಡು ಆತ್ಮಾರಾಮನಾಗಿ ಆತ್ಮಧ್ಯಾನದಲ್ಲಿಯೇ ಆನಂದವನ್ನು ಅನುಭವಿಸುತ್ತಿರುವವನಿಗೆ ಯಾವ ಕಾಮವೂ ಇರುವದಿಲ್ಲವಾಗಿ ಅವನಿಗೆ ಯಾವ ಕರ್ಮಫಲದ ಆಶೆಯೂ ಇರುವಂತಿಲ್ಲ. ಈ ಕರ್ಮಫಲತ್ಯಾಗದಿಂದಲೇ ಶಾಂತಿಯು ದೊರಕುವದು; ಎಂದರೆ ಸಂಸಾರವೂ ಅದಕ್ಕೆ ಕಾರಣವಾಗಿರುವ ಅಜ್ಞಾನವೂ ಸಂಪೂರ್ಣವಾಗಿ ನಾಶವಾಗುವದು ಎಂದರ್ಥ.

ಇದಿಷ್ಟೂ ಪರಮಾರ್ಥತತ್ತ್ವಜ್ಞಾನಿಗೆ ಹೊಂದಿರುವ ಮಾತು. ಆದರೆ ಪ್ರಕೃತದಲ್ಲಿ ಅಜ್ಞನಾದ ಅಶಕ್ತನಿಗೆ ಹೇಳಿದ ಸಾಧನಸೋಪಾನವಿದಾದ್ದರಿಂದ ಪ್ರಕೃತವಾದ ಕರ್ಮಫಲತ್ಯಾಗವನ್ನು ಹೊಗಳುವದಕ್ಕೆ ಬಂದ ಅರ್ಥವಾದವಿದೆಂದು ತಿಳಿಯಬೇಕು. ಯಾವನಿಗೆ ಕರ್ಮದ ಫಲದ ಆಶೆಯಿರುವದೋ ಅವನಿಗೆ ಗಡಿಬಿಡಿ ಹೆಚ್ಚು; ಅವನಿಗೆ ಶಾಂತಿಯಿರುವದಿಲ್ಲ. ಯಾವನಿಗೆ ಫಲವೇ ದೊರಕಿರುವದೋ ಅವನಿಗೆ ಶಾಂತಿಯು ಸಹಜವಾಗಿರುತ್ತದೆ. ಊಟ ಮಾಡುವದಕ್ಕೆ ಮೊದಲು ಇರುವ ಗದ್ದಲವನ್ನು ಊಟವಾದ ಬಳಿಕ ತೃಪ್ತಿಯುಂಟಾದದ್ದರ ಫಲವಾಗಿ ಬಂದಿರುವ ಶಾಂತಿಗೆ ಹೋಲಿಸಿದರೆ ಇದು ಸ್ಪಷ್ಟವಾಗುವದು. ಒಂದು ಕಾಡಿನಲ್ಲಿ ಒಂಟೆಯೊಂದು ನಾಲಗೆ ಯನ್ನು ನೀಡಿಕೊಂಡು ಹಾಯಾಗಿ ಮಲಗಿಕೊಂಡಿತ್ತಂತೆ. ಆ ನಾಲಗೆಯು ಮಾಂಸದ ತುಂಡೆಂದು ಭಾವಿಸಿದ ನರಿಯೊಂದು ಹೊಂಚಿಹಾಕಿ ಕೊನೆಗೆ ಅದನ್ನು ಹಿಡಿದು ಕೊಂಡಿತು. ಕೂಡಲೆ ಒಂಟೆ ಎದ್ದು ನೆಟ್ಟಗೆ ನಿಲ್ಲಲು ಒಂಟೆಯ ಬಾಯಿಗೆ ಸಿಕ್ಕಿ ನೇತಾಡುವದಕ್ಕೆ ಹತ್ತಿತಂತೆ. ಹೀಗೆ ನಮಗೆ ಕರ್ಮಫಲದ ಆಶೆಯು ಮೊದಲು ಗಡಿಬಿಡಿಯನ್ನೂ ಫಲವು ಸಿಕ್ಕಾಗ ಹೊಯ್ದಾಟವನ್ನೂ ಉಂಟುಮಾಡುತ್ತಿರುವದು!

ಕರ್ಮ, ಪ್ರಜೆ, ಧನ - ಎಂದು ಚಡಪಡಿಸುತ್ತಿರುವವರು ಮರ್ತ್ಯರು; ಅವರು ಮೃತ್ಯುವಿನ ಬಾಯೊಳಗಿನ ವಿಷಯಗಳಿಗೆ ಆಶೆಪಡುತ್ತಿರುವರು. ಅವರಿಗೆ ಶಾಂತಿಯೆಲ್ಲಿಯದು? ಆದರೆ ಯಾರು ಕರ್ಮವನ್ನು ಬಿಡುವರೋ ಅಥವಾ ಕರ್ಮಫಲದ ಆಶೆಯನ್ನಾದರೂ ಬಿಡುವರೋ ಅಂಥವರಿಗೆ ಶಾಂತಿಯು ಕಟ್ಟಿಟ್ಟ ಬುತ್ತಿಯಾಗುವದು. ಆದ್ದರಿಂದ ಭಗವಂತನು ಇಲ್ಲಿ ಸರ್ವಥಾ ಕರ್ಮಫಲತ್ಯಾಗಿಗಳಾದ ನಿಷ್ಕಾಮರಾದ ಮಹಾತ್ಮರನ್ನು ಹೋಲಿಸಿ ಸಾಮಾನ್ಯ ಕರ್ಮಫಲತ್ಯಾಗಿಗಳನ್ನು ಇಲ್ಲಿ ಹೊಗಳಿರುತ್ತಾನೆ. ಹಿಂದೆ ಅಗಸ್ತ್ಯನೆಂಬ ಬ್ರಾಹ್ಮಣನು ಸಮುದ್ರವನ್ನು ಕುಡಿದನು; ಆದ್ದರಿಂದ ಬ್ರಾಹ್ಮಣರು ಎಂಥ ಗಟ್ಟಿಗರು! -ಎಂದು ಈಗಿನ ಬ್ರಾಹ್ಮಣರನ್ನು ಹೊಗಳುವದಿಲ್ಲವೆ? ಹಾಗೆಯೇ ಇದು.

ಸೀತೆಯೂ ಹನುಮಂತನೂ ಒಂದೊಂದು ಸಂದರ್ಭದಲ್ಲಿ ಆಹಾ! ಕೋಪತಾಪಗಳನ್ನು ಬಿಟ್ಟ ಸಂಯಮಿಗಳು ಎಂಥ ಧನ್ಯರು! -ಎಂದುಕೊಂಡಿರುತ್ತಾರೆ. ಹಾಗೆಯೇ ನಮ್ಮಂಥವರು ಜ್ಞಾನ, ಭಕ್ತಿ, ವೈರಾಗ್ಯ - ಇವುಗಳ ಅಭ್ಯಾಸಕ್ಕೆ ದೊಡ್ಡವರ ನೆನಪು ಮಾಡಿಕೊಳ್ಳಬೇಕು. ಅದರಿಂದ ಮನಸ್ಸಮಾಧಾನವಾಗುವದು. ವಿಷಯಿಗಳ ನೆನಪನ್ನು ಮಾಡಿಕೊಂಡರೆ ಮನಸ್ಸಿಗೆ ವಿಕ್ಷೇಪವೇ ಬರುವದು. ಆದ್ದರಿಂದ ಕರ್ಮಫಲವನ್ನು ತ್ಯಾಗಮಾಡಬೇಕು, ಕರ್ಮಫಲತ್ಯಾಗದಿಂದ ಶಾಂತಿಯು ತಪ್ಪದೆ ಬರುತ್ತದೆ -ಎಂಬುದಕ್ಕೆ ಜ್ಞಾನದಿಂದ ಕೃತಕೃತ್ಯರಾದವರ ಉಪಮಾನವನ್ನು ಹೇಳಿ ಕರ್ಮಫಲತ್ಯಾಗವನ್ನು ಇಲ್ಲಿ ಹೊಗಳಿರುವದು ಯುಕ್ತವಾಗಿರುತ್ತದೆ.

ಇನ್ನು "ಯಾರು ಅನಿರ್ದೇಶ್ಯವಾದ ಅಕ್ಷರವನ್ನು ಉಪಾಸನೆಮಾಡುವರೋ ಅವರೂ ನನ್ನನ್ನೇ ಪಡೆಯುತ್ತಾರೆ" ಎಂದು ಭಗವಂತನು ಹೇಳಿದ್ದನಷ್ಟೆ; ಈಗ ಅದರ ವಿಚಾರವನ್ನು ಹೇಳುವದಕ್ಕೆ ಪ್ರಾರಂಭಿಸಿರುತ್ತಾನೆ. ಅಕ್ಷರೋಪಾಸಕರ ಸಹಜವಾದ ಲಕ್ಷಣವನ್ನು ಈಗ ಒಂದೊಂದಾಗಿ ತಿಳಿಸಿ ಅವರು ಭಗವಂತನನ್ನೇ ಹೇಗೆ ಪಡೆಯುತ್ತಾರೆಂಬುದನ್ನು ತಿಳಿಸಬೇಕಾಗಿದೆ. ಈ ಉಪಾಸನೆಯು ಬಹಳ ಕ್ಲೇಶಯುಕ್ತವಾದದ್ದೆಂದೂ ವಿಶ್ವರೂಪೋಪಾಸನೆಯೇ ನಿನಗೆ ಯುಕ್ತವಾದದ್ದೆಂದೂ ಭಗವಂತನು ಅರ್ಜುನನಿಗೆ ಹೇಳಿರುತ್ತಾನಲ್ಲವೆ? ಈಗ ಮತ್ತೇಕೆ ಅಕ್ಷರೋಪಾಸಕರ ಲಕ್ಷಣಗಳನ್ನು ಹೇಳುತ್ತಿದಾನೆ? -ಎಂಬ ಶಂಕೆಯು ಎದ್ದುಕೊಳ್ಳಬಹುದು. ಅದಕ್ಕೆ ಸಮಾಧಾನವೆಂದರೆ, ಕೃತಕೃತ್ಯರಾದವರ ಲಕ್ಷಣಗಳು ಸಾಧಕರಿಗೂ ಉಪಯುಕ್ತವಾಗುತ್ತವೆ. ಮುಂದೆ ಹೇಳುವ 'ಅದ್ವೇಷ್ಟೃತ್ವವೇ' ಮುಂತಾದ ಗುಣಗಳು ಅಕ್ಷರೋಪಾಸಕರಲ್ಲಿ ಸ್ವಭಾವಸಿದ್ಧವಾಗಿರುತ್ತವೆ. ಆದ್ದರಿಂದ ಅವರ ಲಕ್ಷಣವಾಗುತ್ತವೆ; ಆದರೆ ಮಿಕ್ಕವರೂ ಅವನ್ನು ಯಥಾಶಕ್ತಿಯಾಗಿ ಉಪಯೋಗಿಸಿಕೊಳ್ಳುವದು ಅವಶ್ಯ. ಗೀತಾಗ್ರಂಥವು ಅರ್ಜುನನನ್ನು

ನಿಮಿತ್ತವಾಗಿ ಮಾಡಿಕೊಂಡು ಸರ್ವವೇದಾಂತಾರ್ಥವನ್ನೂ ಸಂಗ್ರಹಿಸಿ ತಿಳಿಸುವ ದಾದ್ದರಿಂದ ಯಾರು ಅಕ್ಷರೋಪಾಸನೆಯನ್ನೇ ಸಂಪಾದಿಸಿಕೊಳ್ಳಬೇಕೆಂದು ತವಕಿಸು ತ್ತಿರುವರೋ ಅಂಥವರಲ್ಲಿರಬೇಕಾದ ಸಾಧನಗಳಿವು ಎಂದು ತಿಳಿಸುವದೂ ಒಂದು ಪ್ರಯೋಜನವಾಗಿರುತ್ತದೆ. ಆದ್ದರಿಂದ ನೇರಾಗಿ ಅಮೃತತ್ವಕ್ಕೆ ಸಾಧನವಾಗಿರುವ ಈ ಅಕ್ಷರೋಪಾಸಕರ ಲಕ್ಷಣಗಳನ್ನು ಈಗ ಹೇಳುವದಕ್ಕೆ ಮುಂದಿನ ಗ್ರಂಥವು ಪ್ರಾರಂಭವಾಗಿರುತ್ತದೆ:

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥** (೧೨-೧೩)

ಯಾವ ಪ್ರಾಣಿಗಳನ್ನೂ ದ್ವೇಷಿಸದಿರುವದು ಈ ಅಕ್ಷರೋಪಾಸಕರಾದವರ ಮೊದಲನೆಯ ಲಕ್ಷಣವು. ಹಿಂದೆ "ಜ್ಞಾನಿಯು ನನಗೆ ಅತ್ಯಂತಪ್ರಿಯನು, ನಾನೂ ಅವನಿಗೆ ಪ್ರಿಯನಾಗುವೆನು; ಜ್ಞಾನಿಯು ನನ್ನ ಆತ್ಮನೇ. ಆದ್ದರಿಂದ ಅವನೇ ಪರಭಕ್ತನು" ಎಂದು ಹೇಳಿತ್ತಲ್ಲವೆ? ಅಂಥ ಜ್ಞಾನಿಗಳನ್ನೇ ಇಲ್ಲಿ ಅಕ್ಷರೋಪಾಸಕರು, ಭಕ್ತರು - ಎಂದು ವರ್ಣಿಸಿರುತ್ತದೆ. ಈ ಭಗವದ್ಭಕ್ತರು ಸರ್ವವನ್ನೂ ಭಗವಂತನಿಗಾಗಿ ಬಿಟ್ಟು ಆತನೊಬ್ಬನನ್ನೇ ಅತ್ಯಂತಪ್ರೇಮದಿಂದ ಕಾಣುತ್ತಿರುತ್ತಾರೆ. ಆ ಭಗವಂತನು ಎಲ್ಲಾ ಭೂತಗಳ ಹೃದಯದಲ್ಲಿ ಸಮವಾಗಿರುವದರಿಂದ ಅವರು ಯಾರನ್ನು ತಾನೆ ದ್ವೇಷಿಸಿಯಾರು?

ಅವರು ಯಾರೊಬ್ಬರನ್ನೂ ದ್ವೇಷಿಸದಿರುವದು ಹೆಚ್ಚಲ್ಲ; ಎಲ್ಲರನ್ನೂ ಮೈತ್ರಿಯಿಂದಲೇ ನೋಡುತ್ತಿರುವರು. ಭಗವಂತನು ಅವರಿಗೆ ಪರಮಮಿತ್ರನು. ಪರಮಾತ್ಮನನ್ನು ನಮ್ಮ ಮಿತ್ರನೆಂದು ಭಾವಿಸುವದು ಎಂಥ ಉಚ್ಚಕೋಟಿಯ ಭಕ್ತಿಯು! ಕೊಡುವದು, ತೆಗೆದುಕೊಳ್ಳುವದು, ಅವನ ರಹಸ್ಯವನ್ನು ಕೇಳಿ ಸಹಾನುಭೂತಿಯನ್ನು ತೋರಿಸುವದು, ನಮ್ಮ ರಹಸ್ಯವನ್ನು ಹೇಳುವದು, ಯಾವದಾದ ರೊಂದು ವಿಪತ್ತಿನಲ್ಲಿ ಸಹಾಯಮಾಡುವದು, ನಮ್ಮ ವಿಪತ್ತಿನಲ್ಲಿ ಅವನ ನೆರವನ್ನು ಕೋರುವದು - ಇವೇ ಮುಂತಾದವುಗಳಲ್ಲವೆ, ಮೈತ್ರಿಯ ಕುರುಹುಗಳು? ಆದರೆ ಹೃದಯದಲ್ಲಿರುವ ನಿಜವಾದ ಮೈತ್ರಿಯ ಆಳವನ್ನು ಹೊರಗೆ ಹೇಗೆತಾನೆ ತೋರಿಸುವದಕ್ಕಾದೀತು? ಭಕ್ತರು ಈ ಮೈತ್ರಿಗೆ ಭಗವಂತನೇ ವಿಷಯವೆಂದು ಭಾವಿಸಿರುತ್ತಾರೆ. ಆದರೆ ಅವರಿಗೆ ಎಲ್ಲದರಲ್ಲಿಯೂ ಮಿತ್ರಭಾವವೇ ಇರುತ್ತದೆ; ಏಕೆಂದರೆ ಎಲ್ಲದರಲ್ಲಿಯೂ ಅವರು ತಮ್ಮ ಮಿತ್ರನಾದ ಭಗವಂತನನ್ನೇ ಕಾಣುತ್ತಿರುವರು. ಜ್ಞಾನಿಭಕ್ತರು ಪರಮಾತ್ಮನಲ್ಲಿ ಇಟ್ಟಿರುವ ಪ್ರೇಮವನ್ನು ಅರಿತುಕೊಳ್ಳುವದು ನಮ್ಮಂಥವರಿಗೆ ಸಾಧ್ಯವಿಲ್ಲ. ಆದರೂ ನಾವು ಯಥಾಶಕ್ತಿಯಾಗಿ ಈ ಮೈತ್ರಿಯನ್ನು ಅಭ್ಯಾಸ

ಮಾಡುವದೇನೂ ಅಶಕ್ಯವಲ್ಲ. ಹಿಂದಿನ ಆಶ್ರಮದಲ್ಲಿ ನನಗೆ ಒಬ್ಬ ಸ್ನೇಹಿತರು ಇದ್ದರು; ಅವರು ಮಾರುತಿಯನ್ನು ತಮ್ಮ ಮಿತ್ರನೆಂದು ಭಾವಿಸುತ್ತಿದ್ದರು. ಮಾತನಾಡುವಲ್ಲಿ ಪ್ರಸಂಗದಿಂದ ಅವರು ಒಮ್ಮೆ ಹೀಗೆಂದರು : "ನನ್ನ ಮಿತ್ರನೆಂದರೆ ಹನುಮಂತರಾಯನು, ನಾನು ಕೊನೆಯ ಪಕ್ಷಕ್ಕೆ ಪ್ರತಿ ಶನಿವಾರವಾದರೂ ಹೋಗಿ ಅವನನ್ನು ಮಾತನಾಡಿಸದೆ ಇರುವದಿಲ್ಲ. ಆದರೆ ಅವನು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ನನ್ನ ಯೋಗಕ್ಷೇಮವನ್ನು ನಿತ್ಯವೂ ನೋಡಿಕೊಳ್ಳುತ್ತಲೇ ಇರುತ್ತಾನೆ. ನನಗೆ ಯಾವ ಕಷ್ಟವು ಒದಗಿರಲಿ, ಆರೋಗ್ಯವು ತಪ್ಪಿದರೆ, ಕೈಯಲ್ಲಿ ಹಣವಿಲ್ಲದಿದ್ದರೆ, ಮನೆಯಲ್ಲಿ ಅನ್ನವಸ್ತ್ರಗಳಿಗೆ ಕೊರೆಯಾದರೆ, ಮಕ್ಕಳಿಗೆ ಓದುಬರಹದ ಕೊರತೆಯಿದ್ದರೆ -ಎಲ್ಲಾ ಸಂದರ್ಭಗಳಲ್ಲಿಯೂ ನಾನು ಯಾವ ನಾಚಿಕೆಯನ್ನೂ ಪಡದೆ, ಯಾವ ಅಂಜಿಕೆಯೂ ಇಲ್ಲದೆ ನನ್ನ ಕಷ್ಟಸುಖಗಳನ್ನು ಹೇಳಿಕೊಳ್ಳುವ ಸ್ಥಾನವೆಂದರೆ ಈ ನನ್ನ ಮಿತ್ರನೇ. ಆದರೆ ಒಂದು ವಿಶೇಷ. ನಾನು ಹೇಳಿಕೊಳ್ಳಲಿ ಬಿಡಲಿ, ಅವನು ಮಾತ್ರ ನನ್ನನ್ನು ವಿಚಾರಿಸಿಕೊಳ್ಳದೆ ಇರುವದೇ ಇಲ್ಲ. ಕೆಲವು ವೇಳೆಗಳಲ್ಲಂತೂ ನಾನು ಹೇಳಿಕೊಳ್ಳುವದರೊಳಗೇ ತಕ್ಕ ಏರ್ಪಾಡುಗಳನ್ನು ಮಾಡಿ ನನಗೆ ಒದಗಿರುವ ಆತಂಕಗಳನ್ನು ನಿವಾರಣೆಮಾಡಿಸಿರುತ್ತಾನೆ. ನಾನು ಯಾರನ್ನು ಮರೆತರೂ ಅವನನ್ನು ಮರೆಯುವಹಾಗಿಲ್ಲ." ಈ ವಿಧದ ಮೈತ್ರಿಯು ಎಷ್ಟು ರಮಣೀಯವಾಗಿರುತ್ತದೆ, ಎಷ್ಟು ಆನಂದಕರವಾಗಿರುತ್ತದೆ! ಎಲ್ಲರಲ್ಲಿಯೂ ಭಗವಂತನನ್ನು ಕಾಣುವದು, ಎಲ್ಲರಲ್ಲಿಯೂ ಮೈತ್ರಿಯನ್ನು ಮಾಡುವದು - ಅಕ್ಷರೋಪಾಸಕರಿಗೆ ಇದು ಎರಡನೆಯ ಲಕ್ಷಣವು.

ಕರುಣಾವಂತರಾಗಿರುವದು ಅವರ ಮೂರನೆಯ ಲಕ್ಷಣವು. ಅವರು ಎಲ್ಲರಲ್ಲಿಯೂ ಕರುಣೆಯುಳ್ಳವರು; ಯಾರೊಬ್ಬರಿಗೂ ದುಃಖವಾದರೆ ಸಹಿಸುವವರಲ್ಲ. ಎಲ್ಲರನ್ನೂ ಕನಿಕರದಿಂದ ಕಾಣುವರು. ಯಾರೊಬ್ಬರಿಗೆ ಯಾವ ದುಃಖವು ಬಂದರೂ ಅವರು ಅನುತಾಪಪಡುವರು. ಮುಖ್ಯವಾಗಿ ಈ ಸಂಸಾರವನ್ನು ದಾಟುವದಕ್ಕೆ ಬೇಕಾದ ತತ್ತ್ವಜ್ಞಾನವನ್ನು ಕರುಣೆಯಿಂದ ಯಾವ ಪ್ರತ್ಯುಪಕಾರವನ್ನೂ ಬಯಸದೆ ತಮ್ಮನ್ನು ಆಶ್ರಯಿಸುವವರಿಗೆಲ್ಲ ಅನುಗ್ರಹಿಸುವ ಪರಮಕಾರುಣಿಕರವರು.

ಹೀಗೆ ಮೈತ್ರಿ, ಕರುಣೆ - ಮುಂತಾದ ಶುಭಸಂಕಲ್ಪಗಳಿಂದ ಕೂಡಿರುವರಲ್ಲದೆ ಅವರು ನಿರ್ಮಮರೂ ನಿರಹಂಕಾರರೂ ಆಗಿರುತ್ತಾರೆ. ಈಶ್ವರಮಯವಾದ ಈ ಜಗತ್ತಿನಲ್ಲಿ ಅವರಿಗೆ ನಾನು, ನನ್ನದು ಎಂದು ಅಭಿಮಾನಪಡುವದಕ್ಕೆ ಎಲ್ಲಿಯೂ ಅವಕಾಶವೇ ಕಾಣುವದಿಲ್ಲ. ಆದ್ದರಿಂದ ಅವರ ಮೈತ್ರಿಯಾಗಲಿ, ಕರುಣೆಯಾಗಲಿ, ಯಾವದೊಂದು ಮಮತೆಯಿಂದ, ಅಥವಾ ಯಾವದಾದರೊಂದು ಪರಿಚ್ಛಿನ್ನವಾದ

ದೇಹಾದಿಗಳಲ್ಲಿ ನಾನೆಂಬ ಅಧ್ಯಾಸದಿಂದ, ಆಗಿರುವದಿಲ್ಲ; ಯಾವದೊಂದು ಹೇತುವೂ ಇಲ್ಲದೆ ಸರ್ವತ್ರಸಮಭಾವನೆಯಿಂದ ಕೇವಲಭಗವದ್ಭಾವನೆಯಿಂದ ಕೂಡಿದವರಾಗಿದ್ದರೂ ಸಾಧಕಾವಸ್ಥೆಯಲ್ಲಿದ್ದ ಅದ್ವೇಷ್ಟೃತ್ವಾದಿಗಳನ್ನು ಈಗಲೂ ಪ್ರಕಟಿಸುತ್ತಿರುವರು.

ಸಮದುಃಖಸುಖರಾಗಿರುವದೆಂಬುದು ಈ ಉಪಾಸಕರ ಮತ್ತೊಂದು ಲಕ್ಷಣವು. ಹೊರಗಿನ ವಿಷಯಗಳಿಂದ ಸುಖವೂ ದುಃಖವೂ ಆಗುವದು ಸಹಜವು. ಹೀಗಿರುವಲ್ಲಿ ಸುಖದುಃಖಗಳನ್ನು ಸಮವಾಗಿ ಮಾಡಿಕೊಳ್ಳುವದು ಹೇಗೆ? -ಎಂದು ಶಂಕೆಯುಂಟಾಗ ಬಹುದು. ಅಜ್ಞರಿಗೆ ಸುಖವೂ ದುಃಖವೇ ಆಗುತ್ತದೆ; ಆದರೆ ಅಕ್ಷರೋಪಾಸಕರಿಗೆ ದುಃಖವೂ ಸುಖವೇ ಎಂದರೆ ಪರಮಾರ್ಥದೃಷ್ಟಿಯಿಂದ ಆನಂದಸ್ವರೂಪನಾದ ಪರಮಾತ್ಮನೇ ಆಗಿರುತ್ತದೆ. 'ಈ ಇಡಿಯ ಜಗತ್ತೇ ಪರಮಾತ್ಮನು. ಇದೆಲ್ಲವನ್ನೂ ಈಶ್ವರಬುದ್ಧಿಯಿಂದ ಮುಚ್ಚಿಹಾಕಬೇಕು' ಎಂದು ಶ್ರುತಿ ಹೇಳುತ್ತಿದೆ. ಪರಮಾತ್ಮನೆಂಬ ಬಟ್ಟೆಯ ಮೇಲೆ ಮನುಷ್ಯರು, ದೇವತೆಗಳು, ತಿರ್ಯಕ್ಪ್ರಾಣಿಗಳು, ಸ್ಥಾವರಪ್ರಾಣಿಗಳು, ಅಚೇತನಪದಾರ್ಥಗಳು -ಎಂಬ ತಾರತಮ್ಯವುಳ್ಳ, ಅಸಂಖ್ಯಾತಆಕೃತಿಗಳ ಚಿತ್ರವನ್ನು ಬರೆದಿರುತ್ತದೆ. ಬಟ್ಟೆಯಮೇಲೆ ಬರೆದಿರುವ ಮನುಷ್ಯರು, ಪ್ರಾಣಿಗಳು, ಬೆಟ್ಟಗಳು, ಗುಡ್ಡಗಳು, ನಗರಿಗಳು - ಮುಂತಾದದ್ದೆಲ್ಲ ನಿಜವಾಗಿ ಬಟ್ಟೆಯೇ ಆಗಿದ್ದು ಅದರಲ್ಲಿ ತಗ್ಗುತಿಟ್ಟುಗಳಾಗಲಿ ಭಿನ್ನವಸ್ತುಗಳಾಗಲಿ ನಿಜವಾಗಿ ಇಲ್ಲದೆ ಇರುವಂತೆ ಜ್ಞಾನಿಗಳ ದೃಷ್ಟಿಯಿಂದ ಈ ಚಿತ್ರವಿಚಿತ್ರವಾದ ವಿಶ್ವವೆಲ್ಲವೂ ಪರಮಾತ್ಮನು ಮಾತ್ರವೇ ಆಗಿರುತ್ತದೆ. ಆದ್ದರಿಂದ ಅಜ್ಞರ ವ್ಯವಹಾರದೃಷ್ಟಿಯಿಂದ ವಿಷಯೇಂದ್ರಿಯಗಳ ಸಂಬಂಧದಿಂದ ಆಗುವ ಸುಖದುಃಖಗಳು ಅವರಿಗೆ ಹರ್ಷಶೋಕಗಳೆಂಬ ಉಬ್ಬರ ವಿಳಿತಗಳನ್ನು ಮಾಡುತ್ತಿವೆಯಾದರೂ ಪರಮಾತ್ಮನಲ್ಲಿಯೇ ಚಿತ್ತವನ್ನಿಟ್ಟಿರುವ ಈ ಪರಭಕ್ತರಿಗೆ ಪ್ರಪಂಚದ ಯಾವದೊಂದು ದೃಶ್ಯದಿಂದಾದ ಸುಖದುಃಖಗಳೂ ಹರ್ಷಶೋಕಗಳೂ ಆಗುತ್ತಿರುವದಿಲ್ಲ. ಅವರಿಗೆ ಯಾವದೊಂದು ಘಟನೆಯೂ ಚಿತ್ತದಲ್ಲಿ ಯಾವ ಏರುಪೇರನ್ನೂ ಮಾಡದೆ ಇರುತ್ತದೆ. ಹೀಗೆ ಸಮಚಿತ್ತರಾಗಿರುವವರೇ ಸಮದುಃಖಸುಖರು.

ಕ್ಷಮಿತ್ವವೆಂಬುದು ಈ ಉಪಾಸಕರ ಮತ್ತೊಂದು ಗುಣವು. ತಮ್ಮ ವಿಷಯದಲ್ಲಿ ಯಾವ ಅಪರಾಧವನ್ನು ಮಾಡಲಿ, ಯಾರೊಬ್ಬರಿಗೂ ಪ್ರತೀಕಾರವನ್ನು ಮಾಡಬೇಕೆಂಬ ಬುದ್ಧಿಯು ಎಳ್ಳಷ್ಟೂ ಯಾರಿಗೆ ಉತ್ಪನ್ನವಾಗುವುದಿಲ್ಲವೋ ಅವರಲ್ಲಿ ಕ್ಷಮಾಗುಣವು ಪೂರ್ಣವಾಗಿರುವದೆಂದು ತಿಳಿಯಬೇಕು. ಉತ್ತಮ ಭಗವದ್ಭಕ್ತರಾದವರು ಎಲ್ಲೆಲ್ಲಿಯೂ ಭಗವಂತನನ್ನೇ ಕಾಣುತ್ತಿರುವರು. ಅವರಿಗೆ ಯಾರು ಅಪರಾಧಿಗಳಾಗಿ ಕಂಡಾರು?

ದುರ್ಯೋಧನನು ಪಾಂಡವರನ್ನು ಕಪಟದ್ಯೂತದಿಂದ ಸೋಲಿಸಿ ವನವಾಸಕ್ಕೆ ಕಳುಹಿಸಿದನಷ್ಟೆ; ಆದರೆ ಯುಧಿಷ್ಠಿರನಿಗೆ ಒಂದಿಷ್ಟೂ ಅದರಿಂದ ಮನಸ್ಸಿನಲ್ಲಿ ಪ್ರತೀಕಾರಬುದ್ಧಿಯುಂಟಾಗಲಿಲ್ಲ. ದುರ್ಯೋಧನನು ತನ್ನ ರಾಜವೈಭವವನ್ನು ಪಾಂಡವರ ಮುಂದೆ ಮೆರೆಯಿಸಿ ಅವರಿಗೆ ವ್ಯಥೆಯನ್ನುಂಟುಮಾಡಬೇಕೆಂದು ಬಗೆದು ಅವರಿದ್ದಲ್ಲಿಗೆ ಒಂದು ಘೋಷಯಾತ್ರೆಯನ್ನು ಮಾಡಿದನು. ಕಾರಣಾಂತರದಿಂದ ಗಂಧರ್ವರು ಅವನನ್ನು ಹಿಂಗಟ್ಟು ಮುರಿಯಾಗಿ ಕಟ್ಟಿ ಒಯ್ಯುತ್ತಿದ್ದರು. ಆಗಲೂ ಧರ್ಮರಾಯನು ಅರ್ಜುನನ ಮೂಲಕ ಅವನನ್ನು ಬಿಡಿಸಿ ಸಂತಯಿಸಿ ರಾಜಧಾನಿಗೆ ಕಳುಹಿಸಿದನು. ಇದು ಎಂಥ ಕ್ಷಮಾಗುಣವು! ಇದರಿಂದ ಧರ್ಮರಾಯನ ಕೀರ್ತಿಗೆ ಏನಾದರೂ ಕಳಂಕವು ತಟ್ಟಿತೆ? ಮುಂದೆಯೂ ಅವನು ದುರ್ಯೋಧನನನ್ನು ಯುದ್ಧಕ್ಕೆ ಕರೆಯುವದಕ್ಕೆ ಮೊದಲು 'ಐದೇ ಗ್ರಾಮಗಳನ್ನು ಕೊಟ್ಟರೆ ಸಾಕು; ಅಷ್ಟರಿಂದಲೇ ನಾವು ತೃಪ್ತರಾಗುತ್ತೇವೆ' ಎಂದನೇ ಹೊರತು "ನೀವು ಇಂಥಿಂಥ ಅಪರಾಧಗಳನ್ನು ಮಾಡಿರುತ್ತೀರಿ. ಈಗ ನಾವು ಶಪಥದಂತೆ ವನವಾಸವನ್ನು ಮುಗಿಸಿಕೊಂಡು ಬಂದಿರುತ್ತೇವೆ; ಇನ್ನು ನೀವು ನಮ್ಮ ಪಾಲಿನ ರಾಜ್ಯವನ್ನು ಕೊಟ್ಟರೆ ಸರಿ, ಇಲ್ಲದಿದ್ದರೆ ನಮ್ಮವರು ನಿಮಗೆ ತಕ್ಕ ಶಾಸನವನ್ನು ಮಾಡುವರು" ಎಂದನೆ? 'ಧರ್ಮರಾಯ'ನೆಂಬ ಹೆಸರು ಅವನಿಗೆ ಅನ್ವರ್ಥವಾಗಿ ಉಳಿದುಕೊಳ್ಳುವದಕ್ಕೆ ಈ ಕ್ಷಮೆಯೇ ನಿಮಿತ್ತವಾಯಿತೆಂದರೂ ಸಲ್ಲುವಂತಿದೆ. ಅಲ್ಲವೆ? ಭಗವದ್ಭಕ್ತರಿಗೆ ಇದಕ್ಕಿಂತಲೂ ಹೆಚ್ಚಿನ ಕ್ಷಮಾಗುಣವಿರುತ್ತದೆ. ಅವರಿಗೆ ಎಲ್ಲೆಲ್ಲಿಯೂ ಪರಮಾತ್ಮನೇ ಕಾಣಿಸುತ್ತಿರುವನು. ನಮ್ಮ ವಿಷಯದಲ್ಲಿ ಅಪರಾಧವನ್ನು ಮಾಡುವವರು ಯಾರು? ನಮ್ಮ ಒಂದು ಕಾಲನ್ನು ಮತ್ತೊಂದು ಕಾಲು ತುಳಿದರೆ ಯಾರ ಮೇಲೆ ಕೋಪವನ್ನು ಮಾಡಿಕೊಳ್ಳುವದು? ನಮ್ಮ ವಿಷಯಕ್ಕೆ ಯಾರು ಏತಕ್ಕೆ ಕೋಪವನ್ನು ಮಾಡಿಕೊಳ್ಳುವರು? ಇತರರು ನಮ್ಮನ್ನು ಶತ್ರುಗಳೆಂದು ಭಾವಿಸಿಕೊಳ್ಳುತ್ತಿರಬಹುದು; ಆದರೆ ಅವರೂ ನಮ್ಮ ಅಂಗಗಳ ಸ್ಥಾನದಲ್ಲಿರುವರು, ಅಥವಾ ನಮ್ಮ ಆತ್ಮನೇ ಆಗಿರುವರು -ಎಂದು ಈ ಮಹಾತ್ಮರು ಭಾವಿಸಿಕೊಳ್ಳುತ್ತಿರುವರು. ಅವರಿಗೆ ಶ್ರೀ ಗೌಡಪಾದಾಚಾರ್ಯರು ಹೇಳಿರುವಂತೆ ಒಳಗೂ ತತ್ತ್ವವೇ, ಹೊರಗೂ ತತ್ತ್ವವೇ; ತಾವೂ ತತ್ತ್ವಸ್ವರೂಪರಾಗಿ ತತ್ತ್ವಾರಾಮರಾಗಿ ತತ್ತ್ವದಿಂದ ಸ್ವಲ್ಪವೂ ಜಾರದೆ ಇರುವರು. ಅದ್ವೇಷ, ಮೈತ್ರಿ, ಕರುಣೆ, ನಿರ್ಮಮತೆ, ನಿರಹಂಕಾರ, ಸಮತೆ, ಕ್ಷಮೆ - ಎಲ್ಲವೂ ಅವರಿಗೆ ಪರಮಾತ್ಮನೇ ಆಗಿರುತ್ತದೆ.

ಈ ವರ್ಣನೆಯನ್ನು ಕೇಳಿದ ನಮ್ಮಂಥವರು ಏನು ತಿಳಿದುಕೊಳ್ಳಬೇಕು? ಎಲ್ಲೆಲ್ಲಿಯೂ ಭಗವದ್ಭಾವನೆಯನ್ನು ಮಾಡುವದನ್ನು ಕಲಿಯಬೇಕು; ಭಗವಂತನನ್ನು

ಅದ್ವೇಷ, ಮೈತ್ರಿ, ಕರುಣೆ, ನಿರ್ಮಮತೆ, ನಿರಹಂಕಾರ, ಸಮತೆ, ಕ್ಷಮೆ - ಎಂಬ ಪುಷ್ಪಗಳಿಂದ ಪೂಜಿಸುವದನ್ನು ಕಲಿಯಬೇಕು. ಹೀಗಾದರೆ ಭಗವಂತನಿಗೆ ನಾವು ಪ್ರಿಯರಾಗುವೆವು. ಆತನ ಅನುಗ್ರಹಕ್ಕೆ ಬೇಗನೆ ಪಾತ್ರರಾಗುವೆವು.

## ೯೦. ಭಗವಂತನಿಗೆ ಪ್ರಿಯನಾದವನು ೧೨-(೧೪-೧೫)

(೧೮-೭-೪೮)

ಈಗ ಅಕ್ಷರೋಪಾಸಕರ ಲಕ್ಷಣವನ್ನು ವಿವರಿಸುತ್ತಾ ಇದೆ. ಅಕ್ಷರವೆಂದರೆ ಪರಮಾತ್ಮತತ್ತ್ವವು. ಅದು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡಿರುತ್ತದೆ. ಅದು ಒಬ್ಬರಲ್ಲಿ ಹೆಚ್ಚಾಗಿ, ಒಬ್ಬರಲ್ಲಿ ಕಡಿಮೆಯಾಗಿ ವ್ಯಾಪಿಸಿಕೊಂಡಿರುವದಿಲ್ಲ. ಭಕ್ತರೆಂದರೆ ಈ ಪರಮಾತ್ಮತತ್ತ್ವದಲ್ಲಿಯೇ ಪ್ರೇಮವುಳ್ಳವರು. ಅವರಿಗೆ ಯಾರೊಬ್ಬರಲ್ಲಿಯೂ ದ್ವೇಷವನ್ನು ಮಾಡುವದಕ್ಕೆ ಸಾಧ್ಯವಿಲ್ಲ. ಎಲ್ಲೆಲ್ಲಿಯೂ ಭಗವಂತನನ್ನೇ ಕಾಣುವವರು ಯಾರನ್ನು ದ್ವೇಷಿಸಬೇಕು? ದೇವರ ಗುಡಿಯಲ್ಲಿ ಅದರಲ್ಲಿಯೂ ಒಂದಾನೊಂದು ಮೂರ್ತಿಯಲ್ಲಿಯೇ ದೇವರು ಇರುವನೆಂದು ಯಾವನು ನಂಬುತ್ತಾನೋ ಅವನು ತನ್ನ ದೇವರನ್ನು ಮತ್ತೊಬ್ಬರು ಮುಟ್ಟಿದರೆ ಅಥವಾ ಆ ದೇವರ ಹತ್ತಿರ ಬಂದರೆ ದೇವರಿಗೆ ಮೈಲಿಗೆಯಾಯಿತು, ಸಂಪ್ರೋಕ್ಷಣೆಯಾಗಬೇಕು ಎನ್ನುವನು. ಅಸ್ಪೃಶ್ಯರು ದೇವರ ಗುಡಿಯೊಳಗೆ ಬರಬಾರದೆಂದು ಕೆಲವರು, ಅವಶ್ಯವಾಗಿ ಅವರನ್ನು ಬಿಡಬೇಕೆಂದು ಕೆಲವರು - ಹೀಗೆ ವಾದವಿವಾದಗಳು ನಮ್ಮಲ್ಲಿ ಎದ್ದುಕೊಂಡಿರುವದಕ್ಕೆ ಭಗವಂತನು ಪರಿಚ್ಛಿನ್ನ ದೇಶದಲ್ಲಿರುತ್ತಾನೆಂಬ ನಂಬಿಕೆಯೇ ಕಾರಣ. ಪರಮಾತ್ಮನು ಎಲ್ಲೆಲ್ಲಿಯೂ ಇರುತ್ತಾನೆಂದು ನಂಬಿದವರಿಗೆ ಈ ಜಗಳದಲ್ಲಿ ಆದರವಿಲ್ಲ. ಭಗವಂತನನ್ನು ಉಪಾಸನೆಗಾಗಿ ಒಂದಾನೊಂದು ಸ್ಥಳದಲ್ಲಿ ಭಾವಿಸಿಕೊಳ್ಳುವದು ತಪ್ಪಲ್ಲ; ಭೂಮಿಯೊಳಗೆ ಎಲ್ಲೆಲ್ಲಿಯೂ ನೀರಿನ ಪ್ರವಾಹವು ಹರಿಯುತ್ತಿದ್ದರೂ ಭಾವಿ ಮಾಡಿಸಿ, ಮಣ್ಣು ತೆಗೆದುಹಾಕಿ, ನೀರನ್ನು ಉಪಯೋಗಿಸುವಂತೆ ಒಂದಾನೊಂದು ಸ್ಥಲದಲ್ಲಿ ಭಗವಂತನನ್ನು ಉಪಾಸನೆಮಾಡುವದು ಸುಕರವಾಗಿರುತ್ತದೆ. ಏಕೆಂದರೆ ಆಗ ಚಿತ್ತಕ್ಕೆ ವಿಕ್ಷೇಪವಿಲ್ಲ. ಶುಚಿಯಾಗಿರುವದು, ಸ್ಥಲವನ್ನು ಪವಿತ್ರವಾಗಿಟ್ಟುಕೊಳ್ಳುವದು, ಉಕ್ತಕಾಲವನ್ನು ಆರಿಸಿಕೊಂಡು ಧ್ಯಾನಿಸುವದು - ಇವೆಲ್ಲ ಉಪಾಸನೆಗೆ ಅಂಗಗಳು. ಉಪಾಸನೆಗೆ ಒಂದೇ ಭಾವನೆಯ ಜನರು ಇರತಕ್ಕದ್ದು ಅವಶ್ಯ; ಒಬ್ಬರು ಜಪವನ್ನೋ ಧ್ಯಾನವನ್ನೋ ಮಾಡುತ್ತಿರುವಾಗ ಇನ್ನು ಕೆಲವರು ಅಲ್ಲಿ ನಿಂತು ಗಟ್ಟಿಯಾಗಿ ಕೀರ್ತನೆಮಾಡುತ್ತಿದ್ದರೆ ವಿಕ್ಷೇಪವುಂಟಾಗುವದು ಸ್ವಾಭಾವಿಕವಾಗಿದೆ.

ಆದ್ದರಿಂದ ಕಡಿಮೆಯ ಅಂತಸ್ತಿನಲ್ಲಿರುವ ಮನಃಸ್ಥಿತಿಯವರಿಗೆ ದೇಶಕಾಲವಸ್ತ್ವಾದಿ ಪರಿಚ್ಛೇದಗಳು ಉಪಾಸನೆಗೆ ಅಗತ್ಯವಾಗಬಹುದು. ಆದರೆ ಅಕ್ಷರೋಪಾಸಕರ ಸ್ಥಿತಿಯೇ ಬೇರೆ. ಅವರಿಗೆ ಎಲ್ಲಿಯೂ ವಿಕ್ಷೇಪವಿಲ್ಲ. ಅವರ ಮನೋಭಾವವು ಹೇಗಿರುವದೆಂದರೆ ಒಬ್ಬ ಕವಿಯು ಹಾಡಿರುವಂತೆ :

ಸಂತೆಯಲ್ಲೇಕಾಂತದಲ್ಲಿ ದೇವನನ್ನೆ ಕಂಡೆ
ಬಯಲಿನಲ್ಲಿ ಬೆಟ್ಟದಲ್ಲಿ ದೇವನನ್ನೆ ಕಂಡೆ
ಬಳಿಯೊಳವನ ಕಂಡೆ ನಾನು ಬಹಳ ದುಃಖದಲ್ಲಿ
ಸುಖದ ಸೌಭಾಗ್ಯದಲ್ಲಿ ದೇವನನ್ನೆ ಕಂಡೆ

ಅವರಿಗೆ ಎಲ್ಲೆಲ್ಲಿಯೂ ಪರಮಾತ್ಮನೇ, ಎಲ್ಲವೂ ಪರಮಾತ್ಮನೇ ಆಗಿ ಕಾಣುತ್ತಿರುವದು. ಶ್ರೀ ಶಂಕರಾಚಾರ್ಯರವರ ಕೃತಿಯೆಂದು ಪ್ರಸಿದ್ಧವಾಗಿರುವ ಜೀವನ್ಮುಕ್ತಾನಂದಲಹರಿಯಲ್ಲಿ ಹೇಳಿರುವದನ್ನು ಕೇಳಿರಿ :

**ಪುರೇ ಪೌರಾನ್ ಪಶ್ಯನ್ ನರಯುವತಿನಾಮಾಕೃತಿಮಯಾನ್**
**ಸುವೇಷಾನ್ ಸ್ವರ್ಣಾಲಂಕರಣಕಲಿತಾಂಶ್ಚಿತ್ರಸದೃಶಾನ್।**
**ಸ್ವಯಂ ಸಾಕ್ಷಾದ್ದ್ರಷ್ಟೇತ್ಯಪಿ ಚ ಕಲಯನ್ ತೈಃ ಸಹ ಚರನ್**
**ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷತತಮಾಃ॥**
**ವನೇ ವೃಕ್ಷಾನ್ಪಶ್ಯನ್ ದಲಫಲಭರಾನ್ ನಮ್ರಸುಶಿಖಾನ್**
**ಘನಚ್ಛಾಯಾಚ್ಛನ್ನಾನ್ ಬಹುಳಕಲಕೂಜದ್ದ್ವಿಜಗಣಾನ್ ।**
**ಭಜನ್ ಘಸ್ರೇ ರಾತ್ರಾವವನಿತಲತಲ್ಪೈಕಶಯನೋ**
**ಮುನಿರ್ನ ವ್ಯಾಮೋಹಂ ಭಜತಿ ಗುರುದೀಕ್ಷಾಕ್ಷತತಮಾಃ ॥೨॥**

ಇತ್ಯಾದಿ ಇತ್ಯಾದಿ. ಈ ಅಕ್ಷರೋಪಾಸಕರಿಗೆ ನರನಾರಿಯರಿಂದ ಕೂಡಿದ ನಗರವಾಸವೂ ಒಂದೇ, ಮರಗಿಡಬಳ್ಳಿಗಳಿಂದ ನಿಬಿಡವಾಗಿರುವ ವನವಾಸವೂ ಒಂದೇ. ಧನಿಗಳ ಮನೆಯಲ್ಲಿರುವ ಉಪ್ಪರಿಗೆಯೂ ಒಂದೇ, ಬೆಟ್ಟದ ಗವಿಯೂ ನದಿಯದಂಡೆಯೂ ಒಂದೇ. ಹುಡುಗರು, ತರುಣರು, ವೃದ್ಧರು; ವಿದ್ವಾಂಸರು, ಕವಿಗಳು, ತಾರ್ಕಿಕರು - ಎಲ್ಲರ ಸಹವಾಸವೂ ಅವರಿಗೆ ಆ ಅಕ್ಷರರೂಪ ಪರಮಾತ್ಮನನ್ನೇ ತೋರಿಸುತ್ತಿರುವದು. ಧ್ಯಾನ, ಮೌನ, ಅರ್ಚನೆ, ಜಪ, ಅಧ್ಯಯನ- ಇವುಗಳಷ್ಟೇ ರಸಿಕರೊಡನೆ ಸಂಭಾಷಣೆ, ವಾದ - ಇವುಗಳೂ ಪರಮಾತ್ಮಮಯ ವಾಗಿರುವವು.

ಎಲ್ಲೆಲ್ಲಿಯೂ ಆತ್ಮನೊಬ್ಬನನ್ನೇ ಕಂಡವರಿಗೆ ಯಾವ ಶೋಕವು? ಯಾವ ಮೋಹವು? ಅವರು ಎಲ್ಲಾ ಪ್ರಾಣಿಗಳಲ್ಲಿಯೂ ದ್ವೇಷರಹಿತರಾಗಿ, ಮೈತ್ರಿಯಿಂದಲೂ

ಕರುಣೆಯಿಂದಲೂ ವರ್ತಿಸುತ್ತಿರುವರು. ಅವರು ಅಹಂಕಾರಮಮಕಾರಗಳಿಲ್ಲದೆ. ಸುಖದುಃಖಗಳೆರಡರಲ್ಲಿಯೂ ಸಮಸ್ಥಿತಿಯಲ್ಲಿರುತ್ತಾ ಕ್ಷಾಂತಿಯಿಂದಿರುವರು. ಕೌಪೀನ ಧಾರಿಗಳಾಗಿ ತಿರುಗುತ್ತಾ ಏಳುಮನೆಯ ಭಿಕ್ಷವನ್ನು ತಂದು ನದೀತೀರದಲ್ಲಿ ಒಂದು ಬಂಡೆಯ ಮೇಲೆ ಕುಳಿತು ಪರಮಾತ್ಮನ ಸ್ಮರಣೆಯಿಂದ ಅದನ್ನು ಪ್ರಸಾದವನ್ನಾಗಿ ಮಾಡಿಕೊಂಡು ಹತ್ತಿರವಿರುವ ತಿರ್ಯಕ್ಪ್ರಾಣಿಗಳಿಗೂ ಒಂದಿಷ್ಟು ಹಂಚಿ ಉಳಿದದ್ದನ್ನು ತಿನ್ನುವ ಪರಮಹಂಸರನ್ನು ಕಂಡರೆ ನಮ್ಮ ಮನಸ್ಸಿನಲ್ಲಿ ಯಾವ ಭಾವನೆ ಬರುವದು? ಅವರ ಧ್ಯೇಯವನ್ನೇ ಇಲ್ಲಿ ವರ್ಣಿಸಿರುತ್ತದೆ:

**ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ॥** (೧೨-೧೪)

ಅಕ್ಷರೋಪಾಸಕನು ಸಂತುಷ್ಟನು, ಸಂಪೂರ್ಣವಾಗಿ ತೃಪ್ತನಾಗಿರುವವನು. ಲೋಕದ ಜನರಿಗೆ ಎಷ್ಟು ವಿಷಯಭೋಗಗಳು ದೊರಕಿದರೂ ಸಾಕಾಗುವಂತಿಲ್ಲ. ಉಪ್ಪುನೀರು ಕುಡಿದಷ್ಟೂ ನೀರಡಿಕೆಯು ಹೆಚ್ಚುವಂತೆ ವಿಷಯಗಳ ಸೇವೆಯು ತೃಷ್ಣಾವೃದ್ಧಿಗೇ ಕಾರಣವಾಗುತ್ತದೆ. ವಿಷಯಗಳು ಪ್ರಾಪ್ತವಾಗುವ ಮುಂಚೆಯೂ ಮನುಷ್ಯನನ್ನು ತೃಷ್ಣೆಯಿಂದ ದುಃಖಕ್ಕೆ ಈಡುಮಾಡುವವು; ಭೋಗವಾದ ಬಳಿಕ ಅನರ್ಥವನ್ನುಂಟುಮಾಡಿ ದುಃಖವನ್ನುಂಟುಮಾಡುವವು; ಮತ್ತೆ ತೃಷ್ಣಾಬೀಜವನ್ನು ಬಿತ್ತಿ ದುಃಖಕ್ಕೇ ಕಾರಣವನ್ನುಂಟುಮಾಡುವವು. ಹೀಗೆ ತೃಷ್ಣೆ ಎಂಬುದೇ ಜೀವರ ದುಃಖಕ್ಕೆ ಕಾರಣವೆಂಬುದನ್ನು ಭಗವದ್ಭಕ್ತರಾದ ಅಕ್ಷರೋಪಾಸಕರು ಅರಿತಿರುವರು. ಮಹಾಭಾರತದಲ್ಲಿ ಒಂದು ವಾಕ್ಯವು ಆಗಾಗ್ಗೆ ಬರುತ್ತಲೇ ಇರುತ್ತದೆ: "ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ಸುಖಮ್। ತೃಷ್ಣಾಕ್ಷಯಸುಖಸ್ಯೈತೇ ನಾರ್ಹತಃ ಷೋಡಶೀಂ ಕಲಾಮ್॥" ಲೋಕದಲ್ಲಿ ಕಾಮಿತಾರ್ಥಗಳು ದೊರೆತಾಗ ಆಗುವ ಸುಖ ಮತ್ತು ದಿವ್ಯವಾದ ಬ್ರಹ್ಮಲೋಕಾದಿಗಳಲ್ಲಿ ಸಿಕ್ಕುವ ಸುಖ - ಈ ಎರಡಕ್ಕೆ ತೃಷ್ಣಾಕ್ಷಯದ ಸುಖದಲ್ಲಿ ವೀಸಪಾಲು ಬೆಲೆಯೂ ಇಲ್ಲ-ಎಂದು ಶ್ಲೋಕದ ಅರ್ಥ. ಪ್ರಪಂಚದಲ್ಲಿ ಕಾಣುವ ಸುಖವೆಲ್ಲ ಆನಂದರೂಪನಾದ ಪರಮಾತ್ಮನಿಂದ ಬಂದದ್ದು. ಯಾವನು ಪರಮಾತ್ಮನಿಗಿಂತ ಬೇರೆಯಾಗಿರುವನೋ, ಅವನೇ ಸುಖವನ್ನು ಹುಡುಕುತ್ತಿರುವವನು. ಅವನು ಆಶೆಯಿಂದ ಹುಡುಕಿಹುಡುಕಿ ದಣಿಯುವದೊಂದೇ ಹೊರತು ಅವನಿಗೆ ಸುಖವು ಕನಸಿನಲ್ಲಿಯೂ ದೊರೆಯುವಂತಿರುವದಿಲ್ಲ. ಆದರೆ ಸುಖದ ಗನಿಯಾಗಿರುವ ಪರಮಾತ್ಮನು ತನ್ನ ಆತ್ಮನೇ ಎಂದು ತಿಳಿದಿರುವ ಮಹಾತ್ಮರಿಗೆ ಆನಂದವು ನಿತ್ಯಪ್ರಾಪ್ತವಾಗಿರುತ್ತದೆ. ಅವರಿಗೆ ಆಶೆ ಎಲ್ಲಿಂದ ಬರಬೇಕು? ಯಾವನು ತನ್ನ ಹೃದಯದಲ್ಲಿ ಪರಮಾತ್ಮನು ನಿತ್ಯವೂ ಇರುತ್ತಿರುವನೆಂದು

ತಿಳಿದಿರುವನೋ ಅವನಿಗೆ ಸಕಲಕಾಮಗಳೂ ಏಕಕಾಲದಲ್ಲಿ ದೊರಕುವವೆಂದು ಶ್ರುತಿಯು ಸಾರುತ್ತಿರುವದು. ಅವನಿಗೆ ಕಾಮವೆಂಬುದು ಕೂಡ ಆತ್ಮನೇ ಆಗಿರುತ್ತದೆ. ಆದ್ದರಿಂದ ಆತ್ಮಕಾಮರು ಆಪ್ತಕಾಮರು; ಆದ್ದರಿಂದ ಅವರು ಎಂದೆಂದಿಗೂ ಸಂತುಷ್ಟರಾಗಿರುವರು.

ಅಕ್ಷರೋಪಾಸಕನು ಸತತವೂ ಯೋಗಿಯಾಗಿರುವನು. ಯೋಗಿ ಎಂದರೆ ಪರಮಾತ್ಮನಲ್ಲಿ ಚಿತ್ತವನ್ನು ಇಟ್ಟುಕೊಂಡಿರುವವನು. ಅವಿವೇಕಿಗಳಿಗೆ ಒಂದೊಂದು ವಿಷಯದಲ್ಲಿ ಅಲುಗಾಡದೆ ಚಿತ್ತವು ನಿಂತಿರುವದು. ಆದರೆ ವಿಷಯಗಳು ಅನಿತ್ಯ ವಾಗಿರುವದರಿಂದ ಅವು ನಾಶವಾಗಲು ದುಃಖದಿಂದ ಅವರು ಒಂದು ವಿಷಯವನ್ನು ಬಿಟ್ಟು ಮತ್ತೊಂದಕ್ಕೆ ಹಾರುತ್ತಿರುವರು. ಆಚಾರ್ಯರು ಹೇಳಿರುವಂತೆ ಈ ಚಿತ್ತಭೃಂಗವು ವೃಥಾವಿಷಯಗಳೆಂಬ ನೀರಸವಾದ ಮರುಭೂಮಿಯಲ್ಲಿ ಸುಳಿದಾಡುತ್ತಿರುವದು. ಆದರೆ ಪರಮಾತ್ಮನ ಪಾದಕಮಲದಲ್ಲಿ ಅತ್ಯಂತ ಸ್ವಾದುವಾದ ಮಕರಂದವಿರುವದೆಂದು ಅದು ಅರಿಯದು. ಸರಿಯಾಗಿ ನೋಡಿದರೆ ವಿಷಯಗಳೆಂಬವೂ ಪರಮಾರ್ಥವಾಗಿ ಪರಮಾತ್ಮನೇ; ಆದ್ದರಿಂದ ಅಕ್ಷರೋಪಾಸಕನ ದೃಷ್ಟಿಯಲ್ಲಿ ಪರಮಾತ್ಮನನ್ನು ಬಿಟ್ಟು ಎಲ್ಲಿಯೂ ಚಿತ್ತವು ಕದಲುವದಕ್ಕೆ ಅವಕಾಶವೇ ಇರುವದಿಲ್ಲ. ಆದ್ದರಿಂದ ಅವನ ಚಿತ್ತವು ಯಾವಾಗಲೂ ಪರಮಾತ್ಮನಲ್ಲಿಯೇ ನಿತ್ಯಯುಕ್ತವಾಗಿರುತ್ತದೆ. ಅವನಿಗೆ ಎಲ್ಲೆಲ್ಲಿಯೂ ಪರಮಾತ್ಮನೇ ಕಾಣುತ್ತಿದ್ದು, ಪರಮಾತ್ಮನಲ್ಲಿಯೇ ಚಿತ್ತವು ನೆಟ್ಟಿರು ವದರಿಂದಲೇ ಅವನಿಗೆ ಕಾರ್ಯಕರಣಗಳು ಸ್ವಾಧೀನದಲ್ಲಿರುತ್ತವೆ. "ಆತ್ಮನೇ ಕೆಳಗೆ, ಆತ್ಮನೇ ಮೇಲೆ; ಆತ್ಮನೇ ಹಿಂಗಡೆ; ಆತ್ಮನೇ ಮುಂಗಡೆ; ಆತ್ಮನೇ ಬಲಗಡೆ; ಆತ್ಮನೇ ಎಡಗಡೆ; ಹೀಗೆ ಆತ್ಮನೇ ಇದೆಲ್ಲವೂ" ಎಂದು ಅರಿತಿರುವವನಿಗೆ ಆತ್ಮನಲ್ಲಲ್ಲದೆ ಚಿತ್ತವು ಮತ್ತೆಲ್ಲಿದ್ದೀತು? ಅವನಿಗೆ ಆತ್ಮನಿಗಿಂತ ಬೇರೊಂದು ವಿಷಯವೇ ಇಲ್ಲದ್ದರಿಂದ ಆತ್ಮನನ್ನು ಬಿಟ್ಟು ಹರಿದಾಡುವದರಿಂದ ಕಾರ್ಯಕರಣಗಳು ಇಲ್ಲಿ ವಿಷಯಗಳತ್ತ ಓಡುವವೆಂಬ ಭಯವು ಒಂದಿಷ್ಟೂ ಇರುವದಿಲ್ಲ. ಆದ್ದರಿಂದ ಅವನು ಸರ್ವಥಾ ಯಾತಾತ್ಮನಾಗಿರುತ್ತಾನೆ. ಆತ್ಮತತ್ತ್ವವೊಂದೇ ಪರಮಾರ್ಥವು, ಅದು ಸರ್ವಗತವು ಎಂಬ ನಿಶ್ಚಯವುಳ್ಳವ ನಾಗಿಯೂ ಇರುತ್ತಾನೆ. ಇಂದ್ರಿಯಗಳು ಎಂಥ ತುಂಟ ಕುದುರೆಗಳಾಗಿದ್ದರೂ ಅವನು ಒಳ್ಳೆಯ ಸವಾರನಾಗಿರುತ್ತಾನೆ; ಇಡಿಯ ಬ್ರಹ್ಮಾಂಡವನ್ನೆಲ್ಲ ಸ್ವಾಧೀನದಲ್ಲಿಟ್ಟುಕೊಂಡ ಪರಮಾತ್ಮನೇ ತನ್ನ ಆತ್ಮನೆಂದು ಅರಿತುಕೊಂಡವನಿಗೆ ಶರೀರವಾಗಲಿ ಇಂದ್ರಿಯಗಳಾಗಲಿ ಸ್ವಾಧೀನದಲ್ಲಿರುವದು ಕಷ್ಟವಾದೀತೆ? ಶರೀರವು ಆರೋಗ್ಯವಾಗಿರುವದಕ್ಕೆ ನಮ್ಮಗಳಂತೆ ಅವನು ಬಗೆಬಗೆಯ ವೈದ್ಯರನ್ನು ಹುಡುಕಿಕೊಂಡು ಹೋಗಬೇಕಾದೀತೆ? ನೀರಜನಾದ ಆತ್ಮನಲ್ಲಿ ಮನಸ್ಸಿಟ್ಟಿರುವವನು ಯತಾತ್ಮನಲ್ಲದೆ

ಇರುವದಕ್ಕಾದೀತೆ? ಎಲ್ಲೆಲ್ಲಿ ಮನಸ್ಸು ಹೋಗುವದೋ ಅಲ್ಲಲ್ಲಿ ಪರಮಾತ್ಮನೇ ಇರುವನೆಂಬ ನಿಶ್ಚಯವಿರುವವನ ಮನಸ್ಸು ಸ್ವಲ್ಪವಾದರೂ ಕದಲೀತೆ?

ಆದ್ದರಿಂದಲೇ ಅವನು ಪರಮಾತ್ಮನಲ್ಲಿಯೇ ಮನೋಬುದ್ಧಿಗಳನ್ನು ಸಮರ್ಪಿಸಿ ಬಿಟ್ಟಿರುವನು. ಬೆಂಗಳೂರಿನಲ್ಲಿ ಒಬ್ಬ ಮಹನೀಯರಿದ್ದರು. ಅವರಲ್ಲಿ ನಾವು ಮತ್ತೆ ಯಾರೊಬ್ಬರ ವಿಚಾರವನ್ನು ತೆಗೆದರೂ 'ಅದಿರಲಿ, ಪರಮಾತ್ಮನ ವಿಚಾರವನ್ನು ಹೇಳಿರಿ'- ಎಂದು ಯಾವದಾದರೊಂದು ತತ್ತ್ವವಿಚಾರವನ್ನು ತೆಗೆದುಬಿಡುತ್ತಿದ್ದರು. ಕೆಲಸಕ್ಕೆ ಬಾರದ ವಿಷಯದ ಕಡೆಗೆ ಮನಸ್ಸು ಹೋಗುವದು ಬೇಡ ಎಂದು ಅವರು ಉಪದೇಶಿಸುತ್ತಿರಲಿಲ್ಲ, ಪರಮಾತ್ಮನ ಕಡೆಗೆ ನಮ್ಮ ಚಿತ್ತವನ್ನು ಎಳೆದುಬಿಡುತ್ತಿದ್ದರು. ಅಕ್ಷರೋಪಾಸಕನಿಗೆ ಹೀಗೆಯೇ ಮನೋಬುದ್ಧಿಗಳು ಸಹಜವಾಗಿ ಪರಮಾತ್ಮನಲ್ಲಿದ್ದು ಬಿಟ್ಟಿರುವವು; ಪರಮಾತ್ಮನಿಗೇ ಅವನ್ನು ಅವನು ಸಮರ್ಪಣೆಮಾಡಿಬಿಟ್ಟಿರುತ್ತಾನೆ. ಹಕ್ಕಿಯು ರೆಕ್ಕೆಯನ್ನೇ ನಂಬಿಕೊಂಡಿದ್ದು ಯಾವಾಗಲೆಂದರೆ ಆಗ ರೆಕ್ಕೆಗಳನ್ನುಪಯೋಗಿಸುವಂತೆ ಅಕ್ಷರೋಪಾಸಕನು ಸಹಜವಾಗಿ ಮನೋಬುದ್ಧಿಗಳನ್ನು ಯಾವಾಗಲೂ ಪರಮಾತ್ಮನ ಕಡೆಗೆ ತಿರುಗಿಸಿಕೊಂಡಿರುತ್ತಾನೆ. ಪರಮಾತ್ಮಸ್ವರೂಪನೇ ಆಗಿರುತ್ತಾನೆ. ಇಂಥ ಭಗವದ್ಭಕ್ತರಿಗೂ ಭಗವಂತನಿಗೂ ಯಾವ ಭೇದವೂ ಇರುವದಿಲ್ಲವಾದ್ದರಿಂದ ಅವರು ನನಗೆ ಪ್ರಿಯರು ಎಂದು ಭಗವಂತನು ಹೇಳುವದರಲ್ಲಿ ಆಶ್ಚರ್ಯವೇನಿದೆ? ಜ್ಞಾನಿಯು ನನ್ನ ಆತ್ಮನೇ ಎಂದು ಮತ್ತೊಂದು ಕಡೆಯಲ್ಲಿ ಹೇಳಿರುತ್ತಾನಲ್ಲವೆ? ಆದ್ದರಿಂದ ಯಾವನು ಇಂಥ ನನ್ನ ಭಕ್ತನೋ ಅವನು ನನಗೆ ಪ್ರಿಯನಾಗಿರುತ್ತಾನೆ, ಎಂದರೆ ನನಗೆ ನಾನು ಪ್ರಿಯನು ಎಂದು ಹೇಳಿದಂತೆ ಆಯಿತು.

ಈಗ ಅಕ್ಷರೋಪಾಸಕನ ಬೇರೆಯ ಕೆಲವು ಲಕ್ಷಣವನ್ನು ಮುಂದಿನ ಶ್ಲೋಕದಿಂದ ಹೇಳಿರುತ್ತಾರೆ :

**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ॥**(೧೨-೧೫)

"ಯಾವನಿಂದ ಲೋಕವು ಉದ್ವೇಗಗೊಳ್ಳುವದಿಲ್ಲವೋ ಲೋಕದಿಂದ ಯಾವನು ಉದ್ವೇಗಗೊಳ್ಳುವದಿಲ್ಲವೋ ಹರ್ಷ, ಅಸಹನೆ, ಭಯ, ಉದ್ವೇಗ - ಇವುಗಳಿಂದ ಮುಕ್ತನಾಗಿರುವನೋ ಅವನೇ ನನಗೆ ಪ್ರಿಯನಾಗಿರುವವನು" ಉದ್ವೇಗವಾಗುವದು ಎಂದರೆ ಹೇಗೆ? ರಾವಣನನ್ನು ನೆನಪಿಗೆ ತಂದುಕೊಳ್ಳಿರಿ. ಅವನ ಹೆಸರು ಕೇಳಿದರೆ ಸಾಕು. ದೇವತೆಗಳು, ಋಷಿಗಳು, ಮನುಷ್ಯರು - ಎಲ್ಲರೂ ತಲ್ಲಣಿಸುತ್ತಿದ್ದರು. 'ನಾನು', 'ನಾನು' ಎಂದು ಯಾರ ಮನಸ್ಸು ಕುಣಿಯುತ್ತಿರುವದೋ, ಯಾವನಿಗೆ ಎಲ್ಲವೂ ನನ್ನದಾಗಿರಬೇಕೋ, ಅವನು ಮತ್ತೊಬ್ಬರ ಮನಸ್ಸನ್ನು ನೋಯಿಸದೆ

ಇರುವದಕ್ಕೆ ಆಗುವದೇ ಇಲ್ಲ. ಹತ್ತು ದಿಕ್ಕುಗಳಿಗೂ ಚಾಚುತ್ತಿರುವ ಹತ್ತುತಲೆಗಳಿಂದ ಸ್ವಾರ್ಥವು ನಾಟ್ಯಮಾಡುತ್ತಿರುವಲ್ಲಿ ಅಂಥವನಿಂದ ಲೋಕವು ಉದ್ವೇಗಗೊಳ್ಳದೆ ಇರುವುದು ಹೇಗೆ? ನಮ್ಮ ಕಾಲದಲ್ಲಿ ಇಂಥ ರಾವಣನ ಅಪರಾವತಾರವೆಂಬಂತೆ ಸ್ವಾರ್ಥದಿಂದ ವರ್ತಿಸಿದ ಹಿಟ್ಲರನ ಹೆಸರನ್ನು ಕೇಳಿ ಆಗ್ಗೆ ತಲ್ಲಣಿಸದೆ ಇದ್ದವರು ಯಾರು? ಇದೇ ಉದ್ವೇಗವು. ಭಕ್ತರು ಇಂಥ ಉದ್ವೇಗದ ಸೊಲ್ಲನ್ನು ಕಾಣರು. ಎಲ್ಲೆಲ್ಲಿಯೂ ಎಲ್ಲರಲ್ಲಿಯೂ ತಮ್ಮ ಆತ್ಮನಾಗಿರುವ ಪರಮಾತ್ಮನನ್ನೇ ಕಾಣುತ್ತಿರುವವರಿಗೆ ಯಾರಿಂದ ಉದ್ವೇಗವಾದೀತು? ಅವರಿಂದ ತಾನೆ ಯಾರಿಗೆ ಉದ್ವೇಗವಾದೀತು? ಹರಿಹರದಲ್ಲಿ ಒಬ್ಬ ಸ್ವಾಮಿಗಳಿದ್ದರು. ಅವರು ನದಿಯ ದಂಡೆಯಮೇಲೆ ಒಂದು ಗುಂಡಿಯನ್ನು ತೋಡಿಕೊಂಡು ಅದರಲ್ಲಿಯೇ ವಾಸವಾಗಿರುತ್ತಿದ್ದರು. ಅವರಿಗೆ ತಮಗೆ ವಾಸಕ್ಕೆ ಒಂದು ಸ್ಥಳವನ್ನು ಯಾರೂ ಮಾಡಿಕೊಡಲಿಲ್ಲವಲ್ಲ! - ಎಂಬ ತಳಮಳವು ಎಂದಾದರೂ ಬಂದಿತೆಂದು ಯಾರು ತಾನೆ ಹೇಳಲಾಪರು? ಜನರು ಬಿಸಿಲುಮಳೆಗಳಿಂದ ಅವರಿಗೆ ತೊಂದರೆಯಾಗದಿರುವಂತೆ ಒಂದು ಚಪ್ಪರವನ್ನು ಹಾಕಬೇಕೆಂದು ಪ್ರಯತ್ನಿಸಿದರು; ಆದರೆ ಸ್ವಾಮಿಗಳು ಅದಕ್ಕೂ ಅಡ್ಡಿಹಾಕುತ್ತಿದ್ದರಂತೆ! ತಮಗಾಗಿ ಜನರು ಯಾವ ಶ್ರಮವನ್ನೂ ವಹಿಸಬಾರದೆಂದು ಅವರ ಇಚ್ಛೆ. ಒಂದು ಸಲ ಒಂದು ಹಾವನ್ನು ಕೆಲವರು ಹುಡುಗರು ಓಡಿಸಿಕೊಂಡು ಬಂದರು; ಅದು ಎಲ್ಲಿಯೂ ಶರಣುಕಾಣದೆ ಸ್ವಾಮಿಗಳಿದ್ದ ಸ್ಥಲಕ್ಕೆ ಬಂದು ಸೇರಿಕೊಂಡಿತು. ಸ್ವಾಮಿಗಳು, "ಎಲಾ ಇದನ್ನೇಕೆ ಹೊಡೆಯುತ್ತೀರೊ? ನನ್ನನ್ನು ಮೊರೆಹೊಕ್ಕಿದೆ. ಎಲ್ಲಿಯಾದರೂ ಇದರ ಗೋಜಿಗೆ ಬಂದೀರಿ, ಜೋಕೆ!" ಎಂದು ಹುಡುಗರನ್ನು ಹೆದರಿಸಿ ಕಳುಹಿಸಿದರಂತೆ. ಹಾವಿನಿಂದ ಕೂಡ ಅವರಿಗೆ ಉದ್ವೇಗವಿಲ್ಲ. ಹಾವಿಗೂ ಅವರಿಂದ ಉದ್ವೇಗವಿಲ್ಲ! ಎಷ್ಟೋ ದಿನಗಳು ಅವರ ಬಳಿಯಲ್ಲಿಯೇ ಆ ಪ್ರಾಣಿಯು ಇದ್ದುಬಿಟ್ಟಿತಂತೆ! ಹೀಗಿರುತ್ತದೆ, ಅಕ್ಷರೋಪಾಸಕರ ಸ್ಥಿತಿ. ಅವರಿಗೆ ಒಬ್ಬರಿಂದ ನೋವಾಗುವ ಹಾಗಿಲ್ಲ, ಅವರೂ ಒಬ್ಬರಿಗೆ ನೋವನ್ನು ಮಾಡುವಂತಿಲ್ಲ.

ಉದ್ವೇಗದಿಂದ ತಳಮಳಗೊಳ್ಳುವ ರೇಗುವ ಸ್ವಭಾವವು ಸ್ವಾರ್ಥಪರರಾದ ಜನರಲ್ಲಿ ಅಡಿಗಡಿಗೂ ಕಾಣಿಸುತ್ತಿರುವದು. ಒಬ್ಬ ಮನುಷ್ಯನ ಮೈಮೇಲೆ ಒಂದು ಕುರು ಎದ್ದಿದೆ ಎಂದು ಇಟ್ಟುಕೊಳ್ಳಿರಿ. ಆಗ ಅದನ್ನು ಮತ್ತೊಬ್ಬರು ಮುಟ್ಟಕೂಡದು; ಮುಟ್ಟಿದ ಮಾತ್ರದಿಂದ ಕಣ್ಣುಕೆಂಪಗೆ ಮಾಡುತ್ತಾನೆ. ಆ ಕುರುವಿಗೆ ಯಾರಾದರೂ ಪೋಲ್ಟಿಸ್ ಕಟ್ಟುವದಕ್ಕೆ ಬಂದರೆ ಮುಲಾಮು ಹಾಕುವದಕ್ಕೆ ಯಾರಾದರೂ ತೊಡಗಿದರೆ, ಡಾಕ್ಟರು ಅದನ್ನು ಶಸ್ತ್ರಚಿಕಿತ್ಸೆಯಿಂದ ತೆಗೆದುಹಾಕುವದಕ್ಕೆ ಹೊರಟರೆ ಅವನು ರೇಗುವನು; ಅವನಿಗೆ ಹಿಡಿಯದಷ್ಟು ಕೋಪ. ಅಡಿಗಡಿಗೂ ತಟಗಟ್ಟುತ್ತಾ

ತನ್ನನ್ನು ಗೋಳುಗುಟ್ಟಿಸುತ್ತಿದ್ದರೂ ಆ ಕುರುವನ್ನು ಕಾಪಾಡಿಕೊಳ್ಳಬೇಕೆಂದೇ ಅವನು ಹವಣಿಸುತ್ತಿರುವನು. ಅಲ್ಲವೆ? ಇದರಂತೆ ಪ್ರಾಕೃತಜನರಿಗೆ, ದುಷ್ಟರಿಗೆ, ನಾನು ಎಂಬ ಕುರು ಎದ್ದಿಕೊಂಡಿರುವದು. ಅದರಿಂದ ಅವರಿಗೆ ಯಾವ ಸುಖವೂ ಇಲ್ಲ. ಆದರೂ 'ಈ ನಾನು ಎಂಬುದು ನಿಮ್ಮನ್ನು ಗೋಳುಗುಟ್ಟಿಸುತ್ತದೆ; ಇದನ್ನು ಬಿಟ್ಟು ಬಿಡಿರಿ' ಎಂದು ಯಾರಾದರೂ ಉಪದೇಶಿಸಿದರೆ ಜಿಂಕೆಯಮೇಲೆ ಎರಗುವ ಹುಲಿಯಂತೆ ಕೂಡಲೆ ಅವರು ಕಿಡಿಕಿಡಿಯಾಗುವರು! ಭಗವದ್ಭಕ್ತರಿಗೆ ಇಂಥವರಮೇಲೆ ಅನುಕಂಪೆ ಇರುವದು, ಅಯ್ಯೋ ಪಾಪ! ಇವರಿಗೆ ಈ ನಾನೆಂಬ ಕುರುವಿನ ಬಾಧೆಯು ಬಲವಾಗಿರುತ್ತದೆ. ಇವರಿಗೆ ಹೇಗಾದರೂ ಮಾಡಿ ತಕ್ಕ ಉಪಾಯದಿಂದ ಇದರ ಉಪಟಳವನ್ನು ತಪ್ಪಿಸಿಕೊಳ್ಳುವ ಉಪಾಯವನ್ನು ಹೇಳಿಕೊಡಬೇಕು ಎಂದು ದಯೆಯಿಂದ ಅವರಿಗೆ ಪ್ರತ್ಯುಪಕಾರವನ್ನೇ ಮಾಡುವರು. ಭಗವದ್ಭಕ್ತರು ಮತ್ತೊಬ್ಬರಿಂದ ಉದ್ವೇಗವನ್ನು ಹೊಂದುವದಿಲ್ಲ ಎಂದಿಷ್ಟೇ ಅನುದ್ವೇಗವೆಂಬ ಮಾತಿಗೆ ಅರ್ಥವನ್ನು ಮಾಡಿಕೊಂಡರೆ ಸಾಲದು; ಉದ್ವೇಗವು ಸ್ವಲ್ಪವೂ ಮೊಳೆಯದಂತೆ ದಯಾರಸದಿಂದ ಕೂಡಿರುತ್ತಾರೆ ಎಂದು ಇದಕ್ಕೆ ಅರ್ಥವನ್ನು ಮಾಡಬೇಕು. ವಾಲ್ಮೀಕರು ಮೊದಲು ದಾರಿಹೋಕರನ್ನು ಹೊಡೆಯುವದು ಬಡಿಯುವದು, ಅವರ ಧನವನ್ನು ಅಪಹರಿಸು ವದು - ಇಂಥ ವೃತ್ತಿಯಲ್ಲಿದ್ದರು. ಆದರೆ ನಾರದಾದಿಋಷಿಗಳು ತಮ್ಮ ಮೇಲೂ ಸುಲಿಗೆಗಾಗಿ ಬಿದ್ದ ಆ ಕಿರಾತನ ಮೇಲೆ ಎಂಥ ದಯವನ್ನು ತೋರಿಸಿದರು! ಅವರ ಅನುಗ್ರಹದಿಂದ ಆ ಕಿರಾತನು ಋಷಿಯಾದನು! ಲೋಕಕಲ್ಯಾಣವನ್ನುಂಟುಮಾಡುವ ರಾಮಾಯಣವನ್ನು ಬರೆದನು!

ಹರ್ಷ, ಅಮರ್ಷ, ಭಯ, ಉದ್ವೇಗ - ಇವು ಯಾವವೂ ಭಕ್ತರನ್ನು ಮುಟ್ಟುವದಿಲ್ಲ. ಹರ್ಷವೆಂದರೆ ತನಗೆ ಇಷ್ಟವಾದದ್ದು ದೊರಕಿದ್ದರಿಂದಲೂ ತನ್ನಲ್ಲಿ ಬೇಕಾದ ಸಾಮಗ್ರಿಯಿದೆ ಎಂಬ ಹಮ್ಮಿನಿಂದಲೂ ಉಬ್ಬುವದು. ಅಮರ್ಷವೆಂದರೆ ತನಗೆ ಆಗುವ ತೊಂದರೆಯನ್ನಾಗಲಿ ಮತ್ತೊಬ್ಬರಿಗೆ ಆಗುವ ಒಳ್ಳೆಯದನ್ನಾಗಲಿ ಸಹಿಸಲಾರದೆ ಹೊಟ್ಟೆಯನ್ನು ಕಿವಿಚಿಕೊಳ್ಳುತ್ತಿರುವದು ಭಯವೆಂದರೆ ತನಗೂ ತನ್ನವರಿಗೂ ಎಲ್ಲಿ ಯಾವಾಗ ಏನು ಆಗುವದೋ ಎಂದು ಅಂಜುತ್ತಿರುವದು. ಇವುಗಳು ಯಾವವೂ ಭಕ್ತರ ಬಳಿಯಲ್ಲಿ ಸುಳಿಯುವದಿಲ್ಲ. ಅವರು ಈ ಹರ್ಷಾದಿದೋಷಗಳಿಂದ ಬಿಡುಗಡೆ ಹೊಂದುವದಕ್ಕೆ ಯಾವ ವಿಶೇಷಸಾಧನವನ್ನೂ ಮಾಡುತ್ತಿರುವದಿಲ್ಲ. ಸಾಧಕರಿಗೆ ಸಾಧನಾಯತ್ತವಾಗಿ ಈ ದೋಷಗಳು ಕೆಲವುಕಾಲ ಮರೆಯಾಗಬಹುದು; ಆದರೆ ತಕ್ಕ ಸಮಯವು ಬಂದಕೂಡಲೆ, ಸರ್ಕಸ್ಸಿನಲ್ಲಿ ಪಳಗಿದಂತೆ ಕಾಣುತ್ತಿದ್ದ ಹುಲಿ ಮುಂತಾದ ಪ್ರಾಣಿಗಳು ಯಜಮಾನನನ್ನು ಕಚ್ಚಿ

ಬಿಡುವಂತೆ, ಮತ್ತೆ ಮೇಲಕ್ಕೆದ್ದು ಹಿಂಸೆಮಾಡುತ್ತಿರುವವು, ಭಕ್ತರಲ್ಲಿ ಹೀಗಲ್ಲ. ಹರ್ಷಾಮರ್ಷಾದಿಗಳು ಅವರಲ್ಲಿ ಅತ್ಯಂತವಾಗಿ ಹೋಗಿಬಿಟ್ಟಿರುವವು. ಏಕೆಂದರೆ ಅವರು ಎಂದೆಂದಿಗೂ ಅಕ್ಷರಸ್ವರೂಪನಾದ ಪರಮಾತ್ಮನಲ್ಲಿ ನೆಲೆನಿಂತಿರುತ್ತಾರೆ. ಪರಮಾತ್ಮನಿಂದ ಜಾರಿದವರಿಗೆ ಹರ್ಷಾದಿಗಳು ಎಂದಿಗೂ ತಪ್ಪುವದಿಲ್ಲ; ಪರಮಾತ್ಮನಲ್ಲಿ ನೆಲೆನಿಂತವರಿಗೆ ಅವು ಎಂದಿಗೂ ಕಾಣಿಸಿಕೊಳ್ಳುವದೇ ಇಲ್ಲ. ಆದ್ದರಿಂದಲೇ ಆತನಿಗೆ ಭಯಕೃತ್, ಭಯನಾಶನಃ (ಭಯವನ್ನುಂಟುಮಾಡುವವನು, ಭಯವನ್ನು ನಾಶ ಮಾಡುವವನು) ಎಂಬ ಹೆಸರುಗಳು. ನಾವು ನಮ್ಮಲ್ಲಿರುವ ಲೋಪದೋಷಗಳನ್ನು ನೇರ್ಪಡಿಸಿಕೊಳ್ಳುವದಕ್ಕೆ ಮಾಡಬೇಕಾದ ಪ್ರಯತ್ನವೆಲ್ಲ ಒಂದೇ. ಸಕಲಗುಣ ಪರಿಪೂರ್ಣನಾಗಿರುವ ಯಾವ ದೋಷಗಳೂ ಇಲ್ಲದ ಗುಣದೋಷಗಳನ್ನು ಮೀರಿ ತನ್ನ ಮಹಿಮೆಯಲ್ಲಿಯೇ ನಿಂತಿರುವ ಪರಮಾತ್ಮನನ್ನೇ ಶರಣುಹೊಂದಬೇಕು. ಹಾಗಾದರೆ ಶರೀರಕ್ಕೂ ಮನಸ್ಸಿಗೂ ಶಾಶ್ವತವಾದ ನೆಮ್ಮದಿಯುಂಟಾಗುವದು; ಅದೇ ಮನುಷ್ಯನಿಗೆ ಬೇಕಾಗಿರುವ ಸ್ವಾಸ್ಥ್ಯವು.

## ೯೧. ಭಗವದ್ಭಕ್ತ ೧೨-(೧೬-೧೮)
### (೨೫-೭-೪೮)

ಭಗವದ್ಭಕ್ತನು ಹರ್ಷಾಮರ್ಷಭಯೋದ್ವೇಗಗಳಿಂದ ಮುಕ್ತನಾದವನು -ಎಂಬುದು ಹಿಂದಿನ ದಿನದ ಉಪನ್ಯಾಸದ ವಿಷಯವಾಗಿತ್ತು. ಮನುಷ್ಯನ ಮನಸ್ಸು ಬೇರೆಬೇರೆಯ ಭಾವನೆಗಳಿಂದ ಉಬ್ಬುತ್ತಿರುತ್ತದೆ, ಕುಗ್ಗುತ್ತಿರುತ್ತದೆ. ಮನುಷ್ಯನು ಹೊರಗಿನ ಗುರುತು ಗಳಿಂದ ಸ್ವಲ್ಪಮಟ್ಟಿಗೆ ಈ ಉಬ್ಬುಕುಗ್ಗುಗಳನ್ನು ಗೊತ್ತುಮಾಡಿಕೊಳ್ಳಬಹುದು. ಕೆಲವರು ಮನಃಶಾಸ್ತ್ರಜ್ಞರು ಹೊರಗಿನ ನಿಮಿತ್ತಗಳಿಂದ ಮನುಷ್ಯನ ಮನಸ್ಸಿನಲ್ಲಿ ಯಾವಯಾವ ಮಾರ್ಪಾಡುಗಳು ಆಗುತ್ತವೆ? ಎಂಬುದನ್ನು ಗೊತ್ತುಮಾಡಲು ಒಂದು ಯಂತ್ರವನ್ನು ತಯಾರಿಸಿರುವರಂತೆ. ಒಂದು ಕಾಲೇಜಿನಲ್ಲಿ ಒಬ್ಬ ಜವಾನನನ್ನು ಅಲ್ಲಿಯ ಪ್ರೊಫೆಸರುಗಳು ಕರೆಯಿಸಿ ಇಂಥದೊಂದು ಯಂತ್ರವಿರುವ ಬಳಿಯಲ್ಲಿ ಕುಳ್ಳಿರಿಸಿ, ಅವನಿಗೆ ತಮ್ಮ ಉದ್ದೇಶವನ್ನು ತಿಳಿಯಗೊಡಿಸದೆ, 'ನಿನಗೆ ಪ್ರಮೋಷನ್ ಆಯಿತು' ಎಂದು ಸುದ್ದಿಯನ್ನು ತಿಳಿಸಿದರಂತೆ. ಸ್ವಲ್ಪಹೊತ್ತಿನ ಮೇಲೆ 'ನಿನಗೇನೂ ಪ್ರಮೋಷನ್ ಆಗಿಲ್ಲ, ಸುಮ್ಮನೆ ಹೇಳಿದೆವು' ಎಂದರಂತೆ. ಮೊದಲನೆಯ ಸುದ್ದಿಯನ್ನು ನಿಜವೆಂದು ಕಲ್ಪಿಸಿದ ಭಾವನೆಯಿಂದ ಅವನ ಹರ್ಷವು ಎಷ್ಟರಮಟ್ಟಿಗೆ ಆಗಿರ

ಬೇಕೆಂಬುದನ್ನೂ ಎರಡನೆಯ ಸುದ್ದಿಯಿಂದ ಅವನಿಗೆ ಆದ ಆಶಾಭಂಗವು ಎಷ್ಟಾಯಿತೆಂಬುದನ್ನೂ ಆ ಯಂತ್ರವು ರಿಕಾರ್ಡುಮಾಡಿಟ್ಟಿತಂತೆ. ಆ ಯಂತ್ರದ ವಿಷಯವನ್ನು ಕೇಳಿ ನೀವು ಆಶ್ಚರ್ಯಪಡಬಹುದು; ಆದರೆ ಅದನ್ನು ನಿರ್ಮಿಸಿರುವ ವಿಜ್ಞಾನಶಾಸ್ತ್ರಜ್ಞರ ದೇಹಯಂತ್ರವನ್ನೂ ಮನೋಯಂತ್ರವನ್ನೂ ಸೃಷ್ಟಿಸಿರುವ ಪರಮಾತ್ಮನ ಸರ್ವಜ್ಞತೆ ಎಂಥದ್ದು! ಯಂತ್ರದಲ್ಲಿ ಆಯಾ ಭಾವನೆಯಿಂದ ಶರೀರದಮೇಲೆ ಆದ ಪರಿಣಾಮವನ್ನು ಮಾತ್ರ ರಿಕಾರ್ಡುಮಾಡುವ ಸಾಮರ್ಥ್ಯವಿದೆ; ಆದರೆ ನಮಗೆ ಹೊರಗಿನ ವಸ್ತುಗಳ ಸಂಸ್ಪರ್ಶದಿಂದ ಅಥವಾ ಅವುಗಳ ಕಲ್ಪನಾಮಾತ್ರದಿಂದ ಆಗುವ ಮನೋಭಾವಗಳು ನೇರವಾಗಿಯೇ ಯಾವದೊಂದು ಹೊರಗಿನ ಸಾಧನವೂ ಇಲ್ಲದೆಯೇ ಅರಿಯುವಂತೆ ಮಾಡಿರುವ ಪರಮಾತ್ಮನ ಸೃಷ್ಟಿಕೌಶಲಕ್ಕೆ ಯಾವ ಶಿಲ್ಪಿವರನ ಜಾಣ್ಮೆಯನ್ನು ತಾನೆ ಹೋಲಿಕೆಯಾಗಿ ಕೊಡಬಹುದು?

ಇದಂತಿರಲಿ, ಸಾಮಾನ್ಯರ ಮನಸ್ಸಿನಲ್ಲಿ ವಿಷಯಗಳ ಅನುಭವದಿಂದಲೂ ಅವುಗಳ ಸ್ಮರಣೆಯಿಂದಲೂ, ಕೊನೆಗೆ ಅವುಗಳನ್ನು ಕಲ್ಪನಾಮಾತ್ರದಿಂದ ನಿರೀಕ್ಷಿಸುವದರಿಂದಲೂ, ಘಳಿಗೆಘಳಿಗೆಗೂ ಒಂದೊಂದು ಭಾವವು ಉದಯಿಸುತ್ತಿರುವದು. ಎಂಥ ಸಾತ್ತ್ವಿಕಸಾಧನವನ್ನು ಮಾಡುತ್ತಿರಲಿ, ಮನುಷ್ಯನಿಗೆ ಹರ್ಷಾಮರ್ಷಗಳ ಹೊಡೆತವೂ ಭಯೋದ್ವೇಗಗಳ ಏಟೂ, ತಪ್ಪಿದ್ದಲ್ಲ. ಇಬ್ಬರು ಒಂದೇ ಕಾಡಿನಲ್ಲಿ ತಮ್ಮತಮ್ಮ ಇಷ್ಟಾರ್ಥಪರಿಪೂರ್ತಿಗೆಂದು ತಪಸ್ಸುಮಾಡಿಕೊಂಡಿದ್ದರಂತೆ. ಅವರಲ್ಲಿ ಒಬ್ಬನಿಗೆ ದೇವರು ಪ್ರತ್ಯಕ್ಷನಾಗಿ "ಏನು ವರ ಬೇಕೋ ಬೇಡಿಕೊ" ಎಂದು ಕೇಳಿದನಂತೆ. ಆಗ ಅವನಿಗೆ ಇದುವರೆಗೆ ತಾನು ಬಯಸಿದ್ದ ಪುರುಷಾರ್ಥವು ಈಗ ದೊರಕುವ ಸಮಯವು ಬಂದಿತಲ್ಲ! -ಎಂಬ ಹರ್ಷವು ಉಕ್ಕಿಬಂತು. ಆದರೆ ಅಷ್ಟರಲ್ಲಿಯೇ ಅವನಿಗೆ ತನ್ನ ನೆರೆಯವನೊಬ್ಬನು ಅದೇ ಕಾಡಿನಲ್ಲಿ ತಪಸ್ಸು ಮಾಡಿಕೊಂಡಿರುತ್ತಾನೆಂಬ ನೆನಪು ಬಂತು. ಅವನಿಗೂ ತನ್ನಂತೆ ದೇವರು ಪ್ರಸನ್ನನಾಗಿ ತನಗೆ ಕೊಡುವ, ಅಥವಾ ಅದಕ್ಕಿಂತಲೂ ಹೆಚ್ಚಿನದಾದ ವರವನ್ನು ಕೊಟ್ಟರೇನು ಗತಿ? -ಎಂಬ ಅಸೂಯೆ ಉಂಟಾಯಿತು. ಆಗ ಅವನು "ದೇವ, ನೀನು ನನ್ನಲ್ಲಿ ನಿಜವಾಗಿಯೂ ಪ್ರಸನ್ನನಾಗಿದ್ದರೆ, ಆ ನನ್ನ ನೆರೆಯವನಿಗೆ ನೀನು ಕೊಡುವದರ ಎರಡರಷ್ಟು ನನಗೆ ದೊರಕುವಂತೆ ಅನುಗ್ರಹಿಸು" ಎಂದು ಬೇಡಿಕೊಂಡನು. ಪರಮೇಶ್ವರನು ನಕ್ಕು 'ಆಗಲಿ' ಎಂದು ಆ ಇನ್ನೊಬ್ಬ ತಪಸ್ವಿಯ ಬಳಿಗೆ ಬಂದು 'ನಿನಗೇನು ಬೇಕು ಕೇಳಿಕೊ' ಎಂದನು. ಅವನೇನೂ ಅಮರ್ಷದಲ್ಲಿ ಇವನಿಗಿಂತ ಕಡಿಮೆಯವನಲ್ಲ. ನೆರೆಯವನು ಯಾವ ವರವನ್ನು ಕೇಳಿಕೊಂಡು ತನಗೆ ಯಾವಾಗ ಏನು ಕೇಡು ಬಗೆದಾನೋ ಎಂಬ ಭಯೋದ್ವೇಗಗಳಿಂದ ಅವನು 'ಆತನೇನು

ಬೇಡಿಕೊಂಡನು?' ಎಂದು ಕೇಳಿದನು. ವಿಷಯವು ತಿಳಿಯಲು ಅವನಿಗೆ ಮನಸ್ಸಮಾಧಾನವು ತೀರ ಹೋಗಿಬಿಟ್ಟಿತು. "ದೇವ, ನನಗೆ ಒಂದು ಕಣ್ಣು ಹೋಗುವಂತೆ ಅನುಗ್ರಹಿಸು!" ಎಂದು ಕೇಳಿಕೊಂಡನಂತೆ! ನೋಡಿದಿರಾ, ಮನುಷ್ಯನ ಮನೋಭಾವವನ್ನು? ತನಗೆ ಒಂದು ಕಣ್ಣಾದರೂ ಉಳಿಯುವದು, ಮತ್ತೊಬ್ಬನಿಗಂತೂ ಎರಡೂ ಹೋಗುವವಲ್ಲ! -ಎಂಬುದೇ ಅವನಿಗೆ ಸಂತೋಷಕ್ಕೆ ಕಾರಣವಾಯಿತು. ಹೀಗೆ ಹರ್ಷಾಮರ್ಷವೇ ಮುಂತಾದ ಭಾವನೆಗಳು ವ್ಯಾವಹಾರಿಕರನ್ನು ತಿಕ್ಕಿ ಮುಕ್ಕುತ್ತಿರುವವು.

ಭಗವದ್ಭಕ್ತನ ಸ್ಥಿತಿ ಹೀಗಲ್ಲ. ಪರಮಾತ್ಮನೇ ಅವನ ಆತ್ಮನಾಗಿರುವದರಿಂದ ಸಾರ್ವತ್ರಿಕವಾದ ಪರಮಾತ್ಮನ ಪ್ರೇಮವೂ ಏರುಪೇರಿಲ್ಲದ ಆನಂದವೂ ಅವನಿಗೆ ಮುಡಿಪಾಗಿರುತ್ತದೆ. ಕಾಳಿದಾಸನು ಕುಮಾರಸಂಭವದಲ್ಲಿ ಎಂದಿರುವಂತೆ ವಿಕಾರಹೇತುಗಳು ಎಷ್ಟೇ ಇರಲಿ, ಆ ಧೀರನ ಚಿತ್ತದಲ್ಲಿ ಯಾವ ವಿಕಾರವೂ ಆಗುವದೇ ಇಲ್ಲ.

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**

**ಸರ್ವಾರಮ್ಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥** (೧೨-೧೬)

'ಸರ್ವಾರಂಭಪರಿತ್ಯಾಗಿ' ಎಂದರೆ ಎಲ್ಲಾ ಕೆಲಸವನ್ನೂ ಬಿಟ್ಟಿರುವವನು. ಯಾವನಿಗೆ ಇದು ಬೇಕು, ಇದು ಬೇಡ - ಎಂಬ ನಿರೀಕ್ಷಣೆಯಿರುವದೋ ಅವನು ಸರ್ವಾರಂಭಪರಿತ್ಯಾಗಿಯಾಗಿರುವದು ಕಷ್ಟ. ತನಗೆ ಏನಾದರೂ ಬೇಕಾದದ್ದು ಇದ್ದರೂ ಒಬ್ಬೊಬ್ಬನು ಏನೂ ಮಾಡದೆ ಸೋಮಾರಿಯಾಗಿರಬಹುದು. ಆದರೆ ಭಕ್ತನು ಸರ್ವಾರಂಭಪರಿತ್ಯಾಗಿಯಾಗಿರುವನೆಂದರೆ ತನಗೆ ಏನೋ ಬೇಕಾಗಿದ್ದು ಸೋಮಾರಿಯಾಗಿರುವನೆಂದು ಅರ್ಥವಲ್ಲ. ಕೆಲಸವನ್ನು ಮಾಡುವದಕ್ಕೆ ಅವನ ಕೈಯಲ್ಲಿ ಆಗುವದಿಲ್ಲವೆಂದೂ ಅಲ್ಲ. ಅವನು ದಕ್ಷನಾಗಿರುತ್ತಾನೆ, ಆದರೂ ಈ ಮೂರುಲೋಕದಲ್ಲಿಯೂ ಅವನಿಗೆ ಪರಮಾತ್ಮನಿಗಿಂತ ಬೇರೆಯಾಗಿ ಏನೇನೂ ಬೇಕಿರುವದಿಲ್ಲ. ಆದ್ದರಿಂದ ಅವನು ತನಗಾಗಿ ಯಾವ ಕೆಲಸವನ್ನೂ ಮಾಡಿಕೊಳ್ಳುವದಕ್ಕೆ ಹವಣಿಸುವದಿಲ್ಲ. ತನ್ನ ದಕ್ಷತೆಯನ್ನೆಲ್ಲ ಪರಮಾತ್ಮನಲ್ಲಿ ನಿಂತಿರುವದಕ್ಕೆ ಉಪಯೋಗಿಸಿರುತ್ತಾನೆ. ಸಂನ್ಯಾಸಿಗಳ ಧರ್ಮಗಳಲ್ಲಿ ಅನಾರಂಭವೆಂಬುದು ಒಂದು. ಏಷಣಾತ್ರಯವನ್ನು ತ್ಯಾಗಮಾಡಿರುವವರೆಂಬುದನ್ನು ಈ ಧರ್ಮವು ಸೂಚಿಸುತ್ತದೆ. ಆದರೆ ಸಂನ್ಯಾಸಿಗಳು ಯಾವ ಕೆಲಸವನ್ನೂ ಮಾಡಬಾರದು, ಸೋಮಾರಿಗಳಾಗಿರಬೇಕೆಂಬುದೇನೂ ಇದರ ತಾತ್ಪರ್ಯವಲ್ಲ. ಭಕ್ತನು ಹೀಗೆ ಅನಾರಂಭಿಯಾಗಿರುವನು. ಶುಚಿಯಾಗಿರುವನು; ಹೊರಗೆ ಶರೀರದಲ್ಲಿಯೂ ಒಳಗೆ ಕರಣ

ಗಳಲ್ಲಿಯೂ ಯಾವ ಕೊಳಕೂ ಇಲ್ಲದೆ ಇರುವವನು. ಶರೀರಮಲವನ್ನು ಮೃಜ್ಜಲಾದಿ ಗಳಿಂದ ಆಗಾಗ್ಗೆ ತೊಳೆದುಕೊಳ್ಳುತ್ತಲೂ ಅಂತರ್ಮಲವಾದ ರಾಗದ್ವೇಷಾದಿಗಳನ್ನು ಭಗವಂತನ ಪ್ರೇಮದಿಂದ ತೊಳೆದುಕೊಳ್ಳುತ್ತಲೂ ಇರುವವನು. ಪವಿತ್ರಗಳಲ್ಲೆಲ್ಲ ಪವಿತ್ರನಾದ ಪರಮಾತ್ಮನನ್ನು ತನ್ನ ಹೃದಯದಲ್ಲಿಟ್ಟುಕೊಂಡಿರುವ ಭಕ್ತನಿಗಿಂತ ಶುಚಿಯಾದವನು ಯಾವನಿರುವನು? ಉದಾಸೀನನಾಗಿರುವನು, ಇಡಿಯ ಜಗತ್ತನ್ನೇ ಔದಾಸೀನ್ಯದಿಂದ ಕಾಣುತ್ತಾ, ಇದೆಲ್ಲವೂ ಪರಮಾತ್ಮನಿಗಾಗಿ ಬೇಕೇ ಹೊರತು ತನ್ನಲ್ಲಿ ತಾನು ಯಾವ ಬೆಲೆಯೂ ಇಡತಕ್ಕದಲ್ಲವೆಂದು ಭಾವಿಸಿಕೊಂಡು ಉದಾಸೀನನಂತೆ ಇರುವವನು ಭಕ್ತನು; ಅವನಿಗೆ ಮನಸ್ಸಿನಲ್ಲಿ ಯಾವ ವ್ಯಥೆಯೂ ಇರುವದಿಲ್ಲ. ಉದಾಸೀನಪಂಥವು ಈ ಧ್ಯೇಯವನ್ನಿಟ್ಟುಕೊಂಡಿರುತ್ತದೆ. ಭಕ್ತನ ಔದಾಸೀನ್ಯಕ್ಕೆ ಕಾರಣವು ಪರಮಾತ್ಮನ ಪ್ರೇಮದಿಂದ ಅವನಿಗೆ ಒದಗಿರುವ ಆನಂದದ ತೃಪ್ತಿಯು. 'ಪರಮಾತ್ಮನೇ ನನ್ನ ಆತ್ಮನೆಂದು, ಇಗೋ ಈ ನಾನೇ ಆತ್ಮನು ಎಂದು ಏಕಭಾವದಿಂದ, ಅರಿತುಕೊಂಡಿರುವನಾದರೆ ಆ ಮನುಷ್ಯನಿಗೆ ಏತರ ಇಚ್ಛೆ, ಯಾರ ಕಾಮಕ್ಕಾಗಿ ಅವನು ಶರೀರವನ್ನು ದುಡಿಸಿಯಾನು?' - ಎಂದು ಶ್ರುತಿಯು ಹೇಳುವದು ಇಂಥ ಭಗವದ್ಭಕ್ತನ ವಿಷಯವೇ. 'ಭಗವಂತ, ನೀನೇ ನನಗೆ ಸರ್ವವೂ ಆಗಿರುವೆ; ಇನ್ನು ನಾನು ಯಾವದನ್ನೂ ಪಡೆದುಕೊಳ್ಳುವದಕ್ಕಾಗಿ ಏನನ್ನೂ ಮಾಡ ಬೇಕಾಗಿರುವದಿಲ್ಲ' ಎಂಬ ಭಾವವು ಈ ಭಕ್ತನದು. ಇಂಥವನಲ್ಲದೆ ಭಗವಂತನಿಗೆ ಮತ್ತಾರು ಪ್ರಿಯರಿದ್ದಾರು?

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಙ್ಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಃ ಸ ಮೇ ಪ್ರಿಯಃ ॥** (೧೨-೧೭)

ಭಕ್ತನಾದವನು ಸಾಮಾನ್ಯರಂತೆ ಹರ್ಷದ್ವೇಷ, ಶೋಕಕಾಂಕ್ಷೆ, ಶುಭ-ಅಶುಭ ಮುಂತಾದ ದ್ವಂದ್ವಗಳ ಹೊಡೆತಕ್ಕೆ ಸಿಕ್ಕಿರುವದಿಲ್ಲ. ಕ್ಷಣಕ್ಷಣಕ್ಕೂ ಜನರನ್ನು ದ್ವಂದ್ವಗಳು ಕಾಡುತ್ತಲೇ ಇರುವವು; ಏಕೆಂದರೆ ಅನಿತ್ಯವಾದ ವಿಷಯಗಳಲ್ಲಿ ಅವರು ಮನಸ್ಸಿಟ್ಟು ಕೊಂಡಿರುತ್ತಾರೆ. ಆದರೆ ಭಕ್ತನು ಈಗ ಹೃಷ್ಟನಾದನು, ಈಗ ದ್ವೇಷಕ್ಕೆ ಸಿಕ್ಕಿದನು; ಈಗ ಇಂಥದ್ದೊಂದು ಹೋಯಿತಲ್ಲ ಎಂದು ಶೋಕಿಸುತ್ತಾನೆ, ಈಗ ಇಂಥದ್ದೊಂದು ಬೇಕಲ್ಲ ಎಂದು ಹಂಬಲಿಸುತ್ತಿದಾನೆ - ಎಂಬುದಿಲ್ಲ. ಏಕೆಂದರೆ ಭಗವಂತನು ಅವನನ್ನು ತನ್ನವನೆಂದು ಆರಿಸಿಕೊಂಡುಬಿಟ್ಟಿರುತ್ತಾನೆ. ಯಹೂದ್ಯರು ತಮ್ಮ ಮಂಡಲಿ ಯನ್ನು ಭಗವಂತನು ಆರಿಸಿಕೊಂಡ ಜನಾಂಗವೆಂದು ಭಾವಿಸಿಕೊಂಡಿದ್ದರಂತೆ. ಈಗ ಭಗವಂತನು ವರ್ಣಿಸುತ್ತಿರುವ ಸ್ವಭಾವದವರು ಯಾವದೇಶದವರೇ ಆಗಿರಲಿ, ಯಾವ ಜನಾಂಗವೇ ಆಗಿರಲಿ, ಅವರೆಲ್ಲರೂ ನಿಜವಾಗಿ ಭಗವಂತನಿಗೆ ಪ್ರಿಯರು;

ಅವರನ್ನೇ ತನ್ನವರೆಂದು ಭಗವಂತನು ಆರಿಸಿಕೊಂಡಿರುತ್ತಾನೆ. ಭಗವಂತನಿಗೆ ನಿಜವಾಗಿ ಯಾರೊಬ್ಬರೂ ಹಗೆಗಳಿಲ್ಲ; ಆದರೆ ಯಾರಿಗೆ ಭಗವಂತನೇ ಬೇಕೋ ಅವರು ಭಗವಂತನಿಗೂ ಬೇಕು. ಆದ್ದರಿಂದಲೇ ಅವನು ಅಕ್ಷರೋಪಾಸಕನನ್ನು ನನಗೆ ಪ್ರಿಯನಾದವನು ಎನ್ನುತ್ತಿದಾನೆ. ಭಗವಂತನು ಎಲ್ಲರನ್ನೂ ಮೆಚ್ಚುವದಕ್ಕೆ ಸಿದ್ಧ ನಾಗಿರುತ್ತಾನೆ. ಆದರೆ ನಾವುಗಳು ಆತನ ಅನುಗ್ರಹದ ಸುರಿಮಳೆಗೆ ಪಾತ್ರರಾಗಿರುವದಿಲ್ಲ. ಮಳೆಯು ಒಂದೇಸಮನೆ ಸುರಿಯುತ್ತಿದ್ದರೂ ಸಮಯದಲ್ಲಿ ಉತ್ತು ಬೆಳೆದುಕೊಳ್ಳದವನಿಗೆ ಮಳೆಯು ಯಾವ ಉಪಕಾರವನ್ನು ಮಾಡೀತು? ಈಗ ವರ್ಣಿಸುತ್ತಿರುವ ಗುಣಗಳನ್ನು ಯಾವಯಾವನು ಸಂಪಾದಿಸಿಕೊಳ್ಳುವ ಪ್ರಯತ್ನವನ್ನು ಮಾಡುವನೋ ಅವನವನನ್ನು ಭಗವಂತನು ತನ್ನವನೆಂದು ಲೆಕ್ಕಕ್ಕೆ ಸೇರಿಸಿಕೊಂಡಿರುತ್ತಾನೆಂದು ಭಾವಿಸಬೇಕು.

**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ॥** (೧೨-೧೮)

ದ್ವಂದ್ವಗಳು ಎರಡು ಬಗೆಯಾಗಿರುವವು. ನಮ್ಮಲ್ಲಾಗುವ ಸುಖದುಃಖಗಳು ನೇರಾಗಿ ಕಾಣಬರುವ ದ್ವಂದ್ವಗಳು; ಇವಕ್ಕೆ ನಿಮಿತ್ತವಾಗಿರುವ ಹೊರಗಿನ ಶೀತವಾತಾದಿಗಳೂ ಶತ್ರುಮಿತ್ರಾದಿಗಳೂ ಅವುಗಳಿಂದಾಗುವ ಶೀತೋಷ್ಣಾದಿ ರೂಪವಾದ ಮಾನಾಪಮಾನರೂಪವಾದ ವೇದನೆಗಳೂ ಪರಂಪರೆಯಿಂದ ದ್ವಂದ್ವಗಳೆನಿಸಿರುವವು. ದ್ವಂದ್ವಗಳಿಂದ ಹರ್ಷವಿಷಾದಗಳನ್ನು ಪಡೆಯದಿರುವದೇ ಸಮತೆಯು. ಭಾರತದಲ್ಲಿ ಒಂದು ಶ್ಲೋಕವಿದೆ : "ನೈತಾದೃಶಂ ಬ್ರಾಹ್ಮಣಸ್ಯಾಸ್ತಿ ವಿತ್ತಂ ಯಥೈಕತಾ ಸಮತಾ ಸತ್ಯತಾ ಚ। ಶೀಲಂ ಸ್ಥಿತಿರ್ದಣ್ಡನಿಧಾನಮಾರ್ಜವಂ ತತಸ್ತತಶ್ಚೋಪರಮಃ ಕ್ರಿಯಾಭ್ಯಃ॥" ಹೊರಗಿನ ಯಾವ ದ್ವಂದ್ವಗಳಿಂದಲೂ ಏರುಪೇರಿಲ್ಲದೆ ಇರುವದು ಒಂದು ದೊಡ್ಡ ಸಂಪಾದನೆಯೆಂದು ತಿಳಿಯಬೇಕು. ಶತ್ರುವಿನಲ್ಲಿಯೂ ಮಿತ್ರನಲ್ಲಿ ಹೇಗೋ ಹಾಗೆ ಪ್ರೀತಿಯಿಂದ ವರ್ತಿಸುವದು; ಅಪಮಾನವಾದಾಗಲೂ ಮಾನವಾದಾಗ ಹೇಗೋ ಹಾಗೆ ಮನಸ್ಸನ್ನು ಏರುಪೇರಿಲ್ಲದೆ ಇಟ್ಟುಕೊಂಡಿರುವದು; ಯಾವದೊಂದರಲ್ಲಿ ಇದು ಬೇಕು, ಇದು ಬೇಡ, ಎಂಬ ಸಂಗವಿಲ್ಲದೆ ಎಂಥ ವೇದನೆಯಿಂದ ಯಾವ ಸುಖವಾಗಲಿ ದುಃಖವಾಗಲಿ- ಮನಸ್ಸನ್ನು ತಕ್ಕಡಿಯಂತೆ ಇಟ್ಟುಕೊಂಡಿರುವದು - ಈ ಸ್ವಭಾವವುಳ್ಳವನೇ ಧನ್ಯನು; ಅವನೇ ಭಗವಂತನಿಗೆ ಪ್ರಿಯನಾದವನು. ಯಾವ ಪರಿಸ್ಥಿತಿಯೇ ಬರಲಿ, ಮನಸ್ಸಿನ ಸಮತೆಯನ್ನು ಕಳೆದುಕೊಳ್ಳದೆ ಇರುವದಕ್ಕೆ ಭಗವಂತನಲ್ಲಿ ಅಚಲವಾದ ಭಕ್ತಿಯು ಇರಬೇಕು. ಏಕೆಂದರೆ ಸಮತೆ ಎಂಬುದು ಭಗವಂತನ ಸ್ವರೂಪವೇ ಆಗಿರುತ್ತದೆ.

# ೯೨. ಭಗವದ್ಭಕ್ತ ೧೨-(೧೯-೨೦)
## (೧-೮-೪೮)

ಭಕ್ತನು ದ್ವಂದ್ವಗಳನ್ನು ಮೀರಿರುತ್ತಾನೆಂದು ಹೇಳಿತ್ತಷ್ಟೆ. ಅದಕ್ಕೆ ಈ ಮುಂದಿನ ಶ್ಲೋಕದ ಅರ್ಥವು ಸೇರಿರುತ್ತದೆ :

**ತುಲ್ಯನಿಂದಾಸ್ತುತಿರ್ಮೌನೀ ಸನ್ತುಷ್ಟೋ ಯೇನಕೇನಚಿತ್ ।**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ ಮೇ ಪ್ರಿಯೋ ನರಃ ॥** (೧೨-೧೯)

ಮನುಷ್ಯನು ಮಿಕ್ಕ ಎಲ್ಲಾ ದ್ವಂದ್ವಗಳನ್ನೂ ಮೀರಿದ್ದರೂ ನಿಂದಾಸ್ತುತಿಗಳನ್ನು ಲೆಕ್ಕಿಸದಿರುವದು ಕಷ್ಟ. ಹೇಗಾದರೂ ತನ್ನ ಹೆಸರು ಉಳಿಯಬೇಕೆಂದು ಹವಣಿಸುವದು ಮನುಷ್ಯಸ್ವಭಾವಕ್ಕೆ ಸೇರಿದ್ದು. ತನ್ನನ್ನು ಎಲ್ಲರೂ ಹೊಗಳಬೇಕು, ಯಾರೊಬ್ಬರೂ ನಿಂದಿಸಬಾರದು - ಎಂಬುದು ಆಗದ ನಿರೀಕ್ಷಣೆ. ಎಂಥ ಸದ್ಗುಣವಂತನಿಗೂ ನಿಂದೆ ತಪ್ಪದು; ರಾಮಕೃಷ್ಣಾದಿಗಳಿಗೆ ಕೂಡ ಲೋಕದ ನಿಂದೆಯು ತಟ್ಟಿರುತ್ತದೆ. ಈ ಕಾಲದಲ್ಲಂತೂ ಪರನಿಂದೆ ಪರಸ್ತುತಿಗಳು ಹೆಚ್ಚುತ್ತಲೇ ಇವೆ. ಇರುವ ದೋಷವನ್ನು ಹೇಳುವದು ನಿಂದೆ, ಇರುವ ಗುಣವನ್ನು ಹೊಗಳುವದು ಸ್ತುತಿಯಷ್ಟೆ; ಆದರೆ ಈಗ್ಗೆ ಮೃಷಾನಿಂದೆ, ಮೃಷಾಸ್ತುತಿಯೇ ಹೆಚ್ಚಿರುತ್ತದೆ. ಇಲ್ಲದ ಗುಣವನ್ನು ಒಬ್ಬರಲ್ಲಿ ಆರೋಪಿಸುವದೂ ಇಲ್ಲದ ದೋಷವನ್ನು ಆರೋಪಿಸಿ ನಿಂದಿಸುವದೂ ಜನರಿಗೆ ಪದ್ಧತಿಯಾಗುತ್ತಾ ಬಂದಿದೆ. ತನ್ನಲ್ಲಿರುವ ಅಭಿಮಾನವು ಮತ್ತೊಬ್ಬರ ನಿಂದೆಯಲ್ಲಿ ತೊಡಗುವಂತೆ ಮಾಡುತ್ತದೆ; ಮತ್ತೊಬ್ಬರಿಂದ ಏನು ದೊರಕುವದೆಂಬ ದುರಾಶೆಯು ಸ್ತೋತ್ರದಲ್ಲಿ ತೊಡಗಿಸುತ್ತದೆ. ಮೃಷಾನಿಂದಾಸ್ತುತಿಗಳಲ್ಲಿ ತೊಡಗುವದು ಮನುಷ್ಯನ ಮನಃಸ್ಥಿತಿಯನ್ನು ಬಹಳ ಕೀಳುಮಟ್ಟಕ್ಕೆ ಇಳಿಸುತ್ತದೆ. ಅಂಥ ನಿಂದಾಸ್ತುತಿಗಳಿಗೆ ಕುಗ್ಗುವದು, ಹಿಗ್ಗುವದು - ಹೀಗಿರುವದಂತೂ ಯಾರಿಗೂ ಸರಿಯೇ ಅಲ್ಲ.

ಮಹನೀಯರು ಯಾರ ನಿಂದಾಸ್ತುತಿಗಳಿಗೂ ಬೆಲೆ ಕೊಡುವದಿಲ್ಲ. ವಿವೇಕಾನಂದ ಸ್ವಾಮಿಗಳು, ಅಮೆರಿಕದಲ್ಲಿದ್ದಾಗ ಅವರನ್ನು ಈ ದೇಶದಲ್ಲಿ ಅನೇಕರು ನಿಂದಿಸಿ ವೃತ್ತಪತ್ರಿಕೆಗಳಿಗೆ ಬರೆಯುತ್ತಿದ್ದರು; ಆ ಪತ್ರಿಕಾಭಾಗಗಳನ್ನು ಕೆಲವರು ಸ್ನೇಹಿತರು ಸ್ವಾಮಿಗಳಲ್ಲಿಗೆ ಕಳುಹಿಸಿಕೊಟ್ಟದ್ದಕ್ಕೆ 'ಇನ್ನುಮೇಲೆ ಇಂಥ ನಿಂದೆಗಳನ್ನಾಗಲಿ ಸ್ತುತಿಗಳನ್ನಾಗಲಿ ನನಗೆ ಕಳುಹಿಸಬೇಡಿ; ಈ ಲೇಖನಗಳನ್ನು ಬರೆಯುವವರು ಸಾಲಿಗೊಂದಾಣೆ ಕೊಟ್ಟರೆ ಏನು ಬೇಕಾದರೂ ಬರೆಯುತ್ತಾರೆ! ಎಂದು ಉತ್ತರವನ್ನು ಬರೆದರಂತೆ! ಯಾರಾದರೂ ನಮ್ಮನ್ನು ನಿಂದಿಸಿದರೆ, ಅವರ ನಿಂದೆಯು

ಸಕಾರಣವಾಗಿದ್ದರೆ, ನಮ್ಮ ಲೋಪದೋಷಗಳನ್ನು ತಿದ್ದಿಕೊಳ್ಳಬೇಕು; ಇಲ್ಲದಿದ್ದರೆ ಸುಮ್ಮನಿರಬೇಕು - ಎಂಬುದೇ ದೊಡ್ಡವರ ಅಭಿಪ್ರಾಯ. ಹೀಗೆಯೇ ಸ್ತುತಿಯಲ್ಲಿ ಇಲ್ಲದ ಗುಣಗಳಿದ್ದರೆ ಅಂಥ ಗುಣಗಳನ್ನು ನಾವು ಹೇಗಾದರೂ ಸಂಪಾದಿಸಿ ಕೊಳ್ಳಬೇಕೆಂದು ಪ್ರಯತ್ನಿಸಬೇಕು. ಆ ಗುಣಗಳು ನಮ್ಮಲ್ಲಿದ್ದರೆ ಅವನ್ನು ಅವರು ಹೊಗಳುವದರಿಂದ ನಮಗೆ ಆದ ಲಾಭವೇನು? ಹೆಚ್ಚಿನ ಸ್ಥಿತಿಗೆ ಹೋಗುವದಕ್ಕೆ ಪ್ರಯತ್ನಿಸಬೇಕು. ವಿವೇಕಾನಂದಸ್ವಾಮಿಗಳು ಅಮೆರಿಕದಿಂದ ಕೀರ್ತಿಯುತರಾಗಿ ಈ ದೇಶಕ್ಕೆ ತಿರುಗಿ ಬಂದಾಗ ಇಲ್ಲಿಯ ಜನರು ಅವರಿಗೆ ಕೊಟ್ಟ ಅಭೂತಪೂರ್ವವಾದ ಸ್ವಾಗತವು ಎಂಥವರನ್ನಾದರೂ ತಲೆತಿರುಗಿಸುವಂತೆ ಇತ್ತು. ಆದರೆ ಆ ವಿಧವಾದ ಸನ್ಮಾನಗಳಿಂದ ಸ್ವಾಮಿಯವರ ಮನಸ್ಸಿನಲ್ಲಿ ಎಳ್ಳಷ್ಟಾದರೂ ಹೆಮ್ಮೆಯು ಮೊಳೆಯಿತೆ? ಇಲ್ಲ.

ಭಗವದ್ಭಕ್ತರು ಯಾರ ನಿಂದಾಸ್ತುತಿಗಳಿಗೂ ಸಗ್ಗದೆ ಇರುವದಕ್ಕೆ ಅವರು ಭಗವಂತನ ಕಡೆಗೆ ತಿರುಗಿರುವದೇ ಕಾರಣ. ಅವರು ತಾವು ಎಷ್ಟೇ ಕಷ್ಟಗಳನ್ನು ಅನುಭವಿಸುತ್ತಿರಲಿ, ಅದು ಭಗವಂತನ ಲೀಲೆಯೆಂದು ತಿಳಿದು ಆತನು ತಮ್ಮ ವಿಷಯದಲ್ಲಿ ತೃಪ್ತನಾಗಿದ್ದರೆ ಸಾಕೆಂದು ಎಣಿಸುವರು. ಅಪ್ಪಯ್ಯದೀಕ್ಷಿತರು ಬರೆದಿರುವ ಶಿವಾನಂದಲಹರಿಯಲ್ಲಿ "ದೇವ, ನಾನು ಹೀಗೆ ಬಗೆಬಗೆಯಿಂದ ಸಂಸಾರದಲ್ಲಿ ಕಷ್ಟಪಡುತ್ತಿರುವದು ಯಾರ ಪ್ರೀತಿಗೆ? ಇದು ನಿನ್ನ ತೃಪ್ತಿಗಾದರೆ ಆಗ ನಾನು ಕೃತಕೃತ್ಯನೇ ಸರಿ!" ಎಂದಿರುತ್ತಾರೆ. ಇದರಂತೆ ತುಳಸೀದಾಸರು "ಶ್ರೀ ರಾಮನೆ, ಇವನು ನನ್ನವನು - ಎಂದು ಒಂದು ಸಲ ಬಾಯಿಯಲ್ಲಿ ಅನ್ನು, ಅಷ್ಟೇ ಸಾಕು" ಎಂದಿರುತ್ತಾರೆ. ಭಕ್ತರಿಗೆ ಭಗವಂತನ ಮೆಚ್ಚುಗೆಯೊಂದಿದ್ದರೆ ಸಾಕು, ಮಿಕ್ಕವರ ನಿಂದಾಸ್ತುತಿಗಳಿಗೆ ಅವರು ಎಳ್ಳಷ್ಟೂ ಬೆಲೆಕೊಡುವದಿಲ್ಲ.

ಮೌನಿಯಾಗಿರುವದೆಂಬುದು ಭಕ್ತನ ಮತ್ತೊಂದು ಲಕ್ಷಣವು. ಮೌನ ವೆಂದರೇನು? ಭಗವತ್ತತ್ತ್ವವನ್ನೇ ಮನನಮಾಡುತ್ತಿರುವದು. ನಮಗೆ ಯಾವದರಲ್ಲಿ ಬೆಲೆ ಹೆಚ್ಚಾಗಿರುವದೋ ಅದರ ಮನನವು ನಮ್ಮ ಮನಸ್ಸಿನಲ್ಲಿ ನಡೆದಿರುತ್ತದೆ. ಭಕ್ತರಿಗೆ ಭಗವಂತನ ಮನನವಲ್ಲದೆ ಮತ್ತೆ ಯಾವದೂ ಇರುವದಕ್ಕೆ ಕಾರಣವೇ ಇಲ್ಲ. ಏಕೆಂದರೆ ಅವರು ಹೊರಗಿನ ವಿಷಯಗಳ ಮನನಕ್ಕೆ ಮೂಲವಾದ ನಾನು, ನನ್ನದು - ಎಂಬಿವನ್ನು ಕಿತ್ತುಹಾಕಿ ಭಗವಂತನನ್ನೇ ಹೃದಯದಲ್ಲಿಟ್ಟುಕೊಂಡು ಬಿಟ್ಟಿರುತ್ತಾರೆ. ಸಾಮಾನ್ಯಜನರು ವಾಙ್ಮೌನವನ್ನು ಧರಿಸಿದ್ದರೂ ಅವರ ಮನಸ್ಸು ಹೊರಗಿನ ವಿಷಯಗಳ ಮನನದಲ್ಲಿಯೇ ಮುಳುಗಿರುತ್ತದೆ. ಅದು ನಿಜವಾದ ಮೌನವಲ್ಲವೇ ಅಲ್ಲ.

ಹೀಗೆ ಭಗವಂತನೇ ಅಕ್ಷರೋಪಾಸಕರಿಗೆ ಸರ್ವಸ್ವವೂ ಆಗಿರುವದರಿಂದ ಅವರು ವ್ಯವಹಾರದಲ್ಲಿ ಎಷ್ಟುಸಿಕ್ಕರೆ ಅಷ್ಟರಿಂದಲೇ ತೃಪ್ತರಾಗಿರುತ್ತಾರೆ. "ಯೇನ ಕೇನಚಿದಾಚ್ಛನ್ನೋ ಯೇನ ಕೇನಚಿದಾಶಿತಃ। ಯತ್ರ ಕ್ವಚನ ಶಾಯೀ ಸ್ಯಾತ್ತಂ ದೇವಾ ಬ್ರಾಹ್ಮಣಂ ವಿದುಃ" ಎಂಬಂತೆ ಚಳಿಯನ್ನು ಕಳೆಯುವದಕ್ಕೆ ಯಾವದಾದರೊಂದು ಹೊದಿಕೆ, ಹಸಿವನ್ನಡಗಿಸುವದಕ್ಕೆ ಯಾವದಾದರೊಂದು ಆಹಾರ, ನಿದ್ರೆ ಮಾಡುವದಕ್ಕೆ ಯಾವದಾದರೊಂದು ಸ್ಥಳ - ಇಷ್ಟು ಸಿಕ್ಕರೆ ಸಾಕು; ಅಷ್ಟರಿಂದಲೇ ತೃಪ್ತರಾಗಿ ಜನರು ರಾಜವೈಭವವಿದ್ದರೂ ಕಾಣದಿರುವ ಮನಸ್ಸಿನ ಉಲ್ಲಾಸವನ್ನು ತೋರಿಸುತ್ತಿರುವದು ಭಕ್ತರ ಸ್ವಭಾವ. ನನಗೆ ಪರಿಚಿತರಾಗಿದ್ದ ಒಬ್ಬ ಮಹನೀಯರು ಗುರುಕುಲವಾಸದಲ್ಲಿದ್ದಾಗ ಊಟದೆಲೆಗಳನ್ನೇ ತಮ್ಮ ಮೈಮೇಲೆ ಹಾಕಿಕೊಂಡು ಯಾವದೋ ಒಂದು ಮೂಲೆಯಲ್ಲಿ ಒಂದುದಿನ ಮಲಗಿಕೊಂಡಿದ್ದರೆಂದೂ ಅವರ ಗುರುಗಳು ಅಕಸ್ಮಾತ್ತಾಗಿ ಇದನ್ನು ಕಂಡು ತಮ್ಮ ಶಾಲನ್ನೇ ಅವರಿಗೆ ಹೊದಿಸಿಹೋಗಿದ್ದರೆಂದೂ ಇದನ್ನು ಕಂಡವರು ಹೇಳಿದ್ದನ್ನು ಕೇಳಿರುತ್ತೇನೆ. ಭಕ್ತಿಯಿಂದ ತೃಪ್ತರಾಗಿರುವವರಿಗೆ ಮತ್ತೇನು ಬೇಕು? ಪರಮಾತ್ಮನಿಗಾಗಿ ಸರ್ವವನ್ನೂ ತ್ಯಾಗಮಾಡಿರುವ ಪರಮಹಂಸಪರಿವ್ರಾಜಕ ರೆಂಬವರು ಈ ಅಂತಸ್ತಿನವರಾಗಿರುತ್ತಾರೆ. ಅವರು ಅನಿಕೇತರು; ತಮಗಾಗಿ ಗೊತ್ತಾದ ಒಂದು ವಾಸದ ಮನೆ ಎಂಬುದೇ ಇಲ್ಲ. ಕರತಲಭಿಕ್ಷರಾಗಿ ತರುತಲ ವಾಸರಾಗಿರುವ ಆ ಮಹನೀಯರ ವೈರಾಗ್ಯವು ಎಷ್ಟು ಪ್ರಶಂಸನೀಯವಾದದ್ದು! ಶ್ರೀಗೌಡಪಾದರವರು ವರ್ಣಿಸಿರುವಂತೆ ಅವರು ಚಲಾಚಲನಿಕೇತರು. ಪ್ರಾರಬ್ಧ ವಶದಿಂದ ಬಹಿರ್ಮುಖರಾದಾಗ ಚಲವಾದ ದೇಹವೇ ಅವರ ಮನೆ; ಅಂತರ್ಮುಖ ರಾಗಿರುವಾಗ ಅಚಲವಾದ ಪರಮಾತ್ಮನೇ ಅವರ ಮನೆ' ಆದ್ದರಿಂದ ಅವರ ಮನಸ್ಸು ಸ್ವಲ್ಪವೂ ಚಂಚಲವಾಗಿರುವದಿಲ್ಲ. ಏಕೆಂದರೆ ಅವರು ಅಚಲನಾದ ಭಗವಂತನೇ ಪರಮಾರ್ಥವೆಂಬ ನಿಶ್ಚಯದಲ್ಲಿ ನಿಂತು, ಆತನ ಭಕ್ತರಾಗಿ ಬಾಳುತ್ತಿರುವರು.

ಅಕ್ಷರೋಪಾಸಕರು ಸರ್ವತ್ಯಾಗವನ್ನೂ ಮಾಡಿ, ಮನೆಮಠಗಳಿಲ್ಲದೆ, ಸಿಕ್ಕುವಷ್ಟು ಅನ್ನಬಟ್ಟೆಗಳಿಂದ ಮಾನಾಪಮಾನಸಮಾನರಾಗಿರುವರೆಂದು ವರ್ಣಿಸಿರುವದನ್ನು ಪಾಶ್ಚಾತ್ತ್ಯದೃಷ್ಟಿಯ ವಾಸನೆಯುಳ್ಳವರು ಅರ್ಥಮಾಡಿಕೊಳ್ಳಲಾರದೆ 'ಮನೆಯಿಲ್ಲದ ತಿರುಕ' (Homeless beggar) ಎಂದು ತಿರಸ್ಕಾರದ ಮಾತುಗಳನ್ನು ಆಡುವದುಂಟು. ಜೀವನಕ್ಕೆ ಸಂಪಾದನೆಮಾಡಿಕೊಳ್ಳುವ ಮನಸ್ಸಾಗಲಿ ಯೋಗ್ಯತೆಯಾಗಲಿ ಇಲ್ಲದೆ, ಮಾನಾಪಮಾನಗಳನ್ನು ಲೆಕ್ಕಿಸದೆ ಭಂಡರಾಗಿ ಸಿಕ್ಕಲ್ಲಿ ತಿರುಗುತ್ತಾ ಯಾರಾದರೂ ಕನಿಕರದಿಂದ ಕೊಟ್ಟ ಹಳಸಲು ಅನ್ನವನ್ನೂ ಬಟ್ಟೆಯ ಚಿಂದಿಯನ್ನೂ ಹೊದೆಯುವ ತಿರುಕರನ್ನೂ ಬ್ರಹ್ಮಲೋಕಾಂತವಾದ ಭೋಗಗಳಲ್ಲಿ ಆಶೆಯನ್ನು ತೊರೆದು

ಪರಮಾತ್ಮತತ್ತ್ವವನ್ನೇ ಮನನಮಾಡುತ್ತಾ ದ್ವಂದ್ವಾತೀತರಾಗಿರುವ ಬ್ರಹ್ಮನಿಷ್ಠರನ್ನೂ ಒಂದೆಂದು ತಿಳಿಯುವ ಈ ಮೌಢ್ಯವನ್ನು ಏನೆಂದು ಕರೆಯಬೇಕು! ಸ್ವಾಮಿ ವಿವೇಕಾನಂದರು ಹೇಳಿರುವಂತೆ ಎಲ್ಲಕ್ಕಿಂತಲೂ ಉತ್ತಮವಾಗಿರುವದೂ ಎಲ್ಲಕ್ಕಿಂತಲೂ ಕೀಳಾಗಿರುವದೂ ಅಜ್ಞರಿಗೆ ಒಂದೇ ಆಗಿ ತೋರುವದು ಸ್ವಾಭಾವಿಕವಾಗಿರುತ್ತದೆ. ಬೆಳಕು ಹೆಚ್ಚಿದಂತೆ ನಮ್ಮ ಕಣ್ಣಿನ ನೋಟದ ಶಕ್ತಿಯನ್ನು ಮೀರಿದ ಸ್ಥಿತಿಗೆ ಏರಿರುವಾಗ ನಮಗೆ ಕಾಣದೆ ಹೋಗುವದೂ, ದಟ್ಟಗತ್ತಲೆಯಿರುವಾಗಲಂತೂ ಏನೂ ಕಾಣದೆ ಹೋಗುವದೂ ಸಹಜವಾಗಿದೆ. ಆದರೆ ಪ್ರಕಾಶದ ಪರಾಕಾಷ್ಠೆಯೂ ತಮಸ್ಸಿನ ಪರಾಕಾಷ್ಠೆಯೂ ಒಂದೆಂದು ಬಗೆಯಬಹುದೆ? ಪಶುವಿನಂತೆ ಮಾನಾಪಮಾನ ಗಳಿಲ್ಲದವರು, ತಿರುಕರಂತೆ ಭಿಕ್ಷುಕರಾಗಿರುವವರು, ದರಿದ್ರರಂತೆ ಹೊಲಮನೆಯಿಲ್ಲದ ವರು - ಎಂದು ಆ ಶ್ರೀನಿಕೇತನನಾದ ಭಗವಂತನಲ್ಲಿಯೇ ನಿವಾಸವನ್ನು ಮಾಡಿಕೊಂಡಿರುವ ಮಹಾತ್ಮರನ್ನು ಎಣಿಸುವ ಮೌಢ್ಯವನ್ನು ಏನೆನ್ನಬೇಕು? ಲೋಕವು ಏನಾದರೂ ಅನ್ನಲಿ, ಈ ಮಹಾತ್ಮರು ಈ ಲೋಕದ ಭೋಗಗಳಿಗೆ ಒಂದಿಷ್ಟೂ ಆಶೆಪಡುವಂತಿಲ್ಲ; ಜನರು ಏನೆಂದಾದರೂ ಹಳಿಯಲಿ, ತಮ್ಮ ಮನೆಯು ಆ ಪರಮಾತ್ಮನೇ, ಈ ಸಂಸಾರವಲ್ಲ - ಎಂಬುದನ್ನು ಭಕ್ತರು ಅನುಗಾಲವು ಚಿಂತಿಸುತ್ತಿರುವರು.

ಇದುವರೆಗೆ ಅಕ್ಷರೋಪಾಸಕರ ಲಕ್ಷಣವನ್ನು ವಿವರಿಸಿದ್ದಾಯಿತು. ಭಗವಚ್ಚಿಂತನೆ ಯಿಂದ ಮತ್ತರಾಗಿ, ನಿತ್ಯಸುಖಿಗಳಾಗಿ, ನಿತ್ಯತೃಪ್ತರಾಗಿ, ಲೋಕಕ್ಕೂ ಕಲ್ಯಾಣವನ್ನುಂಟು ಮಾಡುತ್ತಾ ಸ್ವೈರವಿಹಾರಿಗಳಾಗಿರುವ ಈ ಮಹನೀಯರ ಸ್ವಭಾವವು ಆ ಭಗವಂತನ ಅನುಗ್ರಹದಿಂದಲ್ಲದೆ ನಮ್ಮಂಥವರಿಗೆ ಸುಮ್ಮನೆ ದಕ್ಕುವದಲ್ಲ. ಭಗವಂತನ ಭಕ್ತಿಯಂತಿರಲಿ, ಇಂಥ ಭಗವದ್ಭಕ್ತರ ಸೇವೆಯಾದರೂ ನಮಗೆ ದೊರೆತರೆ ಎಷ್ಟೋ ಧನ್ಯರಾದೇವು.

**ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥** (೧೨-೨೦)

ಮೇಲೆ ವಿವರಿಸಿರುವ ಗುಣಗಳು ಭಕ್ತರಲ್ಲಿ ಸಹಜವಾಗಿರುತ್ತವೆ. ನಾವು ಕ್ಲಿಪ್ತಕಾಲದಲ್ಲಿ ಭಗವಂತನನ್ನು ಒಂದಿಷ್ಟಾದರೂ ಚಿಂತಿಸುವದಕ್ಕೆ ಪ್ರಯತ್ನಿಸೋಣ. ಸರ್ವತ್ಯಾಗವನ್ನೂ ಮಾಡುವದಕ್ಕೆ ಆಗದಿದ್ದರೆ ದಾನಧರ್ಮಗಳನ್ನು ಮಾಡುತ್ತಾ ದುರಾಶೆಯನ್ನಾದರೂ ಬಿಡುವದಕ್ಕೆ ಪ್ರಯತ್ನಿಸೋಣ. ಶ್ರದ್ಧೆಯಿಂದ ಮೇಲೆ ಹೇಳಿದ ಧರ್ಮಗಳನ್ನು ಸೇವಿಸೋಣ. ಈ ಸಾಧನವು ಅವಶ್ಯವಾಗಿ ನಮ್ಮನ್ನು ಅಮೃತತ್ವಕ್ಕೆ ಒಯ್ಯುವದು. ಸ್ವಲ್ಪಸ್ವಲ್ಪವಾಗಿ ಭಗವಂತನ ಕಡೆಗೆ ತಿರುಗೋಣ; ಭಗವಂತನೇ ಬೇಕು

ಎಂಬ ಹವಣಿಕೆಯಿಲ್ಲದಿದ್ದರೂ ಭಗವಂತನೂ ಬೇಕು ಎಂದಾದರೂ ನಮ್ಮ ಪಟ್ಟಿಯಲ್ಲಿ ಭಗವಂತನನ್ನೂ ಸೇರಿಸೋಣ. ನಾವು ನೇರಾಗಿ ಭಗವಂತನನ್ನು ಸೇವಿಸ ದಿದ್ದರೂ ಭಗವದ್ಭಕ್ತರನ್ನಾದರೂ ಸೇವಿಸೋಣ. ನಾರದರು ಹಿಂದೆ ಶೂದ್ರವಂಶದಲ್ಲಿ ಹುಟ್ಟಿದವರಾದರೂ ಋಷಿಗಳ ಸೇವನೆಯಿಂದ ಮುಂದೆ ದೇವರ್ಷಿಯಾಗಿ ಹುಟ್ಟಿ ಪರಮಾತ್ಮನ ಚಿಂತನೆಯಲ್ಲಿಯೇ ಸತತವಾಗಿ ಕಾಲವನ್ನು ಕಳೆಯುವ ಭಾಗ್ಯವನ್ನು ಸಂಪಾದಿಸಿಕೊಂಡರೆಂಬ ಭಾಗವತದ ಕಥೆಯನ್ನು ಸ್ಮರಿಸಿಕೊಳ್ಳೋಣ. ಅಕ್ಷರೋಪಾಸಕ ರಾದ ಪರಭಕ್ತರಾಗದಿದ್ದರೂ ಕೆಳಗಿನ ನಾಲ್ಕನೆಯ ಐದನೆಯ ತರಗತಿಯ ಭಕ್ತರ ಸಾಲಿಗಾದರೂ ನಮ್ಮನ್ನು ಸೇರಿಸೆಂದು ಭಗವಂತನನ್ನು ಶ್ರದ್ಧೆಯಿಂದ ಬೇಡಿಕೊಳ್ಳೋಣ.

ಈ ಭಕ್ತಿಸಾಧನೆಗೆ ಧರ್ಮ್ಯಾಮೃತವೆಂದು ಹೆಸರು. ಏಕೆಂದರೆ ಇದು ಪರಮಧರ್ಮವೂ ಅಮೃತತತ್ವಕ್ಕೆ ಸಾಧನವೂ ಆಗಿರುತ್ತದೆ. ಈ ಹನ್ನೆರಡನೆಯ ಅಧ್ಯಾಯವನ್ನು ನಾವು ಬಾಯಿಗೆ ಕಲಿತುಕೊಳ್ಳಬೇಕು. ಇದರ ಅರ್ಥವನ್ನು ಮನನಮಾಡುವ ಅಭ್ಯಾಸವನ್ನು ಇಡಬೇಕು. ಇವುಗಳಲ್ಲಿರುವ ಧರ್ಮಗಳಲ್ಲಿ ಒಂದೊಂದನ್ನಾದರೂ ಅಭ್ಯಾಸಕ್ಕೆ ಇಟ್ಟುಕೊಳ್ಳುವದು ಒಳ್ಳೆಯದು. ಭಕ್ತರಾದವರಿಂದ ಈ ಅಧ್ಯಾಯದ ಅರ್ಥವನ್ನು ಶ್ರವಣಮಾಡಬೇಕು. 'ಅದ್ವೇಷ್ಟಾ ಸರ್ವಭೂತಾನಾಮ್' ಎಂಬ ಮೊದಲನೆಯ ಗುಣವೊಂದನ್ನು ಸಂಪಾದಿಸುವದಕ್ಕೆ ಪ್ರಯತ್ನಿಸಿದರೆ ಸಾಕು. ಧರ್ಮರಾಯನು ಹುಡುಗನಾಗಿದ್ದಾಗ ಅಕ್ಷರಮಾಲಿಕೆಯನ್ನು ಕಲಿಯುವದಕ್ಕೆ ಪ್ರಾರಂಭಿಸಿದಾಗ 'ಅಕಾರವನ್ನು ಚೆನ್ನಾಗಿ ತಿಳಿದುಕೊಂಡು ಮುಂದಿನ ಅಕ್ಷರಕ್ಕೆ ಹೊರಡುತ್ತೇನೆ' ಎಂದನಂತೆ! ನಿಜವಾಗಿ ಅಕಾರವು ವಿಷ್ಣುವಾಚಕವು; ಅಕಾರವು ವರ್ಣಗಳಲ್ಲೆಲ್ಲಾ ವ್ಯಾಪಿಸಿರುವಂತೆ ವಿಷ್ಣುವು ಜಗತ್ತೆಲ್ಲವನ್ನೂ ವ್ಯಾಪಿಸಿರುತ್ತಾನೆ. ಅಕಾರವು ಎಲ್ಲಾ ವರ್ಣಗಳಿಗೂ ಆದಿಯಾಗಿರುವಂತೆ ಆತನು ಸಕಲಕ್ಕೂ ಆದಿಯಾಗಿರು ತ್ತಾನೆ. ಒಂದು ಅಕಾರವನ್ನು ಒಳಹೊಕ್ಕು ವಿಚಾರಿಸಿದರೆ ಎಷ್ಟೊಂದು ಗಂಭೀರವಾದ ಆಶಯವು ತೋರುತ್ತದೆ! ಇದರಂತೆ ಅದ್ವೇಷ್ಟೃತ್ವ ಎಂಬ ಭಕ್ತಧರ್ಮವೊಂದನ್ನು ಅಭ್ಯಾಸಮಾಡುವದಕ್ಕೆ ಹೊರಟರೆ ಸಾಕು; ಕೊಂಡಿಯೊಂದನ್ನು ಹಿಡಿದು ಎಳೆದರೆ ಇಡಿಯ ಸರಪಳಿಯೇ ಬರುವಂತೆ ಸಾಧನಗಳ ಸರಪಳಿಯೇ ನಮ್ಮ ವಶವಾಗುವದು.

ಈ ಧರ್ಮ್ಯಾಮೃತವನ್ನು ಯಾರು ಪರ್ಯುಪಾಸನೆಮಾಡುತ್ತಾರೋ, ಮತ್ತೊಂದರ ಕಡೆಗೆ ಹೋಗದೆ ಎಡೆಬಿಡದೆ ಉಪಾಸನೆಮಾಡುತ್ತಾರೋ, ಯಾರು ಭಗವಂತನೇ ಪರಮನೆಂದು ನಂಬಿರುತ್ತಾರೋ, ಅವರು ನನಗೆ ಅತಿಪ್ರಿಯರು ಎಂದು ಭಗವಂತನು ಹೇಳಿರುತ್ತಾನೆ. ನಾವು ಈ ಸಾಧನವನ್ನು ಮಾಡುವದಕ್ಕೆ ಪ್ರಯತ್ನಿಸಿದರೆ ಸಾಕು; ಅಷ್ಟರಿಂದಲೇ ಭಗವಂತನು ನಮ್ಮನ್ನು ಭಕ್ತರ ಪಟ್ಟಿಗೆ

ಸೇರಿಸಿಕೊಳ್ಳುತ್ತಾನೆ. ಒಬ್ಬನಿಗೆ ನಾಲ್ಕುಜನ ಮಕ್ಕಳಿದ್ದರು. ಅವರೊಳಗೆ ಒಂದು ಮಗು ಬಹಳ ದುರ್ಬಲವಾಗಿತ್ತು. 'ನಿಮಗೆ ಯಾರ ಮೇಲೆ ಬಹಳ ಪ್ರೀತಿ?' ಎಂದು ಯಾರೋ ಕೇಳಿದರು. ಆಗ ಅವನು "ಯಾರ ಮೇಲೇನು? ಎಲ್ಲರಮೇಲೂ ಪ್ರೀತಿಯೇ; ಆದರೆ ಈ ಮಗುವನ್ನು ನೋಡಿ, ಇದರ ದುರ್ಬಲತೆಯು ನನಗೆ ಎಂದೆಂದಿಗೂ ಕೊರಗನ್ನುಂಟುಮಾಡಿರುತ್ತದೆ. ಈ ಮಗು ಹೇಗೆ ಬದುಕೀತು? ಇದು ಹೇಗೆ ತನ್ನ ಜೀವನವನ್ನು ಸಾಗಿಸೀತು? ಇದೇ ನನಗೆ ದಿನದಿನದ ಚಿಂತೆ!" ಎಂದನು. ಹೀಗೆಯೇ ಭಗವಂತನಿಗೆ ಸಾಧನೆಯಲ್ಲಿ ದುರ್ಬಲರಾದವರಮೇಲೆ ಬಹಳ ಕೃಪಾರ್ದ್ರದೃಷ್ಟಿಯಿರುತ್ತದೆ. ನಾವು ಏನನ್ನೂ ಅರಿಯೆವಲ್ಲ ಎಂದು ಚಿಂತಿಸಬೇಕಾದದ್ದಿಲ್ಲ; ಆದ್ದರಿಂದಲೇ ಭಗವಂತನ ಪ್ರೀತಿಯು ನಮ್ಮ ಮೇಲೆ ಒಂದಿಷ್ಟು ಹೆಚ್ಚಾಗಿ ಬಿದ್ದಿರುವದು. ಹೇಗಾದರೂ ನಮ್ಮನ್ನು ದಂಡೆಗೆ ಸೇರಿಸಬೇಕೆಂದು ಅವನ ಇಚ್ಛೆಯಿರುತ್ತದೆ. ನಾವು ಮಾತ್ರ ಶ್ರದ್ಧೆಯಿಂದ ಪ್ರಾರಂಭಿಸೋಣ. ದಾಸರು ಹಾಡಿರುವಂತೆ 'ಸಜ್ಜನಸಂಗವ ಮಾಡದಿದ್ದರೆ ನನಗೂ ಆಣೆ, ದುರ್ಜನಸಂಗವ ಬಿಡಿಸದಿದ್ದರೂ ನಿನಗೇ ಆಣೆ' ಎಂದು ಸತ್ಸಾಧನವನ್ನು ಮಾಡುವದಕ್ಕೆ ಪ್ರಾರಂಭಿಸೋಣ; ಆಗ ಭಗವಂತನೇ ಕನಿಕರದಿಂದ ನಮ್ಮಲ್ಲಿರುವ ಕುಂದುಕೊರತೆಗಳನ್ನು ತಿದ್ದುವನು.

ಭಗವತ್ಕಥಾಲಾಪವು ಬಹಳ ದೊಡ್ಡದು. ಅದನ್ನು ಮಾಡುತ್ತಿದ್ದರೆ ನಮಗೆ ಸದ್ಬುದ್ಧಿಯೂ ಸತ್ಸಾಧನವೂ ಅವಶ್ಯವಾಗಿ ದೊರಕುವವು. ಈ ದಿನ ಭಗವಂತನ ವಿಚಾರಕ್ಕೆ ಒಂದು ಅವಕಾಶವು ಬಂತು, ಅಷ್ಟೇ ನನಗೆ ಸಂತೋಷ. ಇದನ್ನು ಉಪನ್ಯಾಸವೆಂದು ಕರೆಯಬೇಡಿ, ಭಗವತ್ಕಥಾಲಾಪವಿದು. ಇಂದು ಏಕಾದಶಿ, ಮೈಗೆ ಚೆನ್ನಾಗಿಲ್ಲ; ಆದರೂ ಭಗವಂತನು ನಿಮ್ಮೆಲ್ಲರನ್ನೂ ಇಲ್ಲಿ ಬರಮಾಡಿರುತ್ತಾನೆ. 'ಭಗವಂತ, ನಿನ್ನ ಸ್ಮರಣೆಗೆ ಅವಕಾಶವನ್ನು ಕೊಡು' ಎಂದು ಸತ್ಕಾಲಕ್ಷೇಪವನ್ನು ಮಾಡಿರುತ್ತೇವೆ. ಈ ಸಂದರ್ಭದಲ್ಲಿ ಭಗವಂತನೇ ನಮ್ಮ ಹೃದಯದಲ್ಲಿದ್ದರೆ ಸಾಕು. ಉಪಕ್ರಮೋಪಸಂಹಾರಾದಿಗಳು ಹೇಗಾದರೂ ಇರಲಿ; ಭಾಷೆ ವ್ಯಾಕರಣ ಬದ್ಧವಾಗಿರಲಿ, ಇಲ್ಲದಿರಲಿ; ಭಗವಂತನ ಧ್ಯಾನವೊಂದು ಸಾಕು. ಇಂದು ನಾವು ಮಾಡುತ್ತಿರುವದು ಸಾಮೂಹಿಕ ಧ್ಯಾನವು. ಇಂಥ ಸಾಮೂಹಿಕಕಥಾಲಾಪದಲ್ಲಿ ಭಗವಂತನು ತನ್ನ ಅಮೃತಹಸ್ತವನ್ನು ನಮ್ಮ ತಲೆಯಮೇಲಿಟ್ಟು ಹೇಳುವವನನ್ನೂ ಕೇಳುವವರನ್ನೂ ಆನಂದಿಸುವಂತೆ ಮಾಡುತ್ತಾನೆ.

ಇನ್ನುಮುಂದೆ ಹದಿಮೂರನೆಯ ಅಧ್ಯಾಯವು ಪ್ರಾರಂಭವಾಗುತ್ತದೆ. ಅದರಲ್ಲಿ ಜ್ಞಾನದ ವಿಚಾರವು ಪ್ರಾರಂಭವಾಗುತ್ತದೆ. ಭಗವದ್ಗೀತೆಯು ಭಗವಂತನು ಹಾಡಿರುವ ಗೀತವು. ಇದರಲ್ಲಿ ಭಗವಂತನ ಭಕ್ತಿಯೇ ತುಂಬಿತುಳುಕುತ್ತಿರುವದು. ಇಲ್ಲಿ

ಜ್ಞಾನವನ್ನು ಹೇಳಿರುವದೂ ಆತನ ಭಕ್ತಿಗಾಗಿಯೇ. ಜ್ಞಾನವು ಹೆಚ್ಚಿದಷ್ಟೂ ಭಕ್ತಿಯೂ ಹೆಚ್ಚುವದು. ಭಕ್ತಿಯೆಂಬುದು ಆಧ್ಯಾತ್ಮಿಕವಾದ ಕ್ಷುತ್ತು; ಈ ಹಸಿವು ಹೆಚ್ಚಿದಂತೆಲ್ಲ ಭಗವತ್ಸ್ವರೂಪವನ್ನು ತಿಳಿಯಬೇಕೆಂಬ ಕುತೂಹಲವು ಇಮ್ಮಡಿಸುತ್ತಿರುವದು. ಸರಿಯಾಗಿ ನೋಡಿದರೆ ಜ್ಞಾನಭಕ್ತಿಗಳು ಒಂದೇ ನಾಣ್ಯದ ಹಿಂದುಮುಂದುಗಳು. ರೂಪಾಯಿಯಮೇಲೆ ಒಂದು ಕಡೆಯಲ್ಲಿ ಸರ್ಕಾರದವರ ಚಿತ್ರವೂ ಮತ್ತೊಂದು ಕಡೆಯಲ್ಲಿ ಒಂದು ರೂಪಾಯಿ ಎಂಬ ವರ್ಣನೆಯೂ ಇರುವಂತೆ ಭಗವಂತನನ್ನು ನಾವು ಹೃದಯದಲ್ಲಿಟ್ಟುಕೊಂಡಾಗ ಭಕ್ತಿಜ್ಞಾನಗಳೆರಡೂ ಕೂಡಿಕೊಂಡೇ ಇರುವವು. ಅಡಿಗೆಯ ಪದಾರ್ಥಗಳ ಅರಿವಾದ ಮಾತ್ರದಿಂದ ಹಸಿವು ಅಡಗದು; ಅವುಗಳನ್ನು ಅಟ್ಟು ಉಣ್ಣಬೇಕು. ಆಗಲೇ ತೃಪ್ತಿಯಾಗುವದು. ಹೀಗೆ ಜ್ಞಾನದಿಂದ ಅರಿತು ಭಕ್ತಿಯಿಂದ ಉಂಡು ತೃಪ್ತನಾಗುವವನೇ ಧನ್ಯನು.

॥ ಓಂ ತತ್ಸತ್ ॥

---



ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು

## ಗ್ರಂಥಕರ್ತರ ಪರಿಚಯ

ಪೂರ್ವಾಶ್ರಮದಲ್ಲಿ ವೈ. ಸುಬ್ಬರಾವ್ (ಯಲ್ಲಂಬಳಸೆ ಸುಬ್ರಹ್ಮಣ್ಯಶರ್ಮ) ಎಂಬ ಹೆಸರಿನಿಂದ ಪ್ರಸಿದ್ಧರಾಗಿದ್ದ ಈ ಮಹನೀಯರು ಸರಕಾರಿಯ ಉದ್ಯೋಗದಿಂದ ನಿವೃತ್ತರಾದ ಮೇಲೆ ಹಾಸನಜಿಲ್ಲೆ ಹೊಳೆನರಸೀಪುರದಲ್ಲಿ ಬಂದು ನೆಲಸಿ 1945 ರಲ್ಲಿ 'ಅಧ್ಯಾತ್ಮ ಪ್ರಕಾಶ ಕಾರ್ಯಾಲಯ' ಎಂಬ ಸಂಸ್ಥೆಯನ್ನು ಸ್ವತಂತ್ರವಾದ ಕಟ್ಟಡದಲ್ಲಿ ಪ್ರಾರಂಭಿಸಿ 1946 ನೆಯ ಜೂನ್ ಮಾಹೆಯಿಂದ 1950 ನೆಯ ಡಿಸೆಂಬರ್ ವರೆಗೆ ಪ್ರತಿ ಭಾನುವಾರವು ಕಾರ್ಯಾಲಯದಲ್ಲಿ ನಡೆಯಿಸಿದ ಉಪನ್ಯಾಸಗಳೇ ಈ ಗ್ರಂಥದ ಶರೀರವಾಗಿದೆ. ಉಪನ್ಯಾಸಕರು ತಾವೇ ಲೇಖನ ರೂಪದಲ್ಲಿಯೂ ಈ ಉಪನ್ಯಾಸಗಳನ್ನು ಸಿದ್ಧಗೊಳಿಸಿ ಕಾರ್ಯಾಲಯದ ಮೂಲಕ ಪ್ರಕಟಿಸಿದರು. ಅದೇ ಗ್ರಂಥದ ಮೂರನೆಯ ಮುದ್ರಣವು ಸರ್ವಾಂಗಸುಂದರವಾಗಿ ಹೊರಬಂದು ಈಗ ವಾಚಕರ ಕರಕಮಲವನ್ನು ಅಲಂಕರಿಸಿದೆ.

## ಗ್ರಂಥದ ಪರಿಚಯ

ಭಗವದ್ಗೀತೆಯ ಅವತಾರಕಾಲದಿಂದ ಈವರೆಗೂ ಅದರ ಪರಮೋಪದೇಶಗಳ ಸರಳ - ಸಾರ್ವತ್ರಿಕ ಸಮನ್ವಯರೂಪವಾದ ಬೋಧನೆಯ ವಿಶಿಷ್ಟ ಶೈಲಿಗೆ ಮರುಳಾಗಿ ಅನೇಕ ಮಹಾತ್ಮರುಗಳು ಹಾಗೂ ವಿದ್ವಾಂಸರುಗಳು ತಮ್ಮ ತಮ್ಮ ದೃಷ್ಟಿಕೋನಕ್ಕೆ ತಕ್ಕಂತೆ ಗೀತಾರ್ಥವನ್ನು ವಿವರಿಸಿರುತ್ತಾರೆ.

ಅದರಂತೆಯೇ ಈ ಗ್ರಂಥಕರ್ತರೂ ಶಾಂಕರಭಾಷ್ಯಾನುಸಾರವಾಗಿ ಸರ್ವಸಮ್ಮತವಾದ ಉಪನ್ಯಾಸಶೈಲಿಯಿಂದ ಸರಳವಾಗಿ ದೃಷ್ಟಾಂತಗಳು - ಕಥೆಗಳು- ಹಾಗೂ ಸ್ವಾನುಭವಗಳ ಮೇಳನದಿಂದ ಗೀತೆಯಉಪದೇಶಗಳನ್ನು ಈ ಉಪನ್ಯಾಸಗಳಲ್ಲಿ ಅಳವಡಿಸಿರುತ್ತಾರೆ. ಓದುಗರು ಪಕ್ಷಪಾತರಹಿತ ದೃಷ್ಟಿಯಿಂದ ಪೂರ್ಣಗ್ರಂಥವನ್ನು ಪಠನ ಮಾಡಿ ಅನಂತರ ಭಗವಂತನ ಉಪದೇಶಗಳ ರಹಸ್ಯವನ್ನು ಮನಗಂಡು ಕೃತಾರ್ಥರಾಗಬೇಕಾಗಿ ಪ್ರಾರ್ಥನೆ.